ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೬

ಪ್ರಧಾನ ಸಂಪಾದಕರು:
(೧೯೩೫)
ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

# ರವೀಂದ್ರನಾಥ ಠಾಕೂರರು




ಲೇಖಕರು:
ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ.

ಬೆಂಗಳೂರು
ಜೀವನ ಕಾರ್ಯಾಲಯ
೧೯೪೬

# ಮುನ್ನುಡಿ

ಕನ್ನಡ ಸಾಹಿತ್ಯವನ್ನು ಅಭಿವೃದ್ಧಿಪಡಿಸಬೇಕೆಂಬ ಘನೋದ್ದೇಶದಿಂದ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳು ಒಂದು "ಕನ್ನಡ ಪ್ರಕಟನ ಸಮಿತಿ"ಯನ್ನು ನಿಯಮಿಸಿ, ಪ್ರತಿವರ್ಷವೂ ಪ್ರಸಿದ್ಧರಾದ ಗ್ರಂಥಕರ್ತರನ್ನು ನಿಷ್ಕರ್ಷಿಸಿ, ಅವರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟನೆಗೆ ಸಿದ್ಧಪಡಿಸುವುದಕ್ಕೆ ತಕ್ಕ ಏರ್ಪಾಡುಗಳನ್ನು ಮಾಡಿರುತ್ತಾರೆ.

ಈ ಗ್ರಂಥಗಳು ಎರಡು ಬಗೆಯುವು—

೧. ಈ ನವೀನ ಕಾಲಕ್ಕೆ ಬೇಕಾದ ಮತ್ತು ಜನಸಾಮಾನ್ಯಕ್ಕೆ ಜ್ಞಾನವನ್ನು ಹರಡಬಲ್ಲ ಸಾಹಿತ್ಯ, ಕಲೆ, ವಿಜ್ಞಾನ, ತತ್ತ್ವ, ಚರಿತ್ರೆ, ಧರ್ಮ, ನೀತಿ, ಸಂಸ್ಕೃತಿ ಮುಂತಾದ ವಿಷಯಗಳನ್ನು ಲಲಿತವಾದ ಹೊಸಗನ್ನಡ ಶೈಲಿಯಲ್ಲಿ, ವಿವಾದಾಸ್ಪದವಲ್ಲದ ನಿಷ್ಕೃಷ್ಟವಾದ ರೀತಿಯಲ್ಲಿ ತಿಳಿಸತಕ್ಕುವು. ಇವು ಸ್ವತಂತ್ರ ಗ್ರಂಥಗಳಾಗಿರಬಹುದು, ಅಥವಾ ಭಾಷಾಂತರಗಳಾಗಿರಬಹುದು, ಸಂಕಲನಗಳಾಗಿರಬಹುದು.

೨. ಕನ್ನಡದ ಪೂರ್ವದ ಸಾಹಿತ್ಯವನ್ನು ಜನರಲ್ಲಿಯೂ ವಿದ್ಯಾರ್ಥಿವರ್ಗದಲ್ಲಿಯೂ ಹೆಚ್ಚು ಪ್ರಚಾರಕ್ಕೆ ತರುವುದಕ್ಕಾಗಿ ಉತ್ತಮ ಕಾವ್ಯಗಳ ಸಂಗ್ರಹಗಳು. ಇವು ವಿದ್ಯಾರ್ಥಿಗಳ ಪಾಠಕ್ಕೆ ಅನುಕೂಲವಾಗಿರಬೇಕು; ಮೂಲಪ್ರತಿಗಳನ್ನು ಪರಿಶೋಧಿಸಿದ ಶುದ್ಧಪಾಠಗಳನ್ನು ಒಳಕೊಂಡು ಪೀಠಿಕೆ, ಶಬ್ದಕೋಶ, ಆವಶ್ಯಕವಾದ ಟಿಪ್ಪಣಿಗಳು— ಇವುಗಳೊಡನೆ ಕೂಡಿರಬೇಕು.

ಭರತವರ್ಷದ ಮಹತ್ತ್ವವನ್ನು ಸುಸಂಸ್ಕೃತರಾದ ಪಾಶ್ಚಾತ್ಯರಲ್ಲಿ ಹರಡಿದ ಮಹಾನುಭಾವರಲ್ಲಿ ಈ ಗ್ರಂಥದ ನಾಯಕರಾದ ರವೀಂದ್ರನಾಥ ಠಾಕೂರರು ಒಬ್ಬರು. ಶ್ರೀ ರಾಮಕೃಷ್ಣ ಪರಮಹಂಸರ ಚರಿತ್ರೆಯೊಡನೆ ಈ ಮಹಾಪುರುಷರ ಚರಿತ್ರೆಯೂ ನಮ್ಮ ಗ್ರಂಥಮಾಲೆಯಲ್ಲಿ ಸೇರಿದುದಕ್ಕಾಗಿ ಸುಪ್ರಸಿದ್ಧ ಕವಿಗಳೂ ಸೌಜನ್ಯಸೌಶೀಲ್ಯಾದಿ ಗುಣಭರಿತರೂ ಆದ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರಿಗೆ ನಾವು ಚಿರಋಣಿಗಳು.

ಶ್ರೀ ಠಾಕೂರರು ಭರತಭೂಮಿಗೇ ಅಲ್ಲ, ಇಡಿಯ ವಿಶ್ವಕ್ಕೇ ಅಲಂಕಾರಪ್ರಾಯರು, ಆದರ್ಶಪುರುಷರು. ಮೂಡಣ ಮತ್ತು ಪಡುವಣ ಧರ್ಮ ಸಂಸ್ಕೃತಿ ನಾಗರಿಕತೆಗಳ ಸಾರವನ್ನೂ ಆಳವನ್ನೂ ಚೆನ್ನಾಗಿ ವಿಮರ್ಶಿಸಿ, ಸಮತಾಬುದ್ಧಿಯಿಂದ ಎರಡರ ಗುಣಗಳನ್ನೂ ಐಕ್ಯಮಾಡಿ ವಿಶ್ವಜನರನ್ನು ಮುಂದುವರಿಸಬೇಕೆಂಬುದೇ ಇವರು ಕೈಕೊಂಡ ದೀಕ್ಷೆ. ಸಂಕುಚಿತ ಹೃದಯವೆಂಬುದು ಇವರಲ್ಲಿಲ್ಲ. ಭಾರತ ಜನಾಂಗದ ಮಹಿಮೆ, ಕೀರ್ತಿ, ಸ್ವಾತಂತ್ರ್ಯಗಳಿಗೆ ಇವರು ಹೆಮ್ಮೆಗೊಳ್ಳುವರು, ಹೋರಾಡುವರು, ಬಿರುದು ಸಿರಿಗಳನ್ನು ತೊರೆಯಲು ಸಿದ್ಧರಾಗಿರುವರು. ಪಾಶ್ಚಾತ್ಯರ ಶಕ್ತಿ, ಸಾಹಸ, ವಿಜ್ಞಾನ ಮತ್ತು ರಾಜಕ ಬಲ, ಸಾಮಾಜಿಕ ಶಿಕ್ಷಣ, ಒಳಗೆ ಅಡಗಿ ಕುಳಿತಿರುವ ಧರ್ಮವಾತ್ಸಲ್ಯ— ಇವುಗಳನ್ನೂ ಸಂತೋಷ ಚಿತ್ತದಿಂದ ಹೊಗಳತಕ್ಕವರು, ಭಾರತೀಯರ ಸಾಧನಕ್ಕೆ ಗುರಿತೋರತಕ್ಕವರು. ಇಬ್ಬರ ದೋಷಗಳನ್ನು ಮತ್ಸರವೂ ಇಲ್ಲದೆ, ದಾಕ್ಷಿಣ್ಯವೂ ಇಲ್ಲದೆ ಖಂಡಿಸತಕ್ಕವರು. ಈ ಸಮತಾಬುದ್ಧಿಯಿಂದ, ನಿಷ್ಪಕ್ಷಪಾತದೃಷ್ಟಿಯಿಂದ ಇವರು ವಿಶ್ವದ ಪ್ರಜೆಗಳಾಗಿ, ವಿಶ್ವದ ಹಿತವನ್ನೇ ಚಿಂತಿಸತಕ್ಕವರಾಗಿ, ಎಲ್ಲದರಲ್ಲಿಯೂ ವಿಶ್ವಭಾವನೆಯುಳ್ಳವರಾಗಿದ್ದಾರೆ. ಇವರ ಅತಿಪ್ರಿಯವಾದ ಕಾರ್ಯವೆಂದರೆ ಇವರು ಶಾಂತಿನಿಕೇತನದಲ್ಲಿ ಸ್ಥಾಪಿಸಿರುವ ವಿಶ್ವಭಾರತಿ ಎಂಬ ವಿಶ್ವವಿದ್ಯಾನಿಲಯ. ವಿಶ್ವ, ಭಾರತಿ, ಶಾಂತಿ—ಈ ಮೂರು ಮಾತುಗಳು ಇವರ ಬಾಳಿಕೆಯ ರಹಸ್ಯ. ಶಾಂತಿಯಲ್ಲಿ, ಸರಸ್ವತಿಯಿಂದ ಜ್ಞಾನವನ್ನು ಪಡೆದು, ವಿದ್ಯೆ ಬುದ್ಧಿಗಳನ್ನು ಶುದ್ಧಿಮಾಡಿ, ಸಮಾಜಗಳನ್ನೆತ್ತಿ, ಲೋಕವನ್ನೆಲ್ಲಾ ಅಣ್ಣತಮ್ಮಂದಿರಂತೆ ಒಂದುಗೂಡಿಸಿ, ಧರ್ಮ ಜೀವನದಲ್ಲಿ, ಕಲೋಪಾಸನೆಯಲ್ಲಿ, ಸಾತ್ತ್ವಿಕ ಸ್ಪರ್ಧೆಯಲ್ಲಿ, ಪ್ರತಿಯೊಬ್ಬ ಮಾನವನೂ ತನ್ನ ಆತ್ಮವನ್ನು ಪರಿಪೂರ್ಣಗೊಳಿಸಿ ಆನಂದಪಡಬೇಕೆಂಬುದೇ ಇವರ ಬೋಧನೆ— ನಡೆದು ತೋರಿಸಿಕೊಟ್ಟ ಸಂದೇಶ.

ಹೋರಾಟ ಚೀರಾಟಗಳಿಂದಲ್ಲ, ಇಂತಹ ಹಿರಿಯರನ್ನು ಹೆತ್ತುದರಿಂದಲೇ ಭರತಮಾತೆಯ ಹೆಸರು ಮತ್ತೆ ಜಗದ್ವ್ಯಾಪಿಯಾಗುತ್ತಿದೆ; ಜಗದ್ವಂದ್ಯವಾಗುತ್ತಿದೆ. "ಸಹ ನಾವವತು; ಸಹ ನೌ ಭುನಕ್ತು;

ಸಹವೀರ್ಯಂ ಕರವಾವಹೈ ; ತೇಜಸ್ವಿನಾವಧೀತಮಸ್ತು ; ಮಾ ವಿದ್ವಿಷಾವಹೈ — ಓಂ ಶಾಂತಿಶ್ಶಾಂತಿಶ್ಶಾಂತಿಃ'' ಎಂಬ ಪ್ರಾರ್ಥನೆಗೆ ಮತ್ತೆ ಸಾರ್ಥಕತೆಯೂ ಜೀವಕಳೆಯೂ ಕೂಡುತ್ತವೆ.

ಭಗವಂತನು ಶ್ರೀ ಠಾಕೂರರಿಗೆ ಆಯುರಾರೋಗ್ಯಗಳನ್ನು ಸಂಪೂರ್ಣವಾಗಿ ದಯಪಾಲಿಸಿ ಭಾರತ ಸಮಾಜದ ಏಳಿಗೆಯನ್ನು ಅವರು ಕಣ್ಣಾರ ಕಂಡು ಆನಂದಪಡುವಂತೆ ಮಾಡಲಿ! ಅವರಂತಹ ಮಹಾತ್ಮರು ಭಾರತಭೂಮಿಗೆ ಸದಾ ನಾಯಕರಾಗಿ ಬರುತ್ತಿರಲಿ.

ಬೆಂಗಳೂರು,
೨೫-೫-೧೯೩೫.

ಬಿ. ಎಂ. ಶ್ರೀಕಂಠಯ್ಯ,
ಸಮಿತಿಯ ಅಧ್ಯಕ್ಷ ಮತ್ತು ಪ್ರಧಾನ ಸಂಪಾದಕ.

# ಮೊದಲನೆಯ ಮುದ್ರಣದ ಅರಿಕೆ

ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನ ಸಮಿತಿಯ ಹಿರಿಯರು ತಮ್ಮ ಗ್ರಂಥಮಾಲೆಯಲ್ಲಿ ತರಬೇಕೆಂದು ಉದ್ದೇಶಿಸಿದ ಠಾಕೂರ ಕವಿ ವಿಷಯಕ ಗ್ರಂಥವನ್ನು ನಾನು ಬರೆಯಬೇಕೆಂದು ಆಹ್ವಾನಿಸಿ ನನಗೆ ಅತಿಶಯವಾದ ಆದರವನ್ನೂ ಗೌರವವನ್ನೂ ತೋರಿದಾರೆ. ಇದಕ್ಕಾಗಿ ನಾನು ಅವರಿಗೆ ಬಹಳ ಕೃತಜ್ಞನಾಗಿದೇನೆ. ಈ ಕೆಲಸವನ್ನು ನಿರ್ವಹಿಸುವುದರಲ್ಲಿ ನನಗೆ ಬಹು ಕಡೆಯಿಂದ ನೆರವೂ ಆಶ್ರಯವೂ ದೊರೆತಿವೆ. ವಂಗ ಭಾಷೆಯ ಮೂಲವನ್ನು ನೋಡಬೇಕಾದ ಹಲವು ಸಂದರ್ಭದಲ್ಲಿ ಮೈಸೂರಿನ ಶ್ರೀ ರಾಮಕೃಷ್ಣಾಶ್ರಮದಲ್ಲಿರುವ ಶ್ರೀ ಚಿನ್ಮಾತ್ರಾನಂದ ಸ್ವಾಮಿಗಳವರು ನನ್ನ ಜೊತೆಗೆ ಕುಳಿತು ಮೂಲವನ್ನು ಓದಿ ಅರ್ಥವನ್ನು ಹೇಳಿ ವಿಶೇಷ ಸಹಾಯಮಾಡಿದರು. ಠಾಕೂರರ ಸಂದರ್ಶನಕ್ಕೆಂದು ನಾನು ಹೊರಟಾಗ ಶ್ರೀ ವಿ. ಸೀತಾರಾಮಯ್ಯನವರು ನನಗೆ ಸಹಾಯವಾಗಿ ಜೊತೆಗೆ ಬಂದು ಬೇಸರವಾಗಬಹುದಾಗಿದ್ದ ಪ್ರಯಾಣವನ್ನು ಸುಖದಾಯಕವಾಗಿ ಮಾಡಿದರು; ಗ್ರಂಥ ಮುಗಿದಮೇಲೆ ಅದರಲ್ಲಿ ಪ್ರಮಾದಜನ್ಯ ದೋಷಗಳಿಲ್ಲದಂತೆ ಇವರು ಅದನ್ನು ಮೊದಲಿಂದ ಕೊನೆಯವರೆಗೆ ಓದಿ ನೋಡಿದಾರೆ. ಶಾಂತಿನಿಕೇತನದಲ್ಲಿ ನಾವು ಇದ್ದ ಎರಡು ದಿವಸವೂ ಅಲ್ಲಿ ಅಭ್ಯಾಸಕರಾಗಿದ್ದ ಕರ್ಣಾಟಕ ಪುತ್ರರು ಶ್ರೀ ನಾರಾಯಣ ಸಂಗಮರೂ ರುದ್ರಹಂಜಿಯವರೂ ನಮ್ಮನ್ನು ಆದರದಿಂದ ನೋಡಿಕೊಂಡು ನಿರೀಕ್ಷಿಸದ ಸ್ಥಳದಲ್ಲಿ ಎದುರುಗೊಂಡ ಸೋದರಮಾವನಂತೆ ಪರಪ್ರಾಂತದಲ್ಲಿ ನಮ್ಮ ಬಾಳುವೆಗೆ ಕರ್ಣಾಟಕದ ಪ್ರೇಮಮಯ ಆವರಣವನ್ನು ಹಾಕಿದರು. ಸಂದರ್ಶನದ ವೇಳೆಯಲ್ಲಿ ನಾನು ಮಾಡಿದ ಪ್ರಾರ್ಥನೆಯನ್ನು ಲಾಲಿಸಿ ಕವಿವರರು ಈ ಗ್ರಂಥದಲ್ಲಿ ಪ್ರತಿಕೃತಿ ಮಾಡುವ ಬಗ್ಗೆ ತಮ್ಮ ಇಂಗ್ಲೀಷು ಮತ್ತು ಬಂಗಾಳಿಯ ಬರಹವನ್ನು ಈಚೆಗೆ ಕಳುಹಿಸಿ ಈ ಉದ್ಯಮದ ವಿಷಯದಲ್ಲಿ ಅನುಗ್ರಹವನ್ನು ತೋರಿಸಿರುವರು. ಕವಿವರರ ಭಾವಚಿತ್ರ ಒಂದು ಬೇಕೆಂದಾಗ ಶಾಂತಿನಿಕೇತನದಲ್ಲಿ ಚಿತ್ರಕಲೆಯನ್ನು ಅಭ್ಯಾಸ ಮಾಡುತ್ತಿರುವ ಶ್ರೀ ಮಾರ್ತಾಂಡ ಜೋಶಿಯವರು

ಒಂದು ಚಿತ್ರವನ್ನು ಸಂಪಾದಿಸಿ ಕಳುಹಿಸಿದರು. ಆದರ ಆಧಾರದಿಂದ ಶ್ರೀ ಶಿವರಾಮ ಕಾರಂತರು ತೈಲಚಿತ್ರ ಒಂದನ್ನು ಬರೆಯಿಸಿಕೊಟ್ಟರು. ಅದರ ಪ್ರತಿಯೇ ಈ ಪುಸ್ತಕದ ಆರಂಭದಲ್ಲಿ ಕೊಟ್ಟಿರುವ ಪ್ರತಿಕೃತಿ. ಶ್ರೀ ಮಂ. ನರಸಿಂಹಮೂರ್ತಿಯವರು ಪುಸ್ತಕದ ಮೊದಲ ಪ್ರತಿಯನ್ನು ಶುದ್ಧವಾಗಿ ಪ್ರತಿಮಾಡಿ ಅಚ್ಚಿನ ಮನೆಗೆ ಸಿದ್ಧಪಡಿಸಿದರು. ಪುಸ್ತಕ ಅಚ್ಚಾಗುವಲ್ಲಿ ಪ್ರಕಟನ ಸಮಿತಿಯ ಅಧ್ಯಕ್ಷರೂ ಗ್ರಂಥಮಾಲೆಯ ಪ್ರಧಾನ ಸಂಪಾದಕರೂ ಆದ ನನ್ನ ಗುರುಗಳು ಶ್ರೀ ಬಿ. ಎಂ. ಶ್ರೀಕಂಠಯ್ಯ ನವರು ಮೊದಲಿಂದ ಕೊನೆಯವರೆಗೆ ಅಚ್ಚಿನ ಕರಡನ್ನು ನೋಡಿ ತಿದ್ದಿದಾರೆ. ಪ್ರಕಟನೆಯ ಕಾರ್ಯದಲ್ಲಿ ಕರಡಿನ ತಿದ್ದಾಟ ಮರಳುಕಾಡಿನಲ್ಲಿ ಹೊರಟ ಬಿಸಿಲಿನ ವಿಹಾರ. ಪುಸ್ತಕ ಬರೆದವನಿಗಂತೂ ಈ ವಿಧಿ ತಪ್ಪಿದ್ದಲ್ಲ. ಉಳಿದವರು ಇದನ್ನು ಅಂಗೀಕರಿಸುವುದೆಂದರೆ ಅಸಾಧಾರಣವಾದ ವಾತ್ಸಲ್ಯ ಸಹನೆಗಳಿಂದ ಮಾತ್ರ ಸಾಧ್ಯ. ಶ್ರೀ ಶ್ರೀಕಂಠಯ್ಯನವರು ಕನ್ನಡದ ಸಲುವಾಗಿಯೂ ನನ್ನ ಸಲುವಾಗಿಯೂ ಈ ಸಂದರ್ಭದಲ್ಲಿ ಈ ಶ್ರಮವನ್ನು ವಹಿಸಿದರು. ಈ ಎಲ್ಲ ಹಿರಿಯರಿಗೆ ಮಿತ್ರರಿಗೆ ನಾನು ಅನೇಕ ವಂದನೆಗಳನ್ನು ಅರ್ಪಿಸುತ್ತೇನೆ. ಇಷ್ಟು ಸಣ್ಣ ಪುಸ್ತಕವನ್ನು ಬರೆಯುವುದಕ್ಕೆ ಇಷ್ಟೊಂದು ನೆರವೇ ಎಂದು ಯಾರಿಗಾದರೂ ತೋರಬಹುದು. ಕೃತಿಯೇನೋ ಅಲ್ಪ. ಆದರೆ ಅದು ಆಗುವುದಕ್ಕೂ ಇಷ್ಟು ನೆರವು ಬೇಕು. ಗುಬ್ಬಚ್ಚಿ ಹೂವಿನಲ್ಲಿ ಬಹಳ ಗಂಧವಿಲ್ಲ. ಆದರೆ ಅದಕ್ಕೂ ಸರಿಯಾದ ನೆಲಬೇಕು, ಹೊತ್ತಿನಲ್ಲಿ ಮಳೆ ಬೇಕು, ಅನುದಿನದ ಬೆಳವಣಿಗೆಗೆ ಅನುಕೂಲವಾದ ಗಾಳಿ ಬೇಕು. ಇಷ್ಟೆಲ್ಲ ಸಹಾಯವಿಲ್ಲದೆ ನನ್ನಿಂದಲಂತೂ ಯಾವ ಸಣ್ಣ ಕೆಲಸವೂ ನಡೆಯಲಾರದು. ಈ ಉಪಮೆಯಿಂದಲೇ ಇನ್ನೊಂದು ವಿಷಯವನ್ನು ಸೂಚಿಸಿ ಈ ಅರಿಕೆಯ ಮಾತನ್ನು ಮುಗಿಸುತ್ತೇನೆ. ಕೃತಿ ಅಲ್ಪವಾದರೂ ಬರಹಗಾರನಿಗೆ ತಾನು ಬರೆದೆನೆಂಬ ಹೆಮ್ಮೆಯುಂಟು, ಕೃತಿಯಲ್ಲಿ ಮಮತೆಯುಂಟು. ಇವು ಗುಬ್ಬಚ್ಚಿಯ ಗಿಡದ ಮುಳ್ಳು, ಆ ಹೂವಿನಲ್ಲಿಯ ಕೋಡು. ಬಲ್ಲವರು ಈ ಹೆಮ್ಮೆ ಮಮತೆಗಳಿಂದ ಬೇಸರಪಡದೆ ಗ್ರಂಥದಲ್ಲಿ ಏನಾದರೂ ಸ್ವಲ್ಪ ಗುಣವಿದ್ದರೆ ಅದನ್ನು ಗ್ರಹಿಸಬೇಕೆಂದು ಪ್ರಾರ್ಥನೆ. ಇದು ನಮ್ಮ ಜನಕ್ಕೆ ಹೊಸತಲ್ಲ,

ಕಷ್ಟವಲ್ಲ. ನನ್ನ ಎಲ್ಲ ಗ್ರಂಥಗಳ ವಿಷಯದಲ್ಲಿ ಅವರು ಇದುವರೆಗೆ ಈ ಪ್ರೇಮವನ್ನೂ ತಾಳ್ಮೆಯನ್ನೂ ತೋರಿದಾರೆ. ಅವುಗಳ ಬಲದಿಂದಲೇ ಈ ಕೈಯ ಲೇಖನಿ ನಡೆಯುತ್ತಿದೆ.

ಚಿಕ್ಕಮಗಳೂರು,
ಯುವ ಸಂ॥ ಚೈತ್ರ ಬ॥ ತೃತೀಯೆ. } **ಮಾಸ್ತಿ ವೆಂಕಟೇಶ ಅಯ್ಯಂಗಾರ್**

# ಎರಡನೆಯ ಮುದ್ರಣದ ಅರಿಕೆ

ಮೊದಲನೆಯ ಮುದ್ರಣದ ಪ್ರತಿಗಳು ಮುಗಿದದ್ದರಿಂದ ಈ ಮುದ್ರಣಕ್ಕೆ ಕೈಹಾಕಿದೆ. ವಿಶ್ವವಿದ್ಯಾನಿಲಯದ ಕಟ್ಟಲೆಗಳನ್ನು ಅನುಸರಿಸಿ ಈ ಮುದ್ರಣವನ್ನು ನಾನು ಪ್ರಕಟಿಸಿದೇನೆ. ಕವಿವರರು ಈಚೆಗೆ ಇಹ ದೇಹವನ್ನು ತೊರೆದದ್ದರಿಂದ ಪುಸ್ತಕದಲ್ಲಿ ಅಲ್ಲಲ್ಲಿ ವಾಕ್ಯಗಳನ್ನು ತಿದ್ದಿದೆ. ಮೊದಲನೆಯ ಮುದ್ರಣದಲ್ಲಿ ಪ್ರಸ್ತಾಪಿಸದೆ ಬಿಟ್ಟದ್ದ ಕೆಲವು ಗ್ರಂಥ ಕೆಲವು ಸಂಗತಿಗಳನ್ನು ಕುರಿತ ಭಾಗಗಳನ್ನು ಈ ಮುದ್ರಣದಲ್ಲಿ ಸೇರಿಸಿದೆ.

ಈ ಅರಿಕೆ ಅಚ್ಚಾಗುತ್ತಿರುವ ತರುಣದಲ್ಲೇ (೫–೧–೧೯೪೬ರ ದಿನ) ಗುರುವರ್ಯ ಶ್ರೀ ಬೆ. ಮೈ. ಶ್ರೀಕಂಠಯ್ಯನವರು ತಮ್ಮ ಇಹಲೋಕ ಯಾತ್ರೆಯನ್ನು ಮುಗಿಸಿದರೆನ್ನುವುದು ಅತಿ ವಿಷಾದದ ಸಂಗತಿ. ಆ ಮಹನೀಯರು ನನ್ನ ಬಾಳಿಗೆ ತಂದ ಬೆಳಕನ್ನು ವರ್ಣಿಸಲು ಇದು ಸ್ಥಳವಲ್ಲ. ಆದರೆ ಒಂದು ಮಾತನ್ನು ಇಲ್ಲಿ ಹೇಳಬಹುದು. ರವೀಂದ್ರನಾಥರನ್ನು ಕುರಿತ ಗ್ರಂಥ ಒಂದು ಆಗಲೇ ಕನ್ನಡಕ್ಕೆ ಬೇಕೆಂದವರು ಇವರು; ಇದನ್ನು ನಾನು ಬರೆಯಬೇಕೆಂದು ಒಪ್ಪಿಸಿದವರು ಇವರು. ಹೀಗಲ್ಲದೆ ಆಗ ನಾನು ಈ ಗ್ರಂಥವನ್ನು ರಚಿಸಲು ತೊಡಗುತ್ತಿರಲಿಲ್ಲ.

ಗ್ರಂಥ ಎಂಥದೇ ಆಗಲಿ, ಇದರ ರಚನೆಗೆ ಪ್ರೇರಕವಾದ ಆ ಉದಾರ ವಾತ್ಸಲ್ಯ ಸದಾ ನನ್ನ ಬಾಳನ್ನು ಒಳಿತಕ್ಕೆ ತಿರುಗಿಸಲಿ.

**ಬೆಂಗಳೂರು, ಪಾರ್ಥಿವ ಸಂ॥ ಪುಷ್ಯ**
**ಶುದ್ಧ ಪಾಡ್ಯಮಿ (8–1–1946)** } **ಮಾಸ್ತಿ ವೆಂಕಟೇಶ ಅಯ್ಯಂಗಾರ್**

**ವಿಶೇಷ ಸೂಚನೆ:**— ಮೊದಲ ಪುಟದ ಎರಡನೆಯ ಪಂಕ್ತಿಯಲ್ಲಿ ೧೮೬೨ ಎಂದು ಇರುವುದನು ೧೮೬೧ ಎಂದು **ತಿದ್ದಿಕೊಳ್ಳಬೇಕು.**

# ವಿಷಯ ಸೂಚಿಕೆ

## ಚಿತ್ರಗಳು

# ರವೀಂದ್ರನಾಥ ಠಾಕೂರರು

## ಅಧ್ಯಾಯ ೧

### ಪ್ರಸ್ತಾವನೆ

**೧. ನಾಂದೀ**

ರವೀಂದ್ರನಾಥ ಠಾಕೂರರು ಆಧುನಿಕ ಭಾರತವರ್ಷದ ಕಾರಣ ಪುರುಷರಲ್ಲಿ ಒಬ್ಬರು. ಇವರು ಬಂಗಾಳದಲ್ಲಿ ಕ್ರಿಸ್ತಶಕ ೧೮೬೧ನೆಯ ಇಸವಿಯಲ್ಲಿ ಹುಟ್ಟಿ ಮೊದಲ ಐವತ್ತು ವರುಷ ವಂಗಭಾಷೆ ವಂಗದೇಶಗಳ ಸೇವೆಯನ್ನು ಮಾಡಿ ನಮ್ಮ ದೇಶದಲ್ಲಿ ಖ್ಯಾತಿಪಡೆದರು. ೧೯೧೩ನೆಯ ವರ್ಷದಲ್ಲಿ ಇವರಿಗೆ ಉತ್ತಮ ವರ್ಗದ ಸಾಹಿತ್ಯ ಸೇವೆಗೆ ಸಲ್ಲುವ ಸ್ವೀಡನ್ ದೇಶದ ನೋಬೆಲ್ ಪ್ರೈಜ್ ಎಂಬ ಬಹುಮಾನ ದೊರೆಯಿತು. ಇದರಿಂದ ಇವರು ಜಗದ್ವಿಖ್ಯಾತರಾದರು. ಆಮೇಲೆ ರವೀಂದ್ರರು ಪ್ರಪಂಚದ ಮುಖ್ಯವಾದ ದೇಶಗಳಿಗೆಲ್ಲಾ ಆಹ್ವಾನಿತರಾಗಿ ಹೋಗಿ ಉಪನ್ಯಾಸಮಾಡಿ ಭಾರತವರ್ಷದ ಸಂಸ್ಕೃತಿಯನ್ನು ಪ್ರಪಂಚಕ್ಕೆ ತಿಳಿಸಿದರು; ಈ ಮೂಲಕ ಇವರು ರಾಷ್ಟ್ರರಾಷ್ಟ್ರಗಳ ಸೌಹಾರ್ದವನ್ನು ಬೆಳೆಸಿದರು. ನಾಗರಿಕತೆಯನ್ನುಳ್ಳ ಯಾವ ರಾಷ್ಟ್ರದಲ್ಲಿಯೂ ಈಗ ಇವರ ಹೆಸರನ್ನು ಕೇಳದವರಿಲ್ಲ, ಇವರ ಗ್ರಂಥಗಳನ್ನು ಓದಿದವರು ಕೆಲವರಾದರೂ ಇಲ್ಲದೆ ಇಲ್ಲ. ಹೀಗೆ ಇವರ ಮೂಲಕ ನಮ್ಮ ಮಾತೃಭೂಮಿಯ ಕೀರ್ತಿ ಹೆಚ್ಚಾಯಿತು; ನಾವೂ ಗಣ್ಯವಾದ ಜನಾಂಗವೆಂದು ಸಿದ್ಧವಾಯಿತು. ಪ್ರಪಂಚದ ಬೆಳವಣಿಗೆಯಲ್ಲಿ ಭಾರತಭೂಮಿಯೂ ಸಹಾಯಮಾಡಬಲ್ಲುದೆಂದು ಇವರಿಂದ ವ್ಯಕ್ತವಾಯಿತು. ಈ ಕೆಲಸದಿಂದ ರವೀಂದ್ರನಾಥರು ನವೀನಕಾಲದ ಯುಗಪುರುಷರಲ್ಲಿ ಸೇರಿದಾರೆ.

ನಮ್ಮ ಜನರು ಈ ಮಹನೀಯರ ಚರಿತ್ರೆಯನ್ನು ತಿಳಿಯುವುದು ಆವಶ್ಯಕ. ಮಾತೃಭೂಮಿಯ ಹೆಸರನ್ನು ಬೆಳಗಿದವರೆಂಬುದು ಇದಕ್ಕೆ ಒಂದು ಕಾರಣ. ಇದಕ್ಕೆ ಹೆಚ್ಚಾಗಿ ನಮ್ಮ ಸಂಸ್ಕೃತಿ ಇವರ ಬರಹದಲ್ಲಿ ರೂಪುಗೊಂಡಿದೆಯೆನ್ನುವುದು ಇನ್ನೊಂದು ಕಾರಣ. ನಮ್ಮ ದೇಶ ನಮ್ಮ ಸಾಹಿತ್ಯ ನಮ್ಮ ಮತ ಎಂದು ಉತ್ಸಾಹಪಡುವವರಿಗಾದರೂ ಆ ದೇಶ ಸಾಹಿತ್ಯ ಮತಗಳ ಪರಿಚಯ ಇರುವುದು ಕಡಮೆ; ಅಥವಾ ಪರಿಚಯ ವಿದೆಯೆಂದು ತಿಳಿದುಕೊಂಡಿರುವವರು ತಮ್ಮ ತಮ್ಮ ಮೂಲೆಯಷ್ಟಕ್ಕೆ ಅಂದವೆನಿಸಿರುವ ತಿಳಿವು ತಿಬ್ಬಳಿಗೆ ಸಮವಿಲ್ಲ ಎಂದುಕೊಂಡಿರುವೆವು. ವಿಶಾಲವಾದ ಪ್ರಪಂಚಕ್ಕೆ ಒಪ್ಪುವ ಹಿರಿಯ ಗುಣ ನಮ್ಮ ಸಾಹಿತ್ಯದಲ್ಲಿ, ನಮ್ಮ ಸಂಸ್ಕೃತಿಯಲ್ಲಿ ಇದೆಯೆ, ಇದ್ದರೆ ಅದು ಯಾವುದು, ಎಂದು ತಿಳಿಯ ಬೇಕಾದರೆ ನಾವು ಲೋಕಮಾನ್ಯರಾದ ಇಂಥ ಮಹನೀಯರ ಕೆಲಸವನ್ನು ತಿಳಿಯಬೇಕು. ಇವರ ಜೀವನವನ್ನು ತಿಳಿಯುವುದು ಆವಶ್ಯಕವೆನ್ನುವು ದಕ್ಕೆ ಇದಕ್ಕಿಂತ ಹೆಚ್ಚಾಗಿ ಎಲ್ಲರಿಗೂ ಅನ್ವಯಿಸುವ ಕಾರಣ ಇವರ ಗ್ರಂಥ ಗಳನ್ನು ಓದುವುದರಿಂದ ಪಡೆಯಬಹುದಾದ ಆನಂದ. ರವೀಂದ್ರನಾಥರು ಅತ್ಯುತ್ತಮ ರೀತಿಯ ಕವಿಗಳು ಕತೆಗಾರರು ಉಪನ್ಯಾಸಕರು. ರಸಿಕರಿಗೆ ಇಲ್ಲಿ ರಸದ ಒಂದು ಕಣಿಯೇ ಇದೆ. ಅಲ್ಲದೆ ನಮ್ಮ ದೇಶದ ಸಾಹಿತ್ಯ ಈಗ ಬೆಳೆಯುತ್ತಿದೆ; ನವನಾಗರಿಕತೆಯ ವಿಸ್ತೃತ ಕಾರ್ಯಕ್ಷೇತ್ರದಲ್ಲಿ ನೂರಾರು ಕೆಲಸಗಳನ್ನು ಅದು ಕೈಗೊಳ್ಳಬೇಕಾಗಿದೆ. ಠಾಕೂರರು ಈ ಕೆಲಸಗಳನ್ನು ಮಾಡಿ ತೋರಿಸಿದಾರೆ. ಗ್ರಂಥಗಳನ್ನು ಬರೆಯುವವರಿಗೆ ಇಲ್ಲಿ ಮೇಲ್ಪಂಕ್ತಿಯಿದೆ; ನವೀನ ಸಾಹಿತ್ಯವನ್ನು ನಗುವೆವೆನ್ನುವವರಿಗೆ ಅವರ ತಪ್ಪನ್ನು ತೋರಿಸುವ ಒಂದು ಕನ್ನಡಿ ಇದೆ. ಸಾಹಿತ್ಯದಲ್ಲಿ ಹೇಗೋ ಹಾಗೆ ಠಾಕೂರರು ದೇಶಸೇವೆಯಲ್ಲೂ ಮುಂದಾಳು ಮೇಲ್ಪಂಕ್ತಿ ಆಗಿದ್ದರು. ಇದರಂತೆಯೇ ಇನ್ನಿತರ ಕಲೆಗಳಲ್ಲಿ ಇವರು ಇಟ್ಟ ಅಡಿ ಯಶಸ್ವಿಯಾಯಿತು. ಇಂಥ ಜೀವನದ ವಿಚಾರವನ್ನು ಸ್ವಲ್ಪಮಟ್ಟಿ ಗಾದರೂ ತಿಳಿದುಕೊಳ್ಳುವುದು ಜನದ ಏಳ್ಗೆಗೆ ಸಾಧನ.

ಈ ಕಾರಣದಿಂದ ಕರ್ಣಾಟಕದ ಜನರಿಗೆ ಈ ಜೀವನವನ್ನು ತಿಳಿಸ ಬೇಕೆಂದು ಈ ಪುಸ್ತಕದಲ್ಲಿ ಯತ್ನಮಾಡಿದೆ. ಇದಕ್ಕೆ ಸೌಕರ್ಯ ಕಡಮೆ.

ಠಾಕೂರರ ಬರವಣಿಗೆಯೆಲ್ಲ ಮೊದಲು ಬಂಗಾಳಿಯಲ್ಲಿದೆ; ಆಮೇಲೆ ಇಂಗ್ಲೀಷು ಮುಂತಾದ ಪಾಶ್ಚಾತ್ಯ ಭಾಷೆಗಳಲ್ಲಿದೆ. ಇವರ ಬರವಣಿಗೆಯ ಬಹುಭಾಗ ಇಂಗ್ಲೀಷಿನಲ್ಲಿಯೂ ಬಂದಿಲ್ಲ. ಕವಿಯ ಗ್ರಂಥಗಳನ್ನೇ ಕಾಣದ ಜನರಿಗಾಗಿ ಆತನ ಜೀವನವನ್ನೂ ಕೃತಿಗಳನ್ನೂ ಕುರಿತು ಬರೆಯುವುದು ಕ್ಲಿಷ್ಟ ಕಾರ್ಯ. ಅಲ್ಲದೆ ನನಗೆ ವಂಗ ಭಾಷೆಯ ಪರಿಚಯ ಇರುವುದು ಬಹು ಕಡಮೆ; ನಾನು ಠಾಕೂರರ ಬರಹಗಳನ್ನು ಬಹಳವಾಗಿ ಇಂಗ್ಲೀಷ್ ಪರಿವರ್ತನಗಳಲ್ಲಿ ನೋಡಿದೇನೆ ಅಷ್ಟೇ. ಆದರೆ ಈ ಪರಿವರ್ತನಗಳು ಅನೇಕವೇಳೆ ಠಾಕೂರರೇ ಮಾಡಿದುವು; ಅವರ ಭಾವನೆ ಬಹುಮಟ್ಟಿಗೆ ಅವರ ಮನಸ್ಸಿಗೆ ಒಪ್ಪುವಂತೆ ಇಂಗ್ಲೀಷಿನಲ್ಲಿ ಬಂದಿದೆಯೆಂದು ಇದರಿಂದ ಹೇಳಬಹುದು. ಆದದರಿಂದ ಸದ್ಯದಲ್ಲಿ ನಮ್ಮ ಜನಕ್ಕೆ ಈ ವಿಚಾರ ಎಷ್ಟನ್ನು ತಿಳಿಸುವುದು ಸಾಧ್ಯವೋ ಅಷ್ಟನ್ನು ತಿಳಿಸೋಣವೆಂದು ಮನಸ್ಸುಮಾಡಿದೇನೆ. ಸಾಹಿತ್ಯ ಸೇವಕರಾದ ಕನ್ನಡಿಗರು ವಂಗ ಭಾಷೆಯನ್ನು ಕಲಿತು ಠಾಕೂರರ ಕೃತಿಗಳನ್ನು ಆ ಭಾಷೆಯಲ್ಲಿಯೇ ನೋಡಿ ಅವುಗಳ ವಿಷಯ ಮಾತನಾಡುವಂತೆ ಮಾಡುವುದು ಈ ಪುಸ್ತಕದ ಉದ್ದೇಶ. ಇದನ್ನು ಓದುವ ಅಥವಾ ಓದದ ಕನ್ನಡಿಗರಲ್ಲಿ ಯಾರಾದರೊಬ್ಬರು ಬೇಗ ಈ ಕೆಲಸವನ್ನು ಮಾಡಲೆಂದು ನನ್ನ ಆಸೆ. ಈ ಆಸೆ ಸಲ್ಲುವವರೆಗೆ ಈ ಪುಸ್ತಕ ನಮ್ಮ ಜನರಿಗೆ ಕವಿಯ ವಿಷಯವನ್ನು ಸ್ವಲ್ಪಮಟ್ಟಿಗಾದರೂ ತಿಳಿಸುವುದೆಂದು ನಂಬಿದೇನೆ.

# ಅಧ್ಯಾಯ ೨

## ಕಾಲ, ದೇಶ, ಭಾಷೆ

### ೧. ವಂಗ ಭಾಷೆ

ವಂಗ ಅಥವಾ ಬಂಗಾಳಿ ಭಾಷೆ ಗಂಗಾನದಿಯ ಬಯಲಿನ ಭಾಷೆ; ಈ ಬಯಲಿನ ಉತ್ತರಕ್ಕೆ ಮತ್ತು ಪೂರ್ವಕ್ಕೆ ಹಬ್ಬಿದೆ. ಈ ಭಾಷೆಯನ್ನು ಆಡತಕ್ಕವರು ಸುಮಾರು ನಾಲ್ಕೂವರೆ ಕೋಟಿ ಜನ. ಇದು ಸಂಸ್ಕೃತಕ್ಕೆ ಬಹು ಸಮೀಪವಾದ ಪ್ರಾಕೃತ ಭಾಷೆಗಳಲ್ಲಿ ಒಂದು. ಈ ಸಂಬಂಧ ಬಳಕೆಯ ಭಾಷೆಯಲ್ಲಿ ಕಾಣುವುದಕ್ಕಿಂತ ಬರಹದ ರೂಪದಲ್ಲಿ ಹೆಚ್ಚಾಗಿ ಸ್ಪಷ್ಟವಾಗುತ್ತದೆ. ಸಾಹಿತ್ಯದ ಭಾಷೆಗೂ ಬಳಕೆಯ ಭಾಷೆಗೂ ಇದರಲ್ಲಿರು ವಷ್ಟು ಅಂತರ ಇಂಡಿಯಾದೇಶದ ಇನ್ನಾವ ಭಾಷೆಯಲ್ಲಿಯೂ ಇಲ್ಲವೆಂದು ಸರ್ ಜಾರ್ಜ್ ಗ್ರಿಯರ್‌ಸನ್‌ರವರು ಹೇಳಿದಾರೆ. ಸಾಮಾನ್ಯದ ಮಾತಿಗೂ ಪಾಂಡಿತ್ಯದ ಮಾತಿಗೂ ಇರುವ ಈ ವ್ಯತ್ಯಾಸವನ್ನು ತೋರಿಸುವುದಕ್ಕೆ ಅವರು ಇಂಗ್ಲೀಷ್ ವಾಕ್ಯಗಳಲ್ಲಿ ಲ್ಯಾಟಿನ್ ಪದಗಳನ್ನು ಹಾಕಿ ಒಂದು ಉದಾಹರಣೆಯನ್ನು ಕೊಟ್ಟಿದಾರೆ: "A certain man had two sons" ಎನ್ನುವಲ್ಲಿ ಲ್ಯಾಟಿನ್ ಪದಗಳನ್ನು ಹಾಕಿದರೆ "A certain *vir* had two *filiuses*" ಎಂದು ಆಗುತ್ತದೆ. ಬರಹದ ಬಂಗಾಳಿ ಹೀಗಿರುತ್ತದೆಯೆಂದು ಗ್ರಿಯರ್‌ಸನ್‌ರವರ ಅಭಿಪ್ರಾಯ. ಲ್ಯಾಟಿನ್ ಪದಗಳನ್ನು ಉಗಯೋಗಿ ಸಿರುವ ಇಂಥ ಇಂಗ್ಲೀಷ್ ವಾಕ್ಯಗಳು ಬಹು ವಿಕಾರವಾಗಿ ಕಾಣುವುದು ನಿಜ. ಬಂಗಾಳಿಯಲ್ಲಿ ಸಂಸ್ಕೃತ ಇಷ್ಟು ವಿಕಾರವಾಗಿ ಕಾಣುವುದಿಲ್ಲವೆಂದು ಬಂಗಾಳಿಗಳು ಹೇಳುತ್ತಾರೆ. ಕನ್ನಡದಲ್ಲಿ ಹೇಗೋ ಹಾಗೆ ಬಂಗಾಳಿ ಯಲ್ಲಿಯೂ ಸಂಸ್ಕೃತ ವಿಶೇಷ ಬಳಕೆಯಲ್ಲಿರುವುದರಿಂದ ಪಾಂಡಿತ್ಯದ ಬಂಗಾಳಿ ಗ್ರಿಯರ್‌ಸನ್‌ರವರು ಹೇಳುವಷ್ಟು ವಿಕಾರವಾಗಿ ಇರಲಾರ ದೆಂದು ಊಹಿಸಬಹುದು. ಆದರೂ ಸಂಸ್ಕೃತ ಹೆಚ್ಚಾದಾಗ ಅದು ಸ್ವಲ್ಪ ವಿಚಿತ್ರವಾಗಿ ಕಾಣಬಹುದೆನ್ನುವುದರಲ್ಲಿ ಸಂದೇಹವಿಲ್ಲ. ಈ ಭಾಷೆಯ

ಸಾಹಿತ್ಯದಲ್ಲಿ ಈಗ ಐವತ್ತು ವರ್ಷದಿಂದೀಚೆಗೆ ಬಳಕೆಯ ಭಾಷೆ ವಾಡಿಕೆಗೆ ಬಂದಿದೆಯಂತೆ. ಇದರಲ್ಲಿ ಪ್ರಾಂತಿಕ ರೂಪಗಳೂ ಹಲವು ಇವೆ. ಬಂಗಾಳಿ ಭಾಷೆಯ ಉಚ್ಚಾರಣೆಯೂ ಈ ಸಂದರ್ಭದಲ್ಲಿ ತಿಳಿಯಬೇಕಾದದ್ದು. ಬಂಗಾಳದ ಜನರು ಲಕ್ಷ್ಮೀ ಎಂದು ಬರೆದರೂ ಲಕ್ಖಿ ಎಂದು ಓದುವರು. ಭಕ್ತ ಎನ್ನುವದನ್ನು ಭತ್ತ ಎಂದು ಓದುವರು. 'ಸ ಶ ಷ' ಎಂಬ ಮೂರು ಶಬ್ದಗಳೂ ಈ ಭಾಷೆಯಲ್ಲಿ ಒಂದಾಗಿ ವ್ಯವಹಾರದಲ್ಲಿವೆ. ಈ ಜನರು ಸಾಗರ ಎಂದು ಬರೆಯುವರು; ಷಾಗರ ಅಥವಾ ಷಾಯರ ಎಂದು ಓದುವರು. ಭಾಗ್ಯ ಎನ್ನುವುದು ಬಜ್ಝ ಎಂದು, ಮಧ್ಯೆ ಎನ್ನುವುದು ಮಜ್ಝೆ ಎಂದು ಉಚ್ಚಾರವಾಗುತ್ತವೆ. ಎಂದರೆ, ಬಂಗಾಳದ ಜನರು ಸಂಸ್ಕೃತವನ್ನು ಬರೆದು ಒಂದು ಪ್ರಾಕೃತವನ್ನು ಓದುತ್ತಾರೆ. ಇದರಿಂದ ಬಂಗಾಳಿಗಳಲ್ಲದವರಿಗೆ ಈ ಭಾಷೆಯನ್ನು ಕಲಿಯುವುದು ಕಷ್ಟವಾಗುತ್ತದೆ.

### ೩. ಹಿಂದಣ ಸಾಹಿತ್ಯ

ಈ ಭಾಷೆಯಲ್ಲಿ ಹದಿನೈದನೆಯ ಶತಮಾನದಿಂದ ಆರಂಭವಾದ ಜನತೆಯ ಸಾಹಿತ್ಯವೊಂದಿದೆಯೆಂದು ತಿಳಿದುಬರುತ್ತದೆ. ಜನತೆಯ ಈ ಸಾಹಿತ್ಯ ಹದಿನೆಂಟನೆಯ ಶತಮಾನದ ಕೊನೆಯವರೆಗೆ ಬಂದಿತು. ಅದರ ಈಚೆಗೆ ಬಂದಿರುವ ಸಾಹಿತ್ಯವನ್ನು ಆಧುನಿಕ ಸಾಹಿತ್ಯ ಎಂದು ಹೇಳ ಬಹುದು. ಪೂರ್ವದ ಕವಿಗಳಲ್ಲಿ ಚಂಡಿದಾಸ, ಮುಕುಂದರಾಮ, ಇವರು ಪ್ರಸಿದ್ಧರು. ಇವರ ಲೇಖನಗಳು ಹೃದಯದಿಂದ ಬಂದಿರತಕ್ಕವು, ಪಾಂಡಿತ್ಯದ ಕೃತಿಗಳಲ್ಲ, ಎಂದು ಗ್ರಿಯರ್‌ಸನ್‌ರವರು ಹೇಳುತ್ತಾರೆ. ಇವುಗಳಲ್ಲಿ ನಿಜವಾದ ಕಾವ್ಯವೂ ಉತ್ತಮ ರೀತಿಯ ವರ್ಣನೆಯೂ ಇವೆ ಯಂತೆ. ಕನ್ನಡದಲ್ಲಿ ಕುಮಾರವ್ಯಾಸನ ಭಾರತ ತೊರವೆಯ ರಾಮಾಯಣ ಇರುವಂತೆ, ಬಂಗಾಳಿಯಲ್ಲಿ ಕೃತ್ತಿವಾಸ ಎಂಬಾತನ ರಾಮಾಯಣವೂ ಕಾಶೀದಾಸ ಎಂಬಾತನ ಭಾರತವೂ ಜನರಿಗೆ ಪ್ರಿಯವಾದ ಕಾವ್ಯಗಳು. ಪೂರ್ವದ ಸಾಹಿತ್ಯದಲ್ಲಿ ಇವುಗಳ ಜೊತೆಗೆ ಹೆಸರಾದುವೆಂದರೆ ಚೈತನ್ಯ ಮಹಾಗುರುವಿನಿಂದ ಬೆಳೆದ ವೈಷ್ಣವ ಮತದ ಭಾಗವತರ ಕೀರ್ತನೆಗಳು; ಹಾಗೆಯೇ ಶಾಕ್ತೇಯ ಸಾಧಕರ ಗೀತಗಳು. ಶಾಕ್ತೇಯ ಕವಿಗಳಲ್ಲಿ

ರಾಮಪ್ರಸಾದನು ಪ್ರಮುಖನು. ಇವಲ್ಲದೆ ಹತ್ತು ಅಥವಾ ಹನ್ನೊಂದ ನೆಯ ಶತಮಾನದ ಹಾಡುಗಳು ಕೆಲವು ಸಿಕ್ಕಿವೆ. ಶ್ರೀಮಾನ್‌ಗಳಾದ ಹರಪ್ರಸಾದ ಶಾಸ್ತ್ರಿಗಳೂ ದಿನೇಶ ಚಂದ್ರಸೇನರೂ ಸಂಪಾದಿಸಿದ ಈ ಗೀತ ಗಳಲ್ಲಿ ಋಗ್ವೇದ ಗೀತಗಳಲ್ಲಿ ಕಾಣುವಂತೆ ಪ್ರಕೃತಿಯ ವ್ಯಾಪಾರಗಳನ್ನು ಕುರಿತ ಸರಳವಾದ ಕೌತುಕವೂ ಆಶ್ಚರ್ಯವೂ ಕಾಣುತ್ತವೆ. ಇನ್ನು ಕೆಲವು ಗೀತಗಳಲ್ಲಿ ವ್ಯವಸಾಯದ ವಿಷಯವಾಗಿ ಜನರು ತಿಳಿಯಬೇಕಾದ ವಿಷಯಗಳು ಅಡಕವಾಗಿವೆ; ಕನ್ನಡದ "ಹುಯ್ಯೋ ಹುಯ್ಯೋ ಮಳೆರಾಯ", "ಭರಣಿ ಬಂದು ಧರಣಿ ಬೆಳೆಯಿತು" ಎಂಬ ರೀತಿಯ ಸಾಹಿತ್ಯವಿದು.

### ೪. ಹೊಸ ಯುಗ

ಮೊತ್ತದಲ್ಲಿ ಈ ಸಾಹಿತ್ಯದಲ್ಲಿ ಹೊಸ ಯುಗದ ಎಚ್ಚರಿಕೆ ಬಂದದ್ದು ನಮ್ಮ ದೇಶದ ಇತರ ಸಾಹಿತ್ಯಗಳಲ್ಲಿ ಹೇಗೋ ಹಾಗೆ ಇಂಗ್ಲೀಷಿನ ಪ್ರಭಾವದಿಂದ. ಇಂಗ್ಲೀಷಿನ ಸಹಾಯವನ್ನು ತಂದವರಲ್ಲಿ ಮೊದಲನೆಯ ವನು ವಿಲಿಯಂ ಕೇರಿ ಎಂಬ ಕ್ರೈಸ್ತ ಮಿಷನೆರಿ. ಈತನು ಬಂಗಾಳಿಯಲ್ಲಿ ಪುಸ್ತಕಗಳನ್ನು ಬರೆಯಿಸಿದನು, ಅಚ್ಚಿನ ಯಂತ್ರವನ್ನು ನಿರ್ಮಿಸಿದನು. ಇವನೂ ಇವನ ಜೊತೆಯವರೂ ಕ್ರೈಸ್ತಮತದ ಪ್ರಚಾರಕ್ಕಾಗಿ ಬೈಬಲ್ ಗ್ರಂಥವನ್ನು ಭಾಷಾಂತರ ಮಾಡಿದರು. ಕಲ್ಕತ್ತಾ ನಗರವು ವೈಸ್‌ರಾಯರ ನಿವಾಸಸ್ಥಾನವಾಗಿದ್ದದರಿಂದ ಭಾರತವರ್ಷದ ಉಳಿದ ಎಲ್ಲ ನಗರಗಳಿ ಗಿಂತಲೂ ಪ್ರಬಲವಾಗಿತ್ತು; ಹೊಸ ನಾಗರಿಕತೆಯ ಏರ್ಪಾಡುಗಳಲ್ಲೆಲ್ಲ ಬಂಗಾಳವು ಮುಂದಾಗಿರುವುದು ವಾಡಿಕೆಯಾಯಿತು.

### ೫. ರಾಜಾ ರಾಮಮೋಹನ ರಾಯ

ಬಂಗಾಳದಲ್ಲಿ ಇಂಗ್ಲೀಷನ್ನು ನೆಡುವ ಕಾಲಕ್ಕೆ ಸರಿಯಾಗಿ ಅಲ್ಲಿ ಒಬ್ಬ ಮಹಾಪುರುಷನು ಉದಯಿಸಿದನು. ಇವನಿಂದ ಭಾಷೆಯೂ ಮುಂದುವರಿಯಿತು. ಇವನು ರಾಜಾ ರಾಮಮೋಹನರಾಯ. ಈತನು ೧೭೭೪ರಲ್ಲಿ ಜನಿಸಿದನು. ಬ್ರಾಹ್ಮಣ ಕುಲದಲ್ಲಿ ಜನಿಸಿ ಬ್ರಾಹ್ಮಣ ಸಂಪ್ರ

ದಾಯದಲ್ಲಿ ಬೆಳೆದ ಈತನಿಗೆ ಬಹು ಚಿಕ್ಕ ವಯಸ್ಸಿನಲ್ಲಿಯೇ ವಿಗ್ರಹಾರಾಧನದ ವಿಷಯದಲ್ಲಿ ಅಸಂತುಷ್ಟಿ ಹುಟ್ಟಿತು. ಈತನು ಸಂಸ್ಕೃತ ಪರ್ಷಿಯನ್ ಇಂಗ್ಲೀಷ್ ಈ ಮೂರು ಭಾಷೆಗಳನ್ನು ಬಲ್ಲನು. ವಿಗ್ರಹಾರಾಧನೆಯ ವಿಷಯದಲ್ಲಿ ಇವನು ಬೇಸರಪಟ್ಟದ್ದು ಕ್ರೈಸ್ತ ಪಾದ್ರಿಗಳ ಪ್ರಭಾವದಿಂದಲ್ಲ. ಹಾಗೆ ನೋಡಿದರೆ ಮುಹಮ್ಮದೀಯ ಭಾವನೆಗಳಿಂದ ತುಂಬಿದ್ದ ಬಂಗಾಳದಲ್ಲಿ ಈ ಜುಗುಪ್ಸೆಗೆ ಹೊರಗಣ ಕಾರಣ ಆವಶ್ಯಕವಿರಲಿಲ್ಲ. ಇವನ ಜೀವನ ಚರಿತೆಯನ್ನು ಓದಿದರೆ ಇವನ ಬೇಸರಕ್ಕೆ ಕಾರಣ ಇದೂ ಕೂಡ ಅಲ್ಲವೆಂದು ಕಾಣುತ್ತದೆ. ವಿಗ್ರಹಾರಾಧನ ಹಿಂದೂಮತವು ಒಂದು ಮಟ್ಟದ ತಿಳಿವಿಗಾಗಿ ಏರ್ಪಡಿಸಿರುವ ಪೂಜಾಕ್ರಮ. ಇದು ಬಂಗಾಳದಲ್ಲಿ ಅವಿವೇಕದ ಮೇರೆಯನ್ನು ಮುಟ್ಟಿದ್ದಂತೆ ಕಾಣುತ್ತದೆ. ಈ ಸ್ಥಿತಿಯಲ್ಲಿ ವಿಗ್ರಹಗಳು ಸಾಧನೆಗೆ ಸಹಾಯವಾದ ವಸ್ತುಗಳಾಗದೆ ಮಕ್ಕಳಾಟದ ಗೊಂಬೆಗಳಾಗುತ್ತವೆ. ರಾಮಮೋಹನ ರಾಯನು ತನ್ನ ಅಭಿಪ್ರಾಯಕ್ಕಾಗಿ ಬಹಳ ಕಷ್ಟಕ್ಕೆ ಗುರಿಯಾದನು; ಆದರೂ ಲಕ್ಷ್ಯಮಾಡದೆ ತನಗೆ ಸರಿಯೆಂದು ತೋರಿದ ದಾರಿಯಲ್ಲಿ ನಡೆದನು. ಇವನು ಎಷ್ಟು ವಿಸ್ತಾರವಾದ ಕಾರ್ಯಕ್ಷೇತ್ರದಲ್ಲಿ ದುಡಿದನೆನ್ನುವುದನ್ನು ಇಷ್ಟರಿಂದ ತಿಳಿಯಬಹುದು: ಈತನು ಡೆಲ್ಲಿಯ ರಾಜನ ಪರವಾಗಿ ವಾದಿಸುವುದಕ್ಕೆ ಇಂಗ್ಲೆಂಡಿಗೆ ಹೋದನು; ಇಟಲೀದೇಶ ಸ್ವಾತಂತ್ರ್ಯವನ್ನು ಸ್ಥಾಪಿಸಿದಾಗ ಆನಂದಿಸಿ ಅಲ್ಲಿಯ ಜನರಿಗೆ ಪತ್ರ ಬರೆದನು; ಇಂಡಿಯಾ ದೇಶದಲ್ಲಿ ಆಂಗ್ಲೇಯ ಪ್ಲಾಂಟರುಗಳು ಮಾಡುತ್ತಿದ್ದ ಹಾವಳಿಯನ್ನು ಹೊರಗೆಡಹಿದನು; ಈಗ ಬಳಕೆಯಲ್ಲಿರುವ ಪತ್ರಗಳ ರಿಜಿಸ್ಟ್ರೇಷನ್ ಕಾನೂನನ್ನು ತರುವುದಕ್ಕೆ ಹದಿ ಹಾಕಿದನು; ತರುಣ ಆಂಗ್ಲೇಯರು ಸಿವಿಲ್ ಸರ್ವಿಸಿನಲ್ಲಿ ಬಂದು ನಿಂತು ಅಹಂಕಾರದಿಂದ ವರ್ತಿಸುವುದರಿಂದ ದೇಶಕ್ಕೆ ಎಷ್ಟು ಕೆಡಕಾಗುತ್ತದೆಂದು ಪ್ರಕಟಮಾಡಿದನು; ಇಂಡಿಯಾ ದೇಶದಲ್ಲಿ ಆಡಳಿತದ ಪುನರ್ವ್ಯವಸ್ಥೆಯ ವಿಚಾರವಾಗಿ ಇಂಗ್ಲೆಂಡಿನ ಪಾರ್ಲಿಮೆಂಟಿನ ಮುಂದೆ ಅಭಿಪ್ರಾಯವನ್ನು ವರದಿ ಮಾಡಿದನು; ನಮ್ಮ ದೇಶದಲ್ಲಿ ಇದ್ದ ಸಹಗಮನದ ವಾಡಿಕೆಯನ್ನು ಕಾನೂನಿನಿಂದ ನಿಲ್ಲಿಸುವುದಕ್ಕೆ ಏರ್ಪಾಡು ಮಾಡಿದನು; ಕ್ರೈಸ್ತ ಮತವನ್ನೂ ಸನಾತನ ಧರ್ಮವನ್ನೂ ತಿಳಿದ ಬುದ್ಧಿಯಿಂದ ಎರಡು ಮತ

ಗಳನ್ನೂ ತಿದ್ದಿ ಹೊಸ ಧರ್ಮವೊಂದನ್ನು ಏರ್ಪಡಿಸಿ ಅದಕ್ಕೆ ಬಲ್ಲವರ ಸಮ್ಮತಿಯನ್ನು ಸಂಪಾದಿಸುವ ಯತ್ನವನ್ನು ಮಾಡಿದನು. ಇವನನ್ನು ಅನುಸರಿಸಿ ಕ್ರೈಸ್ತರಲ್ಲಿ ಯೂನಿಟೇರಿಯನ್ ಎಂಬ ಒಂದು ಪಂಗಡ ಏರ್ಪಾಡಾಯಿತು. ಈತನು ಬ್ರಾಹ್ಮ ಸಮಾಜವನ್ನು ಸ್ಥಾಪಿಸಿದನು; ಜಾತಿ ಭೇದದಿಂದ ಉಂಟಾಗಿದ್ದ ಕಷ್ಟಗಳನ್ನು ಕಡಮೆ ಮಾಡಲು ನೋಡಿದನು. ಅನ್ಯಾಯವಾಗಿ ಪರಿಣಮಿಸಿದ್ದ ಸಹಗಮನ ಪದ್ಧತಿ ಈತನ ಪ್ರಯತ್ನದಿಂದ ನಿರ್ಮೂಲವಾಯಿತು. ಒಟ್ಟಿನಲ್ಲಿ ನೋಡಿದರೆ ಈತನ ಪ್ರತಿಭೆಗೆ ಒಳಗಾಗದ ವಿಷಯವಿರಲಿಲ್ಲ; ಈತನ ಧೈರ್ಯಕ್ಕೆ ಹಿಮ್ಮೆಟ್ಟದ ಕಷ್ಟವಿರಲಿಲ್ಲ; ಇವನ ಪ್ರೇಮದಲ್ಲಿ ಅಡಗದ ಮಾನವ ಪಂಗಡವಿರಲಿಲ್ಲ. ಇಂಥ ವಿಶಾಲಮತಿಯ ಕೈಯಿಂದ ಬಂಗಾಳದ ಹೊಸ ಸಾಹಿತ್ಯದ ಆರಂಭಕಾರ್ಯ ನಡೆಯಿತು. ಜನರಲ್ಲಿ ತಿಳಿವನ್ನು ಹರಡುವುದಕ್ಕಾಗಿ ಈತನು ಬಂಗಾಳಿಯಲ್ಲಿ ಹಲವು ಲೇಖನಗಳನ್ನು ಬರೆದನು. ರಾಮಮೋಹನ ರಾಯನು ೧೮೩೩ರಲ್ಲಿ ತೀರಿ ಹೋದನು. ಬಂಗಾಳಿ ಸಾಹಿತ್ಯವನ್ನು ಬಲ್ಲವರು ರಾಜಾ ರಾಮಮೋಹನ ರಾಯನ ಗದ್ಯದ ಶೈಲಿಯನ್ನು ಬಹಳವಾಗಿ ಹೊಗಳುತ್ತಾರೆ. ಮುಖ್ಯ ವಾಗಿ ಇಂಥ ದೊಡ್ಡ ವ್ಯಕ್ತಿಯ ಬರವಣಿಗೆ ಹೇಗಿದ್ದರೂ ದೊಡ್ಡದೇ. ಈ ಮಹನೀಯನಿಂದ ಆರಂಭವಾದದ್ದು ಆಧುನಿಕ ವಂಗ ಸಾಹಿತ್ಯದ ಅತಿಶಯವಾದ ಪುಣ್ಯ.

### ೬. ಹೊಸ ಸಾಹಿತ್ಯ

ರಾಮಮೋಹನ ರಾಯನಿಂದ ಆರಂಭವಾದ ಸುಧಾರಣ ಕಾರ್ಯ ಆಮೇಲೆ ಬಹು ಬೇಗ ಹರಡಿತು. ಆತನ ಬ್ರಾಹ್ಮ ಸಮಾಜವನ್ನು ದೇವೇಂದ್ರನಾಥ ಠಾಕೂರರು ಬೆಳೆಯಿಸಿದರು; ಇತರ ಕಾರ್ಯಗಳು ಡೆರೋಸಿಯೋ ಎಂಬ ಕವಿಯಿಂದಲೂ, ಅವನ ಶಿಷ್ಯರಿಂದಲೂ, ಅಲೆಕ್ಸಾಂಡರ್ ಡಫ್ ಮೊದಲಾದ ಕ್ರೈಸ್ತ ಮಿಷನರಿಗಳ ಪ್ರಭಾವಕ್ಕೆ ಸಿಕ್ಕಿದ ತರುಣ ಮೇಧಾವಿಗಳಿಂದಲೂ ಬೆಳೆದುವು. ತಾರುಣ್ಯದ ಫಲವಾಗಿ ಈ ಕೆಲಸ ಅಲ್ಲಲ್ಲಿ ಸ್ವಲ್ಪ ಅತಿಯಾಯಿತು. ಹಲವರು ತರುಣರು ಕ್ರೈಸ್ತ ಮತವನ್ನು ಅವಲಂಬಿಸಿದರು. ಅದನ್ನು ಅವಲಂಬಿಸಿದ ಹಲವರು

ಸನಾತನ ಧರ್ಮವನ್ನು ಅದರ ಪ್ರಕೃತ ಸ್ಥಿತಿಯುಷ್ಟರಿಂದ ಹಳಿಯುವುದು ದೊಡ್ಡದೆಂದು ತಿಳಿದರು. ಆದರೆ ಇಂಥವು ಎಲ್ಲಾ ಕೊಂಚಕಾಲದ ಕೇಡುಗಳು. ಇವನ್ನು ಮೀರಿದ ಒಂದು ಭಾವನಾ ಸ್ವಾತಂತ್ರ್ಯ ಇವುಗಳ ಮೂಲಕ ಜನರಲ್ಲಿ ಬೆಳೆಯಿತು. ಇದರ ರಭಸದಿಂದ ಹಿಂದಿರುಗಿದಾಗ ಜನದ ಮನಸ್ಸು ಪೂರ್ವದ ಆಚಾರ, ಪೂರ್ವದ ಧರ್ಮಗಳ, ಒಳ್ಳೆಯ ಭಾಗವನ್ನು ಮೆಚ್ಚುವುದನ್ನು ಕಲಿಯಿತು. ದೇವೇಂದ್ರನಾಥ ಠಾಕೂರರು ಹಿಂದೂಮತದ ರಕ್ಷಣೆಗಾಗಿ ಮಾಡಿದ ಏರ್ಪಾಡು ಇದನ್ನು ತೋರಿಸುತ್ತದೆ. ಈಚೆಗೆ ಬಂಗಾಳದ ಸುಧಾರಕ ತಾರುಣ್ಯವು ಸನಾತನ ಧರ್ಮವನ್ನು ಬಿಡದೆ ಅದರಲ್ಲಿಯೇ ಇದ್ದುಕೊಂಡು ಅದರ ಆಚಾರವನ್ನು ತಿದ್ದುವುದಕ್ಕೆ ಯತ್ನಮಾಡುತ್ತಿರುವುದು ಕೂಡ ಇದಕ್ಕೆ ಸಾಕ್ಷಿ. ಆರಂಭದ ಉತ್ಸಾಹದಲ್ಲಿ ಸುಧಾರಕ ಕವಿವರ್ಗದಲ್ಲಿ ಪ್ರಮುಖನಾದವನು ಮೈಕಲ್ ಮಧುಸೂದನ ದತ್ತ. ಈತನು ಮೇಘನಾದವಧ ಎಂಬ ಒಂದು ಮಹಾಕಾವ್ಯವನ್ನು ಬರೆದನು. ರಾವಣನ ಮಗನಾದ ಮೇಘನಾದನು ಈ ಕಾವ್ಯದ ನಾಯಕನು. ದತ್ತನು ಚಿಕ್ಕಂದೇ ಕ್ರೈಸ್ತನಾದನು. "ರಾಮನೂ ಅವನ ಸೈನ್ಯವೂ ನನಗಾಗುವುದಿಲ್ಲ. ರಾವಣ ಭರ್ಜರಿ ಆಸಾಮಿ" ಎಂದು ಇವನು ಹೇಳುತ್ತಿದ್ದನಂತೆ. ಇದು ಅಷ್ಟು ಯೋಚನೆಯ ಮಾತಾಗಿ ಕಾಣುವುದಿಲ್ಲ. ಆದರೂ ಆಗಣ ಸ್ವಾತಂತ್ರ್ಯ ಪ್ರವೃತ್ತಿಗೆ ಅದು ಒಂದು ಲಕ್ಷಣವೆಂದು ಹೇಳಬಹುದು. ಮೇಘನಾದ ವಧವು ಹೊಸ ತರದ ಬಿಡಿವೃತ್ತದಲ್ಲಿ ರಚಿತವಾಗಿದೆಯೆನ್ನುವರು. ಭಾಷೆ ಅಷ್ಟೇನೂ ಚೆನ್ನಾಗಿಲ್ಲವೆಂದು ಕೆಲವರ ಅಭಿಪ್ರಾಯ; ಬಹಳ ಚೆನ್ನಾಗಿದೆ ಎಂದು ಇನ್ನು ಕೆಲವರದು. ಹೇಗಾದರೂ ಈತನು ಬಂಗಾಳದ ಆಧುನಿಕ ಸಾಹಿತ್ಯದಲ್ಲಿ ಪ್ರಸಿದ್ಧನು, ಪ್ರಮುಖನು. ಸಾಹಿತ್ಯ ವಾಹಿನಿಗೆ ಇವನು ಹೊಸ ಕಾಲುವೆಗಳನ್ನು ಮಾಡಿದನು.

### ೭. ಈಶ್ವರಚಂದ್ರ ವಿದ್ಯಾಸಾಗರ

ವಂಗ ಸಾಹಿತ್ಯದ ಬೆಳವಣಿಗೆಯಲ್ಲಿ ಇನ್ನೊಂದು ಮುಖ್ಯವಾದ ಹೆಸರು ಈಶ್ವರಚಂದ್ರ ವಿದ್ಯಾಸಾಗರನದು. ಈತನು ರಾಮಮೋಹನ ರಾಯನಂತೆಯೇ ಪೂರ್ವಾಚಾರದ ಬ್ರಾಹ್ಮಣ ಕುಲದಲ್ಲಿ ಜನಿಸಿದವನು;

ಸಂಸ್ಕೃತವನ್ನೂ ಇಂಗ್ಲೀಷನ್ನೂ ಕಲಿತು ಸರ್ಕಾರದ ವಿದ್ಯಾಭ್ಯಾಸದ ಇಲಾಖೆಯಲ್ಲಿ ಒಂದು ಮುಖ್ಯವಾದ ಸ್ಥಾನವನ್ನು ಸಂಪಾದಿಸಿದ್ದನು. ಈತನಲ್ಲಿ ಪಾಂಡಿತ್ಯದ ಪ್ರಭಾವಕ್ಕೆ ಸಮನಾಗಿ ಹಿರಿಯ ನಡತೆ ಇತ್ತು. ಸಂಪ್ರದಾಯದ ಪಂಗಡವನ್ನು ಬಿಟ್ಟು ಬೇರೆಯ ಪಂಗಡವನ್ನು ಸೇರದೆ ಇದ್ದರೂ ಈತನು ಸಮಾಜ ಸುಧಾರಣೆಯಲ್ಲಿ ಧೈರ್ಯವನ್ನೂ ದಕ್ಷತೆಯನ್ನೂ ತೋರಿದನು. ಹಿಂದೂ ಸಮಾಜದಲ್ಲಿ ವಿಧವಾವಿವಾಹ ವಾಡಿಕೆಗೆ ಬರುವುದಕ್ಕೆ ಈತನು ಮುಖ್ಯ ಕಾರಣ. ಎಷ್ಟು ಉನ್ನತ ಪದವಿಗೆ ಹೋದರೂ ಈತನು ನಡುವಿಗೆ ಸುತ್ತಿದ ಒಂದು ಪಂಚೆ, ಮೈಮೇಲೆ ಒಂದು ಹೊದಿಕೆ, ಈ ರೀತಿಯ ದೇಶೀಯ ವಸ್ತ್ರವನ್ನು ಬಿಡಲಿಲ್ಲ. ಒಂದು ಸಲ ಗವರ್ನರ ಸಮಿಾಪಕ್ಕೆ ಹೋದಾಗ ಐರೋಪ್ಯ ರೀತಿಯ ವಸ್ತ್ರಗಳನ್ನು ಹಾಕಿಕೊಂಡು ಬರಬೇಕೆಂದು ಅವರ ಇಷ್ಟವೆಂದು ಕೇಳಿ ಅವರಿಗಾಗಿ ಆ ರೀತಿಯ ಬಟ್ಟೆಗಳನ್ನು ಹಾಕಿಕೊಂಡು ಹೋದನು ; ಸ್ವಲ್ಪ ಹೊತ್ತಿನಲ್ಲೇ ಬೇಸರವಾಗಿ ಹಿಂದಕ್ಕೆ ಬಂದುಬಿಟ್ಟನು. ಗವರ್ನರು ವಸ್ತ್ರದ ಸಲುವಾಗಿ ಈತನನ್ನು ಬಿಡುವಂತಿರಲಿಲ್ಲ ; ಆದದರಿಂದ ಇಷ್ಟಬಂದ ವಸ್ತ್ರದಲ್ಲಿ ಬರಬಹುದೆಂದು ಅಪ್ಪಣೆಮಾಡಿದನು. ಇದು ಮಹಾತ್ಮಾ ಗಾಂಧಿಯವರು ಮೊಣಕಾಲಿನಮೇಲೆ ಪಂಚೆ ಮೈಮೇಲೆ ಒಂದು ಶಾಲು ಇಷ್ಟರಲ್ಲಿ ಚಕ್ರವರ್ತಿಗಳನ್ನು ನೋಡಿದ ಸನ್ನಿವೇಶದ ಪೂರ್ವಾವತಾರವೆನ್ನಬಹುದು. ಒಂದು ಸಲ ಈತನು ತನ್ನ ಜೊತೆಯ ಅಥವಾ ತನಗೆ ಸ್ವಲ್ಪ ಹೆಚ್ಚಿನ ಅಧಿಕಾರಿಯಾಗಿದ್ದ ಒಬ್ಬ ಯೂರೋಪ್ಯ ತರುಣನ ಬಳಿಗೆ ಹೋದಾಗ ಆತನು ಕುರ್ಚಿಯ ಮೇಲೆ ಕುಳಿತು ಮೇಜಿನ ಮೇಲೆ ಕಾಲನ್ನು ಇಟ್ಟು ಈತನಿಗೆ ಕುಳಿತುಕೊ ಎಂದು ಹೇಳದೆ ಮಾತನಾಡಿಸಿದನಂತೆ. ಇನ್ನೊಂದು ಸಲ ಅವನು ಹೇಳಿಕಳುಹಿಸಿದಾಗ ವಿದ್ಯಾಸಾಗರನು ಹೋಗಲಿಲ್ಲ. ಅವನೇ ಈತನ ಬಳಿಗೆ ಬಂದನು. ಆಗ ಈಶ್ವರಚಂದ್ರನು ತಾನು ಮೇಜಿನಮೇಲೆ ಕಾಲನ್ನು ಇಟ್ಟುಕೊಂಡು ಅವನಿಗೆ ಒಂದು ಕುರ್ಚಿ ಇಲ್ಲದಹಾಗೆ ನಿಲ್ಲಿಸಿ ಮಾತನಾಡಿಸಿದನು. ಇದು ಜಗಳವಾಗಿ ಮೇಲಕ್ಕೆ ದೂರುಹೋಯಿತು. ಏಕೆ ಹೀಗೆ ಮಾಡುವೆ ಎಂದದ್ದಕ್ಕೆ ವಿದ್ಯಾಸಾಗರನು " ಇದುವರೆಗೆ ನನಗೆ ಸಿಕ್ಕಿದ್ದ ಯೂರೋಪ್ಯರು ನಡೆದ ರೀತಿ ನನಗೆ ಅರ್ಥವಾಗಿತ್ತು. ಹೊಸ

ದಾಗಿ ಯೂರೋಪಿನಿಂದ ಬಂದ ಈತನು ನನಗೆ ತೋರಿಸಿದ ನಡತೆಯಿಂದ ಯೂರೋಪಿನ ಹೊಸ ವಿನಯ ಹೀಗೆ ಇರಬಹುದೆಂದು ನಾನು ಆತನಿಗೆ ಅದೇ ಮರ್ಯಾದೆಯನ್ನು ತೋರಿಸಿದೆನು" ಎಂದನು. ಈಶ್ವರಚಂದ್ರ ವಿದ್ಯಾಸಾಗರನು ಮಕ್ಕಳ ಮೊದಲ ಪಾಠದ ಪುಸ್ತಕದಿಂದ ಆರಂಭಿಸಿ ಮೇಲಣ ತರಗತಿಯ ಪುಸ್ತಕಗಳವರೆಗೆ ಗ್ರಂಥಗಳನ್ನು ಬರೆದನು. ಸೀತಾ ವನವಾಸವೆಂಬ ಈತನ ಗ್ರಂಥವನ್ನು ಶ್ರೀ ಬಿಂಡಿಗನವಲೆ ವೆಂಕಟಾ ಚಾರ್ಯರು ಕನ್ನಡಕ್ಕೆ ಭಾಷಾಂತರ ಮಾಡಿದರು. ವಂಗಭಾಷೆಯ ಪ್ರಚಾರ ಬೆಳವಣಿಗೆಗಾಗಿ ವಿದ್ಯಾಸಾಗರನು ಮಾಡಿದ ಕೆಲಸ ಅಮೋಘ ವಾದದ್ದು.

## ೮. ಬಂಕಿಂಚಂದ್ರ ಛಟರ್ಜಿ

ಆಧುನಿಕ ವಂಗ ಸಾಹಿತ್ಯದ ಆದ್ಯ ಸೇವಕರಲ್ಲಿ ಇನ್ನೊಂದು ಇಂಥ ದೊಡ್ಡ ಹೆಸರು ಬಂಕಿಂಚಂದ್ರ ಛಟರ್ಜಿಯವರದು. ಇವರ ಹೆಸರನ್ನು ಕೇಳದ ಕನ್ನಡಿಗರಿಲ್ಲವೆನ್ನಬಹುದು. ವೆಂಕಟಾಚಾರ್ಯರು ವಂಗ ಭಾಷೆ ಯಿಂದ ಕನ್ನಡಕ್ಕೆ ಭಾಷಾಂತರಿಸಿದ ಅತ್ಯುತ್ತಮ ಗ್ರಂಥಗಳೆಲ್ಲ ಬಂಕಿಂ ಚಂದ್ರರವು. ಈತನೂ ಬ್ರಾಹ್ಮಣ ಸಮಾಜದಲ್ಲಿ ಹುಟ್ಟಿ ಇಂಗ್ಲೀಷು ವಿದ್ಯೆಯನ್ನು ಕಲಿತು ಸರಕಾರದ ಅಧಿಕಾರದಲ್ಲಿದ್ದನು; ಸಾಮಾಜಿಕ ಐತಿಹಾಸಿಕ ಕಾದಂಬರಿಗಳು ಅನೇಕವನ್ನು ಬರೆದನು; ಭಾಷೆಯ ಸಾಹಿತ್ಯ ವನ್ನು ಬೆಳೆಸಿದ್ದಲ್ಲದೆ ಅದಕ್ಕೆ ಓದುವ ಜನರನ್ನು ಉಂಟುಮಾಡಿದನು. ವಂಗದರ್ಶನ ಎಂಬ ಪತ್ರಿಕೆಯಲ್ಲಿ ಈತನ ಕಥೆಗಳು ಪ್ರಕಟವಾಗುತ್ತಿದ್ದಾಗ ಜನರು ಎಷ್ಟು ಆತುರದಿಂದ ಅವನ್ನು ಓದುತ್ತಿದ್ದರೆನ್ನುವುದು ರವೀಂದ್ರ ನಾಥರ ಜೀವನ ಸ್ಮೃತಿಯಲ್ಲಿ ವರ್ಣಿತವಾಗಿದೆ. ಕೊನೆಗೆ ಸಮಾಜ ಸುಧಾರಣೆ ಅತಿಯಾಯಿತೆಂದು ಅದನ್ನು ತಡೆದು ಸನಾತನ ಧರ್ಮವನ್ನೇ ಪರಿಶುದ್ಧಿಗೊಳಿಸುವ ಒಂದು ಪ್ರಯತ್ನದಲ್ಲಿ ಬಂಕಿಂಚಂದ್ರನು ಸಹಾಯಕ ನಾದನು. ಈ ಉದ್ದೇಶದಿಂದ ಶ್ರೀಕೃಷ್ಣನ ಚರಿತ್ರೆಯನ್ನು ತಿದ್ದಿ ಬರೆದು ಕೃಷ್ಣ ಚರಿತ ಎಂಬ ಗ್ರಂಥವನ್ನು ಪ್ರಕಟಿಸಿದನು. ಇವನ ಕಥೆಗಳಲ್ಲಿ ಉಪ ನ್ಯಾಸಗಳಲ್ಲಿ ವಿಮರ್ಶೆಗಳಲ್ಲಿ ಆಧುನಿಕ ವಂಗ ಸಾಹಿತ್ಯವು ಪ್ರಪಂಚದ ಬೇರೆ

ಸಾಹಿತ್ಯಗಳ ಮೇಲಣ ಮಟ್ಟವನ್ನು ಮುಟ್ಟಿತು. ಈತನ ಗ್ರಂಥಗಳನೇಕ ಬೇರೆ ಬೇರೆ ಭಾಷೆಗಳಿಗೆ ಪರಿವರ್ತಿಸಲ್ಪಟ್ಟಿವೆ.

## ೯. ಇತರ ಲೇಖಕರು

ರವೀಂದ್ರನಾಥ ಠಾಕೂರರ ಎಳೆಯತನದಲ್ಲಿ ಕಾವ್ಯಗಳನ್ನು ಬರೆಯುತ್ತಿದ್ದವರಲ್ಲಿ ನವೀನಚಂದ್ರಸೇನ, ಹೇಮಚಂದ್ರ ಬಾನರ್ಜಿ, ಮೊದಲಾಗಿ ಇನ್ನು ಕೆಲವು ಹೆಸರುಗಳು ಅವರ ಜೀವನ ಸ್ಮೃತಿಯಲ್ಲಿ ಬರುತ್ತವೆ. ನವೀನ ಚಂದ್ರಸೇನನು ಪರಿಷ್ಕೃತ ಸನಾತನ ಧರ್ಮದ ಪ್ರವರ್ತಕರಲ್ಲಿ ಒಬ್ಬನು. ಶ್ರೀಕೃಷ್ಣನ ಪ್ರಭಾವವನ್ನು ಚಿತ್ರಿಸುವ ಉದ್ದೇಶದಿಂದ ಈತನು ರೈವತಕ ಎಂಬ ಒಂದು ಮಹಾಕಾವ್ಯವನ್ನು ಬರೆದನು. ದಸ್ಯುಗಳು ರಾಕ್ಷಸರು ಪಿಶಾಚರು ಮುಂತಾದ ಹತ್ತಾರು ತೆರದ ಆದಿಕಾಲದ ವನ್ಯಜನರು ತುಂಬಿದ್ದ ಭಾರತವರ್ಷದಲ್ಲಿ, ನೂರು ರೀತಿಯ ಪೂಜೆಗಳು ಯಜ್ಞಗಳು ಕ್ರೂರಕರ್ಮಗಳು ಮುಖ್ಯವಾಗಿದ್ದ ಹತ್ತು ಮತಗಳ ಮಧ್ಯದಲ್ಲಿ, ಎಲ್ಲವನ್ನೂ ತಿದ್ದಿ ಸಮನ್ವಯಮಾಡಿ ಲೋಕವನ್ನು ಒಳ್ಳೆಯ ದಾರಿಗೆ ತರುವ ಉದ್ದೇಶದಿಂದ ಕೃಷ್ಣನು ಅವತರಿಸಿದಂತೆ ಇದರ ಕಥೆ ಎಂದು ಡಾಕ್ಟರ್ ಶೀಲರವರು ಹೇಳಿದಾರೆ. ಹೇಮಚಂದ್ರ ಬಾನರ್ಜಿ ದೇಶವಾತ್ಸಲ್ಯದ ಸಾಹಿತ್ಯವನ್ನು ಬೆಳೆಸಿದನು. ಬಿಹಾರಿಲಾಲ್ ಚಕ್ರವರ್ತಿ ಮತ್ತು ಅಕ್ಷಯಕುಮಾರ ದತ್ತ ಇವರ ಹೆಸರುಗಳು ಈ ಸಂದರ್ಭದಲ್ಲಿ ಗಣಿಸಬೇಕಾದುವು.

ರವೀಂದ್ರನಾಥರು ಬರೆಯುವ ಮೊದಲು ವಂಗದೇಶದ ಜೀವನವೂ ವಂಗ ಭಾಷೆಯೂ ಯಾವ ಮಟ್ಟವನ್ನು ಮುಟ್ಟಿದ್ದುವೆಂದು ಇಷ್ಟರಿಂದ ಸ್ವಲ್ಪಮಟ್ಟಿಗೆ ತಿಳಿಯಬಹುದು. ಇದರಿಂದ ಎಂಥ ಸಾಮಾನ್ಯ ಮನೆತನದವನಾದರೂ ಕಾವ್ಯ ಚೈತನ್ಯವಿದ್ದವನಾದರೆ ಎಚ್ಚರಗೊಳ್ಳುತ್ತಿದ್ದನು; ಉತ್ತಮವಾದ ಕೆಲಸಕ್ಕೆ ಬೆಳೆಯುತ್ತಿದ್ದನು. ಇಂಥದರಲ್ಲಿ ರವೀಂದ್ರನಾಥರು ಈ ಎಲ್ಲ ಎಚ್ಚರಿಕೆಯ ತೌರೆಂದು ಹೇಳಬಹುದಾದ ಮನೆತನದಲ್ಲಿ ಜನಿಸಿದರು. ಇವರ ತಂದೆ ದೇವೇಂದ್ರನಾಥರು ರಾಮಮೋಹನ ರಾಯನು ಆರಂಭಿಸಿದ ಪರಿಷ್ಕೃತ ಧರ್ಮದ ಪ್ರವರ್ತಕರಾಗಿ ನಿಂತು ಪ್ರಸಿದ್ಧರಾದರು. ಇವರ ಜೀವನವೇ ವಿಚಿತ್ರವಾಗಿ ಯಶಸ್ವಿಯಾಗಿ ಬೆಳೆಯಿತು. ಇವರ ಕಾರ್ಯ

ಕಲಾಪಗಳು ಸ್ಫೂರ್ತಿದಾಯಕವಾದುವು. ಇವರ ಒಟ್ಟು ಜೀವನವನ್ನು ನೋಡಿ ಬ್ರಾಹ್ಮಸಮಾಜದಲ್ಲಿ ಮುಖಂಡರು ಇವರಿಗೆ ಮಹರ್ಷಿ ಎಂದು ಹೆಸರಿಟ್ಟರು. ರವೀಂದ್ರನಾಥರ ಬಾಲ್ಯದ ಆವರಣ ಹೇಗಿತ್ತೆಂದು ತಿಳಿಯುವುದಕ್ಕೆ ಈ ಜೀವನದ ವಿಚಾರವನ್ನು ಸ್ವಲ್ಪ ವಿವರವಾಗಿ ವರ್ಣಿಸುವುದು ಆವಶ್ಯಕ.

### ೧೦. ದೇವೇಂದ್ರನಾಥ ಠಾಕೂರ್

ದೇವೇಂದ್ರನಾಥ ಠಾಕೂರರು ಕ್ರೀಸ್ತಶಕ ೧೮೧೭ ನೆಯ ಇಸವಿಯಲ್ಲಿ ಹುಟ್ಟಿದರು. ಇವರ ತಂದೆ ದ್ವಾರಕಾನಾಥ ಠಾಕೂರರು ಪುಣ್ಯವಂತರು; ಬಿಳಿಯ ಜನದೊಂದಿಗೆ ಬಳಕೆಯಲ್ಲಿರುತ್ತ ಇಂಗ್ಲೆಂಡಿಗೂ ಹೋಗಿದ್ದರು; ಅಲ್ಲಿ ವಿಕ್ಟೋರಿಯಾ ಮಹಾರಾಣಿಯವರು ಇವರಿಗೆ ಸಂದರ್ಶನವನ್ನು ದಯಪಾಲಿಸಿದರು. ಈ ಐಶ್ವರ್ಯದ ಮಧ್ಯೆ ಬೆಳೆದ ದೇವೇಂದ್ರನಾಥರಿಗೆ ಅವರ ಹದಿನೆಂಟನೆಯ ವಯಸ್ಸಿನಲ್ಲಿ ಅವರ ಅಜ್ಜಿ ದ್ವಾರಕಾನಾಥರ ತಾಯಿ ತೀರಿಹೋದಾಗ ಒಂದು ವಿಚಿತ್ರವಾದ ಅನುಭವವಾಯಿತು. ಜೀವ ಹೋಗುವ ಮೊದಲು ಮುದುಕಿಯನ್ನು ಗಂಗೆಯ ತಡಿಗೆ ಕರೆದುಕೊಂಡು ಹೋದರು. ಆಕೆ ಸಾಯುವ ಹಿಂದಿನ ರಾತ್ರಿ ದೇವೇಂದ್ರನಾಥರು ನೀಂತೊಲಾ ಘಟ್ಟದ ಬಳಿ ಒಂದು ಚಾಪೆಯ ಮೇಲೆ ಕುಳಿತುಕೊಂಡಿದ್ದರು. ಅಂದು ಹುಣ್ಣಿಮೆ. ಚಂದ್ರನು ಉದಯಿಸಿದ್ದನು. ಶ್ಮಶಾನದ ಸಮೀಪದಲ್ಲಿ, ಮುದುಕಿಗೆ ಕೇಳುವ ಉದ್ದೇಶದಿಂದ, ಭಗವತ್ಕೀರ್ತನ ಮಾಡುತ್ತಿದ್ದರು. ಹರಿನಾಮ ಸಂಕೀರ್ತನ ಮಾಡುವ ವೇಳೆ ಉಸಿರು ಹೋಗುವ ಕಾಲ ಬಂದೀತೇ ಎಂಬುದು ಕೀರ್ತನೆಯ ನುಡಿ. ರಾತ್ರಿಯ ಗಾಳಿಯ ಮೇಲೆ ಕೀರ್ತನದ ಧ್ವನಿ ನಯವಾಗಿ ಬಂದು ಕಿವಿಗೆ ಬೀಳುತ್ತಿತ್ತು. ಆ ಕ್ಷಣದಲ್ಲಿ ಇದ್ದದಿದ್ದಹಾಗೆ ಪ್ರಪಂಚ ಅನಿತ್ಯವೆಂಬ ಭಾವನೆ ಇವರ ಮನಸ್ಸನ್ನು ಹೊಕ್ಕಿತು. "ನಾನು ಆ ಕ್ಷಣದಲ್ಲಿ ಬೇರೆಯ ಮನುಷ್ಯನಾದೆನು. ಐಶ್ವರ್ಯವೆಂದರೆ ಯಾವುದೋ ಒಂದು ಜುಗುಪ್ಸೆ ನನ್ನ ಮನಸ್ಸಿನಲ್ಲಿ ಉದ್ಭವಿಸಿತು. ನಾನು ಕುಳಿತಿದ್ದ ಜಂಬಿನ ಚಾಪೆ ನನಗೆ ತಕ್ಕ ಆಸನವೆಂದು ತೋರಿತು. ಜಮಖಾನೆಗಳು ರತ್ನಕಂಬಳಿಗಳು ಅಸಹ್ಯವಾಗಿ ಕಂಡುವು.

ನನ್ನ ಮನಸ್ಸಿನಲ್ಲಿ ಎಂದೂ ಕಾಣದ ಒಂದು ಆನಂದ ಎಚ್ಚರಗೊಂಡಿತು.'' ದೇವೇಂದ್ರನಾಥರು ಈ ಅನುಭವವನ್ನು ಹೇಳಿ ''ದೇವರಿಲ್ಲವೆನ್ನುವರು ಯಾರು? ನಾನು ಹುಡುಕದೆ ಇದ್ದ ಈ ಆನಂದವನ್ನು ನನಗೆ ಕೊಟ್ಟ ಇಷ್ಟರಿಂದಲೇ ದೇವರಿರುವುದನ್ನು ನಾವು ಊಹಿಸಬಹುದು'' ಎಂದು ಹೇಳಿದ್ದಾರೆ. ತೀರಿಹೋದ ಆ ಮುದುಕಿಯ ಜೀವಮಾನ ಕಾಲದಲ್ಲಿ ನೋಡಿದ್ದ ಆಕೆಯ ಆಚಾರ ವ್ಯವಹಾರದಿಂದಲೂ, ಆಕೆ ತೀರಿಹೋದ ಮೇಲೆ ಆ ದೇಹ ಕಾಣುತ್ತಿದ್ದ ರೀತಿಯಿಂದಲೂ, ಇವರ ಮನಸ್ಸಿನಲ್ಲಿ ಧರ್ಮದ ಪ್ರೇಮವು ಬೆಳೆಯಿತು. ಪ್ರಪಂಚದ ವಿಷಯದಲ್ಲಿ ಜುಗುಪ್ಸಿತರಾಗಿ ಆ ರಾತ್ರಿ ಬಂದ ಆನಂದ ಮರಳಿ ಬರದೆ ಇವರು ಕೆಲವು ಕಾಲ ಕಳೆದರು. ಈ ಯೋಚನೆಗಳಲ್ಲಿ ದೇವರು ರೂಪರಹಿತ ತತ್ವವೆಂದು ಇವರಿಗೆ ಸ್ಫುಟವಾಯಿತು. ಬಾಲ್ಯದಲ್ಲಿ ಇವರು ರಾಮಮೋಹನ ರಾಯರನ್ನು ನೋಡಿದ್ದರು. ಈ ಸಂದರ್ಭದಲ್ಲಿ ಇವರಿಗೆ ಆತನ ಜ್ಞಾಪಕ ಬಂದಿತು. ವಿಗ್ರಹಾರಾಧನೆ ಮಾಡಕೂಡದೆಂದು ಅವನು ಹೇಳಿದ್ದನ್ನು ಇವರ ಮನಸ್ಸು ಒಪ್ಪಿತು. ಒಂದು ದಿನ ಒಂದು ಸಂಸ್ಕೃತ ಪುಸ್ತಕದ ಹರುಕು ಕಾಗದ ಒಂದು ಇವರ ಬಳಿ ಬಂದಿತು. ಅದನ್ನು ತಿಳಿದವರಿಗೆ ತೋರಿಸಲು ಅದು ಈಶೋಪನಿಷತ್ತಿನ ಆರಂಭದ ಪತ್ರವಾಗಿತ್ತು. ''ಈಶಾವಾಸ್ಯಮಿದಂ ಸರ್ವಂ'' ಇತ್ಯಾದಿ. ಸಂಶಯದಲ್ಲಿದ್ದ ಇವರಿಗೆ ಇದು ಒಂದು ದೈವಾನುಗ್ರಹವೆಂದು ಕಂಡಿತು. ಉಪನಿಷನ್ಮಂತ್ರವನ್ನು ಪ್ರಚುರಪಡಿಸುವುದಕ್ಕೆ ಎಂದು ಇವರು ತಮ್ಮ ಇಷ್ಟರನ್ನು ಸೇರಿಸಿಕೊಂಡು ಒಂದು ಸಮಾಜವನ್ನು ಮಾಡಿಕೊಂಡರು. ತತ್ವರಂಜಿನೀ ಸಭಾ ಅಥವಾ ತತ್ವಬೋಧಿನೀ ಸಭಾ ಎಂದು ಇದಕ್ಕೆ ಹೆಸರಾಯಿತು. ಇಲ್ಲಿ ಉಪನ್ಯಾಸಗಳನ್ನು ಏರ್ಪಡಿಸಿ ದೇವೇಂದ್ರನಾಥರು ರಾಮಮೋಹನ ರಾಯನ ಕೆಲಸವನ್ನು ಮುಂದುವರಿಸಿದರು; ತತ್ವಬೋಧಿನೀ ಪತ್ರಿಕಾ ಎಂಬ ಒಂದು ಪತ್ರಿಕೆಯನ್ನು ಆರಂಭಿಸಿದರು; ಬ್ರಾಹ್ಮಸಮಾಜದಲ್ಲಿ ತಮಗೆ ಕಂಡ ಕುಂದುಕೊರತೆಗಳನ್ನು ತಿದ್ದಿ ಉಪನಿಷತ್ತುಗಳಿಂದ ವಾಕ್ಯಗಳನ್ನು ಆರಿಸಿ ಬ್ರಾಹ್ಮಧರ್ಮ ಎಂದು ತಮ್ಮ ನಂಬಿಕೆಗೆ ಒಂದು ರೂಪನ್ನು ಕೊಟ್ಟರು. ಅವರಿಗೆ ದೇವರು ಪ್ರತ್ಯಕ್ಷನಾದನೆಂದು ತೋರಿತು; ಅವನ ಆಜ್ಞೆ ಹೃದಯದಲ್ಲಿ ಕೇಳಿಸಿತು; ತಾನೂ ಭಗವಂತನ

ಅನುಚರನೆಂದು ಕಂಡಿತು; ತನ್ನ ಹೃದಯದಲ್ಲಿ ಕುಳಿತು ಭಗವಂತನು ತನ್ನನ್ನು ನಡೆಯಿಸುತ್ತಿರುವಂತೆ ಸ್ಪಷ್ಟವಾಗಿ ಅನುಭವವಾಯಿತು. "ಇಷ್ಟು ದೊರಕಿದ್ದಕ್ಕೆ ನಾನು ತೃಪ್ತನಾಗಿದ್ದೆನು. ಆದರೆ ಇಷ್ಟು ಮಾತ್ರ ಕೊಟ್ಟು ಅವನು ತೃಪ್ತನಾಗಲಿಲ್ಲ." ಇಷ್ಟರಲ್ಲಿ ಕ್ರೈಸ್ತ ಮಿಷನರಿಗಳು ಹಿಂದೂ ಮಹಿಳೆಯರನ್ನು ತಮ್ಮ ಮತಕ್ಕೆ ಕರೆದುಕೊಂಡು ಸಂಸಾರಗಳನ್ನು ಕೆಡಿಸುವುದು ಇವರಿಗೆ ತಿಳಿದು, ಹಿಂದೂ ಧರ್ಮಸಂರಕ್ಷಣೆಗಾಗಿ ಒಂದು ಸಭೆಯನ್ನು ಏರ್ಪಡಿಸುವುದಕ್ಕೆ ಇವರು ಸಹಾಯಕರಾದರು. ಈಮಧ್ಯೆ ಇವರ ತಂದೆ ಇಂಗ್ಲೆಂಡಿಗೆ ಹೋಗಿದ್ದವರು ಅಲ್ಲಿ ತೀರಿಹೋದರು. ಆಸ್ತಿ ಬೇಕಾದಷ್ಟಿದ್ದರೂ ಸಾಲ ತುಂಬ ಇತ್ತು. ಸಂಸಾರಕ್ಕೆಂದು ಬೇರೆಮಾಡಿ ಇಟ್ಟಿದ್ದ ಧನ ಸ್ವಲ್ಪ ಇತ್ತು. ಅದನ್ನು ಮಕ್ಕಳು ಉಳಿಸಿಕೊಂಡಿದ್ದರೆ ಸಾಲಗಾರರು ಅದನ್ನು ತೆಗೆದುಕೊಳ್ಳುವುದಕ್ಕೆ ದಾರಿ ಇರಲಿಲ್ಲ. ಆದರೂ ದೇವೇಂದ್ರನಾಥರು ತಮ್ಮ ಸೋದರರ ಸಮ್ಮತಿಯಿಂದ ಆ ಹಣವನ್ನು ಸಾಲಗಾರರ ಕೈಗೆ ಒಪ್ಪಿಸಿದರು. ಇವರ ಸತ್ಯಸಂಧತೆಯನ್ನು ನೋಡಿ ಜನ ಬೆರಗಾದರು. ಆಸ್ತಿಯ ಮೇಲ್ವಿಚಾರಣೆಗೆ ಆವಶ್ಯಕವಾದ ಏರ್ಪಾಡುಗಳನ್ನು ನಡೆಸಿ ಇವರು ಕೊನೆಗೆ ತಂದೆಯ ಸಾಲದಲ್ಲಿ ಮೂರು ಕಾಸನ್ನೂ ಬಿಡದೆ ತೀರಿಸಿದರು; ಅವರು ಕೊಡುತ್ತೇವೆಂದು ಹೇಳಿದ್ದ ಸಹಾಯ ಧನಗಳನ್ನು ಕೂಡ ಧರ್ಮಕಾರ್ಯಗಳಿಗೆ ಕೊಟ್ಟು ಅವರ ಮಾತನ್ನು ನಡೆಯಿಸಿದರು. ಇವರು ತಂದೆಯ ಶ್ರಾದ್ಧದ ವೇಳೆ ವಿಗ್ರಹಾರಾಧನೆಯ ಸೋಂಕು ಒಂದೂ ಇಲ್ಲದಂತೆ ಏರ್ಪಾಡುಮಾಡಿ ತಮ್ಮ ನಂಬಿಕೆಗೆ ಅನುಸಾರವಾಗಿ ನಡೆದರು. ಇದರಿಂದ ಇವರ ಮನೆ ಬಹಳ ನಿಷ್ಠುರಕ್ಕೆ ಸಿಕ್ಕಿತು. ನೆಂಟರು ಇವರನ್ನು ಬಿಟ್ಟರು. ಆದರೂ ದೇವೇಂದ್ರನಾಥರು ತಮ್ಮ ನಿಷ್ಠೆಯನ್ನು ಬಿಡಲಿಲ್ಲ. ಇದಾದಮೇಲೆ ಇವರು ಬರದ್ವಾನ, ಕಾಮರೂಪ, ಬರ್ಮ, ಅಲಹಾಬಾದ್, ವಾರಣಾಸಿ, ಅಮೃತಸರ, ಬೃಂದಾವನ ಮುಂತಾದ ಸ್ಥಳಗಳಲ್ಲೆಲ್ಲ ದೇಶಯಾತ್ರೆ ಮಾಡಿದರು; ಆಮೇಲೆ ಹಿಮಾಲಯಕ್ಕೆ ಹೋಗಿ ಕೆಲವು ಕಾಲ ತಪಸ್ಸುಮಾಡಿದರು, ಇಷ್ಟು ಕಾಲವೂ ನಿರಂತರವಾಗಿ ಧ್ಯಾನಮಾಡುತ್ತಾ ಇವರು ಭಗವತ್ಸಾನ್ನಿಧ್ಯವನ್ನು ಸ್ಥಿರಮಾಡಿಕೊಂಡರು. ಬರಿಯ ಉಪನಿಷತ್ತಿನಿಂದ ಮಾನವನ ಹೃದಯದ

ಆಕಾಂಕ್ಷೆಗಳು ತುಂಬವು; ಸತ್ಯಕ್ಕೆ ಮೂಲ ಯಾವ ಗ್ರಂಥವೂ ಅಲ್ಲ, ಶುದ್ಧವಾದ ಹೃದಯ ತನಗೆ ಸಹಜವಾದ ದೃಷ್ಟಿಯಿಂದ ಕಾಣುವುದು ಯಾವುದೋ ಅದು ಸತ್ಯ; ಇಂಥ ಹೃದಯಕ್ಕೆ ವಿರೋಧವಾಗಿ ಕಾಣುವ ಮಾತು ಉಪನಿಷತ್ತಿನಲ್ಲಿದ್ದರೆ ಅಂಥ ಮಾತನ್ನು ಸ್ವೀಕರಿಸುವುದಕ್ಕಾಗು ವುದಿಲ್ಲ; ಮುಕ್ತಿಯೆನ್ನುವುದು ಉಪನಿಷತ್ತಿನಲ್ಲಿ ಉಕ್ತವಾದ ನಿರ್ವಾಣ ಎಂಬ ಅವಸ್ಥೆ ಅಲ್ಲ, ಬ್ರಹ್ಮಜ್ಞಾನದಿಂದ ಬರುವ ಆನಂದ: ಇದನ್ನೆಲ್ಲ ಇವರು ನಿರ್ಧರಿಸಿಕೊಂಡರು. ಈ ತಿಳಿವನ್ನು ಅನುಭವಿಸುತ್ತ ತಪಸ್ಸಿನಲ್ಲಿರು ತ್ತಲಿದ್ದ ಇವರಿಗೆ ಒಂದು ದಿನ "ಮನೆಯನ್ನು ಬಿಟ್ಟು ಏಕಾಕಿಯಾಗಿರು ವುದು ಆವಶ್ಯಕವಲ್ಲ. ಮನೆಗೆ ಹೋಗು. ನಿನಗೆ ಇಲ್ಲಿ ಬಂದ ನಿಶ್ಚಯು ವನ್ನು ಲೋಕಕ್ಕೆ ತಿಳಿಸು" ಎಂದು ಭಗವಂತನು ಹೇಳಿದಂತೆ ಕೇಳಿಸಿತು. ತಿರುಗಿ ಹೋಗಿ ಸಂಸಾರದಲ್ಲಿ ಸಿಕ್ಕುವುದು ಅಸುಖವೆಂದು ಕಂಡರೂ ಆ ಆಜ್ಞೆಯನ್ನನುಸರಿಸಿ ಇವರು ಹಿಂದಕ್ಕೆ ಬಂದರು. ಇದನ್ನೆಲ್ಲ ಆತ್ಮ ಕಥೆಯೊಂದರಲ್ಲಿ ಇವರು ಬರೆದಿಟ್ಟದಾರೆ. ಇವರ ಒಂದೊಂದು ಮಾತಿ ನಲ್ಲಿಯೂ ಇವರು ಎಂಥ ಉತ್ತಮ ಚೇತನವೆಂದು ವ್ಯಕ್ತವಾಗುತ್ತದೆ. ಜ್ಞಾನದಲ್ಲಿ ಭಕ್ತಿಯಲ್ಲಿ ಹೋಗೋ ಹಾಗೆ ಪ್ರಪಂಚದ ಕಾರ್ಯದಲ್ಲೂ ಇವರು ಶ್ರದ್ಧಾಳುಗಳಾಗಿದ್ದರು. ಜೀವನದಲ್ಲಿ ಕಣ್ಣು ತೆರೆದುಕೊಂಡು ನಡೆದು ಇವರು ದೈವವನ್ನು ಎಲ್ಲ ಕಡೆಯೂ ಕಂಡರು. ಇವರ ಮಾತಿನಲ್ಲಿ ನಿಜ ವಿರುವುದಲ್ಲದೆ ಹೇಳುವ ರೀತಿಯಲ್ಲಿ ಸೊಗಸೂ ಇದೆ; ಪ್ರಪಂಚ ಜ್ಞಾನ ದಿಂದ ಬರುವ ಹಾಸ್ಯವೂ ಇದೆ.

### ೧೧. ಬ್ರಾಹ್ಮ ಸಮಾಜ

ದೇವೇಂದ್ರನಾಥರು ಮುಖ್ಯವಾಗಿ ಬ್ರಾಹ್ಮಸಮಾಜದ ಪ್ರತಿಷ್ಠಾ ಪನಾಚಾರ್ಯರು. ಈ ಸಮಾಜವನ್ನು ಸ್ಥಾಪಿಸುವುದರಲ್ಲಿ ರಾಜಾ ರಾಮ ಮೋಹನರಾಯರ ಮುಖ್ಯ ಉದ್ದೇಶ ಉಪನಿಷತ್ತುಗಳ ಸನಾತನ ಧರ್ಮ ವನ್ನು ಶುದ್ಧವಾದ ಸ್ವರೂಪದಲ್ಲಿ ಸ್ಥಾಪಿಸಬೇಕೆನ್ನುವುದಾಗಿತ್ತು. ಮುಖ್ಯ ವಾಗಿ ಪುರಾಣದ ದೇವತೆಗಳನ್ನು ಕುರಿತ ಕತೆಗಳನ್ನೂ ವಿಗ್ರಹಾರಾಧನೆ ಯನ್ನೂ ಬಿಡುವುದೇ ಬ್ರಾಹ್ಮಧರ್ಮದ ತತ್ವ. ಪಾಶ್ಚಾತ್ಯ ಸಂಸರ್ಗದಿಂದ

ಈ ಸಮಾಜದಲ್ಲಿ, ಜಾತಿ ಭೇದವನ್ನು ಎಣಿಸದೆ ಇರುವುದು, ವಿಧವಾ ವಿವಾಹ, ಪ್ರೌಢಾ ವಿವಾಹ ಮುಂತಾದ ಇನ್ನು ಕೆಲವು ಸುಧಾರಣೆಗಳೂ ಮುಖ್ಯ ಸ್ಥಾನವನ್ನು ಪಡೆದುವು. ದೇವೇಂದ್ರನಾಥ ಠಾಕೂರರು ಹಿಂದೂ ಮತ ದಿಂದ ಕ್ರೈಸ್ತಮತಕ್ಕೆ ಜನರು ಹೋಗದಂತೆ ಮಾಡುವುದಕ್ಕೆ ಕೈಕೊಂಡ ಏರ್ಪಾಡು ಮೊದಲೇ ಉಕ್ತವಾಗಿದೆ. ಇವರು ಮೊತ್ತದಲ್ಲಿ ಹಿಂದೂಧರ್ಮವು ಕೆಲವು ಸುಧಾರಣೆಗಳೊಡನೆ ಪೂರ್ವದಿಂದ ಬಂದಂತೆ ಇರಬೇಕೆಂದು ಅಭಿಪ್ರಾಯಪಡುತ್ತಿದ್ದರು: ಜಾತಿ ಭೇದವನ್ನೆಣಿಸದೆ ಇದ್ದರೂ ಸಮಾಜದ ವೇದಿಕೆಯಿಂದ ಬ್ರಾಹ್ಮಣರು ಮಾತ್ರ ಉಪನ್ಯಾಸ ಮಾಡಬೇಕೆಂಬ ಇವರ ಭಾವನೆ ಇದಕ್ಕೆ ಉದಾಹರಣೆ. ಬ್ರಾಹ್ಮ ಸಮಾಜದ ಕೆಲಸ ವಿಸ್ತಾರವಾಗಿ ಕೆಲವು ಕಾಲದ ಮೇಲೆ ಕೇಶವಚಂದ್ರ ಸೇನ ಎಂಬ ಮೇಧಾವಿ ತರುಣ ನೊಬ್ಬನು ಇವರ ಸಮೀಪಕ್ಕೆ ಬಂದನು. ದೇವೇಂದ್ರನಾಥರು ಹಿಂದೂ ಧರ್ಮದಲ್ಲಿ ಬೇರೂರಿದ್ದಂತೆ ಈತನು ಪಾಶ್ಚಾತ್ಯ ವಿದ್ಯೆಯಲ್ಲಿ ಪ್ರವೀಣನಾಗಿ ಕ್ರೈಸ್ತಮತ ಪಕ್ಷಪಾತಿಯಾಗಿದ್ದನು. ಇವರಿಬ್ಬರೂ ಕೆಲವು ಕಾಲ ಜೊತೆ ಯಾಗಿ ಕೆಲಸಮಾಡಿದರು. ಕೊನೆಗೆ ದೇವೇಂದ್ರನಾಥರ ಪೂರ್ವಾಚಾರದ ಪಕ್ಷಪಾತವು ಕೇಶವಚಂದ್ರನ ಸುಧಾರಣೆಯ ಉತ್ಸಾಹದ ಜೊತೆಯಲ್ಲಿ ನಡೆಯಲಾರದೆ ಹೋಯಿತು. ಇವರೊಡನೆ ಹಿಂದೆ ನಿಲ್ಲಲಾರದೆ ಕೇಶವ ಚಂದ್ರನು ಬ್ರಾಹ್ಮಸಮಾಜದ ಹೊಸದೊಂದು ಶಾಖೆಯನ್ನು ಸ್ಥಾಪಿಸಿದನು; ಇದಕ್ಕೆ ಭರತವರ್ಷದ ಬ್ರಾಹ್ಮ ಸಮಾಜ ಎಂದು ಹೆಸರಿಟ್ಟನು. ದೇವೇಂದ್ರ ನಾಥರು ಪೂರ್ವದಿಂದ ಬಂದ ಸಮಾಜಕ್ಕೆ ಆದಿ ಬ್ರಾಹ್ಮ ಸಮಾಜ ಎಂದು ಹೆಸರಿಟ್ಟರು. ಸಮಾಜ ಸುಧಾರಣೆ ಪ್ರಮುಖವೆಂದು ಸಾರಿದ ಕೇಶವ ಚಂದ್ರನು ತನ್ನ ಮಗಳನ್ನು ಒಬ್ಬ ರಾಜನು ವಿವಾಹವಾಗುವ ಸಂದರ್ಭ ಬಂದಾಗ ಚಿಕ್ಕವಯಸ್ಸಿನಲ್ಲಿಯೇ ಅವಳಿಗೆ ಮದುವೆ ಮಾಡಿದನು; ಗಂಡಿನ ಕಡೆಯವರು ಪೂರ್ವ ಪದ್ಧತಿಯವರಾದದರಿಂದ ವಿವಾಹದಲ್ಲಿ ವಿಗ್ರಹಾ ರಾಧನೆಯ ಕರ್ಮಗಳಿಗೆ ಎಡೆಕೊಟ್ಟನು. ಇದರಿಂದ ಅವನ ಶಾಖೆಯ ಸಮಾಜದಲ್ಲಿ ಎರಡು ಪಕ್ಷಗಳಾಗಿ ಒಂದು ಪಕ್ಷದವರು ಅವನನ್ನು ಬಿಟ್ಟು ಸಾಧಾರಣ ಬ್ರಾಹ್ಮ ಸಮಾಜ ಎಂದು ಇನ್ನೊಂದು ಶಾಖೆಯನ್ನು ಮಾಡಿ ಕೊಂಡರು. ದೇವೇಂದ್ರನಾಥ ಠಾಕೂರರು ಆದಿ ಸಮಾಜದ ಕೆಲಸವನ್ನು

ಮೇಲಿನಿಂದ ನೋಡಿ ವಿಚಾರಿಸಿಕೊಳ್ಳುತ್ತಾ ತಮ್ಮ ಸಾಧನೆಯ ಬಲದಿಂದ ಮಹರ್ಷಿಯೆಂಬ ಹೆಸರನ್ನು ಪಡೆದರು. ಇವರು ವೀರಭೂಮಿ ಜಿಲ್ಲೆಯಲ್ಲಿ ಬೋಲ್‌ಪೂರ್ ಎಂಬ ಸ್ಥಳದಲ್ಲಿ ಒಂದು ಆಸ್ತಿಯನ್ನು ಮಾಡಿದ್ದರು; ವಯಸ್ಸಾದಾಗ ಅಲ್ಲಿ ಒಂದು ಆಶ್ರಮವನ್ನು ಮಾಡಿಕೊಂಡು ಅಲ್ಲಿ ತಪಶ್ಚರ್ಯೆಯಲ್ಲಿರುತಿದ್ದರು. ಈ ಆಶ್ರಮವೇ ಈಗ ಪ್ರಸಿದ್ಧವಾಗಿರುವ ಶಾಂತಿನಿಕೇತನ. ೧೯೦೨ನೆಯ ಇಸವಿಯಲ್ಲಿ ದೇವೇಂದ್ರನಾಥರಿಗೆ ವಾರ್ಧಿಕ್ಯದ ದೆಸೆಯಿಂದ ಆರೋಗ್ಯ ಕೆಟ್ಟಿತು. ಅವರು ಶಾಂತರಾಗಿ ಸಮಾಧಾನಚಿತ್ತರಾಗಿ ೧೯೦೫ನೆಯ ಇಸವಿ ಜನವರಿ ೧೯ನೆಯ ದಿನ ಮಧ್ಯಾಹ್ನ ೨ ಘಂಟೆಯ ವೇಳೆಗೆ ಇಹ ದೇಹವನ್ನು ಬಿಟ್ಟರು.

## ೧೨. ರವೀಂದ್ರನಾಥ ಠಾಕೂರ್

ರವೀಂದ್ರನಾಥರು ದೇವೇಂದ್ರನಾಥರ ಏಳನೆಯ ಮಗ. ದೇವೇಂದ್ರನಾಥರು ಹಿಮಾಲಯದಲ್ಲಿ ಸಿದ್ಧಿಯನ್ನು ಪಡೆದು ಊರಿಗೆ ಹಿಂದಿರುಗಿ ಬಂದಮೇಲೆ ಇವರು ಹುಟ್ಟಿದರು. ಆಗ್ಗೆ ರವೀಂದ್ರನಾಥರ ಅಣ್ಣಂದಿರಿಗೆ ಸಂಸಾರಗಳಿದ್ದುವು. ದೊಡ್ಡ ಸಂಸಾರದಲ್ಲಿ ಬಹು ಜನದ ಲಾಲನೆಯಲ್ಲಿ ಬೆಳೆಯುವುದು ಇವರ ಪಾಲಿಗೆ ಬಂದಿತು. ಮನೆಯಲ್ಲಿ ಹಿರಿಯರು ಸಮಾಜ ಸಂಸ್ಕರಣ, ಧರ್ಮ ಪರಿಷ್ಕರಣ, ದೇಶ ಸೇವೆ, ಸಾಹಿತ್ಯೋಪಾಸನಗಳಲ್ಲಿ ನಿರತರಾಗಿದ್ದರು. ಎತ್ತಲೂ ಉದ್ಯಮ, ಎಲ್ಲರೂ ಉದ್ಯಮಿಗಳು. ಬಾಲಕನು ಎಳೆದ ಉಸಿರಿನಲ್ಲೆಲ್ಲ ಉತ್ತಮ ಭಾವನೆಗಳು ಅವನ ಒಳಹೊಗುತ್ತಿದ್ದುವು. ರವೀಂದ್ರರು ತಮ್ಮ ಎಳೆಯತನವನ್ನೂ ಕವನದ ಆರಂಭ ವರ್ಷಗಳನ್ನೂ 'ಜೀವನಸ್ಮೃತಿ' ಮತ್ತು 'ನನ್ನ ಎಳೆತನ' ಎಂಬ ಗ್ರಂಥಗಳಲ್ಲಿ ವರ್ಣಿಸಿದಾರೆ. ಈ ಗ್ರಂಥಗಳು ಗಮನಕ್ಕೆ ಅರ್ಹವಾದ ಅತ್ಯುತ್ತಮ ರೀತಿಯ ಕೃತಿಗಳು; ಅಲ್ಲದೆ ಇವರ ಬೆಳವಣಿಗೆಯನ್ನು ಇವರ ಮಾತಿನಲ್ಲಿಯೇ ತಿಳಿಸುತ್ತವೆ.

# ಅಧ್ಯಾಯ ೩

## ಜೀವನ ಚರಿತೆ

### ೧೩. ಎಳೆತನ

ರವೀಂದ್ರರಿಗೆ ಬಾಲ್ಯದ ಪಾಠದಲ್ಲಿ ಜ್ಞಾಪಕವಿರುವುದು: 'ಜಲ್ ಪಡೇ, ಪಾತಾ ನಡೇ' ಎಂದರೆ ನೀರು ಉದುರುತ್ತದೆ, ಎಲೆ ಅದುರುತ್ತದೆ ಎಂಬ ವಾಕ್ಯ. ಇದು ತನಗೆ ವಿಶ್ವಕವಿಯ ಪದ್ಯಗಳಲ್ಲಿ ಮೊದಲನೆಯ ಪದ್ಯ ಎಂದು ಇವರು ಹೇಳುತ್ತಾರೆ. "ಅಂದಿನ ಸಂತೋಷ ನೆನಪಿಗೆ ಬಂದಾಗ ನನಗೆ ಕಾವ್ಯದಲ್ಲಿ ಪ್ರಾಸ ಯಾವ ಕಾರಣದಿಂದ ಅನಿವಾರ್ಯ ವೆಂದು ಸ್ಪಷ್ಟವಾಗುತ್ತದೆ. ಪ್ರಾಸವಿರುವುದರಿಂದ ಮಾತು ಮುಗಿದೂ ಮುಗಿಯದಂತೆ ಇರುತ್ತದೆ. ಸ್ವರ ಮುಗಿಯುತ್ತದೆ; ಧ್ವನಿ ಮುಗಿಯುವು ದಿಲ್ಲ. ಕಿವಿಯೂ ಮನಸ್ಸೂ ಇದು ಅದಕ್ಕೆ ಅದು ಇದಕ್ಕೆ ಪ್ರಾಸ ವನ್ನೆಸೆಯುವ ಆಟವನ್ನು ಆಡುತ್ತಲೇ ಇರಬಹುದು." ಕೈಲಾಸ್ ಎಂಬ ಮನೆಯ ಖಜಾನ್ಚಿ ಒಂದು ಕವಿತೆಯನ್ನು ಬರೆದು ಇವರಿಗೆ ಒದರಿ ಹೇಳು ತ್ತಿದ್ದನು. ಅದರ ನಾಯಕನು ಇವರೇ; ಒಬ್ಬ ನಾಯಕಿ ಬರುವಂತೆ ಅದರಲ್ಲಿ ವರ್ಣನೆ. ಅವಳು ಹಾಕಿಕೊಂಡಿರುವ ಒಡವೆ ವಸ್ತುಗಳು ಬಹಳ ವಿದ್ದರೂ ಹುಡುಗನಿಗೆ ಕೌತುಕವನ್ನುಂಟುಮಾಡುತ್ತಿದ್ದದು ಪದ್ಯದ ತುಂಬ ಬರುತ್ತಿದ್ದ ಪ್ರಾಸ ಮತ್ತು ಅದರ ಲಯ.

ಇವರನ್ನು ಮೊದಲು ಓರಿಯೆಂಟಲ್ ಸೆಮಿನೆರಿ ಎಂಬ ಶಾಲೆಗೆ ಕಳುಹಿಸಿದರು. ಇಲ್ಲಿ ದಂಡುಕೋಲು ಮೊದಲಾದ ಶಿಕ್ಷೆಗಳಿದ್ದುವು. ಇವರು ಈ ಕಾಲದಲ್ಲಿ ಕೃತ್ತಿವಾಸನ ರಾಮಾಯಣ ಮತ್ತು ಚಾಣಕ್ಯನ ಸೂತ್ರಗಳ ಒಂದು ಬಂಗಾಳಿ ಭಾಷಾಂತರ ಇವುಗಳನ್ನು ಓದಿದರು. ರಾಮಾಯಣದ ಕಥೆಯ ದುಃಖಮಯ ಸನ್ನಿವೇಶಗಳಲ್ಲಿ ಇವರು ಅಳುತ್ತಿರುವುದನ್ನು ಕಂಡು ಇವರ ಚಿಕ್ಕ ಅಜ್ಜಿ ಆ ಪುಸ್ತಕವನ್ನು ಕಿತ್ತುಕೊಂಡರು.

ಮನೆಯಲ್ಲಿ ಹಿರಿಯರು ಅವರವರ ಕೆಲಸದಲ್ಲಿ ಇರುತ್ತಿದ್ದುದರಿಂದ ಮಕ್ಕಳನ್ನು ಸೇವಕರು ನೋಡಿಕೊಳ್ಳುತ್ತಿದ್ದರು. ಶ್ಯಾಮ ಎಂಬ ಸೇವಕನು ಇವರನ್ನು ಒಂದು ಕಡೆ ಸೇರಿಸಿ, ಸುತ್ತ ಒಂದು ಗೆರೆಹಾಕಿ,

ಇದನ್ನು ಬಿಟ್ಟು ಹೊರಗೆ ಬಂದರೆ ತೊಂದರೆಯಾಗುತ್ತದೆಂದು ಹೇಳುವನು. ಲಕ್ಷ್ಮಣನು ಹಾಕಿದ ಗೆರೆಯನ್ನು ದಾಟಿ ಸೀತೆ ತೊಂದರೆಪಟ್ಟಿದ್ದನ್ನು ಕೇಳಿದ್ದ ಬಾಲಕನು ಅಲ್ಲಿಯೇ ಕುಳಿತು ಕಿಟಕಿಯಿಂದ ಹೊರಗೆ ನೋಡುತ್ತ ಕಾಲವನ್ನು ಕಳೆಯುವನು. ಹೊರಗೆ ತೋಟದಲ್ಲಿ ಒಂದು ಕೊಳ; ಪಕ್ಕದಲ್ಲಿ ಒಂದು ಆಲದಮರ; ಜನ ಬಂದು ಅಲ್ಲಿ ಸ್ನಾನಮಾಡುವರು. ಹುಡುಗನು ಇದನ್ನು ನೋಡುತ್ತ ಹೊತ್ತನ್ನು ನೂಕುವನು. ಬರುವವರು ಒಬ್ಬೊಬ್ಬರೂ ಹೇಗೆ ಸ್ನಾನಮಾಡುವರೆಂದು, ಎಂದರೆ ಒಬ್ಬರು ಮೂರು ಮುಳುಗು ಹಾಕುವುದು, ಇನ್ನೊಬ್ಬರು ಪಾಚಿಯನ್ನು ತಳ್ಳಿ ಸ್ನಾನ ಮಾಡುವುದು, ಇದನ್ನೆಲ್ಲ ನೋಡುವುದೇ ಕಾಲಕ್ಷೇಪ. ಬಹು ದಿನದ ಮೇಲೆ ಠಾಕೂರರು ಶಿಶು ಎಂಬ ಗ್ರಂಥದಲ್ಲಿ ಈ ಆಲದಮರವನ್ನು ಕುರಿತು ಒಂದು ಪದ್ಯವನ್ನು ಬರೆದರು. ಮನೆಯಿಂದ ಹೊರಗೆ ಹೋಗುವುದಕ್ಕೆ ಇಲ್ಲದೆ ಬಾಲಕನು ಏನು ಏನನ್ನೋ ಯೋಚಿಸಿಕೊಳ್ಳುತ್ತಾ ಕಾಲ ಕಳೆಯುವನು. ತಂದೆಯ ಕೊಠಡಿಯಲ್ಲಿ ಒಂದು ಕೊಳಾಯಿ ಇತ್ತು; ಅದರಲ್ಲಿ ಹೊತ್ತಲ್ಲದ ಹೊತ್ತಿನಲ್ಲಿ ಸ್ನಾನಮಾಡುವನು. ಮನೆಯ ಒಳಗಡೆ ಒಂದು ಸಣ್ಣ ಹೂತೋಟ; ಅಷ್ಟೇನೂ ಸೊಗಸಾದದ್ದಲ್ಲ; ಆದರೂ ಅದೇ ಇವನಿಗೆ ನಂದನ ವನ. ಮನೆಯ ಹಿಂದೆ ಒಂದು ಕಣಜವಿತ್ತು. ಅಲ್ಲಿಗೆ ಹೋಗುವುದೆಂದರೆ ಇವನಿಗೆ ದೊಡ್ಡ ಹಬ್ಬದ ಹಾಗೆ. ಇವನ ಜೊತೆಗೆ ಒಬ್ಬ ಹುಡುಗಿ ಆಡುತ್ತಿದ್ದಳು. ಅವಳು ಹುಡುಗನಿಗೆ ಆ ಮನೆಯಲ್ಲಿ ಒಂದು ಅರಮನೆ ಇದೆ ಎಂದು ಹೇಳಿದಳಂತೆ. ಅದು ಹುಡುಗನಿಗೆ ನಿಜವಾದ ಮಾತಾಗಿತ್ತು.

ಬಾಲ್ಯವನ್ನು ನೆನೆದುಕೊಂಡರೆ ಪುನಃಪುನಃ ನೆನಪಿಗೆ ಬರುವುದು ಒಂದು ವಿಷಯವೆಂದು ಇವರು ಹೇಳುತ್ತಾರೆ. ಜೀವನದಲ್ಲಿ ಪ್ರಪಂಚದಲ್ಲಿ ತುಂಬಿದ್ದ ಯಾವುದೋ ಮಾಯೆ; ಎಲ್ಲ ಕಡೆಯಲ್ಲಿಯೂ ಮನುಷ್ಯನು ಊಹಿಸದ ವಸ್ತುವೊಂದು ಮರೆಯಲ್ಲಿರುವಂತೆ ಭಾವನೆ; ಅದು ಯಾವಾಗ ಸಿಕ್ಕುತ್ತದೆ ಎಂದು ದಿನವೂ ಯೋಚನೆ. ಪ್ರಕೃತಿ ಕೈಗಳನ್ನು ಮುಚ್ಚಿಕೊಂಡು ನಗುತ್ತ, ನನ್ನ ಕೈಯಲ್ಲಿ ಏನಿದೆ ಹೇಳು? ಎಂದು ಕೇಳಿದಂತೆ. ಇವರು ಒಂದು ಸೀತಾಫಲವನ್ನು ಒಂದು ಕಡೆ ಹೂತು ಗಿಡವಾಗುವುದೋ ಎಂದು ನೋಡುತಿದ್ದರಂತೆ. ಅದಕ್ಕೆ ನೀರು ಹೊಯ್ದಿದ್ದೂ ಹೊಯ್ದದ್ದೆ.

“ಸೀತಾಫಲದ ಗಿಡ ಈಗ ಬೆಳೆಯಬಹುದು. ಆದರೆ ಅದು ನಮಗೆ ಆಗಿನಷ್ಟು ಆಶ್ಚರ್ಯವನ್ನುಂಟುಮಾಡಲಾರದು. ಅದು ಫಲದ ತಪ್ಪಲ್ಲ; ನಮ್ಮ ಬುದ್ಧಿಯ ತಪ್ಪು” ಎಂದು ಇವರು ಹೇಳುತ್ತಾರೆ. ಇವರು ಆಟಕ್ಕಾಗಿ ಕಲ್ಲು ಮಣ್ಣು ಗಿಡಗಳಿಂದ ಕೊಠಡಿಯೊಳಗೆ ಒಂದು ಆಟದ ಗುಡ್ಡವನ್ನು ಮಾಡಿದರು. ಇದನ್ನು ದೊಡ್ಡವರು ಕಿತ್ತೊಗೆದರು. “ನೆಲದಿಂದ ಎತ್ತಿ ಎಸೆದ ಕಲ್ಲಿನಭಾರ ನನ್ನ ಮನಸ್ಸಿನ ಮೇಲೆ ಕೂತಿತು” ಎಂದು ಕವಿ ಹೇಳಿದಾರೆ. ಆ ಕಾಲದಲ್ಲಿ ಸೃಷ್ಟಿ ಮಾಟದ ಎಲ್ಲ ಮಾಟೂ ಇವರಿಗೆ ಆಪ್ತವಾಗಿತ್ತು. ನೀರು, ನೆಲ, ಎಲೆ, ಆಕಾಶ ಎಲ್ಲವೂ ಇವರನ್ನು ಮಾತನಾಡಿಸುತಿದ್ದುವು; ನಿರಾಕರಿಸಿದರೆ ಒಪ್ಪದಂತೆ ಇದ್ದುವು. “ಈ ಮಹಡಿಯ ನೆಲಮಾತ್ರ ನಮಗೆ ಕಾಣುತ್ತಿದೆ. ಇದರಲ್ಲಿ ತೂತು ಕೊರೆದು ನೋಡಿದರೆ ಅದರ ಒಳಗಡೆಯ ಸ್ಥಿತಿ ತಿಳಿಯಬಹುದು” ಎಂದು ಇವರು ಯೋಚಿಸುತಿದ್ದರು. ಆಕಾಶ ಒಂದು ಮುಚ್ಚಳವಲ್ಲ ಎಂದು ಇವರ ಪಂಡಿತರು ಇವರಿಗೆ ಹೇಳಿದಾಗ ಇವರಿಗೆ ಬಹಳ ಆಶ್ಚರ್ಯ. ಇವರ ಸೇವಕರು ಇವರನ್ನು ವಿಶ್ವಾಸದಿಂದ ಕಾಣುತ್ತಿರಲಿಲ್ಲ. ಆದರೆ ಅವರಲ್ಲಿ ಒಬ್ಬನು ಹಿಂದೆ ಉಪಾಧ್ಯಾಯನಾಗಿದ್ದವನು. ಆವನು ಇವರಿಗೆ ರಾಮಾಯಣ ಮಹಾಭಾರತದ ಕಥೆಗಳನ್ನು ಹೇಳುತಿದ್ದನು. ಕುಶಲವರ ಕಾಳಗದ ಕಥೆಯನ್ನು ಇವರು ಆಗ ಕೇಳಿದರು.

### ೧೪. ಮೊದಲ ಪಾಠಗಳು

ಇದಾದ ಕೊಂಚ ದಿನದ ಮೇಲೆ ಇವರು ನಾರ್ಮಲ್ ಸ್ಕೂಲಿನಲ್ಲಿ ಸೇರಿದರು. ಅಲ್ಲಿ ಇವರಿಗೆ ಇಂಗ್ಲೀಷ್ ಪಾಠ ಇರುತ್ತಿತ್ತು: ಅದರಲ್ಲಿ ಒಂದು ಹಾಡು. ಅದರ ಮಾತು ಇವರು ಹೇಳುತ್ತಿದ್ದಂತೆ, ಕಲ್ಲೋಕೀ, ಪುಲ್ಲೋಕೀ, ಸಿಂಗಲ್, ಮೆಲ್ಲಲಿಂಗ್, ಮೆಲ್ಲಲಿಂಗ್, ಮೆಲ್ಲಲಿಂಗ್. ಈ ಬಾಯಪಾಠದ ಮಾತಿನಲ್ಲಿ ಕಲ್ಲೋಕೀ ಎನ್ನುವುದು ಯಾವ ಮಾತಿನ ಅಪಭ್ರಂಶವೋ ಇವರಿಗೆ ಜ್ಞಾಪಕವಿಲ್ಲ. ಉಳಿದ ಮಾತು Full of glee, full of glee, singing, merrily, merrily, merrily. ಈ ಸ್ಕೂಲಿನಲ್ಲಿ ಒಬ್ಬ ಉಪಾಧ್ಯಾಯನು ಸ್ವಲ್ಪ ಕೊಚ್ಚೆಯಾಗಿ ಮಾತನಾಡುತಿದ್ದನು.

ಭಯ ಕಡಮೆಯಾಯಿತು. ಇದಾದಮೇಲೆ ಕೊಂಚ ದಿವಸಕ್ಕೆ ಇವರ ತಂದೆಯವರು ಇವರಿಗೆ ಉಪನಯನಮಾಡಿಸಿದರು. ಗಾಯತ್ರಿ ಅರ್ಥ ವಾಗದಿದ್ದರೂ ಅದರ ಜಪಮಾಡುವುದಕ್ಕೆ ಯತ್ನಮಾಡಿದೆನೆಂದೂ ಅದ ರಿಂದ ಬಹಳ ಪ್ರಯೋಜನವಾಯಿತೆಂದೂ ಇವರು ಹೇಳಿದಾರೆ. ಮಾತಿನ ಅರ್ಥ ತಿಳಿಯುವುದು ಮನಸ್ಸಿನ ಮುಖ್ಯ ಕರ್ಮವಲ್ಲ, ಅರ್ಥ ತಿಳಿಯ ದಿದ್ದರೂ ಭಾವ ಉಂಟಾಗಬಹುದು, ಇದು ತಮ್ಮ ಜೀವನದಲ್ಲಿ ಹಲವು ವೇಳೆ ತಮ್ಮ ಅನುಭವಕ್ಕೆ ಬಂದಿದೆ, ಎಂದು ಹೇಳಿದಾರೆ. ಇಷ್ಟರಲ್ಲೇ ಇವರ ತಂದೆಯವರು ಇವರನ್ನೂ ತಮ್ಮ ಜೊತೆಯಲ್ಲಿ ಹಿಮಾಲಯಕ್ಕೆ ಕರೆದುಕೊಂಡು ಹೋದರು. ಪ್ರಯಾಣದ ವಿಷಯವನ್ನು ಇವರು ಬಹಳ ಸಂತೋಷದಿಂದ ನೆನೆದುಕೊಂಡು ಬರೆದಿದಾರೆ. ತಂದೆ ಮಗನ ಆಟ ಪಾಟಗಳನ್ನು ಸಹಾನುಭೂತಿಯಿಂದ ನೋಡುತ್ತ ತಪ್ಪುಮಾಡುವುದು ಹೊರತಾಗಿ ಉಳಿದಹಾಗೆ ಇಷ್ಟಬಂದಂತೆ ನಡೆದುಕೊಳ್ಳುವುದಕ್ಕೆ ಬಿಟ್ಟರು. ಭಗವದ್ಗೀತೆಯ ಅವರ ಪ್ರತಿಯಲ್ಲಿ ಅವರು ಗುರುತು ಹಾಕಿದ್ದ ಮುಖ್ಯ ಶ್ಲೋಕಗಳನ್ನು ಬರೆಯುವಂತೆ ಇವರಿಗೆ ಹೇಳಿದರು. ಬೋಲ್ಪುರದ ತೆಂಗಿನ ಮರದ ಕೆಳಗೆ ಹುಲ್ಲಿನಮೇಲೆ ಮಲಗಿ ಹುಡುಗನು ಪೃಥ್ವೀರಾಜನ ಸೋಲು ಎಂಬ ಒಂದು ಲಾವಣಿಯನ್ನು ಬರೆದನು. ಒಂದು ಸಲ ಇವರ ತಂದೆ ಇವರು ಬರೆದ ಕೀರ್ತನೆಯನ್ನು ಹಾಡಿಸಿ ಕೇಳಿ ಇವರಿಗೆ ಹಣ ಕೊಟ್ಟ ರಂತೆ. ಅವರೇ ಇವರಿಗೆ ನಿಜವಾಗಿ ಸಂಸ್ಕೃತದ ಪಾಠವನ್ನು ಆರಂಭ ಮಾಡಿದ್ದು. ಹಿಮಾಲಯದಲ್ಲಿ ತಂದೆಯೊಂದಿಗೆ ಕಳೆದ ಕಾಲವನ್ನು ಕವಿ ಉತ್ಸಾಹದಿಂದ ನೆನೆದು ವರ್ಣಿಸಿದ್ದಾರೆ. ಹಿಂದಕ್ಕೆ ಬಂದಮೇಲೆ ಪ್ರಯಾಣ ದಲ್ಲಿ ನಡೆದದ್ದನ್ನೆಲ್ಲ ಇವರು ಅಂತಃಪುರದವರ ಮುಂದೆ ಹಲವುವೇಳೆ ಹೇಳು ತಿದ್ದರು. ಇವರು ರಾಮಾಯಣದ ಶ್ಲೋಕಗಳನ್ನು ಓದುವುದನ್ನು ಕೇಳಿ ಇವರ ತಾಯಿ ಬಹಳ ಮೆಚ್ಚಿ ಓದು ಕೇಳೋಣ ಎನ್ನುವರಂತೆ. ಇವರು ಈ ಕಾಲದಲ್ಲಿ ಕುಮಾರಸಂಭವವನ್ನು ಓದಿದರು; ಮ್ಯಾಕ್‌ಬೆತ್ ನಾಟಕ ವನ್ನು ಓದಿ ಅದನ್ನು ಬಂಗಾಳಿಯಲ್ಲಿ ಬರೆದರು. ಇವರ ಪಂಡಿತರು ಈ ನಾಟಕವನ್ನು ಇವರಿಂದ ಈಶ್ವರಚಂದ್ರ ವಿದ್ಯಾಸಾಗರರ ಮುಂದೆ ಓದಿಸಿದ ರಂತೆ. ಈ ಕಾಲದಲ್ಲಿ ದೀನಬಂಧು ಮಿತ್ರ ಎಂಬ ಕವಿಯ ವಿಡಂಬನ ಕಾವ್ಯ

ಗಳು ಪ್ರಕಟವಾದುವು. ಇವರು ಅವನ್ನು ಓದುತಿದ್ದರು ; ಅಬೋಧಬಂಧು, ವಂಗದರ್ಶನ ಎಂಬ ಪತ್ರಿಕೆಗಳನ್ನು ಆತುರದಿಂದ ನೋಡುತಿದ್ದರು.

೧೬. ಆರಂಭದ ಪರಿಚಯುಗಳು

ಚಿಕ್ಕಂದಿನಲ್ಲಿ ಮನೆಯಲ್ಲಿ ತುಂಬಿದ್ದ ಸಾಹಿತ್ಯ ಮತ್ತು ಕಲೆಗಳ ವಿಷಯದ ಸಂಭ್ರಮದಿಂದ ತಮಗೆ ಬಹಳ ಸಹಾಯವಾಯಿತೆಂದು ಇವರು ಹೇಳಿದಾರೆ. ಇವರ ದೊಡ್ಡಪ್ಪನ ಮಗ ಗುಣೇಂದ್ರನು ಪಂಡಿತ ತರ್ಕ ರತ್ನರಿಂದ ಒಂದು ನಾಟಕವನ್ನು ಬರೆಯಿಸಿ ಇವರ ಮನೆಯಲ್ಲಿ ಆಡಿಸಿದನು. ಗುಣೇಂದ್ರನು ಸಾಹಿತ್ಯದಲ್ಲಿ ಬಹಳ ಉತ್ಸಾಹಿ; ಜನರನ್ನು ಸುತ್ತ ಸೇರಿಸಿ ಕೊಂಡು ಕೆಲಸಮಾಡುವನು. ಅವನ ತಮ್ಮ ಗಣೇಂದ್ರನೂ ಹಾಗೆಯೇ. ಇವರ ಹಿರಿಯ ಅಣ್ಣ ಬರೆದ ಒಂದು ಪ್ರಹಸನವನ್ನು ಅಭ್ಯಾಸಮಾಡು ವಾಗ ಇವರು ಕುತೂಹಲದಿಂದ ನೋಡುತಿದ್ದರು. ಗುಣೇಂದ್ರನು ಇವರಿಗೆ ನಮ್ಮ ದೇಶದ ಚರಿತ್ರೆಯಿಂದ ಕಥೆಗಳನ್ನು ಹೇಳುವನು; ಇವರು ಬರೆದ ಪದ್ಯಗಳನ್ನು ಓದಿಸುವನು; ತಪ್ಪಿದ್ದರೆ ನಗುವನು. ಇವರ ಹಿರಿಯಣ್ಣನವರು ಬರೆದ ಸ್ವಪ್ನಪ್ರಯಾಣ ಎಂಬ ಗ್ರಂಥದ ಆಶ್ರವಣ ಸಮಯದಲ್ಲಿ ಇವರು ಅಲ್ಲಲ್ಲಿ ನಿಂತು ಕೇಳುತ್ತಿರುವರು. ಜನರು ಸೇರಿ ವಿನಕೆಗಳು ನಡೆದಾಗಲೆಲ್ಲ ಹುಡುಗರಿಗೆ ಸಂಗೀತ ಸಾಹಿತ್ಯಗಳ ಗಾಳಿ ಬೀಸುತ್ತಿತ್ತು. ಅಕ್ಷಯಚೌಧುರಿ ಎಂಬ ಬಂಗಾಳಿ ಲೇಖಕನು ಇವರ ಮನೆಗೆ ಬರುತ್ತ ಹೋಗುತ್ತ ಇದ್ದನು. ಈತನಿಗೆ ಸಾಹಿತ್ಯದಲ್ಲಿ ಬಹಳ ಅಭಿರುಚಿ. ರವೀಂದ್ರನಾಥರ ಅಣ್ಣ ಜ್ಯೋತಿರಿಂದ್ರರೂ ತಮ್ಮನ ಬೆಳ ವಣಿಗೆಯಲ್ಲಿ ಬಹಳ ಸಹಾಯವಾದರು. ವಯಸ್ಸಿನಲ್ಲಿ ಹಿರಿಯನಾದರೂ ಜ್ಯೋತಿರಿಂದ್ರನು ಇವರಿಗೆ ಜೊತೆಯ ಹುಡುಗನಂತೆ ನಡೆದುಕೊಳ್ಳುತ್ತ ಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟಿದ್ದನು. ಜ್ಯೋತಿರಿಂದ್ರನು ಸಂಗೀತದಲ್ಲಿ ಅನೇಕ ಗತಿಗಳನ್ನು ನೋಡುವುದಕ್ಕೆಂದು ನುಡಿಸುತ್ತಿರುವಲ್ಲಿ ಅಕ್ಷಯನೂ ಕವಿಯೂ ಕುಳಿತು ಆ ಗಾನ ಗತಿಗೆ ಸರಿಯಾಗಿ ಮಾತುಗಳನ್ನು ಸೇರಿಸು ತಿದ್ದರು. ಈ ವೇಳೆಗೆ ಹೊಸದಾಗಿ ಬಂದ ಒಬ್ಬ ಉಪಾಧ್ಯಾಯರು ಇಂಗ್ಲೀಷಿನ 'ವಿಕಾರ್ ಆಫ್ ವೇಕ್‌ಫೀಲ್ಡ್' ಎಂಬ ಗ್ರಂಥವನ್ನು

ಬಂಗಾಳಿಗೆ ಬರೆಯುವ ಕೆಲಸವನ್ನು ಇವರಿಗೆ ಹೂಡಿದರು. ಇಷ್ಟು ಸಮಯಕ್ಕೆ ಇವರು ಶಾಲೆಯಲ್ಲಿ ಓದುವುದೆನ್ನುವ ಮಾತು ತೀರ ತಪ್ಪಿ ಹೋಯಿತು. ಇವರ ಅತ್ತಿಗೆ ಜ್ಯೋತಿರಿಂದ್ರನ ಪತ್ನಿ ಸಾಹಿತ್ಯದಲ್ಲಿ ಅಭಿರುಚಿಯುಳ್ಳಾಕೆ; ವಿಹಾರಿಲಾಲ್ ಚಕ್ರವರ್ತಿ ಎಂಬಾತನ ಶಾರದಾ ಮಂಗಳ ಎಂಬ ಗೀತಮಾಲೆಯ ಬಹು ಭಾಗವನ್ನು ಚೆನ್ನಾಗಿ ಹಾಡು ತಿದ್ದರು. ಆ ಕವಿಯೂ ಮನೆಗೆ ಬರುತ್ತಿದ್ದನು. ಆತನಿಗೆ ವಾಲ್ಮೀಕಿ ಕಾಳಿದಾಸರನ್ನು ಕುರಿತು ಭಕ್ತಿ. ಇವರ ಸಹವಾಸದಿಂದ ರವೀಂದ್ರರಿಗೆ ಬಹಳ ಪ್ರಯೋಜನವಾಯಿತು.

### ೧೭. ಜ್ಞಾನಾಂಕುರ

ಈ ವೇಳೆಗೆ ಜ್ಞಾನಾಂಕುರವೆಂಬ ಒಂದು ಪತ್ರಿಕೆ ಆರಂಭವಾಯಿತು. ಅದರಲ್ಲಿ ರವೀಂದ್ರರ ಪದ್ಯಗಳೆಲ್ಲ ಪ್ರಕಟವಾದುವು. ಇವರ ಮೊದಲನೆಯ ಗದ್ಯ ಲೇಖನ ಕೂಡ ಅದೇ ಪತ್ರಿಕೆಯಲ್ಲಿ ಪ್ರಕಟವಾಯಿತು. ಇದು ಒಂದು ವಿಮರ್ಶನ ಲೇಖನ. ರವೀಂದ್ರರು ಅಕ್ಷಯ ಸರ್ಕಾರ ಮತ್ತು ಶಾರದಾ ಮಿತ್ರ ಎಂಬ ಸಂಪಾದಕರು ಪ್ರಕಟಿಸುತ್ತಿದ್ದ ಪದ್ಯಗಳನ್ನು ಕಣ್ಣಿಟ್ಟು ಓದುತಿದ್ದರು. ಇಂಗ್ಲೀಷಿನಲ್ಲಿ ಪೂರ್ವಕಾಲದ ಪದ್ಯ ಎಂದು ವೇಷಹಾಕಿಕೊಂಡು ಬರೆದ ಛಾಟರ್‌ಟನ್ ಎಂಬ ತರುಣ ಕವಿಯ ವಿಷಯವನ್ನು ಇವರು ಕೇಳಿದ್ದರು. ಅವನಂತೆ ತಾವೂ ಹಿಂದಿನ ಕಾವ್ಯ ವೆಂಬಂತೆ ಕಾಣುವ ಕೆಲವು ಗೀತಗಳನ್ನು ರಚಿಸಿದರು. ಸ್ನೇಹಿತರೊಬ್ಬರಿಗೆ ಅವನ್ನು ಓದಿ ತೋರಿಸಿ ಯಾವುದೋ ಹಳೆಯ ಪುಸ್ತಕದಲ್ಲಿ ಸಿಕ್ಕಿದವೆಂದು ಹೇಳಿದಾಗ, ವಿದ್ಯಾಪತಿ ಚಂಡಿದಾಸರು ಕೂಡ ಇಷ್ಟು ಚೆನ್ನಾಗಿ ಬರೆಯು ತ್ತಿರಲಿಲ್ಲ ಎಂದು ಆ ಸ್ನೇಹಿತರು ಹೇಳಿದರಂತೆ. ನಾನೇ ಬರೆದುವು ಎಂದು ರವೀಂದ್ರರು ಹೇಳಿದಾಗ ಅವರಿಗೆ ಉತ್ಸಾಹ ಕಡಮೆಯಾಯಿತು. ಈ ಪದ್ಯಗಳನ್ನು ರವೀಂದ್ರರು ಭಾರತಿ ಎಂಬ ಪತ್ರಿಕೆಯಲ್ಲಿ ಅಚ್ಚು ಹಾಕಿ ಸಿದರು; ಭಾನುಸಿಂಹ ಎಂಬ ಪೂರ್ವ ಕವಿ ಬರೆದುವೆಂದು ಕತೆಕಟ್ಟಿದರು. ನಿಶೀಕಾಂತ ಚಟ್ಟೋಪಾಧ್ಯಾಯರು ಈ ಮಾಯಾಕವಿಯ ವಿಷಯವಾಗಿ ನಿಬಂಧವೊಂದನ್ನು ಬರೆದು ಡಾಕ್ಟರೇಟನ್ನು ಪಡೆದರಂತೆ.

ಠಾಕೂರರ ಮನೆ ಕಾವ್ಯ ಸಾಹಿತ್ಯಗಳಿಗೆ ಹೇಗೋ ಹಾಗೆಯೇ ದೇಶ ವಾತ್ಸಲ್ಯದ ವಿಷಯದಲ್ಲಿಯೂ ಒಂದು ಕೇಂದ್ರವಾಗಿತ್ತು. ಗುಣೇಂದ್ರನು ಆ ದಿನಗಳಲ್ಲಿಯೇ ಸ್ವದೇಶಿ ಎಂಬ ಭಾವನೆಯನ್ನು ಆರಂಭಿಸಿದ್ದನು. ಬಂಗಾಳಿಯಲ್ಲಿ ಹೊರತು ಇಂಗ್ಲೀಷಿನಲ್ಲಿ ಕಾಗದ ಬಂದರೆ ಅದನ್ನು ಹಿಂದಕ್ಕೆ ಕೊಟ್ಟು ಕಳುಹಿಸುವಷ್ಟರ ಮಟ್ಟಿಗೂ ಇವರು ಮಾತೃಭಾಷಾ ಪ್ರೇಮಿಗಳಾಗಿದ್ದರು. ಆಗ್ಗೆ ಹಿಂದೂ ಮೇಳ ಎಂಬ ಒಂದು ವಾರ್ಷಿಕ ಸಭೆ ಸೇರುತ್ತಿತ್ತು. ಈ ಮೇಳಕ್ಕಾಗಿ ರವೀಂದ್ರರ ಅಣ್ಣ ಭಾರತೀರ ಜಯ ಎಂಬ ರಾಷ್ಟ್ರಗೀತೆಯನ್ನು ಬರೆದರು. ಲಾರ್ಡ್ ಲಿಟ್ಟನ್ ಅವರ ದರ್ಬಾರಿನ ಕಾಲದಲ್ಲಿ ಇವರು ಒಂದು ಪದ್ಯವನ್ನು ಬರೆದರು. ಕವಿಯ ಅಣ್ಣ ಜ್ಯೋತಿರಿಂದ್ರನು ಒಂದು ರಾಜಕೀಯ ಸಭೆಯನ್ನು ಏರ್ಪಡಿಸಿದ್ದನು. ಹುಡುಗನಾಗಿದ್ದರೂ ರವೀಂದ್ರರು ಅಲ್ಲಿ ಸದಸ್ಯರು. ಕೆಲಸ ಎಷ್ಟೇ ಆದರೂ ಆಗದಿದ್ದರೂ ಸಭೆಯಲ್ಲಿ ಎಲ್ಲರೂ ದೇಶ ಪ್ರೇಮ ಎಂಬ ಭಾವನೆಯಲ್ಲಿ ಪಳಗಿದರು. ದೇಶೀಯವಾಗಿರಬೇಕೆಂದು ಈ ಸಭೆಯವರು ಷರಾಯಿಗೆ ಮುಂದುಗಡೆ ಧೋತ್ರದ ಹಾಗೆ ಕಾಣುವ ಒಂದು ಪಟ್ಟಿಯನ್ನು ಹೊಲಿಸಬೇಕೆಂದು ಗೊತ್ತುಮಾಡಿಕೊಂಡಿದ್ದರಂತೆ. ಈ ಸಭೆ ದೇಶದ ಕೈಗಾರಿಕೆಗಳನ್ನು ಬದುಕಿಸುವ ವಿಷಯವನ್ನೂ ಯೋಚಿಸುತ್ತಿತ್ತು.

ಇಷ್ಟರಲ್ಲೇ ಜ್ಯೋತಿರಿಂದ್ರರು ಭಾರತೀ ಎಂಬ ಪತ್ರಿಕೆಯನ್ನು ಆರಂಭಮಾಡಿದರು. ರವೀಂದ್ರರಿಗೆ ಆಗ ಹದಿನಾರು ವರ್ಷ ವಯಸ್ಸು. ಅಣ್ಣ ಈತನನ್ನು ಸಂಪಾದಕ ಮಂಡಲಿಯಲ್ಲಿ ಸೇರಿಸಿಕೊಂಡರು. "ಇದಕ್ಕೆ ಹಿಂದೆ ನನ್ನ ತಾರುಣ್ಯದ ಡಂಭದಲ್ಲಿ ನಾನು ಮೇಘನಾದವಧ ಕಾವ್ಯದ ಒಂದು ವಿಮರ್ಶೆಯನ್ನು ಬರೆದಿದ್ದೆನು. ಹಣ್ಣಾಗದ ಮಾವಿನಲ್ಲಿ ಹುಳಿ ಹೇಗೆ ಮುಖ್ಯ ಲಕ್ಷಣವೋ ಹಾಗೆ ಪಕ್ವವಾಗದ ವಿಮರ್ಶಕನಲ್ಲಿ ಬೈಗುಳು ಮುಖ್ಯ. ಇತರ ಗುಣಗಳಿಲ್ಲದಿರುವಾಗ ಚುಚ್ಚುವ ಗುಣ ಕೂರಾಗಿರುವಂತೆ ಕಾಣುತ್ತದೆ. ಆ ಅಮರ ಕಾವ್ಯದ ಮೇಲೆ ನಾನು ಹೀಗೆ ಗೆರೆಗಳನ್ನು ಎಳೆದು ಅಮರತೆಯನ್ನು ಸಾಧಿಸಲು ಯತ್ನಮಾಡಿದ್ದೆನು. ಈ ಅಹಂಕಾರದ ವಿಮರ್ಶೆಯೇ ಭಾರತೀ ಪತ್ರಿಕೆಯಲ್ಲಿ ಬಂದ ನನ್ನ ಮೊದಲನೆಯ ಲೇಖನ." ಇದೇ ಪತ್ರಿಕೆಯಲ್ಲಿ ಮೊದಲನೆಯ ವರ್ಷದಲ್ಲಿಯೇ ಇವರು ಕವಿಕಾಹಿನಿ

ಎಂಬ ಒಂದು ಕಾವ್ಯವನ್ನು ಪ್ರಕಟಿಸಿದರು. ಇಷ್ಟು ಚಿಕ್ಕ ವಯಸ್ಸಿನ ಬರವಣಿಗೆ ಪ್ರಕಟನೆಗೆ ತಕ್ಕುದಾಗಿರಲಾರದೆಂದು ರವೀಂದ್ರನಾಥರು ಹೇಳಿದಾರೆ. "ಆಗ ಬರೆದ ಬರವಣಿಗೆಯನ್ನು ನೆನೆದರೆ ಎಷ್ಟು ಜಂಭದ ಬರವಣಿಗೆ ಎಂದು ನಾಚಿಕೊಳ್ಳುತ್ತೇನೆ. ಆದರೆ ಇನ್ನೊಂದು ದೃಷ್ಟಿಯಿಂದ ಆ ಬರವಣಿಗೆಯಲ್ಲಿ ಕಂಡ ಉತ್ಸಾಹ ಬಹಳ ಅಮೂಲ್ಯವಾದುದು" ಎಂದು ಸೂಚಿಸಿದ್ದಾರೆ.

## ೧೮. ಇಂಗ್ಲೆಂಡ್

ಈ ಕಾಲಕ್ಕೆ ಇವರ ಅಣ್ಣ ಅಹಮುದಾಬಾದಿನಲ್ಲಿ ಜಡ್ಜಾಗಿದ್ದವರು ಇವರನ್ನು ಅಲ್ಲಿಗೆ ಕಳಿಸಿಕೊಂಡರು. ಅಲ್ಲಿ ಕೆಲವು ಕಾಲವಿದ್ದು ಅನೇಕ ತೆರದ ಇಂಗ್ಲೀಷ್ ಪುಸ್ತಕಗಳನ್ನು ಓದಿ ಇವರು ಇಂಗ್ಲೆಂಡಿಗೆ ಹೋದರು. ಪ್ರಯಾಣವನ್ನು ಕುರಿತು ಭಾರತಿಗೆ ಇವರು ಪತ್ರಗಳನ್ನು ಬರೆದರು. ಇಂಗ್ಲೆಂಡಿನಲ್ಲಿ ಕವಿ ಅಷ್ಟೇನೂ ಸುಖವಾಗಿರಲಿಲ್ಲ. ಒಂದು ಸಂದರ್ಭದಲ್ಲಿ ಮಗ್ನತಾರಿ ಎಂಬ ಒಂದು ಕವಿತೆಯನ್ನು ಬರೆದರು. ಇಂಗ್ಲೆಂಡಿನಲ್ಲಿ ನಡೆದ ಸಂಗತಿಗಳಲ್ಲಿ ಮೂರನ್ನು ಇವರು ಮುಖ್ಯವಾಗಿ ಹೇಳುತ್ತಾರೆ. ಇವರು ಡಾಕ್ಟರ್ ಸ್ಕಾಟ್ ಎನ್ನುವವರ ಮನೆಯಲ್ಲಿ ಇದ್ದರು. ಡಾಕ್ಟರ ಹೆಂಡತಿ ಡಾಕ್ಟರ ವಿಷಯದಲ್ಲಿ ಹಿಂದೂ ಸಂಸಾರಗಳಲ್ಲಿ ಒಳ್ಳೆಯ ಹೆಂಡತಿ ಗಂಡನ ವಿಷಯದಲ್ಲಿ ತೋರುವ ಪ್ರೀತಿಭಕ್ತಿಗಳನ್ನು ತೋರುತ್ತಿದ್ದರು ಎನ್ನುವುದು ಒಂದು. ಕೂಲಿಯವರಿಗೆ ಹೆಚ್ಚಾಗಿ ಕೂಲಿ ಕೊಟ್ಟರೆ ಅವರು ಬಂದು ಕೈತಪ್ಪಿ ಕೊಟ್ಟಿರಾ ಎಂದು ಕೇಳುತಿದ್ದರಂತೆ; ಪರದೇಶದ ತರುಣರಾದರೂ ಇವರಿಗೆ ಅಂಗಡಿಯವರು ನಂಬಿ ಸಾಲ ಕೊಡುತ್ತಿದ್ದರಂತೆ: ಇದು ಎರಡನೆಯದು. ಇಂಡಿಯಾದೇಶದಲ್ಲಿ ಕೆಲಸದಲ್ಲಿದ್ದು ತೀರಿಹೋಗಿದ್ದ ಒಬ್ಬ ಫರಂಗಿಯವನ ಹೆಂಡತಿ ಇವರನ್ನು ಹಾಡುವುದಕ್ಕೆಂದು ಒಂದುಸಲ ಬರಮಾಡಿಕೊಂಡು, ಊಟಕ್ಕೇನು ಗತಿ, ಮಲಗುವುದು ಎಲ್ಲಿ, ಎಂದು ಯೋಚಿಸದೆ ಅನಾದರಣೆ ಮಾಡಿದರಂತೆ: ಇದು ಮೂರನೆಯದು. ಹೀಗೆ ಮಾಡಿದಳೆಂದು ಸ್ಕಾಟರ ಮನೆಯಲ್ಲಿ ಹೇಳಿದಾಗ ಅವರು ಇಂಗ್ಲೀಷಿನವರೆಲ್ಲ ಹೀಗೆ ಎಂದು ತಿಳಿಯಬೇಡ, ನಿಮ್ಮ ಸೀಮೆಯ ಉಪ್ಪು ತಿಂದದ್ದರಿಂದ

ಅವರು ಹಾಗೆ ಮಾಡಿದರು, ಎಂದು ಹೇಳಿದರಂತೆ. ಇಲ್ಲಿ ಇವರಿಗೆ ಲೋಕೆನ್ ಪಾಲಿತ್ ಎನ್ನುವವರ ಸಹವಾಸದಲ್ಲಿ ಬಂಗಾಳಿ ಭಾಷೆಯ ಸ್ವರೂಪ ಪರಿಚಯಕ್ಕೆ ಅವಕಾಶವಾಯಿತು.

೧೯. ಪ್ರಭಾತ ಸಂಗೀತ

ಇವರು ಇಂಗ್ಲೆಂಡಿನಲ್ಲಿರುವಾಗ ಭಗ್ನ ಹೃದಯ ಎಂಬ ಕಾವ್ಯವನ್ನು ಆರಂಭಿಸಿದರು; ಹಿಂದಕ್ಕೆ ಬಂದಮೇಲೆ ವಾಲ್ಮೀಕಿ ಪ್ರತಿಭಾ ಎಂಬ ಕಾವ್ಯವನ್ನು ಬರೆದರು. ಕಾಲಮೃಗಯಾ ಎನ್ನುವುದು ಒಂದು ಸಂಗೀತ ನಾಟಕ; ಮಾಯಾರ್ ಖೇಲ ಎನ್ನುವುದು ಇನ್ನೊಂದು. ಪ್ರಭಾತ ಸಂಗೀತ ಸಂಧ್ಯಾ ಸಂಗೀತ ಎನ್ನುವ ಕಾವ್ಯಗಳನ್ನು ಇವರು ಈ ಕಾಲದಲ್ಲಿ ಬರೆದರು. ಆಗ್ಗೆ ಸಂಗೀತದ ವಿಷಯದಲ್ಲಿ ತಮ್ಮ ಮನಸ್ಸು ಬಹಳ ವ್ಯಾಯಾಮ ಮಾಡುತಿದ್ದಿತೆಂದು ಹೇಳುತ್ತಾರೆ. ಇವರ ಕಾವ್ಯಗಳಲ್ಲಿ ಅರ್ಥ ಸ್ಪಷ್ಟವಾಗಿಲ್ಲವೆಂದೂ ಕನಸಿನ ವ್ಯಾಪ್ತಿ ಹೆಚ್ಚೆಂದೂ ಜನರು ಹೇಳುತಿದ್ದರಂತೆ; ಆದರೂ ಅವುಗಳನ್ನು ಕೆಲವರು ಬಹಳ ಮೆಚ್ಚಿಕೊಂಡರು. ಹೀಗೆ ಮೆಚ್ಚಿಕೊಂಡವರಲ್ಲಿ ಬಂಕಿಂಚಂದ್ರ ಚಟ್ಟೋಪಾಧ್ಯಾಯರು ಒಬ್ಬರು. ಇದೇ ಕಾಲದಲ್ಲಿ ಇವರು ವಿವಿಧ ಪ್ರಬಂಧ ಎಂಬ ಲೇಖನಗಳನ್ನು ಬರೆದರು; ಭಾವು ಠಾಕೂರಣೀರ ಹಾಟ್ ಎಂಬ ಕಥೆಯನ್ನು ಆರಂಭಿಸಿದರು. ಈ ಸಮಯದಲ್ಲಿ ಇವರಿಗೆ ಒಂದು ರೀತಿಯ ಆತ್ಮವಿಕಾಸ ಉಂಟಾದಂತೆ ತಿಳಿಯುತ್ತದೆ. ನಾನು ಎನ್ನುವುದು ಹಗಲಿನ ಬೆಳಕಂತೆ ಪ್ರಪಂಚದ ಸೊಗಸನ್ನು ಮರೆಯಿಸುತ್ತದೆ, ಆ ಭಾವ ಕಡಮೆಯಾದರೆ ಸಂಜೆಯ ಬೆಳಕಿನಲ್ಲಿ ಪ್ರಪಂಚ ಸೊಗಸುವಂತೆ ಎಲ್ಲ ಬಾಳೂ ಒಂದು ಸೊಗಸಿನಿಂದ ಕಾಣುತ್ತದೆ, ಎಂದು ತೋರಿದ್ದೇ ಈ ವಿಕಾಸದ ಮುಖ್ಯ ತತ್ವ. ಇದರಿಂದ ಇವರಿಗೆ ಸಾಮಾನ್ಯ ಜೀವನದ ಸಾಮಾನ್ಯ ವಿಷಯದಲ್ಲಿಯೂ ಒಂದು ಹೊಸ ರುಚಿ ತೋರಿತು. ಈ ವಿಕಾಸದಿಂದ ಉಂಟಾದ ಬಿಡುಗಡೆಯನ್ನು ಕವಿ ನಿರ್ಝರಿಯ ಸ್ವಪ್ನಭಂಗ ಎಂಬ ಹೆಸರಿನ ಕಾವ್ಯದಲ್ಲಿ ರೂಪುಗೊಳಿಸಿದರು. ಡಾರ್ಜಿಲಿಂಗ್ ಎಂಬ ಸ್ಥಳಕ್ಕೆ ಇಷ್ಟರಲ್ಲೇ ಹೋದಾಗ ಪ್ರತಿಧ್ವನಿ ಎಂಬ ವಿಷಯದಲ್ಲಿ ಒಂದು ಪದ್ಯವನ್ನು ಬರೆದರು.

ಇದೇ ಕಾಲದಲ್ಲಿ ಇವರು ಆಲೋಚನಾ ಎಂಬ ಇನ್ನು ಕೆಲವು ಪ್ರಬಂಧಗಳನ್ನು ಪ್ರಕಟಿಸಿದರು. ಆಗ್ಗೆ ಬಂಗಾಳದಲ್ಲಿ ಸಾಹಿತ್ಯ ಪರಿಷತ್ತು ಏರ್ಪಾಡಾಯಿತು. ಆದರೆ ಇದರಲ್ಲಿ ಬಹಳ ಕೆಲಸ ನಡೆಯಲಿಲ್ಲ. ಅದರ ಚಾಲಕರಾದ ರಾಜೇಂದ್ರಲಾಲ್ ಮಿತ್ರರ ಹತ್ತಿರ ರವೀಂದ್ರರು ಬಹಳವಾಗಿ ಹೋಗಿಬರುತ್ತಿದ್ದರು. ಆಗ್ಗೆ ಇವರ ಅಣ್ಣನಿಗೆ ಕಾರ್ವಾರಕ್ಕೆ ವರ್ಗವಾಯಿತು. ಇವರ ಮನೆಯವರು ಕೆಲವರು ಅಲ್ಲಿಗೆ ಹೋಗಿ ಸ್ವಲ್ಪಕಾಲ ಕಳೆದರು. ಇಲ್ಲಿ ಇವರು ಕೆಲವು ಪದ್ಯಗಳನ್ನೂ ಪ್ರಕೃತಿಯ ಪ್ರತಿಶೋಧ ಎಂಬ ನಾಟಕವನ್ನೂ ಬರೆದರು. ಕಲ್ಕತ್ತೆಗೆ ಹಿಂದಕ್ಕೆ ಬಂದಮೇಲೆ ಛವಿಒ ಗಾನ್ ಎಂಬ ಒಂದು ಗ್ರಂಥವನ್ನು ಪ್ರಕಟಿಸಿದರು. ಬಾಲಕ ಎಂಬ ಪತ್ರಿಕೆಗೆ ರಾಜರ್ಷಿ ಎಂಬ ಒಂದು ಕಥೆಯನ್ನು ಬರೆದರು. ಬಂಕಿಂಚಂದ್ರ ಛಟರ್ಜಿಯವರು ರವೀಂದ್ರರ ವಿಷಯದಲ್ಲಿ ಬಹಳ ವಿಶ್ವಾಸಿಗಳಾಗಿದ್ದರು. ಹಿಂದೂ ಮತದ ಪುನರುಜ್ಜೀವನದಲ್ಲಿ ಬಂಕಿಂಚಂದ್ರರು ಮಾಡಿದ ಸಾಹಸವನ್ನು ಕುರಿತು ರವೀಂದ್ರರು ಟೀಕಿಸಲಾಗಿ ಇವರಿವರಿಗೆ ಸ್ವಲ್ಪ ಮನಸ್ತಾಪವುಂಟಾಯಿತು. ಆದರೆ ಬಂಕಿಂಚಂದ್ರರು ಈ ವೈಮನಸ್ಯವನ್ನು ಬೇಗನೆ ಮರೆತರಂತೆ. ಈ ಕಾಲದಲ್ಲಿ ಠಾಕೂರರ ಮನೆಯಲ್ಲಿ ಒಂದು ಸಾವು ಆಗಿ ಇವರು ಮರಣದ ವಿಷಯ ಯೋಚನೆ ಮಾಡುವುದಕ್ಕೆ ಕಾರಣವಾಯಿತು. ಜೀವನವೆನ್ನುವುದನ್ನು ನಮ್ಮ ಕೈಗೆ ಸಿಕ್ಕಿದ ಒಂದು ವಸ್ತು ಎಂದು ಎಣಿಸಬಹುದು; ನಮ್ಮನ್ನು ಬಂಧಿಸಿರುವ ಒಂದು ಸೆರೆಮನೆಯೆಂದು ಎಣಿಸಬಹುದು. ಮೊದಲನೆಯ ದೃಷ್ಟಿಯಿಂದ ಸಾವು ಕೆಟ್ಟದಾಗಿ ಕಾಣುತ್ತದೆ; ಎರಡನೆಯ ದೃಷ್ಟಿಯಿಂದ ಅದು ಮಂಗಳ. ಇದು ಇವರಿಗೆ ಆಗ ತೋರಿತಂತೆ. ಇದಾದಮೇಲೆ ಕವಿ ಕಾರಿಒ ಕೋಮಲ್ ಎಂಬ ಪದ್ಯಗ್ರಂಥವನ್ನು ಪ್ರಕಟಿಸಿದರು. ಇದಕ್ಕೆ ಮೊದಲೇ ಕವಿವರರಿಗೆ ಮದುವೆಯಾಗಿತ್ತು.

## ೨೦. ವಿಕಾಸ

ಪ್ರಾಪ್ತವಯಸ್ಕನಾದ ಮಗನನ್ನು ದೇವೇಂದ್ರನಾಥರು ಜಹಗೀರು ಗ್ರಾಮದ ಮೇಲುವಿಚಾರಣೆಗೆ ಕಳುಹಿಸಿಕೊಟ್ಟರು. ಅಲ್ಲಿಯ ಇವರ

ಜೀವನದ ವಿಷಯ ಇವರ ಪತ್ರಗಳಿಂದ ಸ್ವಲ್ಪಮಟ್ಟಿಗೆ ಗೊತ್ತಾಗುತ್ತದೆ. ವಿಶಾಲವಾದ ಬೆಳಸಿನ ನೆಲ; ತುಂಬಿ ಹರಿಯುವ ಹೊಳೆ, ಅದರ ಮೇಲೆ ಜನರೊಂದಿಗೆ ಸಾಮಾನಿನೊಂದಿಗೆ ಹೋಗುತ್ತಿರುವ ದೋಣಿಗಳು; ಏನೂ ಅರಿಯದ ಹಳ್ಳಿಯ ಜನ. ಇದು ಇವರ ಆಗಿನ ಜೀವನದ ಚಿತ್ರ. ಗ್ರಾಮದಲ್ಲಿ ವಾಸವಾಗಿದ್ದದರಿಂದ ಇವರಿಗೆ ಜನದ ಜೀವನ ಚೆನ್ನಾಗಿ ತಿಳಿಯಿತು. ಹಳ್ಳಿಯ ಮಕ್ಕಳು ಆಡುವ ಆಟ, ಅಲ್ಲಿಯ ಪೋಸ್ಟುಮಾಸ್ಟರು ಹೇಳುವ ಕತೆ, ಅಲ್ಲಿಯ ವಿದ್ಯಾರ್ಥಿಗಳು ವಿಜ್ಞಾಪನಾ ಪತ್ರಗಳನ್ನು ಬಾಯಿಪಾಠ ಹೇಳುವುದು, ಅಲ್ಲಿಯ ಮ್ಯಾಜಿಸ್ಟ್ರೇಟರು ಜಮಾಬಂದಿ ಮುಂತಾದ ಕೆಲಸವನ್ನು ಮಾಡುವುದು, ನಮ್ಮ ಜನರು ಬಂದು ಕುಳಿತು ಆಡುವುದಕ್ಕೆ ಮಾತಿಲ್ಲದೆ ಹೋಗುವುದಕ್ಕೆ ತಿಳಿವಿಲ್ಲದೆ ಕಾಲಹರಣ ಮಾಡುವುದು: ಈ ವಿಷಯಗಳನ್ನು ಕುರಿತ ಹಲವು ಮಾತು ಈ ಪತ್ರಗಳಲ್ಲಿ ಬರುತ್ತವೆ. ಈ ಕಾಲದಲ್ಲಿ ಇವರು ಚಿತ್ರಾಂಗದಾ ನಾಟಕವನ್ನು ಬರೆದರು. ಹತ್ತಾರು ಸಣ್ಣ ಕಥೆಗಳು, ವಂಗ ಭಾಷೆಯಲ್ಲಿ ಚಿತ್ರಾ ಎಂಬ ಹೆಸರಿನಿಂದ ಪ್ರಕಟವಾದ ಒಂದು ಕಾವ್ಯಗುಚ್ಛ, ಇವೂ ಮತ್ತು ಮಾಲಿನಿ ಕಚ ದೇವಯಾನಿ ಎಂಬ ದೃಶ್ಯಗಳೂ ಇದೇ ಕಾಲದಲ್ಲಿ ರಚಿಸಲ್ಪಟ್ಟುವು; ಸೋನಾರ್ ತರೀ, ಚೈತಾಲಿ ಎಂಬ ಕಾವ್ಯಗುಚ್ಛಗಳೂ ಈಗಲೇ ಸಿದ್ಧವಾದುವು. ೧೮೯೬ ರಿಂದ ೧೯೦೦ರ ವರೆಗೆ ಇವರು ರಾಜಕೀಯ ಕಾರ್ಯಗಳಲ್ಲಿ ಬಹಳ ಶ್ರದ್ಧೆ ವಹಿಸಿ ಕೆಲಸ ಮಾಡಿದರು. ಈ ವರ್ಷಗಳಲ್ಲಿ ಸಾಹಿತ್ಯ ಎಂಬ ಉಪನ್ಯಾಸಗಳನ್ನೂ ಕಲ್ಪನಾ, ಕಥಾ, ಕಾಹಿನೀ, ಕ್ಷಣಿಕಾ, ಕಣಿಕಾ, ನೈವೇದ್ಯ, ಸತಿ, ನರಕವಾಸ, ಗಾಂಧಾರಿ, ಕರ್ಣಕುಂತಿ ಎಂಬ ಗ್ರಂಥಗಳನ್ನೂ ರಚಿಸಿದರು. ಕಥಾ, ಕಾಹಿನಿ ಎಂಬುವು ದೇಶದ ಚರಿತ್ರೆಯಿಂದ ಜನದ ಜೀವನದಿಂದ ತೆಗೆದುಕೊಂಡ ಕಥೆಗಳೂ ಉಪಾಖ್ಯಾನಗಳೂ. ನೈವೇದ್ಯ ಎನ್ನುವುದು ಭಕ್ತಿಗೀತ ಗುಚ್ಛ. ೧೯೦೧ ರಿಂದ ೧೯೦೭ ರ ವರೆಗೆ ಇವರು ಅನೇಕ ರಾಜಕೀಯ ಭಾಷಣಗಳನ್ನು ಮಾಡಿದರು. ೧೯೦೨ ರಲ್ಲಿ ಶಾಂತಿನಿಕೇತನದಲ್ಲಿ ತಮ್ಮ ಹೊಸ ರೀತಿಯ ಶಾಲೆಯನ್ನು ಆರಂಭಿಸಿದರು. ಈ ಮಧ್ಯೆ ಇವರ ಪತ್ನಿ ತೀರಿಹೋದರು. ಇವರು ಅವರ ನೆನಪಾಗಿ ಪದ್ಯಗಳನ್ನು ಬರೆದು ಸ್ಮರಣ ಎಂಬ ಕಾವ್ಯಗುಚ್ಛದಲ್ಲಿ ಪ್ರಕಟಿಸಿದರು. ಈ ಕಾಲದಲ್ಲಿ ಮುರಿದ ನೌಕ

ಎಂಬ ಕಥೆಯನ್ನೂ, ಸ್ವದೇಶ ಸಂಕಲ್ಪ ಎಂಬ ಉಪನ್ಯಾಸವನ್ನೂ, ಖೇಯ ಎಂಬ ಭಕ್ತಿ ಗೀತಗಳನ್ನೂ ಪ್ರಕಟಿಸಿದರು. ಏಳು ವರ್ಷದ ರಾಜಕೀಯ ಕಾರ್ಯದಿಂದ ಠಾಕೂರರಿಗೆ ರಾಜಕೀಯರ ದಾರಿಯ ವಿಷಯದಲ್ಲಿ ಬೇಸರ ಹುಟ್ಟಿತು. ಅವರು ಎಲ್ಲವನ್ನೂ ಬಿಟ್ಟು ೧೯೦೮ ರಲ್ಲಿ ಶಾಂತಿನಿಕೇತನದಲ್ಲಿ ಮೌನವೃತ್ತಿಯಲ್ಲಿ ಕುಳಿತು ಅಲ್ಲಿ ಮೊದಲು ಆರಂಭಿಸಿದ್ದ ಪಾಠಶಾಲೆಯನ್ನು ಅಭಿವೃದ್ಧಿಗೆ ತರುವುದರಲ್ಲಿ ನಿರತರಾದರು. ೧೯೦೮ರಲ್ಲಿ ಶಾರದೋತ್ಸವ, ೧೯೦೯ರಲ್ಲಿ ಗೀತಾಂಜಲಿ, ೧೯೧೦ರಲ್ಲಿ ರಾಜಾ, ೧೯೧೨ ರಲ್ಲಿ ಅಂಚೆಯ ಮನೆ ಎಂಬ ಗ್ರಂಥಗಳನ್ನು ರಚಿಸಿದರು. ಇದೇ ಕಾಲದಲ್ಲಿ ಇವರು ಶಾಂತಿನಿಕೇತನದಲ್ಲಿ ಕೊಟ್ಟ ಉಪನ್ಯಾಸಗಳನ್ನೆಲ್ಲ ಸೇರಿಸಿ ಪ್ರಕಟಿಸಿದರು.

## ೨೧. ಪ್ರಖ್ಯಾತಿ

ಕವಿವರರು ೧೯೧೨ರಲ್ಲಿ ಇನ್ನೊಂದು ಸಲ ಇಂಗ್ಲೆಂಡಿಗೆ ಹೋದರು. ಅಲ್ಲಿಗೆ ಹೋಗುತ್ತ ತಮ್ಮ ಗೀತಗಳಲ್ಲಿ ಕೆಲವನ್ನು ಇಂಗ್ಲೀಷಿಗೆ ಭಾಷಾಂತರ ಮಾಡಿ ಇಂಗ್ಲೆಂಡಿನಲ್ಲಿ ಅವನ್ನು ಕೆಲ ಮಿತ್ರರಿಗೆ ತೋರಿಸಿದರು. ಆ ಪದ್ಯಗಳೇ ಆಮೇಲೆ ಇಂಗ್ಲೀಷಿನಲ್ಲಿ ಗೀತಾಂಜಲಿ ಎಂಬ ಹೆಸರಿನಿಂದ ಪ್ರಕಟವಾದದ್ದು. ಇಂಗ್ಲೆಂಡಿನ ಸಾಹಿತ್ಯಾಭಿಮಾನಿಗಳು ಠಾಕೂರರ ಪರಿವರ್ತಿತ ಗೀತಗಳನ್ನು ಬಹಳವಾಗಿ ಮೆಚ್ಚಿಕೊಂಡರು. ಅದುವರೆಗೆ ಬಹುಮಟ್ಟಿಗೆ ಬಂಗಾಳಿಗಳಿಗೆ, ಸ್ವಲ್ಪಮಟ್ಟಿಗೆ ಮಾತ್ರ ಬೇರೆಯ ಜನಗಳಿಗೆ, ತಿಳಿದಿದ್ದ ಇವರ ಹೆಸರು ಇಂಗ್ಲೀಷಿನ ಜನಾಂಗಗಳಲ್ಲೆಲ್ಲ ಪ್ರಸಿದ್ಧವಾಯಿತು. ಈ ಗ್ರಂಥಕ್ಕಾಗಿ ಇವರಿಗೆ ಸ್ವೀಡನ್ ದೇಶದ ಸಾಹಿತ್ಯ ಮಂಡಲಿಯವರಿಂದ ವರ್ಷ ವರ್ಷವೂ ಅತ್ಯುತ್ತಮ ಸಾಹಿತ್ಯಕ್ಕೆ ದೊರೆಯುವ ವರ್ಷ ಶುಲ್ಕವೊಂದು ಬಂದಿತು. ಕಲಾಭಿಜ್ಞರ ಮೆಚ್ಚುಗೆಯಿಂದ ಇವರಿಗೆ ಬಂದಿದ್ದ ಸ್ಥಾನವು ಈ ಬಹುಮತಿಯಿಂದ ಸ್ಥಿರವಾಯಿತು; ಮತ್ತು ಲೋಕಕ್ಕೆಲ್ಲ ಪ್ರಕಟವಾಯಿತು. ಬ್ರಿಟಿಷ್ ಸರ್ಕಾರದವರು ೧೯೧೫ನೆಯ ಇಸವಿಯಲ್ಲಿ ಇವರಿಗೆ ಭಾರತವರ್ಷದ ಸಾಹಿತ್ಯದ ಹಿರಿಮೆಯ ಪ್ರತಿನಿಧಿಯೆಂದು 'ನೈಟ್' ಎಂಬ ಗೌರವವನ್ನು ದಯಪಾಲಿಸಿದರು. ಅದೇ ವರ್ಷ ಇವರ ಬಲಾಕಾ ಎಂಬ ಗ್ರಂಥವೂ, ೧೯೧೬ರಲ್ಲಿ ಫಾಲ್ಗುಣಿ ಎಂಬ ಗ್ರಂಥವೂ ಪ್ರಕಟವಾದುವು.

ಮನೆಯ ಒಳಗೆ ಮನೆಯ ಹೊರಗೆ ಎಂಬ ಕತೆಯೂ ಈ ಕಾಲದಲ್ಲಿಯೇ ಪ್ರಕಟವಾಯಿತು. ನೋಬೆಲ್ ಶುಲ್ಕವನ್ನು ಪಡೆಯುವಂಥ ಮಹಿಮೆಯ ಈ ಕವಿವರರನ್ನು ಅನೇಕ ದೇಶಗಳ ಪ್ರಮುಖರು ಬರಮಾಡಿಕೊಳ್ಳಲು ಅಪೇಕ್ಷಿಸಿದರು. ಠಾಕೂರರು ಆಗ ಕೊಂಚ ಕಾಲದ ಮಟ್ಟಿಗೆ ಜಪಾನ್ ಮತ್ತು ಅಮೆರಿಕಾಕ್ಕೆ ಹೋಗಿ ಹಿಂತಿರುಗಿದರು. ಪಲಾತಕಾ ಎಂಬ ಕಾವ್ಯ ಗುಚ್ಛವು ೧೯೧೮ರಲ್ಲಿ ಪ್ರಕಟವಾಯಿತು. ೧೯೧೮ನೆಯ ವರ್ಷದ ಪಂಜಾಬಿನ ಗಲಭೆ, ಅಮೃತಸರದ ಜಾಲಿಯನ್‌ವಾಲ ಬಾಗ್ ಕೊಲೆ, ಇವುಗಳ ಕಾರಣ ದಿಂದ ಇವರು ಜುಗುಪ್ಸೆಗೊಂಡು ತಮ್ಮ ಅಸಮ್ಮತಿಯನ್ನು ಸೂಚಿಸು ವುದಕ್ಕಾಗಿ ಐದು ವರ್ಷದ ಹಿಂದೆ ಸರ್ಕಾರದಿಂದ ಬಂದಿದ್ದ "ನೈಟ್" ಪದವಿಯನ್ನು ೧೯೧೯ರಲ್ಲಿ ಪರಿತ್ಯಜಿಸಿದರು. ೧೯೨೦–೨೧ ಈ ವರ್ಷಗಳಲ್ಲಿ ಕವಿವರರು ಇಂಗ್ಲೆಂಡಿಗೆ ಹೋಗಿ ಅಲ್ಲಿಂದ ಫ್ರಾನ್ಸ್, ಡೆನ್‌ಮಾರ್ಕ್, ಸ್ವೀಡನ್, ಜರ್ಮನಿ ಮುಂತಾದ ದೇಶಗಳಲ್ಲೆಲ್ಲ ಉಪನ್ಯಾಸಗಳನ್ನು ಕೊಟ್ಟು ಸಂಸ್ಕೃತರಾದ ಎಲ್ಲ ಜನಗಳ ಮನ್ನಣೆಯನ್ನು ಪಡೆದು ಭಾರತಭೂಮಿಗೆ ಕೀರ್ತಿಯನ್ನು ತಂದರು. ಪ್ರಯಾಣದ ಕಾಲದಲ್ಲಿ ಇವರು ಆಗಾಗ ಬರೆದ ಪತ್ರಗಳು ಒಂದು ಗ್ರಂಥವಾಗಿ ಪ್ರಕಟವಾದುವು. ಈ ಪ್ರಯಾಣದಿಂದ ಹಿಂದಕ್ಕೆ ಬಂದಮೇಲೆ ಇವರು ಶಾಂತಿನಿಕೇತನದಲ್ಲಿ ಹಿಂದೆ ಆರಂಭಿಸಿದ್ದ ಶಾಲೆಯನ್ನು ಒಂದು ವಿಶ್ವವಿದ್ಯಾನಿಲಯವನ್ನಾಗಿ ಮಾಡಿ ಅಲ್ಲಿಗೆ ಎಲ್ಲ ದೇಶಗಳ ವಿದ್ವಾಂಸರೂ ಬಂದು ಸಹಾಯಮಾಡುವಂತೆ ಏರ್ಪಾಡು ಮಾಡಿದರು. ಈ ವಿಶ್ವವಿದ್ಯಾನಿಲಯಕ್ಕೆ ವಿಶ್ವಭಾರತಿ ಎಂದು ಹೆಸರಿಟ್ಟರು. ೧೯೨೧ನೆಯ ವರ್ಷದ ಅಸಹಕಾರದ ಚಳವಳಿಯಲ್ಲಿ ಠಾಕೂರರಿಗೆ ವಿಶ್ವಾಸ ವಿರಲಿಲ್ಲ. ಈ ಸಂದರ್ಭದಲ್ಲಿ ಇವರಿಗೂ ಮಹಾತ್ಮಾ ಗಾಂಧಿಯವರಿಗೂ ಕೆಲವು ಚರ್ಚೆಗಳು ನಡೆದುವು. ೧೯೦೭ರಲ್ಲಿ ಹೇಗೋ ಹಾಗೆ ಈ ಸಂದರ್ಭ ದಲ್ಲಿಯೂ ಇವರು ದೇಶೀಯ ರಾಜಕೀಯದಿಂದ ದೂರನಿಂತರು. ೧೯೨೨ರಲ್ಲಿ ಲಿಪಿಕಾ ಎಂಬುದೊಂದು ಕಾವ್ಯಗುಚ್ಛವೂ ಮುಕ್ತಧಾರಾ ಎಂಬ ಒಂದು ನಾಟಕವೂ ಪ್ರಕಟವಾದುವು. ೧೯೨೩ ರಿಂದ ೨೫ರ ವರೆಗೆ ವಿಶ್ವಭಾರತಿಯ ಸಂಬಂಧದ ಕೆಲಸ ಮತ್ತು ಹಲವು ವಿಧದ ಇತರ ಬರವಣಿಗೆ ತುಂಬ ನಡೆಯಿತು; ರಕ್ತಕರವೀರ ಎಂಬ ನಾಟಕವೂ, ಪೂರವೀ ಮಾಹುವಾ ಎಂಬ

ಕವಿತಾಗುಚ್ಛಗಳೂ ಅಚ್ಚಾದುವು. ಅದರ ಈಚೆಗೆ ಕವಿವರರ ದೇಹಸ್ಥಿತಿ ಹಲವುವೇಳೆ ಸರಿ ಇಲ್ಲದೆ ಹೋಯಿತು. ೧೯೨೮ರಲ್ಲಿ ಇವರನ್ನುಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದವರು ಹಿಬರ್ಟ್ ಲೆಕ್ಚರ್ಸ್ ಎಂಬ ಉಪನ್ಯಾಸ ಮಾಲೆಗೆ ಉಪನ್ಯಾಸಕಾರರಾಗಿ ಆಹ್ವಾನಿಸಿದರು. ಆಗ ಹೋಗುವುದಕ್ಕೆ ಆಗದೆ ಠಾಕೂರರು ತಮ್ಮ ಉಪನ್ಯಾಸಗಳನ್ನು ೧೯೩೦ರಲ್ಲಿ ಕೊಟ್ಟರು. ಈ ಉಪನ್ಯಾಸಗಳು ಮಾನವ ಧರ್ಮ ಎಂಬ ಹೆಸರಿನಿಂದ ಆಮೇಲೆ ಪ್ರಕಟ ವಾದುವು. ಈ ಸಮಯದಲ್ಲಿ ಕವಿ ಏಷ್ಯಾ ಖಂಡದ ಸಂಸ್ಕೃತಿಯ ಶೋಧನೆಗಾಗಿ ವಿದ್ವಾಂಸರೊಡನೆ ಬಲಿ ಜಾವಾ ದ್ವೀಪಗಳಿಗೆ ಹೋಗಿ ಬಂದರು. ೧೯೩೨ರಲ್ಲಿ ಇವರಿಗೆ ೭೦ ವರ್ಷ ತುಂಬಿತು. ನೋಬೆಲ್ ಶುಲ್ಕ ಬಂದ ಈಚೆಗೆ ಪ್ರಪಂಚದಲ್ಲೆಲ್ಲ ಪ್ರಸಿದ್ಧರಾದ ಇವರ ಈ ಹುಟ್ಟಿದ ಹಬ್ಬ ವನ್ನು ಎಲ್ಲ ದೇಶಗಳ ಇವರ ಸ್ನೇಹಿತರೂ ದೊಡ್ಡ ಉತ್ಸವದಂತೆ ನಡೆಯಿಸಿ ದರು. ಮಹಾತ್ಮಾ ಗಾಂಧಿಯವರು ಮೊದಲಾಗಿ ಭಾರತವರ್ಷದ ಪ್ರಮುಖರೂ, ರೋಮೆನ್ ರೋಲಂಡ್, ಐನ್‌ಸ್ಟೈನ್ ಪ್ರಮುಖರಾದ ವಿದೇಶ ವಿದ್ವಾಂಸರೂ ವಿಶ್ವಾಸವನ್ನೂ ಭಕ್ತಿಯನ್ನೂ ಸೂಚಿಸಿ ಲೇಖನ ಗಳನ್ನು ಕಳುಹಿಸಿದರು. ಇವೆಲ್ಲ ಸೇರಿ ಒಂದು ಪುಸ್ತಕ ಆಗಿದೆ. ಠಾಕೂರರು ಪರ್ಷಿಯಾ ಚಕ್ರವರ್ತಿಗಳ ಆಹ್ವಾನದಿಂದ ಆ ದೇಶಕ್ಕೆ ಹೋಗಿ ಕೆಲವು ಕಾಲವಿದ್ದು ಜನರ ಸ್ನೇಹವನ್ನು ಮಾಡಿಕೊಂಡು ಬಂದರು. ೧೯೩೩ರಲ್ಲಿ ಮಹಾತ್ಮಾ ಗಾಂಧಿಯವರು ಅಸ್ಪೃಶ್ಯತೆಯ ನಿವಾರಣಕ್ಕಾಗಿ ಕೈಗೊಂಡ ಅನಶನ ವ್ರತಗಳ ಸಂದರ್ಭದಲ್ಲಿ ಠಾಕೂರರು ಮಹಾತ್ಮರ ವಿಷಯದಲ್ಲಿ ಬಹಳ ಪ್ರೇಮದಿಂದ ನಡೆದುಕೊಂಡರು; ಮತ್ತು ಮಹಾತ್ಮರ ಉದ್ದೇಶದ ವಿಷಯದಲ್ಲಿ ತಮ್ಮ ಅನುಮತಿಯನ್ನು ಸೂಚಿಸಿ ಲೇಖನಗಳನ್ನು ಪ್ರಕಟಿಸಿದರು. ಮೊದಲ ಸಲ ಯೆರವಾಡದ ಸೆರೆಮನೆಗೆ ಬಂದು ಅವರನ್ನು ಅಲ್ಲಿ ಭೇಟಿಮಾಡಿದರು. ಎರಡನೆಯ ಸಲ ಬರುವುದಕ್ಕೆ ಸೌಕರ್ಯವಿಲ್ಲದೆ ಪ್ರೇಮಸೂಚಕ ಪತ್ರವೊಂದನ್ನು ಬರೆದು ಕಳುಹಿಸಿದರು. ಹೀಗೆ ದೇಶಕ್ಕೆ ಕೀರ್ತಿಯಾಗಿ ಸಾಹಿತ್ಯಕ್ಕೆ ಶಿಖರವಾಗಿ ಎಲ್ಲ ದೇಶಗಳ ಸಜ್ಜನರ ಗೌರವಕ್ಕೆ ಪಾತ್ರರಾಗಿದ್ದು ಠಾಕೂರರು ೧೯೪೨ನೆ ಇಸವಿ ಆಗಸ್ಟ್ ಆನೇ ತಾರೀಖಿನ ದಿನ ತಮ್ಮ ಇಹಲೋಕಯಾತ್ರೆಯನ್ನು ಮುಗಿಸಿದರು.

ಈ ಜೀವನದ ವಿಸ್ತಾರವನ್ನು ನೋಡಿದ ಯಾರಾದರೂ ಕವಿವರರ ಗ್ರಂಥಗಳನ್ನು ಕುರಿತು ಒಂದು ಸಣ್ಣ ಪುಸ್ತಕವನ್ನು ಬರೆಯುವುದು ಎಷ್ಟು ಕಷ್ಟವೆಂದು ಊಹಿಸಬಲ್ಲರು. ಇವರ ಕೃತಿಯಲ್ಲಿ ಕಾವ್ಯವಿದೆ, ಕತೆಯಿದೆ, ನಾಟಕವಿದೆ, ತತ್ವವಿಚಾರವಿದೆ, ಇತರ ವಿಷಯಗಳನ್ನು ಕುರಿತ ಲೇಖನವಿದೆ. ಇವುಗಳನ್ನೆಲ್ಲ ಕುರಿತು ವಿವರವಾದ ವಿಚಾರಮಾಡುವುಕ್ಕೆ ಇಲ್ಲಿ ಅವಕಾಶವಿಲ್ಲ. ಎಲ್ಲ ವಿಷಯವನ್ನೂ ಸಂಕ್ಷೇಪವಾಗಿ ಹೇಳಿದೆ. ಕವಿಯ ಮನೋಧರ್ಮದ ದೃಷ್ಟಿಯಿಂದ ನೋಡಿದರೆ ಒಂದೊಂದು ವಯಸ್ಸಿನಲ್ಲಿ ಬರೆದ ಗ್ರಂಥಗಳನ್ನು ಒಂದೊಂದು ಕಡೆ ವಿಮರ್ಶೆಮಾಡ ಬಹುದು. ಆದರೆ ಇದರಲ್ಲಿ ಕವಿಯ ಕೃತಿಯ ಒಂದೊಂದು ಜಾತಿಯ ಭಾವನೆ ಚೆನ್ನಾಗಿ ಮೂಡುವುದಿಲ್ಲ. ಇಂಥ ಭಾವನೆಯನ್ನು ಕೊಡುವುದ ಕ್ಕಾಗಿಯೂ ವ್ಯಾಖ್ಯಾನದ ಅನುಕೂಲಕ್ಕಾಗಿಯೂ ಎಲ್ಲ ಕಾವ್ಯಗಳನ್ನೂ ಎಲ್ಲ ಕತೆಗಳನ್ನೂ ಎಲ್ಲ ದೃಶ್ಯ ಪ್ರಬಂಧಗಳನ್ನೂ ತತ್ವ ಮತ್ತು ಇತರ ವಿಚಾರಗಳನ್ನು ಕುರಿತ ಲೇಖನಗಳನ್ನೂ ಒಂದೊಂದು ಅಧ್ಯಾಯದ ವಿಷಯವಾಗಿ ಇಟ್ಟುಕೊಂಡಿದೆ. ಗ್ರಂಥಗಳನ್ನು ನೋಡದವರಿಗೂ ಟೀಕೆ ಅರ್ಥವಾಗಲೆಂದು ಗ್ರಂಥಗಳ ಸಾರಾಂಶವನ್ನು ತಕ್ಕಮಟ್ಟಿಗೆ ವಿಸ್ತಾರವಾಗಿ ಕೊಟ್ಟಿದೆ. ಕವಿವರರ ಇತರ ಕಾರ್ಯಕಲಾಪಗಳನ್ನು ಕುರಿತು ಆಮೇಲೆ ಒಂದು ಅಧ್ಯಾಯವೂ ಈ ಎಲ್ಲ ವಿಮರ್ಶೆಯ ಸಾರವನ್ನು ಸೂಚಿಸಿ ಇನ್ನೊಂದು ಅಧ್ಯಾಯವೂ ಇವೆ. ಕೊನೆಯ ಅಧ್ಯಾಯದಲ್ಲಿ ಮಂಗಳಾ ಚರಣ.

# ಅಧ್ಯಾಯ ೪

## ಕಾವ್ಯಗಳು

### ೨೨. ಶೈಶವದ ಕಾವ್ಯ

ಠಾಕೂರರು ಬಹು ಚಿಕ್ಕಂದಿನಲ್ಲಿಯೇ ಕಾವ್ಯ ಬರೆದ ವಿಚಾರ ಮೊದಲೇ ಬಂದಿದೆ. ಬಹಳ ಎಳೆಯತನದ ಕವಿತೆ ಹೋಗಲಾಗಿ ಈಗ ಚರ್ಚೆಗೆ ವಿಷಯವಾಗಬಹುದಾದದ್ದೆಂದರೆ, ಇವರ ಹದಿನೇಳನೆಯ ವಯಸ್ಸಿನಲ್ಲಿ ಪ್ರಕಟವಾದ ವನಫುಲ್ ಎಂಬ ಕಾವ್ಯ. ಇದು ಎಂಟು ಅಧ್ಯಾಯಗಳ ಒಂದು ಕಥೆ. ಇದರಲ್ಲಿ ಸಾವಿರದ ಐನೂರಕ್ಕೆ ಹೆಚ್ಚಾಗಿ ಪಂಕ್ತಿಗಳಿವೆಯಂತೆ. ಇದರಲ್ಲಿ ನಾಯಕಿಯಾದ ಕಮಲೆ ತನ್ನ ತಂದೆ ಯೊಂದಿಗೆ ಕಾಡಿನಲ್ಲಿ ವಾಸವಾಗಿರುತ್ತಾಳೆ. ಅವಳ ಹದಿನಾರನೆಯ ವಯಸ್ಸಿನಲ್ಲಿ ಅವನು ತೀರಿಹೋಗುತ್ತಾನೆ. ವಿಜಯ ಎಂಬ ಪ್ರಯಾಣಿಕನು ಬಂದು ಅವಳನ್ನು ಕರೆದುಕೊಂಡುಹೋಗಿ ಮದುವೆಯಾಗುತ್ತಾನೆ. ಅವಳಿಗೆ ಪ್ರಪಂಚದ ವಿಷಯ ತಿಳಿಯದು. ಅವಳು ಅವನ ಸ್ನೇಹಿತ ನೀರದನನ್ನು ಪ್ರೀತಿಸುತ್ತಾಳೆ. ವಿಜಯನು ನೀರದನನ್ನು ಕೊಲ್ಲುತ್ತಾನೆ. ನಾಯಕಿ ನೀರದನ ದಹನಾನಂತರ ಅರಣ್ಯಕ್ಕೆ ಹಿಂದಿರುಗುತ್ತಾಳೆ. ಅಲ್ಲಿ ಅವಳಿಗೆ ಸಮಾಧಾನವುಂಟಾಗುವುದಿಲ್ಲ; ಅವಳು ಹಿಮಾಲಯಕ್ಕೆ ಹೋಗಿ ತೀರಿಹೋಗುತ್ತಾಳೆ. ಇಷ್ಟು ಚಿಕ್ಕವಯಸ್ಸಿನಲ್ಲಿ ಬರೆದ ಈ ಕೃತಿಯಲ್ಲಿ ನಿಜವಾದ ಕಾವ್ಯದ ಭಾಗ ಕಡಮೆಯಾಗಿರುವುದು ಆಶ್ಚರ್ಯವಲ್ಲ. ಇದನ್ನು ಕವಿ ಪುನಃ ಅಚ್ಚುಮಾಡಿಸಿಲ್ಲ. ಆದರೆ ಇದರ ವರ್ಣನೆಯಲ್ಲಿ ಕೌಶಲ್ಯ ವಿದೆಯೆಂದು ಇದನ್ನು ಓದಿರುವವರು ಹೇಳುತ್ತಾರೆ. ಒಟ್ಟದಲ್ಲಿ ಇಷ್ಟು ದೊಡ್ಡದಾದ ಕಾವ್ಯವನ್ನು ಇಷ್ಟು ಚಿಕ್ಕವಯಸ್ಸಿನಲ್ಲಿ ಬರೆದದ್ದೇ ಕವಿಯ ಭಾವನೆಯ ವಿಸ್ತಾರವನ್ನೂ ಶಬ್ದಭಂಡಾರವನ್ನೂ ಕವಿತೆಯ ಧೋರಣೆ ಯನ್ನೂ ತೋರಿಸುತ್ತದೆ.

ಸುಮಾರು ಇದೇ ಕಾಲದಲ್ಲಿ ಬರೆದ ಕವಿಕಾಹಿನಿ ಎಂಬ ಕವಿತೆಯಲ್ಲಿ ಒಬ್ಬ ಕವಿಯ ಕಥೆಯನ್ನು ಹೇಳಿದೆ. ಈ ಕವಿ ಸ್ನೇಹವನ್ನು ಬಯಸುತ್ತಾ ಒಂದು ಮರದ ಕೆಳಗೆ ಮಲಗಿದ್ದಾನೆ. ಒಬ್ಬ ಹುಡುಗಿ ಅವನನ್ನು ನೋಡು

ತ್ತಾಳೆ. ಇಬ್ಬರೂ ಮನೆಗೆ ಹೋಗುತ್ತಾರೆ. ಅವರು ಒಬ್ಬರನ್ನೊಬ್ಬರು ಪ್ರೀತಿಸುತ್ತಾರೆ. ಹುಡುಗಿ ಇದರಿಂದ ತೃಪ್ತಳಾಗಿದ್ದಾಳೆ. ಆದರೆ ಕವಿ ಅತೃಪ್ತನಾಗುತ್ತಾನೆ, ಹೊರಟುಹೋಗುತ್ತಾನೆ. ಪ್ರಯಾಣದಲ್ಲಿಯೂ ಅವನಿಗೆ ಸಮಾಧಾನ ಬರುವುದಿಲ್ಲ. ಕೊನೆಗೆ ಅವನು ಹುಡುಗಿಯನ್ನು ನೆನೆದು ಹಿಂದಕ್ಕೆ ಬರುತ್ತಾನೆ. ಅವಳು ಗುಡಿಸಿಲಿನಲ್ಲಿರುವುದಿಲ್ಲ. ಅವನು ಬೆಟ್ಟವನ್ನು ಹತ್ತಲಾಗಿ ಅಲ್ಲಿ ಅವಳ ಶವ ಸಿಕ್ಕುತ್ತದೆ. ಅವನು ಹಿಮಾಲಯಕ್ಕೆ ಹೋಗಿ ಕಾಲವನ್ನು ಕಳೆಯುತ್ತಾನೆ, ತಪಸ್ವಿಯಾಗುತ್ತಾನೆ, ಮುದುಕನಾದ ಮೇಲೆ ಪುನಃ ಆ ಕಡೆಗೆ ಬರುತ್ತಾನೆ. ಪ್ರಪಂಚದ ದುಃಖದ ಸ್ಥಿತಿಯನ್ನು ನೋಡಿ ಅವನಿಗೆ ವ್ಯಸನವಾಗುತ್ತದೆ. ಜೀವ ಹೋಗುವ ವೇಳೆಗೆ ಅವನ ಮನಸ್ಸಿಗೆ ಮುಂದಕ್ಕೆ ಒಳ್ಳೆಯ ಸ್ಥಿತಿ ಬರುವುದೆಂಬುದು ತೋರಿ ಅವನು ಸಮಾಧಾನಹೊಂದುತ್ತಾನೆ.

ರುದ್ರಚಂದ್ರ ಎಂಬ ನಾಟಕ, ಕರುಣಾ ಎಂಬ ಕಥೆ, ಗಾಥಾ ಎಂಬ ಪದ್ಯ ಕಾವ್ಯಗಳು, ಇವೆಲ್ಲವೂ ಸುಮಾರು ಇದೇ ಕಾಲದಲ್ಲಿ ಬರೆದುವು. ಭಗ್ನಹೃದಯ ಎಂಬ ಸಂಗೀತ ನಾಟಕದಲ್ಲಿ ಒಬ್ಬ ಕವಿ ತಾನು ಪ್ರೀತಿಸುತ್ತಿದ್ದ ಒಬ್ಬ ಹುಡುಗಿಗೆ ಕನಿಕರ ತೋರದೆ ದೇಶ ಸುತ್ತುವುದಕ್ಕೆ ಹೋಗುತ್ತಾನೆ. ಕೊನೆಗೆ ಹಿಂತಿರುಗಿ ಬಂದಾಗ್ಗೆ ಅವಳು ಸಾಯುತ್ತಿರುತ್ತಾಳೆ. ವಾಲ್ಮೀಕಿ ಪ್ರತಿಭಾ ಎನ್ನುವುದು ಇನ್ನೊಂದು ಸಂಗೀತ ನಾಟಕ. ಇದರಲ್ಲಿ ಇಂಗ್ಲೀಷ್ ಸಂಗೀತದಿಂದ ಗ್ರಹಿಸಬಹುದಾದ ಸೊಗಸುಗಳನ್ನು ತೋರಿಸುವ ಗೀತಗಳಲ್ಲಿ ವಾಲ್ಮೀಕಿಯ ಒಂದು ಕಥೆಯನ್ನು ನಾಟಕರೂಪವಾಗಿ ಹೇಳಿದೆ. ಬಾಲ್ಯದ ಈ ಎಲ್ಲ ಕಾವ್ಯಗಳಿಂದ ಕವಿವರರು ಆಮೇಲೆ ನಲವತ್ತೇಳು ಸಣ್ಣ ಪದ್ಯಗಳನ್ನು ಅಚ್ಚಾಗುವುದಕ್ಕೆ ಆರಿಸಿದರಂತೆ.

ಸಂಧ್ಯಾ ಸಂಗೀತ ಎನ್ನುವ ಕವಿತೆಗಳಲ್ಲಿ ಕವಿ ವಿಶೇಷವಾಗಿ ತನ್ನ ಕಷ್ಟಸುಖಗಳ ಭಾವ ಅನುಭವಗಳ ವಿಷಯವನ್ನು ವರ್ಣಿಸಿದಾರೆ. ಜೀವನದ ನಿಜವಾದ ಕಷ್ಟಸುಖಗಳಿಗೆ ಇಲ್ಲಿ ಅವಕಾಶವಿಲ್ಲ; ಇಲ್ಲಿ ಪ್ರಪಂಚದ ಅರಿವೂ ಇಲ್ಲ. ಆದರೆ ಈ ಗೀತಗಳಲ್ಲಿ ಇದುವರೆಗೆ ಇಲ್ಲದೆ ಇದ್ದ ಒಂದು ಶಕ್ತಿ ಕಂಡಿತು. ಇದರ ಒಂದು ಪದ್ಯವನ್ನು ನೋಡಿ ಬಂಕಿಂಚಂದ್ರರು ಒಂದು ಮದುವೆಯ ಮನೆಯಲ್ಲಿ ತಮಗೆಂದು ತಂದ ಹೂವಿನ

ಹಾರವನ್ನು ರವೀಂದ್ರನಾಥರಿಗೆ ಹಾಕಿ "ಈತನಿಗೆ ಹಾಕಿ, ಈತನ ಸಂಧ್ಯಾ ಸಂಗೀತವನ್ನು ನೀವು ಓದಿಲ್ಲವೇ?" ಎಂದರಂತೆ. ಡಾಕ್ಟರ್ ಥಾಮ್‌ಸನ್ ಅವರು ಸಂಜೆಯನ್ನು ಕುರಿತ ಆ ಪದ್ಯದ ಭಾಷಾಂತರವನ್ನು ಕೊಟ್ಟಿದಾರೆ. ಸಂಜೆಯ ಸೊಗಸಿಗೆ ಕವಿಯ ಮನಸ್ಸು ಸೋತಿರುವುದಕ್ಕೆ ಕಾರಣ ಅವನ ಚೇತನಕ್ಕೂ ಆ ಸಂಜೆಯೆನ್ನುವುದಕ್ಕೂ ಎಂದೋ ಉಂಟಾದ ಗಾಢವಾದ ಸಂಬಂಧ, ಅದರ ನೆನಪು, ಅದರ ನೋವು, ಎಂಬುದು ಈ ಕವಿತೆಯ ಮುಖ್ಯ ಭಾವ. ಪದ್ಯದಲ್ಲಿ ಇದನ್ನು ತುಂಬ ಬೆಳಸಿ ಬರೆದಿದೆ. ಇತರ ಪದ್ಯಗಳಲ್ಲಿಯೂ ಭಾವ ಕಡಮೆಯೆಂದು ವಿಮರ್ಶಕರು ಹೇಳುತ್ತಾರೆ. ಆದರೆ ಈ ಗೀತೆ ಈ ಕವಿತೆಗಳ ಬೆಲೆ ಕೇವಲ ಕಾವ್ಯದ ವಿಷಯದಲ್ಲಿಲ್ಲ. ತರುಣ ಕವಿ ಬೆಳವಣಿಗೆಯ ಕಾಲದಲ್ಲಿ ರಚಿಸಿದುವು ಎಂಬ ದೃಷ್ಟಿಯಿಂದ ಇವುಗಳನ್ನು ನೋಡಬೇಕು. ಒಂದೊಂದು ಪದ್ಯ ಛಂದಸ್ಸಿನಲ್ಲಿ ಬಹು ಕುಶಲವಾಗಿದೆಯೆಂದು ಹೇಳುತ್ತಾರೆ. ಸಂಧ್ಯಾ ಸಂಗೀತ ಪ್ರಕಟವಾದ ವರ್ಷವೇ ಭಾನುಸಿಂಹ ಎಂಬ ಕಲ್ಪಿತನಾಮದಿಂದ ವೈಷ್ಣವರೀತಿಯಿಂದ ರಚಿಸಿದ ಗೀತಗಳು ಪ್ರಕಟವಾದುವು. ಇವುಗಳ ಮಾದರಿ ತಿಳಿಯುವಂತೆ ಒಂದು ಗೀತದ ಮೂರು ಚರಣಗಳನ್ನು ಕೊಟ್ಟಿದೆ:

ಯಾರು ನೀನು ಹೇಳುವೆಯಾ ನನಗೆ? ॥

ನಿನ್ನ ಕೊಳಲ ಧ್ವನಿ ಅಮೃತಗರಳವೋ
ಹೃದಯವಿದಾರಕ ಹೃದಯಹಾರಿಯೋ
ಆಕುಲಕಾಕಲಿ ಭುವನಭರಿಯೋ
　　ಪ್ರಾಣ ತಲ್ಲಣಿಸಿ ಹಾರಿಹುದೋ ॥

ಗೋಪವಧೂಜನ ವಿಕಸಿತ ಯೌವನ
ಪುಲಕಿತ ಯಮುನಾ ಮುಕುಲಿತ ಉಪವನ
ನೀಲಜಲದ ಮೇಲ್ವಾಯ್ದು ಸಮೀರಣ
　　ಕ್ಷಣದೆ ಪ್ರಾಣ ಮನ ತಾರಿತೋ ॥

ಯಾರು ಯಾರು ಎಂದೆಲ್ಲರು ಕೇಳ್ವರು
ಅನುದಿನ ಸಘನ ನಯನಜಲ ಒರಸಿ

ಭಾನು ಬೇಡಿದೆನು ಸಂಶಯ ಹರಿಸಿ
ಈ ಜನ್ಮವ ನಿನ್ನಡಿಯೆಡೆಗೆಳೆಯೋ ॥

ಪ್ರಭಾತ ಸಂಗೀತ ಎಂಬ ಪದ್ಯಗ್ರಂಥ ಇದೇ ವರ್ಷವೇ ಪ್ರಕಟವಾಯಿತು. ಈ ಕಾವ್ಯಗುಚ್ಛದಲ್ಲಿ ಸಂಧ್ಯಾಸಂಗೀತದ ಕವಿ ಒಂದು ಹೆಜ್ಜೆ ಮುಂದಕ್ಕೆ ಇಟ್ಟಿರುವುದು ಕಾಣುತ್ತದೆಯಂತೆ. ನಿರ್ಝರಿಯ ಸ್ವಪ್ನಭಂಗ ಎಂಬ ಕಾವ್ಯದಲ್ಲಿ ಕವಿಗೆ ಈ ಕಾಲದಲ್ಲಿ ಬಂದ ವಿಶ್ವಾನುಭವ ಉಕ್ತವಾಗಿದೆ. ಇಲ್ಲಿ ಇದರ ಸ್ವಲ್ಪ ಭಾಗದ ಪರಿವರ್ತನವನ್ನು ಕೊಟ್ಟಿದೆ:

ಇಂದಿನೀ ಪ್ರಭಾತದಲ್ಲಿ ರವಿಯ ಕಿರಣ
ನನ್ನ ಪ್ರಾಣವನ್ನು ಏನಾಗಿ ಹೊಕ್ಕಿತು !
ಗುಹೆಯ ಅಂಧಕಾರದಲ್ಲಿ ಏನಾಗಿ ಹೊಕ್ಕಿತು ಪ್ರಭಾತ
ಪಕ್ಷಿಗಳ ಗಾನ ?
ನಾನರಿಯೆ ಏತರಿಂದ ಇಷ್ಟುಕಾಲದ ಮೇಲೆ ಎಚ್ಚತ್ತು ನಿಂತಿತೋ
ಪ್ರಾಣ.

ಪ್ರಾಣ ಎಚ್ಚತ್ತು ನಿಂತಿತು
ಕಣ್ಣೀರು ಉಕ್ಕಿ ಹರಿಯಿತು.
ಪ್ರಾಣದ ವಾಸನ ಪ್ರಾಣದ ಆವೇಗವನ್ನು ನಾನು ತಡೆಯಲಾರದೆ
ಹೋದೆನು.

* * *

ಒಡೆಯಿತು ಹೃದಯ ಒಡೆಯಿತು ಬಂಧನ,
ಸಾಧಿತವಾಯಿತು ಪ್ರಾಣದ ಸಾಧನ;
ಲಹರಿಯ ಮೇಲೆ ಲಹರಿ ತೂಗಿ
ಆಘಾತದ ಮೇಲಾಘಾತವಾಯ್ತು.
ನಾನೋ ಕರುಣಾಧಾರೆಯ ಸುರಿದು
ಪಾಷಾಣದ ಈ ಸೆರೆಯನು ಬಿರಿದು
ಆವೇಶದಿಂದ ಆಕುಲನಾಗಿ ಮರುಳನಂತೆ ಮೆರೆದು
ಹಾಡಿನಿಂದ ಪ್ಲಾವಿಸುವೆನು ಜಗವನು,

ಕೂದಲು ಕೆದರಿರೆ ಹೂಗಳನಾರಿಸಿ
ಕಾಮನ ಬಿಲ್ಕಡೆ ರೆಕ್ಕೆಯು ಬಡಿದು
ರವಿಯ ಕಿರಣದಲಿ ನಗೆಯ ಬೀರಿ ನನ್ನುಸಿರನು ಸುರಿಯುವೆನು.

* * *

ನನ್ನ ಕಥೆ ಎಷ್ಟು ನನ್ನ ಗಾನವೆಷ್ಟು ನನ್ನ ಪ್ರಾಣವೆಷ್ಟು!
ನನ್ನ ಸುಖವೆಷ್ಟು ನನ್ನ ಸಾಧನವೆಷ್ಟು! ಜೀವ ಈಗ ತುಂಬಿಹೋಗಿದೆ.

* * *

ಆಹಾ! ಇಂದು ಪಕ್ಷಿ ಯಾವ ಗಾನ ಹಾಡಿತೋ!
ರವಿಯ ಕರ ಬಂದಿತು.

ಈ ಗುಚ್ಛದಲ್ಲಿ ಹೃದಯವೆಂಬ ಅರಣ್ಯ, ಪುನಸ್ಸಮಾಗಮ, ಅನಂತ ಜೀವನ, ಅನಂತಮರಣ, ಪ್ರತಿಧ್ವನಿ ಎಂಬುವು ಇನ್ನು ಕೆಲವು ಕವಿತೆಗಳ ಹೆಸರುಗಳು. ಛವಿ ಓ ಗಾನ್ (ಚಿತ್ರಗಳು ಗೀತೆಗಳು) ಎಂಬ ಕವಿತಾ ಗುಚ್ಛದಲ್ಲಿ ಕವಿ ಇನ್ನು ಸ್ವಲ್ಪ ಬೆಳೆದನು. ಯಾರು, ಸುಖದ ಕನಸು, ಏಕಾಕಿನಿ, ಯೋಗಿ, ಹಾಳು ಮನೆ, ರಾಹುವಿನ ಪ್ರೇಮ ಎಂಬುವು ಈ ಕೆಲವು ಪದ್ಯಗಳ ಹೆಸರುಗಳು. ರಾಹುವಿನ ಪ್ರೇಮ ಎಂಬ ಕವಿತೆಯಲ್ಲಿ ಒಂದು ವಿಕಟ ರೀತಿಯ ಊಹೆ ಕಾಣುತ್ತದೆ. ಚಂದ್ರನು ಸೌಂದರ್ಯದ ಪ್ರತಿನಿಧಿ. ರಾಹು ಅದನ್ನು ಸದಾ ಆಶಿಸುತ್ತ ಅದರ- ಹಿಂದೆಯೇ ನಡೆಯುವ ಆಕಾಂಕ್ಷೆ; ನೀನು ಎಲ್ಲಿಯೇ ಹೋಗು ನಿನ್ನನ್ನು ನಾನು ಬಿಡುವುದಿಲ್ಲ ಎಂದು ಅದನ್ನು ಹಿಂಬಾಲಿಸುತಿದ್ದು ಅದನ್ನು ಬಲವಂತದಿಂದ ಹಿಡಿದು ಸುಖಿಸುವುದು. ಈ ಪದ್ಯಗಳಲ್ಲಿ, ಜೊತೆಗೆ ರಕ್ಷಕರಿಲ್ಲದೆ ಬೀದಿಯಲ್ಲಿ ನಡೆಯುತ್ತಿರುವ ಹೆಣ್ಣುಮಕ್ಕಳನ್ನು ಹೊತ್ತುಕೊಂಡುಹೋಗುವ ಧೂರ್ತರ ಮನೋಧರ್ಮ ಹೇಗಿರಬಹುದೆಂದು ವರ್ಣಿಸುವರೋ ಎಂಬಂತಿದೆ. ಕವಿಗೆ ಈ ವಯಸ್ಸಿನಲ್ಲಿಯೇ ರಸಪೋಷಕಶಕ್ತಿ ಹೇಗಿತ್ತೆಂದು ಈ ಕವಿತೆಯಲ್ಲಿ ಸ್ಪಷ್ಟವಾಗಿ ಕಾಣುತ್ತದೆ.

"ಏನು? ನನ್ನ ಪ್ರೀತಿ ನಿನಗೆ ಇಷ್ಟವಲ್ಲ?
ನಿನ್ನ ಇಷ್ಟ ನನಗೆ ಬೇಕಿಲ್ಲ.
ನಿನ್ನ ಕಾಲನ್ನು ಕಠಿನ ಬಂಧನದಿಂದ ಸುತ್ತಿ ಚಿರಕಾಲ ನಿನ್ನನ್ನು
ಅಪ್ಪಿ ಇರುತ್ತೇನೆ;

ಲೋಹದ ಶೃಂಖಲದಿಂದ ನೀನು ನನ್ನ ಬಂದಿ ಅಭಾಗಿನೀ.
ಕಾರಾಗಾರದಲ್ಲಿ ನಿನ್ನನ್ನು ಬಂದಿ ಮಾಡಿದೇನೆ.
ನಿನ್ನ ಪ್ರಾಣವನ್ನು ನನ್ನ ಪ್ರಾಣದಿಂದ ಕಟ್ಟಿದೇನೆ.
ಯಾರು ಬಿಡಿಸಿಕೊಳ್ಳುವರೋ ನೋಡೋಣ.
ಇಷ್ಟವಿರಲಿ, ಇಲ್ಲದಿರಲಿ; ಕರೆದರೂ ಸರಿ, ಬಿಟ್ಟರೂ ಸರಿ;
ಹತ್ತಿರ ಕುಳಿತರೂ ಸರಿ, ಕೂಡದೆ ಇದ್ದರೂ ಸರಿ;
ನಿನ್ನ ಜೊತೆಯಲ್ಲಿ ನಡೆಯುತ್ತೇನೆ, ನಿನ್ನ ಪಾದದ ಹತ್ತಿರದಲ್ಲೇ
ಇರುತ್ತೇನೆ.
ಯಾವಾಗಲೂ ನಿನ್ನೊಂದಿಗೆ ಬೆರೆಯುತ್ತಿರುತ್ತೇನೆ.

* * *

"ಗಭೀರ ನಿಶೀಥದಲ್ಲಿ ನೀನು ಮಲಿನ ಪ್ರಾಣಳಾಗಿ ಏಕಾಕಿಯಾಗಿ
ಕುಳಿತಿರಲು,
ಚಮಕಿತಳಾಗಿ ಎದ್ದು ಭಯದಿಂದ ನೋಡುವೆ
ನನ್ನನ್ನೆ—ನಿನ್ನ ಪಕ್ಕದಲ್ಲೇ ಕುಳಿತು
ನಿನ್ನ ಮುಖಪಾನ ಮಾಡುತ್ತಿರುವವನನ್ನು.

* * *

"ದುಃಸ್ವಪ್ನವೆಂಬಂತೆ ದುರ್ಭಾವನೆಯ ರೀತಿ ನಿನ್ನನ್ನು ಸುತ್ತಿ
ಕೊಂಡು ಇದ್ದು
ಹಗಲೂ ಇರುಳೂ ನನ್ನ ಮುಖದ ಪ್ರತಿಬಿಂಬವನ್ನು ನಿನ್ನ
ನಯನಜಲದಲ್ಲಿ ನೋಡುವೆನು.

* * *

"ಪೂರ್ವ ಜನ್ಮದ ಶಾಪದಂತೆ ನಾನು ಹತ್ತಿರ ಹತ್ತಿರ ಇರುತ್ತೇನೆ.
ಭಾವೀ ಜನ್ಮದ ಅದೃಷ್ಟದ ರೀತಿ ಹತ್ತಿರ ಹತ್ತಿರ ಸುಳಿಯುತ್ತೇನೆ.
ಅಕೂಲ ಸಾಗರದ ಮಧ್ಯೆ ಜಗತ್ ತರಣಿ ಒಡೆದಿರಲು
ಅದರಲ್ಲಿ ನಾವು ಇಬ್ಬರು ಮಾತ್ರ ಕುಳಿತಿರುವೆವು;
ನಾನು ನಿನ್ನ ತೋಳುಗಳನ್ನು ಹಿಡಿದುಕೊಂಡಿದೇನೆ;

ನೀನು ಬಿಡಿಸಿಕೊಳ್ಳಲು ಒದ್ದಾಡುತ್ತಿದೀಯೆ ;
ಆದರೂ ನಾನು ಬಿಡುವುದಿಲ್ಲ.

* * *

"ಜೀವನದ ಹಿಂದೆಯೇ ಮರಣ ನಿಂತಿದೆ, ಆಶೆಯ ಹಿಂದೆಯೇ
ಭಯ ನಿಂತಿದೆ.
ಎಂದೆಂದೂ ಧರಣಿಯಲ್ಲಿ ದಿವಸದ ಹಿಂದೆಯೇ ನಿಂತಿದೆ
ಒಂದು ಡಾಕಿನಿಯಂತೆ ರಜನಿ.
ಎಲ್ಲಿ ಬೆಳಕಿದೆ ಅಲ್ಲಿ ನೆರಳಿದೆ; ಇದು ಪ್ರಪಂಚದ ನಿಯಮ :
ರೂಪದ ಹತ್ತಿರ ಎಲ್ಲ ವೇಳೆಯಲ್ಲಿಯೂ ಕ್ಷುಧೆ ಎಚ್ಚರವಾಗಿ
ಇರುತ್ತದೆ.

* * *

ಕಾರಿ ಒ ಕೋಮಲ್ ಎಂಬ ಕಾವ್ಯಗುಚ್ಛದಲ್ಲಿ ಬಹುಭಾಗ ಸಾನೆಟ್ ಎಂದರೆ ಹದಿನಾಲ್ಕು ಪಂಕ್ತಿಯ ಇಂಗ್ಲಿಷ್ ಛಂದಸ್ಸಿನ ರೀತಿಯ ಪದ್ಯಗಳು. ಇವುಗಳಲ್ಲಿ ಹಲವು ತಾರುಣ್ಯದ ಪ್ರೇಮವನ್ನು ಕುರಿತುವು. ಇವು ಪ್ರೇಮವನ್ನು ಶಾರೀರಕ ದೃಷ್ಟಿಯಿಂದ ವರ್ಣಿಸಿದ್ದರಿಂದ ಬಹಳ ಆಕ್ಷೇಪಕ್ಕೆ ಗುರಿಯಾದುವು. ತರುಣಕವಿಗೆ ಇಂಥ ಭಾವನೆಗಳು ಬರುವುದು ಆಶ್ಚರ್ಯವಲ್ಲ. ಆದರೆ ಎಲ್ಲರೂ ಇವನ್ನು ಬರೆದಿಡುವುದಿಲ್ಲ. ಇತರ ಈ ಚತುರ್ದಶ ಪದಿಗಳು ಸಮುದ್ರ, ಮಲ್ಲಿಗೆ, ಸತ್ಯ, ಅನಂತಕಾಲ ಮುಂತಾದ ವಿಷಯಗಳನ್ನು ಕುರಿತುವು. ಈ ಗುಚ್ಛದ ಗೀತಗಳಲ್ಲಿ ಸಂಗೀತದ ಶಕ್ತಿಯೂ ಸ್ಪಷ್ಟವಾಗಿದೆಯಂತೆ. ಮುಂದಕ್ಕೆ ಕವಿ ಬರೆದ ಬಹು ವಿಧದ ಗೀತಗಳಿಗೆ ಇವು ಮೊದಲೆಂದು ಹೇಳಬಹುದು.

## ೨೩. ಮಾನಸೀ

ಮಾನಸೀ ಕಾವ್ಯದಲ್ಲಿ ಕವಿ ತನ್ನ ಶಕ್ತಿಯನ್ನು ಅರಿತಿದ್ದಾನೆ ಎನ್ನುವುದು ಕಾಣುತ್ತದೆ. ಮೇಘದೂತವನ್ನು ಕುರಿತ ಕವಿತೆಯೊಂದು, ಅಹಲ್ಯಾ ಎಂಬುದು ಇನ್ನೊಂದು, ಅಂದು ಇಂದು, ಕೋಗಿಲೆಯ ಕರೆ, ನಿರೀಕ್ಷೆ ಎಂಬುವು, ಹಲವು ಪ್ರೇಮ ಗೀತಗಳು, ಸಾಗರ ತರಂಗ, ಇವು

ಈ ಕಾವ್ಯಗುಚ್ಛದಲ್ಲಿ ಮುಖ್ಯವಾದುವು. ಇಷ್ಟಲ್ಲದೆ ಮಾನಸೀ ಕಾವ್ಯದಲ್ಲಿ ಸಮಾಜದ ಪರಿಸ್ಥಿತಿಯನ್ನು ಕುರಿತ ಹಲವು ಪದ್ಯಗಳಿವೆ. ಅವುಗಳ ಧ್ವನಿ ಮುಖ್ಯವಾಗಿ ವಿಡಂಬನ ಮತ್ತು ಪರಿಹಾಸ್ಯ. ದೇಶದಲ್ಲಿ ಎಷ್ಟೇ ಕಷ್ಟ ವಿದ್ದರೂ ನಮ್ಮ ಕ್ಷಣಿಕ ಶಾಂತಿಯನ್ನು ನಾವು ಸಂಪಾದಿಸಿಕೊಂಡು ಹುಕ್ಕಾ ಕುಡಿಯುತ್ತ ಆಟವಾಡುತ್ತ ನಿದ್ರೆಹೋಗುತ್ತ ಸುಖವಾಗಿದ್ದು ಬಿಡೋಣ ಎನ್ನುವ ಮನೋವೃತ್ತಿಯನ್ನು ನಗುವುದು ಒಂದು ಕವಿತೆಯ ವಿಷಯ. ಭಾಷೆಯನ್ನು ಉದ್ಧಾರಮಾಡಲು ಶೂರರಾಗಿರೋಣ, ಕಾಗದ ಕಡ್ಡಿಯನ್ನು ತೆಗೆದುಕೊಳ್ಳಿ, ಎನ್ನುವುದು ಇನ್ನೊಂದರದು. ಎಲಾ, ಏಸುವನ್ನು ದೊಡ್ಡವನು ಎನ್ನುತಿದ್ದರೆ ಸನಾತನಿಗಳಾದ ನಾವು ಕೇಳುತ್ತಾ ಸುಮ್ಮನಿರುವುದೇ ಎಂಬ ಆಗ್ರಹದಿಂದ ಕ್ರೈಸ್ತ ಮಿಷನರಿಗಳನ್ನು ಹಿಂಸೆ ಮಾಡಿದ ವಂಗ ತರುಣರ ಕಥೆ ಇನ್ನೊಂದರ ವಿಷಯ. ಪ್ರಾಪ್ತವಯಸ್ಕ ನಾದ ಪುರುಷನು ಹಸುಗೂಸಾದ ಹೆಂಡತಿಗೆ ಕಾವ್ಯ ಪ್ರಸಿದ್ಧವಾದ ಪ್ರೇಮ ಭಾಷಣವನ್ನು ಮಾಡುತ್ತಿರಲಾಗಿ ಅವಳಿಗೆ ಗೊಂಬೆಯ ಮೇಲೆ ಮನಸ್ಸಿರು ವುದು, ಇದು ಇನ್ನೊಂದು ಕಾವ್ಯದ ವಿಷಯ. ಈ ಕಾವ್ಯದ ಅತ್ಯುತ್ತಮ ವಾದ ಎರಡು ಕವಿತೆಗಳಿಂದ ಕೆಲವು ಪಂಕ್ತಿಗಳನ್ನು ಇಲ್ಲಿ ಉದಾಹರಣೆಯ ಸಲುವಾಗಿ ಎತ್ತಿ ಬರೆದಿದೆ:

ಸಾಗರ ತರಂಗ

ಅಕೂಲ ಸಮುದ್ರ ವಕ್ಷದಲ್ಲಿ ಭೀಷಣ ಉತ್ಸವದಲ್ಲಿ
    ಪ್ರಲಯ ಉಯ್ಯಾಲಾಡಿತು.
ನೂರು ಪಕ್ಷಗಳನ್ನು ಬಡಿಯಿತು ಹೊಡೆಯಿತು
    ನಡೆಯಿತು ದುರ್ದಮ ಪವನ.
ಆಕಾಶ ಸಮುದ್ರ ಜೊತೆಯಾಗಿ ಪ್ರಚಂಡ ಮಿಲನದಲ್ಲಿ
    ಮತ್ತವಾದುವು;
  ಅಖಿಲದ ಕಣ್ಣೆವೆಯನ್ನು ತಿಮಿರ ಆವರಿಸಿತು.
ಮಿಂಚು ಹೊಳೆದು ಹೆದರಿಸಿತು. ಜಡ ಪ್ರಕೃತಿಯ ತೀಕ್ಷ್ಣ
    ಶ್ವೇತ ರುದ್ರಹಾಸವೆಂಬಂತೆ

ಫೇನರಾಶಿ ಹಾಹಾ ಎಂದಿತು.
ಚಕ್ಷುಹೀನ ಕರ್ಣಹೀನ ಗೇಹಹೀನ ಸ್ನೇಹಹೀನ
ಮತ್ತ ದೈತ್ಯಗಣ
ಬಂಧನಗಳನ್ನೆಲ್ಲ ಕಿತ್ತೊಗೆದು ಸಿಕ್ಕಿದಂತೆ ಎಲ್ಲಿಯೋ
ಸಾಯಲು ಹೋಗುತ್ತಿವೆ.
ನೀಲಾಂಬುಧಿಯಂಧಕಾರ ಕಲ್ಲೋಲ ಕ್ರಂದನದಲ್ಲಿ
ನಾಲ್ಕು ದಿಕ್ಕನ್ನು ಕಾಣದೆ
ರೋಷದಿಂದ ಭಯದಿಂದ ಊರ್ಧ್ವಶ್ವಾಸದಿಂದ ಅಟ್ಟ ರೋಲದಿಂದ
ಅಟ್ಟಹಾಸದಿಂದ
ಉನ್ಮಾದ ಗರ್ಜನೆಯಿಂದ
ಸಿಡಿದು ಸಿಡಿದು ಹಾರಿತು, ಚೂರ್ಣ ಚೂರ್ಣವಾಯಿತು,
ತನ್ನ ಕೂಲವನ್ನು ಕಾಣಲು ವ್ಯರ್ಥವಾಗಿ ಓಡಿತು.

* * *

ಅಕೋ! ಮಧ್ಯೆ ತಾರಿಯಲ್ಲಿ ಎಂಟುನೂರು ನರನಾರಿಯರು
ಎದೆಗೆ ಕೈಯನ್ನಿಟ್ಟುಕೊಂಡು
ಪ್ರಾಣದಲ್ಲಿ ಪ್ರಾಣವನ್ನಿಟ್ಟುಕೊಂಡು ಬಿರುಗಣ್ಣಿಂದ
ನೋಡುತ್ತಿದಾರೆ.
ರಭಸದಿಂದ ತರಣಿಯನ್ನು ಎತ್ತಿಕೊಂಡು ರಾಕ್ಷಸಿಯಂತೆ
ಬಿರುಗಾಳಿ ಕೂಗುತ್ತಿದೆ:
ಕೊಡು, ಕೊಡು, ಕೊಡು.
ಫೇನೋಚ್ಛಲ ಚಲಸಿಂಧು ಕೋಟಿ ಊರ್ಧ್ವಕರದಿಂದ ಹೇಳುತ್ತಿದೆ:
ಕೊಡು, ಕೊಡು, ಕೊಡು.
ವಿಲಂಬವನ್ನು ನೋಡಿ ಕೋಪಗೊಂಡು ಫೇನಫೇನದಲ್ಲಿ ಬುಸುಗುಟ್ಟಿ
ನೀಲ ಮೃತ್ಯು ಮಹಾಕ್ರೋಶದಲ್ಲಿ ಶ್ವೇತವಾಗಿ ಎದ್ದಿದೆ.

* * *

ಕಂಪಮಾನ ನರನಾರಿಯರು ಭಗವಾನನಿಗೆ ಮೊರೆದರು
"ಓ ಭಗವನ್

ದಯೆ ತೋರು ದಯೆ ತೋರು"; ಎದ್ದಿತು ಕಾತರಸ್ವರ
"ಉಳಿಸು ಉಳಿಸು ಪ್ರಾಣ."
"ಎಲ್ಲಿ ನಮ್ಮ ಪುರಾತನ ರವಿ, ಶಶಿ, ತಾರಾಗಣ?
ಎಲ್ಲಿ ನಮ್ಮ ಧನ, ಮಾತೆ ಧರಣಿಯ ಅಂಕ?
ಆಜನ್ಮದ ಸ್ನೇಹಸಾರ, ಎಲ್ಲಿ ನಮ್ಮ ಗೃಹದ್ವಾರ?
ಇದು ಪಿಶಾಚಿ ಮುಲತಾಯಿಯ ಹಿಂಸೆ ಕೋಟಲೆ.
ಯಾವ ಕಡೆ ತಿರುಗಿದರೂ ಪರಿಚಿತವಾದದ್ದೊಂದೂ ಇಲ್ಲ,
ನಮ್ಮದೆನ್ನುವುದೊಂದೂ ಇಲ್ಲ.
ಸಹಸ್ರ ಕರಾಲಮುಖ ಸಹಸ್ರ ಆಕಾರ.
ಒಡೆಯಿತು ತರಣೀತಲ......

## ಅಹಲ್ಯೆ

ಪಾಷಾಣರೂಪದಲ್ಲಿ ಧರಾತಲದೊಡನೆ ಬೆರೆತು,
ನಿರ್ವಾಪಿತ ಹೋಮಾಗ್ನಿಯ ತಾಪಸ ವಿಹೀನ
ಶೂನ್ಯ ತಪೋವನದಲ್ಲಿ ನೀನು ಯಾವ ಸ್ವಪ್ನದಲ್ಲಿ
ದೀರ್ಘ ದಿವಾನಿಶಿಯನ್ನು ಕಳೆದೆ?
ಬೃಹತ್ ಪೃಥ್ವಿಯ ಜೊತೆಗೆ ಏಕದೇಹವಾಗಿ
ವಿಲೀನವಾಗಿ ಇದ್ದವೇಳೆ ಅದರ ಮಹಾಸ್ನೇಹವನ್ನು ಅರಿತೆಯಾ?

* * *

ದಿವಾರಾತ್ರಿ ಅಹರಹ ಲಕ್ಷಕೋಟಿ ಪ್ರಾಣಿಗಳ
ಮಿಲನ, ಕಲಹ, ಆನಂದ, ವಿಷಾದ, ಕ್ಷುಬ್ಧ ಕ್ರಂದನ ಗರ್ಜನವೂ
ಅನುಕ್ಷಣವೂ ಅಯುತ ಪಾಂಥರ ಪದಧ್ವನಿಯೂ
ನಿನ್ನ ಅಭಿಶಾಪನಿದ್ರೆಯನ್ನು ಭೇದಿಸಿ
ನಿನ್ನ ಕರ್ಣವನ್ನು ಪ್ರವೇಶಿಸಿದುವೆ?
ನೇತ್ರಹೀನ ಮೂಢ ರೂಢ ಅರ್ಧ ಜಾಗರಣದಲ್ಲಿ
ನೀನು ಅದರಿಂದ ಎಚ್ಚರವಾಗಿದ್ದೆಯಾ?
ನಿತ್ಯನಿದ್ರಾಹೀನ ಮಹಾಜನನಿಯ ವ್ಯಥೆಯನ್ನು

ನೀನು ಮನಸ್ಸಿನಲ್ಲಿ ತಿಳಿಯಲಾಯಿತೆ?
ನವ ವಸಂತಸಮೀರನು ಪ್ರವಹಿಸಿ ಬಂದ ದಿನ
ಧರಣಿಯ ಸರ್ವಾಂಗದ ಪುಲಕ ಪ್ರವಾಹ
ನಿನ್ನನ್ನು ಸ್ಪರ್ಶಮಾಡಿತೆ?

* * *

ಸ್ನಿಗ್ಧ ಹಸ್ತವನ್ನು ಕೊಟ್ಟು ಪಾಪ ತಾಪ ರೇಖೆಯನ್ನು
ಮಾತೆ ಒರಸಿದಾಳೆ.
ಧರಿತ್ರಿಯ ಸದ್ಯೋಜಾತ ಕುಮಾರಿಯಂತೆ
ಸುಂದರ ಸರಳ ಶುಭ್ರಳಾಗಿ ಇಂದು ನೀನು ಕಂಡಿದೀಯೆ.
ಹತವಾಕ್ಯಳಾಗಿ ನೀನು ಪ್ರಭಾತದ
ಜಗತ್ತಿನ ಕಡೆಗೆ ನೋಡುತ್ತಿದೀಯೆ.
ರಾತ್ರಿಯ ವೇಳೆ ಕಲ್ಲಾದ ನಿನ್ನ ಮೇಲೆ ಬಿದ್ದ ಶಿಶಿರ
ಈಗ ನಿನ್ನ ಆಜಾನು ಚುಂಬಿತ ಮುಕ್ತ ಕೃಷ್ಣಕೇಶಪಾಶದಲ್ಲಿ
ಉಲ್ಲಾಸದಿಂದ ಕಂಪಿಸುತ್ತಿದೆ.
ಧರಣಿಯ ಶ್ಯಾಮವರ್ಣದ ಅಂಚಲವೆಂಬಂತೆ
ಬಹುಕಾಲ ನಿನ್ನನ್ನು ಮರೆಮಾಡಿಸಿದ್ದ ಶೈವಲ
ಬಹುವರ್ಷಧಾರೆಯನ್ನು ಪಡೆದು
ಸತೇಜ, ಸರಸ, ಘನವಾಗಿರುತ್ತ
ಮಾತೃದತ್ತ ವಸ್ತ್ರದಂತೆ ಸುಕೋಮಲ ಸ್ನೇಹವಾಗಿ
ಈಗಲೂ ನಿನ್ನ ನಗ್ನ ಗೌರದೇಹಕ್ಕೆ ಅಂಟಿಕೊಂಡಿದೆ.

* * *

ಅಪೂರ್ವ ರಹಸ್ಯಮಯೀ ಮೂರ್ತಿ ವಿವಸನೇ
ನವೀನ ಶೈಶವಸ್ನಾತ ಸಂಪೂರ್ಣ ಯೌವನೇ
ಶ್ಯಾಮಪತ್ರಪುಟದಲ್ಲಿ ಪೂರ್ಣಸ್ಫುಟ ಪುಷ್ಪವು
ಶೈಶವ ಯೌವನ ಒಂದಾಗಿ ಒಂದು ವೃಂತದಲ್ಲಿ ಅರಳುವಂತೆ
ವಿಸ್ಮೃತಿ ಸಾಗರದ ನೀಲ ಜಲದಲ್ಲಿ
ಪ್ರಥಮ ಉಷೆಯಂತೆ ನೀನು ಮೆಲ್ಲಗೆ ಎದ್ದೆ,

ಎದ್ದು ವಿಶ್ವದ ಕಡೆ ನೋಡಿ ವಿಸ್ಮಯಗೊಂಡೆ.
ವಿಶ್ವ ನಿನ್ನ ಕಡೆ ನೋಡಿ ಸುಮ್ಮನಿದ್ದಿತು.
ಒಬ್ಬರೊಬ್ಬರನ್ನು ನೋಡಿದಿರಿ. ಅಪಾರ ರಹಸ್ಯ ತೀರದಲ್ಲಿ
ಚಿರಪರಿಚಯದ ಮಧ್ಯೆ ನವ ಪರಿಚಯ.

**೨೪. ಸೋನಾರ್ ತರೀ, ಚಿತ್ರಾ**

ಸೋನಾರ್ ತರೀ ಎಂದರೆ ಸ್ವರ್ಣನೌಕ ಎಂಬ ಕಾವ್ಯ ಸಮುಚ್ಚಯದಲ್ಲಿ ಠಾಕೂರರ ಕವಿತಾಶಕ್ತಿ ಇನ್ನೂ ಮುಂದುವರಿಯಿತು. ಇವರ ಕಾವ್ಯ ಭಾವನೆಗಳಲ್ಲಿ ಮುಖ್ಯವಾದ ಜೀವನ ದೇವತಾ ಎಂಬ ತತ್ವವು ಈ ಗ್ರಂಥದಲ್ಲಿ ಪ್ರಕಾಶವಾಯಿತು ಎಂದು ಬಲ್ಲವರು ಹೇಳುತ್ತಾರೆ. ಅದರ ಅಭಿಪ್ರಾಯವೇನೆಂದರೆ, ಕವಿಯ ಜೀವನದಲ್ಲಿ ಅವನ ಸಾಮಾನ್ಯ ವ್ಯಕ್ತಿತ್ವವನ್ನು ಮಿಂಚಿದ ಇನ್ನಾವುದೋ ಒಂದು ಶಕ್ತಿ ಕೆಲಸಮಾಡುತ್ತಿದೆ ಎಂಬ ತಿಳಿವು ನಿರಂತರವಾಗಿರುವುದು. ಜೀವನ ದೇವತೆಯೇ ಮುಖ್ಯ ವ್ಯಕ್ತಿಯಾಗಿರುವ ಸೋನಾರ್ ತರೀ ಎಂಬ ಪದ್ಯ ಈ ಗ್ರಂಥದಲ್ಲಿ ಮೊದಲನೆಯದು. ಈ ದೇವತೆ ಒಂದು ಕಡೆ ನದಿಯ ಮೇಲೆ ದೋಣಿಯಲ್ಲಿ ಹೋಗುತ್ತಿರುವ ಪುರುಷನಂತೆ, ಇನ್ನೊಂದು ಕಡೆ ಮನಸ್ಸನ್ನು ಒಲಿಸಿರುವ ಕಾವ್ಯ ಸುಂದರಿಯಂತೆ, ಇನ್ನೊಂದರಲ್ಲಿ ರಾಧೆಯ ರೀತಿ ಪ್ರಿಯನನ್ನು ನೋಡಲು ಹೊರಟ ಅಭಿಸಾರಿಕೆಯಂತೆ, ಈ ಕಾವ್ಯದಲ್ಲಿ ಕಾಣುತ್ತದೆ. ಸಾಮಾನ್ಯವಾಗಿ ಯಾವ ಕವಿಯಾದರೂ ತನ್ನ ಕೆಲಸವನ್ನು ಕುರಿತು ಯೋಚಿಸಿದರೆ ತಾನು ಎಂಬುದಲ್ಲದ ಬೇರೊಂದು ಶಕ್ತಿ ತನ್ನ ಮೂಲಕ ಕೆಲಸವನ್ನು ಮಾಡಿಸುತ್ತಿದೆ ಎಂದು ಅರಿಯುವುದು ಸಹಜ. ಠಾಕೂರರಲ್ಲಿ ಈ ಭಾವನೆ ಅಸಾಧಾರಣವಾಗಿ ಸ್ಪಷ್ಟವಾಗಿತ್ತೆಂದು ತೋರುತ್ತದೆ. ಇದು ಅವರ ಮಧ್ಯವಯಸ್ಸಿನ ಕಾವ್ಯಾವಸ್ಥೆ. ಇಲ್ಲಿಗೆ ಬರಿಯ ಹುಡುಗಾಟ, ತಡಕಾಟ, ಯತ್ನ ಪ್ರಯತ್ನಗಳು ಮುಗಿದು ಕವಿ ತನ್ನ ಆವೇಶದ ಹಿರಿಮೆಯನ್ನು ಅರಿತುಕೊಂಡನು; ಆ ಆವೇಶಕ್ಕೆ ಮನಃಪೂರ್ವಕವಾಗಿ ಒಳಪಡುವುದನ್ನು ಕಲಿತನು. ಇಂಗ್ಲೀಷಿನಲ್ಲಿ ಪ್ರಕಟವಾಗಿರುವ ಇವರ ಕವಿತೆಗಳು ಬಹುಮಟ್ಟಿಗೆ ಈ ವಯಸ್ಸಿನಿಂದ ಮೇಲೆ ಬರೆದುವು. ಬಂಗಾಳಿಯ ಗ್ರಂಥಗಳಲ್ಲಿ ಕೂಡ ಚಿಕ್ಕವಯಸ್ಸಿನ ಅನೇಕ ಪದ್ಯಗಳನ್ನು ಸೇರಿಸಿ ಅಚ್ಚುಮಾಡುವರಾದರೂ

ಅವುಗಳಲ್ಲಿ ಎಲ್ಲಾ ಜನಕ್ಕೂ ಬೇಕಾಗುವ ಮೇಲಣ ಅಂತಸ್ತಿನ ಕವಿತೆಗಳು ಕಡಮೆ. ಅವು ಮುಖ್ಯವಾಗಿ ಕವಿಯ ಬೆಳವಣಿಗೆಯ ಗುರುತುಗಳು.

ಸೋನಾರ್ ತರೀ ಕಾವ್ಯದ ಜೊತೆಗೆ ಪ್ರಕಟಿಸಿದ ಚಿತ್ರಾ ಎಂಬ ಕಾವ್ಯ ಸಮುಚ್ಚಯದಲ್ಲಿ ಹಲವು ಅತ್ಯುತ್ತಮ ಕವಿತೆಗಳಿವೆ. ಠಾಕೂರರಿಗೆ ಬಹಳ ದೊಡ್ಡ ಹೆಸರನ್ನು ತಂದಿರುವ ಊರ್ವಶೀ ಎಂಬ ಕವಿತೆ ಈ ಸಂಗ್ರಹದ್ದು. ಕವಿತೆ ಏರಿರುವ ಮಟ್ಟ ತಿಳಿಯುವುದಕ್ಕಾಗಿ ಇಲ್ಲಿ ಅದರ ಮಾತನ್ನು ಕನ್ನಡದಲ್ಲಿ ಬರೆದಿದೆ:

ತಾಯಿ ಅಲ್ಲ ಕನ್ಯೆಯಲ್ಲ ವಧುವಲ್ಲ ಸುಂದರಿ ರೂಪಸೀ,
    ಹೇ ನಂದನವಾಸಿನಿ ಊರ್ವಶೀ.
ಸಂಜೆ ಶ್ರಾಂತದೇಹದ ಸುತ್ತ ಸ್ವರ್ಣಾಂಚಲವನ್ನು ಸೆಳೆದು
    ಗೋಷ್ಠದಲ್ಲಿ ಇಳಿವ ವೇಳೆ
ನೀನು ಯಾವ ಗೃಹ ಪ್ರಾಂತದಲ್ಲಾಗಲಿ ಸಂಧ್ಯಾದೀಪವನ್ನು
    ಹಚ್ಚಿಡುವುದಿಲ್ಲ.
ದ್ವೈಧೀಭಾವದಿಂದ ಹಿಮ್ಮೆಟ್ಟುತ್ತಿರುವ ಹೆಜ್ಜೆಗಳನಿಡುತ್ತ
    ಕಂಪ್ರವಕ್ಷಳಾಗಿ ನಮ್ರನೇತ್ರಪತ್ರಳಾಗಿ
    ಶುದ್ಧ ಅರ್ಧರಾತ್ರಿಯಲ್ಲಿ
ಸ್ಮಿತಹಾಸ್ಯೆ ಲಜ್ಜಾಯುಕ್ತೆ ಆಗಿ ಪತಿಶಯ್ಯೆಗೆ ನಡೆಯುವುದಿಲ್ಲ.
ಉಷೆಯ ಉದಯ ಸಮಯದಂತೆ ಅನವಕುಂಠಿತೆ
    ನೀನಕುಂಠಿತೆ.
ವೃಂತಹೀನ ಪುಷ್ಪದಂತೆ ನಿನ್ನಲ್ಲಿ ನೀನೇ ವಿಕಸಿಸಿ
    ಸ್ಫುಟವಾದೆ ಎಂದು ನೀನು ಊರ್ವಶಿ?
ಆದಿಮ ವಸಂತ ಪ್ರಾತವೊಂದರಲ್ಲಿ ಮಥಿತ ಸಾಗರದಿಂದ ನೀನೆದ್ದೆ;
ಬಲಗೈಯಲ್ಲಿ ಸುಧಾಪಾತ್ರೆ ಎಡಗೈಯಲ್ಲಿ ವಿಷಭಾಂಡವನ್ನು
    ಹಿಡಿದಿದ್ದೆ.
ತರಂಗಿತ ಮಹಾಸಿಂಧು ಮಂತ್ರಶಾಂತ ಭುಜಂಗವೆಂಬಂತೆ
ನಿನ್ನ ಪದಪ್ರಾಂತದಲ್ಲಿ ಉಚ್ಛ್ವಸಿತ ಫಣಾ ಲಕ್ಷಶತವನ್ನು
    ತಗ್ಗಿಸಿತ್ತು.

ಕುಂದ ಶುಭ್ರ ನಗ್ನ ಕಾಂತ ಸುರೇಂದ್ರವಂದಿತೇ
ನೀನನಿಂದಿತೆ.

ಎಂದೂ ನೀನು ಮುಗುಳಾಗಿರಲಿಲ್ಲವೇ ಬಾಲಿಕೆಯಾಗಿ ಇರಲಿಲ್ಲವೇ
ಹೇ ಅನಂತ ಯೌವನೆ ಊರ್ವಶೀ ?
ಕತ್ತಲೆಯ ಆಳದ ತಳದಲ್ಲಿ ಯಾರ ಗೃಹದಲ್ಲಿ ಒಬ್ಬಳೇ ಕುಳಿತು
ಮಾಣಿಕ ಮೌಕ್ತಿಕಗಳನ್ನು ಕೊಂಡು ನೀನು ಶೈಶವ ಕೇಳಿಯಲ್ಲಿದ್ದೆ ?
ಮಣಿದೀಪ ದೀಪ್ತ ಕಕ್ಷದಲ್ಲಿ ಸಮುದ್ರದ ಕಲ್ಲೋಲ ಗೀತದಲ್ಲಿ
ಅಕಲಂಕ ಹಾಸ್ಯಮುಖಿಯಾಗಿ ಪ್ರವಾಳ ಪಾಲಂಕದಲ್ಲಿ ನಿದ್ರಿಸಿದೆ ?
ಯಾರ ತೊಡೆಯಮೇಲೆ ?
ಸೃಷ್ಟಿಗೆ ಕಾಣುವ ವೇಳೆಗೆ ನೀನು ಯೌವನಘಟಿತಳು
ಪೂರ್ಣ ಪ್ರಸ್ಫುಟಿತಳು.

ಯುಗ ಯುಗಾಂತರದಿಂದ ನೀನು ವಿಶ್ವದ ಏಕಪ್ರೇಯಸಿ
ಹೇ ಅಪೂರ್ವಶೋಭನೆ ಊರ್ವಶಿ.
ಮುನಿಗಣವು ಧ್ಯಾನವನ್ನುಳಿದು ನಿನ್ನಡಿಯಲ್ಲಿ ತನ್ನ ತಪದ
ಫಲವನ್ನರ್ಪಿಸಿತು ;
ನಿನ್ನಕಟಾಕ್ಷಘಾತದಿಂದ ತ್ರಿಭುವನವುಯೌವನಚಂಚಲವಾಯಿತು;
ನಿನ್ನ ಮದಿರ ಗಂಧವನ್ನು ಕುರುಡಾದ ಗಾಳಿ ಹೊತ್ತು ಹರಡಿತು.
ಮಧುಮತ್ತ ಭೃಂಗದಂತೆ ಲುಬ್ಧಚಿತ್ತನಾಗಿ ಮುಗ್ಧ ಕವಿ
ಉದ್ದಾಮ ಸಂಗೀತದಲ್ಲಿ ಅಲೆದನು.
ನೀನೋ ನೂಪುರ ಗುಂಜರಿಯಾಗಿ ನಡೆದೆ ಆಕುಲಾಂಚಲೇ
ವಿದ್ಯುತ್-ಚಂಚಲೇ.

ಸುರಸಭಾತಲದಲ್ಲಿ ನೃತ್ಯಮಾಡುತ್ತ ನೀನು ಪುಲಕೋಲ್ಲಾಸಿ
ಯಾಗಿರುವಂದು,
ಹೇ ವಿಲೋಲ ಹಿಲ್ಲೋಲ ಊರ್ವಶಿ,
ಸಿಂಧು ಮಧ್ಯದ ತರಂಗದ ಜಲವು ಛಂದ ಛಂದವಾಗಿ ನಾಟ್ಯದಲ್ಲಿ
ಏಳುವುದು ;

ಸಸ್ಯಶೀರ್ಷದ ಸ್ಪಂದನ ಚಲನದಲ್ಲಿ ಧರೆಯ ಅಂಚಲ ಅದುರಿ
ಹಾರುವುದು ;
ನಿನ್ನ ಸ್ತನಹಾರದಿಂದ ಉದುರಿ ನಕ್ಷತ್ರಗಳು ನಭಸ್ಥಳಕ್ಕೆ ಬೀಳುವುವು;
ಅಕಸ್ಮಾತ್ ಪುರುಷಹೃದಯಮಧ್ಯದಲ್ಲಿ ಚಿತ್ತವು ಆತ್ಮ
ಹಾರಿಯಾಗುವುದು,
ರಕ್ತಧಾರೆ ನಾಟ್ಯಮಾಡುವುದು ;
ದಿಗಂತದಲ್ಲಿ ನಿನ್ನ ಮೇಖಲೆ ಇದ್ದದಿದ್ದ ಹಾಗೆ ಕಿತ್ತುಹೋಗುವುದು
ಹೇ ಅಸಂವೃತೆ.

ಸ್ವರ್ಗದ ಉದಯಾಚಲದಲ್ಲಿ ಉಷಃಕಾಲದಲ್ಲಿ ಮೂರ್ತಿಮತಿ
ಯಾಗಿರುವೆ ನೀನು
ಹೇ ಭುವನಮೋಹಿನೀ ಊರ್ವಶಿ.
ಜನದ ಅಶ್ರುಧಾರೆಯಿಂದ ಧೌತವಾಗಿದೆ ನಿನ್ನ ಮೈಯ ತಂಪು;
ತ್ರಿಲೋಕಗಳ ಹೃದ್ರಕ್ತದಿಂದ ಅಂಕಿತವಾಗಿದೆ ನಿನ್ನ ಅಡಿಯ ಕೆಂಪು;
ಮುಕ್ತವೇಣಿ ವಿವಸನೇ ನಿನ್ನ ಪಾದಪದ್ಮವನ್ನು
ವಿಶ್ವದಾಸೆಯ ವಿಕಸಿತ ಅರವಿಂದದ ಮಧ್ಯದಲ್ಲಿಟ್ಟಿರುವೆ ನೀನು ;
ಅತಿಲಘು ಆ ಭಾರ.
ಎಲ್ಲ ಮನಸ್ಸುಗಳ ಸ್ವರ್ಗದಲ್ಲಿರುವ ಅನಂತರಂಗಿಣಿ
ಹೇ ಸ್ವಪ್ನಸಂಗಿನಿ.

ಅಕೋ ಕೇಳು ದಿಶಿ ದಿಶಿಯಲ್ಲಿ ನಿನಗಾಗಿ ಅಳುವವರ ಗೋಳು
ಹೇ ಬಧಿರೆ ನಿಷ್ಠುರೆ ಊರ್ವಶಿ.
ಆ ಪುರಾತನಾದಿಯುಗವು ಜಗಕೆ ಮರಳಿ ಬರಬಹುದೆ ?
ಕೂಲರಹಿತ ಅತಲದಿಂದ ಸಿಂಚಕೇಶಳಾಗಿ ನೀನು ಮರಳಿ
ಏಳಬಹುದೆ ?
ದಿವದಲ್ಲಿ ಪ್ರಥಮ ಪ್ರಭಾತದಲ್ಲಿ ಆ ದೇಹ ಮತ್ತೆ ಕಂಡ ಒಡನೆಯೇ
ಜಗದ ದೃಷ್ಟಿಘಾತದಿಂದ ನಿನ್ನ ಸರ್ವಾಂಗ ಕ್ರಂದಿಸುವುದು ;
ಆದರಿಂದ ನೀರು ಉದುರುವುದು ;

ಅಕಸ್ಮಾತ್ ಮಹಾಂಬುಧಿ ಅಪೂರ್ವ ಸಂಗೀತದಿಂದ
ತರಂಗಿತವಾಗುವುದು.
ಮತ್ತೆ ಬಾರಳು ಮತ್ತೆ ಬಾರಳು; ಆ ಗೌರವಶಶಿ ಅಸ್ತಳು;
ಅಸ್ತಾಚಲವಾಸಿನಿ ಈಗ ಊರ್ವಶಿ.
ಆದುದರಿಂದಲೇ ಈಗ ಧರಾತಲದಲ್ಲಿ ವಸಂತದ ಆನಂದೋ
ಚ್ಛ್ವಾಸದಲ್ಲಿ ಯಾವುದೋ ಚಿರ ವಿರಹದ ದೀರ್ಘಶ್ವಾಸ ಮಿಶ್ರ
ವಾಗಿರುವುದು ಕಾಣುತ್ತದೆ;
ಪೂರ್ಣಿಮಾ ನಿಶೀಥದಲ್ಲಿ ದಶದಿಶೆಯು ಪರಿಪೂರ್ಣಹಾಸದಲ್ಲಿ
ಎಂದಿನದೋ ಪೂರ್ವಸ್ಮೃತಿಯೊಂದು ವ್ಯಾಕುಲಕರವಾದ ಕೊಳ
ಲನ್ನು ನುಡಿಸುತ್ತದೆ;
ಅಶ್ರುರಾಶಿ ಕೂಡುತ್ತದೆ;
ಆದರೂ ಪ್ರಾಣದ ಆಕ್ರಂದನದಲ್ಲಿ ಆಶೆಯೊಂದು ಮೂಡಿ
ಉಳಿಯುತ್ತದೆ,
ಹೇ ಅಬಂಧನೇ.

ನಮ್ಮ ಪೂರ್ವಿಕರ ಊರ್ವಶಿ ಇಂದ್ರಲೋಕವನ್ನು ಸೇರಿದ ಮೇಲಣ ಸುಂದರಿ; ಅಲ್ಲಿಯೇ ಇರುವವಳು. ರವೀಂದ್ರನಾಥ ಠಾಕೂರರ ಊರ್ವಶಿ ಇಂದ್ರಲೋಕದಲ್ಲಿ ನರ್ತಿಸಿ ಅಲ್ಲಿಯ ಮನಸ್ಸುಗಳನ್ನು ಅಪಹರಿಸುವ ಆನಂದಗೊಳಿಸುವ ವ್ಯಕ್ತಿ ಮಾತ್ರವಲ್ಲ. ತನ್ನ ಎಳೆಯತನದಿಂದ ನಮಗೆ ಕಣ್ಣಿಗೆ ಕಾಣುತ್ತಾಳೆ. ಸೃಷ್ಟಿಯಲ್ಲಿ ಎಲ್ಲ ಸೌಂದರ್ಯದ ಆಂತರ್ಯದ ತತ್ತ್ವವಾಗಿ, ಮಾನವರ ಹೃದಯವನ್ನು ಚಪಲಗೊಳಿಸುತ್ತ, ನೋಯಿಸುತ್ತ ಬೇಯಿಸುತ್ತ, ಕಾಡುತ್ತ ಕುಂದಿಸುತ್ತ, ಸಂತೋಷಗೊಳಿಸುತ್ತ, ಕಣ್ಣಿಗೆ ಕಾಣದೆ ಸುಳಿಯುತ್ತ, ಇರುವ ಸೂಕ್ಷ್ಮಶಕ್ತಿ ಅವಳು. ಕವಿ ಈ ಭಾವನೆಗೆ ತಕ್ಕಂತೆ ಪಾತಾಳದ ಅವಳ ಜನ್ಮಸ್ಥಳವನ್ನೂ, ಅವಳ ಕ್ರೀಡಾ ಸ್ಥಾನಗಳನ್ನೂ, ಸ್ವರ್ಗದಲ್ಲಿ ಇಂದ್ರನ ಸಭೆಯಲ್ಲಿ ಆಗಬಹುದೆಂಬ ವ್ಯಾಪಾರಗಳನ್ನೂ ಸೃಷ್ಟಿಯೆಂಬ ಹೊರಪ್ರಪಂಚದಲ್ಲಿ ಮನಸ್ಸೆಂಬ ಒಳಪ್ರಪಂಚದಲ್ಲಿ ಕಾಣತಕ್ಕ ಒನಪು ಒಯ್ಯಾರ ಬೇನೆ ಬೇಗೆಗಳನ್ನೂ ಇಲ್ಲಿ ಅತ್ಯುತ್ತಮ ರೀತಿಯಲ್ಲಿ ಚಿತ್ರಿಸಿದಾನೆ. ನಾಲ್ಕು ಗೆರೆಯನ್ನೆಳೆದು ಒಂದು ಮುಖವನ್ನು ಮಾಡುವ ಚಿತ್ರಕಾರನ ಅಥವಾ ನಾಲ್ಕು ಸ್ವರಗಳನ್ನು ನುಡಿಸಿ ಒಂದು

ಗೀತವನ್ನು ತೋರುವ ಗಾಯಕನ ಕಲೆಯಂತೆ, ಸೌಂದರ್ಯ ತತ್ವದ ಜೀವನ ಕಥೆಯನ್ನು ಈ ಕೃತಿ ಹತ್ತು ಮಾತಿನಿಂದ ಸುಲಭವಾಗಿ ಸೂಚಿಸಿದೆ. ಠಾಕೂರರು ಚಿತ್ರಾಂಗದಾ ನಾಟಕವನ್ನು ಬರೆದುದು ಇದೇ ಕಾಲದಲ್ಲಿ. ಈ ವಯಸ್ಸಿನಲ್ಲಿ ಇವರ ಕಾವ್ಯಶಕ್ತಿ ಮುಗಿಲನ್ನು ಮುಟ್ಟಿತು.

### ೨೫. ಪ್ರೇಮ,. ಸೌಂದರ್ಯ

ಇಂಗ್ಲೀಷಿನಲ್ಲಿ ಪ್ರಕಟಿಸುವಲ್ಲಿ ಠಾಕೂರರು ವಂಗ ಭಾಷೆಯ ತಮ್ಮ ಹಲವು ಗ್ರಂಥಗಳಿಂದ ಆರಿಸಿದ ಪದ್ಯಗಳನ್ನು ಒಂದೊಂದು ಗ್ರಂಥವಾಗಿ ಅಚ್ಚುಮಾಡಿದರು. ವಂಗ ಭಾಷೆಯ ಇಂಥ ಗುಚ್ಛದಿಂದ ಇಂಥ ಪದ್ಯಗಳು ಬಂದಿವೆಯೆಂದು ಹೇಳುವುದಕ್ಕೆ ಎಲ್ಲಾ ಸಂದರ್ಭದಲ್ಲಿಯೂ ನಮಗೆ ಸಾಕಾದಷ್ಟು ಆಧಾರವಿಲ್ಲ. ಇಂಗ್ಲೀಷಿನ ಗ್ರಂಥದಲ್ಲಾಗಲಿ ಒಂದೊಂದು ಗ್ರಂಥದಲ್ಲಿ ಒಂದೊಂದೇ ರೀತಿಯ ಪದ್ಯಗಳಿವೆಯೆಂದು ಹೇಳುವಂತಿಲ್ಲ. ಆದದರಿಂದ ಇನ್ನು ಮುಂದೆ ಇವರ ಕಾವ್ಯಗಳ ಚರ್ಚೆಗೆ ಒಂದೊಂದು ಗ್ರಂಥವನ್ನು ತೆಗೆದುಕೊಳ್ಳುವುದಕ್ಕೆ ಅನುಕೂಲ ಕಡಮೆ; ಅಲ್ಲದೆ ಹಾಗೆ ತೆಗೆದುಕೊಂಡು ಪ್ರಯೋಜನವಿಲ್ಲ. ಈ ಕಾರಣದಿಂದ ಇಂಗ್ಲೀಷಿನಲ್ಲಿ ಪ್ರಕಟವಾಗಿರುವ ಕವಿತೆಗಳನ್ನು ಮುಂದೆ ವಿಷಯಕ್ಕನುಸಾರವಾಗಿ ವಿಮರ್ಶಿಸಿದೆ. ಇವುಗಳಲ್ಲಿ ಇಂಗ್ಲೀಷಿನಲ್ಲಿ ಮೊದಲು ಅಚ್ಚಾದದ್ದು ಭಕ್ತಿ ಗೀತಗಳ ಗುಚ್ಛ. ಆದರೆ ವಂಗ ಭಾಷೆಯಲ್ಲಿ ಇತರ ಗ್ರಂಥಗಳು ಹಲವು ಅಚ್ಚಾದಮೇಲೆ ಈ ಭಕ್ತಿ ಗೀತಗಳು ಬಂದುವು. ಇಲ್ಲಿ ಸಾಧ್ಯವಾದ ಮಟ್ಟಿಗೆ ಕಾಲಕ್ರಮವನ್ನು ಅನುಸರಿಸಿ ಕೃತಿಗಳನ್ನು ವಿಮರ್ಶಿಸಲಾಗುವುದು.

ಇದುವರೆಗೆ ಬಂದಿರುವ ಕೃತಿಗಳಿಂದ ಎಲ್ಲ ಕವಿಗಳಂತೆ ಈ ಕವಿಗೂ ಪ್ರಕೃತಿಯ ಮುಖವೂ ಹೃದಯದ ಭಾವಗಳೂ ವಸ್ತುವಾಗಿದ್ದುವೆನ್ನುವುದು ಕಂಡಿರಬೇಕು. ಆ ಮುಖದಲ್ಲಿ ಮುಖ್ಯವಾಗಿ ಕಾಣುವುದು ಸೌಂದರ್ಯ; ಆ ಭಾವಗಳಲ್ಲಿ ಮುಖ್ಯವೆನ್ನಿಸುವುದು ಪ್ರೇಮ. ಊರ್ವಶಿ ಈ ಸೌಂದರ್ಯದ ಅಂತರ್ಯದ ಮೂರ್ತಿ; ಮಾನವನ ಹೃದಯ ಸ್ವರ್ಗದಲ್ಲಿ ನರ್ತಿಸುತ್ತ ಆಸೆಯಿಂದ ರಕ್ತವನ್ನು ಕುದಿಸುವ ಕುಣಿಸುವ ಶಕ್ತಿ. ಠಾಕೂರರ ಕೃತಿಯಲ್ಲಿ ಈ ಎರಡು ತತ್ವಗಳೂ ವಿಸ್ತಾರವಾಗಿ ಹರಡಿವೆ, ಹಬ್ಬಿವೆ. ಕವಿಯ

ಕರ್ತವ್ಯವೇನೆಂದರೆ, ಪ್ರಪಂಚದ ಸೌಂದರ್ಯವನ್ನು ವರ್ಣಿಸುವುದು, ಮನಸ್ಸು ಮನಸ್ಸಿಗೆ ಬೆರೆಯುವಂತೆ ಸಹಾಯಮಾಡುವುದು, ಜೀವನದ ಉತ್ಸವದಲ್ಲಿ ವಂದಿಯಾಗಿ ಮಾಗಧನಾಗಿ ತುತೂರಿಕಾರನಾಗಿರುವುದು, ಎಂಬ ಅಭಿಪ್ರಾಯವನ್ನು ಇವರು ಒಂದು ಪದ್ಯದಲ್ಲಿ ಹೇಳಿದಾರೆ:

"ಅಯ್ಯಾ ಕವಿ, ಸಂಜೆ ಸಮೀಪಿಸುತ್ತಿದೆ. ನಿನ್ನ ಕೂದಲು ನರೆಯುತ್ತಿದೆ. ಏಕಾಕಿಯಾಗಿ ಕುಳಿತು ಧ್ಯಾನಮಾಡುವಾಗ ಪರದ ವಿಚಾರ ನಿನ್ನ ಮನಸ್ಸಿಗೆ ಮುಟ್ಟುತ್ತಿದೆಯೋ?"

ಕವಿ ಹೇಳಿದನು:

"ಸಂಜೆಯಾಗಿದೆ ಆದಕಾರಣ ನಾನು ಊರಿನಿಂದ ಯಾರಾದರೂ ಕರೆದಾರು ಎಂದು ಎಷ್ಟು ಹೊತ್ತಾದರೂ ಕಾದುಕೊಂಡಿದೇನೆ. ಎಳೆಯ ಹೃದಯಗಳು ಅಲೆದು ಸೇರುವುದನ್ನು, ಎರಡು ಜೊತೆ ಕಣ್ಣುಗಳು ತಮ್ಮ ಮೌನವನ್ನು ಮುರಿದು ತಮಗಾಗಿ ನುಡಿಯುವ ಗಾನವನ್ನು ಬೇಡುವುದನ್ನು, ನಾನು ನಿರೀಕ್ಷಿಸುತ್ತಿದೇನೆ. ನಾನು ಜೀವನದ ತೀರದಲ್ಲಿ ಕುಳಿತು ಸಾವನ್ನೂ ಸಾವಿನ ಆಚೆಯ ಜೀವನವನ್ನೂ ಕುರಿತ ಧ್ಯಾನದಲ್ಲಿ ಮುಳುಗಿದರೆ ಈ ಪ್ರಣಯಿಗಳ ಪ್ರೇಮೋದ್ಯೋಗದ ಗಾನವನ್ನು ಹೆಣೆಯುವರಾರು?........

"ನನ್ನ ಕೂದಲು ನರೆಯುತ್ತಿರುವುದು ಸಣ್ಣ ವಿಷಯ. ಸದಾ ಕಾಲವೂ ನಾನು ಇಲ್ಲಿಯ ಎಳೆಯರು ಎಷ್ಟು ಚಿಕ್ಕವರೋ ಅಷ್ಟು ಚಿಕ್ಕವನು; ಇಲ್ಲಿಯ ಮುದಿಯರು ಎಷ್ಟು ಮುದುಕರೋ ಅಷ್ಟು ಮುದುಕನು. ಇವರಲ್ಲಿ ಕೆಲವರು ನಗುತ್ತಾರೆ. ಸ್ನಿಗ್ಧವಾಗಿ ಸುಂದರವಾಗಿ ಕೆಲವರ ಕಣ್ಣಿನಲ್ಲಿ ಹಾಸ್ಯ ಮಿನುಗುತ್ತದೆ. ಇನ್ನು ಕೆಲವರ ಕಣ್ಣಿನಲ್ಲಿ ಹಗಲಿನಲ್ಲಿ ನೀರು ಉಕ್ಕುತ್ತದೆ. ಬೇರೆ ಕೆಲವರ ಕಣ್ಣ ನೀರು ಮುಸುಕಿನಲ್ಲಿ ಮರೆಯಾಗಿದೆ. ಇವರಿಗೆಲ್ಲ ನಾನು ಬೇಕು. ಮರಣದಾಚೆಯ ಜೀವನದ ಧ್ಯಾನಕ್ಕೆ ನನಗೆ ವಿರಾಮವಿಲ್ಲ...."

ಇಂಥ ಉಪಾಸನೆಗೆ ಒಲಿಯದ ತತ್ವವಿಲ್ಲ. ಠಾಕೂರರ ಕವಿತೆಯಲ್ಲಿ ಪ್ರೇಮ ಸೌಂದರ್ಯಗಳ ವಿಷಯದಲ್ಲಿ ಒಂದು ಅನ್ಯಾದೃಶವಾದ ದೃಷ್ಟಿ

ಪಾಟವ ಕಾಣುತ್ತದೆ. ಇದಕ್ಕೆ ನಿದರ್ಶನವಾಗಿ ಇಲ್ಲಿ ಕೆಲವು ಪದ್ಯಗಳನ್ನು ಎತ್ತಿ ಬರೆದಿದೆ.

ಎಳತನದಲ್ಲಿ ಆತುರದಿಂದ ಪ್ರಿಯ ಸತಿಯನ್ನು ಕರೆಯುವ ಭಾವ ಈ ಪದ್ಯದಲ್ಲಿ ಸುಂದರವಾಗಿ ರೂಪುಗೊಂಡಿದೆ:

"ನೀನು ಈಗ ಇರುವಂತೆಯೇ ಬಾ. ಅಲಂಕಾರಮಾಡಿಕೊಳ್ಳುವುದರಲ್ಲಿ ಹೊತ್ತು ಕಳೆಯಬೇಡ. ನಿನ್ನ ಜಡೆ ಬಿಚ್ಚಿದ್ದರೆ ಬೈತಲೆ ನೇರವಾಗಿಲ್ಲದಿದ್ದರೆ ಕಂಚುಕ ಕಟ್ಟಿರದಿದ್ದರೆ ತೊಂದರೆಪಡಬೇಡ. ಇರುವಂತೆ ಬಾ. ಅಲಂಕಾರದಲ್ಲಿ ಹೊತ್ತು ಕಳೆಯಬೇಡ.

"ಹುಲ್ಲಿನಮೇಲೆ ಬೇಗ ಬೇಗ ಹೆಜ್ಜೆಯಿಡುತ ಬಾ. ನಿನ್ನ ಕಾಲ ಅಲತಿಗೆ ಮಂಜಿನಲ್ಲಿ ಹೋದರೆ, ನಿನ್ನ ಕಾಲ ಅಂದುಗೆ ಸ್ವಲ್ಪ ಸಡಿಲವಾದರೆ, ನಿನ್ನ ಸರದಿಂದ ಮುತ್ತು ಸೋರಿಬಿದ್ದರೆ, ಅದಕ್ಕೆ ನೀನು ಚಿಂತೆಮಾಡಬೇಡ. ಹುಲ್ಲಿನಮೇಲೆ ಬೇಗ ಬೇಗ ಹೆಜ್ಜೆಯಿಟ್ಟು ಬಾ.

"ನೀನು ಮಾಲೆಯನ್ನು ಪೋಣಿಸಿ ತರದಿದ್ದರೆ ಇಲ್ಲವೆನ್ನುವರಾರು? ಕಡಗದ ತಿರುಪನ್ನು ಹಾಕದಿದ್ದರೆ ಬೇಡ ಬಿಡು. ಆಕಾಶದ ತುಂಬ ಮೋಡಗಳು ಹಬ್ಬಿವೆ. ಹೊತ್ತಾಗಿ ಹೋಗಿದೆ. ಇರುವಂತೆ ಬಾ. ಅಲಂಕಾರದಲ್ಲಿ ಹೊತ್ತುಕಳೆಯಬೇಡ."

ಈ ಪದ್ಯದಲ್ಲಿ, ಹೋಗಿಬರುವೆನು ಎಂದು ಬಾಯಲ್ಲಿ ಹೇಳುತ್ತ ಹೋಗುವುದಕ್ಕೆ ಇಷ್ಟವಿಲ್ಲದ ಪ್ರಿಯನು ಹೇಳುವ ಮಾತು ಕಾಣುತ್ತದೆ:

"ಹೋಗಿಬರುವೆನೆಂದು ಹೇಳುವುದಕ್ಕೆ ನಾನು ಬಂದಾಗ ನೀನು ನಂಬದೆ ನಗುವ ನಗೆ ನಿನ್ನ ಕಣ್ಣಿನಲ್ಲಿ ಕಂಡು ಮರೆಯುತ್ತದೆ. ಈ ಹಿಂದೆ ಹೋಗಿಬರುವೆನೆಂದು ಹೇಳಿ ಹೋಗದೆ ಇದ್ದಿರುವುದರಿಂದ ನಾನು ಮರಳಿ ಬರುವೆನೆಂದು ನೀನು ತಿಳಿದಿದ್ದೀಯೆ.

"ನಿಜವಾಗಿ ನನಗೂ ಇದೇ ಸಂಶಯವುಂಟು. ಆದರೇನು? ಚೈತ್ರಮಾಸವು ಪುನಃ ಪುನಃ ಬರುತ್ತದೆ; ಪೂರ್ಣಚಂದ್ರನು

ಹೋಗುವೆನೆಂದು ಹೊರಟು ಮರಳಿ ಬರುತ್ತಾನೆ; ಹೂಗಳು ಮರಳಿ ಬಂದು ತಮ್ಮ ಕೊಂಬೆಗಳ ಮೇಲೆ ವರುಷ ವರುಷವೂ ತೊಳಗುತ್ತವೆ.

"ನಾನು ಕೂಡಾ ಹೋಗಿಬರುವೆನೆನ್ನುವುದು ಮರಳಿ ಬರುವುದಕ್ಕಾಗಿ ಎನ್ನುವುದು ಸಾಧ್ಯ. ಆದರೂ ಹೋಗುವೆನೆಂಬ ಸೋಗು ಸ್ವಲ್ಪ ಹೊತ್ತು ಇರಲಿ; ಅದನ್ನು ಅಷ್ಟು ಅವಸರವಾಗಿ ದೂಡಿಬಿಡಬೇಡ.

"ಹೊರಟುಹೋಗುತ್ತೇನೆ, ಇನ್ನು ಬರುವುದಿಲ್ಲ, ಎಂದು ನಾನು ಹೇಳಿದಾಗ ಆ ಮಾತು ನಿಜವೆಂದು ತಿಳಿದುಕೋ. ಕಣ್ಣೀರು ಉಕ್ಕಿ ನಿನ್ನ ಕಣ್ಣುಕಾಡಿಗೆಯ ಅಂಚನ್ನು ಒಂದು ಕ್ಷಣಮಾತ್ರ ಇನ್ನಷ್ಟು ಕರಿದೆನಿಸುವುದಕ್ಕೆ ಬಿಡು.

"ಇದಾದಮೇಲೆ ಅಗಲಲಾರದೆ ನಾನು ಮರಳಿ ಬಂದಾಗ ನಿನಗೆ ಬೇಕಾದಷ್ಟು ಸರಸದಿಂದ ನಕ್ಕು ನಾನು ಹಿಂದಿರುಗಿ ಬರುವುದು ತಿಳಿದಿತ್ತೆಂದು ತೋರಿಸು. ಆಗ ಅದನ್ನು ನಾನು ಬೇಡವೆನ್ನುವುದಿಲ್ಲ."

ಮುಗ್ಧರಾದ ಹಳ್ಳಿಯ ಜನರ ಸರಳವಾದ ಪ್ರೇಮ ಎಷ್ಟು ಚೆನ್ನಾಗಿರಬಹುದು ಎನ್ನುವುದು ಈ ಪದ್ಯದಲ್ಲಿ ಕಾಣುತ್ತದೆ:

"ಅವರ ಮರದ ಮೇಲೆ ಕುಳಿತು ಹೊಂಬಕ್ಕಿ ಹಾಡುವುದು.
ನನ್ನ ಎದೆ ಸಂತೋಷದಿಂದ ಕುಣಿಯುವುದು.

"ನಾವಿಬ್ಬರೂ ಒಂದು ಊರಿನಲ್ಲಿದ್ದೇವೆ. ಇದೇ ನಮ್ಮಿಬ್ಬರಿಗೆ
ಒಂದು ಸಂತೋಷ.

"ಅವಳು ಸಾಕುತಲಿರುವ ಕುರಿಯ ಮರಿ ಎರಡು ನಮ್ಮ
ತೋಪಿನ ಮರಗಳಡಿ ಮೇಯಲು ಬರುತ್ತವೆ.

"ನಮ್ಮ ಬತ್ತದ ಗದ್ದೆಗೆ ಅವು ಸುಳಿದು ಬಂದಾಗ ಅವುಗಳನ್ನು
ನಾನು ಎತ್ತಿಕೊಳ್ಳುತ್ತೇನೆ.

"ನಮ್ಮ ಊರು ಖಂಜನ, ನಮ್ಮ ನದಿ ಅಂಜನ,
ನನ್ನ ಹೆಸರು ಎಲ್ಲ ಬಲ್ಲರು, ಅವಳ ಹೆಸರು ರಂಜನ.

" ನಮ್ಮ ಮಧ್ಯೆ ಇರುವುದು ಒಂದೇ ಒಂದು ಹೊಲ.

" ನಮ್ಮ ತೋಟದಲ್ಲಿ ಗೂಡು ಕಟ್ಟಿದ ಜೇನು ಅವರ ತೋಟದ ಹೂವಿನ ರಸಕ್ಕೆ ಹೋಗುತ್ತವೆ.

" ಅವರು ಘಟ್ಟದಿಂದ ತೇಲಬಿಟ್ಟ ಹೂ ನಾವು ಸ್ನಾನಮಾಡು ವೆಡೆಗೆ ನೀರಿನ ಮೇಲೆ ಬರುತ್ತದೆ.

" ಅವರ ಹೊಲದ ಕುಸುಮ ನಮ್ಮ ಸಂತೆಯಲ್ಲಿ ಮಾರುತ್ತವೆ.

" ನಮ್ಮ ಊರು ಖಂಜನ, ನಮ್ಮ ನದಿ ಅಂಜನ,
ನನ್ನ ಹೆಸರು ಬಲ್ಲರೆಲ್ಲ, ಅವಳ ಹೆಸರು ರಂಜನ.

" ಬಾಗಿ ಬಳುಕಿ ಅವರ ಮನೆಗೆ ಹೋಗುವ ದಾರಿ ವಸಂತದಲ್ಲಿ ಮಾವಿನ ಹೂವಿನಿಂದ ಮಘಮಘಿಸುತ್ತದೆ.

" ಅವರ ಹೊಲದಲ್ಲಿ ಅಗಸೆ ಕೊಯ್ಲಿಗೆ ಬಂದಾಗ ನಮ್ಮ ಹೊಲದಲ್ಲಿ ಪುಂಡಿ ಹೂವಾಗಿರುತ್ತದೆ.

" ಅವರ ಮನೆಯ ಮೇಲೆ ನಗುತಿರುವ ತಾರೆಗಳು ನಮ್ಮನ್ನು ನೋಡಿ ಕಣ್ಣು ಮಿಟುಕಿಸುತ್ತವೆ.

" ಅವರ ಕೆರೆಯನ್ನು ತುಂಬುವ ಮಳೆ ನಮ್ಮ ಕದಂಬ ವನ ವನ್ನು ನಲಿಸುತ್ತದೆ.

" ನಮ್ಮ ಊರು ಖಂಜನ, ನಮ್ಮ ನದಿ ಅಂಜನ,
ನನ್ನ ಹೆಸರು ಎಲ್ಲ ಬಲ್ಲರು, ಅವಳ ಹೆಸರು ರಂಜನ."

ಮನುಷ್ಯನನ್ನು ಮಂಕುಮಾಡುವ ಹೆಣ್ಣ ಚೆಲುವು ತೀರ ಹೆಣ್ಣಲ್ಲಿ ಇರ ತಕ್ಕದ್ದಲ್ಲ, ಗಂಡು ತನ್ನ ಊಹೆಯಿಂದ ಅದನ್ನು ಮಾಡಿಕೊಂಡಿದ್ದಾನೆ:

" ಹೆಣ್ಣೇ, ನೀನು ದೇವರಿಂದ ಮಾತ್ರ ರೂಪುಗೊಂಡಿಲ್ಲ; ಗಂಡಿನ ಹೃದಯದಿಂದಲೂ ರೂಪುಗೊಂಡಿರುವೆ.

" ಅವನು ತನ್ನ ಆಸೆಗಳಿಂದ ನಿನಗೆ ಸೌಂದರ್ಯವನ್ನು ತುಂಬುತ್ತಿರುವನು.

" ಕವಿಗಳು ನಿನ್ನ ಉಡುಗೆಗಾಗಿ ಹೊನ್ನ ಚಿತ್ರಗಳ ದಾರದಿಂದ ವಸ್ತ್ರವೊಂದನ್ನು ನೇಯುತ್ತಿರುವರು.

“ಚಿತ್ರಗಾರರು ನಿನ್ನ ಆಕೃತಿಗೆ ಮರಳಿಮರಳಿ ಅಮರತೆಯನ್ನು ಕೊಡುತ್ತಿರುವನು.
“ನಿನ್ನನ್ನು ಅಲಂಕರಿಸಿ ನಿನಗೆ ಭೂಷಣವಾಗಿ
“ನಿನ್ನ ಶ್ರೇಷ್ಠತೆಯನ್ನು ಹೆಚ್ಚಿಸುವ ಸಲುವಾಗಿ
“ಸಾಗರವು ಮೌಕ್ತಿಕವನ್ನೂ ಖನಿಗಳು ಸ್ವರ್ಣವನ್ನೂ
“ಚೈತ್ರವನಗಳು ತಮ್ಮ ಪುಷ್ಪಗಳನ್ನೂ ಕೊಡುತ್ತಿರುವುವು.
“ನಿನ್ನ ತಾರುಣ್ಯದ ಮೇಲೆ
“ಗಂಡಸರ ಹೃದಯದಾಸೆ ತನ್ನ ಪ್ರತಿಭೆಯನ್ನು ಬೀರಿದೆ.
“ಹೆಣ್ಣೆ, ನೀನು ಅರ್ಧಮಾತ್ರ ಹೆಣ್ಣು; ಉಳಿದರ್ಧ ಕನಸು.”

ಪ್ರೇಮ ಎನ್ನುವುದು ಮನುಷ್ಯನ ವಿಷಯದಲ್ಲಿ ತೋರುವ ಮನೋಧರ್ಮ ಮಾತ್ರವಲ್ಲ, ಇತರ ಜೀವಗಳನ್ನು ಕುರಿತು ಇರಬಹುದು. ಇದನ್ನು ಕವಿ ಒಂದು ಪದ್ಯದಲ್ಲಿ ಸ್ವಲ್ಪ ಹಾಸ್ಯ ಕಾಣುವಂತೆ ವರ್ಣಿಸಿದ್ದಾರೆ:

“ವೈಶಾಖ ಮಾಸದ ಒಂದು ದಿವಸ ಸುಡುತ್ತಿದ್ದ ಮಧ್ಯಾಹ್ನ ಮುಗಿಯದಂತೆ ನಿಂತಿತ್ತು. ಕಾದ ಭೂಮಿ ಬಿಸಿಲಿನಲ್ಲಿ ದಾಹಕ್ಕೆ ಬಾಯಿಬಿಟ್ಟಿತ್ತು.

“ಆಗ ನನಗೆ ನದಿಯ ದಡದಿಂದ ಬಾ ಅಮ್ಮಯ್ಯ ಎಂದು ಕರೆದದ್ದು ಕೇಳಿಸಿತು. ನಾನು ಪುಸ್ತಕವನ್ನು ಮುಚ್ಚಿ ಕಿಟಕಿಯನ್ನು ತೆಗೆದು ಇದು ಯಾರು ಎಂದು ನೋಡಿದೆನು.

“ಒಂದು ದೊಡ್ಡ ಎಮ್ಮೆ; ಕೆಸರಾದ ಮೈ; ಶಾಂತವಾದ ಸಮಾಧಾನವಾದ ದೃಷ್ಟಿಯಿಂದ ನೀರಿನ ಪಕ್ಕದಲ್ಲಿ ನಿಂತಿತ್ತು.

“ಒಬ್ಬ ತರುಣನು ಮೊಣಕಾಲುದ್ದ ನೀರಿನಲ್ಲಿ ನಿಂತು ಅದನ್ನು ಸ್ನಾನಕ್ಕೆ ಕರೆಯುತ್ತಿದ್ದನು.

“ನನಗೆ ನಗು ಬಂದಿತು; ಸಂತೋಷವಾಯಿತು. ನನ್ನ ಮನಸ್ಸಿನಲ್ಲಿ ಒಂದು ಮಧುರ ಭಾವ ತಲೆದೋರಿತು.”

ಒಟ್ಟಿನಲ್ಲಿ ಪ್ರೇಮವು ಜೀವತತ್ವಕ್ಕಿಂತಲೂ ಕಡಮೆಯಾದದ್ದಲ್ಲ. ಅದರ ಉಪಾಸನೆಯಿಂದ ಸಮಸ್ತ ಮಂಗಳವನ್ನೂ ಪಡೆಯಬಹುದು, ಎಲ್ಲಾ

ಸಿದ್ಧಿಗಳನ್ನೂ ಸಾಧಿಸಬಹುದು, ಎಂಬುದೇ ಕವಿಯ ಭಾವನೆ. ಪ್ರಿಯೆ-ಯಲ್ಲಿ ಸುಖವನ್ನು ಕಂಡ ಪ್ರಿಯನು ಪ್ರೇಮವು ಸಾಕಾದಷ್ಟು ವಿಸ್ತಾರವಾದ ಪ್ರಪಂಚ ಎಂದು ಹೇಳುತ್ತಾನೆ.

"ನನ್ನ ಹೃದಯವೆಂಬ ವನವಿಹಾರಿ ಪಕ್ಷಿ
"ನಿನ್ನ ಕಣ್ಣುಗಳಲ್ಲಿ ತನ್ನ ನಭವನ್ನು ಕಂಡಿದೆ.
"ಇವು ಉದಯದ ತೊಟ್ಟಿಲು; ತಾರೆಗಳ ರಾಜ್ಯ.
"ನನ್ನ ಗೀತಗಳ ಅವುಗಳಲ್ಲಿ ಮುಳುಗಿಹೋಗಿವೆ.
"ಈ ಆಕಾಶದಲ್ಲಿ ಸುತ್ತುವುದೇ ಸಾಕು ನನಗೆ.
"ಇದರ ವಿಸ್ತಾರವಾದ ಪವಿತ್ರತೆಯಲ್ಲಿ ಇದರಲ್ಲಿರುವ ಮೋಡಗಳನ್ನು ಭೇದಿಸಿ
"ಇದರಲ್ಲಿ ಬೆಳಗುವ ಎಳಬಿಸಿಲಿನಲ್ಲಿ ಗರಿ ಹರಡಬಹುದಾದರೆ ಸಾಕು ನನಗೆ."

ಇಷ್ಟು ಶ್ರೇಷ್ಠವಾದ ಈ ತತ್ತ್ವ ಅಷ್ಟೇ ಸರಳವಾದದ್ದು. ಒಂದು ಕಡೆ ಕವಿ ಹೀಗೆಂದು ಹೇಳಿದ್ದಾರೆ:

"ಸಾಧ್ಯವನ್ನು ಮೀರಿದ ಬೇರೆಯ ಮಾಯೆ ಬೇಡ; ದುಸ್ಸಾಧ್ಯವಾದದ್ದನ್ನು ಪಡೆಯುವ ಪ್ರಯತ್ನವಿಲ್ಲ. ಬೆಡಗಿನ ಹಿಂದೆ ಅವಿತು ಭೀತಿಯಿಲ್ಲ. ತಿಳಿಯದ ತತ್ತ್ವವನ್ನು ಹುಡುಕಿ ತಿಳಿಯುವುದಿಲ್ಲ.

"ನಮ್ಮ ಈ ಪ್ರೇಮವು ಗಾನದಂತೆ ಸರಳ."

ನಿಜವಾದ ಪ್ರೇಮ ಇರಲಾಗಿ ಪ್ರಪಂಚದ ಯಾವ ಐಶ್ವರ್ಯವೂ ಮನುಷ್ಯನಿಗೆ ಬೇಕಾಗುವುದಿಲ್ಲ.

ಪ್ರೇಮವು ಸೌಂದರ್ಯದೊಂದಿಗೆ ಹೆಣೆದುಕೊಂಡಿರುವ ತತ್ತ್ವ. ಎಳೆತನದ ಕವಿತೆಯಲ್ಲಿ ಇವು ಒಂದರಲ್ಲಿ ಒಂದು ಕಾಣುತ್ತಿರುತ್ತವೆ. ಈ ಸೌಂದರ್ಯವೆನ್ನುವುದು ಆಕಾರವನ್ನು ಮಾತ್ರ ಕುರಿತಿರುವುದಿಲ್ಲ; ಅಂತರ್ಯದಲ್ಲಿಯೂ ಅದಕ್ಕೆ ವ್ಯಾಪ್ತಿಯಿದೆ. ಅದನ್ನು ಕುರಿತ ಕೆಲವು ಪದ್ಯಗಳನ್ನು ಇಲ್ಲಿ ಕೊಡುವುದು ಆವಶ್ಯಕ.

ವಸಂತಕಾಲವು ಕಾವ್ಯಗಳ ಅನಾದಿ ವಿಷಯ. ಠಾಕೂರರ ಕೈಯಲ್ಲಿ ಅದು ಹೊಸ ಕಳೆಯನ್ನು ಪಡೆದಿದೆ.

"ಆದಿ ಕಾಲದಲ್ಲಿ, ಓ ವಸಂತ, ನೀನು ದೇವ ನಂದನದ ದಕ್ಷಿಣದ ಬಾಗಿಲನ್ನು ತೆರೆದು ನೆಲದ ನವಯೌವನದಲ್ಲಿ ಇಳಿದು ಬಂದಾಗ

"ಗಂಡಸರೂ ಹೆಂಗಸರೂ ಮನೆಗಳನ್ನು ಬಿಟ್ಟು ಓಡಿಬಂದರು, ನಗುತ್ತ ಕುಣಿಯುತ್ತ ಆನಂದ ಸಂಭ್ರಮದ ಮರುಳಾಟದಲ್ಲಿ ಒಬ್ಬರ ಮೇಲೊಬ್ಬರು ಪುಷ್ಪ ಪರಾಗವನ್ನು ಎರಚುತ್ತ ನುಗ್ಗಿದರು.

"ವರುಷ ಹೋಗಿ ವರುಷ ಬರಲು ನೀನು ಆ ದಿವಸ ನಿನ್ನ ದಾರಿಯಲ್ಲಿ ಎರಚಿದ ಅದೇ ಹೂವನ್ನು ಮರಳಿ ತರುತ್ತಿರುವೆ.

"ಆದಕಾರಣ ಇಂದು ಹರಡಿರುವ ಅವುಗಳ ಗಂಧವು ಈಗ ಬರಿಯ ಕನಸಾದ ಆ ದಿನಗಳ ಸುಯಿಲನ್ನು ಸುಯ್ಯುತ್ತದೆ.

"ಬಾಳಿ ಅಳಿದ ಲೋಕಗಳ ನೋವ ನೆನಪು ಅದಕ್ಕೆ ಕಚ್ಚಿ ಕೊಂಡಿದೆ.

"ಮಾನವನ ಭಾಷೆಯಿಂದ ಮರೆತುಹೋಗಿರುವ ಪ್ರೇಮ ಕಥೆಗಳ ಭಾರದಿಂದ ನಿನ್ನ ಮಾರುತನು ಧೀರನಾಗಿದಾನೆ."

"ಒಂದು ದಿನ ಪ್ರೇಮದ ಮೊದಲ ಅನುಭವದಿಂದ ವಿಭ್ರಮ ಗೊಂಡ ನನ್ನ ಬಾಳಿಗೆ ನೀನು ಹೊಸ ಅಚ್ಚರಿಯೊಂದನ್ನು ಧರಿಸಿ ಬಂದೆ.

"ಅದುಮೊದಲು ಹೊಸದಾಗಿ ತಿಳಿದ ಆ ಆನಂದದ ಮೃದುಲ ವಿಹ್ವಲತೆ ನೀನು ತರುವ ಚಕ್ಕೋತದ ಹೂವಿನ ಮೊದಲ ಮುಗುಳಿ ನಲ್ಲಿ ಅವಿತು ಬರುತ್ತದೆ.

"ನುಡಿಯಲಾಗದೆ ತುಂಬಿದ ನನ್ನ ಭಾವವನ್ನು ಕಾದ ಮೌನದಲ್ಲಿ ನಿನ್ನ ನೆಲದಾವರೆ ತಡೆದಿದೆ.

"ಆ ಚೈತ್ರದ ಸುಖಭರಿತ ಯಾಮುಗಳ ಸ್ಮರಣೆ, ಮರಳಿ ಮರಳಿ ಹೊಮ್ಮುವ ನಿನ್ನ ನವಪಲ್ಲವಗಳಲ್ಲಿ, ಪುಳಕಿತವಾಗಿ ಮರ್ಮರಿಸುತ್ತದೆ."

ಕವಿ ಒಂದು ಸಲ ನಾನು ಮುಂದಕ್ಕೆ ಎಲ್ಲಾದರೂ ಪುನಃ ಹುಟ್ಟುವು ದಾದರೆ ಗೋವಳನಾಗಿ ಹುಟ್ಟಿಯೇನು, ಬೃಂದಾವನದಲ್ಲಿ ಇದ್ದೇನು ಎಂದು ಆಸೆಪಡುತ್ತಾನೆ:

"ಮುಂದೆ ಎಂದಾದರೂ ಬೃಂದಾವನದಲ್ಲಿ ಒಬ್ಬ ಗೋವಳ
ನಾಗಿ ನಾನು ಹುಟ್ಟಬಹುದಾದರೆ
"ನನ್ನ ಮನೆತನದ ಪ್ರೌಢಿಮೆಯ ಡಂಭವನ್ನೇ ನಾನು
ಸಾಯುಬಿಟ್ಟೇನು.
"ಆಲದ ಮರದ ಕೆಳಗೆ ಕುಳಿತು ದನವನ್ನು ಮೇಯಿಸುತ್ತ
"ವಿರಾಮವಾಗಿ ಗುಂಜಿಯ ಹೂವನ್ನು ಮಾಲೆ ಮಾಡುವಂಥ,
"ಯಮುನಾ ನದಿಯ ಆಳವಾದ ತಂಪಾದ ವಾಹಿನಿಯಲ್ಲಿ
ದುಮುಕಿ ಈಜುವಂಥ,
"ಗೋಪಾಲನು ನಾನಾಗಬಹುದಾದರೆ."

ತಾನು ಪಡುತ್ತಿರುವ ಸಂತೋಷವೂ ನೋವೂ ಈ ಜನ್ಮದಲ್ಲಿ ಬಂದ ಸಂಸ್ಕಾರ ಮಾತ್ರದ ಫಲವಲ್ಲವೆಂದು ಕವಿಗೆ ಒಂದು ಸಲ ತೋರುತ್ತದೆ. ವಿಶ್ವಜೀವನದ ಮೂಲವಾದ ಅನಂತ ಕಾಲದ ಒಂದು ಜೀವ ಈ ಎಲ್ಲ ಅನುಭವವನ್ನೂ ಪಡುತ್ತದೆ ಎಂದು ಆತನ ಊಹೆ.

"ನನ್ನ ಕಣ್ಣಿನ ಹಿಂದೆ ಒಬ್ಬ ಪ್ರೇಕ್ಷಕನು ಕುಳಿತಿದ್ದಾನೆ.
ಅವನು ಯುಗ ಯುಗಗಳ ಬದುಕನ್ನು ನೋಡಿರುವಂತೆ ಕಾಣುತ್ತದೆ.
"ನೋಡಿ ಮರೆತ ಆ ನೋಟಗಳು ಹುಲ್ಲಿನ ಮೇಲೆ ಹೊಳೆಯು
ತ್ತವೆ; ಎಲೆಗಳಲ್ಲಿ ಅದುರುತ್ತವೆ.
"ಅವನು ಹೊಸ ತೆರೆಗಳ ಹಿಂದೆ ಪ್ರೀತಿಯ ಒಂದೇ ವಸ್ತು
ವನ್ನು
"ಹೆಸರಿಲ್ಲದ ಹತ್ತಾರು ತಾರೆಯ ಮಸುಕು ಬೆಳಕಿನ ಸಂಜೆ
ಯಲ್ಲಿ ನೋಡಿದಾನೆ.
"ಅದರಿಂದ ಅವನ ಆಗಸವು ಕೊನೆಮೊದಲಿಲ್ಲದ ಸಮಾಗಮ
ವಿಪ್ರಲಂಭಗಳ ನೋವಿನಿಂದ ಕಂದಿದಂತೆ ಕಾಣುತ್ತದೆ.

"ವಸಂತದ ಈ ಮಾರುತನನ್ನು ಒಂದು ಆಕಾಂಕ್ಷೆ ವ್ಯಾಪಿಸಿದೆ.

"ಆ ಆಕಾಂಕ್ಷೆಯೋ ಅನಾದಿಕಾಲದ ಪ್ರೇಮದ ಪಿಸುಗುಟ್ಟಿನಿಂದ ತುಂಬಿದೆ."

ಏನೋ ಬೇನೆ ಏನೋ ಆಸೆ; ಬೇನೆ ಏಕೆ, ಯಾವುದನ್ನು ಕುರಿತು ಆಸೆ, ಎಂಬುದು ತಿಳಿಯುವುದಿಲ್ಲ. ಇದನ್ನು ಅನೇಕರು ಅನುಭವಿಸಿರಬೇಕು. ಈ ಅನುಭವವು ಈ ಮಾತುಗಳಲ್ಲಿ ಸುಂದರವಾಗಿ ಕಾಣುತ್ತದೆ:

"ನಾನು ಅಶಾಂತನಾಗಿದೇನೆ.

"ಬಹು ದೂರದ ಸುಖಕ್ಕಾಗಿ ದಾಹಗೊಂಡಿದೇನೆ.

"ದುರಂತ ದೂರದ ಸೆರಗನ್ನು ಸೋಕುವ ಆಸೆಯಿಂದ ನನ್ನ ಮನಸ್ಸು ಹೊಂಗಿ ಹರಿದಿದೆ.

"ಹೇ ಪರಾತ್ಪರವೇ,

"ಹಾ ನಿನ್ನ ಕೊಳಲ ಈ ಕೂರಾದ ಗಾನವೇ!

"ಆಹಾ......ಮರೆತೆನು; ನಾನು ಮರೆಯುತ್ತಲೇ ಇರುವೆನು:

"ನನಗೆ ರೆಕ್ಕೆಯಿಲ್ಲ. ನಾನು ಹಾರಲಾರೆ,

"ನಾನು ಎಂದೆಂದಿಗೂ ಈ ಸ್ಥಳದ ಬಂದಿ."

ಸೌಂದರ್ಯ ಎನ್ನುವುದು ಕಣ್ಣಿಗೆ ಕಾಣದೆ ಇರುವುದರಿಂದ ಅಥವಾ ಮನಸ್ಸಿಗೆ ತೋರದಿರುವುದರಿಂದ ಅದು ಇಲ್ಲವೊ ಎಂದು ಒಂದೊಂದು ಸಲ ಸಂದೇಹ ಹುಟ್ಟುವುದು ಉಂಟು. ಅಂಥ ಒಂದು ಸಂದರ್ಭ ತನಗೆ ಬಂದ ಹಾಗೂ ಆಗ ಸಂದೇಹ ನಿವಾರಣೆ ಹೇಗೆ ಆಯಿತು ಎಂಬುದನ್ನೂ ಕವಿ ಈ ಪದ್ಯದಲ್ಲಿ ಹೇಳಿದ್ದಾರೆ:

"ಸಂಜೆ ನಾನೊಬ್ಬನೇ ಕುಳಿತು ಒಂದು ಪುಸ್ತಕವನ್ನು ಓದುತ್ತ ಇದ್ದೆನು. ನನ್ನ ಎದೆ ಒಣಗಿತು. ಸೌಂದರ್ಯವೆನ್ನುವುದು ಮಾತಿನ ಮಂಡಿಯವರು ಮಾಡಿ ಇಟ್ಟಿರುವ ಮೋಸವೆಂದು ನನಗೆ ತೋರಿತು. ಬೇಸರದಿಂದ ಪುಸ್ತಕವನ್ನು ಮುಚ್ಚಿದೆನು, ದೀಪ

ವನ್ನಾರಿಸಿದೆನು. ಒಂದು ಕ್ಷಣದಲ್ಲಿ ಕೊಟಡಿ ಬೆಳುದಿಂಗಳಿಂದ ಕೋಡಿಹೋಯಿತು.

"ಓ ಸೌಂದರ್ಯ ತತ್ವವೇ! ಆಕಾಶವನ್ನೇ ಮೀರಿ ಹರಿಯುವ ಪ್ರಭೆಯುಳ್ಳ ನೀನು ಸಣ್ಣದೊಂದು ದೀಪದ ಬೆಳಕಿನ ಹಿಂದೆ ಮರೆಯಾಗಬಹುದೆ? ಯಾರ ಧ್ವನಿ ಭೂಮಿಯ ಅಂತರಂಗ ವನ್ನು ನುಡಿಯಬಾರದ ಶಾಂತಿಯೊಂದಿಗೆ ನಾದಿದೆಯೋ ಅಂಥ ನಿನಗೆ ಒಂದು ಪುಸ್ತಕದ ನಾಲ್ಕು ಮಾತು ಮಂಜಿನಂತೆದ್ದು ತೆರೆಯಾಗಬಹುದೆ?"

ಈ ಪ್ರೇಮವೂ ಈ ಸೌಂದರ್ಯಾನುಭವವೂ ನಶ್ವರ, ಇವಕ್ಕೆ ಕಾಲ ವನ್ನು ಕೊಡುವುದು ನಿಷ್ಪ್ರಯೋಜನ, ಎಂದರೆ, ಕವಿ ಅದನ್ನು ಒಪ್ಪುವುದಿಲ್ಲ. ಈ ಅನುಭವ ನಶ್ವರವಾಗಿರುವುದರಿಂದಲೇ ಅದನ್ನು ನಾವು ಪಡೆಯಲಾಶಿಸು ವುದು; ಪಡೆಯಬೇಕಾಗಿರುವುದು.

"ಅಣ್ಣ, ಯಾವ ಮನುಷ್ಯನೂ ಚಿರಜೀವಿಯಲ್ಲ; ಯಾವುದೂ ಬಹು ಕಾಲ ಬಾಳುವುದಿಲ್ಲ. ಇದನ್ನು ಮನಸ್ಸಿನಲ್ಲಿ ತಿಳಿ; ಸಂತೋಷಿಸು.

"ನಮ್ಮ ಬದುಕು ಆದಿಕಾಲದಿಂದ ಬಂದ ಹೊರೆಯಲ್ಲ; ನಮ್ಮ ದಾರಿ ಕೊನೆಗಾಣದ ಪಯಣವಲ್ಲ. ಒಬ್ಬನೇ ಒಬ್ಬ ಕವಿ ಒಂದೇ ಒಂದು ಹಳೆಯ ಗೀತವನ್ನು ಎಂದು ಎಂದಿಗೂ ಹಾಡ ಬೇಕಾಗಿಲ್ಲ. ಹೂವು ಬಾಡುತ್ತದೆ; ಸಾಯುತ್ತದೆ. ಆದರೂ ಅದನ್ನು ಧರಿಸುವವನು ಅದಕ್ಕಾಗಿ ಎಂದೆಂದಿಗೂ ಅಳುತ್ತಿರ ಬೇಕಾದುದಿಲ್ಲ. ಅಣ್ಣ, ಇದನ್ನು ಮನಸ್ಸಿನಲ್ಲಿಟ್ಟುಕೋ; ಸಂತೋಷಿಸು.

"ಗಾನ ಕಳೆಕಟ್ಟಬೇಕಾದರೆ ಮುಕ್ತಾಯವಿರಬೇಕು. ಬಾಳು ತನ್ನ ಸಂಜೆಯ ಕಡೆಗೆ ಬಾಗಿಯೇ ಅದರ ಹೊನ್ನ ಬೆಳಕುಗಳಲ್ಲಿ ಮುಳುಗಬೇಕು. ಪ್ರೇಮ ತನ್ನ ಲೀಲೆಯನ್ನು ಬಿಡಿಸುವ ಆಹ್ವಾನವನ್ನು ಕೇಳಿ ಕಣ್ಣೀರ ಸ್ವರ್ಗಕ್ಕೆ ಹೋಗಬೇಕು. ಅಣ್ಣ, ಇದನ್ನು ಮನಸ್ಸಿನಲ್ಲಿಟ್ಟುಕೋ; ಸಂತೋಷಿಸು.

"ನಾವು ಹೂಗಳನ್ನು ಆಯುವುದಕ್ಕೆ ಅವಸರಪಡುತ್ತೇವೆ. ಅವಸರಪಡಲಿಲ್ಲವೆನ್ನು; ಅಲೆಯುವ ಗಾಳಿ ಅವುಗಳನ್ನು ದೋಚುತ್ತದೆ. ಸಾವಕಾಶಮಾಡಿದರೆ ಮಿಂಚಿಹೋಗುವುದರಿಂದಲೇ ಮುತ್ತುಕೊಟ್ಟು ಮುತ್ತುಕೊಳ್ಳುವ ಜತನದಲ್ಲಿ ನಮ್ಮ ಎದೆ ಉಬ್ಬುತ್ತದೆ, ಕಣ್ಣು ಮಿಂಚುತ್ತದೆ. ನಮ್ಮ ಬಾಳು ಆತುರವಾಗಿರುವುದಕ್ಕೂ, ನಮ್ಮ ಆಶೆಗಳು ತೀವ್ರವಾಗಿರುವುದಕ್ಕೂ ಕಾರಣ, ಕಾಲವು ಅಗಲಿಕೆಯನ್ನು ತರುವುದೆಂಬುದು. ಅಣ್ಣ, ಇದನ್ನು ಮನಸ್ಸಿನಲ್ಲಿಟ್ಟುಕೋ; ಸಂತೋಷಿಸು....

"ಸೌಂದರ್ಯ ನಮಗೆ ಸ್ವಾದುವಾಗಿದೆ. ಅದು ನಶ್ವರವಾದ ನಮ್ಮ ಬಾಳಿನ ಗಾನಕ್ಕೆ ಶ್ರುತಿಯಾಗಿ ಕುಣಿಯುವುದರಿಂದ. ಜ್ಞಾನ ನಮಗೆ ಬೆಲೆಯಾಗಿದೆ; ಅದನ್ನು ನಾವು ಎಂದಿಗೂ ಮುಗಿಸುವಂತಿಲ್ಲ. ಇದೆಲ್ಲ ಮುಗಿಯುವುದು ಮುಕ್ತವಾಗುವುದು ಆದ್ಯಂತರಹಿತವಾದ ಪರಲೋಕದಲ್ಲಿ. ಭೂಲೋಕದ ಮಾಯೆಯ ಕುಸುಮಗಳಾದರೋ ಸತತವೂ ಸೊಗಸುವುದು ಸಾವಿನಿಂದ. ಅಣ್ಣ, ಇದನ್ನು ಮನಸ್ಸಿನಲ್ಲಿಟ್ಟುಕೋ; ಸಂತೋಷಿಸು."

ಈ ದೃಷ್ಟಿಯಿಂದ ಭೂಮಿಯ ವಿಷಯದಲ್ಲಿ, ಪ್ರಪಂಚದ ಜೀವನದ ವಿಷಯದಲ್ಲಿ, ನಮಗೆ ಸಹನೆ ಬರುತ್ತದೆ. ಭೂದೇವಿಯ ವಿಷಯದಲ್ಲಿ ಠಾಕೂರರು ಬರೆದಿರುವ ದೊಡ್ಡ ಒಂದು ಪದ್ಯ ಇಂಗ್ಲೀಷಿನಲ್ಲಿ ಹೀಗೆ ಸಂಕ್ಷಿಪ್ತವಾಗಿದೆ:

"ತಾಯಿ, ಭೂದೇವಿ; ಸಹನಶೀಲೆ, ಕಪಿಲೆ; ನೀನು ಅನಂತೈಶ್ವರ್ಯವಂತೆಯಲ್ಲ. ನಿನ್ನ ಮಕ್ಕಳ ಹೊಟ್ಟೆಯನ್ನು ತುಂಬಲು ನೀನು ದುಡಿಯುತ್ತಿದ್ದೀಯೆ; ಆದರೂ ಅನ್ನ ಸಾಲದೆ ಇದೆ. ನೀನು ನಮಗಾಗಿ ಒದಗಿಸುವ ಸುಖ ಎಂದೂ ಅಕಳಂಕವಾಗಿಲ್ಲ. ನೀನು ನಿನ್ನ ಮಕ್ಕಳಿಗೆ ಮಾಡಿಕೊಡುವ ಗೊಂಬೆಗಳು ಸುಲಭವಾಗಿ ಮುರಿಯುವಂಥವು. ನೀನು ನಮ್ಮ ಅತಿ ಆಸೆಗಳನ್ನೆಲ್ಲ ಸಲಿಸಲಾರೆ. ಆದರೆ ಅಷ್ಟಕ್ಕಾಗಿ ನಾನು ನಿನ್ನನ್ನು ತೊರೆಯಲೆ? ನೋವಿನ ನೆರಳು ಕವಿದಿರುವ ನಿನ್ನ ನಗೆ ನನ್ನ ಕಣ್ಣಿಗೆ ಚೆಲುವಾಗಿದೆ.

ಆಖ್ಯಾನಗಳನ್ನು ಅವರು ಕಾವ್ಯದಲ್ಲಿ ಪ್ರಚುರಗೊಳಿಸಿದರು. ಮುಖ್ಯವಾಗಿ ಇವುಗಳಲ್ಲಿ ಬೌದ್ಧಮತದ ಚರಿತ್ರೆಯ ಧರ್ಮವೀರರು, ಜ್ಞಾನವೀರರು, ಕೆಲವು ವೇಳೆ ಉಪನಿಷತ್ತುಗಳ ಕಾಲದ ಋಷಿಗಳು, ಕೆಲವು ವೇಳೆ ಸಿಕ್ ಮತದ ಗುರುಗಳು, ಇವರ ಮಾತು ಬರುತ್ತದೆ. ಜನಾಂಗ ಪೂರ್ವದಲ್ಲಿ ಎಚ್ಚರಗೊಂಡಿದ್ದ ಕಾಲದ ಹೊಸ ಭಾವನೆ ಹೊಸ ಧರ್ಮ ಬುದ್ಧಿಗೆ ರೂಪುಕೊಡುವುದೂ ಅದರಿಂದ ಈಗಣ ದಾರಿಯನ್ನು ತೋರಿಸುವುದೂ ಈ ಕವಿತೆಗಳ ಉದ್ದೇಶ. ಅಭಿಸಾರ ಎಂಬ ಹೆಸರಿನಿಂದ ಇವರು ಬರೆದ ಉಪಗುಪ್ತನ ಕತೆಯನ್ನು ಕನ್ನಡದಲ್ಲಿ ಶ್ರೀ ಹೊಯ್ಸಳರೂ ಶ್ರೀ ಶಾಲಿಯವರೂ ಸುಂದರವಾಗಿ ಭಾಷಾಂತರಮಾಡಿದಾರೆ. ಇವನ್ನು ನಮ್ಮ ಜನರು ನೋಡಿರಬೇಕು. ಇದರಂತೆಯೇ ಶ್ರೀಮತಿ ಎಂಬ ಬೌದ್ಧ ಭಕ್ತೆ ರಾಜನ ಇಷ್ಟಕ್ಕೆ ವಿರೋಧವಾಗಿ ಬೋಧಿಮರಕ್ಕೆ ಪೂಜೆಮಾಡುವುದಕ್ಕೆ ಹೋದಾಗ ಅವಳನ್ನು ಕಡಿದದ್ದು, ಕಡಿಯುತ್ತಾರೆ ಎಂದು ತಿಳಿದಿದ್ದರೂ ಅವಳು ಪೂಜೆಗೆ ಹೋಗಿ ಜೀವವನ್ನು ಬಲಿಕೊಟ್ಟದ್ದು, ಇದು ಇನ್ನೊಂದು ಕಥೆಯ ವಿಷಯ. ಬಡವರಿಗೆ ಅನ್ನ ಹಾಕುವರು ಯಾರಿದ್ದೀರಿ ಎಂದು ಗುರು ಕೇಳಲಾಗಿ ಸಾಹುಕಾರನು ನಾನೊಲ್ಲೆ ಎಂದನು, ಸೇನಾಪತಿ ನನ್ನಿಂದ ಆಗುವುದಿಲ್ಲ ಎಂದನು, ಭಿಕ್ಷುಕಳಾದ ಸುಪ್ರಿಯೆ ಎದ್ದು ನಾನು ಮಾಡುತ್ತೇನೆ ಎಂದಳು. ಹೇಗೆ ಎಂದು ಎಲ್ಲರೂ ಕೇಳಿದರು. ಅವಳು ಅದಕ್ಕೆ "ನಾನು ಬಡವಳು, ಬೇಡುತ್ತೇನೆ. ನನ್ನ ಪುಣ್ಯ ಅದು. ನನ್ನ ಕಣಜವೂ ಬೊಕ್ಕಸವೂ ನಿಮ್ಮೆಲ್ಲರ ಮನೆಯಲ್ಲೂ ಇದೆ" ಎಂದಳು. ಇದು ಒಂದು ಕಥೆ. ತೋಟಗಾರ ಸುದಾಸನು ಒಳ್ಳೆಯ ಒಂದು ಹೂವನ್ನು ಮಾರುವುದಕ್ಕೆ ಅರಮನೆಗೆ ತೆಗೆದುಕೊಂಡು ಹೋಗುತ್ತಿದ್ದನು. ದಾರಿಯಲ್ಲಿ ಒಬ್ಬ ಧನಿಕನು ಅದಕ್ಕೇನು ಬೆಲೆ ಎಂದು ಕೇಳಲು ತೋಟಗಾರನು ಅತಿಯಾದ ಬೆಲೆ ಹೇಳಿದನು. ಬುದ್ಧನ ಬಳಿಗೆ ಹೊರಟಿದ್ದ ಧನಿಕನು ಈ ಬೆಲೆಗೆ ಒಪ್ಪಿಕೊಂಡನು. ರಾಜನು ಅಲ್ಲಿಗೆ ಬಂದು ಇನ್ನಷ್ಟು ಬೆಲೆ ಕೊಡುವೆನೆಂದು ಹೇಳಿದನು. ಇವನು ಮತ್ತಷ್ಟು ಬೆಲೆ ಹೇಳಿದನು. ರಾಜನು ಅದಕ್ಕೂ ಒಪ್ಪಿಕೊಂಡನು. ಇವನಿಗೆ ಯೋಚನೆ. ಇಷ್ಟು ಹಣ ಕೊಟ್ಟು ಈ ಹೂವನ್ನು ಕೊಳ್ಳುವರೇಕೆ? ಗುರು ಸಮೀಪದಲ್ಲಿದ್ದಾನೆ;

ಅವನಿಗೆ ಕೊಡುವುದಕ್ಕಾಗಿ ಎಂದು ತಿಳಿಯಿತು. ಆಹಾ! ಗುರುವಿಗೆ ಈ ಹೂವನ್ನು ಕೊಡುವುದು ಅಷ್ಟು ಲಾಭಕರವಾದ ಕೆಲಸವಾದರೆ ಅದನ್ನು ಇವರೇಕೆ ಮಾಡಬೇಕು, ನಾನೇ ಮಾಡುತ್ತೇನೆ, ಎಂದು ತೋಟಗಾರನು ತಾನೇ ಆ ಹೂವನ್ನು ತೆಗೆದುಕೊಂಡುಹೋಗಿ ಗುರುವಿಗೆ ಅರ್ಪಿಸಿದನು. ಇದು ಒಂದು ಕಥೆ. ಗುರ ಗೋವಿಂದನು ನದೀತೀರದಲ್ಲಿ ಕುಳಿತು ಉಪದೇಶಿಸುತ್ತಿರಲಾಗಿ ಶಿಷ್ಯ ರಘುನಾಥನು ಎರಡು ಚಿನ್ನದ ಬಳೆಗಳನ್ನು ತಂದು ಅರ್ಪಿಸಿದನು. ಅವನ್ನು ನೋಡುತ್ತ ಗುರು ಒಂದನ್ನು ನೀರೊಳಕ್ಕೆ ಕೆಡವಿದನು. ರಘುನಾಥನು ಹಾ ಎಂದು ನೀರಿಗೆ ಧುಮುಕಿ ಅದನ್ನು ಹುಡುಕಿನೋಡಿದನು. ಅದು ಸಿಕ್ಕಲಿಲ್ಲ. ಸಂಜೆ ಬಂದು ಅದು ಎಲ್ಲಿ ಬಿತ್ತು ತೋರಿಸಿದರೆ ಹುಡುಕಿಸುತ್ತೇನೆ ಎಂದನು. ಗುರು ಇನ್ನೊಂದು ಬಳೆಯನ್ನೆತ್ತಿ ನೀರಿಗೆಸೆದು ಅದೋ ಅಲ್ಲಿ ಬಿತ್ತು ಎಂದನು. ಸನಾತನನು ಉಪದೇಶಿಸುತ್ತಿರುವಾಗ ಅವನಲ್ಲಿ ಬೇಡುವುದಕ್ಕೆಂದು ಬಂದ ಬ್ರಾಹ್ಮಣನು ಐಶ್ವರ್ಯ ಬೇಡ, ಐಶ್ವರ್ಯಗಳನ್ನು ತುಚ್ಛವೆನ್ನುವ ಮಹದೈಶ್ವರ್ಯದ ಒಂದು ತುಣುಕನ್ನು ಕೊಡು, ಎಂದು ಬೇಡುವನು. ಗೌತಮನು ಉಪದೇಶಿಸುತ್ತಿರಲಾಗಿ ಬಾಲಕನೊಬ್ಬನು ಬಂದು ಉಪದೇಶ ಬೇಡುವನು. ಗೌತಮನು ನೀನು ಯಾವ ಗೋತ್ರ ತಿಳಿದು ಬಾ ಎನ್ನುವನು. ಹುಡುಗನು ತಾಯನ್ನು ಕೇಳಿ ಹಿಂದಕ್ಕೆ ಬಂದು ನಮ್ಮ ಗೋತ್ರ ತಿಳಿಯದು, ನಮ್ಮ ತಾಯಿ ತಾರುಣ್ಯದಲ್ಲಿ ಒಂದು ಆಶ್ರಮದಲ್ಲಿ ಸೇವೆಯಲ್ಲಿದ್ದಳು, ನಮ್ಮ ತಂದೆ ಯಾರೆಂದು ಆಕೆಗೆ ತಿಳಿಯದು ಎಂದನು. ಗೌತಮನು ನೀನು ಒಳ್ಳೆಯ ಗೋತ್ರದವನೇ ಸರಿ, ಇಂಥಾ ಸತ್ಯವನ್ನು ನುಡಿಯಬಲ್ಲವನು ಉಪದೇಶಕ್ಕೆ ಅರ್ಹನಾದವನು, ಸಂದೇಹವಿಲ್ಲ, ಎಂದು ಆತನಿಗೆ ಉಪದೇಶಮಾಡಿದನು. ರವೀಂದ್ರನಾಥ ಠಾಕೂರರು ಎಂತಹ ಕತೆಗಾರರು ಎಂದು ಅವರ ಸಣ್ಣ ಕತೆಗಳನ್ನು ಓದಿದವರು ಬಲ್ಲರು. ಇಂಥ ಸಂದರ್ಭಗಳನ್ನೆಲ್ಲಾ ಅವರು ಕಾವ್ಯದಲ್ಲಿ ಯಾವ ರೀತಿಯಲ್ಲಿ ಹೇಳಿರಬಹುದೆಂದು ನಮಗೆ ಊಹಿಸುವುದಕ್ಕೆ ಇದರಿಂದ ಸಾಧ್ಯವಾಗಬೇಕು. ಮೊತ್ತದಲ್ಲಿ ಈ ಕಥೆಗಳು ಜನರಲ್ಲಿ ಉದಾತ್ತ ಭಾವನೆಗಳನ್ನು ಹರಡುವ ಬಹಳ ಅವಶ್ಯವಾದ ಸೇವೆಯನ್ನು ಸಾಧಿಸಿದುವು ಎಂದು ಹೇಳಬಹುದು.

ಈ ಕಾವ್ಯಗಳ ವಿಚಾರವನ್ನು ಇವರು ನಮ್ಮ ದೇಶದ ಪರವಾಗಿ ಮಾಡಿರುವ ಪ್ರಾರ್ಥನೆಯಿಂದ ಮುಗಿಸಬಹುದು :

ಚಿತ್ತವೆಲ್ಲಿ ಭಯ ಶೂನ್ಯ, ಉಚ್ಚವೆಲ್ಲಿ ಶಿರ,
ಜ್ಞಾನವೆಲ್ಲಿ ಮುಕ್ತ, ಎಲ್ಲಿ ಗೃಹಭಿತ್ತಿಗಳು
ತಮ್ಮ ಪ್ರಾಂಗಣ ತಲದಲ್ಲಿ ಹಗಲಲ್ಲಿ ರಾತ್ರಿಯಲ್ಲಿ
ವಸುಧೆಯನ್ನು ಕ್ಷುದ್ರ ಖಂಡಗಳಾಗಿ ಮಾಡಿಲ್ಲ.
ಎಲ್ಲಿ ಮಾತು ಹೃದಯದ ಉತ್ಸಮುಖದಿಂದ
ಸತ್ಯವಾಗಿ ಏಳುವುದು, ಎಲ್ಲಿ ಕರ್ಮಧಾರೆಯು ನಿರ್ವಾರಿತ ಸ್ರೋತ
ದೇಶ ದೇಶದಲ್ಲಿ ದಿಶೆ ದಿಶೆಯಲ್ಲಿ
ಅಜಸ್ರ ಸಹಸ್ರ ವಿಧ ಚರಿತಾರ್ಥಕ್ಕಾಗಿ ಹರಿಯುವುದು,
ಎಲ್ಲಿ ತುಚ್ಛ ಆಚಾರದ ಮರುವಾಲು ರಾಶಿ
ವಿಚಾರದ ಸ್ರೋತಃಪಥವನ್ನು ನುಂಗಿ ಮರಸಿ,
ಪೌರುಷವನ್ನು ನೂರು ತುಂಡುಮಾಡಿಲ್ಲ,
ಎಲ್ಲಿ ನಿತ್ಯ ನೀನು ಕರ್ಮಚಿಂತೆಯನ್ನು ಆನಂದಕ್ಕೆ ಒಯ್ಯುವೆ,
ತಂದೆ, ಭಾರತೀಯರು ಆ ಸ್ವರ್ಗದಲ್ಲಿ ಎಚ್ಚರಗೊಳ್ಳುವಂತೆ
ನಿನ್ನ ಹಸ್ತದಿಂದ ನಿರ್ದಯವಾಗಿ ಆಘಾತಮಾಡು.

## ೨೮. ಶಿಶು

ಠಾಕೂರರ ಶಿಶು ಗ್ರಂಥದ ಕವಿತೆಗಳು ಇಂಗ್ಲೀಷಿನಲ್ಲಿ "ಕ್ರೆಸೆಂಟ್ ಮೂನ್" (Crescent Moon) ಎಂಬ ಪುಸ್ತಕದಲ್ಲಿ ಭಾಷಾಂತರವಾಗಿವೆ. ಮಕ್ಕಳ ಆಟ ಪಾಟಗಳನ್ನು ಅವರು ಎಷ್ಟು ವಿಶ್ವಾಸದಿಂದ ನೋಡುತ್ತಿದ್ದರು, ಎಷ್ಟು ಸಹಾನುಭೂತಿಯಿಂದ ತಿಳಿಯುತ್ತಿದ್ದರು, ಎಂಥ ವಿಚಿತ್ರ ವಿಲಾಸದಿಂದ ವರ್ಣಿಸಿದರು, ಎನ್ನುವುದು ಈ ಭಾಷಾಂತರಗಳಲ್ಲೂ ಚೆನ್ನಾಗಿ ಕಾಣುತ್ತದೆ. ಇದು ತಿಳಿಯುವಂತೆ ಈ ಪುಸ್ತಕದಿಂದ ಕೆಲವು ಪದ್ಯಗಳನ್ನು ಇಲ್ಲಿ ಎತ್ತಿ ಬರೆದಿದೆ.

"ಮಗುವಿನ ರೀತಿ" ಎಂಬ ಹೆಸರಿನದು ಒಂದು ಕವಿತೆ. ಏನೂ ತಿಳಿಯದಂತಿರುವ ಮಗು, ತಾಯಿಗಾಗಿ ಅಳುವ ಮಗು, ಏಕೋ

ಅಳುವಂತಿರುವ ಮಗು, ಅಷ್ಟು ಅಜ್ಞಾನಿಯಲ್ಲ, ಅವಿವೇಕಿಯಲ್ಲ ಎಂದು ನಗೆಯೊಡನೆ ಕನಿಕರದೊಡನೆ ಈ ಪದ್ಯದಲ್ಲಿ ಹೇಳಿದೆ:

"ಬೇಕು ಎಂದರೆ ಕಂದನು ಈಗ ಒಂದೇ ಕ್ಷಣದಲ್ಲಿ ಸ್ವರ್ಗಕ್ಕೆ ಹಾರಬಲ್ಲನು. ಆದರೂ ಅವನು ಹೋಗುವುದಿಲ್ಲ. ಅದಕ್ಕೆ ಕಾರಣ ವಿಲ್ಲದೆ ಇಲ್ಲ. ಅವನಿಗೆ ತಾಯ ಎದೆಯಮೇಲೆ ತಲೆಬಾಗಿಸಿ ಕೊಂಡಿರುವುದಕ್ಕೆ ಆಸೆ. ಅವಳನ್ನು ಕಾಣದೆ ಒಂದು ಕ್ಷಣ ಇರಲಾರನು.

"ಕಂದನಿಗೆ ಬಹಳ ಬುದ್ಧಿಯ ಪದಗಳು ತಿಳಿದಿವೆ. ಭೂಮಿಯ ಮೇಲೆ ಇರುವವರಿಗೆ ಅವುಗಳ ಅರ್ಥ ತಿಳಿಯುವುದಿಲ್ಲ ಅಷ್ಟೆ. ಕಂದನು ತನ್ನ ಮಾತನ್ನು ಆಡುವುದಿಲ್ಲ. ಇದಕ್ಕೆ ಕಾರಣ ವಿಲ್ಲದೆ ಇಲ್ಲ. ಅವನಿಗೆ ಏನು ಆಸೆ ಎಂದರೆ ತಾಯ ಮಾತನ್ನು ತಾಯ ಬಾಯಿಂದಲೇ ಕಲಿಯಬೇಕು ಎಂದು. ಅದರಿಂದಲೇ ಅವನು ಏನೂ ತಿಳಿಯದವನಂತೆ ಕಾಣುತ್ತಾನೆ.

"ಕಂದನಿಗೆ ರಾಶಿ ರಾಶಿ ಚಿನ್ನರನ್ನಗಳಿದ್ದುವು. ಆದರೂ ಅವನು ಭೂಮಿಗೆ ಬರಬೇಕಾದರೆ ಭಿಕಾರಿಯಂತೆ ಬರಿಯ ಕೈಯಲ್ಲಿ ಬಂದನು. ಇದೊಂದು ಬರಿಯ ವೇಷ. ಆದರೆ ವೇಷದಲ್ಲಿ ಬರು ವುದಕ್ಕೆ ಕಾರಣವಿಲ್ಲದೆ ಇರಲಿಲ್ಲ. ಬರಿಮೈಯ ಈ ಪುಟ್ಟ ಭಿಕ್ಷುಕನು ಏನೂ ದಿಕ್ಕಿಲ್ಲದಂತೆ ಕಾಣುವುದು ತಾಯ ಪ್ರೀತಿಯ ಧನವನ್ನು ಕೇಳುವುದಕ್ಕಾಗಿ.

"ಕಂದನು ಚಂದಮಾಮನ ಲೋಕದಲ್ಲಿ ತಂಗು ತಡಂಗು ಇಲ್ಲದೆ ಸ್ವತಂತ್ರನಾಗಿದ್ದನು. ಅವನು ಆ ಸ್ವಾತಂತ್ರ್ಯವನ್ನು ಬಿಟ್ಟು ಬಂದಿದಾನೆ. ಇದಕ್ಕೆ ಕಾರಣವಿಲ್ಲದೆ ಇಲ್ಲ. ತಾಯ ಹೃದಯದ ಒಂದು ಮೂಲೆಯಷ್ಟರಲ್ಲಿ ಕೊನೆ ಮೊದಲಿಲ್ಲದ ಸುಖಕ್ಕೆ ಸ್ಥಳ ವಿದೆಯೆಂದು ಅವನು ಬಲ್ಲನು. ಸ್ವತಂತ್ರವಾಗಿ ಇರುವುದಕ್ಕಿಂತ ಅವಳ ತೋಳಿಗೆ ಸಿಕ್ಕಿ ತೆಕ್ಕೆಯಲ್ಲಿರುವುದು ಹೆಚ್ಚು ಸುಖವೆಂದು ಅವನ ಅರಿವು.

"ಕಂದನಿಗೆ ಅಳುವುದೇ ತಿಳಿದಿರಲಿಲ್ಲ. ಅವನು ತುಂಬಿದ ಆನಂದದ ಆವಾಸದಲ್ಲಿದ್ದನು. ಅವನು ಈಗ ಅಳುವುದಕ್ಕೆ ಒಪ್ಪಿಕೊಂಡಿದಾನೆ. ಇದಕ್ಕೆ ಕಾರಣವಿಲ್ಲದೆ ಇಲ್ಲ. ನಗುತಿರುವಾಗ ಅವನ ಮುದ್ದು ಮೊಗ ಅಮ್ಮನ ಎದೆಯ ಆಸೆಯನ್ನು ಸೆಳೆಯುವುದು ನಿಜ. ಆದರೆ ಸಣ್ಣ ಪುಟ್ಟ ತೊಂದರೆಯಿಂದ ಈ ಕೂಸು ಅಳುವ ಅಳು ಕನಿಕರ ಪ್ರೇಮಗಳ ಎರಡು ಬಾರಿಯ ಕಟ್ಟನ್ನು ನೇಯುತ್ತದೆ."

ಮಗು ತಾಯಿಗೆ ಎಷ್ಟು ಶ್ರೇಷ್ಠವಾದ ವಸ್ತು, ಅವಳ ಜೀವನದ ಎಂತಹ ಫಲ, ವಿಶ್ವಜೀವನದ ವಾಹಿನಿಯಲ್ಲಿ ಅದು ಯಾವ ಭಾಗ್ಯ, ಎನ್ನುವುದನ್ನು ವಿವರಿಸಿರುವ ಈ ಪದ್ಯ ಸುಂದರವಾಗಿಯೂ ತತ್ವ ಬೋಧಕವಾಗಿಯೂ ಇದೆ:

"ಮಗು ತಾಯನ್ನು ಕೇಳಿತು. ನಾ ಎಲ್ಲಿಂದ ಬಂದೆ? ನೀನು ನನ್ನನ್ನು ಎಲ್ಲಿ ಎತ್ತಿಕೊಂಡೆ?

"ತಾಯಿ ಅವನನ್ನು ಎದೆಗೆ ಅಪ್ಪಿಕೊಂಡು ಅರೆ ಅಳು ಅರೆ ನಗೆಯಿಂದ ಹೇಳಿದಳು:

"ಕಂದ ನೀನು ನನ್ನ ಮನಸ್ಸಿನಲ್ಲಿ ಅದರ ಆಸೆಯಾಗಿ ಅಡಗಿದ್ದೆ. ನನ್ನ ಬಾಲ್ಯದ ಆಟದ ಗೊಂಬೆಗಳಲ್ಲಿ ಇದ್ದದ್ದು ನೀನು. ದಿನವೂ ಉದಯದಲ್ಲಿ ಪೂಜೆಗೆಂದು ನಾನು ಮಣ್ಣಿನ ಮೂರ್ತಿಯನ್ನು ಮಾಡಿದಾಗ ನಿನ್ನನ್ನು ಮಾಡಿದೆನು, ನಿನ್ನನ್ನು ಮುರಿದೆನು.

"ನೀನು ನಮ್ಮ ಮನೆಯ ದೇವರೊಳಗಿದ್ದೆ. ಅವನ ಪೂಜೆಯಲ್ಲಿ ನಾನು ನಿನ್ನನ್ನು ಪೂಜಿಸಿದೆನು. . . . . ನಮ್ಮ ಕುಲದೇವತೆಯ ಅನಂತಾತ್ಮದ ಮಡಿಲಲ್ಲಿ ನೀನು ಯುಗಯುಗಗಳು ಬೆಳೆದೆ.

"ಎಳತನದಲ್ಲಿ ನನ್ನ ಮನಸ್ಸು ಅರಳಿ ದಳ ಕಾಣುವಂದು ನೀನು ಅದರ ಸುಗಂಧವಾಗಿ ಅಲ್ಲಿ ಸುತ್ತಿಕೊಂಡಿದ್ದೆ. ನನ್ನ ಯೌವನದ ಅಂಗಗಳಲ್ಲಿ ನಿನ್ನ ಮೃದುವಾದ ಸರಳತೆ ಉದಯದ ಮೊದಲು ನಭದಲ್ಲಿ ಕಾಣುವ ಪ್ರಭೆಯಂತೆ ಅರಳಿತು.

"ಸ್ವರ್ಗಲೋಕದ ಆದಿ ಅಣುಗ ನೀನು. ಉದಯದ ಬೆಳಕಿನ ಅವಳಿಜವಳಿ ನೀನು. ಜಗಜ್ಜೀವನದ ವಾಹಿನಿಯಲ್ಲಿ ತೇಲಿಬಂದು ನನ್ನ ಹೃದಯದೆಡೆ ತಡೆದು ನಿಂತಿದ್ದೀಯೆ...."

ಮಗುವನ್ನು ಸಣ್ಣ ಪುಟ್ಟ ವಿಷಯಕ್ಕೆಲ್ಲಾ ಗದರುವ ಬಯ್ಯುವ ಜನರನ್ನು ಈ ಮಾತಿನಲ್ಲಿ ಕವಿ ಗದರುತ್ತಾರೆ:

"ಯಾಕೋ ಕಣ್ಣಿನಲ್ಲಿ ನೀರು ಅಪ್ಪಯ್ಯ. ಸದಾ ಕಾಲ ನಿನ್ನನ್ನು ಸುಮ್ಮನೆ ಬಯ್ಯುವರಲ್ಲ. ಏನು ಅನ್ಯಾಯ. ಬರೆಯುವಾಗ ಬೆರಳನ್ನೂ ಮುಖವನ್ನೂ ಮಸಿಮಾಡಿಕೊಂಡೆಯೆಂತಲೇ? ಇಷ್ಟಕ್ಕೆ ನಿನ್ನನ್ನು ಕೊಳಕನೆನ್ನುವರೆ? ಛೆ, ಛೆ, ಮುಖಕ್ಕೆ ಸ್ವಲ್ಪ ಕಪ್ಪನ್ನು ಹಚ್ಚಿಕೊಂಡಿರುವ ಮಾತ್ರಕ್ಕೆ ಹುಣ್ಣಿಮೆಯ ಚಂದ್ರನನ್ನು ಇವರು ಕೊಳಕನೆನ್ನುವರೆ?

"ಸಣ್ಣ ಪುಟ್ಟ ಮಾತಿಗೆಲ್ಲ ನಿನ್ನನ್ನು ದೂರುವರು. ಕಾರಣವಿಲ್ಲದೆಯೆ ತಪ್ಪುಹುಡುಕುವರು. ಆಡುವಾಗ ನೀನು ಬಟ್ಟೆಯನ್ನು ಹರಿದುಕೊಂಡೆಯೆಂತಲೆ? ಇದಕ್ಕೇ ನಿನ್ನನ್ನು ಅಜಾಗ್ರತೆ ಎನ್ನುವುದು? ಛೆ, ಛೆ, ಆಶ್ವೀಜದ ಉದಯ ಹರುಕು ಮೋಡದ ಮಧ್ಯೆ ನಗುತ್ತಿದ್ದರೆ ಅದನ್ನು ಅವರು ಅಜಾಗ್ರತೆಯೆಂದು ದೂರುವರೆ?

"ಕಂದ, ಅವರು ಹೇಳುವುದಕ್ಕೆ ನೀನು ಲಕ್ಷ್ಯಮಾಡಬೇಡ. ನಿನ್ನ ತಪ್ಪುಗಳ ದೊಡ್ಡದೊಂದು ಪಟ್ಟಿಯನ್ನು ಮಾಡುತ್ತಾರೆ. ನಿನಗೆ ಸೀ ಅಂದರೆ ಆಸೆ. ಇದಕ್ಕೆ ನಿನ್ನನ್ನು ಆತುರದ ಮಗು ಎನ್ನುವುದೆ? ಛೆ, ಛೆ, ನೀನೆಂದರೆ ಇಷ್ಟು ಆಸೆಪಡುವ ನಮ್ಮನ್ನು ಏನೆಂದು ಹೇಳುವುದು?"

ಇದರಲ್ಲಿ ಮಗುವಿನ ಮುಖವನ್ನು ಚಂದ್ರನಿಗೂ ಅವನ ಹರುಕು ಬಟ್ಟೆಯನ್ನು ಆಶ್ವೀಜದ ನಗುಮೋಡಕ್ಕೂ ಹೋಲಿಸಿರುವ ಸೊಗಸು ವಿಲಕ್ಷಣವಾದುದು. ಮಗನನ್ನು ಶಿಕ್ಷಿಸುವೆನು ಎಂದು ಬರುವವರಿಗೆ ತಾಯಿ ಹೇಳುವ ಈ ಮಾತು ಬಹಳ ಸುಂದರವಾಗಿದೆ:

"ನೀವು ಬೇಕಾದದ್ದು ಹೇಳಿ, ನಮ್ಮ ಮಗುವಿನ ತಪ್ಪನ್ನು ನಾನು ಬಲ್ಲೆ. ನಾನು ಅವನನ್ನು ಪ್ರೀತಿಸುವುದು ಅವನು

ಒಳ್ಳೆಯವನು ಎನ್ನುವುದರಿಂದ ಅಲ್ಲ. ಅವನು ನನ್ನ ಮಗುವಾದದ್ದ ರಿಂದ. ಅವನನ್ನು ಹೊರುವುದಕ್ಕಾಗಲಿ ಹೊಡೆಯುವುದಕ್ಕಾಗಲಿ ನನಗೊಬ್ಬಳಿಗೇ ಅಧಿಕಾರ. ಶಿಕ್ಷಿಸುವ ಅಧಿಕಾರ ಪ್ರೀತಿಸುವರದು ಮಾತ್ರ.''

ಇದರ ಕೊನೆಯ ಮಾತು ಮಕ್ಕಳನ್ನು ಶಿಕ್ಷಿಸುವುದಕ್ಕೆ ಬಂದ ಉಪಾಧ್ಯಾಯರಿಗೆ ಮಾತ್ರ ಅನ್ವಯಿಸುವುದಿಲ್ಲ. ಇನ್ನೊಬ್ಬನನ್ನು ತಿದ್ದು ವವನು ನಾನು ಎಂದು ಯಾರಾದರೂ ಹಾಗೆ ಮಾಡಲಪೇಕ್ಷಿಸಿದರೆ ಅದಕ್ಕೂ ಅನ್ವಯಿಸುತ್ತದೆ.

ಮಗು ತಾನೂ ದೊಡ್ಡವನಾಗಿದ್ದೇನೆ, ದೊಡ್ಡವರ ಹಾಗೆಯೇ ಮಾಡುತ್ತೇನೆ ಎಂದು ಹೇಳುವ ಈ ಪದ್ಯವೂ ಬಹಳ ಮುದ್ದಾದುದು:

"ನಾನು ಮಗುವಾದದ್ದರಿಂದ ಸಣ್ಣವನಾಗಿದ್ದೇನೆ. ಅಪ್ಪಾಜಿಯಷ್ಟು ದೊಡ್ಡವನಾದಾಗ ದೊಡ್ಡವನಾಗಿರುತ್ತೇನೆ. ಮೇಷ್ಟರು ಬಂದು ಹೊತ್ತಾಯಿತು ಸ್ಲೇಟು ಪುಸ್ತಕ ತೆಗೆದುಕೊಂಡು ಬಾ ಎನ್ನುತ್ತಾರೆ. ನಾನು ಅವರಿಗೆ, ನಾನು ಅಪ್ಪಾಜಿಯಷ್ಟು ದೊಡ್ಡವ ನಾಗಿದೇನೆ ತಿಳಿಯಲಿಲ್ಲವೆ, ಇನ್ನು ಮೇಲೆ ನಾನು ಪಾಠ ಕಲಿಯ ಕೂಡದು, ಎನ್ನುತ್ತೇನೆ. ಅವರು, ಅಬ್ಬ! ಕೂಸು ದೊಡ್ಡವನಾದ, ಇಷ್ಟವಿಲ್ಲದಿದ್ದರೆ ಓದಬೇಕಾದದಿಲ್ಲ, ಎನ್ನುತ್ತಾರೆ.

"ನಾನು ಬಟ್ಟೆ ಹಾಕಿಕೊಂಡು ಸಂತೆಗೆ ಹೋಗಿ ಗುಂಪಿನಲ್ಲಿ ನುಗ್ಗುತ್ತೇನೆ. ಚಿಕ್ಕಪ್ಪ ಓಡಿಬಂದು, ಅಣ್ಣಯ್ಯ ತಪ್ಪಿಸಿಕೊಂಡು ಹೋಗುತೀಯೆ, ನಾ ಎತ್ತಿಕೊಳ್ಳುತೇನೆ ಬಾ, ಎನ್ನುತ್ತಾರೆ. ನಾನು, ಚಿಕ್ಕಪ್ಪ ನಾನು ಅಪ್ಪಾಜಿಯಷ್ಟು ದೊಡ್ಡವನಾಗಿದ್ದೇನೆ, ಕಾಣುವುದಿಲ್ಲವೆ, ನಾನು ಸಂತೆಗೆ ಒಬ್ಬನೇ ಹೋಗಬೇಕು, ಎನ್ನುತ್ತೇನೆ. ಚಿಕ್ಕಪ್ಪ, ಹೌದು ಕೂಸು ದೊಡ್ಡವನಾಗಿದ್ದಾನೆ, ಅವನಿಗೆ ಇಷ್ಟ ಬಂದ ಕಡೆ ಹೋಗಬಹುದು, ಎನ್ನುತ್ತಾರೆ.

"ತಾಯಿ ಸ್ನಾನ ಮುಗಿಸಿಕೊಂಡು ಬರುವಾಗ ನಾನು ದಾದಿಗೆ ಚಿಲ್ಲರೆ ಕೊಡುತ್ತಿರುತ್ತೇನೆ. ಬೀಗದ ಕೈಯಿಂದ ಪೆಟ್ಟಿಗೆ ತೆಗೆಯುವುದು ನನಗೆ ಬಂದಿರುತ್ತದೆ. ಅಮ್ಮ ಆಗ, ಎಲಾ ತುಂಟ

ಏನುಮಾಡುತ್ತಿದೀಯೋ, ಎನ್ನುತ್ತಾಳೆ. ನಾನು, ಅಮ್ಮಾ ನಿನಗೆ ಗೊತ್ತಿಲ್ಲವೆ, ನಾನು ಅಪ್ಪಾಜಿಯ ಹಾಗೆ ಆಗಿದೇನೆ, ದಾದಿಗೆ ಚಿಲ್ಲರೆ ಕೊಡಬೇಕು, ಎನ್ನುತ್ತೇನೆ. ಆಗ ಅಮ್ಮ, ಹೌದು ಅವನಿಗೆ ಇಷ್ಟ ಬಂದವನಿಗೆ ಅವನು ಹಣ ಕೊಡಬಹುದು, ಎನ್ನುತ್ತಾರೆ.

"ಆಶ್ವೀಜಮಾಸದಲ್ಲಿ ತಂದೆ ನಾನು ಇನ್ನೂ ಮಗುವೆಂದು ತಿಳಿದು ನನಗಾಗಿ ಪುಟ್ಟ ಜೋಡನ್ನೂ ಪುಟ್ಟ ಅಂಗಿಯನ್ನೂ ಮನೆಗೆ ತರುತ್ತಾರೆ. ನಾನು, ಅಪ್ಪಾಜಿ ಅದನ್ನು ಅಣ್ಣನಿಗೆ ಕೊಡು, ನನಗೆ ಚಿಕ್ಕದು, ನಾನು ನಿನ್ನಷ್ಟು ದೊಡ್ಡವನಾಗಿದ್ದೇನೆ, ಎನ್ನುತ್ತೇನೆ. ಅಪ್ಪಾಜಿ ಹಾಗೆಯೇ ಯೋಚನೆಮಾಡಿ, ಹೌದು ಕೂಸು ದೊಡ್ಡವ ನಾದ, ಅವನ ಬಟ್ಟೆ ಬೇಕಾದರೆ ಅವನೇ ಕೊಂಡುಕೊಳ್ಳಬಲ್ಲ, ಎನ್ನುತ್ತಾರೆ."

ದೊಡ್ಡವರು ಮಾಡುವ ಯಾವ ಕೆಲಸ ಮಾಡಬೇಕೆಂದು ಹುಡುಗನು ನೋಡಿದರೂ ಆ ದೊಡ್ಡವರು ತಡೆಯುತ್ತಾರೆ. ಇತ್ತ ಚಿಕ್ಕಪ್ಪ, ಅತ್ತ ತಾಯಿ, ಇತ್ತ ತಂದೆ. ಈ ಕಷ್ಟದಿಂದೆಲ್ಲಾ ಹೇಗೆ ಪಾರಾಗುವುದು ಎಂದು ಮಗು ಯೋಚಿಸಿ ಆ ಪಾರಾದ ಸ್ಥಿತಿಯನ್ನು ಊಹಿಸುವುದು ದೊಡ್ಡವರಲ್ಲಿ ಕನಿಕರದಿಂದ ಕೂಡಿದ ನಗುವನ್ನೆಬ್ಬಿಸಬೇಕು. ತಾನು ದೊಡ್ಡವನಾದಾಗ ತನ್ನ ಅಂಗಿಯನ್ನು ತನ್ನಣ್ಣನಿಗೆ ಕೊಡಬೇಕೆಂದು ಸೂಚಿಸುವ ಮಗುವಿನ ಊಹೆ ನಿಜವಾಗಿಯೂ ಮಗುವಿನದು. ಮಕ್ಕಳು ಆಡುವ ಮಾತನ್ನು ವಿಶ್ವಾಸದಿಂದ ವಿಭ್ರಾಂತಿಯಿಂದ ನೋಡಿದವರಿಗೆ ಮಾತ್ರ ಇದು ಅರ್ಥ ವಾಗುವುದು.

ತಂದೆ ಪುಸ್ತಕವನ್ನು ಬರೆಯುವನೆಂದು ತಾನೂ ಪುಸ್ತಕವನ್ನು ಬರೆಯ ಹೊರಟ ಮಗು ಅಡ್ಡಿಮಾಡುವ ತಾಯಿಗೆ ಹೇಳುವ ಮಾತಿನ ಈ ಪದ್ಯವೂ ಇದೇ ರೀತಿಯಲ್ಲಿ ಶಿಶುಗಳಲ್ಲಿ ಸಹಜವಾದ ಭಾವನೆಯನ್ನು ವ್ಯಕ್ತಗೊಳಿಸುತ್ತದೆ:

"ಅಮ್ಮಾ, ಅಪ್ಪಾಜಿ ಬಹಳಾ ಪುಸ್ತಕಾ ಬರೀತಾರೆ ಅಂತ ನೀನು ಹೇಳುತೀ. ಅಂದ್ರೆ ಅವರು ಬರಿಯೋದು ಒಂದೂ ತಿಳಿ ಯೋಲ್ಲ. ಅವರು ನಿನ್ನೇ ಸಂಜೆ ಓದಿಹೇಳುತಾ ಇದ್ದರಲ್ಲ, ಅದು

ಏನು ಅಂತ ನಿನಗೆ ನಿಜವಾಗಿ ತಿಳಿಯಿತೇನಮ್ಮ? ಅಮ್ಮ ನೀನು ಎಷ್ಟು ಒಳ್ಳೆಯ ಕತೆಗಳನ್ನು ಹೇಳುತೀಯೆ. ಅಪ್ಪಾಜಿ ಯಾಕೆ ಅದರ ಹಾಗೆ ಬರಿಯಬಾರದು? ಅಪ್ಪಾಜಿಗೆ ಅವರ ತಾಯಿ ರಾಕ್ಷಸರೂ ಯಕ್ಷರೂ ರಾಜಕುಮಾರಿಯರೂ ಬರುವ ಕತೆಗಳನ್ನು ಹೇಳಲಿಲ್ಲವೇ ನಮ್ಮ? ಇಲ್ಲ ಅಪ್ಪಾಜಿ ಅದನ್ನೆಲ್ಲ ಮರೆತುಬಿಟ್ಟಿದ್ದಾರೋ.

"ಅಮ್ಮಾ, ನಾನು ಅಪ್ಪಾಜಿಯ ಲೇಕಣಿ ತೆಗೆದುಕೊಂಡು ಅವರ ಪುಸ್ತಕದ ಮೇಲೆ ಅವರು ಬರಿಯೋ ಹಾಗೆಯೇ ಅ ಆ ಇ ಈ ಎಂತ ಬರೆದರೆ ನೀನು ಏನಮ್ಮ ಬಹಳ ಕೋಪಿಸಿಕೊಳ್ಳುತ್ತೀಯೆ? ಅಪ್ಪಾಜಿ ಬರೆದರೆ ಮಾತ್ರ ಒಂದು ಮಾತೂ ಆಡುವುದಿಲ್ಲ. ಅಪ್ಪಾಜಿ ಕಟ್ಟುಕಟ್ಟು ಕಾಗದ ಖರ್ಚುಮಾಡಿದರೂ ನೀನು ಲಕ್ಷ್ಯಮಾಡದೆ ಇದ್ದುಬಿಡುತ್ತೀಯೆ. ನಾನು ದೋಣಿಮಾಡುವುದಕ್ಕೆ ಒಂದು ಕಾಗದ ತೆಗೆದುಕೊಂಡ್ರೆ ಕೂಗಾಡಿಬಿಡುತ್ತೀಯಲ್ಲ! ಅಪ್ಪಾಜಿ ಹೋಗಿ ಕಾಗದದ ಮೇಲೆ ಕಾಗದಾನ ಎರಡೂಕಡೆ ಮಸಿ ಮಾಡಿದರೂ ತಪ್ಪಿಲ್ಲವೋ?"

ತೀರಿಹೋದ ಒಂದು ಮಗುವಿಗಾಗಿ ದುಃಖಿಸುತ್ತಿರುವ ತಾಯ ಮಾತು ಈ ಪದ್ಯದಲ್ಲಿ ಬಂದಿದೆ:

"ಅವಳು ಹೋದಾಗ ಅರ್ಧರಾತ್ರಿ; ಅವರೆಲ್ಲ ನಿದ್ರೆಯಲ್ಲಿದ್ದರು. ಈಗ ಅರ್ಧರಾತ್ರಿ, ನಾನು ಅವಳನ್ನು ಕರೆಯುತ್ತಿದೇನೆ. ಬಾರಮ್ಮ ಕಂದಮ್ಮ. ಸೃಷ್ಟಿ ನಿದ್ರಿಸುತ್ತಿದೆ. ತಾರೆ ತಾರೆಯನ್ನು ದೃಷ್ಟಿಸಿನೋಡುವ ಹೊತ್ತು. ಒಂದು ಕ್ಷಣ ನೀನು ಬಂದರೆ ಯಾರಿಗೂ ತಿಳಿಯುವುದಿಲ್ಲ.

"ಮರಗಳಲ್ಲಿ ಮೊಗ್ಗು ಹೊರಟು ವಸಂತಕಾಲ ಹೊಸದಾಗಿದ್ದಾಗ ಅವಳು ಹೊರಟುಹೋದಳು. ಈಗ ಹೂವೆಲ್ಲ ಅರಳಿದೆ. ನಾನು ಅವಳನ್ನು ಕರೆಯುತ್ತೇನೆ. ಬಾರಮ್ಮ ಕಂದಮ್ಮ. ಮಕ್ಕಳೆಲ್ಲ ಸೇರಿ ಇಷ್ಟದಂತೆ ಆಡಿ ಹೂಗಳನ್ನು ಚೆಲ್ಲುತ್ತಿದ್ದಾರೆ. ನೀನು ಬಂದು ಒಂದು ಹೂವನ್ನು ತೆಗೆದುಕೊಂಡರೆ ಅದು ಹೋಯಿತೆಂದು ಯಾರೂ ಹೇಳುವುದಿಲ್ಲ.

"ಅಂದು ಆಡುತ್ತಿದ್ದವರು ಇಂದೂ ಆಡುತ್ತಿದ್ದಾರೆ. ಬಾಳಿಗೆ ಲೆಕ್ಕವಿಲ್ಲ ಒಕ್ಕಣೆಯಿಲ್ಲ. ಅವರ ಚಿಲಿಪಿಲಿ ಮಾತನ್ನು ಕೇಳಿ ನಾನು ನಿನ್ನನ್ನು ಕರೆಯುತ್ತೇನೆ. ಕಂದಮ್ಮ ಬಾರಮ್ಮ. ನಿನ್ನ ತಾಯಿ ಮನಸ್ಸು ಪ್ರೀತಿಯಿಂದ ತುಂಬಿ ಹರಿಯುತ್ತಿದೆ. ನೀನು ಬಂದು ಅವಳ ಒಂದು ಮುತ್ತನ್ನು ಕಸುಕೊಂಡರೆ ಕಸುಕೊಂಡಳೇ ಎಂದು ಯಾರೂ ಹೇಳುವುದಿಲ್ಲ."

ಎಷ್ಟೋ ತಾಯಿಯರು ಆಡಿಕೊಳ್ಳುವ ಮಾತಿದು. ಕಾವ್ಯದಲ್ಲಿ ಇದನ್ನು ಹೇಳಿರುವುದೂ ಹೊಸದಲ್ಲ. ಆದರೆ ಹೇಳಿದ್ದನ್ನೇ ಹೇಳಿದರೂ ಆದರಲ್ಲಿ ಈ ನಯವನ್ನು ಈ ನೋವನ್ನು ತರುವ ಕಲೆ ಶ್ರೇಷ್ಠವಾದ ಕಲೆ.

ಮಗುವಿನ ವಿಷಯ ಯೋಚನೆಮಾಡುತ್ತ ಕವಿಯ ಮನಸ್ಸು ದೇವರನ್ನು ಸೇರುತ್ತದೆ:

"ಮಗು! ನಿನಗೆ ಬಣ್ಣಬಣ್ಣದ ಆಟದ ಸಾಮಾನುಗಳನ್ನು ನಾನು ತಂದಾಗ ಮೋಡಗಳ ಮೇಲೆ ನೀರಿನ ಮೇಲೆ ಅಷ್ಟೊಂದು ಬಣ್ಣಗಳು ಆಡುವುದೇಕೆಂದೂ ಪುಷ್ಪಗಳು ಹಲವು ಬಣ್ಣವಾಗಿರುವುದೇಕೆಂದೂ ನನಗೆ ತಿಳಿಯುತ್ತದೆ. ನಿನ್ನನ್ನು ಸಂತೋಷಗೊಳಿಸುವುದಕ್ಕೆ ನಿನಗೆ ಮುತ್ತುಕೊಟ್ಟಾಗ ಪ್ರಾತಃಕಾಲದ ಬೆಳಕಿನಲ್ಲಿ ಆಕಾಶದಿಂದ ಹರಿದುಬರುವ ಸುಖವೂ ಬೇಸಗೆಯ ತಂಗಾಳಿ ನನ್ನ ದೇಹಕ್ಕೆ ತರುವ ಆನಂದವೂ ಯಾವುವೆಂದು ನನಗೆ ತಿಳಿಯುತ್ತದೆ."

### ೨೯. ಶೋಕ, ಸ್ಮರಣ

ಠಾಕೂರರ 'ಸ್ಮರಣ' ಗ್ರಂಥದ ಪದ್ಯಗಳಲ್ಲಿ ಹಲವು ಇಂಗ್ಲೀಷ್ ಗ್ರಂಥಗಳಲ್ಲಿ ಅಲ್ಲಲ್ಲಿ ಬಂದಿವೆ. ಈ ಕಾವ್ಯದ ಸ್ವರೂಪವನ್ನು ತಿಳಿಸುವುದಕ್ಕೆ ಕೆಲವದರ ಭಾಷಾಂತರವನ್ನು ಇಲ್ಲಿ ಕೊಟ್ಟಿದೆ. ಪ್ರಿಯೆ ಹೋದ ಹೊಸದರಲ್ಲಿ ಹೋದಳೆಂದು ಮನಸ್ಸು ನಂಬಲಾರದು:

"ಇದ್ದರೂ ಇರುವಳೋ ಎಂದು ನನ್ನ ಕೊಠಡಿಯ ನಾಲ್ಕು ಕಡೆಯಲ್ಲೂ ಅವಳನ್ನು ಹುಡುಕಿ ನೋಡುತ್ತೇನೆ. ಅವಳು ಇಲ್ಲ..

"ಯಾವ ಸಾಗರದಲ್ಲಿ ಒಂದು ಆಸೆಯಾಗಲಿ ಒಂದು ಸುಖವಾಗಲಿ ಕಣ್ಣೀರ ನಡುವೆ ಕಂಡ ಒಂದು ಮುಖವಾಗಲಿ ಯಾವುದೂ ನಷ್ಟವಾಗುವುದಿಲ್ಲವೋ ಅಂತಹ ಅನಂತಕಾಲ ಸಾಗರದ ತೀರವನ್ನು ನಾನು ಸೇರಿದ್ದೇನೆ. ಈ ಬರಿದಾದ ನನ್ನ ಜೀವನವನ್ನು ಅದರಲ್ಲಿ ಅದ್ದು, ತೀರ ತುಂಬುವಂತೆ ಆಳವಾಗಿ ಅವುಕು, ಕಳೆದುಹೋದ ಆ ಸುಖದ ಸ್ಪರ್ಶವನ್ನು ಪ್ರಪಂಚದ ಸರ್ವಸ್ವದಲ್ಲಿ ಮತ್ತೆ ಅನುಭವಿಸುವಂತೆ ಮಾಡು."

ತಾನು ಬರೆದಿದ್ದ ಕಾಗದಗಳನ್ನು ಪತ್ನಿ ಪೆಟ್ಟಿಗೆಯಲ್ಲಿ ಭದ್ರವಾಗಿಟ್ಟುಕೊಂಡಿದ್ದರು. ಅದನ್ನು ನೋಡಿದಾಗ ತಾವು ಎಂದುಕೊಂಡ ಮಾತನ್ನು ಕವಿ ಹೀಗೆಂದು ಹೇಳಿದ್ದಾರೆ:

"ನನ್ನ ಕಾಗದ ಹಳೆಯುವು ಕೆಲವು ಅವಳ ಪೆಟ್ಟಿಗೆಯುಲ್ಲಿ ಇಟ್ಟಿದ್ದವನ್ನು ಕಂಡೆನು. ನೆನಪು ತನ್ನ ಕೇಳಿಗಾಗಿ ಉಳಿಸಿಕೊಂಡಿದ್ದ ಸಣ್ಣ ಸಾಮಾನು ಇವು. ಕಾಲವಾಹಿನಿಯ ರಭಸದಿಂದ ಈ ಮುರುಕುಗಳನ್ನು ಸೆಳೆದುಕೊಂಡು ಅಂಜುಬುರುಕಿ 'ಇವು ನನ್ನವು' ಎಂದಳು.

"ನನ್ನವು ಎಂದು ಅವುಗಳನ್ನು ಹೇಳುವವರು ಈಗ ಇಲ್ಲ. ಅವುಗಳನ್ನು ಪ್ರೀತಿಯಿಂದ ನೋಡಿಕೊಳ್ಳುವರಿಲ್ಲ. ಆದರೂ ಅವು ಇಲ್ಲಿಯೇ ಇವೆ. ಹೀಗೆ ಅವಳನ್ನು ತೀರ ಅಳಿಯದಂತೆ ಉಳಿಸುವ ಪ್ರೇಮ ಜಗತ್ತಿನಲ್ಲಿ ಇರಬೇಕು, ಈ ಕಾಗದಗಳನ್ನು ಅಳಿಯದಂತೆ ನೋಡಿಕೊಂಡ ಅವಳ ಪ್ರೇಮದಂತೆ."

ತೀರಿಹೋದ ಹೆಂಡತಿಗೆ ತನ್ನ ಬದುಕನ್ನು ಈಗಲೂ ಸರಿಪಡಿಸಬೇಕೆಂದು ಅವರು ಹೀಗೆ ಪ್ರಾರ್ಥನೆಮಾಡಿದ್ದಾರೆ:

"ಹೇ ಮಹಿಳೆ, ಉಸಿರಿಂದಿದ್ದಾಗ ನನ್ನ ಮನೆಗೆ ನಯವನ್ನೂ ನಾಜೂಕನ್ನೂ ತಂದಂತೆ ಬರಿದಾದ ನನ್ನ ಈ ಬಾಳಿಗೆ ಇನ್ನು ಮೇಲೆ ನಯ ನಾಜೂಕನ್ನು ತಾ.

"ದೂಳು ಕಟ್ಟಿದ ಗಳಿಗೆಗಳನ್ನು ತೊಡೆದು ಬರಿಯ ಪಾತ್ರೆಗಳನ್ನು ತುಂಬಿ ಅಸಡ್ಡೆ ಕೆಡಿಸಿರುವ ಎಲ್ಲವನ್ನೂ ಸರಿಪಡಿಸು.

"ಆಮೇಲೆ ಗುಡಿಯ ಬಾಗಿಲನ್ನು ತೆರೆದು ದೀಪವನ್ನು ಹಚ್ಚು;
ದೇವರ ಮುಂದೆ ಮೌನದಲ್ಲಿ ಮರಳಿ ಜೊತೆಯಾಗಿ ನಿಲ್ಲೋಣ."

ಆ ಪತ್ನಿಯ ಚಿತ್ರವೊಂದನ್ನು ನೋಡಿದಾಗ ಬಂದ ಭಾವನೆಗಳನ್ನು ಈ ಪದ್ಯದಲ್ಲಿ ಹೇಳಿದ್ದಾರೆ. ದಿನದ ಜೀವನದಿಂದ ಮರೆಯಾದರೂ ದಿನದ ಕಾವ್ಯಕ್ಕೆ ಹೊರಗಣಿಂದ ವಸ್ತುವಾಗುವುದು ನಿಂತುಹೋದರೂ ಇನ್ನೂ ಆ ಜೀವ ತನ್ನ ಗೀತಗಳಲ್ಲಿ ಪ್ರಭಾವವುಳ್ಳದಾಗಿದೆಯೆಂದು ಇದರಲ್ಲಿ ತಿಳಿಸಿದ್ದಾರೆ:

"ನೀನು ಬರಿಯ ಒಂದು ಚಿತ್ರವೆ? ಆ ತಾರೆಗಳಂತೆ ಈ ಧೂಳಿಗಳಂತೆ ನಿಜವಲ್ಲವೆ? ಇವು ಲೋಕದ ನಾಡಿಯ ಮಿಾಟನಿಂದ ಮಿಾಟುತ್ತಿವೆ. ನೀನೋ, ಓ ಬಣ್ಣದಿಂದ ಬರೆದ ಚಿತ್ರವೇ, ನಿಶ್ಚಲವಾಗಿ ಎಲ್ಲದರಿಂದ ವಿವಿಕ್ತವಾಗಿ ನಿಂತಿರುವೆ.

"ಒಂದು ಕಾಲದಲ್ಲಿ ನೀನು ನನ್ನೊಡನೆ ನಡೆದೆ. ನಿನ್ನ ಉಸಿರು ಆಗ ಬಿಸಿಯಾಗಿತ್ತು; ಆಗ ನಿನ್ನ ಅಂಗಗಳಲ್ಲಿ ಜೀವನದ ಗಾನವಿತ್ತು. ನನ್ನ ಲೋಕವು ನಿನ್ನ ಧ್ವನಿಯಿಂದ ಮಾತನಾಡಿತು; ನಿನ್ನ ಮುಖದಿಂದ ನನ್ನ ಹೃದಯವನ್ನು ಮುಟ್ಟಿತು. ನೀನು ಇದ್ದಹಾಗೆ ನಡೆಯದೆ ನಿಂತೆ; ನಿತ್ಯ ಕಾಲದ ತೆರೆಯು ನೆರಳ ಕಡೆ ಹೋದೆ. ನಾನೋ ಒಂಟಿಯಾದೆ.

* * *

"ನೀನು ಮೊದಲಿನಂತೆ ನನ್ನ ಗೀತಗಳ ಮುಂಗಡೆಯಲ್ಲಿ ಇಲ್ಲ, ಅವುಗಳಲ್ಲಿ ಸೇರಿಹೋಗಿದ್ದೀಯೆ. ಉದಯದ ಮೊದಲ ಕಿರಣದೊಂದಿಗೆ ನೀನು ನನ್ನ ಬಳಿ ಬಂದೆ. ಸಂಜೆಯ ಕೊನೆಯ ಚಿನ್ನದೊಂದಿಗೆ ನಾನು ನಿನ್ನನ್ನು ಕಳೆದುಕೊಂಡೆ. ಅದು ಮೊದಲು ನಾನು ನಿನ್ನನ್ನು ಕತ್ತಲೆಯಲ್ಲಿ ಕಾಣುತ್ತಿದೇನೆ. ಇಲ್ಲ, ನೀನು ಬರಿಯ ಚಿತ್ರವಲ್ಲ."

* * *

"ಸಾವಿನಲ್ಲಿ ನೀನು ನನ್ನ ಹೊರಗಣ ಸೃಷ್ಟಿಗೆ ತೀರಿಹೋಗಿ ಪ್ರಪಂಚದ ಸಾವಿರ ಸಂಬಂಧಗಳಿಂದ ಮರೆಯಾದಾಗ ನನ್ನ ನೋವಿ

ನಲ್ಲಿ ಮುರಳಿ ಹುಟ್ಟಿದೆ. ಇದರಿಂದ ನನ್ನ ಬದುಕು ಸಂಪೂರ್ಣ ವಾಯಿತೆಂದು ನನಗೆ ತೋರಿತು. ನನ್ನಲ್ಲಿ ಗಂಡೂ ಹೆಣ್ಣೂ ಅನಂತ ವಾಗಿ ಏಕವಾಯಿತೆಂದು ತೋರಿತು."

ಪತ್ನಿ ಒಂದುಸಲ ಕನಸಿನಲ್ಲಿ ಕಂಡಾಗ ತೋರಿದ ಭಾವನೆ ಈ ಪದ್ಯ ದಲ್ಲಿ ರೂಪುಗೊಂಡಿದೆ:

"ಅವಳು ನನ್ನ ತಲೆಯ ಬಳಿ ಕುಳಿತು ತನ್ನ ಬೆರಳಿಂದ ನನ್ನ ತಲೆ ಕೂದಲನ್ನು ಕೋದು ತನ್ನ ಕೈ ಸೋಂಕಿನ ಗಾನವನ್ನು ನುಡಿಸುತ್ತ ಇದ್ದಂತೆ ಕನಸನ್ನು ಕಂಡೆನು. ಅವಳ ಮುಖವನ್ನು ನೋಡಿ ಅಳುವನ್ನು ತಡೆದುಕೊಂಡೆನು. ಆಡದ ನುಡಿಯ ನೋವಿ ನಿಂದ ನನ್ನ ನಿದ್ರೆ ನೀರುಗುಳ್ಳೆ ಒಡೆಯುವಂತೆ ಒಡೆಯಿತು.

"ಎದ್ದು ಕುಳಿತು ನಕ್ಷತ್ರಪಥದ ಪ್ರಭೆಯನ್ನು ಕಿಟಕಿಯಿಂದ ನೋಡಿದೆನು. ಮೌನದ ಒಂದು ಲೋಕ ಉರಿಯುವಂತೆ ಕಂಡಿತು. ಇದೇ ಕ್ಷಣದಲ್ಲಿ ನನ್ನ ಕನಸಿನೊಂದಿಗೆ ಶ್ರುತಿಯಾದ ಒಂದು ಕನಸನ್ನು ಅವಳೂ ಕಂಡಿರಬಹುದೋ ಎಂದು ಕೌತುಕಗೊಂಡೆನು."

ಪತ್ನಿಯಾದವಳು ಜೀವದಿಂದಿರುವಾಗ ಸಣ್ಣ ವಿಷಯಕ್ಕೆಲ್ಲಾ ಅನ್ನುವುದು, ಆಡುವುದು; ತೀರಿಹೋದಮೇಲೆ ಗೋಳಾಡುವುದು: ಇದು ಮನುಷ್ಯನ ಸ್ವಭಾವ. ಕವಿಗಳಿಗೂ ಈ ಹಣೆಯಬರಹ ತಪ್ಪಿದ್ದಲ್ಲ. ತಾನು ಅಂದು ಆಡಿದ ವಿಷಯಗಳನ್ನು ನೆನೆದು ಕವಿ ಪಶ್ಚಾತ್ತಾಪಪಡುವುದು ನೂರಾರು ಜೀವಗಳು ನೋಡಿ ತಿಳಿಯಬೇಕಾದ ವಿಷಯ:

"ಅವಳು ನನಗೆ ಮಾಡಿದ ಉಪಕಾರಗಳಿಗೆ ಪ್ರತ್ಯುಪಕಾರ ಮಾಡುವ ಕಾಲ ಮೀರಿತು. ಅವಳ ನಿಶಿ ಬೆಳಗಾಗಿದೆ, ನೀನು ಅವಳನ್ನುಕರೆದುಕೊಂಡಿದೀಯೆ. ಆದ್ದರಿಂದ ಅವಳಿಗೆ ಉದ್ದಿಷ್ಟವಾದ ಕೃತಜ್ಞತೆಯನ್ನೂ ಕಪ್ಪವನ್ನೂ ನಿನ್ನ ಬಳಿ ತಂದಿದೇನೆ. ಅವಳ ವಿಷಯದಲ್ಲಿ ನಾನು ಮಾಡಿದ ಅನ್ಯಾಯ ಅಪಚಾರಗಳ ಬಗ್ಗೆ ನಿನ್ನನ್ನು ಕ್ಷಮೆ ಬೇಡುತ್ತೇನೆ. ಅವಳು ಕಾದಿದ್ದಾಗ ತೆರೆಯದೆ ಮುಗುಳಾಗಿದ್ದ ಎಲ್ಲ ನನ್ನ ಪ್ರೀತಿಯ ಪುಷ್ಪಗಳನ್ನೂ ನಿನ್ನ ಸೇವೆಗಾಗಿ ನೀಡುತ್ತೇನೆ."

ಈ ಪದ್ಯದಲ್ಲಿ ತೋರುವಂತೆ ಕವಿ ಜೀವನದ ಎಲ್ಲ ವಿಷಯದಿಂದಲೂ ದೈವದೊಂದಿಗೆ ಒಂದು ಸಂಬಂಧವನ್ನು ಬೆಳಸಿಕೊಳ್ಳಲು ಪ್ರಯತ್ನಮಾಡುತ್ತಾರೆ. ಅದನ್ನು ಒಂದು ಚಿತ್ರದ ರೀತಿಯಲ್ಲಿ ಈ ಪದ್ಯದಲ್ಲಿ ವರ್ಣಿಸಿದ್ದಾರೆ:

"ಬಿರುಗಾಳಿ ಮಳೆಯಲ್ಲಿ ನನ್ನ ಮನೆಯ ಬಾಗಿಲು ಮುರಿದ ಆ ರಾತ್ರಿ ಆ ಮುರುಕಿನ ಮೂಲಕ ನೀನು ನನ್ನ ಮನೆಯನ್ನು ಹೊಕ್ಕೆ. ನನಗೆ ಇದು ತಿಳಿಯಲಿಲ್ಲ. ದೀಪವಾರಿಹೋಗಿ ಕತ್ತಲೆ ಕವಿಯಿತು. ನೆರವಿಗಾಗಿ ನಾನು ನಭಕ್ಕೆ ಕೈಯೊಡ್ಡಿದೆನು. ನಿರೀಕ್ಷೆಯಲ್ಲಿ ಆ ತುಮುಲ ನಿಶೀಥದಲ್ಲಿ ನೆಲದಮೇಲೆ ಉರುಳಿದ್ದೆನು. ಆ ಬಿರು ಮಳೆ ನಿನ್ನ ಪತಾಕೆಯೆಂದು ನನಗೆ ತಿಳಿಯಲಿಲ್ಲ. ಉದಯವಾಯಿತು. ಆಗ ನನ್ನ ಮನೆಯ ಮೇಲೆ ಹರಿದಿದ್ದ ಅನಾಹುತದ ನೆತ್ತಿಯಲ್ಲಿ ನೀನು ನಿಂತಿರುವುದನ್ನು ನಾನು ಕಂಡೆನು."

## ೩೦. ಭಕ್ತಿ ಗೀತಗಳು

ಪ್ರಾಪಂಚಿಕ ಪ್ರೇಮವನ್ನೂ ಶೋಕವನ್ನೂ ಕುರಿತ ಮಾತುಗಳಿಂದ ಕಾವ್ಯವು ಭಗವಂತನನ್ನು ಕುರಿತಪ್ರೇಮಕ್ಕೆ ಸುಲಭವಾಗಿ ಹರಿಯುತ್ತದೆ. ಈ ರೀತಿಯ ಪದ್ಯಗಳೇ ಗೀತಾಂಜಲಿಯಲ್ಲಿ ಮುಖ್ಯವಾದುವು. ಇವುಗಳಿಂದಲೇ ಠಾಕೂರರು ಮೊದಲು ಪಾಶ್ಚಾತ್ಯ ಜನಾಂಗಗಳ ಮನಸ್ಸನ್ನು ಗೆದ್ದದ್ದು. ಇವು ಇವರ ಕಾವ್ಯಶೈಲದ ಶಿಖರವೆನ್ನಬೇಕು. ಹಾಗೆಯೇ ಇವು ಇವರ ಜೀವನಾನುಭವದ ಪರಿಪಕ್ವಾವಸ್ಥೆಯ ಮಾತು. ಹೊರಗಣ ಸೌಂದರ್ಯದಲ್ಲಿ ಕವಿ ದೇವದೇವನ ಸೌಂದರ್ಯದ ವ್ಯಕ್ತರೂಪವನ್ನು ಕಾಣುತ್ತಾನೆ:

"ನನ್ನ ಎದುರಿಗೆ ನಿಲ್ಲು; ನಿನ್ನ ನೋಟ ಸೋಕಿ ನನ್ನ ಗೀತಗಳು ದೀಪಗಳಂತೆ ಬೆಳಗಲಿ. ನಿನ್ನ ತಾರೆಗಳ ನಡುವೆ ನಿಲ್ಲು. ಅವುಗಳ ಬೆಳಕಿನಲ್ಲಿ ನಾನು ಮಾಡುವ ತೀವ್ರ ಪೂಜಾಗ್ನಿ ನನಗೆ ಕಾಣುವಂತೆ ಮಾಡು. ಲೋಕದ ದಾರಿಯ ಬದಿಯಲ್ಲಿ ಭೂಮಿ ಕಾದಿದೆ; ನಿನ್ನ ದಾರಿಯಲ್ಲಿ ಹಸುರ ವಸ್ತ್ರವನ್ನು ಹಾಸಿದೆ; ಅದರ ಮೇಲೆ ನಿಲ್ಲು. ನೆಲದ ಹುಲ್ಲಿನಲ್ಲಿ ಮೈದಾನದ ಹೂವಿನಲ್ಲಿ ನಾನು

ನಿನಗೆ ಮಾಡುವ ಪಾದಸೇವೆ ನನಗೆ ಅನುಭವವಾಗಲಿ. ಸಂಜೆಯಲ್ಲಿ ನಾನು ಒಂಟಿಯಾಗಿ ಕುಳಿತು ನನ್ನ ಹೃದಯ ಏಕಾಕಿಯಾಗಿರುವಾಗ ಅಲ್ಲಿ ನೀನು ನಿಲ್ಲು. ನಿರ್ಜನತೆಯ ಪಾತ್ರೆಯನ್ನು ತುಂಬಿ ನನ್ನಲ್ಲಿ ನಾನು ನಿನ್ನ ಪ್ರೇಮದ ಅನಂತ್ಯವನ್ನು ಅನುಭವಿಸುವಂತೆ ದಯಪಾಲಿಸು.''

ಈ ಸೌಂದರ್ಯವನ್ನು ಕಾಣುವುದರಿಂದ, ಅದರಲ್ಲಿ ವ್ಯಕ್ತವಾಗಿರುವ ಭಗವಂತನ ಕುರುಹನ್ನು ತಿಳಿಯುವುದರಿಂದ, ಮನುಷ್ಯನಿಗೆ ಗಾನವು ಬರುತ್ತದೆ:

''ನಿನ್ನ ಪ್ರೇಮ ನನ್ನ ಧ್ವನಿಯಲ್ಲಿ ಆಡಲಿ; ನನ್ನ ನೀರವತೆಯಲ್ಲಿ ನಿದ್ರೆಮಾಡಲಿ; ನನ್ನ ಹೃದಯದ ಮೂಲಕ ನನ್ನ ಬಾಳಿನ ಚಲನವಲನಗಳಲ್ಲೆಲ್ಲ ಬೆಳಗಲಿ; ನನ್ನ ಎಚ್ಚರದಲ್ಲಿ ಎಚ್ಚರಗೊಳ್ಳಲಿ; ನನ್ನ ಆಸೆಗಳ ಅಗ್ನಿಯಲ್ಲಿ ಅಗ್ನಿಯಾಗಿ ಉರಿಯಲಿ. ನಿನ್ನ ಪ್ರೇಮ ನನ್ನ ಪ್ರೇಮದ ಎಲ್ಲ ವಾಹಿನಿಗಳಲ್ಲಿಯೂ ಪ್ರವಹಿಸಲಿ. ದೇವ! ವೀಣೆ ತನ್ನ ತಂತಿಗಳಲ್ಲಿ ಗಾನವನ್ನು ಧರಿಸುವಂತೆ ನಾನು ನನ್ನ ಬಾಳಿನಲ್ಲಿ ನಿನ್ನ ಪ್ರೇಮವನ್ನು ಧರಿಸುವುದನ್ನು ದಯಪಾಲಿಸು; ನನ್ನ ಬಾಳಿನೊಂದಿಗೆ ನಿನಗೇ ಅದನ್ನು ಮರಳಿ ಕೊಡುವಂತೆ ಬೆಳೆಯಿಸು.''

ಈ ಗಾನ ಬರುವುದರಲ್ಲಿ, ಅದರಿಂದ ಭಗವಂತನಿಗೆ ಪೂಜೆಮಾಡುವುದರಲ್ಲಿ, ಸಾವಕಾಶವಾಯಿತೆ ಎಂಬ ಚಿಂತೆ ಬೇಕಿಲ್ಲ. ಅವರವರ ಸಮಯ ಬಂದಾಗ ಅವರವರು ಪೂಜೆಯನ್ನು ಮಾಡುತ್ತಾರೆ.

''ಉದಯದಲ್ಲಿ ನಿನ್ನ ಪ್ರಾಂಗಣತಲದಲ್ಲಿ ಶಂಖ ಎತ್ತಿ ಊದಿದಾಗ

''ನರ ನಾರಿಯರು ಹೂವಿನ ಬುಟ್ಟಿಗಳನ್ನು ತೆಗೆದುಕೊಂಡು ಮನೆಗಳನ್ನು ಬಿಟ್ಟು

''ನವೀನಶಿಶಿರಸಿಕ್ತ ಗುಂಜನಮುಖರ ಸ್ನಿಗ್ಧವನಪಥದಲ್ಲಿ ಹೊರಟರು.

''ನಾನು ಎಲ್ಲಿಯೋ ಜ್ಞಾನದಲ್ಲಿ ಸಘನಪಲ್ಲವಪುಂಜಛಾಯಾಕುಂಜ ವನದಲ್ಲಿ

"ತೃಣಾಸ್ತೀರ್ಣತರಂಗಿಣೀ ತೀರದಲ್ಲಿ ವಿಹಂಗಗಳ ಕಲ ಗೀತದಲ್ಲಿ
"ಸುಮಂದ ಸಮೀರದಲ್ಲಿ ಮಲಗಿ ಇದ್ದೆನು.
"ನಾನು ನಿನ್ನ ಪೂಜೆಗೆ ಆಗ ಹೋಗಲಿಲ್ಲ ದೇವ;
"ದಾರಿಯಲ್ಲಿ ಯಾರು ಹೋದರೆಂದು ನೋಡಲೂ ಇಲ್ಲ.
"ನಾನು ಆಗ ಹೊಗದೇ ಇದ್ದದ್ದು ಒಳ್ಳೆಯದೇ ಆಯಿತೆಂದು
"ಈಗ ನನಗೆ ಕಾಣುತ್ತಿದೆ. ನನ್ನ ಹೂ ಆಗ ಮುಗುಳಾಗಿದ್ದುವು;
"ಈಗ ನೋಡು ದಿನವೆಲ್ಲ ಅವು ಅರಳಿವೆ. ಅಪರಾಹ್ನದಲ್ಲಿ
"ನಾನು ಪೂಜೆಯ ಹೂವಿನ ಬುಟ್ಟಿಯನ್ನು ತುಂಬಿದೇನೆ."

ಜೀವನದಲ್ಲಿ ಸಿದ್ಧಿ ಬರುವುದಕ್ಕೆ ಎಲ್ಲರೂ ತೊಳಲಬೇಕಾದದ್ದಿಲ್ಲ. ಅದು ಕೆಲವರಿಗೆ ತೊಳಲಿ ಬರುತ್ತದೆ; ಕೆಲವರಿಗೆ ಇದ್ದ ಕಡೆಯೇ ಬರುತ್ತದೆ.

"ನಿಶ್ಶಬ್ದವಾದ ಉದಯ ಸಮುದ್ರ ಸಣ್ಣ ಅಲೆಗಳಿಂದ ಎಂಬಂತೆ ಹಕ್ಕಿಗಳ ಹಾಡಿನಿಂದ ಚಲಿಸಿತು. ದಾರಿಯ ಪಕ್ಕದಲ್ಲಿ ಪುಷ್ಪಗಳು ಆನಂದದಿಂದ ತುಂಬಿದ್ದುವು. ಮೋಡಗಳ ಬಿರುಕಿನಲ್ಲಿ ಚಿನ್ನದ ರಾಶಿ ಸುರಿದಿದ್ದಿತು. ನಾವು ಇದೊಂದನ್ನೂ ನೋಡದೆ ನಮ್ಮ ದಾರಿ ನಡೆಯುತ್ತಿದ್ದೆವು....

"ಸೂರ್ಯನು ನೆತ್ತಿಗೆ ಏರಿದನು. ಪಾರಿವಾಳಗಳು ನೆರಳಲ್ಲಿ ಕೂಗುತಿದ್ದುವು. ಮಧ್ಯಾಹ್ನದ ಬಿಸಿಯಾದ ಗಾಳಿಯಲ್ಲಿ ಒಣ ಎಲೆಗಳು ನೃತ್ಯಮಾಡುತ್ತ ಸುತ್ತಾಡುತಿದ್ದುವು. ಕುರಿಯನ್ನು ಕಾಯುವ ಹುಡುಗವು ಆಲದ ಮರದ ಕೆಳಗೆ ನಿದ್ದೆ ಮಾಡುತ್ತ ಸ್ವಪ್ನ ಕಾಣುತ್ತಿದ್ದನು. ನಾನು ಕಾಲುವೆಯ ಪಕ್ಕದಲ್ಲಿ ಮಲಗಿದೆನು, ಸೋತ ಕೈಕಾಲುಗಳನ್ನು ಚಾಚಿದೆನು.

"ಸೂರ್ಯನ ಪ್ರಭೆಯಿಂದ ಚಿತ್ರಿತವಾದ ಹಸುರು ಗಿಡದ ನೆರಳಿನ ಶಾಂತಿ ನನ್ನ ಹೃದಯವನ್ನು ಆವರಿಸಿತು. ನಾನು ಯಾವುದಕ್ಕಾಗಿ ಹೊರಟಿದ್ದೆನೆಂಬುದು ನನಗೆ ಮರೆಯಿತು. ಅಲ್ಲಿಯ ನೆರಳಿನ ಅಲ್ಲಿಯ ಹಾಡಿನ ಮಾಯಕ್ಕೆ ನನ್ನ ಮನಸ್ಸನ್ನು ತೆತ್ತೆನು.

"ಕೊನೆಗೆ ನಿದ್ರೆಯಿಂದ ಎಚ್ಚತ್ತು ಕಣ್ಣು ತೆರೆದಾಗ ನೀನು ನನ್ನ ಪಕ್ಕದಲ್ಲಿ ನಿಂತಿದ್ದೆ; ನನ್ನ ನಿದ್ರೆಯನ್ನು ನಿನ್ನ ಹಾಸದಿಂದ ತೇಲಿಸುತಿದ್ದೆ. ದಾರಿ ದೂರವಾದುದೆಂದೂ ಬೇಸರವಾಡುವುದೆಂದೂ ನಿನ್ನನ್ನು ಸೇರುವ ಯತ್ನವು ಕಠಿನವಾದುದೆಂದೂ ನಾನು ಎಷ್ಟು ಭಯಪಟ್ಟಿದ್ದೆನು."

ತಾನು ಮಾಡುವ ಕೆಲಸ ದೇವರ ಸೇವೆ ಎಂದು ಅವನಿಗೆ ತಿಳಿಯುತ್ತದೆ. ಅದು ಅಷ್ಟು ಶ್ರೇಷ್ಠವಾದ ಸೇವೆಯಲ್ಲದಿರಬಹುದು; ಆದರೂ ಆದು ದೇವರಿಗೆ ಬೇಕಾದ ಸೇವೆ. ಅವನು ಅದನ್ನು ಒಪ್ಪಿ ತೆಗೆದುಕೊಳ್ಳುತ್ತಾನೆ. ಈ ಕಾರಣದಿಂದ ಕವಿ ಅದನ್ನು ಸಂತೋಷದಿಂದ ಹೆಮ್ಮೆಯಿಂದ ಮಾಡುತ್ತಾನೆ.

"ನನ್ನ ದೊರೆಯೆ. ನೀನು ನನ್ನನ್ನು ಕರೆದು ದಾರಿಯ ಬದಿಯಲ್ಲಿ ಕೊಳಲು ನುಡಿಸೆಂದು ನಿಲ್ಲಿಸಿರುವೆ. ನುಡಿ ಬಾರದ ಬಾಳ ಹೊರೆಯ ಮುಂದಿ ಇದನ್ನು ಕೇಳಿ ಒಂದು ಕ್ಷಣ ನಿಂತು ನಿನ್ನ ಅರಮನೆಯ ಸಜ್ಜೆಯ ಮುಂದೆ ಸ್ವಲ್ಪ ಕುಳಿತುಕೊಳ್ಳಲಿ, ಸ್ವಲ್ಪ ಕೌತುಕಪಡಲಿ, ಅವರು ಸದಾ ಪುರಾತನವಾದದ್ದನ್ನು ಹೊಸದಾಗಿ ಕಾಣಲಿ, ತಮ್ಮ ಸುತ್ತ ಹರಹಿ ಸಾಮಾನ್ಯವಾಗಿರುವುದು ವಿಚಿತ್ರವಾದುದೆಂದು ತಿಳಿಯಲಿ, ಹೂಗಳು ಅರಳುತ್ತಿವೆ ಹಕ್ಕಿಗಳು ಹಾಡುತ್ತಿವೆ ಎಂದು ಹೇಳಲಿ, ಎಂದು ನಿನ್ನ ಉದ್ದೇಶ."

ಈ ಕಾವ್ಯ ದೇವರಿಂದ ಬಂದದ್ದು ಎಂದು ಕವಿ ಬಲ್ಲನು. ಆದರೆ ಅದನ್ನು ಅವನು ತನ್ನದೋ ಎಂಬಂತೆ ಭಗವಂತನಲ್ಲಿ ಅರ್ಪಿಸುತ್ತಾನೆ. "ನನ್ನ ಗೀತೆಗಳು ವಸಂತದ ಹೂಗಳಂತೆ. ಅವು ನಿನ್ನಿಂದ ಬರುತ್ತವೆ. ಆದರೂ ನಾನು ಅವನ್ನು ನನ್ನವೆಂಬಂತೆ ನಿನ್ನ ಬಳಿಗೆ ತರುತ್ತೇನೆ." ದೇವರ ಈ ಪ್ರಸಾದ ಎಷ್ಟು ದೊಡ್ಡದೆಂದು ಅವನು ತಿಳಿಯುತ್ತಾನೆ; ಅದಕ್ಕೆ ಅರ್ಹನಾಗಿರಬೇಕೆಂದು ಆಸೆಪಡುತ್ತಾನೆ:

"ನೀನು ನನ್ನನ್ನು ಅಮರನಾಗಿ ಮಾಡಿದ್ದೀಯೆ; ಇದು ನಿನ್ನ ಇಷ್ಟ. ಈ ಲಘುವಾದ ಪಾತ್ರವನ್ನು ಮತ್ತೆ ಮತ್ತೆ ಬರಿಯದನ್ನಾಗಿ ಮಾಡಿ ಮತ್ತೆ ಮತ್ತೆ ಜೀವಕಳೆಯಿಂದ ತುಂಬುತ್ತಿದೀಯೆ. ಈ ಸಣ್ಣ

ಬಿದಿರು ಕೊಳವಿಯನ್ನು ಹಿಡಿದುಕೊಂಡು ಗುಡ್ಡ ಕಾಡುಗಳಲ್ಲೆಲ್ಲ ತಿರುಗಾಡಿ ಅದರಲ್ಲಿ ನಿನ್ನ ಸರ್ವದಾ ನೂತನವಾದ ಮಧುರ ಗಾನವನ್ನು ನುಡಿದಿದ್ದೀಯೆ.''

* * *

"ಜೀವದ ಜೀವವೇ! ನಿನ್ನ ಜೀವಕಳೆ ನನ್ನ ಅಂಗಾಂಗದಲ್ಲಿ ವ್ಯಾಪಿಸಿರುವುದನ್ನು ತಿಳಿದು ನಾನು ಈ ದೇಹವನ್ನು ಶುದ್ಧವಾಗಿ ಇರಿಸಲು ನಿರಂತರವೂ ಯತ್ನಮಾಡುತ್ತೇನೆ.

"ನನ್ನ ಮನಸ್ಸಿನಲ್ಲಿ ಬುದ್ಧಿಯ ಬೆಳಕನ್ನು ಇಟ್ಟಿರುವ ಸತ್ಯವೇ ನೀನು ಎಂಬುದನ್ನು ತಿಳಿದು ನನ್ನ ಯೋಚನೆಗಳಿಂದೆಲ್ಲ ಎಲ್ಲ ಅಸತ್ಯವನ್ನೂ ದೂರಮಾಡಲು ಯತ್ನಮಾಡುತ್ತೇನೆ.

"ನನ್ನ ಹೃದಯದ ಅಂತರಂಗದಲ್ಲಿ ನೀನು ನೆಲಸಿರುವುದನ್ನು ತಿಳಿದು ಕೆಟ್ಟುದೆಲ್ಲವನ್ನೂ ದೂರಮಾಡಿ ಪ್ರೇಮವನ್ನು ವಿಕಾಸವಾಗಿರಿಸಲು ಯತ್ನಮಾಡುತ್ತೇನೆ.

"ಕೆಲಸಮಾಡುವ ಬಲವು ನಿನ್ನ ಶಕ್ತಿಯಿಂದ ಬಂದದ್ದೆಂದು ತಿಳಿದು ಕೆಲಸದಲ್ಲೆಲ್ಲ ನಿನ್ನನ್ನು ತೋರ್ಪಡಿಸಲು ಯತ್ನಮಾಡುತ್ತೇನೆ.''

ಆಗ ಕವಿಗೆ ಗಾನದಲ್ಲಿ ಆಡಂಬರ ಬೇಡವೆನ್ನಿಸುತ್ತದೆ.

"ನನ್ನ ಗಾನ ಒಡವೆಗಳನ್ನೆಲ್ಲ ತೆಗೆದುಹಾಕಿದೆ. ಉಡುಪು ತೊಡವುಗಳ ಡಂಭ ಅದಕ್ಕಿಲ್ಲ. ಒಡವೆಗಳು ನನ್ನ ನಿನ್ನ ಸಮಾಗಮಕ್ಕೆ ಅಡ್ಡಿಯಾಗುವುವು. ನನ್ನ ಕಾವ್ಯದ ಜಂಬ ನಿನ್ನ ಎದುರಿಗೆ ನಾಚಿಕೆಯಿಂದ ತೀರಿಹೋಯಿತು. ಕವಿಗಳ ಕವಿಯೇ, ನಾನು ನಿನ್ನ ಅಡಿಯ ಬಳಿ ಕುಳಿತಿದ್ದೇನೆ. ನನಗೆ ಇನ್ನೇನೂ ಬೇಡ. ನೀನು ಗಾನದಿಂದ ತುಂಬಬೇಕಾದ ಕೊಳಲಿನಂತೆ ನನ್ನ ಜೀವನವನ್ನು ಸರಳವೂ ಸುಲಭವೂ ಆಗಿ ಮಾಡಿಕೊಂಡರೆ ಸಾಕು.''

ಈ ದೃಷ್ಟಿಯಿಂದ ಕವಿಗೆ ಪ್ರಪಂಚವೆಲ್ಲ ಪ್ರಿಯವಾಗುತ್ತದೆ; ಎಲ್ಲ ಜೀವನದೊಂದಿಗೆ ಬೆರೆದು ಜೀವಿಸಬೇಕೆಂದು ಅವನಿಗೆ ಆಸೆ ಹುಟ್ಟುತ್ತದೆ; ಹಾಗೆ ಬೆರೆಯುವುದೇ ಸರಿ, ಬೆರೆಯದೆ ಇರುವುದು ತಪ್ಪು, ಎಂದು ತೋರುತ್ತದೆ.

"ಭಜನ ಪೂಜನ ಸಾಧನ ಆರಾಧನ:
ಬಿಡು ಇದನ್ನೆಲ್ಲ, ಏಳು.
ರುದ್ಧದ್ವಾರದ ದೇವಾಲಯದ ಕೋಣೆಯಲ್ಲಿ
ಏಕೆ ಕುಳಿತಿರುವೆ?

ನೀನಾಗಿ ಕತ್ತಲೆಯನ್ನು ಮಾಡಿಕೊಂಡು
ಯಾರನ್ನು ನೀನು ಹೀಗೆ ಗೋಪ್ಯವಾಗಿ ಪೂಜಿಸುತ್ತಿರುವುದು?
ಕಣ್ಣು ತೆರೆದು ನೋಡು, ದೇಗುಲದ ಒಳಗಡೆ
ನಿನ್ನ ಎದುರಿನಲ್ಲಿ ದೇವರಿಲ್ಲ.

"ಎಲ್ಲಿ ಕೃಷಿಕನು ಮಣ್ಣು ಅಗೆದು ಕೃಷಿ ಮಾಡುತ್ತಿದ್ದಾನೆಯೋ
ಅಲ್ಲಿಗೆ ಅವನು ಹೋಗಿದ್ದಾನೆ;
ವರ್ಷವೆಲ್ಲ ಕಲ್ಲನ್ನು ಒಡೆಯುತ್ತಾ ದಾರಿಯನ್ನು ಕಡಿಯುತ್ತ
ಇರುವಲ್ಲಿಗೆ ಹೋಗಿದ್ದಾನೆ.

ಬಿಸಿಲು ಮಳೆಯಲ್ಲಿ ಎಲ್ಲರ ಜೊತೆಯಲ್ಲಿ ಇದ್ದಾನೆ,
ಎರಡು ಕೈಗಳನ್ನೂ ಧೂಳುಮಾಡಿಕೊಂಡಿದ್ದಾನೆ;
ಶುಚಿಯಾದ ನಿನ್ನ ವಸ್ತ್ರಗಳನ್ನು ಕಿತ್ತೊಗೆ;
ಅವನಂತೆ ಧೂಳಿಗೆ ಬಾ.

"ಮುಕ್ತಿ! ಎಲಾ ಎಲ್ಲಿ ಕಂಡೆ? ಎಲ್ಲಿ ಈ ಮುಕ್ತಿ?
ಮುಕ್ತಿ ಎಲ್ಲಿದೆ?
ನಮ್ಮ ಪ್ರಭು ಸೃಷ್ಟಿಬಂಧವನ್ನು ಧರಿಸಿ
ಎಲ್ಲರ ಜೊತೆಗೆ ಬಂಧನದಲ್ಲಿರುವಾಗ?

ಸಾಕು ನಿನ್ನ ಧ್ಯಾನ. ಎಸೆ ಹೂವಿನ ಬುಟ್ಟಿಯನ್ನು;
ಧೂಳಿಯಿಂದ ಮಲಿನವಾದ ಚಿಂದಿಯನ್ನು ಧರಿಸು;
ಕರ್ಮಯೋಗದಲ್ಲಿ ಬೆವರನ್ನು ಹೊಮ್ಮಿಸು;
ನಮ್ಮ ಪ್ರಭುವಿನ ಜೊತೆಗೆ ನೇರವಾಗಿ ನಿಲ್ಲು."

ಯಾರೂ ಸೇರದ ಕಡೆ ದೇವರು ಹೋಗಿ ಇರುತ್ತಾನೆ ಎಂದು ಹೇಳುವ ಈ ಕೃತಿಯೂ ಸುಂದರವಾಗಿದೆ:

"ದೀನರಲ್ಲಿ ದೀನರು ಸರ್ವರಲ್ಲಿ ಅಧಮರು ಎಲ್ಲಿದ್ದಾರೆ
ಆ ಸ್ಥಳದಲ್ಲಿ ನಿನ್ನ ಚರಣ ರಾಜಿಸುತ್ತದೆ.
ಸರ್ವರ ಹಿಂದೆ, ಸರ್ವರ ಕೆಳಗೆ, ಸರ್ವ ನಿರ್ಗತಿಕರ ಮಧ್ಯೆ.
ನಾನು ನಿನಗೆ ಪ್ರಣಾಮಮಾಡುವ ವೇಳೆ
ನನ್ನ ಆ ಪ್ರಣಾಮ ಎಲ್ಲಿಯೋ ನಿಂತುಹೋಗುತ್ತದೆ;
ಅಪಮಾನದ ತಳದಲ್ಲಿ ನಿನ್ನ ಅಡಿಯಿರುವೆಡೆಗೆ
ಸರ್ವರ ಹಿಂದೆ ಸರ್ವರ ಕೆಳಗೆ ಸರ್ವ ನಿರ್ಗತಿಕರ ಮಧ್ಯೆ,
ಬಂದು ಸೇರಲು ಆರದಾ ಪ್ರಣಾಮ."

ಜನರೊಂದಿಗೆ ಜಗದ ಜೀವನದೊಂದಿಗೆ ಬೆರೆಯುವುದೇ ದೇವರ ಸೇವೆ, ದೇವರೊಂದಿಗೆ ಲೀನವಾಗುವಿಕೆ, ಎಂಬುದು ಕವಿಯ ಅನುಭವದ ಪರಮಾವಧಿ. ದೇವರನ್ನು ಪೂಜಿಸುವುದಕ್ಕೆ ನಾವು ಇಲ್ಲಿ ಯಾವ ಕೆಲಸವನ್ನೂ ಬಿಡಬೇಕಾದದ್ದಿಲ್ಲ.

"ನಿನಗೆ ಸ್ಥಳ ಮಾಡುವುದಕ್ಕಾಗಿ ಯಾರನ್ನೂ ದೂರ ತಳ್ಳುವಂತಿಲ್ಲ. ಪ್ರೇಮ ನಿನಗೆ ಸ್ಥಳಮಾಡಿದಂದು ನೀನು ಲೋಕಕ್ಕೆ ಸ್ಥಳವನ್ನು ಮಾಡುತ್ತೀಯೆ. ಭೂಲೋಕದ ರಾಜರು ಬಂದರೆಂದರೆ ರಕ್ಷಣೆಯ ಜನರು ಗುಂಪನ್ನು ತಡೆಯುವರು; ಆದರೆ ದೊರೆಯೇ ನೀನು ಬಂದರೆ ನಿನ್ನ ಜೊತೆಯಲ್ಲಿ ಲೋಕವೇ ಬರುತ್ತದೆ."

ಈ ದೇವರನ್ನು ಬಿಟ್ಟು ಎಲ್ಲೂ ಹೋಗುವಂತಿಲ್ಲ.

"ನಿನಗೆ ವಿರೋಧಮಾಡಿದಾಗ ನಾನು ನಿನಗೆ ಬಹು ಸಮೀಪ ಬಂದೆನು. ಅದು ನನಗೆ ತಿಳಿಯಲಿಲ್ಲ. ನಿನ್ನೊಡನೆ ಹೋರಾಡಿ ನೀನು ನನಗೆ ಹಿರಿಯನೆಂದು ಒಪ್ಪಿಕೊಂಡೆನು. ಹೋರಾಟ ನನ್ನ ಸೋಲಿನಲ್ಲಿ ಕೊನೆಯಾಯ್ತು. ಗುಪ್ತವಾಗಿ ನಾನು ನಿನ್ನ ಸ್ವತ್ತನ್ನು ಕದ್ದ ವೇಳೆ ನಾನು ನಿನಗೆ ಕೊಡಬೇಕಾದ ಸಾಲವನ್ನು ಹೆಚ್ಚಿಸಿದೆನು. ನಿನ್ನ ಪ್ರವಾಹಕ್ಕೆ ಎದುರಾಗಿ ಈಜನೋಡಿ ನಿನ್ನ ಶಕ್ತಿಯನ್ನು ನನ್ನ ಎದೆಯಲ್ಲಿ ಅರಿತೆನು. ದ್ರೋಹಬುದ್ಧಿಯಿಂದ ಮನೆಯ ದೀಪವನ್ನು ಆರಿಸಿದೆನು. ಆಗ ನಭಪ್ರದೇಶದ ನಿನ್ನ ತಾರೆಗಳು ನನ್ನನ್ನು ತೋರಿಸಿಕೊಟ್ಟುವು."

ಜೀವನದಲ್ಲಿ ಬರುವ ನೋವು ಅವನ ಪ್ರೇಮದ ಚಿಹ್ನೆಯೆಂದು ತೋರುವುದು.

"ನನ್ನೊಡೆಯ! ನೀನು ನನ್ನ ತೊಡವಿಗಾಗಿ ನಿನ್ನ ಕತ್ತಿಯನ್ನು ಕೊಟ್ಟಿದ್ದೀಯೆ. ನನಗಿನ್ನು ಸಣ್ಣ ಪುಟ್ಟ ಗೊಂಬೆಯ ತೊಡವುಗಳು ಬೇಕಿಲ್ಲ."

"ತಾರೆಗಳಿಂದ ಖಚಿತವಾದ ನಿನ್ನ ಅಂಗದ
ಸುಂದರವಹುದು.
"ಸ್ವರ್ಣರತ್ನ ಶೋಭಿತವಾಗಿ ವರ್ಣವರ್ಣ ರಚಿತವಾಗಿ
ಲೋಭನೀಯುವದು ಬಲ್ಲೆ.
"ಆದರೆ ವಕ್ರ ವಿದ್ಯುತ್ತಿನಂತೆ ಹೊಳೆಯುವ
ನಿನ್ನ ಖಡ್ಗ ಅದಕ್ಕಿಂತ ಮನೋಹರ.
"ಅಸ್ತ ಆಕಾಶದಲ್ಲಿ ರಕ್ತ ರವಿಯ ರಾಗದಲ್ಲಿ
ಗರುಡನ ಪಕ್ಷದಂತೆ ಇದೆ ಅದು."

ಇದನ್ನರಿತವನು ಕಷ್ಟವನ್ನು ಬೇಡವೆನ್ನುವುದಿಲ್ಲ, ತಡೆಯುವ ಶಕ್ತಿಯನ್ನು ಬೇಡುತ್ತಾನೆ.

"ಕಷ್ಟಬಾರದಿರಲಿ ಎಂದು ಬೇಡುವುದು ಬೇಡೆನಗೆ; ಕಷ್ಟವನ್ನು ಎದುರಿಸುವ ಧೈರ್ಯವನ್ನು ಬೇಡುವೆನು.

"ನೋವು ನಂದಲಿ ಎಂದು ಕೇಳುವುದು ಬೇಡ; ನೋವನ್ನು ತಡೆಯುವ ಎದೆಯನ್ನು ಕೇಳುವೆನು.

"ಜೀವನದ ಕದನದಲ್ಲಿ ನೆರವಿನ ಮೇಲೆ ಭಾರಹಾಕುವುದು ಬೇಡ; ಭಾರವೆಲ್ಲ ನನ್ನ ಬಲದ ಮೇಲಿರಲಿ.

"ಅಂಜಿ ಅಳುಕಿ ಪಾಹಿ ಪಾಹಿ ಎನ್ನುವುದು ಬೇಡ; ಗೆದ್ದು ಸ್ವತಂತ್ರನಾಗಿ ನಿಂತಿರುವುದಿರಲಿ.

"ಸುಖದಲ್ಲಿ ಮಾತ್ರ ನಿನ್ನ ಕೃಪೆಯನ್ನು ಕಾಣುವ ಅಂಜುಪುರುಕನಾಗದಂತೆ ದಯಪಾಲಿಸು. ಸೋಲಿನಲ್ಲೂ ನೀನು ನನ್ನ ಕೈ ಹಿಡಿದಿರುವುದು ನನಗೆ ತಿಳಿಯಲಿ."

ಕವಿ ತನ್ನ ಕೆಲಸದಲ್ಲಿ ಗೆಲ್ಲುವನೋ ಸೋಲುವನೋ ಅದು ಮುಖ್ಯ ವಲ್ಲ. ಕೆಲಸಮಾಡಬೇಕೆಂಬ ಪ್ರಯತ್ನ ಮುಖ್ಯ. ಯತ್ನವು ವಿಫಲ ವಾದರೂ ಅದರಿಂದ ಪ್ರಯೋಜನವಿಲ್ಲದೆ ಹೋಗುವುದಿಲ್ಲ.

> "ನಾನು ಬಲ್ಲೆನು. ಈ ಬಾಳು ಪ್ರೇಮದ ಪಕ್ವಪದವನ್ನು ಮುಟ್ಟದಿದ್ದರೂ ತೀರ ವ್ಯರ್ಥವಾಗುವುದಿಲ್ಲ. ಉದಯದಲ್ಲಿಯೇ ಬಾಡುವ ಹೂಗಳು, ಮರಳ ಕಾಡಿನಲ್ಲಿ ಮರೆಯುವ ಹೊಳೆಗಳು, ಇವು ತೀರ ನಾಶವಾಗುವುದಿಲ್ಲವೆಂದು ನಾನು ಬಲ್ಲೆನು. ಮಂದ ಗತಿಯ ಭಾರದಿಂದ ಬಾಳಿನಲ್ಲಿ ಹಿಂದುಳಿಯುವ ಯಾವುದಾಗಲಿ ತೀರ ವ್ಯರ್ಥವಾಗುವುದಿಲ್ಲವೆಂದು ನಾನು ಬಲ್ಲೆನು. ಇನ್ನೂ ಫಲಿಸದಿರುವ ನನ್ನ ಕೆಲಸಗಳು, ಆರಂಭವಾಗದಿರುವ ಗಾನಗಳು, ನಿನ್ನ ಕೈಯ ಒಂದು ವೀಣೆಯ ಯಾವುದೋ ಒಂದು ತಂತಿಯಲ್ಲಿ ಸಿಲುಕಿ ಕೊಂಡಿವೆಯೆಂದು ನಾನು ಬಲ್ಲೆನು. ಅವು ನಷ್ಟವಾಗಿಲ್ಲ, ವ್ಯರ್ಥ ವಾಗಿಲ್ಲ."

ನಾನು ನನ್ನದು ಎಂದು ಕಟ್ಟಿಕೊಂಡರೆ ಅದು ಕಟ್ಟಾಗುತ್ತದೆ; ಬಿಟ್ಟಷ್ಟೂ ಸುಖ ಹೆಚ್ಚು.

> "ಬಾಗಿಲಿಂದ ಬಾಗಿಲಿಗೆ ಭಿಕ್ಷೆ ಬೇಡುತ್ತ ನಾನು ಹಳ್ಳಿಯ ದಾರಿಯಲ್ಲಿ ಹೋಗುತ್ತಿರುವಲ್ಲಿ ದೂರದಲ್ಲಿ ನಿನ್ನ ಸ್ವರ್ಣ ರಥವು ವೈಭವ ಸ್ವಪ್ನದಂತೆ ಕಣ್ಣಿಗೆ ಬಿದ್ದಿತು. ಈ ರಾಜಾಧಿರಾಜನಾರೋ ಎಂದು ನಾನು ಕಾತರಪಟ್ಟೆನು.
>
> "ನನ್ನ ಆಸೆ ಅಧಿಕವಾಯಿತು. ನಾನು ನನ್ನ ಕಷ್ಟದ ದಿನ ಗಳು ನೀಗಿದುವು ಎಂದುಕೊಂಡೆನು. ಕೇಳದೆಯೇ ನೀನು ಭಿಕ್ಷೆ ನೀಡುವೆಯೆಂದೂ ಮಣ್ಣಿನಲ್ಲಿ ಧನವನ್ನು ಎರಚುವೆಯೆಂದೂ ನೆನೆದು ನಾನು ಅಲ್ಲೇ ನಿಂತೆನು.
>
> "ನಾನು ನಿಂತ ಕಡೆ ರಥವು ನಿಂತಿತು. ನಿನ್ನ ದೃಷ್ಟಿ ನನ್ನ ಮೇಲೆ ಬಿದ್ದಿತು. ಮುಗುಳುನಗೆಯಿಂದ ನೀನು ಕೆಳಗಿಳಿದು ಬಂದೆ. ಕೊನೆಗೆ ನನ್ನ ಜೀವನದ ಸುಕೃತ ಬಂದಿತೆಂದು ನನಗೆ

ತೋರಿತು. ಆಗ ನೀನು ಅಕಸ್ಮಾತ್ ನನ್ನ ಕಡೆಗೆ ನಿನ್ನ ಬಲಗೈಯನ್ನು ಚಾಚಿ ನನಗೆ ಏನನ್ನು ಕೊಡುವೆ ಎಂದು ಕೇಳಿದೆ.

"ಅಯ್ಯೋ! ಭಿಕ್ಷುಕನಲ್ಲಿ ಭಿಕ್ಷೆ ಬೇಡುವುದಕ್ಕೆ ಕೈನೀಡುವುದು ದೊರೆಗೆ ತಕ್ಕ ಹಾಸ್ಯವೇ? ನನಗೆ ಮಂಕುಬಡಿದು ಏನೂ ತಿಳಿಯದೆ ನಿಂತೆನು. ಕೊನೆಗೆ ನನ್ನ ಜೋಳಿಗೆಯಿಂದ ಒಂದು ಸಣ್ಣ ಅಕ್ಕಿಯ ಕಾಳನ್ನು ತೆಗೆದು ನಿನ್ನ ಕೈಯಲ್ಲಿಟ್ಟೆನು.

"ಆದರೆ ದಿನದ ಕೊನೆಯಲ್ಲಿ ನನ್ನ ಚೀಲವನ್ನು ಕವುಚಲು ನನ್ನ ಸ್ವಲ್ಪ ಧಾನ್ಯದಲ್ಲಿ ಒಂದು ಸಣ್ಣ ಚಿನ್ನದ ಕಾಳು ಇರುವುದು ಕಂಡಿತು. ನನ್ನ ಆಶ್ಚರ್ಯವನ್ನು ಏನೆಂದು ಹೇಳಲಿ! ನೀನು ಕೇಳಿದಾಗ ನನ್ನ ಸರ್ವಸ್ವವನ್ನೂ ಕೊಟ್ಟುಬಿಟ್ಟಿದ್ದರೆ ಚೆನ್ನಾಗಿತ್ತಲ್ಲಾ ಎಂದು ನಾನು ಬಹಳವಾಗಿ ಅತ್ತೆನು."

ಕೊಡಲಾರದೆ ಉಳಿಸಿಕೊಳ್ಳುವ ಒಂದು ಹಿಡಿ ಅಕ್ಕಿ ನಾನು ಎಂಬ ಮಂಕು. ಇದು ನಮ್ಮ ಹಿಂದೆಯೇ ಇರುತ್ತದೆ, ನಮ್ಮ ನಿಜವಾದ ಗುಣಕ್ಕಿಂತ ಹೆಚ್ಚು ಗಲಭೆಮಾಡುತ್ತದೆ.

"ಅವನನ್ನು ಬಿಡುವುದಕ್ಕೆ ಒಂದು ಪಕ್ಕಕ್ಕೆ ನಿಂತರೂ ಅವನಿಂದ ತಪ್ಪಿಸಿಕೊಳ್ಳಲಾಗಲಿಲ್ಲ.

"ನಡೆಯುವ ರಭಸದಿಂದ ಅವನು ಧೂಳನ್ನು ಎಬ್ಬಿಸುತ್ತಿದಾನೆ. ನಾನು ಆಡುವ ಮಾತು ಮಾತಿಗೂ ತನ್ನ ಗಂಟಲನ್ನು ಸೇರಿಸುತ್ತಿದಾನೆ.

"ಒಡೆಯ! ಅವನು ನನ್ನ ಅಲ್ಪಾತ್ಮನು. ಅವನಿಗೆ ನಾಚಿಕೆಯೆನ್ನುವುದಿಲ್ಲ. ಆದರೆ ಅವನೊಂದಿಗೆ ನಿನ್ನಲ್ಲಿ ಬರುವುದಕ್ಕೆ ನನಗೆ ನಾಚಿಕೆಯಾಗುತ್ತಿದೆ."

ನಾನು ಎನ್ನುವುದನ್ನು ಬಿಡಲಾರದೆ ನಾವು ನಮ್ಮ ಆತ್ಮಕ್ಕೆ ಒಂದು ಸೆರೆಯನ್ನು ಮಾಡುತ್ತಿದೇವೆ.

"ನನ್ನ ಹೆಸರಿನಿಂದ ನಾನು ಕವಿದಿರುವ ಆತ್ಮನು ಈ ಸೆರೆಯಲ್ಲಿ ಸಿಕ್ಕಿ ನರಳುತ್ತಿದ್ದಾನೆ. ನಾನು ಸುತ್ತ ಈ ಗೋಡೆಯನ್ನು ಕಟ್ಟು

ವುದರಲ್ಲಿಯೇ ಸರ್ವದಾ ನಿಂತಿದ್ದೇನೆ. ದಿನದಿಂದ ದಿನಕ್ಕೆ ಈ ಗೋಡೆ ಆಕಾಶಕ್ಕೆ ಎದ್ದಹಾಗೆ ಅದರ ಕತ್ತಲಲ್ಲಿ ನನ್ನ ಆತ್ಮದ ಸ್ವಭಾವವನ್ನು ಮರೆಯುತ್ತಿದೇನೆ.''

ಇದು ಕೆಟ್ಟದೆಂದು ತಿಳಿದರೂ ನಾವು ಇದನ್ನು ಬಿಡಲು ಇಷ್ಟಪಡುವುದಿಲ್ಲ. ಭವಬಂಧವನ್ನು ಹರಿಸು ಎಂದು ಬಾಯಲ್ಲಿ ಹೇಳುತ್ತಿದ್ದರೂ ದೇವರು ಎಲ್ಲಿಯಾದರೂ ಅದನ್ನು ಹರಿಸಿಬಿಟ್ಟಾನು ಎಂದು ಅಂಜುತ್ತಿರುತ್ತೇವೆ.

''ಈ ಕಟ್ಟುಗಳು ನನ್ನನ್ನು ಕದಲುವುದಕ್ಕೆ ಬಿಡುವುದಿಲ್ಲ. ಆದರೂ ಅವುಗಳನ್ನು ಬಿರಿಯೋಣವೆಂದರೆ ಅವು ಹೋಗುವುವಲ್ಲಾ ಎಂದು ಮನಸ್ಸು ನೋಯುತ್ತದೆ.

''ನನಗೆ ಬೇಕಾದದ್ದು ಬಿಡುಗಡೆ; ಆದರೆ ಅದನ್ನು ಕೋರುವುದಕ್ಕೆ ನಾಚುತ್ತೇನೆ.

''ನನ್ನ ಹೊದಿಕೆ ಮಣ್ಣಿನ ಹೊದಿಕೆ; ಸಾವಿಗೆ ಸಿಕ್ಕಿದ್ದು; ಅದನ್ನು ನಾನು ಸಹಿಸಲಾರೆನು. ಆದರೂ ಅದನ್ನು ಪ್ರೀತಿಯಿಂದ ಹಿಡಿದು ಭದ್ರವಾಗಿ ಹೊದ್ದುಕೊಳ್ಳುತ್ತೇನೆ.

''ನನ್ನ ಕಡಗಳು ಹೆಚ್ಚು; ನನ್ನ ಸೋಲು ದೊಡ್ಡದು; ನನ್ನ ಪರಾಭವವು ಗುಪ್ತವಾದುದು, ಭಾರವಾದುದು; ಆದರೂ ನನ್ನ ಹಿತವನ್ನು ನಾನು ಕೇಳಿಕೊಳ್ಳುವುದಕ್ಕೆ ಬಂದಾಗ ಅದನ್ನು ಕೊಟ್ಟೇಯೆ ಎಂದು ಹೆದರಿಕೆಯಾಗುತ್ತದೆ.''

**೩೧. ಸಾಮ್ಯಗಳು**

ಠಾಕೂರರ ಕೆಲವು ಕವಿತೆಗಳು ಬಹುಮುಖವಾದ ಅರ್ಥವನ್ನು ಕೊಡುತ್ತ ಒಗಟಿಗಳಂತೆ ಕಾಣುತ್ತವೆ. ಅವುಗಳಲ್ಲಿ ನಾಲ್ಕನ್ನು ಇಲ್ಲಿ ಕೊಟ್ಟಿದೆ.

ಒಂದರಲ್ಲಿ ಮನೆಯ ಮನುಷ್ಯನು ಸಮುದ್ರಕ್ಕೆ ಬಲೆಯನ್ನು ಬೀಸಿ ಅನೇಕ ಪದಾರ್ಥಗಳನ್ನು ತಂದು ಮನೆಯಲ್ಲಿ ಹಾಕಿದಂತೆಯೂ, ಅವನ್ನು ಮನೆಯಾಕೆ ಚೆನ್ನಾಗಿಲ್ಲವೆಂದು ಎಸೆದಂತೆಯೂ, ಮಾರನೆಯದಿನ ಬೇರೆ ದೇಶದವರೆಲ್ಲ ಬಂದು ಅವನ್ನು ಬೆಲೆಬಾಳುವ ಪದಾರ್ಥಗಳೆಂದು ತೆಗೆದು

ಕೊಂಡು ಹೋದಂತೆಯೂ ಹೇಳಿದೆ. ತನ್ನವರು ನಿರಾಕರಿಸಿದ ಕೃತಿಯನ್ನು ಪರದೇಶೀಯರು ಮೆಚ್ಚುವರೆಂಬುದು ಇದರ ಧ್ವನಿ ಇರಬಹುದು.

" ನಾನು ಬೆಳಗಾಗ ನನ್ನ ಬಲೆಯನ್ನು ಸಾಗರಕ್ಕೆ ಬೀಸಿದೆನು. ಅದರ ಇರುಳಾಳದಿಂದ ವಿಚಿತ್ರ ಆಕೃತಿಯ ವಿಚಿತ್ರ ಸೌಂದರ್ಯದ ಹತ್ತಾರು ವಸ್ತುಗಳನ್ನು ಹೊರಕ್ಕೆ ಎಳೆದೆನು. ಅವುಗಳಲ್ಲಿ ಕೆಲವು ಮಂದಹಾಸದಂತೆ ಬೆಳಗಿದುವು; ಕೆಲವು ಕಣ್ಣೀರಂತೆ ಮಿನುಗಿದುವು; ಇನ್ನು ಕೆಲವು ಮದವಣಿಗಿತ್ತಿಯ ಕೆನ್ನೆಗಳಂತೆ ಕೆಂಪೇರಿ ಕಂಡವು. ದಿನದ ದುಡಿತದ ಹೊರೆಯನ್ನು ಹೊತ್ತು ನಾನು ಮನೆಯನ್ನು ಸೇರಿದಾಗ ನನ್ನ ಪ್ರಿಯೆ ತೋಟದಲ್ಲಿ ಕುಳಿತಿದ್ದಳು; ಒಂದು ಹೂವಿನ ದಳಗಳನ್ನು ಕಿತ್ತು ಎಸೆಯುತ್ತಿದ್ದಳು. ನಾನು ಒಂದು ಕ್ಷಣ ಬಿಟ್ಟು ಸಮುದ್ರದಿಂದ ಸೆಳೆದಿದ್ದ ಎಲ್ಲವನ್ನೂ ಅವಳ ಕಾಲಬಳಿ ಇಟ್ಟೆನು; ಸುಮ್ಮನೆ ನಿಂತೆನು. ಅವಳು ಅದನ್ನೆಲ್ಲ ನೋಡಿದಳು. 'ಏತರದು ಇದು? ಇದು ಯಾವ ಕೆಲಸಕ್ಕೆ ಬರುತ್ತದೆ' ಎಂದಳು. ನಾನು ನಾಚಿಕೊಂಡೆನು, ತಲೆ ತಗ್ಗಿಸಿದೆನು. ಇವುಗಳನ್ನು ನಾನು ಗೆದ್ದು ತರಲಿಲ್ಲ, ಪೇಟೆಯಲ್ಲಿ ಹಣಕೊಟ್ಟು ಕೊಳ್ಳಲಿಲ್ಲ, ಇವು ಅವಳಿಗೆ ತಕ್ಕ ಬಾಗಿನವಲ್ಲ: ಹೀಗೆಂದು ರಾತ್ರಿಯೆಲ್ಲ ಕುಳಿತು ನಾನು ಆ ಸಾಮಾನನ್ನು ಒಂದೊಂದಾಗಿ ಬೀದಿಗೆಸೆದೆನು. ಬೆಳಗಾಗ ಪರದೇಶೀಯರು ಬಂದು ಅವುಗಳೊಂದೊಂದನ್ನೂ ಎತ್ತಿಕೊಂಡು ದೂರದೇಶಗಳಿಗೆ ಕೊಂಡುಹೋದರು."

ಸೆರೆ ಅಭ್ಯಾಸವಾದವರಿಗೆ ಅದೇ ಸುಖವೆಂದು ಕಾಣುತ್ತದೆ. ಅವರಿಗೆ ಸ್ವಾತಂತ್ರ್ಯ ಸಾಧ್ಯವಿಲ್ಲ, ಅದರಲ್ಲಿ ಸುಖವಿಲ್ಲ. ಈ ಸೆರೆ ಯಾವ ವಿಧವಾದ ಕಟ್ಟಾದರೂ ಹೀಗೆಯೇ.

" ಪಂಜರದ ಪಕ್ಷಿ ಚಿನ್ನದ ಪಂಜರದಲ್ಲಿತ್ತು;
ವನದ ಪಕ್ಷಿ ವನದಲ್ಲಿತ್ತು.
ವಿಧಾತನು ಹೀಗಾಗಬೇಕೆಂದ ವೇಳೆ ಬಂದಾಗ
ಅವು ಒಂದನ್ನೊಂದು ಕಂಡವು.
ವನದ ಪಕ್ಷಿ ಹೇಳಿತು 'ಅಣ್ಣ ಪಂಜರದ ಪಕ್ಷಿ

ಇಬ್ಬರೂ ಹೋಗೋಣ ಬಾ.'
ಪಂಜರದ ಪಕ್ಷಿ ಹೇಳಿತು 'ವನದ ಪಕ್ಷಿ ಬಾರ
ಪಂಜರದಲ್ಲಿ ಜೊತೆಯಲ್ಲಿ ಇದ್ದುಬಿಡೋಣ.'

ವನದ ಪಕ್ಷಿ ಹೊರಗೆ ಕುಳಿತು ಕುಳಿತು
ವನದ ಗಾನವನ್ನು ಹಾಡಿತು;
ಪಂಜರದ ಪಕ್ಷಿ ತಾನು ಕಲಿತದ್ದನ್ನು ಹಾಡಿತು;
ಎರಡೂ ಎರಡು ಭಾಷೆಯಂತಿತ್ತು.
ವನದ ಪಕ್ಷಿ ಹೇಳಿತು 'ಅಣ್ಣ ಪಂಜರದ ಪಕ್ಷಿ
ವನದ ಗಾನ ಹಾಡು ಕೇಳೋಣ.'
ಪಂಜರದ ಪಕ್ಷಿ ಹೇಳಿತು 'ಅಣ್ಣ ವನದ ಪಕ್ಷಿ
ಪಂಜರದ ಗಾನವನ್ನು ಕಲಿಸುತ್ತೇನೆ ಕಲಿ.'
ವನದ ಪಕ್ಷಿ ಹೇಳಿತು 'ಛೆ, ಉಂಟೆ
ಗಾನವನ್ನು ಕಲಿಸುವುದು ಸಾಧ್ಯವಲ್ಲ.'
ಪಂಜರದ ಪಕ್ಷಿ ಹೇಳಿತು 'ಅಯ್ಯೋ
ನಾನು ಹೇಗೆ ವನ ಗಾನವನ್ನು ಹಾಡಲಿ?'

ವನದ ಪಕ್ಷಿ ಹೇಳಿತು 'ನಿನ್ನ ರೆಕ್ಕೆ ಬಡಿದು
ಮೇಘದ ಮಧ್ಯೆ ಒಂದು ಸಲ ಹಾರು.'
ಪಂಜರದ ಪಕ್ಷಿ ಹೇಳಿತು 'ಈ ನಿರಾಲ ಸುಖಕೋಣದಲ್ಲಿ
ನೀನೂ ಬಂದಿಯಾಗಿ ಕುಳ್ಳಿರು.'
ವನದ ಪಕ್ಷಿ ಹೇಳಿತು 'ಛೆ
ಇಲ್ಲಿ ರೆಕ್ಕೆ ಹರಡುವುದು ಹೇಗಾದೀತು.'
ಪಂಜರದ ಪಕ್ಷಿ ಹೇಳಿತು 'ಅಯ್ಯೋ
ಮೇಘದಲ್ಲಿ ಕುಳಿತುಕೊಳ್ಳುವುದಕ್ಕೆ ಯಷ್ಟಿ ಎಲ್ಲಿ?'

ಹೀಗೆ ಇವರಿಬ್ಬರ ಸ್ನೇಹ ಆಸೆಯಿಂದ ತೀವ್ರವಾಗಿದೆ;
ಆದರೆ ರೆಕ್ಕೆಗೆ ರೆಕ್ಕೆ ಹಚ್ಚಿ ಇವು ಜೊತೆಯಾಗಿ ಹಾರಲಾರವು.
ಪಂಜರದ ಕಂಬಿಯ ಕಂಡಿಯಿಂದ ಇವು

ಒಂದನ್ನೊಂದು ನೀರವವಾಗಿ ನೋಡುವುವು.
ಒಂದನ್ನೊಂದು ತಿಳಿಯಬೇಕೆಂದು ಇವುಗಳ ಆಸೆ.
ಆದರೆ ಈ ಆಸೆ ವ್ಯರ್ಥ.
ಉತ್ಸುಕವಾಗಿ ಎರಡೂ ತಮ್ಮ ರೆಕ್ಕೆಗಳನ್ನು ಬಡಿದು
ಹತ್ತಿರ ಬಾ ಹತ್ತಿರ ಬಾ ಎಂದು ಬೇಡುತ್ತವೆ.
ವನದ ಪಕ್ಷಿ ಹೇಳುತ್ತದೆ 'ಒಲ್ಲೆ
ಪಂಜರದ ಬಾಗಿಲು ಮುಚ್ಚಿಕೊಂಡೀತು.'
ಪಂಜರದ ಪಕ್ಷಿ ಹೇಳುತ್ತದೆ
'ನನಗೆ ಶಕ್ತಿಯಿಲ್ಲ ಹಾರಲಾರೆ.'"

ಈ ಮುಂದಣ ಕವಿತೆಯ ಬಂದಿ ಮನೆಮಠಕ್ಕಾಗಿ ದುಡಿಯುವ ಸಂಸಾರಿಯಾಗಬಹುದು, ಇನ್ನೊಬ್ಬನು ಕೀಳೆಂದು ಅವನನ್ನು ತುಳಿಯುವ ಉತ್ತಮನಾಗಬಹುದು, ಒಂದು ರಾಷ್ಟ್ರವನ್ನು ತುಚ್ಛೀಕರಿಸಿ ದಾಸ್ಯದಲ್ಲಿಡುವ ಚಕ್ರಾಧಿಪತ್ಯವಾಗಬಹುದು.

"ಬಂದೀ! ನಿನ್ನನ್ನು ಬಂಧಿಸಿದವರಾರು?
"ಬಂದಿ ಎಂದನು: 'ನನ್ನ ಒಡೆಯನು ಬಂಧಿಸಿದನು.

'ಹಣದಿಂದಲೂ ಬಲದಿಂದಲೂ ಎಲ್ಲರಿಗಿಂತ ಮುಂದಾಗಬೇಕೆಂದು ನನ್ನ ದೊರೆಗೆ ಸೇರಬೇಕಾದ ಹಣವನ್ನು ನನ್ನ ಮನೆಯಲ್ಲಿ ಸೇರಿಸಿಟ್ಟೆನು.

'ನಿದ್ದೆಬಂದಾಗ ನನ್ನ ದೊರೆಗಾಗಿ ಹಾಕಿದ ಹಾಸಿಗೆಯಲ್ಲಿ ನಾನು ಮಲಗಿದೆನು. ಎಚ್ಚರವಾದಾಗ ನನ್ನ ಹಣದ ಮನೆಯಲ್ಲಿ ನಾನು ಬಂದಿಯಾಗಿದ್ದೆನು."

"ಬಂದೀ! ಈ ಬಲವಾದ ಸರಪಳಿಯನ್ನು ಮಾಡಿದವರಾರು?
"'ನಾನೇ ಈ ಸರಪಳಿಯನ್ನು ಚೆನ್ನಾಗಿ ಮಾಡಿದವನು.

'ನಾನು ಪ್ರಪಂಚವನ್ನೆಲ್ಲ ನನ್ನ ಅಜೇಯವಾದ ಶಕ್ತಿಯಿಂದ ಸೆರೆ ಹಿಡಿದು ನಾನು ಬಿಡುವಾಗಿರಬೇಕೆಂದು ಆಲೋಚಿಸಿದೆನು.

'ರಾತ್ರಿಯೂ ಹಗಲೂ ದೊಡ್ಡ ಕೊಲಿಮೆಗಳನ್ನಿಟ್ಟು ಉಗ್ರ ತಾಡನಗಳಿಂದ ಈ ಸರಪಳಿಯನ್ನು ಮಾಡಿದೆನು. ಕೆಲಸ ಕೊನೆಗಂಡು

ಕೊಂಡಿಗಳೆಲ್ಲ ಮುಗಿದು ಭದ್ರವಾದಾಗ ನೋಡಲು ಅದು ನನ್ನನ್ನು
'ಹಿಡಿದುಕೊಂಡಿದ್ದಿತು.' "

ಸಹಾಯವನ್ನು ಬೇಡಿ ಕಾದಿರುವ ಹಲವು ಕೆಲಸ ಇರಲಾಗಿ ತಮ್ಮ ಉಪಪತ್ತಿಯನ್ನು ವ್ಯಸನ ವಿನೋದಗಳಲ್ಲಿ ಕಳೆದುಬಿಡುವ ಪುಣ್ಯವಂತರಿಗೆ ಈ ಕವಿತೆಯ ಬಾಲೆ ಪ್ರತಿನಿಧಿ.

"ಶೂನ್ಯ ನದೀತೀರದಲ್ಲಿ ಕಾಶೆ ಹುಲ್ಲಿನ ವನದಲ್ಲಿ
ನಾನು ಬಂದು ಹೇಳಿದೆನು 'ಬಾಲೇ ದೀಪಕ್ಕೆ ಸೆರಗನ್ನು
ಅಡ್ಡವಾಗಿ ಹಿಡಿದು
ದಾರಿಯಲ್ಲಿ ಒಬ್ಬಳೇ ಮೆಲ್ಲನೆ ಹೋಗುತ್ತಿರುವ ನೀನು ಯಾರು?
ನನ್ನ ಮನೆಯಲ್ಲಿ ದೀಪ ಹಚ್ಚಿಲ್ಲ ನಿನ್ನ ದೀಪವನ್ನು ಇಲ್ಲಿಡು.'
ಗೋಧೂಲಿ ಹೊತ್ತಿನಲ್ಲಿ ಎರಡು ನೀಲನಯನವನ್ನು
ಕ್ಷಣಮಾತ್ರ ನನ್ನ ಕಡೆಗೆ ಎತ್ತಿ ಅವಳು ಹೇಳಿದಳು, 'ಈ ದೀಪವನ್ನು
ತೇಲಬಿಡುವುದಕ್ಕೆ ದಿನದ ಕೊನೆಯಲ್ಲಿ ಕೂಲಕ್ಕೆ ಬಂದಿದ್ದೇನೆ.'
ಕಾಶೇ ಹುಲ್ಲಿನ ವನದಲ್ಲಿ ನಿಂತು ನಾನು
ಆ ದೀಪ ಅಕಾರಣವಾಗಿ ತೇಲಿಹೋದದ್ದನ್ನು ನೋಡಿದೆನು.
ಸಂಜೆ ತುಂಬಿ ಅಂಧಕಾರ ಕವಿದಾಗ ನಾನು ಬಂದು ಅವಳನ್ನು
ಕರೆದು ಹೇಳಿದೆನು:
'ನಿನ್ನ ಮನೆಯಲ್ಲಿ ಎಲ್ಲ ದೀಪಗಳೂ ಉರಿಯುತ್ತಿವೆ.
ಈ ದೀಪವನ್ನು ಯಾರಿಗೆ ಕೊಡುವುದಕ್ಕೆ ಹೋಗುವೆ.
ನನ್ನ ಮನೆಯಲ್ಲಿ ದೀಪ ಹಚ್ಚಿಲ್ಲ ನಿನ್ನ ದೀಪವನ್ನು ಇಲ್ಲಿಡು.'
ತನ್ನ ಎರಡು ನಯನವನ್ನು
ನನ್ನ ಮುಖದಮೇಲೆ ಇಟ್ಟು ಒಂದು ಕ್ಷಣ ಮರೆತಂತೆ ಕಂಡು
ಅವಳು ಹೇಳಿದಳು 'ನನ್ನ ಈ ದೀಪ ಆಕಾಶ ಪ್ರದೀಪ.
ಇದನ್ನು ಆಕಾಶದಲ್ಲಿ ಎತ್ತಿಡಬೇಕು.'
ಶೂನ್ಯ ಗಗನ ಕೋನದಲ್ಲಿ ಆ ದೀಪ ಅಕಾರಣವಾಗಿ ಉರಿಯುವು
ದನ್ನು
ನಾನು ನಿಂತು ನೋಡಿದೆನು.

ಅಮಾವಾಸ್ಯೆಯ ಕತ್ತಲ ಎರಡನೆಯ ಪ್ರಹರದಲ್ಲಿ
ನಾನು ಅವಳ ಹತ್ತಿರ ಹೋಗಿ ಹೇಳಿದೆನು 'ಅಮ್ಮಾ, ನೀನು
ಎದೆಯ ಬಳಿ ದೀಪವನ್ನು ಹಿಡಿದುಕೊಂಡು ಯಾರಿಗಾಗಿ ಹೋಗುತ್ತಲಿರುವೆ?
ನನ್ನ ಮನೆಯಲ್ಲಿ ದೀಪ ಹಚ್ಚಿಲ್ಲ; ನಿನ್ನ ದೀಪವನ್ನು ಇಲ್ಲಿ ಇಡು.'
ಕತ್ತಲಲ್ಲಿ ಕ್ಷಣಮಾತ್ರ ತನ್ನ ನೀಲನಯನಗಳಿಂದ ನನ್ನನ್ನು ನೋಡಿ
ಅವಳು ಹೇಳಿದಳು 'ಈ ದೀಪವನ್ನು ನಾನು ತೆಗೆದುಕೊಂಡು ಹೋಗುತ್ತಿರುವುದು
ದೀಪಾವಳಿಯ ಪೂಜೆಗೆ ಕೊಡುವುದಕ್ಕಾಗಿ.'
ನಾನು ನಿಂತು ಅವಳ ದೀಪ ಲಕ್ಷ ದೀಪಗಳೊಂದಿಗೆ
ಅಕಾರಣವಾಗಿ ಉರಿಯುತ್ತಿರುವುದನ್ನು ನೋಡಿದೆನು."

### ೩೨. ಶಾಂತಿ, ಸಮಾಧಾನ

ಭಕ್ತಿಯಿಂದ ಬರುವ ಜೀವನವಿಮರ್ಶೆ, ಸಮಾಧಾನ, ಶಾಂತಿ ಇವು ಕಾಣುವ ಪದ್ಯಗಳು ಇವರ ಈಚಿನ ಕೃತಿಗಳಲ್ಲಿ ಅನೇಕವಾಗಿವೆ. ಬಾಳನ್ನು ಕಣ್ತುಂಬ ನೋಡಿ ಮನವಾರೆ ವಿಮರ್ಶಿಸಿ ಇವರಲ್ಲಿ ಒಂದು ರೀತಿಯ ಮನಃಪ್ರಸಾದ ತಲೆದೋರಿದೆ. ಈ ಕೃತಿಗಳು ಈ ಕಾರಣದಿಂದ ಬಹು ಸುಂದರವಾಗಿವೆ.

"ಚಿಕ್ಕಂದಿನಲ್ಲಿ ನನ್ನ ಬಾಳು ಒಂದು ಹೂವಿನಂತಿತ್ತು: ವಸಂತ ಮಾರುತನು ಬಂದು ಬಾಗಿಲ ಬಳಿ ನಿಂತು ಬೇಡಿದಾಗ ತನ್ನ ಐಶ್ವರ್ಯದಿಂದ ಒಂದೆರಡು ದಳಗಳನ್ನು ಕೊಟ್ಟು ತನಗೆ ಕಡಮೆಯಾಯಿತೆಂದು ಕಾಣದ ಹೂವಿನಂತೆ.

"ಯೌವನವು ಕಳೆದುಹೋಯಿತು. ಈಗ ಬಾಳು ಒಂದು ಹಣ್ಣಿನಂತೆ ಆಗಿದೆ. ಅದು ಇನ್ನೇನನ್ನೂ ಕೊಡುವಂತಿಲ್ಲ. ತುಂಬು ರಸದ ಭಾರದೊಡನೆ ತನ್ನನ್ನೇ ನೀಡಿಕೊಳ್ಳಲು ಕಾದಿದೆ."

* * *

"ವಸಂತದ ಉತ್ಸವವು ಹೊಸ ಹೂವಿಗೆ ಮಾತ್ರವೆ? ತರಗೆಲೆಗೆ ಬಾಡಿದ ಹೂವಿಗೆ ಇಲ್ಲವೆ? ಸಾಗರದ ಘೋಷವು ಅಲೆಗಳ

ಉಬ್ಬರಕ್ಕೆ ಮಾತ್ರ ಶ್ರುತಿಯಾಗಿದೆಯೆ? ಇಳಿಯುವ ಅಲೆಗಳೊಡನೆ ಅದು ಹಾಡುವುದಿಲ್ಲವೆ? ನನ್ನ ದೊರೆ ನಿಂತಿರುವ ಜಮಖಾನದಲ್ಲಿ ನವರತ್ನಗಳನ್ನು ಸೇರಿಸಿ ಹೆಣೆದಿದೆ ನಿಜ. ಆದರೆ ಅವನ ಕಾಲ ಸೋಕಿಗೆ ದಿನ ಬರುವುದೆಂದು ಮಣ್ಣುಹೆಂಟೆಗಳೂ ಕಾದಿವೆ.

"ನಮ್ಮೊಡೆಯನೊಂದಿಗೆ ಕುಳ್ಳಿರಬಲ್ಲ ಮೇಧಾವಿಗಳೂ ಮಹಾಮಹಿಮರೂ ಇಲ್ಲದೆ ಇಲ್ಲ. ಆದರೂ ಆತನು ಮೂಢನಾದ ನನ್ನ ಕೈ ಹಿಡಿದೆತ್ತಿದಾನೆ; ನನ್ನನ್ನು ತನ್ನ ಸೇವಕನಾಗಿ ಮಾಡಿಕೊಂಡಿದಾನೆ."

ಸಿದ್ಧಿಹೊಂದಿದ ಇಂಥ ಜೀವನಕ್ಕೆ ಪ್ರಪಂಚದ ವಿಚಾರವೆಲ್ಲ ತಿಳಿಯಬೇಕೆಂಬ ಹಂಬಲಿರುವುದಿಲ್ಲ: ಅದರದು ಒಂದು ಮುಗ್ಧಾವಸ್ಥೆ.

"ನಾನು ಬೆಳಗಾಗ ಎದ್ದು ಅವನ ಪತ್ರವನ್ನು ನೋಡಿದೆ. ಅದರಲ್ಲಿ ಏನಿದೆಯೆಂದು ನಾನು ಕಾಣೆ. ನನಗೆ ಓದು ಬಾರದು.

"ಅದನ್ನು ಓದಿ ಹೇಳೆಂದು ನಮ್ಮ ಬುದ್ಧಿವಂತನನ್ನು ನಾನು ಕೇಳುವುದಿಲ್ಲ. ಅವನು ತನ್ನ ಪುಸ್ತಕವನ್ನು ಓದಲಿ. ಈ ಕಾಗದವನ್ನು ಓದಲು ಅವನಿಗೆ ಬರುವುದೋ ಇಲ್ಲವೋ?

"ಇದನ್ನು ನಾನು ನನ್ನ ಕಣ್ಣಿಗೆ ಒತ್ತಿಕೊಳ್ಳುತ್ತೇನೆ, ಎದೆಗೆ ಅಪ್ಪಿಕೊಳ್ಳುತ್ತೇನೆ. ಇರುಳು ಶಾಂತಿಗೆ ಬೆಳೆದು ತಾರೆ ಒಂದಾದ ಮೇಲೊಂದು ಬಂದಾಗ ಮಡಿಲಲ್ಲಿ ಇಟ್ಟು ಮೌನದಿಂದ ಕುಳ್ಳಿರುತ್ತೇನೆ.

"ಎಲೆಗಳು ಮರ್ಮರ ಶಬ್ದ ಮಾಡುತ್ತ ಅದನ್ನು ನನಗೆ ಓದಿ ಹೇಳುತ್ತವೆ. ಹರಿದೋಡುವ ಹೊಳೆ ಅದನ್ನು ಘೋಷಿಸುತ್ತದೆ. ಸಪ್ತರ್ಷಿ ಮಂಡಲವು ಅದನ್ನು ಗಗನದಿಂದ ಗಾನಮಾಡುತ್ತದೆ.

"ಅರಸುವುದು ಸಿಕ್ಕುವುದಿಲ್ಲ. ಕಲಿಯಬೇಕೆಂದದ್ದು ತಿಳಿಯುವುದಿಲ್ಲ. ಈ ಓದಲಾಗದ ಕಾಗದವಾದರೋ ನನ್ನ ಹೊರೆಯನ್ನು ಹಗುರಮಾಡಿದೆ, ನನ್ನ ಭಾವನೆಯನ್ನು ಗೀತಮಾಡಿದೆ."

**ಅದಕ್ಕೆ ದೇವರನ್ನು ಪೂಜಿಸುವುದು ಪ್ರಾರ್ಥಿಸುವುದು ಬೇಡ. ಸುಮ್ಮನೆ ಅವನ ಹೆಸರನ್ನು ಕರೆಯುವುದೇ ಒಂದು ಸಂತೋಷ:**

"ನನ್ನ ಮೌನದ ಧ್ಯಾನದ ನೆಳಲಿನಲ್ಲಿ ಒಂಟಿಯಾಗಿ ಕುಳಿತು ನಾನು ನಿನ್ನ ನಾಮವನ್ನು ಉಚ್ಚಾರಮಾಡುತ್ತೇನೆ. ಮಾತನಾಡದೆ ಉದ್ದೇಶವಿಲ್ಲದೆ ನಿನ್ನ ಹೆಸರನ್ನು ನಾನು ಉಚ್ಚರಿಸುತ್ತೇನೆ. ಅಮ್ಮಾ ಎನ್ನುವುದನ್ನು ಕಲಿತ ಸಂತೋಷದಲ್ಲಿ ಮಗು ಸುಮ್ಮಸುಮ್ಮನೆ ಅಮ್ಮಾ, ಅಮ್ಮಾ ಎಂದು ನೂರುಸಲ ಕರೆಯುತ್ತದೆ. ನಾನು ಆ ಮಗುವಿನಂತೆ."

ಠಾಕೂರರು ಸಾವಿನ ವಿಷಯವಾಗಿ ಬರೆದಿರುವ ಪದ್ಯಗಳು ಅವರ ಮನಸ್ಸು ಬೆಳೆದಿರುವ ರೀತಿಯನ್ನು ತೋರಿಸುತ್ತವೆ. ಅವುಗಳನ್ನು ಇಲ್ಲಿ ತರುವುದು ಸಹಜ ಮತ್ತು ಉಚಿತ.

"ಜೀವನದ ಚರಮ ಸಾಧನವಾದ ಮೃತ್ಯುವೇ! ಬಂದು ನನ್ನ ಕಿವಿಯಲ್ಲಿ ಮಾತನಾಡು. ದಿನದಿಂದ ದಿನಕ್ಕೆ ನಾನು ನಿನಗಾಗಿ ಕಾದಿದ್ದೇನೆ. ನಿನಗಾಗಿ ಕಷ್ಟಗಳನ್ನೂ ಸುಖಗಳನ್ನೂ ಅನುಭವಿಸಿದ್ದೇನೆ.

"ಹೂಗಳನ್ನು ಪೋಣಿಸಿ ಮದವಣಿಗನಿಗಾಗಿ ಮಾಲೆಯನ್ನು ಮಾಡಿದೆ. ಮದುವೆಯಾದಮೇಲೆ ಮದವಣಿಗಿತ್ತಿ ತೌರುಮನೆಯನ್ನು ಬಿಟ್ಟು ತನ್ನ ಒಡೆಯನನ್ನು ಸರಿರಾತ್ರಿಯಲ್ಲಿ ಒಬ್ಬಳೇ ಕಾಣುವಳು."

ಜೀವನವನ್ನು ಬಿಡುವ ಮೊದಲು ಅದರಿಂದ ತಿಳಿಯಬೇಕಾದದ್ದೆಲ್ಲ ತಿಳಿಯಲಿ ಎಂದು ಕವಿಯ ಆಸೆ.

"ಯಾವುದೋ ಒಂದು ದಿನದ ನಸುಗತ್ತಲ ಹೊತ್ತಿನಲ್ಲಿ ನೇಸರು ಹೋಗಿಬರುವೆನೆನ್ನುವುದು, ನಾನು ಅದನ್ನು ಮರಳಿ ನೋಡುವುದಿಲ್ಲ. ನಾನಿದನ್ನು ಬಲ್ಲೆ.

"ದನ ಕಾಯುವವರು ಆಲದಡಿ ಕೊಳಲುಗಳನ್ನೂದುತ್ತ ಇರಲು ದನ ಹೊಳೆಯ ಬದಿಯ ಕಾವಲಲ್ಲಿ ಮೇಯುತ್ತಿರುವುವು, ನನ್ನ ಬಾಳು ಕತ್ತಲಲ್ಲಿ ಮರೆದಿರುವುದು.

"ಇಷ್ಟನ್ನು ನಾನು ಬೇಡುತ್ತೇನೆ. ನಾನು ಭೂಮಿಯನ್ನು ಬಿಡುವ ಮೊದಲು ಇದು ನನಗೆ ತಿಳಿಯಲಿ. ಭೂಮಾತೆ ನನ್ನನ್ನು

ಕರೆದೆತ್ತಿಕೊಂಡಳೇಕೆ? ಅವಳ ನಿಶಿಯ ಮೌನ ನನಗೆ ತಾರೆಗಳ ಮಾತನ್ನಾಡಿತೇಕೆ? ಅವಳ ಹಗಲು ನನ್ನ ಭಾವಗಳನ್ನು ಮುದ್ರಿಸಿ ಹೂವಾಗಿ ಅರಳಿಸಿತೇಕೆ?

"ಹೊರಟುಹೋಗುವ ಮೊದಲು ಬಾಳ ನುಡಿಯನ್ನು ಸಾವಧಾನವಾಗಿ ನುಡಿದು ಗಾನವನ್ನು ಮುಗಿಸುವಂತಾಗಲಿ. ನಿನ್ನನ್ನು ನೋಡುವಂತೆ ಬೆಳಕು ಹಬ್ಬಿರಲಿ. ನಿನಗೆ ಹಾಕುವುದಕ್ಕೆ ಹಾರ ಕಟ್ಟಿರಲಿ."

ಜೀವನವನ್ನು ಬಿಡುವಂದು ಉಬ್ಬಸಕ್ಕೆ ಕಾರಣವಿಲ್ಲ. ಜೀವನ ಸುಖವಾಗಿದೆ. ನಿಜ; ಆದರೆ ಅದು ನಿಶಿ. ಸಾವು ಉದಯ:

"ನನಗೆ ಅಪ್ಪಣೆ ಬಂದಿದೆ, ಅಣ್ಣ! ನಾನು ಹೋಗಿಬರುತ್ತೇನೆ. ನಿಮುಗೆಲ್ಲ ನಮಸ್ಕಾರ; ಅನುಜ್ಞೆಯನ್ನು ಕೊಡಿ. ಇಗೋ ನನ್ನ ಮನೆಯ ಬೀಗದ ಕೈಗಳು. ನನ್ನ ಮನೆಯಲ್ಲಿ ನನಗಿರುವ ಅಧಿಕಾರವನ್ನೆಲ್ಲ ಬಿಟ್ಟಿದೇನೆ. ನನಗೆ ಇನ್ನೇನೂ ಬೇಡ. ನೀವು ಕೊನೆಯ ಮಾತಾಗಿ ವಿಶ್ವಾಸದ ಎರಡು ಮಾತುಗಳನ್ನು ಆಡಿದರೆ ಸಾಕು. ನಾವು ಬಹುಕಾಲ ನೆರೆಹೊರೆಯಾಗಿದ್ದೆವು. ನಾನು ಕೊಟ್ಟದಕ್ಕಿಂತ ನಿಮ್ಮಿಂದ ತೆಗೆದುಕೊಂಡಿರುವುದೇ ಹೆಚ್ಚು. ಈಗ ಉದಯವಾಯಿತು. ನನ್ನ ಮೂಲೆಯ ದೀಪ ಆರಿಹೋಯಿತು. ಆಜ್ಞೆಬಂದದರಿಂದ ನಾನು ಪ್ರಯಾಣಕ್ಕೆ ಸಿದ್ಧನಾಗಿದೇನೆ."

ಈಗ ಜೀವನ ಸುಖವಾಗಿ ಕಾಣುವಂತೆ ಮುಂದೆ ಸಾವೂ ಸುಖವಾಗಿ ಕಾಣುವುದೆಂಬ ಈ ಕವಿತೆಯ ತರ್ಕ ಸುಂದರವಾಗಿದೆ ಭದ್ರವಾಗಿದೆ:

"ನಾನು ಜೀವನದ ಸಿಂಹದ್ವಾರವನ್ನು ಹೊಕ್ಕು
ಈ ಆಶ್ಚರ್ಯ ಸಂಸಾರದ ಮಹಾ ನಿಕೇತನವನ್ನು ಸೇರಿದ ವೇಳೆಯನ್ನು
ನಾನು ಕಾಣೆನು; ಯಾವ ಶಕ್ತಿ ನನ್ನನ್ನು
ಅರ್ಧರಾತ್ರಿಯಲ್ಲಿ ಮಹಾರಣ್ಯದಲ್ಲಿ ಅರಳುವ ಒಂದು ಮುಗುಳಂತೆ
ಈ ವಿಪುಲ ರಹಸ್ಯದ ತೊಡೆಯ ಮೇಲೆ ಅರಳಿಸಿತು?
ಪ್ರಭಾತದಲ್ಲಿ ಶಿರವನ್ನೆತ್ತಿ ನಾನು ಧರೆಯನ್ನು ಕಣ್ತೆರೆದು ನೋಡಿದಾಗ
ಕನಕ ಕಿರಣದಿಂದ ನೆಯ್ದ ನೀಲಾಂಬರವನ್ನುಟ್ಟು

ಸುಖದುಃಖಗಳಿಂದ ಖಚಿತವಾದ ಸಂಸಾರವನ್ನು ಕಂಡೆನು.
ಆಗ ಅಜ್ಞಾತವಾಗಿದ್ದ ಈ ಅಪಾರ ರಹಸ್ಯ
ಒಂದು ನಿಮಿಷದಲ್ಲಿ ಮಾತೃವಕ್ಷವೆಂಬಂತೆ ಕಂಡಿತು.
ಏಕಾಂತವಾಗಿದ್ದದು ನಿತಾಂತ ಪರಿಚಿತವಾಗಿ ಕಂಡಿತು.
ರೂಪಹೀನ ಜ್ಞಾನಾತೀತ ಭೀಷಣ ಶಕ್ತಿ
ನನ್ನ ಬಳಿಯಲ್ಲಿ ಜನನೀಮೂರುತಿಯನ್ನು ಧರಿಸಿತ್ತು.
ಈಗ ಮೃತ್ಯು ಅಜ್ಞಾತ ನನಗೆ. ಈಗ ಅದನ್ನು ಕುರಿತು
ಕ್ಷಣಕ್ಷಣವೂ ನಡುಗಿ ಅದುರಿ ನಾನು ಹೆದರುತ್ತೇನೆ.
ಸಂಸಾರವನ್ನು ಬಿಟ್ಟುಹೋಗುವುದಕ್ಕೆ ಕಣ್ಣೀರು ಸುರಿಸಿ ಜೀವನ
ನನ್ನದೆಂದು ಎಣಿಸಿ ಅದನ್ನು ಎರಡು ಕೈಗಳಿಂದ ಕಟ್ಟಿಕೊಳ್ಳುತ್ತೇನೆ.
ಎಲಾ ಮೂಢ, ನೀನು ಇಚ್ಛಿಸುವ ಮೊದಲು ಜನ್ಮಮುಹೂರ್ತ
ದಿಂದ ಅಜ್ಞಾತವಾಗಿದ್ದ
ಜೀವನ ಸಂಸಾರವನ್ನು ನಿನ್ನದೆಂದು ಯಾರು ಮಾಡಿದರು?
ಹಾಗೆಯೇ ಮೃತ್ಯು ಮೂಡುವ ಮುಹೂರ್ತದಲ್ಲಿ ಅದರ ಅಪರಿಚಿತ
ಮುಖ
ಇದರಂತೆ ಪರಿಚಿತವಾಗಿ ಕಾಣುವುದು.
ಯಾವ ರೀತಿಯಿಂದ ಈ ಜೀವನದಲ್ಲಿ ನನಗೆ ಪ್ರೀತಿ ಇದೆಯೋ
ಅದೇ ರೀತಿಯಿಂದ ನಾನು ಮೃತ್ಯುವನ್ನು
ಪ್ರೀತಿಸುವುದು ನಿಶ್ಚಯ. ಒಂದು ಸ್ತನದಿಂದ ಬಿಡಿಸಿ ಎತ್ತಿದ
ಕ್ಷಣದಲ್ಲಿ
ಮಗು ಹೆದರಿ ಅಳುತ್ತದೆ. ಒಂದು ಮುಹೂರ್ತದಲ್ಲಿ
ಇನ್ನೊಂದು ಸ್ತನದಲ್ಲಿ ಅದು ಸಮಾಧಾನವನ್ನು ಪಡೆಯುತ್ತದೆ.''

ಈ ಉಪಮೆಯು ಸೊಗಸೇ ಸೊಗಸು. ಠಾಕೂರರ ಕವಿತೆಗಳಲ್ಲಿ ತತ್ತ್ವವಿಚಾರದಲ್ಲಿ ಉಪಮೆ ಬಹು ಕೆಲಸವನ್ನು ಮಾಡುತ್ತದೆ. ಇವರು ಅದನ್ನು ಉಪಯೋಗಿಸಿರುವ ರೀತಿಯಷ್ಟೇ ವಿಸ್ತಾರವಾದ ವಿಚಾರಕ್ಕೆ ಅರ್ಹವಾದ ವಿಷಯ. ಎಲ್ಲ ದೃಷ್ಟಿಯಿಂದಲೂ ಸಾರ್ಥಕವಾದ ಈ ಉಪಮೆ ಆ ರೀತಿಗೆ ಒಂದು ನಿದರ್ಶನ.

ಸಾವಿನ ವಿಷಯದಲ್ಲಿ ಈ ಸಮಾಧಾನ ಬರುವುದು ಜೀವನವೆಲ್ಲದರ ಮುಖ್ಯ ಫಲವೆನ್ನಬಹುದು. ಭಯವಿಲ್ಲದ ಬಾಳು ಮಾನವನ ಗುರಿ. ಎಲ್ಲ ಭಯಗಳಿಗೆ ಹಿರಿಯದು ಮೃತ್ಯು ಭಯ. ಇದನ್ನು ಬಿಟ್ಟವನು ಇನ್ನೆಲ್ಲ ಭಯವನ್ನೂ ಬಿಟ್ಟಂತೆಯೇ. ಆದರೆ ಇದರಿಂದ ಜೀವನದ ವಿಷಯದಲ್ಲಿ ಅಶ್ರದ್ಧೆ ಇರಬೇಕಾದದಿಲ್ಲ. ಕವಿಗೆ ತನ್ನ ಜೀವನದ ಅವಧಿಯನ್ನು ನೆನೆದುಕೊಂಡಾಗ "ಈ ಜೀವನದ ಅಪರಿಮಿತವಾದ ಐಶ್ವರ್ಯ ಕಂಡುಬರುತ್ತದೆ. ಪ್ರಪಂಚದ ಅತಿ ತಗ್ಗಿನ ಆಸನವೂ ಅಸಾಧಾರಣವಾದದು. ಅದರ ಅಧಮತಮ ಜೀವನವೂ ಶ್ರೇಷ್ಠವಾದದು" ಎಂದು ತಿಳಿಯುತ್ತದೆ.

ಇಂಥ ಸಿದ್ಧಿಯನ್ನು ಪಡೆದ ಇವರ ದಾರಿ ಹಿಂದಿನವರು ಮಾಡಿದ ದಾರಿಯಲ್ಲವೆಂದು ಹೇಳುವವರುಂಟು. ಅವರ ಟೀಕೆಯನ್ನು ಕುರಿತು ಎಂಬಂತೆ ಕವಿ ಈ ಮಾತನ್ನು ಹೇಳಿದಾರೆ.

"ಅವರು ದಾರಿಯನ್ನು ಕಂಡವರು. ಆದಕಾರಣ ನಿನ್ನನ್ನು ಹುಡುಕುತ್ತ ಓಣಿಯಲ್ಲಿ ನಡೆದರು. ನಾನು ಕಾಣದವನು, ರಾತ್ರಿಯಲ್ಲಿ ಅಲೆದೆ.

"ಕತ್ತಲಲ್ಲಿ ನಿನಗೆ ಹೆದರಬೇಕಾದಷ್ಟು ತಿಳಿವಳಿಕೆಯಿಲ್ಲ ನನಗೆ. ತಿಳಿಯದೆಯೇ ನಾನು ಬಂದು ನಿನ್ನ ಬಾಗಿಲನ್ನು ಸೇರಿದೆನು.

"ತಿಳಿದವರು ನನ್ನನ್ನು ಗದರಿದರು. ಓಣಿಯಲ್ಲಿ ಬರಲಿಲ್ಲ ಹೋಗು ಆಚೆ ಎಂದರು. ಹೌದೇನೋ ಎಂದು ನಾನು ಹಿಂತಿರುಗಿದೆ. ಆದರೆ ನೀನು ನನ್ನನ್ನು ಬಿಡಲಿಲ್ಲ ಹಿಡಿದುಕೊಂಡೆ. ಅವರ ಗದರಿಕೆಯೋ ದಿನ ದಿನವೂ ಹೆಚ್ಚಾಯಿತು."

### ೩೩. ಪರಿಣತಿಯ ಕಾವ್ಯ

ಇಂಗ್ಲೀಷಿನಲ್ಲಿ ಗೀತಾಂಜಲಿ ಪ್ರಕಟವಾದ ಮೇಲೆ ಠಾಕೂರರ ಜೀವನ ಪ್ರಪಂಚದ ಸ್ವತ್ತಾಯಿತು. ಇದನ್ನು ಇವರು ಈ ಪದ್ಯದಲ್ಲಿ ವರ್ಣಿಸಿದಾರೆಂದು ಕಾಣುತ್ತದೆ:

"ನನ್ನ ಯಾತ್ರೆ ಮುಗಿಯಿತೆಂದೂ, ನನ್ನ ಶಕ್ತಿ ಕೊನೆಮುಟ್ಟಿತೆಂದೂ ನಾನು ಭಾವಿಸಿದ್ದೆನು. ನನ್ನ ಮುಂದೆ ದಾರಿ ಮುಚ್ಚಿಹೋಗಿದೆ ನನ್ನ ಸಾಮಗ್ರಿ ಮುಗಿಯಿತು ಎಂದೂ, ಇನ್ನು ಬಾಯಿ ಮುಚ್ಚಿಕೊಂಡು ನನ್ನ ಮೂಲೆಯಲ್ಲಿ ನಾನು ಕುಳಿತಿರುವ ಕಾಲ ಬಂದಿತೆಂದೂ ಎಣಿಸಿಕೊಂಡೆನು. ಆದರೆ ನನ್ನ ವಿಷಯದಲ್ಲಿ ನಿನ್ನ ಕೃಪೆಗೆ ಕೊನೆಯಿಲ್ಲವೆನ್ನುವುದು ನನಗೆ ಕಾಣುತ್ತಿದೆ. ಪೂರ್ವದ ಮಾತು ನಾಲಗೆಯ ಮೇಲೆ ಮುಗಿಯುವ ಮೊದಲು ಹೃದಯದಿಂದ ಹೊಸ ಗಾನ ಹೊಮ್ಮುತ್ತಿದೆ; ಹಳೆಯ ದಾರಿಗಳು ಮರೆದಿರಲಾಗಿ ಹೊಸ ದೇಶವೇ ತನ್ನ ಆಶ್ಚರ್ಯಗಳನ್ನು ಎದುರಿಗೆ ತೆರೆದಿಡುತ್ತಿದೆ."

ಲೋಕವೇ ತಮ್ಮದಾದ ಭಾವವನ್ನು ಇವರು ಈ ಪದ್ಯದಲ್ಲಿ ಹೇಳಿದಾರೆ:

"ನನಗೆ ತಿಳಿಯದೆ ಇದ್ದ ಸ್ನೇಹಿತರಿಗೆಲ್ಲ ನೀನು ನನ್ನನ್ನು ತಿಳಿಯುವಂತೆ ಮಾಡಿದೆ. ನನಗೆ ಸೇರದ ಮನೆಗಳಲ್ಲಿ ನನಗೆ ಸ್ಥಳವನ್ನು ಕೊಡಿಸಿದೆ. ದೂರವಾದದನ್ನು ಹತ್ತಿರ ತಂದು ಅಪರಿಚಿತನನ್ನು ಒಡಹುಟ್ಟಿದವನನ್ನಾಗಿ ಮಾಡಿದೆ. ನನ್ನ ವಾಡಿಕೆಯಾದ ಸ್ಥಳವನ್ನು ಬಿಡಬೇಕಾದರೆ ಮನಸ್ಸು ಶಂಕಿಸುತ್ತದೆ. ನವೀನದಲ್ಲಿಯೂ ಪ್ರಾಚೀನವಿರುವುದೆಂಬುದನ್ನೂ ಅವೆರಡರಲ್ಲೂ ನೀನಿರುವೆಯೆಂಬುದನ್ನೂ ನಾನು ಮರೆತಿರುವೆನು. ಹುಟ್ಟಿನಲ್ಲೂ ಸಾವಿನಲ್ಲೂ ಈ ಲೋಕದಲ್ಲೂ ಇತರ ಲೋಕಗಳಲ್ಲೂ ನೀನು ಎಲ್ಲಿ ಕರೆದುಕೊಂಡು ಹೋದರೆ ಅಲ್ಲಿ ಎಲ್ಲವೂ ಯಾವಾಗಲೂ ಒಬ್ಬನೇ ಆದ ನೀನೇ ನನ್ನ ಅನಂತ ಜೀವನದ ಒಬ್ಬ ಒಡನಾಡಿಯಾಗಿ ನನ್ನ ಹೃದಯವನ್ನು ಅಪರಿಚಿತಕ್ಕೆಲ್ಲ ಆನಂದ ಬಂಧನದಿಂದ ಬಂಧಿಸುತ್ತಿರುವೆ.

"ನಿನ್ನನ್ನು ಅರಿತಮೇಲೆ ಅಪರಿಚಿತರಿಲ್ಲ. ಆಗ್ಗೆ ಯಾವ ಬಾಗಿಲೂ ಮುಚ್ಚಿರುವುದಿಲ್ಲ."

ಯೂರೋಪಿನ ಘೋರ ಸಂಗ್ರಾಮ ನಡೆಯುತ್ತಿದ್ದ ಕಾಲದಲ್ಲಿ ಈ ಅನ್ಯಾಯವುಂಟೇ ಎಂದು ಕವಿವರರು ಬಹುದುಃಖಿಸಿದರು; ಆ ಸಂದರ್ಭದಲ್ಲಿ ಕೆಲವು ಪದ್ಯಗಳನ್ನು ಬರೆದರು. ಭಗವಂತನ ಸೃಷ್ಟಿಯನ್ನು

ಮಾನವನು ಕೆಡಿಸುತ್ತಾನೆ; ದೇವರು ಅವನ ಕ್ರೂರ ಕರ್ಮವನ್ನು ಮರೆಯಿಸುವುದರಲ್ಲಿ ನಿರತನಾಗಿದಾನೆ; ಎನ್ನುವುದು ಈ ಕವಿತೆಗಳ ಮುಖ್ಯ ಭಾವ. ಪಕ್ವವಾದ ಈ ವಿಶ್ವಪ್ರೇಮ ಇವರ ಕೊನೆಯ ಗ್ರಂಥಗಳಲ್ಲೆಲ್ಲ ಕಾಣುತ್ತದೆ. 'ಪಲಾತಕಾ' ಗ್ರಂಥದಲ್ಲಿ ಜೀವನ ಚಿತ್ರಗಳನ್ನು ಕೊಡುವ ಕವಿತೆಗಳಿವೆ. ಒಂದು ಕಥೆ ವರ ಸಿಕ್ಕದೆ ಮದುವೆಯಿಲ್ಲದೆ ಇರುವ ಹುಡುಗಿಯೊಬ್ಬಳು, ಅವಳನ್ನು ಪ್ರೀತಿಸುತ್ತಿದೇನೆಂದುಕೊಳ್ಳುವ ಆದರೆ ಅವಳನ್ನು ಮದುವೆಯಾಗಲು ಸಾಕಾದ ಗುಂಡಿಗೆ ಇಲ್ಲದ ಹುಡುಗ ಒಬ್ಬ, ಇವರ ಚರಿತ್ರೆ; ಇನ್ನೊಂದು ಕವಿತೆ ಸಂಸಾರದ ನೂರು ಕಟ್ಟಲೆಗೆ ತಲೆಕೊಟ್ಟು ನುಗ್ಗುನುರಿಯಾಗಿ ಮೂವತ್ತು ವಯಸ್ಸಿಗೆ ಸಾಯುವ ಹೆಣ್ಣು ಒಬ್ಬಳ ಕತೆ; ಅವಿಭಕ್ತ ಕುಟುಂಬದಲ್ಲಿ ಅಡಗಿ ಅಡಗಿ ಇದ್ದು ಕಾಯಿಲೆಯಾದಾಗ ಗಂಡನೊಂದಿಗೆ ಒಂದು ಪಯಣ ಹೊರಟ ಒಬ್ಬ ತರುಣಿಯ ಧಾರಾಳವನ್ನೂ ಆನಂದವನ್ನೂ ಕುರಿತದ್ದು ಇನ್ನೊಂದು ಕತೆ; ತನ್ನ ಮಗಳು ಕತ್ತಲಲ್ಲಿ ದೀಪವನ್ನು ಹಿಡಿದು ಮಹಡಿಯಿಂದ ಕೆಳಗಿಳಿದುಹೋಗಿ ಅಲ್ಲಿ ದೀಪ ಆರಿಹೋಗಲು ದಾರಿ ತಪ್ಪಿಹೋಯಿತೆಂದು ಭಯದಿಂದ ಕೂಗಿಕೊಂಡದ್ದನ್ನು ಹೇಳಿ ಹೀಗೆಯೇ ಆಕಾಶಪಥದಲ್ಲಿ ನಕ್ಷತ್ರವೊಂದು ಎಲ್ಲಿಯೋ ಸ್ವಲ್ಪ ದೂರ ಹೊರಟು ಬೆಳಕು ಹೋಗಿ ಕೂಗಿಕೊಂಡರೆ ಏನು ಗತಿ ಎಂಬ ಕನಿಕರದ ಕೂಗು ಒಂದು ಕವನ. ಹೀಗೆ ಈ ಕಾವ್ಯಗುಚ್ಛದಲ್ಲಿ ಜೀವನದೊಂದಿಗೆ ಆರ್ದ್ರ ಹೃದಯದಿಂದ ಸಹಕರಿಸುವ ಸ್ಥಿತಿ ಕಾಣುತ್ತದೆ. ಮೊದಲ ಕಾವ್ಯಗಳಲ್ಲಿ ಸ್ವಂತದ ಅನುಭವ, ತಿಳಿವು, ಇವು ಮುಖ್ಯ. ಇಲ್ಲಿ ಇತರ ಜೀವನದೊಂದಿಗೆ ಸಹಾನುಭೂತಿ, ಅದರ ದೃಷ್ಟಿಯಿಂದ ಅರಿವು ಇವು ಮುಖ್ಯ. ಸಮಾಜದಲ್ಲಿ ತಪ್ಪು ಕಂಡಾಗ ಅಂದು ಉಗ್ರವಾದ ಮಾತುಗಳಿಂದ ಖಂಡಿಸಿದ ಇವರ ಬರಹದಲ್ಲಿ ಈಗ ಖಂಡನವೂ ನಯವಾಗಿದೆ. ಅಲ್ಲಿ ಹುಳಿಯಾಗಿದ್ದ ಮಾವು ಇಲ್ಲಿ ಪಕ್ವವಾಗಿ ಸಿಹಿಯೇ ಆಗಿದೆ. ಅಜೀರ್ಣದ ಜಠರಕ್ಕೆ ಚಿಕಿತ್ಸೆಮಾಡಲು ಹುಳಿಯನ್ನು ಹಾಕಬೇಕು. ವೈದ್ಯನು ಆರಂಭದಲ್ಲಿ ಕ್ಷಾರವನ್ನು ಕೊಡುವನು; ವಯಸ್ಸಾದವನಾದರೆ ಕಿತ್ತಳೆಹಣ್ಣನ್ನು ಕೊಡುವನು. ಕವಿವರರ ಕಡೆಯ ಸ್ಥಿತಿ ಈ ಪಕ್ವದ ಸ್ಥಿತಿ.

ತೀರಾ ಕಡೆಯ ವರ್ಷಗಳಲ್ಲಿ ಪ್ರಕಟಿಸಿದ 'ನವಜಾತಕ', 'ರೋಗ ಶಯ್ಯಾಯ್', 'ಆರೋಗ್ಯ', 'ಜನ್ಮದಿನೇ' ಎಂಬ ಪದ್ಯಗ್ರಂಥಗಳಲ್ಲಿ ಕವಿವರರು ಅಂದಂದಿನ ಭಾವನೆಗೆ ರೂಪು ಕೊಡುತ್ತಲೇ ನಡೆದರು. ಈ ಕೃತಿಗಳ ಹಲಕೆಲವು ಪದ್ಯ ಇಂಗ್ಲೀಷಿನಲ್ಲಿ ಬಂದಿವೆ. ಬಡತನವನ್ನು ಕುರಿತ ಕನಿಕರ, ಲೋಕಜೀವನವನ್ನು ಕುರಿತ ಹಿರಿಯೆದೆಯ ಆತಂಕ, ಪರಿಣತ ಜೀವನದಲ್ಲಿ ಮತ್ತೆ ಕಾಣುವ ಎಳೆಗೂಸಿನ ಸಾರಳ್ಯ, ಈ ಪದ್ಯಗಳ ಮುಖ್ಯ ಲಕ್ಷಣ.

ಠಾಕೂರರ ಕಾವ್ಯಗಳ ಈ ಅವಲೋಕನ ಅವರು ತಮ್ಮ ಗೀತೆಗಳನ್ನು ಕುರಿತು ಹೇಳಿರುವ ಮಾತಿನಿಂದ ಮುಗಿಯಬಹುದು.

> "ನನ್ನ ಜೀವನದಲ್ಲೆಲ್ಲ ನನ್ನ ಗೀತಗಳ ಮೂಲಕ ನಾನು ನಿನ್ನನ್ನು ಅನ್ವೇಷಿಸಿದೇನೆ. ಬಾಗಿಲಿಸಿಂದ ಬಾಗಿಲಿಗೆ ನನ್ನನ್ನು ಕರೆದುಕೊಂಡು ಹೋದುವು ಅವು. ಅವುಗಳಿಂದ ನಾನು ನನ್ನ ಪ್ರಪಂಚವನ್ನು ತಡವುತ್ತ ಮುಟ್ಟುತ್ತ ಸುತ್ತಣ ಸ್ಥಿತಿಗಳನ್ನು ತಿಳಿದೆನು. ನಾನು ಕಲಿತ ಪಾಠಗಳನ್ನೆಲ್ಲ ನನ್ನ ಗೀತಗಳು ನನಗೆ ಕಲಿಸಿಕೊಟ್ಟವು. ಹೃದಯಾಕಾಶದ ಅಂಚಿನ ಅನೇಕ ನಕ್ಷತ್ರಗಳನ್ನು ಅವು ನನ್ನೆದುರಿಗೆ ತಂದುಬಿಟ್ಟವು.
>
> "ಹಾಡಿನಲ್ಲಿರುವ ಚಿತ್ರವೆಲ್ಲ ದೇವದೇವನವು. ಅಲ್ಲಿರುವ ನುಡಿಯೆಲ್ಲ ಅವನನ್ನು ಕುರಿತದು. ಗಾನವೇ ಅಲ್ಲದೆ ಅರ್ಥವೂ ದೇವರನ್ನು ಕುರಿತದು.

## ಅಧ್ಯಾಯ ೫
## ಕತೆಗಳು

**೩೪. ಸಣ್ಣ ಕತೆಗಳು**

ಠಾಕೂರರು ಎಷ್ಟು ದೊಡ್ಡ ಕವಿಗಳೋ ಅಷ್ಟೊ ದೊಡ್ಡ ಕತೆಗಾರರು. ಬಾಲ್ಯದಲ್ಲಿ ಮತ್ತು ಅಭ್ಯಾಸದ ಕಾಲದಲ್ಲಿ ಬರೆದ ಒಂದೆರಡು ಕತೆಗಳನ್ನು ಬಿಟ್ಟರೆ ಈ ಜಾತಿಯಲ್ಲಿ ಇವರು ಮೊದಲು ಬರೆದುವು ಸಣ್ಣ ಕತೆಗಳು. ಇವರ ಕತೆಗಳನ್ನು ಕುರಿತ ಈ ಅಧ್ಯಾಯದಲ್ಲಿ ಮೊದಲು ಸಣ್ಣ ಕತೆಗಳ ವಿಷಯ ಹೇಳುವುದರಲ್ಲಿ ಔಚಿತ್ಯವುಂಟು.

ರವೀಂದ್ರರ ಸಣ್ಣ ಕತೆಯ ವಿಸ್ತಾರವಾದ ವಿಷಯ ಕ್ಷೇತ್ರವನ್ನು ತಿಳಿಸುವುದಕ್ಕೆ ಅವುಗಳಲ್ಲಿ ಮುಖ್ಯವಾದುವುಗಳ ಸಾರಾಂಶವನ್ನು ಹೇಳಿದರೆ ಸಾಕು. 'ರಾತ್ರಿಯಲ್ಲಿ' ಎಂಬ ಕತೆಯಲ್ಲಿ ದೋಖಿನ್ ಬಾಬು ಎಂಬವನ ರಾತ್ರಿಯ ಅವಸ್ಥೆಯನ್ನು ಹೇಳಿದೆ. ಈತನು ರೋಗಿಯಾದ ತನ್ನ ಹೆಂಡತಿಗೆ ಬಹು ಪ್ರೇಮವನ್ನು ತೋರಿಸುವಂತೆ ಇರುತ್ತಾ ಅವಳು ಸಾಯುವ ಮೊದಲು ಪರಿಚಯದ ಒಬ್ಬ ಯುವತಿಯನ್ನು ಪ್ರೀತಿಸುತ್ತಿದ್ದು ಹೆಂಡತಿ ತೀರಿದ ಕೆಲದಿನದಲ್ಲಿಯೇ ಅವಳನ್ನು ಮದುವೆಯಾಗುವನು. ಈ ಯುವತಿ ಒಂದುಸಲ ಇವರ ಮನೆಗೆ ಬಂದಾಗ ರೋಗಿಯಾದ ಹೆಂಡತಿ "ಓ ಕೇ, ಓ ಕೇ" ಎಂದರೆ "ಅವಳು ಯಾರು, ಅವಳು ಯಾರು" ಎಂದು ಕೇಳಿದ್ದಳು. ಒಬ್ಬನೇ ಇರುವ ವೇಳೆ ಓಕೆ, ಓಕೆ ಎಂಬಂತೆ ಕೂಗುವ ಹಕ್ಕಿ ಎಲ್ಲಿಯಾದರೂ ಶಬ್ದಮಾಡಿದರೆ ಇವನಿಗೆ ಹೆಂಡತಿಯ ಪ್ರಶ್ನೆ ನೆನಪು ಬರುವುದು. ಹೀಗೆ ತಾನು ತಪ್ಪುಮಾಡಿದೆನೆಂಬ ಬುದ್ಧಿಯಿಂದ ಇವನಿಗೆ ರಾತ್ರಿಯ ವೇಳೆ ಭಯಂಕರವಾಗಿ ಹೋಯಿತು. 'ಸಂಪಾದಕ' ಎಂಬ ಕತೆಯಲ್ಲಿ ಒಬ್ಬ ತಂದೆ ಮತ್ತು ಅವನ ಮಗಳ ಜೀವನದ ಒಂದು ಸಂದರ್ಭವನ್ನು ಚಿತ್ರಿಸಿದೆ. ತಾಯನ್ನು ಕಳೆದುಕೊಂಡ ಈ ಮಗು ಮನೆಯ ಕೆಲಸವನ್ನು ನೋಡಿಕೊಳ್ಳುತಿತ್ತು. ಅದರ ವಿಷಯದಲ್ಲಿ ಬಹು ಪ್ರೇಮವಿದ್ದರೂ ತಂದೆ ಪತ್ರಿಕೆಯಕೆಲಸದ ಗೊಂದಲದಲ್ಲಿ ಅದನ್ನು ವಿಚಾರಿಸಿಕೊಳ್ಳುತ್ತಿರಲಿಲ್ಲ. ಪತ್ರಿಕೆಗಳ ಕೆಲಸ ಅಷ್ಟೇನೂ ತೃಪ್ತಿಕರವಾಗಿಲ್ಲದಿದ್ದಾಗ

ಒಂದುಸಲ ಮಗು ಬಂದು ಇವನನ್ನು ಮಾತನಾಡಿಸುತ್ತದೆ; ಇವನು ಎಲ್ಲಿಯೋ ಜ್ಞಾನವಾಗಿರುತ್ತಾನೆ. ಆದರೂ ಬಹು ದಿನದಿಂದ ಇಷ್ಟು ಮೆಚ್ಚಾಗಿ ಬಳಿಗೆ ಬರದ ಮಗು ಅಂದು ಬಂದದ್ದು ಅವನ ಮನಸ್ಸಿಗೆ ತಗಲಿರುತ್ತದೆ. ಆಮೇಲೆ ನೋಡಿದರೆ ಮಗು ಜ್ವರದಲ್ಲಿದಾಳೆ. ಆಗ ತಂದೆ ಪತ್ರಿಕೆಗಳನ್ನು ಹರಿದುಹಾಕಿ ಪುನಃ ಅವಳಿಗೆ ಗಮನಕೊಡುತ್ತಾನೆ. 'ಗಿರಿಬಾಲಾ' ಎಂಬ ಕತೆಯಲ್ಲಿ ಒಬ್ಬ ಪೋಲಿ ಗಂಡ ಅವನ ಹೆಂಡತಿ ಇವರ ವಿಷಯವನ್ನು ಹೇಳಿದೆ. ಗಂಡನು ಸುಂದರಿಯಾದ ತನ್ನ ಪತ್ನಿಯ ವಿಷಯದಲ್ಲಿ ಸರಿಯಾಗಿ ನಡೆದುಕೊಳ್ಳದೆ ನಾಟಕದ ಸ್ತ್ರೀಯರಲ್ಲಿ ಆಸಕ್ತನಾಗಿರುವನು. ಗಿರಿಬಾಲೆ ಬೇಡಬೇಡ ಎಂದು ಹೇಳುವಷ್ಟು ಹೇಳಿ ಎಲ್ಲಿಯೋ ಹೊರಟುಹೋಗುವಳು. ಏನಾದಳೆಂದು ಇವನಿಗೆ ತಿಳಿಯದು. ಕೊನೆಗೆ ಒಂದು ಹೊಸ ನಾಟಕಕ್ಕೆ ಇವನು ಹೋದಾಗ ಅವಳು ರಂಗದಲ್ಲಿ ಬಂದು ನಟಿಸುವಳು. ಇವನು ಗಲಭೆ ಮಾಡುವನು. 'ಹಸಿದ ಕಲ್ಲುಗಳು' ಎಂಬ ಕತೆಯಲ್ಲಿ ಬಾದಷಹರ ಕಾಲದ ಅರಮನೆಯೊಂದರಲ್ಲಿ ಕೆಲವು ಕಾಲ ಒಬ್ಬನೇ ವಾಸಮಾಡಿದ ಆಧುನಿಕನೊಬ್ಬನು ಪೂರ್ವದ ಶೋಕಮೋಹ ಭರಿತವಾದ ಜೀವನದ ಛಾಯೆ ಅಲ್ಲಿ ಈಗಲೂ ಸುಳಿಯುತ್ತಿರುವಂತೆ ಅನುಭವಿಸಿದ ವಿಷಯವನ್ನು ಹೇಳಿದೆ. 'ವಿಜಯ' ಎಂಬ ಕತೆಯಲ್ಲಿ ಹೊರಗಣಿಂದ ಬಂದ ಪಾಂಡಿತ್ಯದ ಆಡಂಬರದ ಕೃತಕ ಕವಿಯೊಬ್ಬನೂ ರಾಜನ ಆಸ್ಥಾನದಲ್ಲೇ ಇದ್ದ ಸರಳವಾದ ಕವಿತೆಯ ಸಹಜ ಕವಿಯೊಬ್ಬನೂ ಪಂಥದಲ್ಲಿ ಹೋರಾಡಿ ಪಂಡಿತನು ಗೆದ್ದು ಕವಿ ಸೋತ ವಿಷಯವನ್ನು ಹೇಳಿದೆ. ಸೋತ ಕವಿ ಸಾಯುವಂತಿರಲು ಅವನು ಪೂಜಿಸುತ್ತ ತನ್ನ ಕಾವ್ಯದಿಂದ ಮೆಚ್ಚಿಸಬೇಕೆಂದಿದ್ದ ರಾಜಕುಮಾರಿ ಬಂದು ಅವನಿಗೆ ಮರ್ಯಾದೆಮಾಡಿದಂತೆ ಅನುಭವವಾಗುವುದು. ಈ ಉತ್ಸಾಹದಲ್ಲಿ ಅವನು ಜೀವವನ್ನು ಬಿಡುವನು. 'ಮನೆಗೆ ಬಂದದು' ಎಂಬ ಕತೆಯಲ್ಲಿ ಒಬ್ಬ ತುಂಟ ಹುಡುಗನನ್ನು ಅವನ ತಾಯಮನೆಯಿಂದ ಬಿಡಿಸಿ ಮಾವನು ತನ್ನ ಮನೆಗೆ ಕರೆದುಕೊಂಡು ಹೋಗುವನು; ಅವನು ಅಲ್ಲಿ ಅಸುಖಿಯಾಗಿ ಹಿಂದಕ್ಕೆ ಹೋಗಬೇಕೆಂದಿದ್ದು ಹೋಗಲಾಗದೆ ಕಾಯಿಲೆ ಬೀಳುವನು; ಸಾಯುವಾಗ ಊರನ್ನು ನೆನೆದುಕೊಳ್ಳುವನು; ಅದನ್ನು

ತಾಯಿ ಕಾಣುವಳು. 'ಇಸ್ಪೀಟ್ ರಾಜ್ಯ' ಎಂಬ ಕತೆಯಲ್ಲಿ ಇಸ್ಪೀಟುಗಳ ಹೆಸರಿಟ್ಟು ನಮ್ಮ ಸೀಮೆಯ ಕೆಲವು ಸಾಮಾಜಿಕ ವ್ಯವಸ್ಥೆಗಳನ್ನು ಪರಿಹಾಸ್ಯಮಾಡುವಂತೆ ಒಂದು ಚಿತ್ರ ಕಥೆಯನ್ನು ರಚಿಸಿದೆ. 'ನೋಟ' ಎಂಬ ಕತೆಯಲ್ಲಿ ಗಂಡನ ಅಚಾತುರ್ಯದಿಂದ ಕಣ್ಣುಹೋದ ಹೆಂಡತಿ ಅವನನ್ನು ಬೇರೆ ಮದುವೆಯಾಗೆಂದು ಹೇಳುವುದು; ಅವನು ಆಗುವುದಿಲ್ಲ ವೆಂದು ಆಣೆಯಿಟ್ಟುಕೊಳ್ಳುವುದು; ಆಮೇಲೆ ಬೇರೆ ಮದುವೆ ಮಾಡಿ ಕೊಳ್ಳುವುದಕ್ಕೆ ಯತ್ನಮಾಡುವುದು; ಆ ಹುಡುಗಿ ಅವನ ಮೈದುನನನ್ನು ಮದುವೆಯಾಗಲಾಗಿ ಅವನು ಇಟ್ಟುಕೊಂಡ ಆಣೆ ಉಳಿಯುವುದು; ಈ ವಿಷಯವನ್ನು ಹೇಳಿದೆ. 'ನ್ಯಾಯಂಜೋರಿನ ಜೋಡೀದಾರರು' ಎಂಬ ಕತೆಯಲ್ಲಿ ಸುಮ್ಮನೆ ಜಂಭಕೊಚ್ಚುವ ಜೋಡೀದಾರನೊಬ್ಬನ ಪರಿಚಯದ ಒಬ್ಬ ಯುವಕನು ಅವನಿಗೆ ಅವಮಾನಮಾಡುವುದಕ್ಕೆ ಯತ್ನ ಮಾಡಿ ಮುದುಕನ ಮಗಳು ಅದರಿಂದ ಎಷ್ಟು ನೊಂದಳೆಂಬುದನ್ನು ನೋಡಿ ಅವಳನ್ನು ಮದುವೆಯಾದ ಮಾತು ಹೇಳಿದೆ. 'ಇದ್ದವಳೋ ಸತ್ತವಳೋ' ಎಂಬ ಕತೆಯಲ್ಲಿ ಸರಿಯಾಗಿ ಜೀವಹೋಗುವುದಕ್ಕೆ ಮುಂಚೆ ಶ್ಮಶಾನಕ್ಕೆ ಕೊಂಡುಹೋದ ವಿಧವೆ ಎಚ್ಚತ್ತು ಹೊರಟುಹೋದಂತೆ, ಆಮೇಲೆ ಅವಳು ಜೀವದಿಂದಿದ್ದರೂ ಅವಳು ಪಿಶಾಚಿಯಾಗಿ ಬಂದಿರುವ ಳೆಂದು ಜನರು ತಿಳಿದಂತೆ, ಅವಳು ಮರಳಿ ಮನೆಗೆ ಬಂದಾಗ 'ನೀನು ನಮ್ಮನ್ನು ಕಾಡಬೇಡ. ನಿನಗೆ ಆಗಬೇಕಾದ ಎಲ್ಲ ಕರ್ಮವನ್ನೂ ಮಾಡಿಸು ತ್ತೇವೆ' ಎಂದು ಮನೆಯವರು ಹೇಳಿದಂತೆ, ಅವಳು ಹೋಗಿ ಬಾವಿಯಲ್ಲಿ ಬಿದ್ದು ಸತ್ತಂತೆ ಹೇಳಿದೆ. 'ಪರಿತ್ಯಾಗ' ಎಂಬ ಕತೆಯಲ್ಲಿ ಆಚಾರವಂತ ನೊಬ್ಬನು ನೆಂಟನೊಬ್ಬನನ್ನು ಆಚಾರ ಬಿಟ್ಟನೆಂದು ಬಹಿಷ್ಕಾರಪಡಿಸಲು ಅವನು ಪ್ರತೀಕಾರಕ್ಕಾಗಿ ಇವನ ಮಗನಿಗೆ ಜಾತಿಗೆಟ್ಟವರ ಮಗಳನ್ನು ಕೊಡಿಸಿ ಮದುವೆಮಾಡಿಸಿ ಕೆಲವು ಕಾಲದಮೇಲೆ ಅದನ್ನು ತಿಳಿಸಿದ್ದನ್ನೂ, ಆಗ ಈ ಆಚಾರವಂತನು ಸೊಸೆಯನ್ನು ಬಿಟ್ಟುಬಿಡೆಂದು ಮಗನಿಗೆ ಹೇಳಿದ್ದನ್ನೂ, ಮಗ ಸ್ವಲ್ಪ ಯೋಚನೆಮಾಡಿ ಹೆಂಡತಿಯ ಸ್ಥಿತಿಯನ್ನು ನೋಡಿ ಇದಕ್ಕೆ ಒಪ್ಪದೆ ಇದ್ದುದನ್ನೂ, ಅವನು ಜಾತಿಯನ್ನು ಬಿಡುವೆ ನೆಂದದಕ್ಕೆ ತಂದೆ ನಾನು ನಿನ್ನನ್ನು ಬಿಡುವೆನು ಎಂದು ಹೇಳಿದ್ದನ್ನೂ

ಹೇಳಿದೆ. 'ಶುಭ ಸಂದರ್ಶನ' ಎಂಬ ಕತೆಯಲ್ಲಿ ಒಬ್ಬ ತರುಣನು ಒಬ್ಬ ಕನ್ಯೆಯನ್ನು ನೋಡಿ ಮೆಚ್ಚಿದಂತೆ, ಅವಳ ಹೆಸರು ಸುಧಾ ಎಂದು ತಿಳಿದು ಅವಳನ್ನು ಮದುವೆಯಾಗುವೆನೆಂದು ಅವಳ ತಂದೆಯನ್ನು ಕೇಳಿದಂತೆ, ಮದುವೆಯಾದಮೇಲೆ ತನ್ನ ಹೆಂಡತಿ ತಾನು ಮೆಚ್ಚಿದ ಹುಡುಗಿಯಲ್ಲವೆಂದು ತಿಳಿದು ಅತೃಪ್ತನಾದಂತೆ, ಆಮೇಲೆ ಆ ಮೆಚ್ಚಿದ ಹುಡುಗಿ ಹತ್ತಿರಕ್ಕೆ ಬರಲು ಅವಳು ಹುಟ್ಟುಮೂಕಳೆಂದೂ ಮೊದ್ದಳೆಂದೂ ತಿಳಿದು ಇಂಥವಳನ್ನು ಮದುವೆಯಾಗದಂತೆ ರಕ್ಷಿಸಿದ್ದಕ್ಕಾಗಿ ದೈವಕ್ಕೆ ಕೃತಜ್ಞನಾದಂತೆ, ಮರಳಿ ತನ್ನ ಹೆಂಡತಿಯನ್ನು ಅತೃಪ್ತಿಯಿಲ್ಲದೆ ಸಂತೋಷದಿಂದ ನೋಡಿದಂತೆ ಹೇಳಿದೆ. 'ಸ್ನಾನಘಟ್ಟ' ಎಂಬ ಕತೆಯಲ್ಲಿ ಕುಸುಮ ಎಂಬ ಹುಡುಗಿ ಚಿಕ್ಕವಯಸ್ಸಿನಲ್ಲಿ ಮದುವೆಯಾಗಿ ಗಂಡನ ಮನೆಗೆ ಹೋಗಿ ಕೆಲವು ದಿನದಲ್ಲಿ ಅವನು ತೀರಿಹೋದನೆಂದು ಹಿಂದಕ್ಕೆ ಬಂದದ್ದನ್ನೂ, ಕೆಲವು ಕಾಲದಲ್ಲಿ ಅವರ ಊರಿಗೆ ಸಂನ್ಯಾಸಿಯೊಬ್ಬನು ಬಂದದ್ದನ್ನೂ, ಕುಸುಮಳು ಅವನ ಸೇವೆ ಮಾಡುತ್ತಿದ್ದು ಅವನು ತನ್ನ ಗಂಡನೆಂದು ತಿಳಿದು ಆ ವಿಷಯವನ್ನು ನಡತೆಯಲ್ಲಿ ತೋರಿಸಲು ಅವನು ಹೀಗೆ ಮಾಡಬೇಡ ದೇವರನ್ನು ನಂಬು ಎಂದು ಅವಳಿಗೆ ಹೇಳಿ ಹೊರಟು ಹೋದದ್ದನ್ನೂ ಅವಳು ಆ ರಾತ್ರಿ ಹೊಳೆಯಲ್ಲಿ ಮುಳುಗಿಕೊಂಡದ್ದನ್ನೂ ಹೇಳಿದೆ.

ನಾಟಕದ ಚೀಟಿಗಳ ಕಥಾಸಾರಾಂಶದಂತಿರುವ ಈ ವಸ್ತುನಿರೂಪಣದಿಂದ ಠಾಕೂರರ ಸಣ್ಣ ಕತೆಗಳ ಗುಣವನ್ನು ತಿಳಿಯುವುದು ಕಷ್ಟ. ಆದರೆ ಈಚೆಗೆ ಈ ಸಣ್ಣ ಕತೆಗಳಲ್ಲಿ ಮುಖ್ಯವಾದುವು ಹಲವು ಕನ್ನಡದಲ್ಲಿ ಪತ್ರಿಕೆಗಳಲ್ಲಿಯೂ ಗ್ರಂಥರೂಪವಾಗಿಯೂ ಪ್ರಕಟವಾಗಿವೆ. ಇವನ್ನು ಓದಿ ನಮ್ಮ ಜನ ಠಾಕೂರರ ಕಥನಕೌಶಲದ ಸ್ವರೂಪವನ್ನು ಅರಿಯಬಹುದಾಗಿದೆ. ಈ ಕಥೆಗಳನ್ನು ಓದಿದರೆ ಒಂದು ವಿಷಯ ಒಡನೆ ಸ್ಪಷ್ಟವಾಗುತ್ತದೆ. ಠಾಕೂರರ ಕತೆಗಳ ಪ್ರಪಂಚ ಬಹು ವಿಸ್ತಾರವಾದದು. ಬಾಬುಗಳು, ಬಡವರು, ಭಿಕ್ಷುಕರು; ಸುಖಿಗಳು, ದುಃಖಿಗಳು, ಸಂಸಾರಿಗಳು, ಸಂನ್ಯಾಸಿಗಳು; ನಟರು, ಗಾಯಕರು, ಪಂಡಿತರು, ಕವಿಗಳು; ಬಾಲಕರು, ಬಾಲಕಿಯರು; ತರುಣರು, ವೃದ್ಧರು: ಈ ಪ್ರಪಂಚ ಎಲ್ಲರನ್ನೂ

ಒಳಗೊಂಡಿದೆ. 'ನಿರ್ಝರಿಯ ಸ್ವಪ್ನಭಂಗ'ವೆಂಬ ಕೃತಿಯಲ್ಲಿ ಕವಿ ಒಂದು ಹೊಸ ದೃಷ್ಟಿಯ ಆಗಮನವನ್ನು ಸೂಚಿಸಿದರೆಂದು ಮೊದಲೇ ಹೇಳಿದೆ. ಇವರ ಕಾವ್ಯಕ್ಕೆ ಆಮೇಲೆ ಹೊಸ ಶಕ್ತಿಯೊಂದು ಬಂದಿತು. ಆ ಶಕ್ತಿ ಕಾವ್ಯದಲ್ಲಿ ಧರಿಸಿರುವ ರೂಪವನ್ನು ಗುರುತಿಸುವುದು ಸ್ವಲ್ಪ ಕಷ್ಟ; ಯಾವ ವಸ್ತುವಾದರೂ ಕಾವ್ಯವಾಗುವಲ್ಲಿ ಕವಿಯ ಮನಸ್ಸಿನ ಬಣ್ಣವನ್ನು ಪಡೆಯುತ್ತದೆ. ಸಣ್ಣ ಕತೆಯಲ್ಲಿ ಈ ಬಣ್ಣ ಅಷ್ಟು ಬೆರೆಯುವುದಿಲ್ಲ. ಠಾಕೂರರ ನವೀನ ದೃಷ್ಟಿ ಇಲ್ಲಿಯ ವಸ್ತುವೈವಿಧ್ಯದಲ್ಲಿ ಕಾಣುತ್ತದೆ. ಇವರು ಬಹು ರೀತಿಯ ಜನವನ್ನು ನೋಡಿದರು; ಎಲ್ಲವೂ ಇವರ ಕಣ್ಣಿಗೆ ನೋಡಲರ್ಹವೆಂದು ಕಾಣುತಿತ್ತು; ಎಲ್ಲರೊಂದಿಗೆ ಸಹಾನುಭೂತಿಯಿಂದ ವರ್ತಿಸಿ ಎಲ್ಲದರ ಗುಟ್ಟನ್ನೂ ಇವರು ಅರಿತರು. ಈ ದೃಷ್ಟಿ ಬಂದ ಮನುಷ್ಯನಿಗೆ ಯಾವ ಜೀವನವೂ ಅಲ್ಪವಲ್ಲ, ಯಾವ ವಿಷಯವೂ ಸಣ್ಣದಲ್ಲ; ಇವನೊಂದಿಗೆ ಮೆಟ್ಟಲ ಕಲ್ಲು ಮಾತನಾಡುತ್ತದೆ, ಅಸ್ಥಿಪಂಜರ ಸ್ನೇಹ ಬೆಳಸುತ್ತದೆ. ವಸ್ತುವೈವಿಧ್ಯಕ್ಕೆ ಅನುಸಾರವಾಗಿ ಈ ಕತೆಗಳಲ್ಲಿ ರೀತಿವೈವಿಧ್ಯವೂ ಇದೆ. 'ಮನೆಗೆ ಬಂದದು' ಎಂಬಲ್ಲಿ ಸಾಮಾನ್ಯವಾದ ಒಂದು ಸಂಸಾರದ ಮಾತು ಕತೆಗಳು, 'ಹಸಿದ ಕಲ್ಲುಗಳು' ಎಂಬಲ್ಲಿ ಮಾಯಾದರ್ಪಣದಲ್ಲಿ ಸುಳಿಯುವ ನೆರಳುಗಳಿಗೆ ಅನುಗುಣವಾದ ನಡೆನುಡಿಗಳು, 'ಸ್ನಾನಘಟ್ಟ' ಎಂಬಲ್ಲಿ ಎಳೆಯ ಜೀವದ ಆಸೆ ನಿರಾಸೆಗಳಿಗೆ ಕರಗಿದ ಕಲ್ಲಿಗೆ ತಕ್ಕ ಸರಳವಾದ ಮಾತು, 'ವಿಜಯ' ಎಂಬಲ್ಲಿ ಪಂಡಿತನ ಆಡಂಬರದ ಕೂಗು ಕವಿಯ ಸವಿಯಾದ ನುಡಿ: ಆಯಾ ಸಂದರ್ಭ ಅದಕ್ಕೆ ಅನುರೂಪವಾದ ರೀತಿಯಲ್ಲಿ ಚಿತ್ರಿತವಾಗಿದೆ. ಇನ್ನಿವರ ಕಥನ ಕೌಶಲ ಅಸಾಧಾರಣವಾದದ್ದು. ಇವರ ಕತೆ ಬಹಳ ಇವೆ; ಇಷ್ಟೂ ಒಂದೇ ಮಟ್ಟದಲ್ಲಿರುವುದು ಸಾಧ್ಯವಲ್ಲ. ಆದರೆ ಏನೂ ಇಲ್ಲವೆಂದು ಹೇಳುವ ಕತೆಯಲ್ಲಿ ಕೂಡ ವಸ್ತು ಹಿಡಿತದಲ್ಲಿದೆ; ಅದನ್ನು ನಾದಿರುವುದರಲ್ಲಿ ವಿವೇಚನೆಯಿದೆ; ಮೊತ್ತದಲ್ಲಿ ಕತೆ ಕೆಟ್ಟುಹೋಗಿರುವುದಿಲ್ಲ. ಚೆನ್ನಾಗಿ ಬಂದ ಕತೆಗಳಲ್ಲಂತೂ ಈ ಕೌಶಲ ಮೇಲಣ ಮೆಟ್ಟಲಿನದು. ಠಾಕೂರರ ಅತ್ಯುತ್ತಮವಾದ ಕತೆಗಳು ಪ್ರಪಂಚದ ಅತ್ಯುತ್ತಮವಾದ ಕತೆಗಳಲ್ಲಿ ಗಣಿಸಲರ್ಹವಾದುವು. ಇದಕ್ಕೆ ಉದಾಹರಣೆ, ಇವರ

'ಕಾಬೂಲಿವಾಲಾ' ಎಂಬ ಕತೆ. ಇದನ್ನು ಶ್ರೀಮಾನ್ ಅಗರದ ನರಸಿಂಹಯ್ಯನವರು ಕೆಲವು ವರ್ಷಗಳ ಹಿಂದೆ ಕನ್ನಡಕ್ಕೆ ಭಾಷಾಂತರಿಸಿದರು. ಠಾಕೂರರ ಕತೆಯ ರೀತಿಯನ್ನು ತಿಳಿಸುವುದಕ್ಕೆ ಇಲ್ಲಿ ಅದರ ಮುಖ್ಯಾಂಶಗಳನ್ನು ಸಂಗ್ರಹಿಸಿ ಕೊಟ್ಟಿದೆ.

ಕತೆಗಾರನಿಗೆ ಒಬ್ಬ ಚಿಕ್ಕ ಮಗಳು. ಮಾತುಗಾರಮಲ್ಲಿ. ಅಪ್ಪಾ ಅಮ್ಮ ನಿನಗೇನಾಗಬೇಕು, ಎನ್ನುವಳು; ಅಪ್ಪಾ ಮೋಡದಲ್ಲಿ ಆನೆಯಿದೆಯಂತೆ, ಅದು ಸೊಂಡಲಿನಲ್ಲಿ ಊದೋದರಿಂದ ಮಳೆ ಸುರಿಯುತ್ತಂತೆ, ಹೌದೇನಪ್ಪಾ, ಎಂದು ಕೇಳುವಳು. ಒಂದು ದಿನ ಇವಳು ತಂದೆಯ ಬಳಿ ಕುಳಿತಿರುವಾಗ ಬೀದಿಯಲ್ಲಿ ಒಬ್ಬ ಕಾಬೂಲಿಯನ್ನು ನೋಡಿ ಕಾಬೂಲಿವಾಲಾ ಕಾಬೂಲಿವಾಲಾ ಎಂದಳು. ಕಾಬೂಲಿ ಇದನ್ನು ಕೇಳಿ ಒಳಗೆ ಬಂದನು. ಮಿನಿ ಓಡಿಹೋದಳು. ಕತೆಗಾರನು ಸ್ವಲ್ಪ ಹಣ್ಣನ್ನು ಕೊಂಡನು. ಹಣ್ಣಿನವನು, ಮಗುವೆಲ್ಲಿ ಸ್ವಾಮಿ, ಎಂದನು. ತಂದೆ ಅವಳ ಭಯವನ್ನು ಬಿಡಿಸುವುದಕ್ಕಾಗಿ ಅವಳನ್ನು ಹೊರಗೆ ಕರೆತಂದು ಇವನಿಗೆ ಗುರುತು ಮಾಡಿಸಿದನು. ಇವರಿವರಿಗೆ ಬಹಳ ಸ್ನೇಹ ಬೆಳೆಯಿತು. ಒಂದು ದಿನ ಕಾಬೂಲಿ ಬಾಗಿಲಲ್ಲಿ ಮಗುವಿನೊಂದಿಗೆ ಆಡುತ್ತಿದ್ದನು. ಅವಳ ಜೇಬಿನ ತುಂಬ ಹಣ್ಣು. ಮಗುವಿಗೆ ಇದನ್ನೆಲ್ಲ ಏಕೆ ಕೊಟ್ಟೆ ಎಂದು ತಂದೆ ಅವನಿಗೆ ಎಂಟಾಣೆ ಕೊಟ್ಟನು. ಅವನು ಆಗ ಅದನ್ನು ತೆಗೆದುಕೊಂಡು ಆಮೇಲೆ ಮಗುವಿಗೆ ಹಿಂದಕ್ಕೆ ಕೊಟ್ಟನು. ಮಗುವನ್ನು ಇಂಥವನೊಂದಿಗೆ ಆಡುವುದಕ್ಕೆ ಬಿಡುವರೇ ಎಂದು ಮಿನಿಯ ತಾಯಿ ಆಕ್ಷೇಪಿಸುವಳು. ಕತೆಗಾರನು ಇದೆಲ್ಲ ಬರಿಯ ಭಯವೆಂದು ಸಮಾಧಾನ ಹೇಳುವನು. ಕಾಬೂಲಿ ಹುಡುಗಿಯನ್ನು "ಮಾವನ ಮನೆಗೆ ಎಂದು ಹೋಗುತ್ತೀ?" ಎಂದು ಕೇಳುವನು. ಅವಳು ಹೊಸ ದಾರಿಯಲ್ಲಿ ಬೆಳೆದ ಮಗು. ಇದು ಅವಳಿಗೆ ತಿಳಿಯುವುದಿಲ್ಲ. ಪ್ರತಿಯಾಗಿ ಅವಳು, ನೀನು ಎಂದು ಹೋಗುತ್ತೀಯಾ, ಎನ್ನುವಳು. ಅವನಿಗೆ ಅವನಂಥವರಿಗೆ ಮಾವನ ಮನೆ ಎಂದರೆ ಕೆಲಸಮಾಡದೆ ಇದ್ದರೂ ಅನ್ನ ಸಿಕ್ಕುವ ಸೆರೆಮನೆ. ಅವನು ನಮ್ಮ ಮಾವನನ್ನು ಎಂದರೆ ಪೋಲೀಸಿನವನನ್ನು ಬಲಿಹಾಕುತ್ತೇನೆ ಎನ್ನುವನು. ಮಿನಿ ನಗುವಳು. ಕೆಲವು ದಿನದ ಮೇಲೆ ಒಂದು ಜಗಳದಲ್ಲಿ

ಸಿಕ್ಕಿ ರಹಮಾನ ಸೆರೆಮನೆಗೆ ಹೋಗುತ್ತಾನೆ. ಇವರು ಅವನನ್ನು ಮರೆಯುತ್ತಾರೆ. ಕೆಲವು ವರ್ಷಗಳಾಗಿವೆ. ಮಿನಿಯ ಮದುವೆಯ ದಿನ. ಮಿನಿ ಶೃಂಗಾರವಾಗುತ್ತ ಒಳಗಿದ್ದಾಳೆ. ಹೊರಗಡೆ ರಹಮಾನ ಬಂದನು. ಕತೆಗಾರನು ಅವನ ಕ್ಷೇಮಸಮಾಚಾರವನ್ನು ವಿಚಾರಿಸುವನು. ಸೆರೆಯಿಂದ ಬಂದೆನೆಂದೊಡನೆ ಇವನಿಗೆ ಅಸಹ್ಯವಾಗಿ ಇನ್ನೊಮ್ಮೆ ಬಾ ಎನ್ನುವನು. ರಹಮಾನ ಹೊರಹೋಗಲು ನಡೆದು ಬಾಗಿಲಲ್ಲಿ ನಿಂತು, ಮಗುವನ್ನು ಒಂದು ಸಲ ನೋಡಬಹುದೇ ಸ್ವಾಮಿ, ಎನ್ನುವನು. ರಹಮಾನನಿಗೆ ಮಿನಿ ಬೆಳೆದಿರಬೇಕೆಂಬ ಭಾವನೆ ಇಲ್ಲ. ಮಗುವಿಗೆಂದು ಒಂದಿಷ್ಟು ದ್ರಾಕ್ಷಿ ಖರ್ಜೂರವನ್ನು ತಂದಿರುವನು. ಕತೆಗಾರನು, ಈ ಹೊತ್ತು ಮನೆಯಲ್ಲಿ ಹಬ್ಬ, ಯಾರನ್ನೂ ನೋಡುವುದಕ್ಕಾಗುವುದಿಲ್ಲ, ಎನ್ನುವನು. ರಹಮಾನ ಪೆಚ್ಚುಬಿದ್ದು ಹೊರಗೆ ಹೋಗುವನು. ಕತೆಗಾರನು, ಅಯ್ಯೋ ಪಾಪ ಕರೆಯೋಣವೇ, ಎಂದುಕೊಳ್ಳುವನು. ರಹಮಾನನು ತಾನೇ ಹಿಂದಕ್ಕೆ ಬರುವನು; ಹಣ್ಣಿನ ಪೊಟ್ಟಣವನ್ನು ಇವನ ಮುಂದಿಟ್ಟು ಇದನ್ನು ಮಗುವಿಗೆ ಎಂದು ತಂದೆ, ಇದನ್ನು ಅದಕ್ಕೆ ಕೊಡುವಿರಾ, ಎನ್ನುವನು. ಕತೆಗಾರನು ಅದನ್ನು ತೆಗೆದುಕೊಂಡು ಹಣ ಕೊಡಲು ಹೋಗುವನು. ರಹಮಾನ ಇದಕ್ಕೆ ಹಣ ಕೊಡಬೇಡಿ, ನಿಮ್ಮ ಮಗಳಂತೆ ನನಗೂ ಒಬ್ಬ ಮಗಳಿದ್ದಾಳೆ, ನಾನು ನನ್ನ ಮಗಳನ್ನು ನೆನೆದು ನಿಮ್ಮ ಮಗುವಿಗೆ ಹಣ್ಣು ಕೊಡುತ್ತೇನೆ, ಹಣಕ್ಕಾಗಿ ಅಲ್ಲ, ಎನ್ನುವನು. ಆಮೇಲೆ ತನ್ನ ಚೀಲದಲ್ಲಿ ಕೈಹಾಕಿ ಒಂದು ಕಾಗದವನ್ನು ತೆಗೆಯುವನು. ಹಳೆಯ ಕಾಗದ, ಕೊಳೆಯಾಗಿದೆ. ಅದರಲ್ಲಿ ಮಸಿಯಲ್ಲಿ ಹಚ್ಚಿರುವ ಒಂದು ಪುಟ್ಟ ಕೈಯ ಗುರುತು. ಇದು ಮಗಳ ನೆನಪಿಗಾಗಿ ರಹಮಾನನು ಇಟ್ಟುಕೊಂಡಿದ್ದ ಭಾವಚಿತ್ರ. ಕತೆಗಾರನಿಗೆ ಕಣ್ಣಲ್ಲಿ ನೀರು ಚಿಮ್ಮಿತು. ಇವನು ಬರಿಯ ಒಬ್ಬ ಕಾಬೂಲಿ, ತಾನು — ತಾನು ಹೆಚ್ಚು ಏನು? ರಹಮಾನನೂ ತನ್ನಂತೆಯೇ ಮಗಳನ್ನು ಹೆತ್ತ ತಂದೆ. ಕತೆಗಾರನು ಮಿನಿಯನ್ನು ಕರಸಿದನು. ಅವಳು ಬೆಳೆದಿರುವುದನ್ನು ನೋಡಿ ರಹಮಾನನಿಗೆ ಆಶ್ಚರ್ಯ; ಅವನು ಅಪ್ರತಿಭನಾದನು; ಕ್ಷಣಬಿಟ್ಟು ನಕ್ಕು, ಅಮ್ಮಯ್ಯ ಮಾವನ ಮನೆಗೆ ಹೋಗುತ್ತೀಯಾ, ಎಂದನು. ಅವನಿಗೆ ಇನ್ನೇನು ಹೇಳುವುದಕ್ಕೂ

ತೋರಲಿಲ್ಲ. ಮಿನಿ ನಾಚಿಕೊಂಡು ಒಳಗೆ ಹೋದಳು. ರಹಮಾನನನ್ನು ನೋಡಿ ಕತೆಗಾರನಿಗೆ ವ್ಯಸನವಾಯಿತು. ರಹಮಾನನು ಕಾಬೂಲಿಗೆ ಹೋಗುವಾಗ್ಗೆ ಅವನ ಮಗಳು ಬೆಳೆದಿರುವಳು, ದೊಡ್ಡವಳಾಗಿರುವಳು. ಇನ್ನವಳ ಪರಿಚಯುವನ್ನು ಹೊಸದಾಗಿ ಮಾಡಿಕೊಳ್ಳಬೇಕಾಗುವುದೆಂದು ರಹಮಾನನಿಗೂ ತೋರಿತು. ಕತೆಗಾರನು ಅವನ ಕೈಯಲ್ಲಿ ಇಷ್ಟು ಹಣ ಕೊಟ್ಟು, ರಹಮಾನ್ ನಿಮ್ಮೂರಿಗೆ ಹೋಗು, ಮಗಳನ್ನು ನೋಡು, ಎಂದನು. ರಹಮಾನನಿಗೆ ಕೊಟ್ಟ ಹಣವನ್ನು ಉಳಿಸುವುದಕ್ಕೆ ಮದುವೆಯ ಸಂಭ್ರಮಗಳಲ್ಲೊಂದನ್ನು ಬಿಡಬೇಕಾಯಿತು. "ಆದರೆ ನನಗೆ ಮದುವೆಯ ಸಂಭ್ರಮ ದೂರದೇಶ ಒಂದರಲ್ಲಿ ಬಹು ದಿನದ ಹಿಂದೆ ಹೊರಟುಹೋಗಿದ್ದ ತಂದೆಯೊಬ್ಬನು ಮರಳಿ ಬಂದು ತನ್ನ ಮಗುವನ್ನು ನೋಡುವನು ಎಂಬ ಯೋಚನೆಯಿಂದ ಬಹಳ ಪ್ರಕಾಶವಾಗಿ ಕಂಡಿತು."

ಸರಿಯಾಗಿ ಬರೆದ ಸಣ್ಣ ಕತೆ ಸಾಹಿತ್ಯದಲ್ಲಿ ಒಂದು ಸಣ್ಣ ರತ್ನ. ಠಾಕೂರರು ಸ್ವಭಾವವಾಗಿ ಭಾವಗೀತ ಕವಿಗಳು. ಕತೆಗಳಲ್ಲಿ ಸಣ್ಣ ಕತೆ ಭಾವಗೀತ. ಇಲ್ಲಿ ಇವರು ಒಂದು ಭಾವವನ್ನು ಅಸಾಧಾರಣವಾದ ಊಹೆಯಿಂದ ಕತೆಮಾಡಿದಾರೆ. ಇವರ ಪದ್ಯಗಳಲ್ಲಿ ಊರ್ವಶಿ ಹೇಗೋ ಹಾಗೆ ಇವರ ಸಣ್ಣ ಕತೆಗಳಲ್ಲಿ ಕಾಬೂಲಿವಾಲಾ. ಕತೆಯಲ್ಲಿ ಭಾವದ ಸೊಗಸೂ ಮಾತಿನ ಕುಂದಣದ ಕೌಶಲವೂ ಒಂದುಗೂಡಿ ಈ ಬರವಣಿಗೆ ದೋಷವೇ ಇಲ್ಲದ ರತ್ನ ಎನ್ನಿಸುವಂತೆ ಮಾಡಿವೆ.

### ೩೫. ಕಣ್ಣು ಬೇನೆ

ಠಾಕೂರರು ಯುಕ್ತ ವಯಸ್ಸಿನಲ್ಲಿ ಬರೆದ ಕತೆಗಳಲ್ಲಿ "ಕಣ್ಣುಬೇನೆ" ಮೊದಲನೆಯದು. ಮಹೇಂದ್ರ ಪುಣ್ಯವಂತರ ಮಗ; ತಂದೆಯನ್ನು ಕಳೆದುಕೊಂಡು ತಾಯ ಕೈಯಲ್ಲಿ ಬೆಳೆದಿದಾನೆ. ಆ ತಾಯಿ ರಾಜಲಕ್ಷ್ಮಿ ಅವನನ್ನು ಗಾಢವಾಗಿ, ಆದರೂ ಸ್ವಾರ್ಥದಿಂದ, ಪ್ರೀತಿಸುತ್ತಾಳೆ. ಅವನಿಗೆ ಒಬ್ಬ ಗೆಳೆಯ. ಅವನ ಹೆಸರು ವಿಹಾರಿ. ಮನೆಯಲ್ಲಿ ಇವನೊಂದಿಗೇ ಓಡಾಡಿ ಕೆಳೆಗಿಂತ ಹೆಚ್ಚಾಗಿ ತಮ್ಮನಂತಾಗಿದಾನೆ. ಮನೆಯಲ್ಲಿ ರಾಜಲಕ್ಷ್ಮಿಯ ಓರಗಿತ್ತಿ ಅನ್ನಪೂರ್ಣಾ ಇದಾಳೆ. ವಿಧವೆ; ಮಕ್ಕಳಿಲ್ಲದವಳು;

ಅವಳ ರೀತಿ ರಾಜಲಕ್ಷ್ಮಿಯ ರೀತಿಯಿಂದ ತೀರ ಬೇರೆ. ರಾಜಲಕ್ಷ್ಮಿ ತನ್ನ ಹಳ್ಳಿಯ ಗೆಳತಿ ಪರಿಮಳಿಯ ಮಗಳು ವಿನೋದಿನಿಯನ್ನು ಮದುವೆಯಾಗಬೇಕೆಂದು ಮಹೇಂದ್ರನಿಗೆ ಹೇಳುತ್ತಾಳೆ. ಅವನು ಒಪ್ಪದಿರಲು ಅದೇ ಮಾತನ್ನು ವಿಹಾರಿಗೆ ಹೇಳುತ್ತಾಳೆ. ಅವನೂ ಒಪ್ಪುವುದಿಲ್ಲ. ವಿನೋದಿನಿಗೆ ಬೇರೆ ಎಲ್ಲಿಗೋ ಮದುವೆಯಾಗುತ್ತದೆ; ಮನೆ ತಪ್ಪುತ್ತದೆ. ಮೂರು ವರ್ಷದನಂತರ ರಾಜಲಕ್ಷ್ಮಿ ಮಹೇಂದ್ರನನ್ನು ಆ ಚಿಕ್ಕಮ್ಮನ ತಂಗಿಯ ಮಗಳನ್ನು ಮದುವೆಮಾಡಿಕೊ ಎಂದು ಒತ್ತಾಯ ಮಾಡುತ್ತಾಳೆ. ಚಿಕ್ಕಮ್ಮನಾದವಳು ಇದು ಸರಿ ಎನ್ನುತ್ತಾಳೆ. ರಾಜಲಕ್ಷ್ಮಿ, ನನ್ನ ಮಗ ನನ್ನಂತೆ ನಡೆದುಕೊಳ್ಳುವುದು ನಿನಗೆ ಸಹಿಸಲಿಲ್ಲ, ಎಂದು ಅವಳನ್ನು ದೂರುತ್ತಾಳೆ. ಮಹೇಂದ್ರ ಚಿಕ್ಕಮ್ಮನಿಗೆ ಸಮಾಧಾನ ಹೇಳುತ್ತಾನೆ; ಹಾಗೆಯೇ, ಅವಳ ತಂಗಿಯ ಮಗಳನ್ನು ನೋಡೋಣ, ವಿಹಾರಿಗೆ ಮದುವೆ ಮಾಡೋಣ, ಎನ್ನುತ್ತಾನೆ. ಗೆಳೆಯರು ಹೋಗಿ ಹುಡುಗಿ ಆಶಾವನ್ನು ನೋಡುತ್ತಾರೆ. ವಿಹಾರಿಗೆ ಅವಳನ್ನು ಮದುವೆಯಾಗಲು ಒಪ್ಪಿಗೆ ಇದೆ; ಆದರೆ ಮಹೇಂದ್ರನಿಗೂ ಅವಳ ರೀತಿ ಒಪ್ಪಿಗೆಯಾಗಿ ಅವನೇ ಅವಳನ್ನು ಮದುವೆಯಾಗುತ್ತಾನೆ. ಇದು ತಾಯಿಗೆ ಇಷ್ಟವಿಲ್ಲ. ಮಹೇಂದ್ರ ಹೊಸ ಸಂಸಾರದ ಸುಖದಲ್ಲಿ ತನ್ನನ್ನು ಮರೆತನೆಂದೂ ತಂಗಿಯ ಮಗಳು ಬಂದದ್ದರಿಂದ ತನ್ನ ಓರಗಿತ್ತಿ ಸ್ವಲ್ಪ ಹೆಚ್ಚಿಕೊಂಡಳೆಂದೂ ಅವಳಿಗೆ ತೋರುತ್ತದೆ. ಈ ಎಲ್ಲ ಬೇಸರದಿಂದ ಅವಳು ತನ್ನ ಹಳ್ಳಿಗೆ ಹೊರಟುಹೋಗುತ್ತಾಳೆ. ಚಿಕ್ಕಮ್ಮ ಅನ್ನಪೂರ್ಣೆ ಇದನ್ನರಿತು ತಾನು ಇಲ್ಲಿದ್ದರಲ್ಲವೆ ಈ ಅಂತಸ್ತಾಪ ಎಂದು ಯೋಚಿಸಿ ವಾರಣಾಸಿಗೆ ಯಾತ್ರೆ ಹೊರಡುತ್ತಾಳೆ. ಹೊರಡುತ್ತ ಮಹೇಂದ್ರನಿಗೆ, ಹಳ್ಳಿಗೆ ಹೋಗಿ ತಾಯನ್ನು ಕರೆತಾ, ಎಂದು ಹೇಳುತ್ತಾಳೆ. ಮಹೇಂದ್ರ ಹಳ್ಳಿಗೆ ಹೋಗುವ ವೇಳೆಗೆ ರಾಜಲಕ್ಷ್ಮಿ ವಿನೋದಿನಿಯೊಂದಿಗೆ ಬಹು ಬಳಕೆ ಮಾಡಿಕೊಂಡಿದ್ದಾಳೆ. ಇವನೊಡನೆ ಬರುತ್ತ ಅವಳನ್ನೂ ಕರೆತರುತ್ತಾಳೆ. ಆಶಾ ವಿನೋದಿನಿ ತುಂಬ ಸ್ನೇಹಿತರಾಗುತ್ತಾರೆ. ವಿನೋದಿನಿ ತಾವು ಒಬ್ಬರೊಬ್ಬರನ್ನು "ಕಣ್ಣುಬೇನೆ" ಎಂದು ಕರೆಯೋಣವೆನ್ನುತ್ತಾಳೆ. ಆಶಾ ಏನೂ ಅರಿಯದ ಸರಳ ಹೆಣ್ಣು. ವಿನೋದಿನಿ ವಶೀಕರಣ ಬಲ್ಲ ಪ್ರೌಢೆ.

ಮೆಲ್ಲ ಮೆಲ್ಲನೆ ಇವಳು ಮಹೇಂದ್ರನನ್ನು ಮರುಳು ಮಾಡಿ ಅವನ ಸಂಸಾರದ ಹದವನ್ನು ಕೆಡಿಸುತ್ತಾಳೆ. ವಿಹಾರಿಗೆ ಇದು ಕಾಣುತ್ತದೆ. ಅವನು ಅವಳಿಗೆ, ಹಾಗೆಯೇ ಮಹೆಂದ್ರನಿಗೆ, ಆ ಬಗ್ಯೆ ಅಸಮಾಧಾನ ಸೂಚಿಸುತ್ತಾನೆ. ಆಶಾ ಒಮ್ಮೆ ಅನ್ನಪೂರ್ಣೆಯನ್ನು ಕರೆತರಲು ಹೋಗುತ್ತಾಳೆ. ಆಗ ಇವರ ರೀತಿ ತೀರಾ ಕೆಡುತ್ತದೆ. ವಿಹಾರಿ ಆಶಾಮೇಲೆ ಮನಸ್ಸಿಟ್ಟಿದ್ದಾನೆ ಎಂದು ವಿನೋದಿನಿ ಮಹೇಂದ್ರನಿಗೆ ಚುಚ್ಚಿಕೊಟ್ಟು ಇವರಿವರ ಮನಸ್ಸನ್ನು ಕೆಡಿಸುತ್ತಾಳೆ. ಮಹೇಂದ್ರ ಆಶಾವನ್ನು ತೊರೆದು ವಿನೋದಿನಿಯೊಂದಿಗೆ ಪರದೇಶ ಹೋಗಲು ಸಿದ್ಧನಾಗುತ್ತಾನೆ. ಆ ವೇಳೆಗೆ ವಿನೋದಿನಿಗೆ ವಿಹಾರಿಯ ವಿಷಯದಲ್ಲಿ ಅಸಾಧಾರಣವಾದ ಗೌರವ ಪ್ರೇಮ ಹುಟ್ಟವೆ; ಇದರಿಂದ ಕೋಪಗೊಂಡು ಮಹೇಂದ್ರ ವಿಹಾರಿಗೆ ಇನ್ನು ನಮ್ಮ ಮನೆಗೆ ಬರಬೇಡ ಎನ್ನುತ್ತಾನೆ. ವಿಹಾರಿ ಹೊರಟುಹೋಗುತ್ತಾನೆ. ವಿನೋದಿನಿ ಅವನನ್ನು ಹಿಂಬಾಲಿಸುತ್ತಾಳೆ; ಮಹೇಂದ್ರ ಅವಳನ್ನು ಹಿಂಬಾಲಿಸಿ ಬರುತ್ತಾನೆ. ವಿನೋದಿನಿ ವಿಹಾರಿಗೆ ಒಂದು ಕಾಗದ ಬರೆಯುತ್ತಾಳೆ. ಮಹೇಂದ್ರ ಆ ಕಾಗದ ವಿಹಾರಿಗೆ ಮುಟ್ಟದಂತೆ ತಡೆದು ತೆರೆದು ಅದನ್ನು ವಿನೋದಿನಿಯ ಬಳಿಗೆ ಹಿಂದಕ್ಕೆ ತರುತ್ತಾನೆ. ತಾನು ವಿಹಾರಿಗೆ ಬೇಡದೆ ಹೋದೆನೆಂದು ವಿನೋದಿನಿ ತಿಳಿಯುತ್ತಾಳೆ. ಮಹೇಂದ್ರನೂ ಅವಳೂ ಜೊತೆಯಾಗಿ ಒಂದು ಯಾತ್ರೆ ಹೊರಡುತ್ತಾರೆ; ದಾರಿಯಲ್ಲಿ ಒಂದು ಊರಿನಲ್ಲಿ ವಿಹಾರಿ ಇರುವ ಸ್ಥಳಕ್ಕೆ ಬರುತ್ತಾರೆ. ಆ ವೇಳೆಗೆ ಅವನಿಗೆ ವಿನೋದಿನಿಯನ್ನು ಕುರಿತು ಕನಿಕರ ಮೂಡಿರುತ್ತದೆ. ಆದರೆ ಇವಳು ಮಹೇಂದ್ರನ ಜೊತೆಗೆ ಇರುವುದನ್ನು ನೋಡಿ ಸ್ವಲ್ಪ ಶಂಕೆಯಾಗುತ್ತದೆ. ಶಂಕೆಗೆ ಕಾರಣವಿಲ್ಲ. ಅವಳು ಇವನಲ್ಲೇ ಅನುರಕ್ತಳಾಗಿದಾಳೆ. ಈ ಕಾರಣದಿಂದ ಇವನು ಅವಳನ್ನು ಮದುವೆಯಾಗಲು ಸಮ್ಮತಿಸುತ್ತಾನೆ. ಎಲ್ಲರಿಗೂ ವಿಹಾರಿಯ ಮೇಲೆಯೇ ಪ್ರೀತಿ, ತಾನು ಯಾರಿಗೂ ಬೇಡವಾದೆನೆ ಎಂದು ಮಹೇಂದ್ರನಿಗೆ ಬೇಸರ. ಇಷ್ಟರಲ್ಲಿ ರಾಜಲಕ್ಷ್ಮಿ ಕಾಯಿಲೆ ಬೀಳುತ್ತಾಳೆ. ವಿಹಾರಿ ಅವಳಿಗೆ ಶುಶ್ರೂಷೆ ಮಾಡಲು ಹೋಗುತ್ತಾನೆ. ಅವಳು ಸಾಯುವ ವೇಳೆಗೆ ಮಹೇಂದ್ರ ಹಿಂದಿರುಗಿ ಬರುತ್ತಾನೆ. ಆಗ್ಯೆ ಅವನ ಬುದ್ಧಿ ಸ್ವಲ್ಪ ತಿಳಿದಿದೆ. ರಾಜ

ಲಕ್ಷ್ಮಿಯ ವ್ಯುತ್ಪತ್ತಿಯ ಸನ್ನಿಧಿಯಲ್ಲಿ ಮಹೇಂದ್ರ ಮತ್ತು ಆಶಾ ತಮ್ಮ ಮತ್ತೊಂದು ಉದ್ದದ ಬಾಳನ್ನು ಆರಂಭಿಸುತ್ತಾರೆ. ವಿನೋದಿನಿಗೂ ಈ ವೇಳೆಗೆ ಬುದ್ಧಿ ತಿಳಿದಿದೆ. ವಿಹಾರಿ ಮದುವೆಯಾಗುತ್ತೇನೆಂದರೂ ಅವಳು ಒಪ್ಪದೆ ಅವನು ಸ್ಥಾಪಿಸಿರುವ ಒಂದು ಸೇವಾಮಂದಿರದಲ್ಲಿ ಸೇವೆಯ ದೀಕ್ಷೆ ತೆಗೆದುಕೊಂಡು ನಿಲ್ಲುತ್ತಾಳೆ.

ಈ ಕತೆಯನ್ನು ಕಟ್ಟಿರುವ ರೀತಿ ಚೆನ್ನಾಗಿದೆ. ಠಾಕೂರರ ಉದ್ದನಾದ ಕತೆಗಳಲ್ಲಿ ಇನು ಮೊದಲದಾದರೂ ಅವರಿಗೆ ಈ ಮೊದಲೇ ಕತೆ ಬರೆಯುವುದು ವಾಡಿಕೆಯಾಗಿತ್ತು. ಕತೆಯ ಆರಂಭದಲ್ಲಿ ಬಂಕಿಂಚಂದ್ರರ ವಿಷವೃಕ್ಷದ ನೆನಪು ಬರುತ್ತದೆ; ಆ ಪುಸ್ತಕವನ್ನು ವಿನೋದಿನಿ ಓದುತ್ತಿದ್ದಳೆಂದೂ ಉಕ್ತವಾಗಿದೆ. ಆದರೆ ಕತೆ ಮುಂದೆ ತನ್ನದೇ ಆದ ದಾರಿಯನ್ನು ಅನುಸರಿಸುತ್ತದೆ. ಕತೆಯ ಒಂದು ವಿಶೇಷ ಗುಣ ಅದು ಬಹುಮಟ್ಟಿಗೆ ಸಂಭಾಷಣೆಯಲ್ಲಿ ಕಾಣುವುದು. ಕತೆಗಿಂತ ಹೆಚ್ಚಾಗಿ ನಾಟಕವೆಂಬಂತೆ ಇದರಲ್ಲಿ ಸಂಭಾಷಣೆ ಬೆಳೆದಿದೆ. ಕತೆಗಾರನ ಮಾತು ಕೇಳುವುದೇ ಇಲ್ಲ. ಟೀಕೆ ಇಲ್ಲ; ವಿವರಣೆ ಇಲ್ಲ. ಕತೆಯ ಸಂಗತಿ ನಮ್ಮ ಮನಸ್ಸನ್ನು ಪಟ್ಟಾಗಿ ಹಿಡಿಯುತ್ತದೆ. ಕಥನ ಸರಾಗವಾಗಿ ಸಹಜವಾಗಿ ಸಾಗುತ್ತದೆ. ಕತೆಯ ಮೊದಲಲ್ಲೇ ಈ ಪಾತ್ರಗಳು ಎಷ್ಟು ಸಹಜ ಎಂಬ ಭಾವವನ್ನು ಮೂಡಿಸಿ ಆ ಸ್ವಾರ್ಥೆಯಾದ ತಾಯಿ ರಾಜಲಕ್ಷ್ಮಿ, ಆ ನಿಸ್ವಾರ್ಥಿ ಚಿಕ್ಕಮ್ಮ ಅನ್ನಪೂರ್ಣಾ, ಮುಂದೆ ಬರುತ್ತಾರೆ. ಇಲ್ಲಿಯೇ ಬಾಳ ಹಾಸ್ಯವೂ ಮುದ್ದಾಗಿ ರೂಪುಗೊಳ್ಳುತ್ತದೆ. ವಿನೋದಿನಿಯನ್ನು ಒಳ್ಳೆನೆಂದು ಮಹೇಂದ್ರ ಹೇಳಿ ಅವಳನ್ನು ಮದುವೆಯಾಗಬೇಕೆಂದು ರಾಜಲಕ್ಷ್ಮಿ ವಿಹಾರಿಗೆ ಸೂಚಿಸಿದಾಗ ಅವನು, "ಅವ್ವ, ಮಹೇಂದ್ರ ಒಳ್ಳೆನೆಂದ ರಸಗುಳ್ಳವನ್ನು ನಾನು ತಿನ್ನಬೇಕೆಂದು ನೀನು ಬಲವಂತ ಮಾಡಿದಾಗ ನಾನು ಅಡ್ಡಿ ಮಾಡಲಿಲ್ಲ, ಒಪ್ಪಿಕೊಂಡೆ. ಅವನು ಒಳ್ಳೆನೆಂದ ಹುಡುಗಿಯನ್ನು ನಾನು ಮದುವೆಯಾಗಬೇಕೆನ್ನುತ್ತೀಯೆ. ಇದಕ್ಕೆ ನಾನು ಒಪ್ಪಲಾರೆ" ಎನ್ನುತ್ತಾನೆ. ಈ ಮತ್ತು ಇತರ ಎಲ್ಲ ಪಾತ್ರಗಳೂ ಕತೆಯಲ್ಲಿ ಸ್ಫುಟವಾದ ಆಕಾರದಿಂದ ಕಾಣುತ್ತವೆ. ನಿಜವಾಗಿ ನೋಡಿದರೆ ಈ ಕತೆ ಠಾಕೂರರ ಕತೆಗಳಲ್ಲಿ ಮುಂದೆ ಬರುವ ಮೂರು ನಾಲ್ಕು ಮುಖ್ಯ

ರೀತಿಯ ಜನರ ಮೂಲ ಮೂರ್ತಿಗಳನ್ನು ಸೃಷ್ಟಿಮಾಡಿದೆ. ಅನ್ನಪೂರ್ಣಾ ಮುಂದೆ ಗೋರಾದಲ್ಲಿ ಸುಚರಿತೆಯ ಚಿಕ್ಕಮ್ಮನಾಗುತ್ತಾಳೆ. ಇಲ್ಲಿಯ ವಿಹಾರಿ ಅಲ್ಲಿಯ ವಿನಯ ಅಥವಾ ಚತುರಂಗದ ಶ್ರೀವಿಲಾಸ. ತನ್ನದೇ ದಾರಿ ಎಂಬ ಹಟದ ಮಹೇಂದ್ರ ಸ್ವಭಾವದಲ್ಲಿ ಗೋರನಂತೆ. ಹಟದ ಕ್ಷೇತ್ರ ಬೇರೆ. ಇಲ್ಲಿಯ ವಿನೋದಿನಿ ಚತುರಂಗದ ದಾಮಿನಿಯಾಗಿ ಬೆಳೆಯುತ್ತಾಳೆ. ಕತೆಯ ಸಂಗತಿ ಒಂದು ಸಂದರ್ಭದಲ್ಲಿ ಅಸಂಭವವೆಂದು ಕಾಣುತ್ತದೆ. ವಿನೋದಿನಿ ಮಹೇಂದ್ರನನ್ನು ಬಿಟ್ಟು ವಿಹಾರಿಯನ್ನು ಬಯಸಿದ್ದು ಹೇಗೆ ಎನ್ನುವುದು ಇಲ್ಲಿ ಸ್ಪಷ್ಟವಾಗಿಲ್ಲ. ವಿಹಾರಿಯ ಮನಸ್ಸು ಅವಳಕಡೆ ತಿರುಗಿದ್ದು ಹೇಗೆ ಎಂದು ಸ್ವಲ್ಪ ವರ್ಣನೆ ಇದೆ; ಆದರೆ ಅಷ್ಟರಿಂದ ಆ ಮಾರ್ಪಾಡು ವಾಸ್ತವವೆಂಬ ನಂಬಿಕೆ ಹುಟ್ಟುವುದಿಲ್ಲ. ವಿನೋದಿನಿ ವಿಹಾರಿಯನ್ನು ಮದುವೆಯಾಗುವುದಕ್ಕೆ ಒಪ್ಪದೆ ಇದ್ದದು ಸಹಜವಿರಬಹುದು; ಆದರೆ ಕತೆಯಲ್ಲಿ ಆ ಸಹಜತೆ ಸಿದ್ಧಿಸುವುದಿಲ್ಲ. ವಿಹಾರಿಯಂತ ನಾಯಕ ವಿನೋದಿನಿಯಂತ ಹೆಣ್ಣನ್ನು ಮದುವೆಯಾಗುವುದು ತನಗೆ ಇಷ್ಟವಿಲ್ಲದ್ದರಿಂದ ಕತೆಗಾರ ಆ ಮದುವೆಯನ್ನು ಹೇಗೋ ತಪ್ಪಿಸಿದಾನೆ ಎನ್ನಿಸುತ್ತದೆ. ಕತೆಯ ಕೊನೆ ಸಾಂಪ್ರದಾಯಕ ಆಗಿ ಕೆಟ್ಟಿದೆ. ಅದರ ಉಳಿದ ಭಾಗ ಚೆನ್ನಾಗಿಯೇ ಇದೆ.

ಕತೆಯ ತಿರುಳೇನೆಂದು ಯೋಚಿಸುವವರಿಗೆ ಮಹೇಂದ್ರ ಮತ್ತು ಆಶಾ ಇವರ ಪ್ರೇಮದ ಚರಿತ್ರೆ ಲೇಖಕರ ಮುಖ್ಯ ಲಕ್ಷ್ಯವಾಗಿತ್ತೆಂದು ತೋರುತ್ತದೆ. ಆಶಾ ಮಹೇಂದ್ರನ ಹೆಂಡತಿಯಾಗಬೇಕೇ, ವಿಹಾರಿಯ ಹೆಂಡತಿಯಾಗಬೇಕೇ ಎನ್ನುವುದು ಎಷ್ಟು ಸುಲಭವಾಗಿ ಇತ್ತಲೋ ಅತ್ತಲೋ ತಿರುಗುತ್ತದೆ! ಇದು ನಮ್ಮ ಸಮಾಜ ಜೀವನದ ಯಥಾವತ್ ಪ್ರತಿಬಿಂಬ. ಹೀಗೆ ಹೆಂಡತಿಯಾದ ಆಶಾ, ಹೀಗೆ ಗಂಡನಾದ ಇಂಥ ಮಹೇಂದ್ರನನ್ನು ಹೀಗೆ ಪ್ರೀತಿಸುತ್ತಾಳಲ್ಲ, ಇದು ವಿಚಿತ್ರ. ಆದರೆ ನಮ್ಮ ಜನಜೀವನವನ್ನು ಅರಿತವರಿಗೆ ಇದರಲ್ಲಿ ಆಶ್ಚರ್ಯವಿಲ್ಲ. ಇಂಥ ವಿವಾಹದಲ್ಲಿ ಹೆಣ್ಣು ತನ್ನ ಗಂಡನ್ನು ಕುರಿತು ತಳೆಯುವ ಅಭಿಮಾನ ಸೀತಾದೇವಿ ರಾಮನನ್ನು ಕುರಿತು ತಳೆದ ಅಭಿಮಾನದಂತೆ ಧರ್ಮಪ್ರೇರಿತವಾದದು. ಸಾವಿತ್ರಿ ದಮಯಂತಿಯರು ತಾವು ನೋಡಿ ಒಪ್ಪಿದ ತರುಣ

ರನ್ನು ಮದುವೆಯಾದರು. ಸೀತೆ ಧನುಸ್ಸನ್ನು ಭಂಗಮಾಡಿದನೆಂಬ ಕಾರಣದಿಂದ ರಾಮನ ಕೈಸೇರಿದಳು. ಮೆಚ್ಚಿ ಮದುವೆಯಾದೆನೆಂಬ ಕಾರಣದಿಂದಲ್ಲ, ಅದೃಷ್ಟದಿಂದ ತನ್ನ ಪಾಲಿಗೆ ಬಂದನೆಂದು, ಆ ಗಂಡ ನಲ್ಲಿ ತನ್ನ ಪ್ರೇಮದ ಮೂರ್ತಿಯನ್ನು ತನ್ನ ನಚ್ಚಿನ ನಲ್ಲನನ್ನು ಕಂಡಳು. ಸರಳವಾದ ಹೃದಯ ಹೀಗೆ ಮಾಡಬಲ್ಲದು. ಅದಕ್ಕೆ ಈ ವರ್ತನೆ ಸಾಧ್ಯ ವಾಗುವುದಕ್ಕೆ ಕಾರಣ, ಅದು ತನಗಾಗಿ ಏನೂ ಬಯಸದೆ ತನಗೆ ಅದೃಷ್ಟ ತಂದ ಒಲವಿಗೆ ಆತ್ಮವನ್ನು ಸಮರ್ಪಿಸಿಕೊಳ್ಳುವುದು. ಮಹೇಂದ್ರ ನಷ್ಟು ಅಲ್ಪ ಯೋಗ್ಯತೆಯ ಗಂಡನ್ನು ಕುರಿತು ಇಂತಹ ಪ್ರೇಮ ವ್ಯಯ ವಾಗುವುದನ್ನು ನೋಡಿ ಇದು ವ್ಯರ್ಥವಾಯಿತೆಂದು ನಮಗೆ ತೋರ ಬಹುದು. ಕವಿ ಈ ಅಭಿಪ್ರಾಯವನ್ನು ತಪ್ಪೆನ್ನುವುದಿಲ್ಲ, ಆದರೆ ಅನುಮೋದಿಸುವುದಿಲ್ಲ, ಎಂದು ಕಾಣುತ್ತದೆ. ಇಂತಹ ಪವಿತ್ರ ಪ್ರೇಮ ಇರಲಿ; ಸಾಮಾನ್ಯ ಪ್ರೇಮಕ್ಕೆ ಕೂಡ ಅರ್ಹರಾದವರು ಎಷ್ಟು ಮಂದಿ? ವಿಹಾರಿಯಂತ ಜನ ತೀರಾ ವಿರಳ. ಗಂಡನನ್ನು ಕುರಿತು ಆಶಾಳ ನಿಶ್ಶಂಕ ಪ್ರೇಮ ಆ ಗಂಡ ವಿನೋದಿನಿಗಾಗಿ ಎಲ್ಲವನ್ನೂ ತೊರೆಯಲು ಸಿದ್ಧ ನಾಗಿರುವುದನ್ನು ಕಂಡಾಗ ಸಹಿಸಲಾಗದ ಅಪಘಾತದಿಂದ ನೋಯು ತ್ತದೆ. ಪಾಪ ಆ ಜೀವ ಎಷ್ಟು ನೊಂದಿತೊ! ಕವಿ ಇದನ್ನು ವರ್ಣಿಸಿಲ್ಲ; ಊಹೆಗೆ ಬಿಟ್ಟಿದಾನೆ. ಇದೇ ಗಂಡ ಹಿಂದಕ್ಕೆ ಬಂದಾಗ ಈ ಹೆಣ್ಣು ಅವನನ್ನು ಆ ಮೊದಲಿನಂತೆಯೇ ಸಮಾಧಾನದಿಂದ ಒಪ್ಪಿಕೊಳ್ಳುತ್ತಾಳೆ. ಆದರೆ ಪ್ರಾಯಶಃ ಎಳೆತನದ ಸರಳವಾದ ಅಂದಿನ ಆಶೆ ಬಾಳು ತಂದ ಅನುಭವದಿಂದ ನಂದಿ ಹೋಗಿದೆ. ಹೆಣ್ಣಿನ ಜೀವ ಇಂತಹ ನಿರಾಶೆಯ ಸಮಾಧಾನದಿಂದ ಬಾಳಿನಲ್ಲಿ ನಡೆಯಲೊಪ್ಪುವುದು ಅದೆಷ್ಟು ಸಲವೊ! ಇದನ್ನು ಚಿತ್ರಿಸುವುದು ಕಷ್ಟ. ಅತ್ಯುತ್ತಮ ಸಾಹಿತ್ಯ ಇಲ್ಲಿ ಸೀತಾ ಶಕುಂತಲೆಯರಲ್ಲಿ ಅಲ್ಲಿ ಹೆಲೆನಾ ಹರ್ಮಿಯೋನ್‌ಗಳಲ್ಲಿ ಚಿತ್ರಿಸಿ ಗೆದ್ದಿದೆ. ಈ ಕತೆಯ ಆಶಾ ಇದೇ ತರದ ಒಂದು ಉತ್ತಮ ಚಿತ್ರ.

**೩೬. ಮುರಿದ ನೌಕ**

ಠಾಕೂರರ ದೊಡ್ಡ ಕತೆಗಳಲ್ಲಿ 'ಮುರಿದ ನೌಕ' ಎನ್ನುವುದು ಒಂದು. ರಮೇಶನೆಂಬ ಬ್ರಾಹ್ಮಣ ವಿದ್ಯಾರ್ಥಿ ಕಲ್ಕತ್ತೆಯಲ್ಲಿ ತನ್ನ

ಸ್ನೇಹಿತ ಜೋಗೀಂದ್ರನ ಮನೆಗೆ ಹೋಗುತ್ತ ಬರುತ್ತ ಜೋಗೀಂದ್ರನ ತಂಗಿ ಹೇಮನಳಿನಿಯಲ್ಲಿ ಅನುರಾಗವುಳ್ಳವನಾಗುತ್ತಾನೆ. ಹೇಮ ನಳಿನಿಯ ಮನೆಯವರು ಬ್ರಾಹ್ಮಸಮಾಜಕ್ಕೆ ಸೇರಿದವರು. ಆದಕಾರಣ ರಮೇಶ ಹೇಮನಳಿನಿಯರ ಮದುವೆ ಸಾಮಾನ್ಯವಾಗಿ ನಡೆಯತಕ್ಕದ್ದಲ್ಲ. ಇದು ತಿಳಿದೂ ಇವರು ಪರಸ್ಪರ ಪ್ರೀತಿಯಿಂದ ನಡೆದುಕೊಳ್ಳುತ್ತಿರುತ್ತಾರೆ. ರಮೇಶನ ತಂದೆ ಬಂದು ರಮೇಶನನ್ನು ಕರೆದುಕೊಂಡುಹೋಗಿ ತಾನು ಹುಡುಕಿದ್ದ ಒಂದು ಹುಡುಗಿಯನ್ನು ತಂದು ಅವನಿಗೆ ಮದುವೆಮಾಡು ವನು. ಮದುವೆ ಮುಗಿಸಿಕೊಂಡು ಹಿಂದಕ್ಕೆ ಬರುವಾಗ ರಮೇಶನೂ ಇವನ ಹೆಂಡತಿಯೂ ಇನ್ನು ಇತರರೂ ಇದ್ದ ದೋಣಿ ಬಿರುಗಾಳಿಯಲ್ಲಿ ಸಿಕ್ಕಿ ಮುಳುಗುವುದು. ಪ್ರವಾಹ ರಮೇಶನನ್ನು ಕೊಚ್ಚಿಕೊಂಡು ಬಂದು ನದೀಮಧ್ಯದ ಒಂದು ದ್ವೀಪದಮೇಲೆ ಹಾಕುವುದು. ಜ್ಞಾನ ತಪ್ಪಿದ್ದ ರಮೇಶನು ಎಚ್ಚತ್ತಾಗ ಸ್ವಲ್ಪ ದೂರದಲ್ಲಿ ಒಬ್ಬ ಹುಡುಗಿ ನಿಂತಿರುವುದು ಕಾಣುವುದು. ಅವಳೂ ಹೊಸದಾಗಿ ಮದುವೆಯಾದ ಹುಡುಗಿ. ಅವಳು ತನ್ನ ಹೆಂಡತಿಯೆಂದು ಅವನು ತಿಳಿಯುವನು. ಇವನು ತನ್ನ ಗಂಡನೆಂದು ಅವಳು ತಿಳಿಯುವಳು. ಆದರೆ ಅವಳು ಇವನ ಹೆಂಡತಿಯಲ್ಲ. ಇನ್ನೊಂದು ಮದುವೆಯ ಗುಂಪಿನವರು ರಮೇಶನ ದೋಣಿಯತೆರದ ಇನ್ನೊಂದು ದೋಣಿಯಲ್ಲಿ ಬರುತ್ತಿರಲು ಅದೇ ಬಿರು ಗಾಳಿಯಲ್ಲಿ ದೋಣಿ ಮುಳುಗಿಹೋಗಿ ಪ್ರವಾಹ ಈ ಹುಡುಗಿಯನ್ನು ಕೊಚ್ಚಿಕೊಂಡು ಇಲ್ಲಿಗೆ ತಂದಿರುವುದು. ಇದೆಲ್ಲ ತಿಳಿಯದೆ ರಮೇಶ ಇವಳನ್ನು ಕರೆದುಕೊಂಡು ಊರಿಗೆ ಹೋಗುವನು; ಶೀಘ್ರದಲ್ಲಿಯೇ ಇವಳು ತನ್ನ ಪತ್ನಿಯಲ್ಲವೆಂದು ಅವಳ ಮಾತಿನಿಂದ ತಿಳಿಯುವನು; ತಾನು ಅವಳ ಗಂಡನಲ್ಲವೆಂಬುದನ್ನು ತಿಳಿಸದೆ ಅವಳಿಂದ ಅವಳ ಸಂಬಂಧ ವನ್ನೆಲ್ಲ ವಿಚಾರಿಸಿಕೊಳ್ಳುವನು. ಅವಳ ಗಂಡನ ಹೆಸರು ನಳಿನಾಕ್ಷ. ಅವನು ಎಲ್ಲಿದಾನೆಂದು ವಿಚಾರಿಸಿ ರಮೇಶನು ಒಂದು ಕಾಗದ ಬರೆಯುವನು. ಅವನು ಏನಾದನೆಂದು ರಮೇಶನಿಗೆ ತಿಳಿಯದೆಹೋಗು ವುದು. ಮದುವೆಯಾದ ಹುಡುಗಿ ಗಂಡನಲ್ಲದ ತನ್ನೊಂದಿಗೆ ಮೂರು ತಿಂಗಳು ಇದ್ದು ಈಗ ಹಿಂದಕ್ಕೆ ಹೇಗೆ ಹೋದಾಳು ಎಂಬ ಸಂಕೋಚದಿಂದ

ರಮೇಶ ಅವಳನ್ನು ಕಲ್ಕತ್ತೆಗೆ ಕರೆದುಕೊಂಡುಬಂದು ಏನುಮಾಡುವು ದೆಂದು ತೋಚದೆ ತನ್ನ ಹೆಂಡತಿಯೆಂದು ಹೇಳಿ ಒಂದು ಶಾಲೆಯಲ್ಲಿ ಓದುವುದಕ್ಕೆ ಬಿಡುವನು; ಈ ಮಧ್ಯೆ ಹೇಮನಳಿನಿಯ ಬಳಿಗೆ ಬಂದು ಪುನಃ ಮಾತು ಕತೆಯನ್ನು ಆರಂಭಿಸುವನು. ಹೇಮನಳಿನಿಯನ್ನು ಮದುವೆ ಯಾಗಬೇಕೆಂದಿರುವ ಅಕ್ಷಯನೆಂಬ ಯುವಕನು ರಮೇಶನ ಸುಳಿವನ್ನು ನೋಡುತ್ತ ಇವನು ಇನ್ನೊಬ್ಬ ಹೆಂಗಸಿನ ಸಂಬಂಧದಲ್ಲಿರುವುದನ್ನು ತಿಳಿದುಕೊಳ್ಳುವನು. ಈ ಮಧ್ಯೆ ರಮೇಶ ಹೇಮನಳಿನಿಯರ ಮದುವೆ ಯಾಗುವುದೆಂದು ಏರ್ಪಾಡಾಗಿ ಒಂದು ದಿನ ಗೊತ್ತಾಗುವುದು. ಮದುವೆಯ ಹಿಂದಿನ ದಿವಸ ಕಮಲೆ ಶಾಲೆಯಿಂದ ಹಿಂದಕ್ಕೆ ಬರುವ ದಿನ. ಈ ಕಾರಣ ದಿಂದ ರಮೇಶನು ಮದುವೆಯನ್ನು ಸ್ವಲ್ಪ ದಿನ ಮುಂದಕ್ಕೆ ನೂಕಬೇಕಾಗು ವುದು. ಹೇಮನಳಿನಿಗೂ ಅವಳ ತಂದೆಗೂ ಇದರ ಕಾರಣ ಗೊತ್ತಿಲ್ಲ. ರಮೇಶನು ಕಮಲೆಯನ್ನು ಕರೆದುಕೊಂಡುಹೋಗಿ ತಾನು ದೂರದಲ್ಲಿ ಮಾಡಿದ್ದ ಒಂದು ಮನೆಯಲ್ಲಿ ಅವಳ ಜೊತೆಗಿರುವನು. ಜೋಗೀಂದ್ರನೂ ಅಕ್ಷಯನೂ ಅಲ್ಲಿ ಬಂದು ಅವನ ಗುಟ್ಟು ಗುಟ್ಟಲ್ಲವೆಂದು ತೋರಿಸು ವರು. ರಮೇಶ ಇನ್ನು ಇಲ್ಲಿರುವುದು ಸರಿಯಲ್ಲವೆಂದು ಕಮಲೆಯೊಡನೆ ಹೊರಟು ಒಂದು ದೋಣಿಯನ್ನೇರಿ ವಾರಣಾಸಿಯ ಕಡೆಗೆ ಹೋಗುವನು. ಇತ್ತ ಜೋಗೀಂದ್ರನು ತನಗೆ ತಿಳಿದಿದ್ದುದನ್ನು ಹೇಳಲು ಹೇಮನಳಿನಿಗೂ ಅವಳ ತಂದೆಗೂ ಬಹಳ ಖೇದವಾಗುವುದು. ಅಕ್ಷಯನು ರಮೇಶನನ್ನು ಹಿಂಬಾಲಿಸುವನು; ರಮೇಶ ಅವನಿಗೆ ಸಿಕ್ಕದಂತೆ ತಪ್ಪಿಸಿಕೊಳ್ಳುವನು. ವಾರಣಾಸಿಗೆ ಹೊಗುತ್ತ ದೋಣಿಯಲ್ಲಿ ಕಮಲೆಗೆ ಸಹಾಯಕ್ಕೆ ಉಮೇಶ ನೆಂಬ ಒಬ್ಬ ಬಡಹುಡುಗನು ಸಿಕ್ಕುವನು. ರಮೇಶನು ತನ್ನ ಗಂಡನಲ್ಲ ವೆಂದು ಕಮಲೆಗೆ ಇನ್ನೂ ತಿಳಿಯದು. ರಮೇಶ ಏನೋ ಒಂದು ಕತೆ ಹೇಳುವಂತೆ ಹೇಳಿ ಅವಳಿಗೆ ನಿಜವನ್ನು ಸೂಚಿಸುತ್ತಾನೆ; ಆದರೆ ಅವಳು ಅದರ ಅರ್ಥವನ್ನು ಗ್ರಹಿಸುವುದಿಲ್ಲ. ಕಮಲೆಯ ಗಂಡನು ದೋಣಿ ಮುಳುಗಿದಾಗ ತೀರಿಹೋಗಿರಬೇಕೆಂದು ರಮೇಶ ಅವಳನ್ನು ಮದುವೆ ಯಾಗುವುದೇ ಸರಿಯೆಂದು ನಿರ್ಧರಿಸಿಕೊಳ್ಳುವನು. ಇಷ್ಟರಲ್ಲಿ ದೋಣಿಯಲ್ಲಿ ತ್ರೈಲೋಕ್ಯ ಚಕ್ರವರ್ತಿ ಎಂಬಾತನು ಇವರಿಗೆ ಜೊತೆಯಾಗಿ ಇವರೆಲ್ಲ ಆತನ

ಊರಾದ ಘಾಸೀಪುರದವರೆಗೆ ಬಂದು ಅಲ್ಲಿ ಇಳಿಯುವರು. ರಮೇಶ ಕಮಲೆಯರು ಆತನ ಮನೆಯಲ್ಲಿ ಸ್ವಲ್ಪ ದಿನ ಇರುವರು. ಇವರು ಗಂಡ ಹೆಂಡಿರೆಂದು ತಿಳಿದುಕೊಂಡಿರುವ ಚಕ್ರವರ್ತಿಗೂ ಅವನ ಸಂಸಾರಕ್ಕೂ ಇವರಿವರ ಸ್ಥಿತಿ ಅರ್ಥವಾಗುವುದಿಲ್ಲ. ರಮೇಶನು ತನ್ನನ್ನು ಸರಿಯಾಗಿ ಕಾಣುತ್ತಿಲ್ಲವೆಂದು ಕಮಲೆಗೂ ಅಸಮಾಧಾನ. ಕೆಲವು ದಿನದಮೇಲೆ ರಮೇಶ ಏನೋ ಕೆಲಸಕ್ಕಾಗಿ ಕಲ್ಕತ್ತೆಗೆ ಹೋಗಿ ಅಲ್ಲಿ ತನ್ನ ಮತ್ತು ಕಮಲೆಯ ಕತೆಯನ್ನು ಒಂದು ಕಾಗದದಲ್ಲಿ ಬರೆದು ಹೇಮನಳಿನಿಗೆ ಕೊಡುವುದಕ್ಕೆ ಹೊಗುವನು. ಹೇಮನಳಿನಿಯೂ ಅವಳ ತಂದೆಯೂ ಊರನ್ನು ಬಿಟ್ಟು ಬ್ರಾಹ್ಮಸಮಾಜದ ಪ್ರಸಿದ್ಧ ಉಪನ್ಯಾಸಕನಾದ ನಳಿನಾಕ್ಷ ನೆಂಬ ವೈದ್ಯನೊಂದಿಗೆ ವೃದ್ಧನ ಆರೋಗ್ಯದ ಸಲುವಾಗಿ ಬೇರೆ ಎಲ್ಲಿಯೋ ಹೋಗಿರುವರೆಂದು ಕೇಳಿ ಕಾಗದವನ್ನು ಹಿಂದಕ್ಕೆ ತರುವನು. ಕಮಲೆಯನ್ನು ಮದುವೆಯಾಗಬೇಕೆಂದೇ ಅವನ ಉದ್ದೇಶ. ಆದರೆ ಕಮಲೆ ಒಂದು ದಿನ ಇವನು ಹೇಮನಳಿನಿಗೆ ಬರೆದಿದ್ದ ಕಾಗದವನ್ನು ಅಕಸ್ಮಾತ್ತಾಗಿ ನೋಡುತ್ತಾಳೆ. ಆ ದಿನ ರಮೇಶ ಘಾಸೀಪುರದಲ್ಲಿರಲಿಲ್ಲ. ಕಮಲೆ ಗಂಡನಲ್ಲದವನೊಂದಿಗೆ ಇಷ್ಟು ದಿನ ಇದ್ದೆನೇ ಎಂದು ನೊಂದು ಮನೆಯನ್ನು ಬಿಟ್ಟು ನದೀತೀರಕ್ಕೆ ಹೋಗಿ ರಮೇಶನು ಕೊಟ್ಟಿದ್ದ ಒಂದು ಉಂಗುರವನ್ನು ಅಲ್ಲಿ ಕಳಚಿ ಎಸೆದು ನದಿಗೆ ಎದುರಾಗಿ ದಡದಮೇಲೆ ಹೊರಟುಹೋಗುವಳು. ರಮೇಶ ಹಿಂದಕ್ಕೆ ಬಂದು, ಕಮಲೆಯಿಲ್ಲದಿರಲು, ಏನಾದಳೋ ಎಂದು ಹುಡುಕುತ್ತಾನೆ. ನೀರಿನವರೆಗೆ ಕಂಡ ಹೆಜ್ಜೆಯಿಂದಲೂ ಅಲ್ಲಿ ಸಿಕ್ಕಿದ ಉಂಗುರದಿಂದಲೂ ಎಲ್ಲರೂ ಅವಳು ನದಿಯಲ್ಲಿ ಬಿದ್ದಿರಬೇಕೆಂದು ಊಹಿಸುತ್ತಾರೆ. ಇತ್ತ ಜೋಗೀಂದ್ರ ಹೇಮನಳಿನಿ ಅಕ್ಷಯನನ್ನು ಮದುವೆಯಾಗಬೇಕೆಂದು ಬಲವಂತಪಡಿಸುತ್ತಿರುತ್ತಾನೆ. ಇವರಿಬ್ಬರಿಂದ ತಪ್ಪಿಸಿಕೊಂಡೇ ಹೇಮನಳಿನಿಯೂ ಅವಳ ತಂದೆಯೂ ನಳಿನಾಕ್ಷನೊಂದಿಗೆ ವಾರಣಾಸಿಗೆ ಬಂದಿರುತ್ತಾರೆ. ಅಲ್ಲಿ ನಳಿನಾಕ್ಷನ ತಾಯಿ ದೈವಸಾನ್ನಿಧ್ಯದಲ್ಲಿ ಜೀವವನ್ನು ಬಿಡಬೇಕೆಂದು ಮನೆ ಮಾಡಿಕೊಂಡು ಇದ್ದಾಳೆ. ನದೀತೀರದಲ್ಲಿ ನಡೆದುಬಂದ ಕಮಲೆ ನವೀನಕಾಳಿ ಎಂಬ ಸಂಸಾರಿಗೆ ಸಿಕ್ಕಿ ಅವಳ ಮನೆಯಲ್ಲಿ ಅಡಿಗೆಗೆ ನಿಲ್ಲುತ್ತಾಳೆ; ಇವರು ವಾರಣಾಸಿಗೆ ಬರುತ್ತಾರೆ.

ನವೀನಕಾಳಿಯ ಯಜಮಾನನಿಗೆ ದೇಹದಲ್ಲಿ ಸ್ವಲ್ಪ ಆಲಸ್ಯವಾಗಿ ಅವರು ವೈದ್ಯ ನಳಿನಾಕ್ಷನಿಗೆ ಹೇಳಿಕಳುಹಿಸುತ್ತಾರೆ. ಕಮಲೆಗೆ ಇವನು ತನ್ನ ಗಂಡನೆಂದು ಭಾಸವಾಗುತ್ತದೆ. ಮಧ್ಯೆ ಹೇಮನಳಿನಿಗೂ ನಳಿನಾಕ್ಷನಿಗೂ ಮದುವೆಯಾಗುವ ಮಾತು ಬರುತ್ತದೆ; ನಳಿನಾಕ್ಷನ ತಾಯಿ ಕೂಡ ಇದಕ್ಕೆ ಒಪ್ಪಿಕೊಳ್ಳುವಂತಿರುತ್ತದೆ. ಇಷ್ಟರಲ್ಲಿ ನವೀನಕಾಳಿ ಎಲ್ಲಿಯೋ ಹೋಗ ಬೇಕಾಗಿ ಕಮಲೆಯನ್ನು ಜೊತೆಗೆ ಬಾ ಎನ್ನುತ್ತಾಳೆ. ಕಮಲೆ ಒಪ್ಪುವುದಿಲ್ಲ; ಬಲವಂತ ಮಾಡಲಾಗಿ ವಿಧಿಯಿಲ್ಲದೆ ರೈಲಿನಲ್ಲಿ ಕುಳಿತು ಎರಡು ಸ್ಟೇಷನ್ ಹೋದಮೇಲೆ ರೈಲಿನಿಂದ ಇಳಿದುಬಿಡುತ್ತಾಳೆ. ಅಲ್ಲಿ ಅಕಸ್ಮಾತ್ತಾಗಿ ಉಮೇಶನನ್ನು ಕಾಣುತ್ತಾಳೆ. ಅವನು ಅವಳನ್ನು ವಾರಣಾಸಿಗೆ ಕರೆದುಕೊಂಡು ಬಂದು ಆ ವೇಳೆಗೆ ಮನೆಯವರೊಂದಿಗೆ ಅಲ್ಲಿಗೆ ಬಂದು ಇದ್ದ ಚಕ್ರವರ್ತಿಯ ಮನೆಯಲ್ಲಿ ಬಿಡುತ್ತಾನೆ. ಏನಾದೆ ಏನು ಎಂದು ವಿಚಾರಿಸಲಾಗಿ ಕಮಲೆ ಚಕ್ರವರ್ತಿಯ ಮಗಳಿಗೆ ರಮೇಶನು ಹೇಮನಳಿನಿಗಾಗಿ ಬರೆದಿದ್ದ ಕಾಗದವನ್ನು ತೋರಿಸುತ್ತಾಳೆ. ಇದು ಚಕ್ರವರ್ತಿಗೂ ತಿಳಿಯುತ್ತದೆ. ವೈದ್ಯ ನಳಿನಾಕ್ಷನು ಕಮಲೆಯ ಗಂಡನೆಂದು ತಿಳಿದು ಚಕ್ರವರ್ತಿ ಕಮಲೆಯನ್ನು ಅವನ ತಾಯ ಬಳಿ ಕರೆದುಕೊಂಡುಹೋಗಿ ಹರಿದಾಸಿ ಎಂಬ ತನ್ನ ಬಂಧುವಿನ ಮಗಳೆಂದು ಅಲ್ಲಿ ಬಿಡುತ್ತಾನೆ. ಕಮಲೆ ಹೋದಮೇಲೆ ರಮೇಶ ಜೋಗೀಂದ್ರನ ಬಳಿಗೆ ಹೋಗಿ ತನ್ನ ಕತೆಯನ್ನೆಲ್ಲ ಹೇಳುವನು. ಅವನೂ ರಮೇಶನೂ ಬಂದು ಹೇಮನಳಿನಿಗೆ ಮತ್ತು ಅವಳ ತಂದೆಗೆ ಆದದನ್ನೆಲ್ಲ ವಿವರಿಸುವರು. ತನ್ನ ಹೆಂಡತಿ ತೀರಿಹೋಗಿದ್ದಳೆಂದು ತಿಳಿದಿದ್ದ ನಳಿನಾಕ್ಷ ಹರಿದಾಸಿ ತನ್ನ ವಿಷಯದಲ್ಲಿ ತೋರಿದ ಶ್ರದ್ಧೆಯಿಂದ ಮತ್ತು ರಮೇಶನೂ ಹೇಮನಳಿನಿಯೂ ಬರೆದಿದ್ದ ಇನ್ನೊಂದು ಕಾಗದದಿಂದ ಕಮಲೆ ತನ್ನ ಪತ್ನಿಯೆಂದು ತಿಳಿಯುವನು. ಆ ಕಾಗದದಿಂದ ಕಮಲೆಯ ಚರಿತ್ರೆಯೆಲ್ಲ ತಿಳಿಯುವುದಲ್ಲದೆ ಅವಳು ಶುದ್ಧಳಾಗಿದ್ದಾಳೆ ಎನ್ನುವುದೂ ತಿಳಿಯುವುದು. ಆ ದಿನ ಕಮಲೆ ಅವನ ಕೊಠಡಿಯಲ್ಲಿ ಹೂವನ್ನಿಟ್ಟು ಬರುವಾಗ ಅವನ ಕೈಗೆ ಸಿಕ್ಕಿ ನಾನು ಕಮಲೆ ಎನ್ನುವಳು. ನಳಿನಾಕ್ಷ ಹೌದು ಎನ್ನುವನು; ಅವಳನ್ನು ಒಪ್ಪಿಕೊಳ್ಳುವನು. ಮುಂದೆ ರಮೇಶನೂ ಹೇಮ

ರಮೇಶನು ಹೆಂಡತಿಯನ್ನು ಕಳೆದುಕೊಂಡ ಸಮಯದಲ್ಲಿಯೇ ನಳಿನಾಕ್ಷನೂ ಅವನ ಪತ್ನಿಯೂ ಬೇರೆ ಬೇರೆಯಾಗಿ ರಮೇಶನೂ ಕಮಲೆಯೂ ಪ್ರವಾಹದಿಂದ ಕೊಚ್ಚಿಕೊಂಡುಬಂದು ಒಂದ ಮಣ್ಣು ದಿಬ್ಬದ ಮೇಲೆ ಬೀಳುವುದು ಈ ಕಥೆಯ ಆರಂಭ. ಎಚ್ಚತ್ತಾಗ ಇಬ್ಬರೂ ಭ್ರಾಂತಿಯಿಂದ ತಾವು ದಂಪತಿಗಳೆಂದು ಭಾವಿಸುವುದು ಮುಂದೆ ಬರುವ ಎಲ್ಲ ತೊಡಕಿಗೂ ಮೂಲ. ಈ ಶಿಥಿಲವಾದ ತಳಹದಿಯಮೇಲೆ ಕತೆಯನ್ನೆಲ್ಲಾ ಕಟ್ಟಿದೆ. ಇದಿಷ್ಟನ್ನು ಒಪ್ಪುವುದೇ ಓದುವವರಿಗೆ ಕಷ್ಟವಾಗುತ್ತದೆ. ಮದುವೆಯಾಗುವ ಹುಡುಗಿ ತನ್ನ ಗಂಡನ ಮುಖವನ್ನು ಒಂದುಸಲವೂ ನೋಡದೆ ಇದ್ದಳೆ? ನಾಚಿಕೆಯಿಂದ ಅವನ ಮುಖವನ್ನು ನೋಡಿರಲಿಲ್ಲ. ಆಕಾರದಲ್ಲಿ ಎತ್ತರದಲ್ಲಿ ಧ್ವನಿಯಲ್ಲಿ ವಸ್ತ್ರದಲ್ಲಿ ನಡೆಯಲ್ಲಿ ವ್ಯತ್ಯಾಸ ಕಾಣದಹಾಗೆ ನಳಿನಾಕ್ಷನೂ ರಮೇಶನೂ ಸಮನಾಗಿದ್ದಿರಬಹುದೆ? ಇದೇಕೋ ವಿಚಿತ್ರವಾಗಿದೆಯೆನ್ನಿಸುತ್ತದೆ. ಇವಳು ತನ್ನ ಹೆಂಡತಿಯಲ್ಲವೆಂದು ತಿಳಿದಮೇಲೆ ರಮೇಶನು ಇವಳ ವಿಷಯದಲ್ಲಿ ನಡೆದುಕೊಂಡ ರೀತಿಯೂ ಹೀಗೆಯೇ ವಿಚಿತ್ರವೆಂದು ಕಾಣುತ್ತದೆ. ಅದೇ ವೇಳೆಯಲ್ಲಿ ಹೇಮನಳಿನಿಯನ್ನು ಮದುವೆಯಾಗುವುದಕ್ಕೆ ಒಪ್ಪಿಸಿಕೊಳ್ಳುವುದೂ ಇವನಲ್ಲಿ ಸ್ವಲ್ಪ ವಿಚಿತ್ರವಾದ ನಡತೆ. ರಮೇಶ ಕಮಲೆಯ ಗಂಡನೇನಾದನೆಂದು ಸರಿಯಾಗಿ ವಿಚಾರಮಾಡಿ ನಿರ್ಧರಿಸಿರಲಿಲ್ಲ; ಜನರು ತನ್ನನ್ನು ಏನು ಹೇಳುವರು ಎಂಬ ಸಂಕೋಚದಲ್ಲಿದ್ದನು; ನಿಜವೇನೆಂಬುದನ್ನು ಕಮಲೆಗೆ ಹೇಳದೆ ಅವಳೊಂದಿಗೆ ಸಲಿಗೆಯಿಂದ ಆಡುತ್ತಿದ್ದನು; ಆದರೆ ಅವಳೊಂದಿಗೆ ಸಂಬಂಧ ಬೆಳಸಲಿಲ್ಲ. ಈ ಸ್ಥಿತಿಯೂ ವಿಚಿತ್ರವಾದದು. ಸರಿಯಾಗಿ ವಿಚಾರಿಸದೆ ನಳಿನಾಕ್ಷನು ತೀರಿಹೋಗಿರಬೇಕೆಂದು ನಿರ್ಧರಿಸಿದ್ದು ರಮೇಶನಿಗೆ ಬುದ್ಧಿ ಕಡಿಮೆಯೆಂದು ಸೂಚಿಸುತ್ತದೆ. ತಾನು ಹೇಗಾದರೂ ಆಗಲಿ ಈ ಹುಡುಗಿಯ ಗತಿಯೇನು ಎಂದು ಯೋಚಿಸದೆ ಅವಳನ್ನು ಅಜ್ಞಾನದಲ್ಲಿ ಬಿಟ್ಟದ್ದೂ ಅವಳೊಂದಿಗೆ ಸರಸಮಾಡುವುದೂ ಅವನ ಅಸಭ್ಯತೆಯನ್ನು ತೋರಿಸುತ್ತವೆ. ರಮೇಶನನ್ನು ಇಂಥ ಅವಿವೇಕಿ ಅಸಭ್ಯನೆಂದು ಚಿತ್ರಿಸುವುದು ಗ್ರಂಥಕರ್ತೃವಿನ ಉದ್ದೇಶವೆಂದು ಕಾಣುವುದಿಲ್ಲ. ವಿವೇಕಿಯೂ ಸಭ್ಯನೂ ಆದ ತರುಣನು ವಿಧಿವಿಲಾಸದಿಂದ ಈ ತೊಡಕಿನಲ್ಲಿ ಸಿಕ್ಕಿಕೊಂಡು

ಏನುಮಾಡುವುದೆಂದು ತೋಚದೆ ಹೀಗೆ ನಡೆದುಕೊಂಡನೆಂದು ತೋರಿಸುವುದು ಆ ಉದ್ದೇಶವೆಂದು ಕಾಣುತ್ತದೆ. ರಮೇಶನ ನಡತೆಯ ಈ ಟೊಳ್ಳಿನಿಂದಲೂ ಕತೆ ನಡೆದಿರಬಹುದೆಂಬ ಭಾವಕ್ಕೆ ಹಾನಿಬರುತ್ತದೆ. ರಮೇಶನಂತೆಯೇ ನಳಿನಾಕ್ಷನೂ ಅಸಂಬದ್ಧವಾದ ರೀತಿಯಲ್ಲಿ ನಡೆದುಕೊಳ್ಳುತ್ತಾನೆ ಇದಿಷ್ಟನ್ನೂ ಒಪ್ಪಿಕೊಂಡರೆ ರಮೇಶ, ಹೇಮನಳಿನಿ, ಕಮಲೆ ಇವರ ಕತೆ ಮುಂದಕ್ಕೆ ಸಾಗಿದ ರೀತಿ ಇದ್ದರೂ ಇರಬಹುದು ಎನ್ನುವುದು ಸಾಧ್ಯ. ಆದರೂ ಕಮಲೆಗೆ ಸಂಭವಿಸುವ ತೊಂದರೆಗಳಲ್ಲಿ ಹಲವು ಕತೆಯ ಬೆಳವಣಿಗೆಗಾಗಿ ಎಳೆದು ತಂದುವೆಂಬಂತೆ ಕಾಣುತ್ತವೆ. ಕಾಗದಗಳನ್ನು ಬರೆಯುವುದು, ಕಾಗದಗಳು ಸಿಕ್ಕುವುದು, ಅದರಿಂದ ತೊಡಕು ಹರಿಯುವುದು, ಇದೆಲ್ಲ ಆಟದ ಮಾತಿನಂತೆ ಕಾಣುತ್ತದೆ. ಕೊನೆಗೆ ತೊಡಕು ಹರಿಯುವುದಕ್ಕಾಗಿ ಆಗಿರುವ ಏರ್ಪಾಡುಗಳಂತೂ ಎಳೆದುತಂದುವೇ. ಒಟ್ಟನಲ್ಲಿ ಈ ಸಂಘಟನೆಗಳು ನಿಜವಿರಬಹುದೆಂಬ ಭಾವ ಅತಂತ್ರವಾಗಿಯೇ ನಿಂತು ಬಿಡುತ್ತದೆ. ಕತೆಯನ್ನು ನಮ್ಮ ಮನಸ್ಸು ಒಪ್ಪಿಕೊಳ್ಳುವುದಿಲ್ಲ.

ರಮೇಶ ಹೇಮನಳಿನಿಯರ ಕತೆಯೂ ಜೊಂಡಾಗಿದೆ. ಹೇಮನಳಿನಿ ಒಳ್ಳೆಯ ಹುಡುಗಿ. ಆದರೆ ಅವಳು ಪ್ರೀತಿಸುವುದೂ ಕಷ್ಟಪಡುವುದೂ ಕಷ್ಟವನ್ನು ಸಹಿಸುವುದೂ ಪಾಶ್ಚಾತ್ಯ ನಾವೆಲುಗಳ ನಾಯಕಿಯರಂತೆ ಇರಬೇಕೆಂಬ ಉದ್ದೇಶದಿಂದ ಎಂಬಂತೆ ತೋರುತ್ತದೆ. ಈ ಕತೆಯಲ್ಲಿ ಹೇಮನಳಿನಿಯ ಮನೆಯಲ್ಲಿ ಟೀ ತೆಗೆದುಕೊಳ್ಳುವ ಸಂದರ್ಭ ಬಹಳ ಬರುತ್ತದೆ. ಆ ಪ್ರೇಮದ ಪಥವು ಈ ಟೀಯ ಸಂಪ್ರದಾಯದಂತೆ ಪಾಶ್ಚಾತ್ಯ ರೀತಿಯದು. ಬ್ರಾಹ್ಮಸಮಾಜದವರು ಪಾಶ್ಚಾತ್ಯ ಸಂಪ್ರದಾಯದ ಹಲವು ಪದ್ಧತಿಗಳನ್ನು ಸ್ವೀಕರಿಸಿರುವ ಜನರು. ಇವರಲ್ಲಿ ಪ್ರೌಢಾ ವಿವಾಹವೇ ವಾಡಿಕೆ. ಇವರು ಟೀ ವೇಳೆಯಲ್ಲಿ ಗಂಡಸರು ಹೆಂಗಸರು ಜೊತೆಯಾಗಿ ಕುಳಿತು ಟೀ ತೆಗೆದುಕೊಳ್ಳುವುದು ಪದ್ಧತಿ ಎಂದು ಕಾಣುತ್ತದೆ. ಆದರೆ ಈ ಕತೆಯಲ್ಲಿ ಈ ಸಂದರ್ಭಗಳಲ್ಲಿ ಬರುವ ಮಾತುಗಳು ನಮ್ಮ ಜನರು ಸಹಜವಾಗಿ ಆಡುವ ಮಾತು ಕತೆಯಂತೆ ಕಾಣುವುದಿಲ್ಲ. ಏನೋ ಮಾತು, ಏನೋ ನಡತೆ. ಪಾಶ್ಚಾತ್ಯರಲ್ಲಿರುವಂತೆ ನಮ್ಮಲ್ಲಿಯೂ ಸಂಸ್ಕೃತರಾದ ಜನರಿರುವುದು ಕಾಣುವ ಉದ್ದೇಶದಿಂದ

ಈ ಚಿತ್ರಗಳನ್ನು ರಚಿಸಿರುವಂತೆ ತೋರುತ್ತದೆ. ನೊಂದ ಹೇಮನಳಿನಿ, ಸಮಾಧಾನ ಕೊಡುವ ಉಪನ್ಯಾಸಕ ನಳಿನಾಕ್ಷ, ಒರಟೊರಟಾಗಿ ಮಾತನಾಡುವ ಜೋಗೀಂದ್ರ, ಇವರ ಚಿತ್ರಗಳು ಅಷ್ಟು ನೈಜವೆಂದು ಭಾಸವಾಗುವುದಿಲ್ಲ.

ಹೊಸ ರೀತಿಯ ಜನರನ್ನು ಚಿತ್ರಿಸುವುದರಲ್ಲಿ ಹೀಗೆ ಅತಂತ್ರ ವಾಗಿದ್ದರೂ ಈ ಕತೆಯಲ್ಲಿ ಬರುವ ಹಳೆಯ ರೀತಿಯ ಜನ ಹೆಚ್ಚು ನಿಜವಾಗಿದಾರೆ. ತ್ರೈಲೋಕ್ಯ ಚಕ್ರವರ್ತಿ, ಅವನ ಮಗಳು, ಅವನ ಅಳಿಯ, ಕಮಲೆಯ ಅತ್ತೆ, ಅವಳ ಯಜಮಾನಿತಿ, ಉಮೇಶ, ಇವರೆಲ್ಲರ ಸ್ವಭಾವ ಚೆನ್ನಾಗಿ ಬಂದಿದೆ. ಹೊಸಬನಾದರೂ ಧಾರಾಳವಾಗಿ ಒಳಕ್ಕೆ ಬಂದು ಅಡಿಗೆಯ ವಿಷಯ ಮಾತನಾಡುವ ಮುದುಕ, ಕಮಲೆಯೂ ರಮೇಶನೂ ಗಂಡಹೆಂಡಿರೆಂದು ತಿಳಿದು ಅವರು ಮಾತನಾಡುವುದಕ್ಕೆ ಅವಕಾಶ ಸಿಕ್ಕಲೆಂದು ಅವರನ್ನು ಒಂದು ಕಡೆ ಸೇರುವಂತೆ ಮಾಡುವ ಅವನ ಮಗಳು, ಬೇರೆಯವರ ಹೆಣ್ಣು ಮಗುವಾದರೂ ತನ್ನದೆಂಬಂತೆ ಅವಳ ವಿಷಯದಲ್ಲಿ ಪ್ರೇಮ ತೋರುವ ಕಮಲೆಯ ಅತ್ತೆ, ಇವರೆಲ್ಲ ನಾವು ಎಲ್ಲಿಯಾದರೂ ನೋಡಬಹುದಾದ ವ್ಯಕ್ತಿಗಳು. ಇವರ ಪ್ರತಿಮೆಗಳು ರವೀಂದ್ರನಾಥರ ಪ್ರಪಂಚ ಜ್ಞಾನವನ್ನೂ ಸ್ವಭಾವ ಪರಿಚಯವನ್ನೂ ಪ್ರಕಟಿಸುತ್ತವೆ. ಪ್ರಪಂಚ ಜ್ಞಾನವಲ್ಲದೆ ಈ ಚಿತ್ರಗಳಿಂದ ಇವರ ಅನುಭವದ ಇನ್ನೊಂದು ಲಕ್ಷಣ ಸ್ಪಷ್ಟವಾಗುತ್ತದೆ. ಇವರ ಬ್ರಾಹ್ಮ ಸಮಾಜಿಗಳ ಚಿತ್ರಗಳು ಅಸ್ಫುಟವಾದ ಚಿತ್ರಗಳು; ಸ್ಫುಟವಾಗಿ ಬರುವು ವೆಲ್ಲ ಸಾಮಾನ್ಯ ಜನರ ಚಿತ್ರಗಳು. ರವೀಂದ್ರನಾಥರಿಗೆ ಅವರ ಜಮೀನ್ದಾರಿಯ ಬಳಿಯ ಜನರೊಂದಿಗೆ ಬಹಳ ಬಳಕೆ. ಸಾಮಾನ್ಯ ಜೀವನದ ಪರಿಚಯವೂ ಅದರೊಂದಿಗೆ ಸಹಾನುಭೂತಿಯೂ ಅವರಲ್ಲಿ ಸ್ವಭಾವವಾಗಿ ಬೆಳೆದವು. ಸ್ವಲ್ಪ ಹೆಚ್ಚಿನದೆನ್ನಬಹುದಾದ ಜನವನ್ನು ಚಿತ್ರಿಸಬೇಕಾದರೆ ಅವರಿಗೆ ಸಾಮಗ್ರಿ ಕಡಿಮೆ. ಹೆಚ್ಚಿನ ಎಂಬ ಮಾತಿನಿಂದ ನಳಿನಾಕ್ಷನು ಹೆಚ್ಚಿನವನು ತ್ರೈಲೋಕ್ಯನು ಕಡಿಮೆಯವನು ಎಂದು ಹೇಳಿದೆಯೆಂದು ಗ್ರಹಿಸಬಾರದು. ಇಲ್ಲಿ ವ್ಯಕ್ತಿಗಳ ಬೆಲೆ ಕಟ್ಟುವ ಉದ್ದೇಶ ವಿಲ್ಲ. ವಿಶೇಷ ಓದಿ ಬರೆದು ಮಾತನಾಡಿದವನು ಒಬ್ಬ. ಹೀಗೆ ಮಾಡದೆ

ಜೀವನದ ಸಾಮಾನ್ಯಪಥದಲ್ಲಿ ನಡೆದವನು ಒಬ್ಬ. ರವೀಂದ್ರರಿಗೆ ಮೊದಲನೆಯವನ ವಿಷಯದಲ್ಲಿರುವುದಕ್ಕಿಂತಲೂ ಎರಡನೆಯವನ ವಿಷಯದಲ್ಲಿ ಅನುಭವ ಹೆಚ್ಚು, ಸಹಾನುಭೂತಿ ಹೆಚ್ಚು. ಇವರು ನಳಿನಾಕ್ಷನ ಚಿತ್ರವನ್ನು ಅಷ್ಟಾಗಿ ಮನವೊಪ್ಪುವಂತೆ ಮಾಡಲಾರರು; ಚಕ್ರವರ್ತಿಯ ಚಿತ್ರವನ್ನು ಬರೆಯುವಾಗ ಎಲ್ಲಿಲ್ಲದ ಕಳೆಯನ್ನು ತರುತ್ತಾರೆ. ಇಷ್ಟೇ ಅಲ್ಲದೆ ಇವರು ಸುಧಾರಕ ಮತವಾದ ಬ್ರಾಹ್ಮಸಮಾಜಕ್ಕೆ ಸೇರಿದವರಾದರೂ ಪೂರ್ವಾಚಾರದವರ ವಿಚಾರದಲ್ಲಿ ಎಷ್ಟು ಉದಾರಭಾವದಿಂದ ವರ್ತಿಸುವರೆಂಬುದು ಇದರಿಂದ ಕಾಣುತ್ತದೆ. ನಳಿನಾಕ್ಷನ ತಾಯ ಆಚಾರವನ್ನೆಲ್ಲ ಇವರು ಬಲ್ಲರು. ಅದರಲ್ಲಿ ಬಹು ಭಾಗ ಅಂಧಾಚಾರ; ಆದರೂ ಸುಧಾರಕನಾದ ಆ ನಳಿನಾಕ್ಷನು ತಾಯ ವಿಷಯದಲ್ಲ ಯಾವ ತಾಳ್ಮೆಯಿಂದ ನಡೆದುಕೊಳ್ಳುತ್ತಾನೋ ಆ ತಾಳ್ಮೆಯನ್ನು ಸುಧಾರಕರಾದ ಇವರು ಆಚಾರಮತದ ವಿಷಯದಲ್ಲಿ ತೋರಿಸುತ್ತಾರೆ.

ಮೊತ್ತದಲ್ಲಿ ಈ ಕತೆ ಸಾಮಾನ್ಯವಾದದೆಂದು ಹೇಳಬೇಕು. ಇದರಲ್ಲಿ ಬುಡ ಭದ್ರವಿಲ್ಲ; ಮೇಲಣ ಕಟ್ಟಡ ಅಷ್ಟೇನೂ ಅಂದವಿಲ್ಲ. ಓದಿ ಮುಗಿಸಿದಾಗ ಎಂಥ ಕತೆಯನ್ನು ಓದಿದೆವು ಎಂದು ಯಾರೂ ಹೇಳುವಂತಿಲ್ಲ.

### ೩೭. ಗೋರಾ

'ಗೋರಾ' ಎನ್ನುವುದು ಠಾಕೂರರ ದೊಡ್ಡ ಕತೆಗಳಲ್ಲಿ ಪ್ರಸಿದ್ಧವಾದದು. ಇದರ ಸಾರಾಂಶ ಹೀಗೆ. ಗೋರಾ ಮತ್ತು ವಿನಯಭೂಷಣ ಇವರು ಸ್ನೇಹಿತರು; ದೇಶವತ್ಸಲರಾದ ತರುಣರ ಮಂಡಲಿಯಲ್ಲಿ ಮುಂದಾಳುಗಳು. ವಿನಯಭೂಷಣನು ಒಂದು ದಿನ ತನ್ನ ಕೊಟಡಿಯಲ್ಲಿರುವಾಗ ಬೀದಿಯಲ್ಲಿ ಎರಡು ಗಾಡಿ ಒಂದಕ್ಕೊಂದು ತಗಲಿ ಅವುಗಳಲ್ಲಿ ಒಂದರಲ್ಲಿ ಇದ್ದ ವೃದ್ಧನೊಬ್ಬನಿಗೆ ಸ್ವಲ್ಪ ಗಾಯವಾದದನ್ನು ಕಾಣುವನು. ಆತನಿಗೆ ಸಹಾಯಮಾಡಹೋಗಿ ಇವನಿಗೆ ಆತನ ಸಂಸಾರದಲ್ಲಿ ಹೋಗಿ ಬರುವ ಬಳಕೆ ಆಗುವುದು. ಅವರು ಬ್ರಾಹ್ಮಸಮಾಜದ ಜನರು; ಇವನು ಪೂರ್ವ ಸಂಪ್ರದಾಯದ ಬ್ರಾಹ್ಮಣ. ಗೋರ ಸಂಪ್ರ

ದಾಯ ಶರಣ; ಪೂರ್ವಾಚಾರದ ಎಲ್ಲ ವಿವರವನ್ನೂ ಸರಿಯೋ ತಪ್ಪೋ ಎಂದು ಯೋಚಿಸದೆ ಒಪ್ಪಬೇಕು ಎನ್ನುವವನು. ಅವನಿಗೆ ವಿನಯನು ಬ್ರಾಹ್ಮ ಸಮಾಜದವರ ಮನೆಗೆ ಹೋಗಿಬರುವುದು ಇಷ್ಟವಿಲ್ಲ. ಅಲ್ಲಿಯ ತರುಣಿಯರ ಸಂಗಡ ಮಾತನಾಡುವುದಕ್ಕಾಗಿ ವಿನಯನು ಅಲ್ಲಿ ಹೋಗುವನೆಂದು ಗೋರನ ಎಣಿಕೆ; ಪ್ರೌಢೆಯರಾದ ಕನ್ಯೆಯರೂ ತರುಣರೂ ಜೊತೆಯಾಗಿ ಓಡಾಡಿ ಮನಸ್ಸು ಒಪ್ಪಿದ ತರುಣ ತರುಣಿಯರು ಮದುವೆಯಾಗುವುದೆನ್ನುವುದು ಪಾಶ್ಚಾತ್ಯರಿಂದ ನಾವು ಅನುಕರಿಸಿರುವ ಒಂದು ಅವಿವೇಕವೆಂದು ಅವನ ಭಾವನೆ. ಗೋರನ ತಾಯಿ ಆನಂದಮಯಿ ಬಹಳ ತಿಳಿದಾಕೆ; ಉದಾರಶೀಲಳು. ಅವಳು ವಿನಯನು ಮಾಡುತ್ತಿರುವುದು ಸರಿ ಎಂದು ಹೇಳುವಳು. ಆಕೆಯ ಗಂಡ ಕೃಷ್ಣದಯಾಳ ಯೌವನದಲ್ಲಿ ಸಿಕ್ಕಿದಂತೆ ಅನಾಚಾರದಲ್ಲಿ ನಡೆದಿದ್ದರೂ ಈಗ ವೃದ್ಧನಾಗುತ್ತ ಬಹಳ ಆಚಾರವಂತನಾಗಿದ್ದನು. ಗೋರ ದೇಶಭಕ್ತ. ದೇಶವೆಂದರೆ ಎಲ್ಲ ಜನವೂ ಸೇರಬೇಕೆಂದು ವಿನಯನು ಸೂಚಿಸುತ್ತಾನೆ; ಗೋರ ಒಪ್ಪುವುದಿಲ್ಲ; ತನ್ನ ಅಭಿಪ್ರಾಯದಂತೆ ಬರುವವರು ಮಾತ್ರ ಅವನಿಗೆ ಒಪ್ಪಿಗೆ. ಗೋರನದು ಒಂದು ರೀತಿಯ ಅತಿಯಾದ ಹಿಂದುತ್ವ. ಇವನ ಈ ಉತ್ಸಾಹವನ್ನು ಕೃಷ್ಣದಯಾಳ ಪ್ರೋತ್ಸಾಹಿಸುವುದಿಲ್ಲ. ಒಂದು ಸಲ ಅವನು ಗೋರನನ್ನು ಕರೆದು ತನ್ನ ಸ್ನೇಹಿತ ಪರೇಶಬಾಬುವಿನ ಬಳಿಗೆ ಹೋಗಿ ಬಾ ಎನ್ನುವನು. ಪರೇಶಬಾಬುವೇ ವಿನಯನ ಪರಿಚಯದ ಆ ಬ್ರಾಹ್ಮ ಸಮಾಜದ ವೃದ್ಧ. ಅವನ ಜೊತೆಯಲ್ಲಿ ಮೊದಲು ವಿನಯನು ನೋಡಿದ ಸುಚರಿತೆ ಅವನು ಸಾಕಿದ್ದ ಒಬ್ಬ ಹುಡುಗಿ. ಇವಳು ಬಹಳ ವಿವೇಕಿ ಮತ್ತು ಗುಣಶಾಲಿ. ಪರೇಶಬಾಬುವಿಗೆ ಮೂವರು ಹೆಣ್ಣು ಮಕ್ಕಳಿದಾರೆ; ಒಬ್ಬ ಮಗನಿದಾನೆ. ಸುಚರಿತೆಯನ್ನು ಬ್ರಾಹ್ಮ ಸಮಾಜದ ಹರಣ ಎಂಬ ಯುವಕನಿಗೆ ಕೊಡುವುದೆಂದು ಮನೆಯಲ್ಲಿ ಒಂದು ಯೋಚನೆ. ಗೋರ ಕೃಷ್ಣದಯಾಳುವಿನ ಅಪ್ಪಣೆಯ ಪ್ರಕಾರ ಪರೇಶ ಬಾಬುವಿನ ಮನೆಗೆ ಒಂದು ದಿನ ಬರುತ್ತಾನೆ; ಅಂದಿನ ಬೆಳಿಗ್ಗೆ ಅವನು ಒಂದು ದೋಣಿಯಲ್ಲಿ ಒಬ್ಬ ಇಂಗ್ಲಿಷರವನೂ ಅವನ ಜತೆಯಲ್ಲಿ ಇದ್ದ ಇಂಗ್ಲಿಷ್ ಶಿಕ್ಷಿತ ಬಂಗಾಳಿಯೂ ನಮ್ಮ ಜನರನ್ನು ನೋಡಿ ಹೀಯಾಳಿಸು

ತ್ತಿದ್ದದನ್ನು ಕಂಡು ಬಹಳ ಕೋಪಬಂದು ಅವರನ್ನು ಬಯ್ದಿದ್ದಾನೆ. ಅವರಲ್ಲಿ ಇಂಗ್ಲಿಷರವನು ಉತ್ತರ ಹೇಳದೆ ಸುಮ್ಮನಿದ್ದು ಹೊರಟು ಹೋಗುವಾಗ ಕ್ಷಮೆಯನ್ನು ಬೇಡಿ ಹೋದನು. ಗೋರನು ಪರೇಶ ಬಾಬುವಿನ ಮನೆಗೆ ಬಂದಾಗ ಈ ಮಾತು ಬರುತ್ತದೆ. ಹರಣ ಬಂಗಾಳಿಗಳು ಇಂಗ್ಲಿಷರಷ್ಟು ಗಟ್ಟಿಗರಲ್ಲವೆಂದು ಹೇಳುತ್ತಾನೆ. ಗೋರ ಅವನನ್ನು ಹಿಡಿದು ಒದರುತ್ತಾನೆ. ಇವನ ಮಾತಿನಲ್ಲಿ ಪೂರ್ವಾಚಾರದ ಅಂಧ ಶ್ರದ್ಧೆಯ ಭಾಗ ಯಾವುದಿದೆಯೋ ಅದು ಸುಚರಿತೆಗೆ ಒಪ್ಪುವುದಿಲ್ಲ. ಆದರೆ ಅವಳಿಗೆ ದೇಶದಮೇಲೆ ಪ್ರೇಮ; ಆದದರಿಂದ ಅಷ್ಟು ಮಾತನ್ನು ಅವಳು ಮೆಚ್ಚುತ್ತಾಳೆ. ಹೀಗಿರುವಲ್ಲಿ ಗೋರನ ಅಣ್ಣ ತನ್ನ ಮಗಳನ್ನು ವಿನಯನಿಗೆ ಮದುವೆಮಾಡಿಕೊಡಬೇಕೆಂದು ಅಪೇಕ್ಷಿಸುತ್ತಾನೆ; ವಿನಯನಿಗೆ ಎರಡು ಮಾತು ಹೇಳು ಎಂದು ಗೋರನನ್ನು ಬೇಡುತ್ತಾನೆ. ಗೋರ ಇದಕ್ಕೆ ಒಪ್ಪುವುದಿಲ್ಲ. ವಿನಯನು ಆಚಾರಶೀಲನಾಗಿ ಇರುವ ಸಂಭವವಿಲ್ಲ, ಅವನಿಗೆ ಮಗಳನ್ನು ಕೊಡುವ ಮಾತು ಬೇಡ, ಎನ್ನುತ್ತಾನೆ. ಗೋರನಿಗೂ ವಿನಯನಿಗೂ ಉಂಟಾಯಿತೆಂದು ಹಿಂದೆ ಹೇಳಿದ ಭಿನ್ನಭಾವವು ಇದ್ದೇ ಇರುತ್ತದೆ; ಆದರೆ ಆನಂದಮಯಿಯ ಅಪೇಕ್ಷೆಯಂತೆ ಅವರು ವಿಶ್ವಾಸವಾಗಿ ನಡೆದುಕೊಳ್ಳುತ್ತಾರೆ. ವಿನಯ ಸುಚರಿತೆಯ ಪರಿಚಯದಿಂದ ತನಗೆ ಆದ ಅಂತರಂಗದ ಸಂಸ್ಕಾರವನ್ನು ಗೋರನಿಗೆ ಸೂಚಿಸುತ್ತಾನೆ. ಗೋರನಿಗೆ ಇದು ಏನಿರಬಹುದೆಂದು ತೋರುತ್ತದೆ. ಆದರೆ ಅವನು ದೇಶದ ಪ್ರೇಮ ಮುಖ್ಯ, ಒಂದು ವ್ಯಕ್ತಿಯ ಪ್ರೇಮಕ್ಕಾಗಿ ದೇಶದ ಪ್ರೇಮವನ್ನು ಮರೆಯಲಾಗದು, ಎಂದು ಸೂಚಿಸುತ್ತಾನೆ. ಹಾಗೆಯೇ ಒಂದು ದಿನ ಗೋರ ವಿನಯನಿಗೆ ತನ್ನ ಅಣ್ಣನ ಮಗಳನ್ನು ಮದುವೆಯಾಗೆಂದು ಹೇಳುತ್ತಾನೆ. ವಿನಯ ಒಪ್ಪಿಕೊಳ್ಳುತ್ತಾನೆ. ಆದರೆ ಅವನಿಗೆ ನಿಜವಾಗಿಯೂ ಇಷ್ಟವಿಲ್ಲ. ವಿನಯನು ಪರೇಶಬಾಬುವಿನ ಮನೆಗೆ ಹೋಗುತ್ತ ಬರುತ್ತ ಇರಲು, ಅವನನ್ನು ನೋಡಿಕೊಳ್ಳುವುದಕ್ಕೆಂದು ಗೋರಾ ಹೋಗುತ್ತ ಬರುತ್ತ ತಾನೇ ಸುಚರಿತೆಯ ಗುಣಕ್ಕೆ ಸೋಲುತ್ತಾನೆ. ಅವಳಿಗೂ ಗೋರನ ವಿಷಯದಲ್ಲಿ ಒಂದು ಹೆಚ್ಚಿನ ಗೌರವಭಾವವುಂಟಾಗುತ್ತದೆ. ಮದುವೆಯಾಗಕೂಡದೆಂದು ಇದ್ದ

ಗೋರ ತನ್ನ ಮನಸ್ಸಿನ ಸ್ಥಿತಿಯನ್ನು ನೋಡಿ ದೇಶಯಾತ್ರೆ ಹೋಗಿ ಬರುವುದೆಂದು ನಿರ್ಧರಿಸಿಕೊಳ್ಳುತ್ತಾನೆ. ಇದೇ ಸಮಯದಲ್ಲಿ ಪರೇಶ ಬಾಬುವಿನ ಮನೆಯವರು ಅವರ ಪರಿಚಯದ ಒಬ್ಬ ಇಂಗ್ಲೀಷ್ ಮ್ಯಾಜಿಸ್ಟ್ರೇಟರ ಮನೆಯಲ್ಲಿ ಒಂದು ನಾಟಕವನ್ನು ಆಡುವುದಾಗಿ ಒಪ್ಪಿಕೊಳ್ಳುತ್ತಾರೆ. ಆ ನಾಟಕದಲ್ಲಿ ಇವರು ವಿನಯನನ್ನು ಒಬ್ಬ ನಟನನ್ನಾಗಿ ಸೇರಿಸಿಕೊಳ್ಳುತ್ತಾರೆ. ಪರೇಶಬಾಬುವಿನ ಮೂರನೆಯ ಮಗಳು ಲಲಿತೆಗೂ ವಿನಯನಿಗೂ ವಿಶೇಷ ಪ್ರೇಮವುಂಟಾಗಿರುತ್ತದೆ. ಇವರು ಇಲ್ಲಿ ನಾಟಕವಾಡುವುದಕ್ಕೆಂದು ಬಂದಿರುವ ವೇಳೆಗೆ ಸರಿಯಾಗಿ ಗೋರ ದೇಶ ಯಾತ್ರೆಯ ಕಾರಣದಿಂದ ಅಲ್ಲಿಗೆ ಬಂದಿರುತ್ತಾನೆ. ಆ ಪ್ರಾಂತದ ಕೆಲವು ನೀಲಿ ತೋಟಗಳಲ್ಲಿ ಪರದೇಶದ ಮಾಲೀಕರಿಗೂ ದೇಶೀಯ ಕೂಲಿಗಾರರಿಗೂ ಮನಸ್ತಾಪಗಳಿರುತ್ತವೆ. ದೇಶಯಾತ್ರೆಗೆ ಹೊರಟ ಗೋರ ಕೂಲಿಕಾರರ ಪಕ್ಷವನ್ನು ವಹಿಸಿ ಮಾಲೀಕರಿಗೆ ಅನನುಕೂಲಮಾಡಿರುತ್ತಾನೆ, ಮ್ಯಾಜಿಸ್ಟ್ರೇಟರನ್ನು ಪ್ರತಿಭಟಿಸುತ್ತಾನೆ. ಅದೇ ಸಂದರ್ಭದಲ್ಲಿ ವಿದ್ಯಾರ್ಥಿಗಳು ಕೆಲವರನ್ನು ಒಂದು ನೆಪಮಾತ್ರದ ತಪ್ಪಿಗಾಗಿ ಪೋಲೀಸಿನವರು ಹೊಡೆದಿರುವರು. ವಿದ್ಯಾರ್ಥಿಗಳ ಪರವನ್ನು ವಹಿಸಿ ಗೋರ ಪೋಲೀಸಿನವರನ್ನು ತಡೆದಿರುತ್ತಾನೆ. ಅವರು ಅವನನ್ನು ಅಪರಾಧಿಯಾಗಿ ಮಾಡಿ ಕೋರ್ಟಿಗೆ ಎಳೆತರುತ್ತಾರೆ. ಆ ಇಂಗ್ಲೀಷ್ ಮ್ಯಾಜಿಸ್ಟ್ರೇಟನು ಅವನನ್ನು ಸೆರೆಮನೆಗೆ ಕಳುಹಿಸುತ್ತಾನೆ. ಈ ಮ್ಯಾಜಿಸ್ಟ್ರೇಟನ ಮನೆಯಲ್ಲಿ ನಾಟಕವಾಡುವುದು ಹೇಗೆ ಎಂದು ಲಲಿತೆ ತಾನು ನಾಟಕದಲ್ಲಿ ಸೇರುವುದಿಲ್ಲವೆನ್ನುತ್ತಾಳೆ. ವಿನಯನೂ ಅವಳೂ ಕಲಕತೆಗೆ ಬಂದುಬಿಡುತ್ತಾರೆ. ಹರಣ ಆಂಗ್ಲ ಪ್ರೇಮಿ. ಅವನಿಗೆ ಇದೆಲ್ಲ ಬಹಳ ಅಸಹ್ಯ. ಅಲ್ಲದೆ ಅವನು ಬ್ರಾಹ್ಮಸಮಾಜದ ಶ್ರದ್ಧಾವಂತರಲ್ಲಿ ಸೇರಿದವನು. ಪರೇಶಬಾಬು ಬ್ರಾಹ್ಮಣರನ್ನು ತನ್ನ ಮನೆಯೊಳಕ್ಕೆ ಬಿಟ್ಟು ಬ್ರಾಹ್ಮಸಮಾಜದ ಶುದ್ಧತೆಗೆ ಕುಂದಕವನ್ನು ತರುತ್ತಿದ್ದಾನೆಂದು ಹರಣ ಗಲಭೆ ಹಚ್ಚುತ್ತಾನೆ. ಎಲ್ಲರೂ ಹಿಂದಕ್ಕೆ ಬಂದಮೇಲೆ ಸುಚರಿತೆಯೂ ಲಲಿತೆಯೂ ಆನಂದಮಯಿಯ ಪರಿಚಯವನ್ನು ಮಾಡಿಕೊಳ್ಳುತ್ತಾರೆ. ಈ ವೇಳೆಗೆ ಸುಚರಿತೆಯ ಚಿಕ್ಕಮ್ಮ ಪರೇಶಬಾಬುವಿನ ಮನೆಗೆ ಬಂದು ಇಳಿದುಕೊಂಡಿರುತ್ತಾಳೆ. ಈಕೆ ಪೂರ್ವಾ

ಚಾರದ ಬ್ರಾಹ್ಮಣ ಸ್ತ್ರೀ. ಅವಳ ಜೊತೆಯಲ್ಲಿರುತ್ತಾ ಸುಚರಿತೆ ಬ್ರಾಹ್ಮ ಸಮಾಜದ ಪದ್ಧತಿಗಳನ್ನು ಬಿಡದಿದ್ದರೂ ಆಚಾರವಂತರ ಪದ್ಧತಿಯ ವಿಷಯದಲ್ಲಿ ಸಹನೆ ತೋರುತ್ತಾಳೆ. ಪರೇಶಬಾಬುಗಳು ಮನೆಯಲ್ಲಿ ಹಿಂದೂ ಆಚಾರವನ್ನು ಒಪ್ಪಿಕೊಂಡಿದಾರೆಂದು ಹರಣ ಗಲಭೆ ಮಾಡುತ್ತಾನೆ. ಇದರಿಂದ ಸುಚರಿತೆಯೂ ಚಿಕ್ಕಮ್ಮನೂ ಬೇರೊಂದು ಮನೆಗೆ ಹೋಗಿ ನಿಲ್ಲುತ್ತಾರೆ. ಲಲಿತೆ ಸುಚರಿತೆಯ ಸಹಾಯದಿಂದ ಒಂದು ಪಾಠಶಾಲೆಯನ್ನು ತೆರೆಯಲು ನೋಡುತ್ತಾಳೆ. ಸುಚರಿತೆಯ ಮೇಲೆ ಕ್ರೋಧದಿಂದ ಹರಣ ಅದು ಆಗದಹಾಗೆ ಮಾಡುತ್ತಾನೆ. ಮಧ್ಯೆ ತಾನು ಪರೇಶಬಾಬುವಿನ ಮನೆಗೆ ಹೋಗಿ ಬಂದದರಿಂದ ಅವರ ಮನೆಯ ಹೆಣ್ಣು ಮಕ್ಕಳ ಹೆಸರು ಹೊರಗೆ ಬಂದಿತೆಂದು ವಿನಯ ನೊಂದುಕೊಳ್ಳುತ್ತಾನೆ; ಲಲಿತೆಯನ್ನು ಮದುವೆಯಾಗುವ ಯೋಚನೆಮಾಡುತ್ತಾನೆ. ಈ ವೇಳೆಗೆ ಗೋರ ಸೆರೆಮನೆಯಿಂದ ಹೊರಗೆ ಬರುತ್ತಾನೆ. ಅವನಿಗೂ ಸುಚರಿತೆಗೂ ಪರಿಚಯ ಬೆಳೆಯುತ್ತದೆ. ವಿನಯ ಲಲಿತೆಯನ್ನು ಮದುವೆಯಾಗುವುದಕ್ಕಾಗಿ ಬ್ರಾಹ್ಮ ಸಮಾಜಕ್ಕೆ ಸೇರಲು ಅಪೇಕ್ಷಿಸುತ್ತಾನೆ; ತನಗೆ ಉಪದೇಶಮಾಡಬೇಕೆಂದು ಪರೇಶಬಾಬುವನ್ನು ಕೇಳುತ್ತಾನೆ. ತನ್ನ ಸಂಸಾರದ ಪ್ರಯೋಜನಕ್ಕಾಗಿ ತಾನು ಈ ಉಪದೇಶ ಮಾಡುವುದಿಲ್ಲವೆಂದು ಪರೇಶಬಾಬು ಹೇಳುತ್ತಾನೆ. ವಿನಯನು ಬ್ರಾಹ್ಮ ಸಮಾಜಕ್ಕೆ ಸೇರದೆಯೇ ಲಲಿತೆಯನ್ನು ಮದುವೆಯಾಗುವುದಾಗಿ ಅವರಿಬ್ಬರೂ ಏರ್ಪಾಡು ಮಾಡಿಕೊಳ್ಳುತ್ತಾರೆ. ಮದುವೆಯಲ್ಲಿ ವಿಗ್ರಹಾರಾಧನೆ ಆವಶ್ಯಕವೆಂದಾಗ ಲಲಿತೆ ಹಿಂದೆಗೆಯುತ್ತಾಳೆ. ಆಮೇಲೆ ವಿಗ್ರಹ ಪೂಜೆ ತನಗೆ ಅವಶ್ಯಕವಲ್ಲವೆಂಬ ಕಾರಣದಿಂದ ಅದನ್ನು ಬಿಟ್ಟುಬಿಡುವುದಾಗಿ ವಿನಯ ಹೇಳುತ್ತಾನೆ. ಅದರಮೇಲೆ ಅವರವರಿಗೆ ಮದುವೆ ಏರ್ಪಾಡಾಗುತ್ತದೆ. ಸುಚರಿತೆಯ ಚಿಕ್ಕಮ್ಮ ತನ್ನ ಸಂಬಂಧದ ಕೈಲಾಸ ಎಂಬಾತನನ್ನು ಕರೆಯಿಸಿ ಅವನನ್ನು ಮದುವೆಯಾಗೆಂದು ಸುಚರಿತೆಗೆ ಹೇಳುತ್ತಾಳೆ. ಅವಳು ಒಪ್ಪುವುದಿಲ್ಲ. ಈ ಮಧ್ಯೆ ಕೃಷ್ಣದಯಾಳ ಕಾಯಿಲೆಬೀಳುತ್ತಾನೆ; ಗೋರನನ್ನು ಕರೆದು ಅವನು ಹಿಂದೂ ಅಲ್ಲವೆಂದೂ ಒಬ್ಬ ಐರಿಷ್ ಸೈನಿಕನ ಮಗನೆಂದೂ ಸಿಪಾಯಿಗಳ ದಂಗೆಯ ಕಾಲದಲ್ಲಿ ಆ ಐರಿಷ್

ಸೈನಿಕನ ಹೆಂಡತಿ ಇವರ ಮನೆಯಲ್ಲಿ ಅವಿತುಕೊಂಡಿದ್ದಳೆಂದೂ ತುಂಬಿದ ಗರ್ಭಿಣಿ ಈ ಮಗುವನ್ನು ಹೆತ್ತು ಸತ್ತಳೆಂದೂ ಮಕ್ಕಳಿಲ್ಲದೆ ಇದ್ದ ಆನಂದಮಯಿ ಈ ಮಗುವನ್ನು ತೆಗೆದುಕೊಂಡು ತನ್ನದೆಂಬಂತೆ ಸಾಕಿದ ಳೆಂದೂ ಹೇಳುತ್ತಾನೆ. ಹಿಂದೂ ಧರ್ಮದ ಪ್ರಚಂಡ ಸೇವಕನಾದ ಗೋರ ಹಿಂದುವೇ ಅಲ್ಲ; ಇವನ ಹುಟ್ಟಿನ ನಿಜ ತಿಳಿದಮೇಲೆ ಇವನನ್ನು ಯಾರೂ ಹಿಂದೂ ದೇವಾಲಯಕ್ಕೆ ಬಿಡುವಂತಿಲ್ಲ. ಗೋರಾ ಈ ಮಾತನ್ನು ಕೇಳಿ ಒಂದು ಬಂಧನದಿಂದ ವಿಮೋಚನದೊರೆತಂತೆ ಭಾವಿಸಿ ಇದುವರೆಗೆ ನನಗೆ ಪೂರ್ವಾಚಾರದ ಜನ ಮಾತ್ರ ಒಪ್ಪುವಂತಿದ್ದರು, ಇಂದಿನಿಂದ ಒಟ್ಟು ಇಂಡಿಯಾದೇಶವೇ ನನ್ನದು, ಎನ್ನುವನು. ಆಮೇಲೆ ಸುಚರಿತೆಯನ್ನು ಮದುವೆಯಾಗುವನು.

ಮುರಿದ ನೌಕದ ಕತೆಗೆ ಹೇಗೋ ಹಾಗೆ ಈ ಕತೆಗೂ ಬುಡ ಭದ್ರ ವಿಲ್ಲ. ಒಬ್ಬ ಬ್ರಾಹ್ಮಣನ ಮನೆಯಲ್ಲಿ ಒಬ್ಬ ಐರಿಷ್ ಸೇನಾನಾಯಕನ ಹೆಂಡತಿ ಅವಿತುಕೊಳ್ಳೋಣ, ಅವಳು ಮಗುವನ್ನು ಹೆತ್ತು ಸಾಯೋಣ, ಆ ಮಗುವನ್ನು ಆ ಬ್ರಾಹ್ಮಣನ ಹೆಂಡತಿ ಸಾಕೋಣ, ಆ ಮಗ ತನ್ನ ಹುಟ್ಟಿನ ಸಮಾಚಾರ ತಿಳಿಯದೆ ಹದಿನೆಂಟು ಇಪ್ಪತ್ತು ವರ್ಷ ಬೆಳೆ ಯೋಣ: ಇದೆಲ್ಲ ಸ್ವಲ್ಪಮಟ್ಟಿಗೆ ಅಸಂಭವವೆಂದು ತೋರುತ್ತದೆ. ಆದರೆ ಸಾಮಾನ್ಯವಾಗಿ ಅಸಂಭವವಾದ ಈ ಸಂಗತಿ ನಡೆದಿದ್ದರೂ ನಡೆದಿರಬಹು ದೆನ್ನುವುದಕ್ಕೆ ಗ್ರಂಥದಲ್ಲಿ ಸಾಕಾದ ಸಾಮಗ್ರಿ ಇದೆ. ಇದು ನಡೆದದ್ದು ಸಿಪಾಯಿಗಳ ದಂಗೆಯ ದಿನದಲ್ಲಿ. ಆಗ್ಗೆ ಈ ಬ್ರಾಹ್ಮಣ ಕೃಷ್ಣದಯಾಳನು ಆಚಾರಶೀಲನಾಗಿರಲಿಲ್ಲ, ಅನಾಚಾರದಲ್ಲಿಯೇ ಇದ್ದನು. ಪರಂಗಿಗಳಲ್ಲಿ ಹೋಗಿಬರುವುದು ಅವನಿಗೆ ಒಂದು ಹೆಮ್ಮೆಯಾಗಿತ್ತು. ಆದದರಿಂದ ಜೀವಕ್ಕೆ ತೊಂದರೆ ಬಂದಾಗ ಆ ವಿದೇಶೀ ಸ್ತ್ರೀ ಇವನ ಮನೆಯಲ್ಲಿ ಬಂದು ನಿಂತರೆ ಆಶ್ಚರ್ಯವಿಲ್ಲ. ಅವಳು ಹೆತ್ತು ತೀರಿಹೋದಾಗ ಕೃಷ್ಣ ದಯಾಳನ ಪತ್ನಿ ತನಗೆ ಮಕ್ಕಳಿಲ್ಲದೆ ಮಕ್ಕಳನ್ನು ಕೊಡೆಂದು ದೇವರನ್ನು ಪ್ರಾರ್ಥಿಸುತ್ತಿದ್ದವಳು ಮಗುವನ್ನು ಕೈಗೆ ತೆಗೆದುಕೊಂಡು ಸಾಕಿದ್ದು ಆಶ್ಚರ್ಯವಾಗಲಾರದು. ಇದಿಷ್ಟನ್ನೂ ಒಪ್ಪಿಕೊಂಡಮೇಲೆ ಕತೆ ಚೆನ್ನಾ ಗಿಯೇ ಕಾಣುತ್ತದೆ. ಮುರಿದ ನೌಕದಲ್ಲಿ ಹೇಗೋ ಹಾಗೆಯೇ ಇಲ್ಲಿಯೂ

ಬ್ರಾಹ್ಮ ಸಮಾಜ ಹಿಂದೂ ಸಮಾಜಗಳ ಪರಸ್ಪರ ಸಂಬಂಧ ಚರ್ಚೆಗೆ ಬರುತ್ತದೆ. ಅಲ್ಲಿ ಹೇಗೋ ಹಾಗೆ ಇಲ್ಲಿಯೂ ಬ್ರಾಹ್ಮಸಮಾಜ ಹೆಚ್ಚಿನ ಸಂಸ್ಕಾರದ ಸಮಾಜ ಎಂದು ಭಾವನೆ ಪ್ರಕಟವಾಗಿದೆ. ಆದರೆ ಇಲ್ಲಿಯ ವ್ಯಕ್ತಿಗಳ ಸ್ವಭಾವ ಅಲ್ಲಿಗಿಂತ ಚೆನ್ನಾಗಿ ಸ್ಫುಟವಾಗಿ ಚಿತ್ರಿಸಲ್ಪಟ್ಟಿದೆ. ಇಲ್ಲಿ ಆಚಾರಶೀಲರ ಮಾತು ಗೋರನ ಬಾಯಿಂದ ಶಕ್ತಿಯುಕ್ತವಾಗಿ ಬರುತ್ತದೆ. ಸಂಗತಿಗಳ ಸಹಜ ಭಾವದಲ್ಲಿ, ಸ್ವಭಾವಗಳ ನಿರೂಪಣೆಯಲ್ಲಿ, ಇಲ್ಲಿ ಕೈ ಕುದುರಿರುವುದು ಕಾಣುತ್ತದೆ. ಗೋರ, ವಿನಯ, ಸುಚರಿತೆ, ವರದಾದೇವಿ, ಹರಣ, ಲಲಿತಾ, ಇವರೆಲ್ಲ ಸಾಮಾನ್ಯವಾಗಿ ನಾವು ಕಾಣಬಹುದಾದ ವ್ಯಕ್ತಿಗಳು. ನನ್ನ ದೇಶವೆಂದಮೇಲೆ ಅದರಲ್ಲಿರುವುದನ್ನೆಲ್ಲಾ ನಾನು ಒಪ್ಪಿಕೊಳ್ಳಬೇಕು, ಬ್ರಾಹ್ಮಸಮಾಜದಂತಹ ಸಂಸ್ಕೃತ ಸಮಾಜ ದೇಶದ ವಿಷಯದಲ್ಲಿ ಸಾಕಾದಷ್ಟು ಪ್ರೇಮವನ್ನು ತೋರಿಸುವುದಿಲ್ಲ, ಇಂಗ್ಲೀಷರೊಂದಿಗೆ ಸ್ನೇಹವಾಗಿ ನಡೆದುಕೊಳ್ಳುವುದು ದೇಶ ಪ್ರೇಮಿಗೆ ಸಾಧ್ಯವಲ್ಲ, ಎನ್ನುವುದು ಗೋರನೊಬ್ಬನ ಮಾತಲ್ಲ. ಹಾಗೆ ಹೇಳುವವರು ನಮ್ಮಲ್ಲಿ ಬಹಳ ಮಂದಿ ಇದಾರೆ. ಆಚಾರದಲ್ಲಿರುತ್ತಾ ಸುಧಾರಣೆಯಲ್ಲಿ ಮನಸ್ಸು ಒಲಿಯುತ್ತಾ ಹೀಗೆ ನಿಲ್ಲಲಾರದೆ ಹಾಗೆ ನಡೆಯಲಾರದೆ ವಿನಯನಂತೆ ತೊಳಲುವ ಸಜ್ಜನರು ನಮ್ಮಲ್ಲಿ ಹಲವರುಂಟು. ಸುಚರಿತೆ ಹೇಮನಳಿನಿಯ ಇನ್ನೊಂದು ಚಿತ್ರ; ಆದರೆ ಅಲ್ಲಿ ಅಸ್ಪಷ್ಟವಾಗಿರುವ ರೇಖೆಗಳು ಇಲ್ಲಿ ಸ್ಪಷ್ಟವಾಗಿವೆ, ಸ್ಫುಟವಾಗಿವೆ. ಅಲ್ಲಿಯ ವಿನ್ಯಾಸದಲ್ಲಿ ಕೈ ಸ್ವಲ್ಪ ನಡುಗುತ್ತಿದೆ; ಇಲ್ಲಿ ಆ ನಡುಕವಿಲ್ಲ. ಗೆರೆ ಧಾರಾಳವಾಗಿ ಸರಳವಾಗಿ ಬಂದಿದೆ. ವರದಾದೇವಿಯಂಥ ಹೆಣ್ಣುಮಕ್ಕಳ ತಾಯದಿರು ನಮ್ಮಲ್ಲಿ ಬಹುಮಂದಿ ಇರುವರು. ನಮ್ಮ ದೇಶೀಯರನ್ನು ಬಯ್ಯುತ್ತ ಪರದೇಶೀಯರನ್ನು ಹೊಗಳುತ್ತ ತಾವು ಗುಣೈಕಪಕ್ಷಪಾತಿಗಳೆಂಬ ಭ್ರಮೆಯಿಂದ ಹೆಮ್ಮೆಪಡುತ್ತ ತಮ್ಮ ಸೋದರರೊಂದಿಗೆ ದಾಯಾದರಂತೆ ನಡೆದುಕೊಳ್ಳುವ ಹರಣರೂ ನಮಗೆ ಅಪೂರ್ವವಲ್ಲ. ಈ ಎಲ್ಲ ವ್ಯಕ್ತಿಗಳಲ್ಲಿ ಗ್ರಂಥಕಾರನು ತನ್ನ ಸುತ್ತಣ ಪ್ರಪಂಚದ ಜನರನ್ನು ಚಿತ್ರಿಸಿ ಬರೆದನು. ಈ ಜನರ ವ್ಯವಹಾರದಲ್ಲಿ ಬರುವ ತೊಡಕುಗಳು ನಮಗೆಲ್ಲ ಪರಿಚಿತವಾದವು. ಇವುಗಳ ಚರ್ಚೆ ಎಲ್ಲರಿಗೂ ರುಚಿಸತಕ್ಕದ್ದು. ಬ್ರಾಹ್ಮಣ

ತರುಣನು ಬ್ರಾಹ್ಮ ಸಮಾಜದ ಹುಡುಗಿಯನ್ನು ಮದುವೆಯಾಗಬಹುದೇ ಎಂಬ ಪ್ರಶ್ನೆ ಎಲ್ಲರಿಗೂ ಮುಖ್ಯವಲ್ಲದಿದ್ದರೂ ಗೋರನು ಆಚಾರದ ಪಕ್ಷವಾಗಿ ಹೇಳುವ ಮಾತು, ವಿನಯನು ಸುಧಾರಣೆಯ ಪಕ್ಷ ಹೇಳುವ ಮಾತು, ಹರಣನು ನಮ್ಮ ಜನರನ್ನು ದೂಷಿಸಿ ನುಡಿಯುವ ಮಾತು, ಇವೆಲ್ಲ ನಮ್ಮ ಪ್ರಕೃತ ಜೀವನದಲ್ಲಿ ಪ್ರಮುಖವಾಗಿವೆ. ನಮ್ಮ ಮನಸ್ಸು ಹೇಳುವುದನ್ನು ಇಲ್ಲಿ ಈ ವ್ಯಕ್ತಿಗಳು ಹೇಳುತ್ತಿದಾರೆ. ಗೋರ ನಮಗೆ ಬೇಕಾದವನು, ಹರಣ ಆಗದವನು, ವಿನಯ ಒಳ್ಳೆಯ ಹುಡುಗ: ಹೀಗೆ ಮನಸ್ಸು ಇವರಿಗೆ ಒಂದೊಂದು ಸ್ಥಾನವನ್ನು ಕೊಟ್ಟು ಕತೆಯ ವ್ಯಕ್ತಿಗಳೊಂದಿಗೆ ಬಂಧುತ್ವವನ್ನು ಬೆಳಸುತ್ತದೆ. ಇದೆಲ್ಲ ಗ್ರಂಥಕರ್ತನ ಕಥನ ಕೌಶಲವನ್ನು ವ್ಯಕ್ತಗೊಳಿಸುತ್ತದೆ. ದೇಶದ ಜೀವನದ ವಿಷಯದಲ್ಲಿ ಬರಬಹುದಾದ ಚರ್ಚೆಗಳನ್ನೆಲ್ಲಾ ತರುವಂತೆ ಇಲ್ಲಿ ಕಥೆಯನ್ನು ಬೆಳಸಿದೆ. ಹಿಂದೂ ಧರ್ಮದಲ್ಲಿ ದೋಷಗಳಿವೆಯಲ್ಲಾ, ನಾವು ಅದರಲ್ಲಿ ಹೇಗೆ ಇರಬಹುದು? ಪರಂಗಿಯವರು ನಮ್ಮ ಜನರನ್ನು ಎಷ್ಟು ಹೀನವಾಗಿ ಕಾಣುತ್ತಾರೆ, ಎಷ್ಟು ಹೆಮ್ಮೆಯಿಂದ ನಡೆದುಕೊಳ್ಳುತ್ತಾರೆ! ಧರ್ಮವೂ ದೇಶವೂ ಉದ್ಧಾರವಾಗಬೇಕಾದರೆ ನಾವು ಏನು ಮಾಡಬೇಕು? ಈ ಮೊದಲಾದ ವಿಷಯವೆಲ್ಲಾ ಕತೆಯಲ್ಲಿ ಬರುವ ಸಂದರ್ಭಗಳಲ್ಲಿ ಪ್ರಕೃತವಾಗುತ್ತವೆ. ಆಯಾ ಪಾತ್ರಗಳು ತಮ್ಮ ತಮ್ಮ ಅಭಿಪ್ರಾಯವನ್ನು ಅಲ್ಲಿ ಹೇಳುತ್ತವೆ. ಇದರಿಂದ ಎಲ್ಲಾ ಪಕ್ಷಗಳ ಭಾವವೂ ಅಲ್ಲಿ ಪ್ರಕಾಶವಾಗುತ್ತದೆ; ಕತೆಯಲ್ಲಿ ಒಂದು ರೀತಿಯ ಸ್ವಾರಸ್ಯ ಹುಟ್ಟುತ್ತದೆ.

ಇದುವರೆಗೆ ಹೇಳಿರುವ ಮಾತಿನಿಂದ ಈ ಕತೆಯ ಬಲವಿರುವುದು ಇದರ ಸಂಗತಿಗಳಲ್ಲಿ ಅಲ್ಲ, ಇದರ ಸಂಭಾಷಣೆಗಳಲ್ಲಿ, ಎಂದು ವ್ಯಕ್ತವಾಗಿರಬೇಕು. ಇದು ಒಂದು ದೃಷ್ಟಿಯಿಂದ ದೌರ್ಬಲ್ಯವೇ. ಕತೆಯೆನ್ನುವುದು ಸಂಗತಿಗಳ ಕಟ್ಟಾಗಿರಬೇಕು. ಆ ಸಂಗತಿಗಳು ಅಂತರಿಕವಾಗಿರಬಹುದು, ಬಾಹ್ಯವಾಗಿರಬಹುದು. ಇವೆರಡೂ ಅಲ್ಲದೆ ಸಂಭಾಷಣೆಗಳ ಕಟ್ಟಾದರೆ ಅದು ಬೇಸರವನ್ನುಂಟುಮಾಡುತ್ತದೆ. ಗೋರಾ ಕತೆ ಇಷ್ಟು ಚೆನ್ನಾಗಿ ಬರೆದಿರತಕ್ಕದಾದರೂ ಅನೇಕರು ಈ ಕಾರಣದಿಂದ ಅದನ್ನು

ಓದಲಾರದೆ ಬೇಸರಪಟ್ಟಿದಾರೆ. ಒಬ್ಬರಾದಮೇಲೆ ಒಬ್ಬರು ಬಂದು ಇವನೊಂದಿಗೆ ಅವನು, ಅವನೊಂದಿಗೆ ಇನ್ನೊಬ್ಬ, ಇವರೆಲ್ಲರೊಂದಿಗೆ ಒಬ್ಬಳು, ಆಮೇಲೆ ಇನ್ನೊಬ್ಬಳು, ಮಾತನಾಡುತ್ತ ನಿಂತರೆ: ಸ್ವಲ್ಪ ಹೊತ್ತು ಕೇಳಬಹುದು, ಇನ್ನು ಸ್ವಲ್ಪಹೊತ್ತು ತಡೆದುಕೊಳ್ಳಬಹುದು, ಆಮೇಲೆ ಸಾಕಪ್ಪಾ ಈ ಚರ್ಚೆ ಎನ್ನಿಸುತ್ತದೆ. ಅಲ್ಲದೆ ಎಷ್ಟೋ ಕುಶಲತೆಯಿಂದ ಮಾತುಗಳನ್ನು ತಿದ್ದಿದರೂ ಇಂಥ ವಾದಗಳಲ್ಲಿ ವೈಯಕ್ತಿಕಾಂಶ ಕಡಮೆ; ಪಕ್ಷಗಳ ಭಾವವೇ ಹೆಚ್ಚು. ಎಂದರೆ ಹಿಂದೂ ಧರ್ಮವನ್ನು ಒಳ್ಳೆಯದೆನ್ನುವವರದು ಒಂದು ಗುಂಪು, ಅಲ್ಲವೆನ್ನುವವರದು ಒಂದು ಗುಂಪು. ಮಾತು ಈ ಪಕ್ಷ ಆ ಪಕ್ಷದ ಮಾತು. ಇದು ಗುಂಪಿನ ಮಾತಾಗುತ್ತದೆಯೇ ಹೊರತು ಒಬ್ಬನ ಮಾತಾಗುವುದಿಲ್ಲ. ಅದರಲ್ಲೂ ಅದು ಗ್ರಂಥಕರ್ತನ ಮಾತಾಗಿರುವ ಸಂಭವ ಬಹಳ. ಇದರಿಂದ ಒಂದೆರಡು ಸಂಭಾಷಣೆ ಮುಗಿದಮೇಲೆ ಮಾತನಾಡುವವರು ಗ್ರಂಥಕರ್ತನ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಗೊಂಬೆಗಳಂತೆ ಕಾಣುತ್ತಾರೆ. ಇದು ಈ ಕತೆಯಲ್ಲಿ ಒಂದು ಕೊರತೆಯೆನ್ನಬೇಕು. ಆದರೂ ಓದುವವರ ಮನಸ್ಸನ್ನು ಒಲಿಸಿಕೊಂಡು ಅದನ್ನು ಸನ್ನಿವೇಶದಿಂದ ಸನ್ನಿವೇಶಕ್ಕೆ ಒಯ್ಯುವ ಇಲ್ಲಿಯ ರೀತಿ ಅಪೂರ್ವವಾದದ್ದು; ಇಲ್ಲಿ ಚರ್ಚೆಗಳಲ್ಲಿ ಕಾಣುವ ಪ್ರತಿಭೆ ಅನ್ಯಾದೃಶವಾದದ್ದು. ಒಟ್ಟಿನಲ್ಲಿ ಕತೆ ಚೆನ್ನಾಗಿದೆಯೆನಿಸುತ್ತದೆ. ಇದು ಒಂದೇ ಸಲ ಮೊದಲಿಂದ ಕೊನೆಯವರೆಗೆ ಓದುವ ಸಂಗತಿಗಳ ಚರಿತ್ರೆಯಲ್ಲ; ಮೆಲ್ಲನೆ ನೋಡಿದಂತೆ ಸೊಗಸುವ ಒಂದು ನ್ಯಾಸ. ಈ ಗ್ರಂಥದಿಂದ ಠಾಕೂರರು ಎಷ್ಟು ವಿಷಯಗಳನ್ನು ಕುರಿತು ಎಷ್ಟು ವಿವರವಾಗಿ ವಿಚಾರಮಾಡಿದಾರೆ ಎನ್ನುವುದು ತಿಳಿಯುತ್ತದೆ. ನಾವು ಬಹಳ ಯೋಚನೆಮಾಡಿದೇವೆ ಎಂದು ತಿಳಿದಿರುವ ಸಂದರ್ಭದಲ್ಲಿ ಇವರು ಇನ್ನೊಂದು ಹೆಜ್ಜೆ ಮುಂದಕ್ಕೆ ಯೋಚನೆಮಾಡಿರುತ್ತಾರೆ. ದೇಶದಮೇಲೆ ಪ್ರೇಮ, ಜನತೆಯಮೇಲೆ ಪ್ರೇಮ, ಎಂಬ ಹೆಸರಿನಿಂದ ನಾವು ಯಾವ ಸಹನೆಯನ್ನು ಉಪದೇಶಮಾಡುತ್ತೇವೋ ಅದನ್ನು ಇವರೂ ಉಪದೇಶಮಾಡುತ್ತಾರೆ. ಆದರೆ ಇವಕ್ಕಿಂತ ಹೆಚ್ಚಾದವು ಸತ್ಯದಮೇಲೆ ಪ್ರೇಮ, ಮಾನವ ವರ್ಗದಮೇಲೆ ಪ್ರೇಮ, ಅವನ್ನು ಮರೆಯಬಾರದು ಎಂದೂ ಇವರು ಒತ್ತಿ ಹೇಳುತ್ತಾರೆ. ಇವರ

ವಿಚಾರ ಸಮಗ್ರವಾದದು; ಇವರ ದೃಷ್ಟಿ ತೀವ್ರವಾದದು; ಇವರ ಜೀವನ ವಿಮರ್ಶೆ ಸತ್ಯೈಕಪರಾಯಣವಾದದು.

### ೩೮. ಮನೆಯೊಳಗೆ ಮತ್ತು ಹೊರಗೆ

'ಮನೆಯೊಳಗೆ ಮತ್ತು ಹೊರಗೆ' ಎಂಬುದು ಠಾಕೂರರ ದೊಡ್ಡ ಕತೆಗಳಲ್ಲಿ ಶ್ರೇಷ್ಠವಾದದೆಂದು ಹೆಸರುಪಡೆದಿರುವ ಕತೆ. ವಿಮಲಾ ಎಂಬ ತರುಣಿ ನಿಖಿಲಚಂದ್ರ ಎಂಬ ಜಹಗೀರುದಾರ ಅಥವಾ ರಾಜನ ಪತ್ನಿ. ರಾಜನು ತರುಣ, ಸಂಸ್ಕೃತನಾದ ಮನುಷ್ಯ. ವಿಮಲೆ ಸಂಸಾರಕ್ಕೆ ಬಂದ ಹೊಸದರಲ್ಲಿ ಪೂರ್ವಾಚಾರಕ್ಕೆ ಸರಿಯಾಗಿ ನಡೆದುಕೊಳ್ಳುವವಳಾಗಿರುವಳು; ಪರದಾ ಬಿಡಬೇಕೆಂದೂ ಹೊಸ ನಾಜೂಕಿನ ರೀತಿಯಲ್ಲಿರಬೇಕೆಂದೂ ಗಂಡನು ಹೇಳಿದಾಗ ಒಪ್ಪುವುದಿಲ್ಲ. ಆದರೂ ಅವನು ಆ ಯತ್ನವನ್ನು ಬಿಡುವುದಿಲ್ಲ; ಒಬ್ಬ ಇಂಗ್ಲೀಷ್ ಸ್ತ್ರೀಯನ್ನು ಪಾಠಹೇಳುವುದಕ್ಕೆ ಇಡುವಷ್ಟರಮಟ್ಟಿಗೆ ಆ ವಿಷಯದಲ್ಲಿ ಶ್ರದ್ಧೆ ವಹಿಸುತ್ತಾನೆ. ಹೀಗಿರಲಾಗಿ ಬಂಗಾಳದಲ್ಲಿ ಸ್ವದೇಶೀ ವಾದ ವಾಡಿಕೆಗೆ ಬರುತ್ತದೆ. ವಿಮಲೆ ಬಹಳ ಉತ್ಸಾಹದಿಂದ ಸ್ವದೇಶೀ ಪಕ್ಷವನ್ನು ವಹಿಸುತ್ತಾಳೆ. ನಿಖಿಲನಿಗೆ ಸಂದೀಪನೆಂಬ ಸ್ನೇಹಿತನಿದ್ದಾನೆ; ಅವನು ಸ್ವದೇಶಿಯ ಪ್ರಚಾರಕ; ನಿಖಿಲನ ಜಹಗೀರಿನಲ್ಲಿ ಒಂದು ದಿವಸದ ಮಟ್ಟಿಗೆ ಉಪನ್ಯಾಸ ಮಾಡುವುದಕ್ಕೆ ಬರುತ್ತಾನೆ. ಸ್ವದೇಶಿಯ ಪ್ರಚಾರಕನ ಉಪನ್ಯಾಸವನ್ನು ಕೇಳುವುದಕ್ಕೆ ವಿಮಲೆಯೂ ಹೋಗಿ ಪರದೆಯಲ್ಲಿ ಕುಳಿತಿರುವಳು; ಮಧ್ಯೆ ಇವನ ಉಪನ್ಯಾಸದ ಉತ್ಸಾಹದಲ್ಲಿ ಪರದೆಯನ್ನು ಸ್ವಲ್ಪ ಸರಿಸಿ ಹೊರಗೆ ನೋಡುವಳು. ಉಪನ್ಯಾಸವಾದ ಮೇಲೆ ಅವನಿಗೆ ಮರ್ಯಾದೆ ಮಾಡುವುದಕ್ಕೆ ಅವನನ್ನು ಮನೆಗೆ ಕರೆಸಿ ತಾನು ಉಪಹಾರ ಕೊಡುವೆನೆಂದು ಹೇಳುವಳು. ನಿಖಿಲ ಇದಕ್ಕೆ ಒಪ್ಪುವನು. ಉಪಹಾರವನ್ನು ತೆಗೆದುಕೊಳ್ಳುವುದಕ್ಕೆ ಬಂದು ಸಂದೀಪ ಇವಳ-ಸ್ನೇಹಕ್ಕೆ ಆಶೆಪಟ್ಟು ಸ್ವದೇಶೀ ಪ್ರಚಾರಕ್ಕಾಗಿ ಮುಂದಕ್ಕೆ ಹೋಗದೆ ಅಲ್ಲಿಯೇ ನಿಲ್ಲುವನು. ಸಂದೀಪನ ವಿಚಿತ್ರವಾದ ಉತ್ಸಾಹದಿಂದಲೂ ಅದ್ಭುತವಾದ ಹುಮ್ಮಸಿನಿಂದಲೂ ಮರುಳಾಗಿ ವಿಮಲೆ ಅವನು ಹೇಳುವುದನ್ನೆಲ್ಲ ಕೇಳುತ್ತ ಅವನಿಗೆ

ಅನವಶ್ಯಕವಾದ ಸಲಿಗೆಯನ್ನು ಕೊಡುವಳು. ಸಂದೀಪ ರಾಷ್ಟ್ರದೇವಿಯ ಮಾತನ್ನಾಡುವಂತೆ ಇರುತ್ತ ಮಧ್ಯೆ ವಿಮಲೆಯ ಮಾತನ್ನು ಸೇರಿಸುವನು. ಏನೋ ಮಾತನಾಡುವಂತೆ ಮಧ್ಯೆ ಬದುಕಿನ ಮೂಲ ತತ್ತ್ವಗಳನ್ನು ಚರ್ಚೆಮಾಡುವನು. ಪರದೆಯ ಹೆಣ್ಣು ಹೀಗೆ ಸಲಿಗೆಕೊಡುವುದಾಗಲಿ ಅವಳೊಂದಿಗೆ ಇತರರು ಹೀಗೆ ಮಾತನಾಡುವುದಾಗಲಿ ಯಾರಿಗೂ ಚೆನ್ನ ವಲ್ಲ. ವಿಮಲೆಯ ಮರುಳನ್ನು ನೋಡಿ ನಿಖಿಲನಿಗೆ ಅಸಮಾಧಾನವಾಗು ತ್ತದೆ. ಆದರೂ ಅವನು, ನೀನು ಮಾಡುತ್ತಿರುವುದು ತಪ್ಪು, ಎಂದು ಅವಳಿಗೆ ಹೇಳಲು ಮನಸ್ಸು ಮಾಡುವುದಿಲ್ಲ. ನಿಖಿಲನ ಗುರು ಪರಿಸ್ಥಿತಿ ಚೆನ್ನಾಗಿಲ್ಲವೆಂದು ನಿಖಿಲನ ಸಂಗಡ ಪ್ರಸ್ತಾಪಮಾಡುವನು; ಅವನ ಅಭಿಪ್ರಾಯವನ್ನು ತಿಳಿದು ಸುಮ್ಮನಾಗುವನು. ನಿಖಿಲನ ಅತ್ತಿಗೆ ವಿಮ ಲೆಯ ಓರಗಿತ್ತಿ ವಿಮಲೆಯ ರೀತಿಯನ್ನು ತಡೆಯಬೇಕೆಂದು ಯತ್ನ ಮಾಡುವಳು. ಮನೆಯಲ್ಲಿ ಅದರಿಂದ ಗಲಭೆ ಹೆಚ್ಚಾಗುವುದು. ತಾನು ಮಾಡುತ್ತಿರುವುದು ತನ್ನ ಮರ್ಯಾದೆಗೆ ಕಡಿಮೆಯೆಂದು ತಿಳಿದರೂ ವಿಮಲೆ ಯಾವುದೋ ಒಂದು ಹುಚ್ಚಿಗೆ ಸಿಕ್ಕಿ ಅದೇ ದಾರಿಯಲ್ಲಿ ನಡೆಯುವಳು. ಸಂದೀಪ ಇಷ್ಟಪಟ್ಟಿದ್ದರೆ ಅವಳ ಜನ್ಮವನ್ನು ಹಾಳುಮಾಡಬಹುದಾ ಗಿತ್ತು. ಆದರೆ ನಿಖಿಲನು ಸ್ನೇಹಿತ, ವಿಮಲೆ ಗೃಹಿಣಿ, ಎಂಬ ಮೊದ ಲಾದ ಭಾವನೆಗಳು ಅಂತರ್ಯದಲ್ಲಿ ಇರುತ್ತ ಅವನನ್ನು ಆ ಪಾಪದಿಂದ ಕಾಯುವುವು. ಹೀಗಿರಲು ನಾಡಲ್ಲಿ ಸ್ವದೇಶೀ ವಾದ ಬೆಳೆಯುತ್ತದೆ. ಸ್ವದೇಶೀ ವಸ್ತ್ರಗಳನ್ನು ಕೊಳ್ಳುವಂತೆ ಜನರನ್ನು ಬಲವಂತಪಡಿಸಬೇಕೆಂದು, ಸ್ವದೇಶೀ ಅಲ್ಲದ ವಸ್ತ್ರಗಳನ್ನು ಸುಡಿಸಬೇಕೆಂದು, ಮುಂತಾಗಿ ಸಂದೀಪನ ಅಭಿಪ್ರಾಯ. ವಿಮಲೆ ಅವನ ಅಭಿಪ್ರಾಯವನ್ನು ಅನುಮೋದಿಸುವಳು. ನಿಖಿಲ, ಬಲವಂತಪಡಿಸಿ ಸ್ವದೇಶೀಮಾಡಿ ಪ್ರಯೋಜನವಿಲ್ಲ, ಪರದೇಶದ ಬಟ್ಟೆ ಬೇಡದಿದ್ದರೆ ಅದನ್ನು ಸುಡಬೇಕಾದದ್ದೇನು, ಎನ್ನುವನು. ಪಂಚು ಎಂಬವನು ಜಹಗೀರಿನಲ್ಲಿ ಬಟ್ಟೆಯ ವ್ಯಾಪಾರದಿಂದ ಜೀವಿಸುತ್ತಿದ್ದ ಒಬ್ಬ ಬಡಪಾಯಿ. ಅವನು ಪರದೇಶೀ ವಸ್ತ್ರಗಳನ್ನು ಮಾರುತಿದ್ದನೆಂದು ಸಂದೀಪನ ಕಡೆಯವರು ಅವನ ಮೂಟೆಯನ್ನೆಲ್ಲ ಸುಟ್ಟುಹಾಕುವರು. ನಿಖಿಲ ಪಂಚುವಿಗೆ ಹೇಳಿ ಬಟ್ಟೆ ಸುಟ್ಟವರ ಮೇಲೆ ಫಿರ್ಯಾದು ಹಾಕಿಸು

ವನು. ಸಂದೀಪನ ಕಡೆಯವರು ಪಂಚುವಿನ ಪರವಾಗಿ ಯಾರೂ ಸಾಕ್ಷಿ ಹೇಳದಂತೆ ಮಾಡುವರು. ನಿಖಿಲ ಸಂದೀಪನನ್ನು ಸಾಕ್ಷಿಯಾಗಿ ಕರೆಯು ವೆನೆನ್ನುವನು. ಸಂದೀಪ "ಕರೆ, ಬೇಡವೆನ್ನುವುದಿಲ್ಲ, ನಾನು ಅಸತ್ಯವನ್ನು ಹೇಳುವೆನು. ದೊಡ್ಡ ಉದ್ದೇಶಕ್ಕಾಗಿ ಹೀಗೆ ಅಸತ್ಯವನ್ನು ನುಡಿಯುವುದು ದೊಡ್ಡ ಸತ್ಯ" ಎಂದು ವಾದಿಸುವನು. ಎರಡು ಪಕ್ಷಗಳ ಜಗಳದಲ್ಲಿ ಸುಟ್ಟ ವಸ್ತ್ರಗಳ ಬಗ್ಗೆ ನಷ್ಟತೆರವುದು ಮುಂತಾದ್ದು ಬಂದು ಸಂದೀಪನಿಗೆ ಹಣ ಬೇಕಾಗುವುದು. ಅವನು ವಿಮಲೆಯನ್ನು ಕೇಳುವನು; ಅವಳು ಕೊಡುವೆನೆಂದು ಒಪ್ಪುವಳು. ಬೇರೆ ಏನೂ ತೋರದೆ ತನ್ನ ಗಂಡನು ಅತ್ತಿಗೆ ಗೆಂದು ತೆಗೆದಿಟ್ಟಿದ್ದ ೬,೦೦೦ ರೂಪಾಯಿಗಳನ್ನು ಅವನಿಗೆ ತಿಳಿಯದೆ ತೆಗೆದುಕೊಂಡು ಸಂದೀಪನಿಗೆ ಕೊಡುವಳು. ಹಣವನ್ನು ಕಂಡಾಗ ಸಂದೀ ಪನು ತೋರಿಸಿದ ಅತಿಆಸೆಯಿಂದ ಅವಳಿಗೆ ಅವನಲ್ಲಿದ್ದ ಗೌರವಭಾವ ಕಡಮೆಯಾಗುವುದು. ತಾನು ಕಳವುಮಾಡಿದ ಹಣವನ್ನು ಪುನಃ ಅಲ್ಲಿ ಇಡಬೇಕೆಂದು ಇವಳು ಅಮೂಲ್ಯ ಎಂಬ ಸ್ವದೇಶೀ ತರುಣನ ಕೈಗೆ ತನ್ನ ಒಡವೆಗಳನ್ನು ಕೊಡುವಳು. ಅವನು ಒಡವೆಗಳನ್ನು ಹಾಗೆಯೇ ಇಟ್ಟು ಜಹಗೀರಿಯ ಒಂದು ಖಜಾನೆಗೆ ಹೋಗಿ ಅಲ್ಲಿಯ ಸೇವಕರನ್ನು ತುಪಾಕಿ ಯಿಂದ ಹೆದರಿಸಿ ಸರಿಯಾಗಿ ೬,೦೦೦ ರೂಪಾಯಿಗಳನ್ನು ಕದ್ದುಕೊಂಡು ಬರುವನು. ಸ್ವದೇಶಿಯ ಭಟರಿಂದ ಏನೇನು ಅನಾಹುತವಾಯಿತೆಂದು ನೋಡಿ ವಿಮಲೆಗೆ ಬಹಳ ದುಃಖವಾಗುವುದು. ನಾನು ಏಕೆ ಬದುಕಿದ್ದೇನೋ ಎಂದು ಅವಳು ಅಂದಿನ ರಾತ್ರಿ ವ್ಯಥೆಪಡುತ್ತಿರುವಾಗ ನಿಖಿಲ ಅಕಸ್ಮಾ ತ್ತಾಗಿ ಒಳಗೆ ಬರುವನು, ಅವಳನ್ನು ಸಮಾಧಾನ ಪಡಿಸುವನು. ಮಾರ ನೆಯ ದಿನ ವಿಮಲೆ ತಾನು ಆ ರೂಪಾಯಿಗಳನ್ನು ತೆಗೆದುಕೊಂಡ ವಿಷಯ ವನ್ನು ಅನನಿಗೆ ತಿಳಿಸುವಳು. ಈ ಮೊದಲೇ ಜಹಗೀರುದಾರನ ಜನ ಸಂದೀಪನಮೇಲೆ ಫಿರ್ಯಾದು ಮಾಡಿರಲು ನಿಖಿಲ ಅವನನ್ನು ಊರು ಬಿಟ್ಟು ಹೋಗಬೇಕೆಂದು ಹೇಳಿರುವನು. ಇಷ್ಟರಲ್ಲಿ ಒಂದು ಸಂತೆಯಲ್ಲಿ ನಡೆದ ಜಗಳದಲ್ಲಿ ಎರಡು ಪಕ್ಷದವರೂ ಹೊಡೆದಾಡಿ ಗಲಭೆಯಾಗುವುದು. ನಿಖಿಲನೂ ಅಮೂಲ್ಯನೂ ಅಲ್ಲಿಗೆ ಹೋಗುವರು. ಹೊಡೆದಾಟದಲ್ಲಿ ಸಿಕ್ಕಿ ನಿಖಿಲನಿಗೂ ಅಮೂಲ್ಯನಿಗೂ ಗುಂಡಿನೇಟು ಬೀಳುವುದು. ಜನರು

ಅವರನ್ನು ಮನೆಗೆ ಕರೆದುತರುವರು. ಹೇಗಿದೆ ಎಂದು ವಿಮಲೆ ಕೇಳುವಳು. ಜನ ಅಮೂಲ್ಯ ಬದುಕುವುದಿಲ್ಲ ಎನ್ನುವರು. ನಿಖಿಲ ಬದುಕಿದರೂ ಬದುಕಬಹುದು, ಹೇಳುವಂತಿಲ್ಲ. ಇಲ್ಲಿಗೆ ಕತೆ ಮುಗಿಯು ವುದು.

ಈ ಕತೆಯ ಸನ್ನಿವೇಶಗಳು, ಜನರ ನಡೆವಳಿಕೆಗಳು, ಮಾತುಗಳು; ಇವುಗಳನ್ನು ಹೆಣೆದು ಕತೆ ಹೇಳಿರುವ ರೀತಿ; ಇವೆಲ್ಲ ಒಂದು ವಿಲಕ್ಷಣ ವಾದ ಪ್ರತಿಭೆಯನ್ನು ತೋರಿಸುತ್ತವೆ. ಮೊದಲಲ್ಲೇ ನಮಗೆ ವಿಮಲೆಯ ವಿಷಯದಲ್ಲಿ ಅಕ್ಕರೆ ಹುಟ್ಟುತ್ತದೆ. ಇವಳು ಸಂದೀಪನ ವಿಷಯದಲ್ಲಿ ಸ್ವಲ್ಪ ಕುತೂಹಲವನ್ನು ತೋರಿಸಿ ಅವನು ಎಂಥ ಅಯೋಗ್ಯನಿರಬಹು ದೆಂದು ಸೂಚನೆ ಕಂಡೊಡನೆ ನಮಗೆ ಭೀತಿಯಾಗುತ್ತದೆ. ಈ ಸಂಸಾರ ಕೆಟ್ಟೀತೋ ಏನೋ, ಅಯ್ಯೋ, ಎಂದುಕೊಳ್ಳುತ್ತೇವೆ. ನಮ್ಮ ಕೈಯಲ್ಲಾಗುವುದಾದರೆ ನಾವು ವಿಮಲೆಗೆ ಬುದ್ಧಿ ಹೇಳುತಿದ್ದೆವು; ಇವರ ಮನೆಯವರು ಯಾರಾದರೂ ಹೇಳಿದರೆ ಆದೀತು ಎಂದುಕೊಳ್ಳುತ್ತೇವೆ. ಆದರೆ ಈ ನಿಖಿಲನೋ ಸ್ವಾತಂತ್ರ್ಯ ಎನ್ನುವುದನ್ನು ಹೇಗೋ ಅರ್ಥಮಾಡಿ ಕೊಂಡು ವಿಮಲೆ ಯಾವುದು ಸರಿಯೆಂದರೆ ಅದನ್ನು ಮಾಡಬೇಕು, ತನ್ನ ಬಲವಂತದಿಂದ ತನ್ನ ವಿಷಯದಲ್ಲಿ ಸತ್ಯದಿಂದ ನಡೆಯುವುದಾದರೆ ಅವಳು ಸತ್ಯವಂತೆಯಾದಂತಲ್ಲ, ಎಂದು ಇದ್ದುಬಿಡುತ್ತಾನೆ. ನಮಗೆ ಇವನ ವಿಷಯದಲ್ಲಿ ಅಸಮಾಧಾನ. ಅವನ ಗುರು ಎನ್ನುವ ಆ ಮುದುಕನಾದರೂ ಅನಾಹುತವನ್ನು ನಿಲ್ಲಿಸಬಾರದೆ ಎನ್ನುತ್ತೇವೆ. ಸ್ವಲ್ಪ ಕತೆ ಬೆಳೆದಮೇಲೆ ವಿಮಲೆ ಎಂತಹ ಸಾಮಾನ್ಯ ಸ್ತ್ರೀ, ಈ ನಾಯಕನಿಗೆ ಇವಳೆ ಹೆಂಡತಿ, ಎನ್ನಿಸುತ್ತದೆ. ನಿಖಿಲನ ನಿಲುವು ಅರಿವಿನ ನಿಲುವು. ಅವನ ಗುರು ಅವನ ನಿಲುವನ್ನು ಒಪ್ಪಿಕೊಳ್ಳುತ್ತಾನೆ. ನಾವೂ ಅದನ್ನು ಒಪ್ಪಿಕೊಳ್ಳುತ್ತೇವೆ. ಮಧ್ಯೆ ಈ ಹೆಣ್ಣು ಏನಾದರೂ ದಾರಿ ತಪ್ಪಿಬಿಟ್ಟಳೋ ಎಂದು ಶಂಕೆಯಲ್ಲಿ ರುತ್ತೇವೆ. ಮೆಲ್ಲಮೆಲ್ಲನೆ ಆ ಹಾವು ಈ ಹಕ್ಕಿಯ ಬಳಿಗೆ ಬರುತ್ತಿರುವು ದನ್ನೂ ಈ ಹಕ್ಕಿ ಅದರ ಕಣ್ಣಿನ ಹೊಳಪಿಗೆ ಮನಸೋತು ಮುಗ್ಧವಾಗಿ ಕುಳಿತಿರುವುದನ್ನೂ ನೋಡಿ ನಮ್ಮ ಮನಸ್ಸೇ ಕರಗಿಹೋಗುತ್ತದೆ. ಕೊನೆಗೆ ಒಂದು ಸಂದರ್ಭದಲ್ಲಿ ಇವರಿವರು ಮೈ ಸೋಕಿರಲಿಲ್ಲವೆಂದು ತಿಳಿದಾಗ,

ಸದ್ಯ ಮಹಾಮಾಯೆಗಿತ್ತಿ ಮನೆಯ ಮಾನ ಇಷ್ಟರಮಟ್ಟಿಗೆ ಉಳಿಸಿದಳಲ್ಲ, ಎಂದುಕೊಳ್ಳುತ್ತೇವೆ. ಈ ಎಲ್ಲ ಸಂದರ್ಭವೂ ಕತೆಯಲ್ಲಿ ಪ್ರವಾಹವಾಗಿ ಹರಿದುಬರುತ್ತದೆ. ಅತ್ತ ಇತ್ತ ನೋಡುವುದಕ್ಕೆ ನಮಗೆ ಹೊತ್ತಿಲ್ಲ. ಅದು ನಮ್ಮನ್ನು ಸೆಳೆದುಕೊಂಡು ಹೋಗುತ್ತದೆ. ಈ ಕತೆಯನ್ನು ಹೇಳಿರುವ ರೀತಿ ಸುಂದರವಾದದ್ದು, ಶಕ್ತಿಯುಕ್ತವಾದದ್ದು.

ಇದಾದಮೇಲೆ ಇದು ಇಷ್ಟು ಸೊಗಸಾಗಿರುವುದಕ್ಕೆ ಕಾರಣ ಇದರಲ್ಲಿ ಆಯಾ ವ್ಯಕ್ತಿಗಳು ಮಾತನಾಡಿ ತಮ್ಮ ತಮ್ಮ ಅಭಿಪ್ರಾಯಗಳನ್ನು ತಿಳಿಸುವುದು. ಇದು ಇಂಗ್ಲೀಷ್ ಸಾಹಿತ್ಯದಲ್ಲಿ ಅಲ್ಲಲ್ಲಿ ಕಾಣುವ ಪದ್ಧತಿ; ಬಂಕಿಂಚಂದ್ರ ಚಟರ್ಜಿಯವರ 'ರಜನೀ' ಎಂಬ ಕತೆಯಲ್ಲಿ ನಮ್ಮ ಜನರಿಗೆ ಪರಿಚಯವಾಗಿರಬೇಕು. ಇದನ್ನು ಆರಂಭಿಸಿದವರ ಉದ್ದೇಶ ಕತೆಯ ವ್ಯಕ್ತಿಗಳ ಮನಸ್ಸಿನ ತೋರಿಕೆಗಳನ್ನೆಲ್ಲ ವಿವರಿಸಬೇಕೆನ್ನುವುದು. ನಡೆದ ಒಂದೇ ವಿಷಯವನ್ನು ಹಲವರು ಹೇಳುವ ಸಂದರ್ಭ ಈ ಪದ್ಧತಿಯಲ್ಲಿ ಸಹಜವಾಗಿ ಒದಗುತ್ತದೆ. ಇದರಿಂದ ಒಂದೊಂದು ವಿಷಯದಲ್ಲಿಯೂ ಹಲವರ ಮನಸ್ಸಿನ ಸಣ್ಣ ಪುಟ್ಟ ಹಲವು ಭಾವನೆಗಳನ್ನೆಲ್ಲ ವರ್ಣಿಸುವ ಸಂದರ್ಭ ಬರುತ್ತದೆ. ಕಥನದಲ್ಲಿ ಕೌಶಲ್ಯ ಕಡಮೆಯಾದರೆ ಒಂದು ಪಾತ್ರ ಹೇಳುವುದನ್ನೇ ಇನ್ನೊಂದು ಪಾತ್ರ ಹೇಳುವಂತಾಗಿ ಹೊಸತು ಕಾಣದೆ ಬೇಸರವಾಗುವುದು. ಮನೋವೃತ್ತಿಯನ್ನು ವಿವರಿಸುವಲ್ಲಿ ಕೂಡ ಅದನ್ನು ವಿವರವಾಗಿ ತಿಳಿಯುವ ಊಹೆ, ಅದರ ಒಂದೊಂದು ಅಂಶವನ್ನೂ ಸ್ಪಷ್ಟವಾಗಿ ತೋರಿಸುವ ಬರಹ, ಇಲ್ಲದಿದ್ದರೆ ಕತೆ ನೀರಸವಾಗುವುದು. ಮನಸ್ಸಿನಮೇಲೆ ಬರುವ ಒಂದೊಂದು ಅಲೆಯೂ ಇಲ್ಲಿ ಹೊರಗಣ ವ್ಯಾಪಾರದಂತೆ ಒಂದು ಉದ್ಯಮವಾಗಬೇಕು. ಆ ಅಲೆಯನ್ನು ಉದ್ಯಮದಂತೆ ವಿವರಿಸಬಲ್ಲ ಮಾತು ಇರಬೇಕು. ಒಂದೊಂದು ಮನಸ್ಸಿನ ಓಲಾಟವೂ ಒಂದೊಂದು ಸಾಗರದ ತೆರೆಯ ಮಾಲೆಯಂತೆ ಭಾಸವಾಗಬೇಕು. ಇದಾಗದಿದ್ದರೆ ವರ್ಣನೆ ಇರುತ್ತದೆ, ವಿಷಯವಿರುವುದಿಲ್ಲ; ಆ ವರ್ಣನೆಯೂ ಮೂಕನು ಸಂತೆಯನ್ನು ವರ್ಣಿಸುವಂತೆ ಆಗುತ್ತದೆ. ಇಂಥ ಕಷ್ಟವಾದ ರೀತಿಯನ್ನು ಅವಲಂಬಿಸಿ ಠಾಕೂರರು ಈ ನಾಲ್ಕಾರು ಮನಸ್ಸುಗಳ ಪ್ರವೃತ್ತಿಗಳನ್ನೆಲ್ಲಾ ವಿವರ ವಿವರವಾಗಿ

ವರ್ಣಿಸಿದಾರೆ; ಓದುವವರಿಗೆ ಇದೆಲ್ಲವೂ ರುಚಿಸುವಂತೆ ಅದಕ್ಕೆ ಜೀವಕಳೆಯನ್ನು ಕೊಟ್ಟಿದಾರೆ.

ಇದರಮೇಲೆ ಈ ಪುಸ್ತಕದಲ್ಲಿ ಚರ್ಚೆಗೆ ಬರುವ ಅನೇಕ ವಿಷಯಗಳು ಗೋರಾದಲ್ಲಿ ಬರುವ ವಿಷಯಗಳಂತೆ ನಮಗೆ ದಿನವೂ ಅನುಭವದಲ್ಲಿ ಬರತಕ್ಕವು. ಮನೆಯ ಹೆಂಗಸರು ಮನೆಯಲ್ಲಿಯೇ ಇರುವುದು ಒಳ್ಳೆಯದೇ, ಹತ್ತುಕಡೆ ಹೋಗಿಬರುತ್ತಾ ಹತ್ತು ಜನರನ್ನು ನೋಡಿ ಮಾತನಾಡಿಸಿ ಧಾರಾಳವಾಗಿ ನಡೆದುಕೊಳ್ಳುವುದು ಒಳ್ಳೆಯದೆ? ರಾಷ್ಟ್ರದ ಸೇವೆಗೆ ಸಂದೀಪನಂತೆ ಎಗ್ಗಿಲ್ಲದ ಜನರು ಹೆಚ್ಚು ಕೆಲಸಮಾಡುವರೇ, ನಿಖಿಲನಂತಹ ಸಾತ್ವಿಕರು ಹೆಚ್ಚು ಕೆಲಸಮಾಡುವರೇ? ಹಿಂದೂಗಳು ತಮ್ಮ ಮೂಗಿನ ನೇರಕ್ಕೆ ತಾವು ನಡೆದುಕೊಂಡು ಮುಸಲ್ಮಾನರನ್ನು ಬಲಾತ್ಕರಿಸಬಹುದೇ, ಮುಸಲ್ಮಾನರು ಪ್ರತಿಭಟಿಸಿ ತಮ್ಮ ಇಷ್ಟದಂತೆ ನಡೆದುಕೊಳ್ಳಬಹುದೇ? ಇದೆಲ್ಲಾ ಬಹಳ ಮುಖ್ಯವಾದ ಮಾತು. ಇದೆಲ್ಲವನ್ನೂ ಈ ಪುಸ್ತಕದಲ್ಲಿ ಸನ್ನಿವೇಶಗಳಲ್ಲಿ ತಂದು ಚರ್ಚೆಮಾಡಿದೆ. ಇಲ್ಲಿನ ಪದ್ಧತಿ ಗೋರಾ ಪುಸ್ತಕದಲ್ಲಿ ಅನುಸರಿಸಿರುವ ಪದ್ಧತಿಯೇ. ಆದರೆ ಚರ್ಚೆ ಅಲ್ಲಿಯಷ್ಟು ಲಂಬವಾಗಿಲ್ಲ. ಕತೆ ವೇಗವಾಗಿ ಹರಿಯುವುದರಿಂದಲೂ ಸನ್ನಿವೇಶ ತೀಕ್ಷ್ಣವಾಗಿರುವುದರಿಂದಲೂ ಚರ್ಚೆ ಅಲ್ಲಿಯಷ್ಟು ಬರಿಯ ಚರ್ಚೆಯಾಗಿ ಕಾಣುವುದಿಲ್ಲ; ಸನ್ನಿವೇಶದಲ್ಲಿ ಬೆರೆತು ಕತೆಯಾಗಿ ಕಾಣುತ್ತದೆ. ಚರ್ಚೆಯಾಗಿರುವವಾದರೂ ಎಂದಿನ ಪ್ರಶ್ನೆಗಳೇ. ಒಂದಲ್ಲ ಒಂದು ರೂಪದಲ್ಲಿ ನಿತ್ಯವೂ ಜನಕ್ಕೂ ಮನುಷ್ಯನಿಗೂ ಬರತಕ್ಕವು; ಮನುಷ್ಯನಾಗಲಿ ಜನಾಂಗವಾಗಲಿ ನಿತ್ಯ ಉತ್ತರ ಹೇಳಬೇಕಾದಂಥವು. ಠಾಕೂರರ ಮತ್ತು ಅವರ ಸಮೀಪದವರ ಜೀವನಗಳಲ್ಲಿ ಇಂಥ ಸನ್ನಿವೇಶಗಳು ಬಂದುವೆಂದು ತೋರುತ್ತದೆ. ಅದಕ್ಕೆ ಅವರು ನಿಖಿಲನಂತೆ ಉತ್ತರಕೊಟ್ಟಿರಬೇಕು. ಇದರಿಂದ ಅವರಿಗೆ ಅವರ ಸೀಮೆಯಲ್ಲಿ ಸ್ವಲ್ಪ ಜನ ಹಗೆಗಳಾದರು. ಇದು ಇವರ ಪತ್ರಗಳಲ್ಲಿ ಒಂದೆರಡು ಕಡೆ ಕಾಣುತ್ತದೆ. ಈ ಸಂಭಾಷಣೆಗಳು ಕತೆಯಲ್ಲಿ ಸ್ವಾರಸ್ಯವಾಗಿರುವುದಲ್ಲದೆ ಗ್ರಂಥಕರ್ತರ ಅನುಭವವನ್ನೂ ನಿರ್ಧಾರವನ್ನೂ ಸೂಚಿಸುವ ಕಾರಣದಿಂದಲೂ ನಮಗೆ ಮುಖ್ಯವಾಗಿವೆ.

ಇಷ್ಟು ಒಳ್ಳೆಯ ಕತೆಯ ವಿಷಯ ಒಂದೆರಡು ಆಕ್ಷೇಪವನ್ನು ಹೇಳಿದರೆ ಅದನ್ನು ಅತಿವಿಮರ್ಶೆ ಎಂದು ಭಾವಿಸಲಾಗದು. ಈ ಕತೆಯಲ್ಲಿ ನಿಖಿಲ ವಿಮಲೆಯನ್ನು ಅಪಳಿಷ್ಟದಂತೆ ಹೋಗುವುದಕ್ಕೆಂದು ಬಿಡುತ್ತಾನೆ. ಹೆಂಡತಿಯ ವಿಷಯದಲ್ಲಿ ಪ್ರೇಮವಿರುವವನು ಅವಳು ತಪ್ಪುದಾರಿ ನಡೆದಾಳೆಂಬ ಸಮಯದಲ್ಲಿ ಅವಳನ್ನು ತಡೆಯುವುದಾದರೆ ಅದು ಕೇವಲ ಸ್ವಾರ್ಥ ಮಾತ್ರವಾಗಲಾರದು. ಅದು ಅವಳ ಒಳ್ಳೆಯದಕ್ಕಾಗಿಯೂ ಮಾಡುವ ಕೆಲಸ. ಇಂಥ ಸಂದರ್ಭದಲ್ಲಿ ಮಮತೆಯಿಂದ ಬರುವ ಅಡ್ಡಿ ಎಷ್ಟು, ಕನಿಕರದಿಂದ ಬರುವ ಅಡ್ಡಿ ಎಷ್ಟು, ಎಂದು ಹೇಳುವುದು ಕಷ್ಟವಾಗಬಹುದು. ಆದರೂ ಕನಿಕರದಿಂದ ಬರುವ ಅಡ್ಡಿಯೂ ಸ್ವಲ್ಪ ವಿರುತ್ತದೆ. ನಿಖಿಲನಂತಹ ಉತ್ತಮ ಜೀವಿಯಲ್ಲಿ ಈ ಭಾಗ ಬಹಳ ಹೆಚ್ಚಾಗಿ ಇದ್ದಿರಬೇಕು. ಆದರೆ ಅದು ಈ ಕತೆಯಲ್ಲಿ ಕಾಣುವುದಿಲ್ಲ; ಕಂಡ ಹಾಗಾದರೂ ನಿಶ್ಚೇಷ್ಟವಾಗಿದ್ದುಬಿಡುತ್ತದೆ. ಇಲ್ಲಿ ಇಂಥ ಜ್ಞಾನಿಯಾದ ಪತಿಯ ಮನೋಧರ್ಮವನ್ನು ಸರಿಯಾಗಿ ಸೂಚಿಸಿದಂತಾಯಿತೆ ಎಂಬ ವಿಷಯದಲ್ಲಿ ನನಗೆ ಸಂದೇಹ. ಆಮೇಲೆ ವಿಮಲೆ ಸಂದೀಪನನ್ನು ಏನೇನೋ ಮಾತುಗಳನ್ನಾಡುವುದಕ್ಕೆ ಬಿಡುತ್ತಾಳೆ, ಅವನು ಆಡುತ್ತಿದ್ದರೆ ಕೇಳುತ್ತ ಸುಮ್ಮನೆ ಇರುತ್ತಾಳೆ; ತಾನೂ ಸ್ವಲ್ಪ ಸಂದಿಗ್ಧವಾದ ಮಾತುಗಳನ್ನು ಆಡುತ್ತಾಳೆ. ಆದರೆ ದೇಹವನ್ನು ಅವನಿಗೆ ಕೊಟ್ಟಿರಲಿಲ್ಲ. ಕವಿ ಇಲ್ಲಿ ಸ್ವೀಕರಿಸಿರುವ ಸ್ತ್ರೀ ಪರಿಶುದ್ಧತೆಯ ಮಟ್ಟ ಸ್ವಲ್ಪ ತಗ್ಗಿನದು. ಅದು ಪರಿಶುದ್ಧತೆಯೇ ಅಲ್ಲವೆನ್ನಬೇಕಾಗುತ್ತದೆ. ಇದು ಮುರಿದ ನೌಕದಲ್ಲಿ ರಮೇಶನಲ್ಲಿ ಕಂಡ ತೊಡಕು. ಸಭ್ಯಳಾದ ಸ್ತ್ರೀ ಪರಪುರುಷನನ್ನು ಇಂಥ ಮಾತುಗಳನ್ನಾಡುವುವಕ್ಕೆ ಒಪ್ಪಿ ಬಿಡಲಾರಳು. ಬಿಟ್ಟಳಾದರೆ ಅವನು ಮುಟ್ಟದಷ್ಟರಿಂದ ಕೃದ್ಧಳಾಗುವ ಅಧಿಕಾರ ಅವಳಿಗಿರುವುದಿಲ್ಲ. ಇಂಥವಳು ಅವನು ಮುಟ್ಟದಿದ್ದ ಮಾತ್ರಕ್ಕೆ ಶುದ್ಧಳಾಗಿರಲಾರಳು. ಇನ್ನು ಕೊನೆಯಲ್ಲಿ ಗ್ರಂಥಕರ್ತರು ನಿಖಿಲನು ತೀರಿಹೋದನೇ ಉಳಿದುಕೊಂಡನೇ ಎನ್ನುವುದನ್ನು ಸ್ಪಷ್ಟವಾಗಿ ಸೂಚಿಸವೆ ಕತೆಯನ್ನು ಮುಗಿಸುತ್ತಾರೆ. ಇದು ಕತೆ ಓದುವವರ ಮನಸ್ಸನ್ನು ಕುತೂಹಲದಲ್ಲಿ ಬಿಡುವುದಕ್ಕಾಗಿ ಮಾಡಿರುವ ಯುಕ್ತಿ ಎಂದು ಕಾಣುತ್ತದೆ. ಕತೆಯ ಮಧ್ಯದಲ್ಲಿ ಕುತೂಹಲವನ್ನು

ಹುಟ್ಟಿಸುವುದೂ ಅದು ಹರಿಯುವಂತೆ ನಿಲ್ಲಿಸುವುದೂ ನ್ಯಾಯ. ಆದರೆ ಕತೆಯ ಕೊನೆಯಲ್ಲಿ ಹೀಗೆ ಬಿಡುವುದು ಅಷ್ಟು ಸಾಧುವಾದ ಪದ್ಧತಿಯೆಂದು ಹೇಳಲಾಗುವುದಿಲ್ಲ.

ಈ ಕತೆ ಅಚ್ಚಾದಾಗ ಬಹಳ ಜನ ಇದನ್ನು ಬಂಗಾಳದ ಜೀವನಕ್ಕೆ ಅನ್ವಯಿಸಿಕೊಂಡು ಗ್ರಂಥಕರ್ತರನ್ನು ಆಕ್ಷೇಪಣೆಮಾಡಿದರೆಂದು ಕಾಣುತ್ತದೆ. ಪೂರ್ವಾಚಾರದ ಮಹಿಳೆಯೊಬ್ಬರು ಇದು ಸುಧಾರಕ ಜನದ ಜೀವನದ ಚಿತ್ರವಾಗಬಹುವೇ ಹೊರತು ಪೂರ್ವಾಚಾರದವರ ಚಿತ್ರವಾಗಲಾರದು ಎಂಬ ದೃಷ್ಟಿಯಿಂದ ಠಾಕೂರರಿಗೆ ಒಂದು ಪತ್ರವನ್ನು ಬರೆದರು. ಅದಕ್ಕೆ ಕವಿವರರು "ಮನುಷ್ಯನ ಸ್ವಭಾವಕ್ಕೆ ಸುಧಾರಣೆಯ ಸಂಸಾರ, ಪೂರ್ವಾಚಾರದ ಸಂಸಾರ ಎಂಬ ಭೇದವಿಲ್ಲ. ಇವರಲ್ಲಿ ಇವರನ್ನು ಅಥವಾ ಅವರನ್ನು ಎತ್ತಿ ಹಾಕಬೇಕೆಂಬ ಉದ್ದೇಶವಿಲ್ಲ. ಅಥವಾ ಇದ್ದಿತು; ಗ್ರಂಥಕರ್ತನಾದವನು ತನಗೆ ಯಾವುದು ಸರಿಯೆಂದು ತೋರುತ್ತದೋ ಅದನ್ನು ಹೇಳಬೇಕಲ್ಲದೆ ಬೇರೆ ಏನನ್ನು ಹೇಳುವುದೂ ಸಾಧ್ಯವಲ್ಲ" ಎಂದು ಉತ್ತರ ಕೊಟ್ಟರು. ಇವರಲ್ಲೆಲ್ಲಾ ಠಾಕೂರರು ತಮ್ಮ ಅಭಿಪ್ರಾಯವನ್ನು ಧೈರ್ಯವಾಗಿ ತೋರಿಸಿದ್ದಾರೆ. ಜನರನ್ನು ಮೆಚ್ಚಿಸುವಷ್ಟರ ಉದ್ದೇಶದಿಂದ ಬರೆದ ಗ್ರಂಥ ದೇಶಸೇವೆಯನ್ನು ಮಾಡಲಾರದು, ಜನರನ್ನು ಉದ್ಧಾರಮಾಡಲಾರದು. ಸತ್ಯಕ್ಕಾಗಿ ತತ್ವಕ್ಕಾಗಿ ಹೊಡೆದಾಡುವವನು ತನ್ನ ಅಭಿಪ್ರಾಯವನ್ನು ಹೇಳಬೇಕು; ಜನರು ಅವರ ಇಷ್ಟದಂತೆ ಮೆಚ್ಚುವುದಕ್ಕೆ ಅಥವಾ ಹಳಿಯುವುದಕ್ಕೆ ಬಿಡಬೇಕು. ಮೊತ್ತದಲ್ಲಿ ಈ ಕತೆ ಠಾಕೂರರ ಕಥೆಗಳಲ್ಲೆಲ್ಲ ಉತ್ತಮವಾದದೆಂದು ಹೇಳುವಂತಿದೆ. ಒಂದೊಂದು ಅಧ್ಯಾಯವೂ ಒಂದು ಸಣ್ಣ ಕತೆಯಂತಿದೆ; ಎಲ್ಲ ಸೇರಿ ಒಂದು ಕಥಾಗುಚ್ಛವಾಗಿವೆ. ಪ್ರಾಯಶಃ ಇದು ಇಷ್ಟು ಚೆನ್ನಾಗುವುದಕ್ಕೆ ಇದೇ ಕಾರಣವೆನ್ನಬಹುದು. ಠಾಕೂರರದು ಸಣ್ಣ ಕತೆ ಬರೆಯುವುದರಲ್ಲಿ ಅದ್ಭುತವಾದ ಶಕ್ತಿ. ಆ ಶಕ್ತಿ ಇಲ್ಲಿ ಚೆನ್ನಾಗಿ ಪ್ರಕಾಶಕ್ಕೆ ಬಂದಿದೆ. ಸನ್ನಿವೇಶದ ಮಹಿಮೆಯಿಂದ ಈ ಹಲವು ಸಣ್ಣ ಕತೆಗಳು ಒಂದು ದೊಡ್ಡ ಕತೆಯಾಗಿವೆ. ಗ್ರಂಥ ಸಣ್ಣ ಕತೆಗಳ ಅಚ್ಚುಕಟ್ಟನ್ನೂ ದೊಡ್ಡ ಕತೆಯ ವಿಸ್ತಾರವನ್ನೂ ಪಡೆದಿದೆ.

**೩೯. ಚತುರಂಗ ಅಥವಾ ಹರಿದ ಅನುಬಂಧಗಳು**

'ಹರಿದ ಅನುಬಂಧಗಳು' ಎಂಬ ಅರ್ಥಬರುವ ಹೆಸರಿನ ಒಂದು ಕತೆ ಇಂಗ್ಲೀಷಿನಲ್ಲಿ ರವೀಂದ್ರರ ಸಣ್ಣ ಕತೆಗಳ ಒಂದು ಗುಚ್ಛದಲ್ಲಿ ಸೇರಿರುವ ಒಂದು ದೊಡ್ಡ ಕತೆ. ಬಂಗಾಳಿಯಲ್ಲಿ ಅದರ ಹೆಸರು ಚತುರಂಗ. ಸತೀಶ ಶ್ರೀವಿಲಾಸ ಎನ್ನುವವರು ಇಬ್ಬರು ವಿದ್ಯಾರ್ಥಿಗಳು. ಪರಸ್ಪರ ಬಹು ವಿಸ್ವಾಸವುಳ್ಳ ಸ್ನೇಹಿತರು. ಸತೀಶನು ಬಹಳ ಮೇಧಾವಿ; ಬಹಳ ಗಟ್ಟಿ ಮನಸ್ಸಿನ ತರುಣ. ಶ್ರೀವಿಲಾಸನೂ ಗುಣಶಾಲಿಯೇ. ಅವನೇ ಕಥೆಯನ್ನು ಹೇಳುವುದರಿಂದ ಕತೆಯಲ್ಲಿ ಅವನ ಪ್ರಶಂಸೆ ಅಷ್ಟು ಬರುವುದಿಲ್ಲ. ಸತೀಶನ ತಂದೆ ಆಚಾರಶೀಲನಾದ ಹರಿಮೋಹನ. ನಾಸ್ತಿಕಶಿಖಾಮಣಿ ದೊಡ್ಡಪ್ಪ ಜಗಮೋಹನ ಸತೀಶನನ್ನು ಸಾಕುತ್ತಿರುವನು. ನಾಸ್ತಿಕನು ಪೋಷಿಸಿದ ಸತೀಶ ಸತ್ಯವಂತನಾದನು. ಹರಿಮೋಹನನು ಸಾಕಿದ ಅವನ ಹಿರಿಯ ಮಗ ಅಷ್ಟೇನೂ ಯೋಗ್ಯನಾಗಲಿಲ್ಲ. ಜಗಮೋಹನ ಜಾತಿಭೇದಗಳನ್ನೆಣಿಸದೆ ಬಡಬಗ್ಗರ ವಿಷಯದಲ್ಲಿ ಕನಿಕರದಿಂದ ನಡೆದುಕೊಳ್ಳುವನು. ಇವನ ವರ್ಣೋಲ್ಲಂಘನ ಹರಿಮೋಹನನಿಗೆ ಸಮಾಧಾನವಿಲ್ಲ. ಇವರಿವರ ಜಗಳದಲ್ಲಿ ಸತೀಶನ ಪಾಡು ಕಷ್ಟವಾಯಿತು. ಅವನಿಗೆ ದೊಡ್ಡಪ್ಪನನ್ನು ಬಿಡುವುದಕ್ಕೆ ಇಷ್ಟವಿಲ್ಲ; ಆದರೆ ಹರಿಮೋಹನನ ನಿಷ್ಠುರಕ್ಕಾಗಿ ಜಗಮೋಹನ ಅವನನ್ನು ತನ್ನ ಜೊತೆಗೆ ಇರಬೇಡವೆಂದು ಕಳುಹಿಸಿಬಿಡುವನು. ಜಗಮೋಹನನು ಆಚಾರಬಿಟ್ಟದಾನೆಂಬ ಕಾರಣದಿಂದ ಅವನಮೇಲೆ ಒಂದು ದಾವೆ ತಂದು ಹರಿಮೋಹನ ಅವನ ಭಾಗದ ಆಸ್ತಿಯನ್ನು ತಾನೇ ತೆಗೆದುಕೊಳ್ಳುವನು. ಇಷ್ಟರಲ್ಲಿ ಬೇರೆ ಹೋಗಿದ್ದ ಸತೀಶ ಯಾವನೋ ಒಬ್ಬ ದುಷ್ಟ ಕೆಡಿಸಿದ್ದ ಗರ್ಭಿಣಿಯಾದ ದಿಕ್ಕಿಲ್ಲದ ವಿಧವೆ ಒಬ್ಬಳ ವಿಷಯ ತಿಳಿದು ಅವಳಿಗೆ ಸಹಾಯ ಮಾಡಬೇಕು ಎಂದು ಜಗಮೋಹನನ ಬಳಿಗೆ ಬರುವನು. ಅವಳಿಗೆ ಜಗಮೋಹನನಿರುವ ಮನೆಯಲ್ಲಿ ಸ್ಥಳಮಾಡಲು, ಅವಳನ್ನು ಕೆಡಿಸಿದವನು ಹರಿಮೋಹನನ ಹಿರಿಯ ಮಗ ಪುರಂದರನೆಂದು ವ್ಯಕ್ತವಾಗುವುದು. ಜನರು ಸಿಕ್ಕಿದ ಹಾಗೆ ಆಡಿಕೊಳ್ಳಲು ಮೊದಲಾದದರಿಂದ ಸತೀಶ ಅವಳನ್ನು ತಾನು ಮದುವೆಯಾಗುವೆನೆನ್ನುವನು. ಇದಕ್ಕೆ ಏರ್ಪಾಡು ಮಾಡುತ್ತಿರಲಾಗಿ

ಆ ತರುಣಿ ವಿಷ ತೆಗೆದುಕೊಂಡು ಪ್ರಾಣಬಿಡುವಳು. ಇಷ್ಟರಲ್ಲೇ ಜಗಮೋಹನ ತೀರಿಹೋಗುವನು. ಸತೀಶನೂ ಕಣ್ಮರೆಯಾಗುವನು. ಕೆಲವು ದಿನಗಳ ಮೇಲೆ ಅವನು ವಿಷ್ಣುಭಕ್ತನಾದ ಲೀಲಾನಂದ ಸ್ವಾಮಿಯ ಬಳಿ ಸೇವೆಯಲ್ಲಿರುವನೆಂದು ಶ್ರೀವಿಲಾಸನಿಗೆ ತಿಳಿಯುವುದು. ಶ್ರೀವಿಲಾಸನೂ ಅಲ್ಲಿಗೆ ಹೋಗುವನು. ನಾಸ್ತಿಕನಾಗಿದ್ದ ಕಾಲದಲ್ಲಿ ಅತಿ ನಾಸ್ತಿಕನಾಗಿದ್ದ ಸತೀಶ ಈಗ ಆಸ್ತಿಕತೆಯಲ್ಲಿಯೂ ಮುಗಿಲನ್ನು ಮುಟ್ಟಿರುವನು. ಸ್ನೇಹದ ಸಲುವಾಗಿ ಶ್ರೀವಿಲಾಸನೂ ಅವನ ಜೊತೆಯಲ್ಲಿ ನಿಲ್ಲುವನು. ಲೀಲಾನಂದ ಸ್ವಾಮಿ ಶಿವತೋಷ ಎಂಬ ಶಿಷ್ಯನಿಂದ ಅವನ ಆಸ್ತಿಯನ್ನೂ ಅದರೊಂದಿಗೆ ಅವನ ವಿಧವೆ ದಾಮಿನಿಯ ರಕ್ಷಣೆಯ ಭಾರವನ್ನೂ ಹೊಂದಿರುವನು. ದಾಮಿನಿಗೆ ಸ್ವಾಮಿಯಲ್ಲಿ ಭಕ್ತಿಯಿಲ್ಲ; ಅವನ ವಿಷಯದಲ್ಲಿ ತನಗಿರುವ ಅಶ್ರದ್ಧೆಯನ್ನು ಅವಳು ಹತ್ತಾರು ವಿಧದಲ್ಲಿ ತೋರಿಸುವಳು. ಅವಳಿಗೆ ಸತೀಶನಲ್ಲಿ ಪ್ರೇಮ; ಸತೀಶನಿಗೆ ತನ್ನ ಕಡೆ ಗಮನವೇ ಇಲ್ಲವೆಂದು ಅವಳಿಗೆ ಅಸಮಾಧಾನ. ಅದನ್ನೆಲ್ಲ ಅವಳು ಸ್ವಾಮಿಯಮೇಲೆ ತೋರಿಸುವಳು; ಆಮೇಲೆ ಸತೀಶನಿಗೆ ಸಂತೋಷವಾಗಲೆಂದು ಕೆಲವುಸಲ ಸ್ವಾಮಿಯ ವಿಷಯದಲ್ಲಿ ಸರಿಯಾಗಿ ನಡೆದುಕೊಳ್ಳುವಳು. ಇವರೆಲ್ಲ ಒಂದು ಸ್ಥಳಕ್ಕೆ ಹೋಗಿದ್ದಾಗ ದಾಮಿನಿ ರಾತ್ರಿಯಲ್ಲಿ ಸತೀಶನ ಬಳಿಗೆ ಹೋಗಿ ಅವನ ಕಾಲಹತ್ತಿರ ಕುಳಿತು ಅಳುತ್ತಿರುವಳು. ಸತೀಶನಿಗೆ ಏನೋ ಸ್ವಪ್ನ, ಅದರಲ್ಲಿ ಯಾವುದೋ ಕಾಡುಮೃಗ ಹತ್ತಿರ ಬಂದಂತೆ ಅನುಭವ. ಇದಾದಮೇಲೆ ದಾಮಿನಿ ಮೊದಲಿಗಿಂತ ಹೆಚ್ಚಾಗಿ ಶ್ರೀವಿಲಾಸನನ್ನು ಹತ್ತಿರಕ್ಕೆ ಕರೆಯುವುದು, ಮಾತನಾಡಿಸುವುದು, ಹೀಗೆ ಮಾಡಿ ಸತೀಶನಿಗೂ ಸ್ವಾಮಿಗೂ ಸ್ವಲ್ಪ ಚಿಂತೆಯನ್ನುಂಟುಮಾಡುವಳು. ಸತೀಶ ದಾಮಿನಿಗೆ ನೀನೆಲ್ಲಾದರೂ ಹೋಗು ಎನ್ನುವನು; ಅವಳು ಒಪ್ಪುವುದಿಲ್ಲ. ಸತೀಶನು ಅವಳನ್ನು ಹೊರಟುಹೋಗೆಂದು ಹೇಳಿದ್ದು ತನ್ನಲ್ಲಿ ತಪ್ಪಾಯಿತೆಂದು ತಿಳಿಯುವನು, ಅವಳ ಕ್ಷಮೆಯನ್ನು ಬೇಡುವನು. ಇದರಿಂದ ಅವಳ ಮನಸ್ಸು ಕರಗಿ ಅವಳು ಸ್ವಾಮಿಯ ವಿಷಯದಲ್ಲಿ ವಿನಯದಿಂದ ನಡೆದುಕೊಳ್ಳುವಳು. ಈ ಮಧ್ಯೆ ಸ್ವಾಮಿಯ ಶಿಷ್ಯರಲ್ಲಿ ಒಬ್ಬನು ತನ್ನ ಹೆಂಡತಿಯ ತಂಗಿಯನ್ನು ಕೆಡಿಸಿ ಹೆಂಡತಿಯ ಬಲ

ವಂತಕ್ಕಾಗಿ ಆ ಹುಡುಗಿಯನ್ನು ಮದುವೆಯಾಗುವನು. ಆ ಹೆಂಡತಿ ವಿಷ ತೆಗೆದುಕೊಂಡು ಪ್ರಾಣಬಿಡುವಳು. ದಾಮಿನಿ ಸತೀಶನನ್ನು, ನಿಮ್ಮ ಭಜನೆಯಿಂದ ಕೀರ್ತನೆಯಿಂದ ಯಾವ ಜೀವ ಉದ್ಧಾರವಾಯಿತು, ಎಂದು ಕೇಳುವಳು. ಸತೀಶ ಮತ್ತೆ ಸ್ವಾಮಿಯನ್ನು ಬಿಟ್ಟುಹೋಗುವನು. ಶ್ರೀವಿಲಾಸ ದಾಮಿನಿಯರು ಅವನ ಜೊತೆಯಲ್ಲಿರಲು ಸತ್ಯವನ್ನು ತಿಳಿಯುವುದಕ್ಕಾಗಿ ಸತೀಶ ವ್ಯಥೆಯಲ್ಲಿ ಈಸುವನು. ದಾಮಿನಿ ಏನೇನು ಮಾಡಿದರೂ ಸತೀಶ ಅವಳನ್ನು ಮದುವೆಯಾಗುವ ಯೋಚನೆಯನ್ನು ಮಾಡುವುದಿಲ್ಲ; ನನ್ನನ್ನು ಬಿಟ್ಟುಬಿಡು, ನನ್ನ ದಾರಿ ಬೇರೆ, ಎಂದು ಬೇಡಿಕೊಳ್ಳುವನು. ಅವಳು ಒಪ್ಪುವಳು. ಆದರೆ ಹೋಗುವುದಕ್ಕೆ ಇರುವುದಕ್ಕೆ ಒಂದು ಸ್ಥಳವಿಲ್ಲ. ಊರಜನವೆಲ್ಲ ಇವರನ್ನು ಕುರಿತು ಆಡಿಕೊಳ್ಳುತ್ತಿರುವರು. ಹೀಗಿರುವಲ್ಲಿ ಶ್ರೀವಿಲಾಸ ದಾಮಿನಿಯನ್ನು ನನ್ನನ್ನು ಮದುವೆಯಾಗುವೆಯಾ ಎಂದು ಕೇಳುವನು. ದಾಮಿನಿ, ನಿನಗೇನು ಹುಚ್ಚು ಹಿಡಿಯಿತೆ, ಎಂದು ಕೇಳುವಳು; ನಿಜವಾಗಿಯೂ ಅದು ತನ್ನ ಅಪೇಕ್ಷೆ ಎಂದು ಅವನು ಹೇಳಲಾಗಿ ಅವನನ್ನು ಮದುವೆಯಾಗಲು ಒಪ್ಪುವಳು. ಮದುವೆಯಾದಮೇಲೆ ಕೊಂಚ ಕಾಲ ಸುಖವಾಗಿದ್ದು ದಾಮಿನಿ ರೋಗ ಬಂದು ತೀರಿಹೋಗುವಳು. ಹೋಗುವಾಗ್ಗೆ ಗಂಡನಿಗೆ, ನನಗೆ ನಿನ್ನ ಸಹವಾಸ ಸಾಕಾದಷ್ಟು ದೊರೆಯಲಿಲ್ಲ, ನನ್ನ ಇನ್ನೊಂದು ಜನ್ಮದಲ್ಲಿ ಮರಳಿ ನೀನು ನನ್ನವನಾಗಬೇಕೆಂದು ನನ್ನ ಆಸೆ, ಎನ್ನುವಳು. ಅವಳು ತೀರಿಹೋದ ಮೇಲೆ ಶ್ರೀವಿಲಾಸ ಈ ಕತೆಯನ್ನು ಹೇಳುವನು.

ಇದು ದೊಡ್ಡದಾದ ಒಂದು ಸಣ್ಣ ಕತೆ. ಇದರಲ್ಲಿ ಸಣ್ಣ ಕತೆಯಲ್ಲಿ ಇರಬೇಕಾದ ಮಿತವಾದ ಸನ್ನಿವೇಶವಿದೆ. ಆದರೆ ನಾಲ್ಕಾರು ಜೀವನಗಳ ಕೆಲ ಕಾಲದ ಕತೆಯನ್ನು ಹೇಳುವುದರಿಂದ ದೊಡ್ಡ ಕತೆಯ ಲಕ್ಷಣವೂ ಇದೆ. ಈ ಕತೆಯನ್ನು ಹೇಳಿರುವ ರೀತಿ ಅತ್ಯುತ್ತಮವಾದದು. ಇಲ್ಲಿ ಬರುವ ವ್ಯಕ್ತಿಗಳೆಲ್ಲ ಒಂದೊಂದು ರೀತಿಯಲ್ಲಿ ತೀಕ್ಷ್ಣವಾದ ಪ್ರಕೃತಿಯುಳ್ಳವರು. ದಾಮಿನಿಯದು ಮಿಂಚಿನಂತೆ ನೀತಿ ನೇಮಗಳ ಮುಗಿಲ ಲೋಕವನ್ನು ಪ್ರತಿಭಟಿಸುವ ಚೇತನ. ಸತೀಶ ಈ ಮಿಂಚಿನ ಹರಿತವನ್ನು ಸಹಿಸಿಕೊಂಡು ಅದನ್ನು ಒಲಿಸಿಕೊಳ್ಳಬಲ್ಲ ಆತ್ಮಬಲವುಳ್ಳವನು.

ಇವಳ ಸೌಂದರ್ಯವನ್ನು ತಿಳಿದೂ ಅದಕ್ಕೆ ಮೋಹಗೊಳ್ಳದೆ ನಿಲ್ಲುವ ಧೃತಿ ಅವನದು. ಲೀಲಾನಂದಸ್ವಾಮಿ ಭಕ್ತಿಯ ಪಂಥದಲ್ಲಿ ನಿಜವಾಗಿ ಸಂಸ್ಕಾರ ಹೊಂದಿರುವ ಸ್ವಭಾವದ ಸ್ವಾಮಿ. ಶ್ರೀವಿಲಾಸನೂ ಶಕ್ತನೇ. ತಾನೇ ಕತೆ ಹೇಳುವುದರಿಂದ ತನ್ನನ್ನು ಇತರರಿಗಿಂತ ಸಣ್ಣವನೆಂಬಂತೆ ಚಿತ್ರಿಸಿ ಕೊಂಡಿದ್ದಾನೆ; ಆದರೆ ಹತ್ತು ರೀತಿಯ ತೀವ್ರ ಸ್ವಭಾವಗಳೊಂದಿಗೆ ಸಹಜವಾಗಿ ಬೆರೆಯಬಲ್ಲ ಇವನ ಸ್ವಭಾವದ ಸಮತೂಕ ತೀವ್ರವಾದದ್ದೇ. ಆದರೆ ಸಮತೂಕವಾದದ್ದರಿಂದ ಅದು ತೀವ್ರವೆಂದು ಕಾಣುವುದಿಲ್ಲ: ಎಷ್ಟು ಕಾದರೂ ನೀರು ಉರಿಯುವುದಿಲ್ಲ. ಸತೀಶನ ದೊಡ್ಡಪ್ಪ ನಾಸ್ತಿಕ ವಾದಿ ಜಗಮೋಹನ ಇಲ್ಲಿ ಲೀಲಾನಂದ ಸ್ವಾಮಿಗೆ ಸರಿತೂಗುವ ವ್ಯಕ್ತಿ. ಸ್ವಾಮಿಗಿಂತ ಚೆನ್ನಾದ ಬಾಳನ್ನೇ ನಡಸಿದನೆನ್ನಬೇಕು. ಈ ತೇಜಸ್ವಿ ಗಳಾದ ವ್ಯಕ್ತಿಗಳನ್ನು ಕುರಿತ ಈ ಕತೆ ಬಹು ತೀವ್ರವಾಗಿ ನಡೆಯುತ್ತದೆ. ಇವರ ಮಧ್ಯೆ, ಪೂರ್ವಾಚಾರದ ಹೆಸರಿನಲ್ಲಿ, ಭಕ್ತಿಯ ಹೆಸರಿನಲ್ಲಿ, ತಮ್ಮ ತಮ್ಮ ಪ್ರಕೃತಿಗೆ ಅರ್ಹವಾದ ವಿವೇಕ ಅವಿವೇಕಗಳಲ್ಲಿ ನಡೆಯುತ್ತಾ ಸತೀಶನ ತಂದೆ ಅಣ್ಣಂದಿರೂ ಲೀಲಾನಂದ ಸ್ವಾಮಿಯ ಶಿಷ್ಯರೂ ಇದ್ದಾರೆ. ಒಟ್ಟಿನಲ್ಲಿ ಇಲ್ಲಿ ಕಾಣುವ ಪ್ರಪಂಚ ನಿಜವಾದದ್ದೆಂದು ಭಾಸವಾಗುತ್ತದೆ. ದಾಮಿನಿ ಮಾಡಿದ್ದೆಲ್ಲ ಸಾಮಾನ್ಯವಾಗಿ ನಡೆಯಬಹುದಾದದ್ದೇ ಎಂದು ಸಂದೇಹ ಬರುವುದುಂಟು. ಆದರೆ ದಾಮಿನಿ ಸಾಮಾನ್ಯಳಾದ ಸ್ತ್ರೀಯಲ್ಲ. ಅವಳ ಸ್ವಭಾವ ಅಸಾಧಾರಣವಾದದ್ದು. ಮನೆಯ ಒಳಗೂ ಹೊರಗೂ ಎಂಬ ಕತೆಯಲ್ಲಿ ಹೇಗೋ ಹಾಗೆ ಈ ಕತೆಯಲ್ಲಿಯೂ ಆರಂಭದಿಂದ ಕೊನೆಯವರೆಗೆ ನಮ್ಮ ಕುತೂಹಲ ಎಚ್ಚರಿಕೆಯಾಗಿರುತ್ತದೆ. ನಾವು ಕತೆಯನ್ನು ಆತುರದಿಂದ ಓದುತ್ತೇವೆ; ಅವರಲ್ಲಿ ಬರುವವರ ಕಷ್ಟಸುಖ ಗಳಿಂದ ಕಾತರರಾಗುತ್ತೇವೆ.

ಇದರ ಮೇಲೆ ಇವರಲ್ಲಿ ಹರಿಯುವ ಭಾವನೆಗಳು ಬಹಳ ಉದಾತ್ತ ವಾದವು. ಭಕ್ತನೂ ಒಳ್ಳೆಯವನಿರಬಹುದು; ನಾಸ್ತಿಕನೂ ಒಳ್ಳೆಯವನಿರ ಬಹುದು. ಭಕ್ತರೆನ್ನುವವರೆಲ್ಲ ಒಳ್ಳೆಯವರಲ್ಲ. ಭಕ್ತಿ ಭಕ್ತಿ ಎಂದು ಕೂಗಿ ಕುಣಿದು ಭಜನೆಯಲ್ಲಿ ಸೇರಿದ ಮಾತ್ರಕ್ಕೆ ಮನುಷ್ಯನ ಪ್ರಕೃತಿ ಬೇರೆ ಯಾಗುವುದಿಲ್ಲ. ದೇವರಿಲ್ಲವೆಂದ ಮಾತ್ರಕ್ಕೆ ಮಾನವನು ಕೆಟ್ಟವನಾಗ

ಬೇಕಾದದಿಲ್ಲ. ಒಬ್ಬೊಬ್ಬನಿಗೆ ಒಂದೊಂದು ದಾರಿ ಸರಿಯಾಗುತ್ತದೆ. ಅದು ಯಾವುದೆಂದು ಹುಡುಕಬೇಕು, ತಿಳಿಯಬೇಕು; ಅದು ತಿಳಿದಮೇಲೆ ಅದರಲ್ಲಿ ನಡೆಯಬೇಕು. ನಮ್ಮ ಒಳ್ಳೆಯದು ನಮ್ಮೆದುರಿಗೇ ಇರಬಹುದು; ನಾವು ಅದನ್ನು ತಿಳಿಯದೆ ಎಲ್ಲಿಯೋ ಮನಸ್ಸನ್ನಿಡುತ್ತೇವೆ. ಶ್ರೀವಿಲಾಸನು ಹತ್ತಿರದಲ್ಲಿದ್ದರೂ ಅವನ ಗುಣವನ್ನು ತಿಳಿಯದೆ ದಾಮಿನಿ ಸತೀಶನನ್ನು ಪ್ರೀತಿಸಿದಳು, ಅಪೇಕ್ಷಿಸಿದಳು. ಇಂಥ ಭಾವಗಳು ಕತೆಯಲ್ಲಿ ಮೇಲೆದ್ದು ಬರುವುವಾದರೂ ಇವನ್ನು ಉಪದೇಶಮಾಡುವುದಕ್ಕಾಗಿ ಕತೆಯನ್ನು ಬರೆದಿದೆ ಎಂದು ಕಾಣುವುದಿಲ್ಲ. ಕತೆಯನ್ನು ಕೌಶಲ್ಯದಿಂದ ಹೇಳಿರುವುದರಿಂದ ಅದರಲ್ಲಿ ಭಾವಗಳು ತಾವಾಗಿ ತಲೆಯೆತ್ತಿ ಕಾಣುತ್ತವೆ. ಠಾಕೂರರ ದೊಡ್ಡ ಕತೆಗಳಲ್ಲಿ ಈ ಕತೆಯನ್ನು ಅತ್ಯುತ್ತಮವಾದದೆಂದು ಹೇಳಬಹುದು. ಇದರಲ್ಲಿ ಹೇಳಿರುವ ಸಂಗತಿಗಳು ಸಹಜವಾಗಿ ಕಾಣುತ್ತವೆ. ಇಲ್ಲಿ ಚರ್ಚೆ ಹೆಚ್ಚಿಲ್ಲ, ಬೇಸರವಾಗುವಂತಿಲ್ಲ. ಮನಸ್ಸಿನ ಸ್ಥಿತಿಗತಿಗಳು, ಪ್ರಪಂಚದ ಸ್ಥಿತಿಗತಿಗಳು, ಒಂದು ಹೆಚ್ಚಾಗಿ ಒಂದು ಕಡಮೆಯಾಗದೆ ಸಮನಾಗಿ ಬಂದಿವೆ. ಕತೆ ಬಹಳ ದೊಡ್ಡದಾಯಿತೆನ್ನಿಸುವುದಿಲ್ಲ. ಇವರೇಕೆ ಹೀಗೆ ಮಾಡಿದರು ಎಂದು ಎಲ್ಲಿಯಾಗಲಿ ಪ್ರಶ್ನೆ ಬರುವುದಿಲ್ಲ. ಕತೆ ಹೇಳಿರುವ ರೀತಿ ಮೇಲಣ ಮಟ್ಟದಲ್ಲಿದೆ. ಸಣ್ಣ ಕತೆಗಳಲ್ಲಿ ಕಾಬೂಲಿವಾಲಾ ಹೇಗೋ ಹಾಗೆ ಇವರ ದೊಡ್ಡ ಕತೆಗಳಲ್ಲಿ ಇದು ಓದುವವರಿಗೆಲ್ಲಾ ಬಹು ಮೆಚ್ಚಾಗಬೇಕು.

**೪೦. ಇತರ ಕತೆಗಳು**

ಈ ಕತೆಗಳಲ್ಲದೆ ಠಾಕೂರರವು ಇಂಗ್ಲೀಷಿನಲ್ಲಿ ಪ್ರಕಟವಾಗದೆ ಬಂಗಾಳಿಯಲ್ಲಿ ಹಿಂದೆಯೇ ಪ್ರಕಟವಾದ ಹಲವು ಸಣ್ಣ ಕತೆಗಳು, ಈಚೆಗೆ ಬರೆದ ಕೆಲವು ಕತೆಗಳು ಇವೆ. 'ಯೋಗಾಯೋಗ' 'ಕೊನೆಯ ಕವಿತೆ' 'ಇಬ್ಬರು ಸೋದರಿಯರು' ಇವುಗಳಲ್ಲಿ ಕೆಲವು. 'ತೀನ್‌ಸಂಗಿ' 'ಗಲ್ಪ ಸಲ್ಪ' ಎಂಬವು ತೀರಾ ಕೊನೆಗೆ ಬರೆದ ಕತೆಗಳ ಗುಚ್ಛಗಳು. ಈ ಕತೆ ಕೆಲವು ಈಚೆಗೆ ಕನ್ನಡದಲ್ಲಿ ಪ್ರಕಟವಾಗಿವೆ. ಹಿಂದೆಯೇ ಬರೆದ ಕತೆಗಳಲ್ಲಿ ಬಹು ಒಳ್ಳೆಯವು ಎಂದು ಹೇಳಬಹುದಾದುವೆಲ್ಲ ಇಂಗ್ಲೀಷಿನಲ್ಲಿ ಬಂದಿವೆ

ಯೆಂದು ನಾವು ಊಹಿಸಬಹುದಾಗಿದೆ. ಈಚೆಗೆ ಬರೆದ ಕತೆಗಳಲ್ಲಿ ಇವರು ಬೇರೆಯೊಂದು ದಾರಿಯನ್ನು ಹಿಡಿದರು. ಕವಿವರರ ಕಣ್ಣು ಕೊನೆಗೂ ಹೊಸದಾಗಿತ್ತು, ಸೋಲಲಿಲ್ಲ. ಇವರ ಊಹೆ ಒಂದು ದಾರಿಯಲ್ಲಿ ಪೂರ್ಣತೆಯನ್ನು ಕಂಡಮೇಲೆ ಮತ್ತೊಂದು ದಾರಿಯಲ್ಲಿ, ಅದಾದ ಮೇಲೆ ಮತ್ತೊಂದರಲ್ಲಿ, ಸಹಜವಾಗಿ ಸುಲಭವಾಗಿ ನಡೆಯಿತು. ಒಂದು ರೀತಿಯ ಜೀವಕ್ಕೆ ಲೋಕ ಭಗವಂತನ ಆನಂದ ಮಂದಿರವಾಗಿ ಕಾಣುತ್ತ ದೆಂದು ಇವರು ಒಂದು ಉಪನ್ಯಾಸದಲ್ಲಿ ಹೇಳಿದಾರೆ. ಈ ಮಾತು ಇವರ ಮನೋಧರ್ಮವನ್ನೇ ವರ್ಣಿಸುತ್ತದೆ. ಈ ಮನೋಧರ್ಮಕ್ಕೆ ಬಾಳು ಸತತವೂ ಹೊಸದಾಗಿ ಕಾಣುತ್ತದೆ; ಆ ನೋಟದಿಂದ ಸತತವೂ ಅದರಲ್ಲಿ ಕೌತುಕ ಮೊಳೆಯುತ್ತದೆ. ಈ ಕಾರಣದಿಂದ ಠಾಕೂರರ ಕಥನ ಸಾಮ್ರಾಜ್ಯ ದಿಗಂತವನ್ನು ಮುಟ್ಟಿದಂತೆ ಕಂಡರೂ ವಿಶ್ರಾಂತವಾಗಲಿಲ್ಲ. ಅದರ ಪ್ರಸಾರ ಅವರ ಜೀವನದ ಪ್ರಸಾರದಂತೆ ವಿಶಾಲವಾದದು, ಬಹುಮುಖವಾದದು.

# ಅಧ್ಯಾಯ ೬

## ನಾಟಕಗಳು

### ೪೧. ಮೊದಲ ಮಾತು

ಕಾವ್ಯಗಳನ್ನು ಬರೆಯಲು ಮೊದಲುಮಾಡಿದ ಆರಂಭದ ವರ್ಷಗಳಲ್ಲಿಯೇ ಠಾಕೂರರು ನಾಟಕ ಬರೆಯುವುದಕ್ಕೂ ಮೊದಲುಮಾಡಿದರು. ಆರಂಭದ ಆ ಕಾವ್ಯಗಳಲ್ಲಿ ಹೇಗೋ ಹಾಗೆ ಆರಂಭದ ನಾಟಕದಲ್ಲಿಯೂ ಬಹುಭಾಗ ಅಭ್ಯಾಸದ ಕೆಲಸವಾಯಿತು. ಆ ಕೆಲಸದಲ್ಲಿ ಇವರ ಜೀವನ ಸ್ಮೃತಿಯಲ್ಲಿ ಇವರು ಎತ್ತಿಹೇಳಿರುವುದು ಮುಖ್ಯವಾಗಿ 'ಪ್ರಕೃತಿಯ ಪ್ರತಿಶೋಧ' ಎಂಬ ನಾಟಕ. ಈ ಕೃತಿಯಿಂದ ಪ್ರಾರಂಭಮಾಡಿ ಈ ಅಧ್ಯಾಯದಲ್ಲಿ ಇವರ ನಾಟಕಗಳನ್ನು ಕುರಿತು ವಿಚಾರಮಾಡಿದೆ.

### ೪೨. ಪ್ರಕೃತಿಯ ಪ್ರತಿಶೋಧ

ಒಂದು ಊರಿನ ಬಳಿ ಒಂದು ಗುಹೆಯ ಮುಂದೆ ಒಬ್ಬ ಸಂನ್ಯಾಸಿ ತಾನು ಸುಖದುಃಖಗಳನ್ನು ಮೀರಿದವನೆಂದೂ ಲೋಕವೆಲ್ಲಾ ಬರಿಯ ಮಾಯೆಯೆಂದೂ ತನ್ನ ಮನಸ್ಸಿನ ಸ್ಥಿತಿಯನ್ನು ಹೇಳುತ್ತಿರುತ್ತಾನೆ. ಆಮೇಲೆ ಅವನು ದಾರಿಯ ಪಕ್ಕದಲ್ಲಿ ನಿಂತು ದಾರಿ ನಡೆಯುವ ಪ್ರಪಂಚದ ಜನವನ್ನು ನೋಡುತ್ತಿರುತ್ತಾನೆ. ಗ್ರಾಮದ ವೃದ್ಧನೊಬ್ಬನೂ ಇಬ್ಬರು ಹೆಂಗಸರೂ ಬರುತ್ತಾರೆ; ಹಳ್ಳಿಯ ರೀತಿ ಮಾತನಾಡುತ್ತ ಮನೆಗೆ ಹೋಗುತ್ತಾರೆ. ಆಮೇಲೆ ಮೂವರು ಗ್ರಾಮದ ಜನ ಬರುತ್ತಾರೆ; ಅವರು ಹಳ್ಳಿಯ ಜಗಳವೊಂದನ್ನು ಚರ್ಚೆಮಾಡುತ್ತಿದಾರೆ. ಒಬ್ಬನು ಕೋಪಮಾಡುವನು; ಇನ್ನೊಬ್ಬನು ಅವನನ್ನು ಎತ್ತಿಕಟ್ಟುವನು; ಮೂರನೆಯವನು ಇದಕ್ಕೆ ಸಹಾಯ. ಆಮೇಲೆ ಇಬ್ಬರು ವಿದ್ಯಾರ್ಥಿಗಳು ಬರುತ್ತಾರೆ. ನಮ್ಮ ಗುರು ಹೇಳಿದ್ದು ಸರಿ ಎಂದು ಇವನು; ನಮ್ಮ ಗುರು ಹೇಳಿದ್ದು ಸರಿ ಎಂದು ಅವನು. ಆ ಗುರು ಹೇಳಿದ್ದು ಮರದಿಂದ ಬೀಜ ಬಂದಿತು ಎಂದು; ಈ ಗುರು ಹೇಳಿದ್ದು ಬೀಜದಿಂದ ಮರ ಹುಟ್ಟಿತು

ಎನ್ನುವುದು. ಸಂನ್ಯಾಸಿ "ಇದರಿಂದ ಅದು ಅದರಿಂದ ಇದು ಬಂದಿತೆನ್ನು ವುದು ತಪ್ಪು. ಇದರಲ್ಲಿ ಅದು ಅದರಲ್ಲಿ ಇದು ಇವೆ. ಇದೊಂದು ಚಕ್ರ. ಸ್ಥೂಲಸೂಕ್ಷ್ಮಗಳನ್ನು ಬೇರೆಯೆನ್ನುವುದು ತಪ್ಪು" ಎನ್ನುತ್ತಾನೆ. ಇಬ್ಬರು ಹುಡುಗರೂ ನಮ್ಮ ಗುರು ಹೇಳಿದ್ದು ಅದೇ ಎನ್ನುತ್ತಾರೆ. ಆಮೇಲೆ ಇಬ್ಬರು ಹೂವಾಡಿಗ ಹುಡುಗಿಯರು ಬರುತ್ತಾರೆ. ದಾರಿ ಹೋಗುವವನೊಬ್ಬ ಅವರೊಂದಿಗೆ ಸ್ವಲ್ಪ ಸರಸ ಮಾಡುತ್ತಾನೆ. ಆಮೇಲೆ ಒಬ್ಬ ಭಿಕ್ಷುಕ, ಆಮೇಲೆ ಒಬ್ಬ ಯೋಧ, ಬರುತ್ತಾರೆ. ಎಲ್ಲವನ್ನೂ ನೋಡಿ ಸಂನ್ಯಾಸಿ, ಇವರೆಲ್ಲ ಎಂಥ ಅಲ್ಪಜೀವಿಗಳು, ನಾನು ಇವರಂತೆ ಇನ್ನು ಆದೇನೆ, ಎಂದು ತನ್ನ ಜ್ಞಾನದ ಸ್ಥಿತಿಯಿಂದ ತಾನೇ ಉಬ್ಬು ತ್ತಾನೆ. ಆಗ್ಗೆ ಅಲ್ಲಿಗೆ ರಘು ಎಂಬ ಬಹಿಷ್ಕೃತನ ಮಗಳು ವಾಸಂತಿ ಎಂಬ ಹುಡುಗಿ ಬರುತ್ತಾಳೆ. ಆಚಾರವಂತೆಯೊಬ್ಬಳು ಅವಳನ್ನು ಧಿಕ್ಕರಿ ಸುತ್ತಾಳೆ. ಹುಡುಗಿ ಸಂನ್ಯಾಸಿಯ ಬಳಿ ಬಂದು ನಾನು ಹತ್ತಿರ ಬರಬಹುದೆ ಎನ್ನುತ್ತಾಳೆ. ಇವನು "ಏಕೆ ಕೂಡದು" ಎನ್ನುತ್ತಾನೆ. "ನಾನು ಬಹಿಷ್ಕೃತಳು. ಮೈಲಿಗೆಯುವಳು." "ಇವರೆಲ್ಲರೂ ಮೈಲಿಗೆಯೇ." "ನೀನು ನನ್ನನ್ನು ಮುಟ್ಟುವೆಯಾ?" "ಓಹೋ. ಏಕೆಂದರೆ ನನ್ನನ್ನು ಯಾವುದೂ ಮುಟ್ಟಲಾರದು." "ನನ್ನನ್ನು ಇನ್ನು ದೂರ ಹೋಗೆನ್ನ ಬೇಡ." ಸಂನ್ಯಾಸಿಗೆ ಮರುಕ ಹುಟ್ಟುತ್ತದೆ, ಅವನು ಅವಳನ್ನು ಸಂತೈಸುತ್ತಾನೆ. ಹಾಗೆಯೇ ಸ್ವಲ್ಪ ತತ್ತ್ವವನ್ನು ಮಾತನಾಡುತ್ತಾನೆ. ಅಷ್ಟುಹೊತ್ತಿಗೆ ಒಬ್ಬ ಪ್ರಯಾಣಿಕ ಬರುತ್ತಾನೆ. ಸಂನ್ಯಾಸಿ ಇವನ ಸಂಗಡಲೂ ತತ್ತ್ವವನ್ನು ಮಾತನಾಡುತ್ತಾನೆ. ಹತ್ತಿರ ಇರುವವಳು ರಘುವಿನ ಮಗಳು ಎಂದು ತಿಳಿದು ಪ್ರಯಾಣಿಕ ಹೊರಟುಹೋಗುತ್ತಾನೆ. ನಾಲ್ವರು ಒಂದು ಹೆಣವನ್ನು ಹೊತ್ತುಕೊಂಡು ಬರುತ್ತಿದಾರೆ. ಹೆಣವಾಗಿ ರುವವನು ನಿಜವಾಗಿಯೂ ಸತ್ತಿಲ್ಲ, ಏಳುತ್ತಾನೆ. ಇವರೆಲ್ಲ, ಸತ್ತವನು ಸುಮ್ಮನೆ ಬಿದ್ದಿರಬಾರದೇನೋ, ಎನ್ನುತ್ತಾರೆ. ಸ್ವಲ್ಪ ಚರ್ಚೆಯಾದಮೇಲೆ ಅವರೆಲ್ಲ ನಗುತ್ತ ಹೊರಟುಹೋಗುತ್ತಾರೆ. ಹುಡುಗಿ ಇಷ್ಟುಹೊತ್ತಿಗೆ ನಿದ್ರೆಹೋಗಿದಾಳೆ. ಸಂನ್ಯಾಸಿಗೆ ಅವಳ ಮೇಲೆ ಕನಿಕರ ಹುಟ್ಟುತ್ತದೆ. ಅಷ್ಟುಹೊತ್ತಿಗೆ ಒಬ್ಬ ಹೆಂಗಸೂ ಹಲವರು ಗಂಡಸರೂ ಬರುತ್ತಾರೆ.

ಒಂದು ಪ್ರೇಮ ಕಲಹ ನಡೆಯುತ್ತದೆ. ಆಮೇಲೆ ವಾಸಂತಿಯ ಮುದ್ದು ಮಾತುಗಳಿಗೆ ಸಂನ್ಯಾಸಿ ಮರುಳಾಗುತ್ತಾನೆ; ತಾನು ಪ್ರೇಮದ ಬಲೆಗೆ ಸಿಕ್ಕಿಕೊಳ್ಳುತ್ತಿದೇನೆಂದು ತಿಳಿದು ಅವಳನ್ನು ಬಿಟ್ಟು ಓಡಿಹೋಗುತ್ತಾನೆ. ಕೆಲವು ಕಾಲದಮೇಲೆ ಒಂದು ದಾರಿಯ ಬಳಿ ಕುಳಿತಿರುವಾಗ ಹಲವು ದನಕಾಯುವ ಹುಡುಗಿಯರು ಅಲ್ಲಿ ಹಾಡುತ್ತ ಆಡುತ್ತ ಹೋಗುತ್ತಾರೆ. ಸಂನ್ಯಾಸಿಗೆ ತಾನು ಅಂದು ತೊರೆದುಬಂದ ಆ ಹುಡುಗಿಯ ನೆನಪು ಬರುತ್ತದೆ. "ಅವಳು ಇನ್ನೂ ಅಲ್ಲಿಯೇ ಇರುವಳೋ? ಒಂಟಿಯಾಗಿ? ಹೋಗಲಿ ನನಗೇಕೆ ಆ ನೆನವು?" ಅಲ್ಲಿಗೆ ಆಗ ಒಂದು ಹರುಕು ಬಟ್ಟೆಯುಟ್ಟ ಹೆಣ್ಣುಮಗು ಬರುತ್ತದೆ. ಅವನು ಅದನ್ನು ಮಾತನಾಡಿಸುತ್ತಾನೆ, ಮುದ್ದಿಸುತ್ತಾನೆ. ಆಮೇಲೆ ಒಬ್ಬ ತಾಯಿ ಇಬ್ಬರು ಮಕ್ಕಳನ್ನು ಕರೆದುಕೊಂಡು ಬರುತ್ತಾಳೆ. ಇಬ್ಬರು ಸ್ನೇಹಿತರು ಮಾತನಾಡುತ್ತ ಹೋಗುತ್ತಾರೆ. ಇದನ್ನೆಲ್ಲ ಕೇಳಿದ ಸಂನ್ಯಾಸಿಗೆ ತಾನು ಬಿಟ್ಟುಬಂದ ಆ ಹುಡುಗಿಯ ನೆನಪು ಹೆಚ್ಚಾಗುತ್ತದೆ; ಅಯ್ಯೋ ಎಂದು ಮನಸ್ಸಿನಲ್ಲಿ ನೋವು ಹುಟ್ಟುತ್ತದೆ. ಕೊನೆಯಲ್ಲಿ ಅವನು, ನನ್ನ ವ್ರತ ಹೋಗಲಿ, ನಾನು ಸಂನ್ಯಾಸಿಯಾಗಿರುವುದು ಸಾಕು, ಎಂದು ಗ್ರಾಮಕ್ಕೆ ಬರುತ್ತಾನೆ; ರಘುವಿನ ಮಗಳೆಲ್ಲಿ ಎಂದು ವಿಚಾರಿಸುತ್ತಾನೆ. ಅದು ಜನರಿಗೆ ತಿಳಿಯದು. ಯಾರೋ ಒಬ್ಬಳು ಮಾತ್ರ "ರಘುವಿನ ಮಗಳೇ? ಅವಳು ಸತ್ತುಹೋದಳು" ಎನ್ನುತ್ತಾಳೆ. "ಛೇ, ಅವಳು ಸತ್ತಿರಲಾರಳು. ಇಲ್ಲ, ಇಲ್ಲ." "ಅಯ್ಯೋ ನೀನು ಸಂನ್ಯಾಸಿ. ಅವಳು ಸತ್ತರೆ ನಿನಗೇನು?" "ನನಗೆ ಮಾತ್ರವಲ್ಲ, ಅವಳು ಸತ್ತರೆ ಎಲ್ಲರೂ ಸತ್ತಂತೆ." "ಏನು ನಿನ್ನ ಮಾತು?" "ಅವಳಿಗೆ ಸಾವಿಲ್ಲ."

ಇದು ಒಂದು ಭಾವವನ್ನು ಪ್ರತಿಪಾದಿಸುವ ನಾಟಕ. ನಾವು ಪ್ರಕೃತಿಗೆ ವಿರೋಧವಾಗಿ ನಡೆದರೆ ಅದು ನಮ್ಮಮೇಲೆ ಮುಯ್ಯಿತೀರಿಸಿಕೊಳ್ಳುತ್ತದೆ ಎಂದು ತೋರಿಸುವುದು ಇದರ ಉದ್ದೇಶ. ಇದರಿಂದಲೇ ಇದಕ್ಕೆ ಪ್ರಕೃತಿಯ ಪ್ರತಿಶೋಧ ಎಂದು ಹೆಸರು ಬಂದಿರುವುದು. ಆದರೆ ಈ ಭಾವ ನಾಟಕದಲ್ಲಿ ಅಷ್ಟು ಚೆನ್ನಾಗಿ ಸಿದ್ಧಿಸುವುದಿಲ್ಲ. ಈ ಸಂನ್ಯಾಸಿ ಸಂನ್ಯಾಸದ ಉನ್ನತಾವಸ್ಥೆಯನ್ನು ಬಲ್ಲವನಲ್ಲ. ಇವನ ಭಾಷಣದಲ್ಲಿ

ಇವನು ತಾನು ಬಹಳ ಹಿರಿಯ ಸಂನ್ಯಾಸಿಯೆಂದು ತಿಳಿದಿದ್ದಂತೆ ಕಾಣುತ್ತದೆ ಹೊರತಾಗಿ ಸಂನ್ಯಾಸದ ಲಕ್ಷಣಗಳು ಕಾಣುವುದಿಲ್ಲ. ಅವ್ಮಾ ನಾನು ನಿದ್ದೆಮಾಡುತ್ತಿದೇನೆ ಎನ್ನುವ ಮಗು ಇನ್ನೂ ನಿದ್ರಿಸಿಲ್ಲ. ಈ ಸಂನ್ಯಾಸಿಯ ಹೆಮ್ಮೆಯೇ ಸಂನ್ಯಾಸಕ್ಕೆ ವಿರೋಧವಾದ ಭಾವ. ಇವನು ಪ್ರದರ್ಶಿಸುವ ಜ್ಞಾನವೂ ಬಹಳ ಸಾಮಾನ್ಯವಾದದ್ದು. ಇವನು ಶ್ರೇಷ್ಠತೆಯನ್ನು ಅನುಭವಿಸುವುದಕ್ಕೆ ಸಾಧಕವಾಗುವ ದಿನದ ಬಾಳಿನ ಚಿತ್ರಗಳೂ ಬಹಳ ಸಾಮಾನ್ಯವಾದವು. ಇವನ ಬಳಿಗೆ ಬರುವ ಆ ಹುಡುಗಿ ಇಲ್ಲಿ ಬರುವುದಕ್ಕೆ ಕಾರಣವೇನಿತ್ತೋ ಕಾಣುವುದಿಲ್ಲ. ಇಲ್ಲಿ ಮೊದಲಿಂದ ಇವನು ಇರಲಿಲ್ಲವೆ? ಇದ್ದರೆ ಇವರನ್ನು ಯಾರನ್ನೂ ಇವನು ಕಾಣನೆ? ಹೀಗೆ ಬರುವ ಈ ಚಿತ್ರಗಳನ್ನು ಮುಖ್ಯ ಚಿತ್ರಕ್ಕೆ ಕಟ್ಟಿರುವ ಕಟ್ಟು ಬಹು ಶಿಥಿಲವಾದದ್ದು. ಇವನು ವಾಸಂತಿಯ ಸಂಗಡಲೂ ದಾರಿಹೋಕನ ಸಂಗಡಲೂ ಆಡುವ ತತ್ವದ ಮಾತು ಅನವಶ್ಯಕವೆಂದು ಕಾಣುತ್ತದೆ. ತನಗೆ ಒಂದೂ ಬೇಕಾಗಿಲ್ಲವೆನ್ನುವ ಸಂನ್ಯಾಸಿಗೆ ಆ ಹುಡುಗಿಯಲ್ಲಿ ಪ್ರೇಮ ಹುಟ್ಟಿದ್ದು ಹೇಗೆ ಎಂದು ಇಲ್ಲಿ ವಿಶದವಾಗುವುದಿಲ್ಲ. ಹೊರಟುಹೋಗಿದ್ದವನಿಗೆ ಕನಿಕರ ಹುಟ್ಟಿದ್ದಕ್ಕೆ ಕಾರಣವೂ ಹೀಗೆಯೇ; ಸ್ಪಷ್ಟವಾಗಿಲ್ಲ. ಅವನು ಬರುವಾಗ್ಗೆ ಇವಳು ತೀರಿಹೋಗಿರುವುದು ಇದೇ ಕಾರಣದಿಂದಲೇ. ಸಂನ್ಯಾಸಿ ಕೊನೆಯಲ್ಲಿ ಆಡುವ ಮಾತಿಗೆ ಅರ್ಥವೂ ಸ್ಪಷ್ಟವಾಗಿಲ್ಲ. ಇಲ್ಲಿ ಪ್ರಕೃತಿ ನಡಸಿದ ಪ್ರತಿಶೋಧವಾಗಲಿ ಮೇಲೆಯೇ ಕಾಣುವ ರೀತಿಯದು. ಪ್ರಕೃತಿಯ ಪ್ರತಿಶೋಧ ಸಾಮಾನ್ಯವಾಗಿ ಇಷ್ಟು ಸ್ಪಷ್ಟವಾಗಿರುವುದಿಲ್ಲ; ಅದರ ಆವರ್ತ ಇಷ್ಟು ಸಣ್ಣದಾಗಿರುವುದಿಲ್ಲ. ತನ್ನನ್ನು ಒದೆದ ಕಾಲನ್ನು ಪ್ರಕೃತಿ ವಿಷ್ಣು ಭೃಗುವಿನ ಕಾಲನ್ನು ಒತ್ತಿದಂತೆ ಒತ್ತುತ್ತದೆ; ಒತ್ತುತ್ತ ಒತ್ತುತ್ತ ಆ ಒದೆಗೆ ಪ್ರೇರಕವಾದ ಕಾಲಡಿಯ ಕಣ್ಣನ್ನು ಕೀಳುತ್ತದೆ. ಪ್ರಕೃತಿಯ ಪ್ರತಿಶೋಧದಲ್ಲಿ ಚಿಕಿತ್ಸೆಯ ಭಾಗ ಹೆಚ್ಚು, ಮುಯ್ಯಿ ತೀರಿಸುವ ಭಾಗ ಕಡಮೆ. ಅದರ ಪ್ರತಿಶೋಧ ಪ್ರತಿಶೋಧವೇ ಅಲ್ಲ; ಅದು ಒಬ್ಬ ವ್ಯಕ್ತಿಯಂತೆ ನಡೆದುಕೊಳ್ಳುವುದಿಲ್ಲ. ಈ ಭಾವ ಠಾಕೂರರು ಆಮೇಲೆ ಬರೆದ ಕೃತಿಗಳಲ್ಲಿ ಕಾಣುತ್ತದೆ; ಇಲ್ಲಿ ಕಾಣುವ ಭಾವದಲ್ಲಿ ಈ ಆಳವಿಲ್ಲ.

ದೊಡ್ಡ ಭಾವವನ್ನು ತೋರಿಸುವ ಉದ್ದೇಶದಿಂದ ಹೊರಟ ಈ ನಾಟಕ ಎಷ್ಟು ಸಾಮಾನ್ಯವಾಗಿಹೋಗಿದೆಯೆಂದು ತಿಳಿಯಬೇಕಾದರೆ ಇದೇ ಭಾವ ಹೊಳೆಯುವ ಇಂಗ್ಲೀಷ್ ಗ್ರಂಥವೊಂದನ್ನು ಓದಬೇಕು. ಜಾರ್ಜ್ ಎಲಿಯಟ್ ಅವರು ಸೈಲಾಸ್ ಮಾರ್ನರ್ ಎಂಬದೊಂದು ಕತೆಯನ್ನು ಬರೆದರು. ಅದರಲ್ಲಿ ಒಬ್ಬ ನೇಯ್ಗೆಯ ಮನುಷ್ಯನು ಸ್ನೇಹಿತನ ಮೋಸದಿಂದಲೂ ಇಶ್ವರ ಅನ್ಯಾಯದಿಂದಲೂ ಬೇಸರಗೊಂಡು ಬಂದು ಪರಸ್ಥಳದಲ್ಲಿ ಒಬ್ಬನೇ ಇದ್ದುದು ವರ್ಣಿಸಲ್ಪಟ್ಟಿದೆ. ಮೊದಲು ಅವನ ಮನಸ್ಸು ಹಣವನ್ನು ಗಳಿಸುವುದರಲ್ಲಿ ಮುಳುಗುತ್ತದೆ. ಗಳಿಸಿದ ಆ ಹಣ ಕೆಲಕಾಲದಮೇಲೆ ಕಳವಾಗುತ್ತದೆ. ಅದು ಕಳವಾಗಿಹೋದ ರಾತ್ರಿಯೇ ಅವನ ಮನೆಗೆ ಒಂದು ದಿಕ್ಕಿಲ್ಲದ ಮಗು ದಾರಿ ತಪ್ಪಿ ಬರುತ್ತದೆ. ಹಣ ಕಳವಾಗಿ ಏನುಮಾಡುವುದೆಂದು ತೋಚದೆ ಇದ್ದ ಒಂಟಿಗನು ಮಗುವನ್ನು ಸಾಕಿಕೊಳ್ಳುತ್ತಾನೆ. ಒರ ಬರುತ್ತ ಅವನಿಗೆ ಅವಳು ಮಗಳಂತೆ ಜೀವದ ಜೀವವಾಗುತ್ತಾಳೆ. ನೇಯ್ಗೆಯವನ ಮನಸ್ಸು ವ್ಯತ್ಯಾಸವಾದ ರೀತಿ ಕಥೆಯಲ್ಲಿ ಹೆಜ್ಜೆ ಹೆಜ್ಜೆಯಾಗಿ ವಿವರಿಸಲ್ಪಟ್ಟಿದೆ. ಎಲ್ಲವೂ ಹೀಗೆಯೇ ಆಗಿರಬೇಕೆಂಬ ಭಾವನೆ ಮೂಡುವಂತೆ ಕತೆ ನಡೆಯುತ್ತದೆ; ಪ್ರತಿಶೋಧ ಬಂದ ದಾರಿಯೆಲ್ಲ ನಮ್ಮ ಎದುರಿಗೇ ಇವೆ. ಈ ನಾಟಕದಲ್ಲಿ ಪ್ರತಿಶೋಧವಾಯಿತೆಂದು ಹೇಳಿದೆ; ಹೇಗೆ ಆಯಿತು ಎನ್ನುವುದು ಕಾಣುವುದಿಲ್ಲ.

ಭಾಷಾಂತರದಲ್ಲಿ ನಾಟಕದ ಮೂಲದ ಭಾಷಣಗಳನ್ನು ಸಂಕ್ಷೇಪ ಮಾಡಿದೆ ಎಂದು ಮೊದಲಾಗಿ ಥಾಮ್ಸನ್‌ರವರು ಹೇಳುತ್ತಾರೆ. ಇದರಿಂದ ಭಾಷೆಯ ಸೊಗಸು ಕೆಟ್ಟಿರಬಹುದಲ್ಲದೆ ಭಾವಗಳು ಬಿಟ್ಟುಹೋಗಿರಲಾರವು. ಮುಖ್ಯ ಇದು ಠಾಕೂರರ ತಾರುಣ್ಯದ ಕೃತಿಯೆನ್ನುವುದನ್ನು ನಾವು ನೆನಪಿನಲ್ಲಿಡಬೇಕು. ಸಂನ್ಯಾಸದ ಭಾವನೆಗಳನ್ನು ಅವರು ಆಗ ಅನುಭವಿಸಿರಲಿಲ್ಲ; ಊಹಿಸುವುದಕ್ಕೆ ಅನುಕೂಲವಾಗುವಷ್ಟರಮಟ್ಟಿಗೆ ಸಂನ್ಯಾಸಿಗಳನ್ನು ನೋಡಿಯೂ ಇರಲಿಲ್ಲವೆಂದು ಕಾಣುತ್ತದೆ. ಜೀವನದ ಪ್ರೇಮ ಸುಖ ದುಃಖಗಳ ಅನುಭವವೂ ಆಗ್ಗೆ ಇವರಿಗೆ ಕಡಮೆಯಾಗಿಯೇ ಇದ್ದಿರಬೇಕು. ಆದರೂ ಅಷ್ಟು ಚಿಕ್ಕ ವಯಸ್ಸಿನಲ್ಲಿ ಬರೆದ ಗ್ರಂಥದಲ್ಲೇ ಇವರು ಎಂಥೆಂಥ

ಭಾವಗಳನ್ನು ಹಿಡಿದು ಗ್ರಂಥರಚನೆಗೆ ತೊಡಗಿದರು ಎನ್ನುವುದು ಇದರಿಂದ ಕಾಣುತ್ತದೆ. ಆ ಭಾವಗಳನ್ನು ವರ್ಣಿಸಿದ ರೀತಿ ಪಳಗಿದ ಕೈಯ ರೀತಿಯಲ್ಲದಿದ್ದರೂ ಉತ್ತಮವಾದ ಮಾರ್ಗದಲ್ಲಿದ್ದದು ಎಂದು ಕಾಣುತ್ತದೆ. ಆ ಹಳ್ಳಿಯ ಜನದ ಹಾಸ್ಯ, ಆ ಹೆಣ್ಣುಮಕ್ಕಳ ಸರಸ, ಆ ಆಚಾರವಂತೆಯ ಪೆಡಸು, ಆ ಸಂನ್ಯಾಸಿಯ ತತ್ವಾವಲೋಕನ, ಇವೆಲ್ಲ ಎಚ್ಚರಿಕೆಯಿಂದಿದ್ದ ಮನಸ್ಸನ್ನು ಸೂಚಿಸುತ್ತವೆ. ಈ ಬುದ್ಧಿ ಬೆಳೆದು ಪಕ್ವವಾದದಲ್ಲ, ಆದರೆ ಅದಕ್ಕೆ ಬೆಳೆಯುವ ಶಕ್ತಿಯಿದೆ, ಪಕ್ವವಾಗುವ ಯೋಗ್ಯತೆಯಿದೆ, ಎನ್ನುವುದು ಕಾಣುತ್ತದೆ.

### ೪೩. ರಾಜಾ ರಾಣಿ

ಇದಾದಮೇಲೆ ಪ್ರಕಟವಾದ ನಾಟಕ ರಾಜಾ ರಾಣಿ ಎಂಬುದು. ಈ ನಾಟಕದಲ್ಲಿ ಸಂಗತಿ ಎರಡು ಭಾಗವಾಗಿ ಕಾಣುತ್ತದೆ. ರಾಜಾ ವಿಕ್ರಮ ರಾಣಿ ಸುಮಿತ್ರೆಯ ಮೇಲಣ ಅತಿ ವ್ಯಾಮೋಹದಿಂದ ರಾಜ್ಯದ ಕೆಲಸಗಳಲ್ಲಿ ಅಸಡ್ಡೆಮಾಡಿರುವನು. ಸುಮಿತ್ರೆ ಕಾಶ್ಮೀರದ ಮಹಿಳೆ. ಅವಳ ನೆಂಟರೇ ಇಲ್ಲಿ ಅಧಿಕಾರಗಳಲ್ಲಿರುವರು. ಅವರು ಜನರನ್ನು ಸುಲಿಗೆ ಮಾಡುತ್ತಿರುವರು. ರಾಣಿ ವ್ಯಾಮೋಹದ ಮೆಟ್ಟಲಿಂದ ಮೇಲೆ ಏರಿ ರಾಜ್ಯದ ಕ್ಷೇಮದ ವಿಷಯದಲ್ಲಿ ಆಸಕ್ತಳಾಗಿದಾಳೆ. ಇದು ವಿಕ್ರಮನಿಗೆ ಕೋಪವನ್ನುಂಟುಮಾಡುತ್ತದೆ. ರಾಜನ ಮಿತ್ರ ದೇವದತ್ತ ಬಂದು ರಾಣಿಗೆ ರಾಜ್ಯದ ದುರವಸ್ಥೆಯನ್ನು ವರ್ಣಿಸುತ್ತಾನೆ. ರಾಜ ದೇವದತ್ತನನ್ನು ನೀನು ರಾಣಿಗೆ ರಾಜ್ಯದ ಮಾತನ್ನು ಹೇಳಿ ನನ್ನ ಸಂಸಾರವನ್ನು ಕೆಡಿಸಿದೆ ಎಂದು ದೂರುತ್ತಾನೆ; ಮಂತ್ರಿಯನ್ನು ಕರೆದು ಅಧರ್ಮಿಗಳಾದ ಮಂಡಲಾಧಿಪತಿಗಳನ್ನು ಓಡಿಸು ಎನ್ನುತ್ತಾನೆ. "ಯಾರು ಓಡಿಸುವವರು?" "ನಮ್ಮ ಸೇನಾಧಿಪತಿ." "ಅವನೂ ಪರದೇಶೀಯನೇ." "ಹಾಗಾದರೆ ಜನರನ್ನು ಕರೆ. ಭಂಡಾರವನ್ನು ಅವರಿಗೆ ಸೂರೆಮಾಡು." ಹೀಗೆಯೇ ಇರಲಾಗಿ ರಾಣಿ, ನಮ್ಮ ಬಂಧುಗಳನ್ನು ಕರೆಯಿಸು, ಎಂದು ಮಂತ್ರಿಗೆ ಹೇಳುತ್ತಾಳೆ. ಅವರು ಬರುವುದಿಲ್ಲ. ರಾಜನು ಅವರೊಂದಿಗೆ ಯುದ್ಧಮಾಡುವುದಿಲ್ಲ. ರಾಣಿ ತಾನು ಕಾಶ್ಮೀರಕ್ಕೆ ಹೋಗಿ ತನ್ನ

ತಮ್ಮನನ್ನು ಕರೆತಂದು ಈ ದುಷ್ಟರನ್ನು ನಿಗ್ರಹಿಸುವೆನೆಂದು ಹೊರಡು ತ್ತಾಳೆ. ರಾಜ ಅವಳನ್ನು ತಡೆಯುತ್ತಾನೆ; ಅವಳು ಕೇಳುವುದಿಲ್ಲ. ಹೋಗುವೆನೆಂದು ಸುಮ್ಮನೆ ಹೇಳುತ್ತಾಳೆ ಎಂದು ಭಾವಿಸಿ ರಾಜ ಬಿಡುವನು. ಅವಳು ಹೊರಟೇಹೋಗುವಳು; ಕೆಲಹೊತ್ತಿನಮೇಲೆ ಒಂದು ಕಾಗದವನ್ನು ಕಳುಹಿಸುವಳು. ಅವಳು ತನ್ನ ತಮ್ಮನನ್ನು ಕರೆ ತರಲು ಹೋದಳು ಎಂದು ತಿಳಿದೊಡನೆ ರಾಜನಿಗೆ ಕೋಪ ಬಂದು ಇವನು ಪ್ರತೀಕಾರವನ್ನು ನಿಶ್ಚಯಿಸಿಕೊಳ್ಳುತ್ತಾನೆ. ಇದು ಮೊದಲನೆಯ ಭಾಗ.

ಮರಳಿ ನಾವು ವಿಕ್ರಮನನ್ನು ನೋಡುವುದು ಕಾಶ್ಮೀರದಲ್ಲಿ. ಕುಮಾರಸೇನನ ದೇಶವನ್ನು ಇವನು ಲೂಟಮಾಡಿದಾನೆ, ಅವನ ಸೇನೆ ಸೋತು ಓಡಿದೆ. ಕುಮಾರಸೇನ ತಲೆಮರೆಸಿಕೊಂಡಿದಾನೆ. ಅವನ ಚಿಕ್ಕಪ್ಪ ಚಿಕ್ಕಮ್ಮ ವಿಕ್ರಮನಿಗೆ ಸಹಾಯವಾಗಿದಾರೆ. ಕುಮಾರಸೇನನ ಚಿಕ್ಕಮ್ಮ ಆತನಿಗೆ ಕೇಡನ್ನು ಬಯಸುತ್ತಿರುವಳು. ಎಷ್ಟಾದರೂ ವಿಕ್ರಮನ ಆಗ್ರಹ ಶಮನವಾಗದಿದೆ. ರಾಣಿ ವಿಕ್ರಮನನ್ನು ಬೇಡಲು ಬರುವಳು; ರಾಜ ಅವಳನ್ನು ನೋಡುವುದಿಲ್ಲ. ತ್ರಿಚುರದ ನಾಯಕನು ಬಂದು ತನ್ನ ಮಗಳನ್ನು ವಿಕ್ರಮನಿಗೆ ಕೊಡಬೇಕೆಂಬ ತನ್ನ ಅಪೇಕ್ಷೆಯನ್ನು ಅವನಿಗೆ ತಿಳಿಸುತ್ತಾನೆ. ಅವಳ ಹೆಸರು ಇಳಾ; ಅವಳು ಕುಮಾರಸೇನನ ಪ್ರೇಯಸಿ. ವಿಕ್ರಮ ಅವಳನ್ನು ಮಾತನಾಡಿಸಿದಾಗ ಅವಳು ತನಗೆ ಕುಮಾರಸೇನನಲ್ಲಿ ಮನಸ್ಸಿದೆ ಎಂದು ತಿಳಿಸುವಳು. ರಾಜ "ಹಾ ಕುಮಾರಸೇನ, ನೀನು ಪುಣ್ಯಶಾಲಿ, ಯುದ್ಧದಲ್ಲಿ ಸೋತು ತಲೆತಪ್ಪಿಸಿ ಕೊಂಡಿದ್ದರೂ ನಿನಗೆ ಪ್ರೇಯಸಿಯೊಬ್ಬಳಿದಾಳೆ; ನಿನ್ನಲ್ಲಿ ಅವಳಿಗೆ ಪ್ರೀತಿ ಯಿದೆ" ಎಂದು ಇಳೆಗೆ "ಆಗಲಿ, ನಿನಗೆ ಕುಮಾರಸೇನನನ್ನು ತರಿಸಿಕೊಡು ತ್ತೇನೆ" ಎಂದು ಹೇಳುವನು; ಕ್ಷಮಿಸಿದೇನೆಂದು ತಿಳಿಸಿ ಅವನನ್ನು ಕರೆತರಲು ಸೇನೆಯನ್ನು ಕಳುಹಿಸುವನು. ಕುಮಾರಸೇನ ಇವನ ಕ್ಷಮೆ ಯನ್ನೂ ಕರುಣೆಯನ್ನೂ ಒಪ್ಪಲಾರದ ವೀರ. ತನ್ನ ತಲೆಯನ್ನು ರಾಜನಿಗೆ ಕೊಂಡುಹೋಗಿ ಕೊಡಿ ಎಂದು ಸೇವಕರಿಗೆ ಅಪ್ಪಣೆಮಾಡಿ ಅವನು ತನ್ನ ಜೀವವನ್ನು ಕಳೆದುಕೊಂಡಿದಾನೆ. ಆ ತಲೆಯನ್ನು ರಾಣಿ ಸುಮಿತ್ರೆ ತರುವಳು; ತಂದು ರಾಜನಿಗೆ ಒಪ್ಪಿಸಿ ತಾನು ಪ್ರಾಣವನ್ನು ಬಿಡುವಳು.

ಇಳಿ ಆಗ ಬಂದು, ರಾಜನೇ ಎಲ್ಲಿ ನನ್ನ ಪ್ರಿಯ, ಎನ್ನುವಳು. ನಾಟಕ ಮುಗಿಯುವುದು.

ಇದು ಯಾವುದಾದರೂ ಒಂದು ಭಾವವನ್ನು ಪ್ರತಿಪಾದಿಸುವುದಕ್ಕೆಂದು ಬರೆದ ನಾಟಕವಲ್ಲ. ಇದಿಷ್ಟರಿಂದಲೇ ಇದು ಈ ಮೊದಲ ನಾಟಕಕ್ಕಿಂತ ಮೇಲಾದ ವಸ್ತುವನ್ನುಳ್ಳುದು ಎಂದು ಹೇಳಬಹುದು. ಪರದೇಶದಿಂದ ಬಂದಿರುವ ರಾಣಿಯ ಬಂಧುಗಳು ಜನರನ್ನು ಪೀಡಿಸುತ್ತಿರುವುದು, ಅವರನ್ನು ಶಿಕ್ಷಿಸು ಎಂದರೆ ಸೇನೆಯೂ ಅವರದಾಗಿದೆ ಎನ್ನುವುದು, ಈಗ ಭಾರತವರ್ಷದಲ್ಲಿ ಪರದೇಶೀಯರು ನಡೆಯಿಸುತ್ತಿರುವ ಆಡಳಿತವನ್ನು ಕುರಿತ ಟೀಕೆಯೋ ಎಂಬಂತೆ ಭಾಸವಾಗುವುದು ನಿಜ. ಆದರೆ ಈ ಮಾತು ಪ್ರಾಸಂಗಿಕ; ಕಥೆಯ ಮುಖ್ಯ ಭಾಗವಲ್ಲ. ಅಲಸನಾದ ವಿಕ್ರಮನ ಮತ್ತು ಪ್ರಜಾಪ್ರೇಮಿಯಾದ ಅವನ ರಾಣಿಯ ಬೆಳವಣಿಗೆ, ಈ ರಾಜ ಈ ರಾಣಿ ಎಂಥವರು ಏನಾದರು ಎಂಬ ವಿಷಯ, ಕಥೆಯ ಮುಖ್ಯ ಭಾಗ. ಇಲ್ಲಿ ಕುಮಾರಸೇನನ ಚಿಕ್ಕಮ್ಮ ಚಿಕ್ಕಪ್ಪ ಇವರ ಮಾತು ಅನವಶ್ಯಕವಾಗಿ ಬಂದಿದೆಯೆಂದು ತೋರುತ್ತದೆ. ಊಹೆ ವಿಶಾಲವಾದುದರಿಂದ ಉಂಟಾಗುವ ತೊಡಕುಗಳಲ್ಲಿ ಇದು ಒಂದು. ಎಲ್ಲೆಲ್ಲೂ ಜೀವದಿಂದ ಹೊರಹೊಮ್ಮುವ ನಮ್ಮ ಪ್ರಕೃತಿದೇವಿ ದೇವಾಲಯಗಳ ಮೇಲೆ ಅರಳಿಯ ಮರವನ್ನು ನೆಡುವಂತೆ ಬಹು ಊಹೆಯ ಕವಿ ಒಂದು ನಾಟಕಕ್ಕೆ ಸಾಕೆನ್ನುವಷ್ಟು ಇರುವ ಕತೆಯ ಮಧ್ಯೆ ಒಂದು ಸಂದರ್ಭ ಕಂಡಾಗ ಅದನ್ನು ಬಿಡಲಾರದೆ ಬೆಳೆಯಿಸಿ ಉಪಕಥೆ ಮಾಡುತ್ತಾನೆ; ನಾಟಕಕ್ಕೆ ಇದರಿಂದ ಹಾನಿತಟ್ಟುವಂತಾಗುತ್ತದೆ. ಆದರೆ ಒಂದು ಭಾಗದಲ್ಲಿ ರಾಜನ ಭೋಗಲಾಲಸೆ ರಾಣಿಯ ಕರ್ತವ್ಯಪರಾಯಣತೆಯೂ ಇನ್ನೊಂದು ಭಾಗದಲ್ಲಿ ರಾಜನ ಕೂಡ ಕುಮಾರಸೇನನ ಹಠವೂ ಪ್ರತಿಕಕ್ಷಿಗಳಾಗಿ ಎದ್ದುನಿಂತು ನಾಟಕಕ್ಕೆ ಶಕ್ತಿಯನ್ನು ಕೊಟ್ಟಿವೆ; ಮಧ್ಯೆ ಬರುವ ಹೆಚ್ಚಿನ ವಿಷಯವೂ ಅದರ ಸ್ವಾರಸ್ಯಕ್ಕೆ ಪೋಷಕವಾಗಿಯೇ ಇದೆ.

ಪಾತ್ರಗಳ ಸ್ವಭಾವದ ನಿರೂಪಣವೂ ಹೀಗೆಯೇ. ಒಬ್ಬ ಸ್ತ್ರೀಯ ಪ್ರೇಮವನ್ನು ಬಯಸಿ ರಾಜನು ಅಲಸನಾಗಿದಾನೆ. ಇವನ ಪ್ರೇಮವೆನ್ನುವುದು ಒಂದು ಅಲ್ಪ ರೀತಿಯ ಮನೋಧರ್ಮ. ರಾಣಿಗೆ ರಾಜನಲ್ಲಿ

ಪ್ರೇಮವಿದೆ; ಆದರೆ ಅದರ ಪಂಥ ಉತ್ತಮವಾದದು. ತನ್ನ ಹೃದಯದ ಪ್ರೇಮದ ಫಲವಾಗಿ ರಾಜ ಸ್ವಾರ್ಥಪರನಾಗಿದಾನೆ; ತನ್ನ ಹೃದಯದ ಪ್ರೇಮದ ಫಲವಾಗಿ ರಾಣಿ ಪ್ರಜಾಪ್ರೇಮಿಯಾಗಿದಾಳೆ. ಇವನು ತನ್ನ ಇಷ್ಟ ಕೆಟ್ಟಿತೆಂದು ಛಲತೊಟ್ಟು ರಾಷ್ಟ್ರಗಳನ್ನು ಹಾಳುಮಾಡುತ್ತಾನೆ; ಕ್ಷಮೆ ಬೇಡಬಂದ ರಾಣಿಯನ್ನು ಹಿಂದಟ್ಟುತ್ತಾನೆ. ಇವಳು ಜನದ ಒಳ್ಳೆಯದಕ್ಕಾಗಿ ಮೊದಲು ತನ್ನ ಅರಮನೆ ಐಶ್ವರ್ಯವನ್ನು ಬಿಡುತ್ತಾಳೆ; ಆಮೇಲೆ ತನ್ನ ಮರ್ಯಾದೆಯನ್ನು ಮರೆತು ಈ ಛಲಗಾರನಲ್ಲಿ ಭಿಕ್ಷೆಬೇಡ ಬರುತ್ತಾಳೆ. ಕುಮಾರಸೇನ ಇವಳಿಗೆ ತಕ್ಕ ಸೋದರ; ಇಳೆ ಅವನಿಗೆ ತಕ್ಕ ಪ್ರೇಯಸಿ. ಇವರೆಲ್ಲರ ಮಧ್ಯೆ ತಾನು ಬಹಳ ಶಕ್ತನೆಂದು ತಿಳಿದು ಕೊಂಡು ರಾಜ್ಯಗಳನ್ನು ಹಿಂಸಿಸಿದ ರಾಜಾ ವಿಕ್ರಮ ಕ್ಷುದ್ರನಾಗಿ ಕಾಣುತ್ತಾನೆ. ತನಗೆ ಸ್ತ್ರೀಯ ಪ್ರೇಮ ಸಿಕ್ಕದೆಹೋಯಿತಲ್ಲಾ ಎಂಬ ಇವನ ಮನಸ್ಸಿಗೆ ಇಳೆ ಕುಮಾರಸೇನನಲ್ಲಿ ತೋರುವ ಪ್ರೇಮ ಬೆಂಕಿ ಯಾಗುತ್ತದೆ. ಇಳೆಯ ಪ್ರೇಮಕ್ಕೆ ವಿಷಯನಾದವನು ಸ್ವಾರ್ಥಪರನಾದ ಭೋಗಲೋಲುಪನಾದ ಅಲ್ಪಜೀವಿಯಲ್ಲ. ನಿಜವಾದ ಪ್ರೇಮ ಮನುಷ್ಯ ನನ್ನು ಸ್ವಾರ್ಥದಿಂದ ಬಿಡಿಸುತ್ತದೆ, ಕಟ್ಟಿಹಾಕುವುದಿಲ್ಲ, ಎನ್ನುವ ಭಾವ ಇಲ್ಲಿ ಹೊಳೆಯುತ್ತದೆ. ಕೊನೆಗೆ ಹಠಮಾರಿ ವಿಕ್ರಮನು ಸ್ವಾರ್ಥ ಪರತೆಯಿಂದ ಸಾಧಿಸಿದ್ದು ಏನು? ನಷ್ಟವಾದ ರಾಜ್ಯ; ಮೂವರು ಉತ್ತಮ ಜೀವಿಗಳ ಸಾವು; ತನ್ನ ಅಹಂಕಾರದ ಬೆಂಕಿಯಿಂದ ಸುಟ್ಟುಹೋದ ತನ್ನ ಆಸೆಗಳ ಬೂದಿ. ಇಂಥವನು ತನ್ನ ಸುಖವನ್ನು ಸಾಧಿಸಲಾರನಲ್ಲದೆ ಇತರರಿಗೂ ಸುಖವನ್ನು ಸಾಧಿಸಲಾರನು. ವಿಕ್ರಮ ಇಳೆಗೆ ಅವಳ ಪ್ರಿಯನನ್ನು ಕೊಡುವೆನೆಂದನು. ನನ್ನ ಪ್ರಿಯನೆಲ್ಲಿ ಎಂದು ಅವಳು ಕೇಳುತ್ತಾ ಬರುತ್ತಾಳೆ. ಇವನು ಅವಳಿಗೆ ಕೊಡಬಹುದಾದದು ಆ ಪ್ರಿಯನ ರುಂಡ. ಹೀಗೆ ಈ ನಾಟಕದಲ್ಲಿ ಪಾತ್ರ ಸ್ವಭಾವ ನಿರೂಪಣ ಸಮಂಜಸವಾಗಿದೆ, ಸುಂದರವಾಗಿದೆ.

ಆದರೆ ಇಲ್ಲಿ ಹಲವು ಕಡೆ ಕಥಾವಸ್ತು ತಡಿಕೆಯಾಗಿ ಕಾಣುತ್ತದೆ, ತುಂಬಿಕೊಂಡಿಲ್ಲ. ಇದು ಭಾಷಾಂತರದಲ್ಲಿ ಸಂಭವಿಸಿದ ಕೊರತೆಯಾಗಿರ ಬಹುದು. ಮೂಲದಲ್ಲಿರುವ ಕೆಲವು ಭಾಗಗಳನ್ನು ಇಂಗ್ಲೀಷಿನಲ್ಲಿ

ಸಂಕೋಚಪಡಿಸಿದೆಯೆಂದೂ ಇತರ ಕೆಲವಂಶಗಳನ್ನು ವಾರ್ಪಡಿಸಿದೆ ಯೆಂದೂ ಕವಿವರರ ಇಂಗ್ಲೀಷ್ ವಿಮರ್ಶಕರು ಹೇಳಿದ್ದಾರೆ. ಮೂಲವನ್ನು ನೋಡಿದರೆ ಈ ಕೊರತೆ ಕಾಣದೆ ಇರಬಹುದು. ಆದರೆ ಅಗ್ಗ ಮಾತು, ಸನ್ನಿವೇಶ, ನಡೆ, ನುಡಿ ಎಲ್ಲಾ ಬಹಳ ಹೆಚ್ಚೆಂದು ಕಂಡು ನಾಟಕದ ಗತಿ ಮಂದವಾಗಬಹುದೆಂದು ಶಂಕಿಸಬಹುದಾಗಿದೆ. ಮೊತ್ತದಲ್ಲಿ ಈ ರಾಜಾ ರಾಣಿ ನಾಟಕ ನಾಟಕವಾಗಿ ಕಾಣುವುದಕ್ಕಿಂತ ಕತೆಯಾಗಿ ಚೆನ್ನಾಗಿ ಕಾಣುತ್ತದೆ; ಒಂದೊಂದು ಸಂದರ್ಭದಲ್ಲಿ ಸುಂದರವಾಗಿ ಕಾಣುತ್ತದೆ. ಇದು ಮುಖ್ಯವಾಗಿ ಕತೆಗಾರನು ಬರೆದ ನಾಟಕ.

## ೪೪. ಬಲಿ

ರಾಜಾ ರಾಣಿ ಆದಮೇಲೆ ವಿಸರ್ಜನ ಅಥವಾ ಬಲಿ ಎಂಬ ನಾಟಕ ಪ್ರಕಟವಾಯಿತು. ತ್ರಿಪುರದ ರಾಣಿ ಗುಣವತಿಗೆ ಮಕ್ಕಳಿಲ್ಲ. ಅವಳು ಹರಕೆಮಾಡಿಕೊಂಡು ಕಾಳೀ ದೇವಾಲಯಕ್ಕೆ ಬಲಿಗಾಗಿ ಜೀವಗಳನ್ನು ಒಪ್ಪಿಸುತ್ತಾಳೆ. ಅದರಲ್ಲಿ ಒಂದು ಮೇಕೆಯ ಮರಿ; ಅಪರ್ಣಾ ಎಂಬ ಹುಡುಗಿಯ ಆಟದ ಮೇಕೆ. ತನ್ನ ಮರಿಗಾಗಿ ಅಪರ್ಣೆ ಅಳುತ್ತಿರಲಾಗಿ ರಾಜನು ಅವಳಮೇಲೆ ಕನಿಕರದಿಂದ ಅದು ನಿಜವೇ ಎಂದು ವಿಚಾರಿಸಲು ದೇವಾಲಯಕ್ಕೆ ಬರುವನು. ಅಪರ್ಣೆಯ ದುಃಖವನ್ನು ನೋಡಿ ದೇವಿಯ ಭಕ್ತನಾದ ಜಯಸಿಂಹನಿಗೆ ಕೂಡ ಮರುಕವುಂಟಾಗುವುದು. ರಾಜನು ಈ ಅನ್ಯಾಯವನ್ನು ನೋಡಿ ಇನ್ನುಮೇಲೆ ದೇವಿಗೆ ಜೀವಗಳ ಬಲಿ ಕೊಡುವುದು ಬೇಡ ಎಂದು ಆಜ್ಞೆಮಾಡುವನು. ಎಲ್ಲರೂ ಹೀಗೆ ಉಂಟೆ ಎನ್ನುವರು. ದೇವಿಯ ಅರ್ಚಕ ರಘುಪತಿ, ಶಾಸ್ತ್ರಕ್ಕೆ ವಿರೋಧ ವಾಗಿ ಆಜ್ಞೆಮಾಡುವುದಕ್ಕೆ ರಾಜನಿಗೆ ಅಧಿಕಾರವಿಲ್ಲ, ಎನ್ನುವನು. ರಾಜ ಒಪ್ಪುವುದಿಲ್ಲ. ಅರ್ಚಕ ಕೋಪದಿಂದ ಹೊರಟುಹೋಗುವನು. ಜಯಸಿಂಹ ಅವನಿಗೆ ಸದಾ ಸಹಾಯಮಾಡುವುದಾಗಿ ನಿಲ್ಲುವನು. ಇಷ್ಟುಹೊತ್ತಿಗೆ ಗುಣವತಿ ಕಳುಹಿಸಿದ ಜೀವಗಳನ್ನು ದೇವಾಲಯದಲ್ಲಿ ತೆಗೆದುಕೊಳ್ಳುವುದಿಲ್ಲವೆಂದುದರಿಂದ ರಾಜನು ಮಾಡಿದ ಆಜ್ಞೆ ರಾಣಿಗೆ ತಿಳಿಯುವುದು. ಅವಳು ಬಂದು ರಾಜನನ್ನು ಹೀಗೆ ಮಾಡಬಾರದೆನ್ನುವಳು.

ಅವನು ಕೇಳುವುದಿಲ್ಲ. ಆಮೇಲೆ ಅವಳೂ ರಘುಪತಿಯೂ ಮಾತನಾಡಿ ಕೊಂಡು ರಾಣಿ ಅರ್ಚಕನಿಗೆ, ನಿಮ್ಮ ಇಷ್ಟದಂತೆ ಪೂಜೆಮಾಡಿ, ನಾನು ನೋಡಿಕೊಳ್ಳುತ್ತೇನೆ, ಎನ್ನುವಳು; ಮರಳಿ ರಾಜನನ್ನು ಒಪ್ಪಿಸಲು ನೋಡುವಳು; ಆಗುವುದಿಲ್ಲ. ರಘುಪತಿ ಸೇನಾಧಿಕಾರಿಯನ್ನು ರಾಜನ ಮೇಲೆ ಎತ್ತಿಕಟ್ಟುವನು. ಜಯಸಿಂಹ, ಸೇನೆಯೇಕೆ ಇದಕ್ಕೆ, ನಮ್ಮ ಅಂತರಂಗದಿಂದ ನಮ್ಮ ಬಲವನ್ನು ಪಡೆಯೋಣ, ಎನ್ನುವನು. ಆಚಾರ ವಂತರು ಬಾಗಿಲು ತೆಗೆದು ದೇವರಿಗೆ ಎಂದಿನಂತೆ ಬಲಿಕೊಡಲು ಯತ್ನ ಮಾಡುವರು; ರಾಜ ಬಂದು ಕೂಡದೆನ್ನುವನು; ರಘುಪತಿ ಹಠಮಾಡು ವನು. ರಾಜ ಸೇನಾಧಿಕಾರಿಯನ್ನು ಕೂಗಿ ಬಲಿಯನ್ನು ನಿಲ್ಲಿಸೆನ್ನುವನು; ಅವನು ಒಪ್ಪುವುದಿಲ್ಲ. ಸೇನಾಧಿಕಾರ ಚಂದ್ರಪಾಲನಿಗಾಗುವುದು. ರಘುಪತಿ ರಾಜನ ತಮ್ಮ ನಕ್ಷತ್ರನನ್ನು ಕರೆದು, ದೇವಿ ಕ್ಷತ್ರಿಯ ರಕ್ತ ವನ್ನು ಅಪೇಕ್ಷಿಸುತ್ತಾಳೆ, ನಿಮ್ಮ ಅಣ್ಣನನ್ನು ಕೊಲ್ಲು, ನೀನು ರಾಜನಾಗು ವೆಯಂತೆ, ಎನ್ನುತ್ತಾನೆ. ಅವನು ಒಪ್ಪುವುದಿಲ್ಲ. ಅರ್ಚಕನು, ಮರಳಿ ಮಾತನಾಡೋಣ, ಎಂದು ಅವನನ್ನು ಬಿಡುತ್ತಾನೆ. ಇದನ್ನೆಲ್ಲ ನೋಡಿದ ಜಯಸಿಂಹ ಇಂಥ ಅನ್ಯಾಯ ಉಂಟೇ ಎಂದು ಚರ್ಚೆಮಾಡುತ್ತಾನೆ; ಆವಶ್ಯಕವೆಂದು ತೋರಿದರೆ ನಾನು ರಾಜನನ್ನು ಕೊಲ್ಲುತ್ತೇನೆ, ಅಣ್ಣ ನನ್ನು ಕೊಲ್ಲೆಂದು ತಮ್ಮನಿಗೆ ಹೇಳುವುದೆ, ಎನ್ನುತ್ತಾನೆ. ಅರ್ಚಕನು ಜಯಸಿಂಹನನ್ನು ಸಾಕಿದಾತನು; ಸಾಕುಮಗನು ಈ ತಂಟೆಯ ಕೆಲಸಕ್ಕೆ ಕೈಹಾಕುವುದು ಅವನಿಗೆ ಇಷ್ಟವಿಲ್ಲ. ಮಧ್ಯೆ ರಾಜನನ್ನು ಕೊಲ್ಲಬೇಕೆಂಬ ಮಾತು ಚಂದ್ರಪಾಲನಿಗೆ ತಿಳಿದು ಅವನು ರಾಜನಿಗೆ ಎಚ್ಚರಿಕೆ ಹೇಳು ತ್ತಾನೆ. ರಾಜನು ದೇವಾಲಯದಲ್ಲಿ ಒಬ್ಬನೇ ಪ್ರಾರ್ಥನೆ ಮಾಡುತ್ತಿರು ವಾಗ ಜಯಸಿಂಹ ಅಲ್ಲಿ ಬಂದು ದೇವಿಯನ್ನು ಕುರಿತು, ನಿನಗೆ ಕ್ಷತ್ರಿಯ ರಕ್ತ ಬೇಕೆ, ನಿಜವಾಗಿ ಹೇಳು, ಎನ್ನುತ್ತಾನೆ. ಬೇಕು ಎಂದು ಉತ್ತರ ಬರುತ್ತದೆ. ಉತ್ತರ ಹೇಳುವವನು ರಘುಪತಿ; ವಿಗ್ರಹದ ಹಿಂದುಗಡೆ ಯಿಂದ ದೇವಿಯಂತೆ ಮಾತನಾಡುವನು. ಜಯಸಿಂಹ ರಾಜನನ್ನು ಕೊಲ್ಲುವೆನೆನ್ನುವನು; ರಘುಪತಿಯ ಧ್ವನಿ ತಿಳಿಯಲಿಲ್ಲವೆ ಎಂದಾಗ ಹಿಂದೆಗೆಯುವನು. ರಾಜ ಹೊರಟುಹೋದಮೇಲೆ ರಘುಪತಿ ಹೊರಗೆ

ಬಂದು ಜಯಸಿಂಹನಿಂದ ರಾಜನನ್ನು ಕೊಲ್ಲುವಂತೆ ವಾಗ್ದಾನ ತೆಗೆದು ಕೊಳ್ಳುವನು. ರಾಣಿ ತನ್ನ ಹಠದಿಂದ ರಾಜನನ್ನು ಒಪ್ಪಿಸಲು ನೋಡಿ ಕೈಯಲ್ಲಾಗದೆ ದುಃಖಿಸುತ್ತ ರಾಜನಿಗೆ ಪ್ರಿಯನಾಗಿರುವ ಧ್ರುವ ಎಂಬ ಹುಡುಗನನ್ನು ಕೊಲ್ಲುವಂತೆ ನಕ್ಷತ್ರನನ್ನು ಎತ್ತಿಕಟ್ಟುವಳು. ಜಯ ಸಿಂಹ ದಿಕ್ಕುತೋಚದಂತೆ ಇರುತ್ತಾ ಅಪರ್ಣೆಯ ಪ್ರೇಮದಿಂದ ಸಮಾಧಾನಗೊಳ್ಳುತ್ತಾನೆ. ನಕ್ಷತ್ರನೂ ರಘುಪತಿಯೂ ಧ್ರುವನನ್ನು ಕೊಲ್ಲುವುದಕ್ಕೆ ಏರ್ಪಾಡುಮಾಡಿದಾರೆ. ರಾಜ ಬಂದು ಅವರನ್ನು ಹಿಡಿದುಬಿಡುತ್ತಾನೆ. ರಘುಪತಿಗೆ ಗಡಿಪಾರು ಅಪ್ಪಣೆಯಾಗುತ್ತದೆ. ಅವನು ಒಂದು ದಿನದ ಅವಧಿ ಬೇಡುತ್ತಾನೆ, ಜಯಸಿಂಹನನ್ನು ಮರಳಿ ಹುರಿಗೊಳಿಸುತ್ತಾನೆ. ಜಯಸಿಂಹ "ಕ್ಷತ್ರಿಯ ರಕ್ತಕ್ಕೆ ಬೇರೆಯವ ರೇಕೆ? ನಾನೇ ಕ್ಷತ್ರಿಯ, ದೇವಿ ನನ್ನ ರಕ್ತವನ್ನು ಕುಡಿಯಲಿ" ಎಂದು ತನ್ನನ್ನು ತಾನೇ ಕೊಂದುಕೊಳ್ಳುತ್ತಾನೆ. ಅಪರ್ಣೆ ಬಂದು ದುಃಖಿಸು ತ್ತಾಳೆ. ರಘುಪತಿಗೆ ಕೂಡ ತನಗೆ ಬೇಕಾದ ಜಯಸಿಂಹನು ಹೋದದ ರಿಂದ ದೇವತೆಯಲ್ಲಿ ನಂಬಿಕೆ ಕೆಡುತ್ತದೆ. ಅವನು ದೇವಿಯ ಮೂರ್ತಿ ಯನ್ನು ಕಿತ್ತೆಸೆಯುತ್ತಾನೆ. ಎಲ್ಲರೂ ದೇವಿ ಮಾನವ ಸ್ತ್ರೀಯ ಹೃದಯ ದಲ್ಲಿದಾಳೆ ಎಂದು ಹೊರಡುತ್ತಾರೆ. ರಘುಪತಿ ಜಯಸಿಂಹನ ಸಲುವಾಗಿ ಅಪರ್ಣೆಯನ್ನು ಕನಿಕರದಿಂದ ಕರೆದುಕೊಂಡು ಹೋಗುತ್ತಾನೆ.

ಸಂನ್ಯಾಸಿಯ ನಾಟಕದಂತೆ ಇದೂ ಒಂದು ಭಾವವನ್ನು ಪ್ರತಿ ಪಾದಿಸುವುದಕ್ಕೆ ಹೊರಟಿರುವ ನಾಟಕ. ದೇವರ ಹೆಸರಿನಲ್ಲಿ ಜೀವವನ್ನು ತೆಗೆಯುವುದು ತಪ್ಪು; ಜೀವವನ್ನು ಅಪೇಕ್ಷಿಸುವ ದೈವ ದೇವರಲ್ಲ; ಅಂಥ ದೈವಕ್ಕಾಗಿ ಜೀವವನ್ನು ತೆಗೆಯುವರ ಮನಸ್ಸು ಮತ್ತೆ ಮತ್ತೆ ಒರಟಾಗುತ್ತದೆ; ನಿಜವಾದ ದೈವ ಮಾನವನ ಹೃದಯದ ಕರುಣೆ. ಇದೇ ನಾಟಕದ ಮುಖ್ಯ ಭಾವ. ಇದಿಷ್ಟೂ ನಿಜವಾದ ಭಾವನೆ; ಇದೆಲ್ಲ ಸರಿಯಾದ ಮಾತು ಎಂದು ಎಲ್ಲರೂ ಒಪ್ಪಬಹುದು. ಸನಾತನ ಧರ್ಮದ ಆರಂಭ ದಶೆಯಲ್ಲಿಯೇ ಯಜ್ಞದಲ್ಲಿ ಪಶುವನ್ನು ಕೊಲ್ಲಕೂಡದೆಂಬ ಭಾವನೆ ತಲೆಯೆತ್ತಿತ್ತು; ಜೈನ ಧರ್ಮ ಬೌದ್ಧ ಧರ್ಮಗಳು ಈ ಭಾವನೆಯನ್ನು ಮುಂದಿಟ್ಟುಕೊಂಡೇ ಬೆಳೆದವು; ವೀರಶೈವ ವೀರವೈಷ್ಣವ ಮತಗಳು

ಈ ದೃಷ್ಟಿಯಿಂದಲೇ ಮುಂಬರಿದವು. ಈಗ ಈ ಮತಗಳವರು, ಇಲ್ಲವೇ ಯಜ್ಞಮಾಡುವುದಿಲ್ಲ, ಇಲ್ಲವೇ ಪಿಷ್ಟ ಪಶುವನ್ನು ಹನನಮಾಡಿ ಯಜ್ಞ ವೆನ್ನುವರು. ಈ ನಾಟಕದಲ್ಲಿ ಈ ಮರುಕದ ಮತ ಸಾಧಾರವಾಗಿ ಪರಿಪೋಷಿತವಾಗಿದೆ. ಯಜ್ಞ ಒಳ್ಳೆಯದು, ಜೀವವನ್ನು ತೆಗೆಯುವುದು ತಪ್ಪಲ್ಲ, ಜೀವವನ್ನು ತೆಗೆಯುವುದು ಆವಶ್ಯಕ, ಎಂದು ವಾದಿಸುವವರ ಮಾತು ರಘುಪತಿಯ ಬಾಯಲ್ಲಿ ಕೇಳುತ್ತದೆ. ಜೀವ ತೆಗೆಯುವುದರಲ್ಲಿ ದಯೆಯನ್ನು ಒತ್ತಟ್ಟಗಿಟ್ಟು ಒರಟಾದ ಇವನ ಮನಸ್ಸಿಗೆ ರಾಜನನ್ನು ಕೊಲ್ಲುವುದೂ ಧ್ರುವನನ್ನು ಕೊಲ್ಲುವುದೂ ಸಾಮಾನ್ಯವಾಗಿ ಕಾಣುತ್ತದೆ. ರಾಣಿ ಗುಣವತಿಗೆ ಕೂಡ ಮತದ ಸಂಭ್ರಮದಲ್ಲಿ ಹೆಣ್ಣಿಗೆ ಸಹಜವಾದ ಕನಿಕರ ಇಲ್ಲದೆಹೋಗಿದೆ. ತನ್ನ ಹೊಟ್ಟೆಯುರಿಯನ್ನು ಇವಳು ಏನೂ ಅರಿಯದ ಎಳೆಯನಾದ ಧ್ರುವನ ರಕ್ತದಿಂದ ನಂದಿಸುವುದಕ್ಕೆ ನೋಡು ವಳು. ಈ ದ್ವೇಷವೋ ನಿರ್ವ್ಯಾಜವಾದದೆನ್ನುವಂತಿದೆ. ಕ್ರೌರ್ಯದಿಂದ ಸುಖಿಸುವ ಜೀವ ಉದ್ದೇಶವಿಲ್ಲದೆ ಉಪಾಸಿಸಬಹುದಾದ ಕ್ರೌರ್ಯ ಇಲ್ಲಿ ಕಾಣುತ್ತದೆ. ಕರುಣೆಯ ಪಕ್ಷವೂ ಇದರಂತೆಯೇ ವ್ಯಕ್ತವಾಗಿದೆ. ಒಂದು ಮೇಕೆಯ ಮರಿಗಾಗಿ ಅಳುತ್ತಿರುವ ಹೆಣ್ಣುಮಗು, ಅದರ ಪಕ್ಷವನ್ನು ವಹಿಸಿ ಯಜ್ಞಗಳನ್ನೇ ನಿಲ್ಲಿಸಬೇಕೆನ್ನುವ ರಾಜ, ಸಂಪ್ರದಾಯವನ್ನು ಬಿಡಲಾರದೆ ಕಾರಿಣ್ಯಕ್ಕೆ ಇಳಿಯಲಾರದೆ ತೊಳಲುವ ಜಯಸಿಂಹ, ನಕ್ಷತ್ರ, ಚಂದ್ರಪಾಲ; ಕೊನೆಗೆ ದೇವತಾವಿಗ್ರಹವನ್ನು ಬೀದಿಗೆಸೆದು ಕಾರುಣ್ಯ ವಾದಿಗಳನ್ನು ಸೇರುವ ಹೊಸ ರಘುಪತಿ: ಇವರಲ್ಲಿ ಈ ಪಕ್ಷವು ಪ್ರಕಾಶ ವಾಗಿದೆ. ಹೀಗೆ ಯಜ್ಞಗಳು ಬೇಕೇ ಬೇಡವೇ ಎಂಬ ವಿಷಯ ಇಲ್ಲಿ ನಾಟಕದ ಸ್ವರೂಪದಲ್ಲಿ ವಿಮರ್ಶೆಯಾಗಿದೆ. ಹೋತವೇ, ದೇವರಿಗೆ ಮೊರೆಯಿಡು, ನನ್ನನ್ನು ಕೊಲ್ಲುವರೆಂದು ಕೂಗಿಕೊ, ಎಂಬದಾಗಿ, ಮನುಷ್ಯನಿಗೆ ಅವನ ದಾರಿ ಹೇಳಿ ಪ್ರಯೋಜನವಿಲ್ಲವೆಂಬುದನ್ನು ಕಂಡು ಈ ಮೃಗಕ್ಕಾದರೂ ಅದರ ದಾರಿಯನ್ನು ಕಲಿಸೇನು ಎಂದ ಕರುಣೆಯ ವಾಣಿ ಈ ಗ್ರಂಥದಲ್ಲಿ ಮತ್ತೆ ಮತ್ತೆ ಧ್ವನಿಮಾಡುತ್ತದೆ.

ಭಾವವೊಂದನ್ನು ಪ್ರದರ್ಶಿಸುವುದಕ್ಕೆ ಹೊರಟದ್ದರೂ ಈ ನಾಟಕದ ಕತೆ ಸುಮ್ಮವಾಗಿದೆ. ಇದರಲ್ಲಿ ಸಂಗತಿಗಳು ಸಾಕಾದಷ್ಟು ಇವೆ.

ಪಾತ್ರಗಳ ಜೀವನದ ಹಲವು ಆಗುಹೋಗುಗಳು ನಮ್ಮ ಮುಂದೆ ಬರುತ್ತವೆ. ಹಾಗೆ ನೋಡಿದರೆ ಇಲ್ಲಿ ಸಂಗತಿಗಳೂ ಆಗುಹೋಗುಗಳೂ ಸ್ವಲ್ಪ ಹೆಚ್ಚು ಎಂದೇ ಹೇಳಬಹುದು. ದುರಾಗ್ರಹಗಳು ಶಾಪಗಳು ಕೃತ್ರಿಮುಗಳು ಹಠಗಳು ಇಷ್ಟು ಇಲ್ಲದಿದ್ದರೂ ಕತೆ ಚೆನ್ನಾಗಿಯೇ ಇರುತಿತ್ತೆಂದು ಕಾಣುತ್ತದೆ. ನಾಟಕ ಚೆನ್ನಾಗುವುದಕ್ಕೆ ಪುಟಕ್ಕೊಂದು ಹೊಸ ಸನ್ನಿವೇಶ ಬರಬೇಕಾದದಿಲ್ಲ. ಇದರಮೇಲೆ ಧ್ರುವನನ್ನು ಕುರಿತ ಭಾಗ ಈನಾಟಕದಲ್ಲಿ ಕೊಸರು ಎಂದೇ ಹೇಳಬೇಕು; ಗುಣವತಿಯ ಗುಣ ಎಷ್ಟು ಹೀನವಾಗಿತ್ತೆಂದು ತೋರಿಸುವುದಕ್ಕೆಂದೇ ಕತೆಯಲ್ಲಿ ಸೇರಿರುವಂತೆ ಕಾಣುತ್ತದೆ. ಅದು ಬರುವುದೂ ಸಾವಕಾಶ; ಬಂದಲ್ಲಿ ಅವಶ್ಯಕವಾಗಿ ಬರಬೇಕಾವದೆಂದು ತೋರುವುದಿಲ್ಲ. ಆದರೆ ಪಾತ್ರಗಳ ಸ್ವಭಾವ ನಿರೂಪಣ ಒಟ್ಟನಲ್ಲಿ ಚೆನ್ನಾಗಿದೆ. ಒಂದು ರಾಷ್ಟ್ರದ ನಂಬಿಕೆಯೆಲ್ಲ ರಘುಪತಿಯಂಥ ಮನುಷ್ಯನ ಹಠದಮೇಲೆ ನಿಂತಿತ್ತೆಂದು ಹೇಳುವುದು ಸ್ವಲ್ಪ ಹೆಚ್ಚೆಂದು ಕಾಣುತ್ತದೆ; ಅರ್ಚಕನು ಇಷ್ಟು ಪ್ರಬಲನಾಗಿರುವುದೂ ಸಾಮಾನ್ಯ ವಿಷಯವಲ್ಲ. ಆದರೆ ರಘುಪತಿಯನ್ನು ರಾಜಮನೆತನದ ಆಚಾರ್ಯನೆಂಬಂತೆ ಚಿತ್ರಿಸಿರುವುದರಿಂದ ಇದು ಇದ್ದರೂ ಇರಬಹುದು ಎನ್ನುವಂತಿದೆ. ಅವನು ವಿಗ್ರಹವನ್ನೇ ದೇವರೆಂದು ತಿಳಿದಿದ್ದದೂ ಕೊನೆಗೆ ಅವನು ಆ ವಿಗ್ರಹವನ್ನು ಕಿತ್ತೆಸೆದು ಹೋಗುವುದೂ ಹೆಚ್ಚಿನ ವಿಷಯ. ವಿಗ್ರಹದ ಹಿಂದೆ ಕುಳಿತು ದೇವರ ಮಾತೆಂಬ ವೇಷಹಾಕಿ ಸುಳ್ಳನ್ನು ಹೇಳಿದವನು ವಿಗ್ರಹದ ವಿಷಯದಲ್ಲಿ ಇಂಥ ಭಾವನೆಯನ್ನಿಟುಕೊಂಡಿದ್ದನೆಂದು ನಂಬುವುದು ಸುಲಭವಲ್ಲ. ಇದು ಈ ಪಾತ್ರದ ರಚನೆಯಲ್ಲಿ ಒಂದುಕೊರತೆ. ಉಳಿದಂತೆ ಬರುವ ಚಿತ್ರಗಳೆಲ್ಲ ಸಹಜವಾಗಿ ಕಾಣುತ್ತವೆ. ಅಪರ್ಣೆಯದಂತೂ ಬಹು ಸಹಜವಾದ ಚಿತ್ರ. ಅವಳ ಒಂದೆರಡುಮಾತು ದೊಡ್ಡವರ ಮಾತಿನಂತೆ ಇವೆ; ಇದು ಹೊರತು ಅವಳ ನಡತೆಯೆಲ್ಲ ಮಕ್ಕಳ ಸ್ವಭಾವವನ್ನು ಬಲ್ಲ ಕವಿಯನ್ನು ಸೂಚಿಸುತ್ತದೆ. ಮಕ್ಕಳ ಚಿತ್ರದಲ್ಲಿ ಠಾಕೂರರ ಕೌಶಲ ಬಹಳ ಹಿರಿದು. ಅದು ಅವರ ಕಾವ್ಯದಲ್ಲಿಕಾಣುತ್ತದೆ; ನಾಟಕಗಳಲ್ಲೂ ಕಾಣುತ್ತದೆ.

ಈ ನಾಟಕದ ವಸ್ತು ಟಿಪ್ಪೆರಾ ಎಂಬ ರಾಜ್ಯದ ಇತಿಹಾಸಕ್ಕೆ ಸಂಬಂಧಪಟ್ಟದ್ದೆಂದು ತಿಳಿಯುತ್ತದೆ. ಇದರಲ್ಲಿಯ ಚರ್ಚೆಯ ಭಾಗಕ್ಕೆ

ಬಂಗಾಳದಲ್ಲಿ ಹೆಚ್ಚಿನ ಪ್ರಾಮುಖ್ಯ ಇರಬೇಕು. ಕಲ್‌ಕತೆಯ ಕಾಳೀ ದೇವಾಲಯದ ಭಕ್ತರ ಮನೋಧರ್ಮದ ವರ್ಣನೆಯನ್ನು ಕೇಳಿದವರಿಗೆ ಠಾಕೂರರು ಈ ನಾಟಕವನ್ನು ಯಾವ ಉದ್ರಿಕ್ತಭಾವದಿಂದ ಬರೆದಿದಾರೆ ಎನ್ನುವುದು ತಿಳಿಯುವುದು. ಕೋಳಿಯೇನು ಮೇಕೆಯೇನು, ಗಂಟೆಗೆ ಹತ್ತು, ವಾರಕ್ಕೆ ನೂರು, ವರ್ಷದಲ್ಲಿ ಸಾವಿರವನ್ನು, ಜನ ತಂದು ದೇವ ಸ್ಥಾನದಲ್ಲಿ ಕೊಲ್ಲುತ್ತಲೇ ಇರುವುದು; ರಕ್ತ ಕೋಡಿಹರಿಯುತ್ತಿರುವುದು; ಆ ಪ್ರಾಣಿಗಳು ಕೂಗಿಕೊಳ್ಳುತ್ತಿರುವುದು; ಲೋಕಮಾತೆಯ ವಿಗ್ರಹ ಇದರಲ್ಲಿ ಸುಖಪಡುತ್ತಿರುವಂತೆ ಎದುರಿಗೆ ನಿಂತಿರುವುದು: ಇದು ಭಯಂಕರವಾದ ಪ್ರಸಂಗ; ಗೀತೆಯಲ್ಲಿ ಬರುವ ವಿಶ್ವರೂಪ ದರ್ಶನದ ವಿಪರೀತ ರೂಪ. ಇದು ಆವಶ್ಯಕವೇ? ಇದು ದೇವರಿಗೆ ಪ್ರೀತಿಯೇ? ಇದು ಕವಿಯಾದವನು ಕೇಳಬೇಕಾದ ವಿಷಯ; ಸಾಧ್ಯವಾದರೆ ಉತ್ತರ ಹೇಳಬೇಕಾದ ವಿಷಯ. ಠಾಕೂರರು ಈ ನಾಟಕದಲ್ಲಿ ಈ ಕೆಲಸವನ್ನು ಮಾಡಿದಾರೆ; ಉತ್ತರ ಮನವೊಪ್ಪತಕ್ಕ ಉತ್ತರ, ಅದನ್ನು ತಕ್ಕಮಟ್ಟಿಗೆ ಚೆನ್ನಾಗಿ ಹೇಳಿದಾರೆ. ಆದರೆ ಭಾವ ಇನ್ನು ಸ್ವಲ್ಪ ಪರಾಮರ್ಶದಿಂದಲೂ ಊಹೆಯಿಂದಲೂ ಮಾಗಿದ್ದರೆ ರಘುಪತಿ ಗುಣವತಿಯರನ್ನು ಚಿತ್ರಿಸುವುದ ರಲ್ಲಿ ಹೆಚ್ಚು ಸಹಾನುಭೂತಿಯಿರುತಿತ್ತು, ಅದರ ಫಲವಾಗಿ ಅವರ ಎಣಿಕೆ ತಪ್ಪು ಎನ್ನುವುದು ನಮಗೆ ಇನ್ನೂ ಚೆನ್ನಾಗಿ ಮನಹೊಗಬಹುದಾಗಿತ್ತು, ಎಂದು ಕಾಣುತ್ತದೆ. ಓದುವವರು ನೋಡುವವರಲ್ಲಿ ಎರಡು ಪಕ್ಷದವರೂ ಇರಬಹುದು. ಕವಿಯ ಊಹೆ ಪಕ್ವವಾದಮೇಲೆ ಕೆಲಸಮಾಡಿದರೆ ಅವನ ಕಲೆ ಪ್ರತಿಪಕ್ಷವನ್ನೂ ಗೆದ್ದು ತನ್ನ ಕಡೆಗೆ ಸೆಳೆದುಕೊಳ್ಳುತ್ತದೆ: ಹಾಗಿಲ್ಲ ದಿದ್ದರೆ ಅದು ತನ್ನ ಪಕ್ಷದವನನ್ನು ಮಾತ್ರ ಮೆಚ್ಚಿಸಿ ಪ್ರತಿಪಕ್ಷವನ್ನು ಪ್ರತಿಯಾಗಿಯೇ ಇರುವುದಕ್ಕೆ ಬಿಡುತ್ತದೆ. ಈ ನಾಟಕದಲ್ಲಿ ಊಹೆ ಈ ಎರಡನೆಯ ರೀತಿಯದಾಗಿ ನಿಂತಿದೆ.

### ೪೫. ಚಿತ್ರಾಂಗದಾ

ಚಿತ್ರಾಂಗದಾ ನಾಟಕವು ಊರ್ವಶೀ ಕಾವ್ಯವನ್ನು ಬರೆದ ಕಾಲದಲ್ಲಿ ಬರೆದದು. ಇದು ಇಂಗ್ಲೀಷಿನಲ್ಲಿ ಚಿತ್ರಾ ಎಂಬ ಹೆಸರಿನಿಂದ ಪ್ರಕಟ

ವಾಗಿದೆ. ಠಾಕೂರರದು ಬಂಗಾಳಿಯಲ್ಲಿ ಚಿತ್ರಾ ಎಂಬ ಹೆಸರಿನ ಗ್ರಂಥವೊಂದು ಇದೆ; ಅದು ಕಾವ್ಯಗುಚ್ಛ. ಈ ಚಿತ್ರಾನಾಟಕ ಬೇರೆ. ಇದರ ಕತೆ ಮಹಾಭಾರತದಿಂದ ಬಂದಿದೆ. ಚಿತ್ರಾಂಗದೆ ಬಭ್ರುವಾಹನನ ತಾಯಿ. ಅರ್ಜುನನು ಹನ್ನೆರಡು ವರುಷ ದೇಶಾಟನದಲ್ಲಿದ್ದಾಗ ಮಣಿಪುರದ ಪ್ರಾಂತಕ್ಕೆ ಬಂದನು. ಅಲ್ಲಿಯ ರಾಜನ ಮಗಳು ಚಿತ್ರಾಂಗದೆ ಬೇಟೆಯಲ್ಲಿ ಓಡಾಡುತ್ತ ಕಾಡಿನಲ್ಲಿ ಮಲಗಿದ್ದ ಇವನನ್ನು ಎಬ್ಬಿಸುವಳು. ಅವಳು ತಂದೆಗೆ ಒಬ್ಬಳೇ ಮಗಳು; ಅವನು ಅವಳನ್ನು ಮಗನಂತೆ ಸಾಕಿದ್ದನು. ಅದುವರೆಗೆ ಹುಡುಗನಂತೆ ಬೆಳೆದಿದ್ದ ಚಿತ್ರಾಂಗದೆಗೆ ಅರ್ಜುನನ ರೂಪನ್ನು ನೋಡಿ ಆಶ್ಚರ್ಯವಾಗುತ್ತದೆ, ಅವನಮೇಲೆ ಪ್ರೇಮ ಹುಟ್ಟುತ್ತದೆ. ಆದರೆ ಅವನಿಗೆ ಇವಳು ಬೇಕಾಗಿಲ್ಲ. ಚಿತ್ರಾಂಗದೆ ಮನೆಗೆ ಬಂದು ಅಲಂಕಾರಮಾಡಿಕೊಂಡುಹೋಗಿ ತನ್ನನ್ನು ಮದುವೆಯಾಗಬೇಕೆಂದು ಅವನನ್ನು ಬೇಡುತ್ತಾಳೆ. ಅವನು, ನಾನು ವ್ರತದಲ್ಲಿದೇನೆ, ಈಗ ಮದುವೆಯಾಗಲಾರೆ, ಎನ್ನುತ್ತಾನೆ. ಚಿತ್ರಾಂಗದೆ ಅವಮಾನಗೊಂಡು ಬಂದು ಮದನ ವಸಂತರನ್ನು ಕುರಿತು ತಪಸ್ಸುಮಾಡಿ ಅವರಿಂದ ಒಂದು ದಿನದ ಮಟ್ಟಿಗೆ ತಾನು ಸುಂದರಿಯಾಗಬೇಕೆಂದು ವರವನ್ನು ಬೇಡುತ್ತಾಳೆ. ಒಂದು ದಿನವಲ್ಲ ಒಂದು ವರುಷ ಹಾಗೆ ಇರೆಂದು ಅವರು ವರವನ್ನು ಕೊಡುತ್ತಾರೆ. ಆಮೇಲೆ ಅವಳು ವನದಲ್ಲಿ ತಿರುಗುತ್ತ ಒಂದು ಸರೋವರದ ಪಕ್ಕದಲ್ಲಿದ್ದಾಗ ಅವಳನ್ನು ನೋಡಿ ಅರ್ಜುನನು ಮೋಹಗೊಳ್ಳುವನು. ನೀನು ಯಾರು, ಏಕೆ ಒಂಟಿಯಾಗಿದೀಯೆ, ಎನ್ನುವನು. "ನಾನು ಅರ್ಜುನನನ್ನು ಮದುವೆಯಾಗಬೇಕೆಂದು ತಪಸ್ಸುಮಾಡುತ್ತಿದೇನೆ." "ನಾನು ಅರ್ಜುನ; ನನ್ನನ್ನು ಮದುವೆಯಾಗು." "ನೀನು ಅರ್ಜುನನೆ? ಅರ್ಜುನನು ಹನ್ನೆರಡು ವರುಷ ಬ್ರಹ್ಮಚರ್ಯದಲ್ಲಿರುವುದಾಗಿ ವ್ರತಮಾಡಿಕೊಂಡಿಲ್ಲವೆ?" "ಆ ವ್ರತವೆಲ್ಲ ನಿನ್ನನ್ನು ನೋಡಿದ ಕ್ಷಣವೇ ಹೋಯಿತು." ಚಿತ್ರಾಂಗದೆ ಇದಕ್ಕೆ, ನನ್ನ ಮೈಯನ್ನು ನೋಡಿ ಮನಸೋಲುವರೇ, ಹೋಗು, ಎನ್ನುವಳು. ಆ ರಾತ್ರಿ ಅವಳು ಉದ್ಯಾನದಲ್ಲಿರಲಾಗಿ ಅರ್ಜುನನು ಬರುವನು. ಇವರು ಗಾಂಧರ್ವವಿವಾಹಮಾಡಿಕೊಳ್ಳುವರು. ಚಿತ್ರಾಂಗದೆಗೆ ತನ್ನ

ಈ ಸೊಗಸು ತನ್ನದಲ್ಲ. ಅರ್ಜುನನು ಪ್ರೀತಿಸುತ್ತಿರುವುದು ತನ್ನನ್ನಲ್ಲ ತನ್ನ ಈ ಹೊರವೈಯನ್ನು, ಎಂದು ಅತೃಪ್ತಿ. ಅರ್ಜುನನಿಗೂ ಕೆಲ ಕಾಲದ ಮೇಲೆ ತಾನು ಬರಿಯ ಮೋಹಕ್ಕೆ ಸಿಕ್ಕಿದ್ದಕ್ಕಾಗಿ ಅತೃಪ್ತಿ. ಹೀಗಿರಲು ವರ್ಷ ಕಳೆಯುತ್ತದೆ. ಕಳ್ಳರು ಬಂದರೆಂದು ಊರ ಜನ ಭಯ ದಲ್ಲಿರುವರು. ಚಿತ್ರಾಂಗದೆ ಎಂಬ ಹೆಂಗಸು ರಾಜ್ಯಕ್ಕೆ ಯಜಮಾನಿ ಯೆಂಬುದು ಅರ್ಜುನನಿಗೆ ತಿಳಿಯುತ್ತದೆ. ಅವನು ಅವಳ ವಿಷಯ ಯೋಚಿಸುತ್ತಿರುತ್ತಾನೆ. ತಾನು ಅಂದು ಒಲ್ಲದೆ ಬಿಟ್ಟ ಹೆಣ್ಣೂ ಆಮೇಲೆ ಒಂದು ವರುಷ ಅನುಭವಿಸಿದ ಹೆಣ್ಣೂ ಒಬ್ಬಳೇ, ಅವಳೇ ಚಿತ್ರಾ, ಎಂದು ಇವನು ಕಾಣನು. ಚಿತ್ರಾಂಗದೆ ಬಂದು ಅವನನ್ನು ಎಂದಿನಂತೆ ಪ್ರಣಯಕ್ಕೆ ಕರೆಯುತ್ತಾಳೆ; ಅವನಿಗೆ ಅದು ಇಷ್ಟವಿಲ್ಲ. ಚಿತ್ರಾಂಗದೆ ಹೇಗಿರುವಳೋ ಇನ್ನೆಂತವಳೋ ಎನ್ನುವನು. "ನಾನು ಈಗ ಇರುವಂತಲ್ಲದೆ ಧೀರೆಯಾದ ಹೆಣ್ಣಾದರೆ ನನ್ನನ್ನು ನೀನು ಒಪ್ಪಿಕೊಳ್ಳುವೆಯಾ?" "ನಿನ್ನ ಮಾತು ನನಗೆ ತಿಳಿಯುವುದಿಲ್ಲ." ಗರ್ಭಿಣಿಯಾಗಿರುವ ಚಿತ್ರಾಂಗದೆ ನಾನೇ ಚಿತ್ರಾಂಗದೆ ಎಂದು ತನ್ನ ಪೂರ್ವದ ಆಕಾರದಿಂದ ಕಾಣಿಸಿಕೊಳ್ಳುತ್ತಾಳೆ. ಅರ್ಜುನನು, ಪ್ರಿಯೆ ನನ್ನ ಜೀವನ ಇಂದು ಪೂರ್ಣವಾಯಿತು, ಎನ್ನುತ್ತಾನೆ.

ಚಿತ್ರಾ ನಾಟಕ ಬಹು ಸುಂದರವಾದ ನಾಟಕ. ಇದರ ವಿಷಯ ಸರ್ವರಿಗೂ ರುಚಿಸತಕ್ಕಂಥದು. ಗಂಡು ಹೆಣ್ಣಿನ ಪ್ರೇಮದ ಸ್ವರೂಪ ವೇನೆಂದು ವಿಚಾರ ಹುಟ್ಟಿಸುವ ಈ ಕತೆಯಲ್ಲಿ ಮೊದಲಲ್ಲಿ ಹೊರಗಣ ಸೊಗಸಿಗೆ ಮೋಹಗೊಂಡು ನಡೆಯುವ ಸ್ಥಿತಿಯನ್ನೂ ಆಮೇಲೆ ಬೇರೆ ಯಾವುದೋ ಒಂದು ಸೊಗಸನ್ನು ಅಪೇಕ್ಷಿಸುವ ಸ್ಥಿತಿಯನ್ನೂ ಚಿತ್ತಾ ಕರ್ಷಕವಾಗಿ ಚಿತ್ರಿಸಿದೆ. ಕೆಲವು ಕಾಲ ನಿನ್ನ ಅಂಗಾಂಗಗಳಲ್ಲಿ ಅವ್ಯಾಹತ ಸೌಂದರ್ಯ ಉಕ್ಕಿಹರಿಯಲಿ ಎನ್ನುವುದು ಮದನನೂ ವಸಂತನೂ ಎಲ್ಲ ಹೆಣ್ಣಿಗೂ ಹೇಳುವ ಮಾತು. ಅದಕ್ಕೆ ಗಂಡು ಮನಸೋಲುವುದೂ ಸರ್ವ ಸಾಮಾನ್ಯವಾದ ಅನುಭವ. ಹೆಣ್ಣು ಗಂಡಿನ ಪ್ರೇಮ ಬರಿಯ ದೇಹ ಸಂಬಂಧವಾದದಲ್ಲ, ಅವರು ಒಬ್ಬರಿಗೊಬ್ಬರು ಜೀವನದಲ್ಲಿ ಸಹಧರ್ಮಿ ಗಳಾಗಬೇಕು, ಕಾಮದಲ್ಲಿ ಹೇಗೋ ಹಾಗೆ ಧರ್ಮದಲ್ಲಿಯೂ ಅರ್ಥ ದಲ್ಲಿಯೂ ಅವರು ಜೊತೆಗಾರರಾಗಿರಬೇಕು, ಎನ್ನುವುದು ಬಲ್ಲವರೆಲ್ಲರೂ

ಹೇಳುವ ಮಾತು. ಈ ಸ್ಥಿತಿ ಬರದಿದ್ದರೆ ಹೆಣ್ಣಿಗೂ ತೃಪ್ತಿಯಿಲ್ಲ ಗಂಡಿಗೂ ತೃಪ್ತಿಯಿಲ್ಲ. ಈತನಿಗೆ ನಾನು ಬೇಕಾಗಿಲ್ಲ, ನನ್ನ ಮೈಮಾತ್ರ ಬೇಕಾಗಿದೆ, ಎಂದು ಅವಳು ಅತೃಪ್ತಳಾಗುತ್ತಾಳೆ; ಇವಳು ಬರಿಯ ಲೀಲೆಗೆ ವಸ್ತುವಾದಳೇ ಹೊರತು ನನ್ನ ಕೆಲಸದಲ್ಲಿ ಸಹಾಯಳಾಗಲಿಲ್ಲ, ಬದುಕಿನ ಭಾರ ಹೊರುವುದಕ್ಕೆ ನನ್ನ ಬೆನ್ನು ಒಂದೇ ಗುರಿ, ಎಂದು ಗಂಡಸು ಅತೃಪ್ತನಾಗುತ್ತಾನೆ. ಎರಡು ಅವಸ್ಥೆಯ ಮಾತುಗಳನ್ನೂ ಅರ್ಜುನ ಚಿತ್ರಾಂಗದೆಯರಿಂದ ಕವಿ ವಿಚಿತ್ರವಾದ ರೀತಿಯಲ್ಲಿ ಹೇಳಿಸಿದಾರೆ. ವಿಷಯ ಸ್ವಲ್ಪವಾಗಿರುವುದರಿಂದ ಬೇರೆ ಯಾವ ಅನವಶ್ಯಕವಾದ ಭಾವವೂ ಬರದೆ ಮುಖ್ಯವಾದ ಭಾವ ತಾನೇ ತಾನಾಗಿ ಪ್ರಕಾಶಿಸುತ್ತದೆ. ಕವಿ ಒಂದೊಂದು ತಾಕಿನಲ್ಲಿಯೂ ತಮ್ಮ ಪ್ರತಿಭೆಯನ್ನೆಲ್ಲಾ ಉಪಯೋಗಿಸಿದಾರೆ. ಈ ಕಾರಣದಿಂದ ಪ್ರಣಯಿಗಳ ಒಂದೊಂದು ಭಾಷಣವೂ ಸಂಪೂರ್ಣವಾಗಿ ಸರ್ವಾಂಗ ಸುಂದರವಾಗಿ ಭಾವ ಪರಿಪುಷ್ಟವಾಗಿದೆ; ಮಾತುಗಳು ಮುತ್ತನ್ನು ಪೋಣಿಸಿದಂತಿವೆ; ಗ್ರಂಥವೆಲ್ಲ ಒಂದು ಕಾವ್ಯವಾಗಿ ಕಾಣುತ್ತದೆ. ಈ ನಾಟಕವು ಇಂಗ್ಲೀಷಿನಲ್ಲಿ lyric drama ಎಂದರೆ ಭಾವ ಪ್ರಧಾನ ನಾಟಕ ಎಂದು ಹೇಳುವ ನಾಟಕ ಜಾತಿಗೆ ಸೇರುತ್ತದೆ. ವಿಷಯದ ದೃಷ್ಟಿಯಿಂದಲೂ ಅದನ್ನು ಪ್ರತಿಪಾದಿಸಿರುವ ಕೌಶಲದ ದೃಷ್ಟಿಯಿಂದಲೂ ಇದರಲ್ಲಿ ತುಂಬಿ ಹರಿಯುವ ಕಾವ್ಯರಸದ ದೃಷ್ಟಿಯಿಂದಲೂ ಇದು ಠಾಕೂರರ ನಾಟಕಗಳಲ್ಲೆಲ್ಲ ಅತ್ಯುತ್ತಮವಾದದು; ಪ್ರಪಂಚದ ನಾಟಕಗಳಲ್ಲಿ ಅತ್ಯುತ್ತಮವಾದವುಗಳಲ್ಲಿ ಇದು ಒಂದಾಗಿರಬೇಕೆಂದೂ ಧಾರಾಳವಾಗಿ ಹೇಳಬಹುದು.

ಈ ನಾಟಕ ಮೊದಲು ಬಂಗಾಳಿಯಲ್ಲಿ ಪ್ರಕಟವಾದಾಗ ಇದು ವಿಷಯ ಲೋಲುಪತೆಯನ್ನು ತೋರಿತೆಂದು ಜನ ಆಕ್ಷೇಪಿಸಿದರಂತೆ. ಇಂಗ್ಲೀಷ್ ಭಾಷಾಂತರದಲ್ಲಿ ಬಂಗಾಳಿಯ ಕೆಲವು ಭಾಗಗಳನ್ನು ಬಿಟ್ಟಿದೆ. ಆದರೂ ಇದನ್ನು ವಿಷಯಲೋಲುಪ ಕಾವ್ಯವೆಂದು ಹೇಳುವವರಿಗೆ ಅವಕಾಶವಿದೆ. ಆದರೆ ವೇದಾಂತವನ್ನು ಬರೆಯುವವರು ವಿಷಯದ ಮಾತನ್ನೆತ್ತದೆ ನಾಟಕವನ್ನು ಬರೆಯಬಹುದು; ವಿಷಯವೇ ವಸ್ತುವಾಗಿರುವಾಗ ಅದನ್ನು ವರ್ಣಿಸುವುದು ತಪ್ಪೆನ್ನುವುದು ವಿವೇಚನೆ

ಯಿಲ್ಲದ ಮಾತು. ವಿಷಯಸುಖದ ಸ್ವರೂಪವನ್ನು ತಿಳಿಸಿ ಅವಕ್ಕೆ ಮಿಗಿಲಾದ ಒಂದು ಸುಖವಿದೆಯೆಂದು ತೋರಿಸುವುದು ಕಾವ್ಯದ ಉದ್ದೇಶ. ವಿಷಯಸುಖವನ್ನು ವರ್ಣಿಸುವವನು ಬರಿಯ ವೇದಾಂತವನ್ನು ಹೇಳು ವುದು ಹೇಗೆ ಸಾಧ್ಯ? ಇಂಥ ವಿಮರ್ಶೆ ಸಾಹಿತ್ಯದ ಕಾರ್ಯವೇನೆಂಬುದನ್ನು ಮರೆಯುತ್ತದೆ, ತನ್ನ ಕಾರ್ಯವೇನೆಂಬುದನ್ನು ಅರಿಯದು. ಈ ನಾಟಕದಲ್ಲಿ ವಿಷಯಸುಖದ ವಿವರವಾದ ಬಾಯೂರಿಸುವುದಾದ ವರ್ಣನೆ ಇದೆ. ಆದರೆ ಅದು ಕೃತಿಯಲ್ಲಿ ದೋಷವಲ್ಲ; ಕಾವ್ಯದಲ್ಲಿ ಮುಖ್ಯಭಾಗವಾಗಿ ಅದರ ಬೆಲೆಯನ್ನು ಹೆಚ್ಚಿಸುತ್ತದೆ; ಕವಿಯ ಅನುಭವವೂ ಭಾವನೆಯೂ ಎಷ್ಟು ವಿಸ್ತಾರವಾದುವು ಎಂದು ಸೂಚಿಸುತ್ತದೆ. ಇದರಮೇಲೆ ಎರಡನೆಯ ಅವಸ್ಥೆಯ ವರ್ಣನೆಗೆ ಬಂದಾಗ ಇಂಥ ರಸಯುಕ್ತವಾದ ಅನುಭವ ದಲ್ಲಿಯೂ ತೃಪ್ತಿಯಿಲ್ಲವೆಂದು ಹೇಳುವ ಕವಿಯ ನೀತಿ ಎಷ್ಟು ಉದಾತ್ತ ವಾದದೆಂದು ತೋರುತ್ತದೆ. ಆ ವಿಷಯಲೋಲುಪತೆ ಅಷ್ಟು ತೀವ್ರವಾದ ದರಿಂದಲೇ ಈ ನೀತಿ ಇಷ್ಟು ಶ್ರೇಷ್ಠವಾದದೆಂದು ಕಾಣುವುದು. ಕವಿಗೆ ಮುಖ್ಯವಾದುದು ಈ ನೀತಿ; ಉಳಿದದು ಇದಕ್ಕೆ ಪೋಷಕವಾದ ವಸ್ತು.

ಪಾಶ್ಚಾತ್ಯ ವಿಮರ್ಶಕರೊಬ್ಬರಿಬ್ಬರು ಈ ನಾಟಕದಲ್ಲಿ ಬೇರೊಂದು ವಿಧದ ದೋಷವನ್ನು ತೋರಿಸಲು ಯತ್ನಿಸಿದಾರೆ. ದೇಹಸಂಬಂಧವಾದ ಪ್ರೇಮ ಬಹಳ ಕೀಳು ಎಂದು ಕವಿಯ ಅಭಿಪ್ರಾಯ; ಆದರೆ ಇದು ಉತ್ತಮ ರೀತಿಯ ಸಂಬಂಧಕ್ಕೆ ಅನ್ವಯಿಸುವುದಿಲ್ಲ; ಗಂಡು ಹೆಣ್ಣು ಒಬ್ಬರನ್ನೊಬ್ಬರು ಮೆಚ್ಚಿ ಗೆಳೆತನದ ಲತೆ ಬೆಳೆದು ದೇಹ ಸಂಬಂಧ ಅದರ ಹೂವಂತೆ ಅನಿವಾರ್ಯವಾಗಿ ಸಂಭವಿಸಿದಾಗ ಅದು ಇಂಥ ಅತೃಪ್ತಿಯನ್ನು ಉಂಟುಮಾಡುವುದಿಲ್ಲ; ಎಂದು ಈ ವಿಮರ್ಶೆ. ಇಂಥ ಅಭಿಪ್ರಾಯ ವನ್ನು ಹೇಳಿ ಕಾವ್ಯದಲ್ಲಿ ಒಂದು ಕುಂದನ್ನೆಣಿಸುವುದೂ ಕೃತಿಯ ಕಾರ್ಯ ವೇನೆಂಬುದನ್ನರಿಯದ ಲಕ್ಷಣ. ಈ ಅಭಿಪ್ರಾಯವು ಸರಿಯೇ ಎಂದೂ ಕೆಲವರಿಗೆ ಸಂದೇಹ ಹುಟ್ಟುವುದು ಸಹಜ; ಇದರ ವಿಚಾರವನ್ನು ಮಾನಸ ಶಾಸ್ತ್ರಪರಿಣತರು ಮಾಡಬೇಕು. ಮೊತ್ತದಲ್ಲಿ ಗೆಳೆತನದ ಫಲವಾಗಿ ಬರುವ ದೇಹಸಂಬಂಧವೂ ನೋಡಿದ ಕ್ಷಣದಲ್ಲಿ ಮೋಹಗೊಂಡು ಸಂಭವಿಸುವ ದೇಹಸಂಬಂಧವೂ ಮೆಚ್ಚುಗೆಯಿಂದ ಬಂದುವೇ. ಆ ಮೆಚ್ಚುಗೆ

ಸ್ವಭಾವದ .ಎಷ್ಟು ದೂರದಿಂದ ಬಂದಿದೆ ಎಷ್ಟು ದೂರವನ್ನು ಮುಟ್ಟಿದೆ ಎನ್ನುವುದು ವಿಚಾರಣೀಯ ವಿಷಯ: ಮೊದಲು ಬಂದದು ಯಾವುದು ಎರಡನೆಯುಸಲ ಬಂದದು ಯಾವುದು ಎನ್ನುವುದಲ್ಲ. ಆಧ್ಯಾತ್ಮಿಕ ಸ್ನೇಹ ದೊಡ್ಡದು, ದೈಹಿಕವಾದದು ಕಡಮೆ, ಎಂದು ಕವಿಯ ಅಭಿಪ್ರಾಯ; ವಿಮರ್ಶಕರು ಹೇಳುವುದೂ ಅದೇ. ಆದರೆ ಇವರು ಈ ದೋಷವನ್ನು ಹೇಳುವುದರಲ್ಲಿ ಕವಿಯ ಅಥವಾ ಕಾವ್ಯದ ಭಾವವನ್ನು ಚರ್ಚಿಸುವ ಉದ್ದೇಶದಿಂದ ಪ್ರವರ್ತಿಸುವುದಿಲ್ಲ. ಮೊದಲು ದೇಹಸಂಬಂಧವಾಗಿ ಆಮೇಲೆ ಸ್ನೇಹ ಬೆಳೆಯತಕ್ಕದು ಭಾರತೀಯರ ಪದ್ಧತಿ, ಗೆಳೆತನ ಮೊದಲು ಬಂದು ಆಮೇಲೆ ಮದುವೆಯಾಗುವುದು ಪಾಶ್ಚಾತ್ಯ ಪದ್ಧತಿ, ಎಂಬ ಭಾವವೂ ಈ ನಾಟಕ ಮೊದಲ ಪದ್ಧತಿಯಲ್ಲಿ ಬರುವ ಅವಸ್ಥೆಯನ್ನು ಸೂಚಿಸುತ್ತದೆ, ನಮ್ಮ ಪದ್ಧತಿಗೆ ಅನ್ವಯಿಸುವುದಿಲ್ಲ ಎಂದು ಹೇಳುವುದೂ, ಈ ವಿಮರ್ಶೆಯ ಧ್ವನಿ. ಇದು ನಿಜವೆಂದೇ ಇಟ್ಟುಕೊಂಡರೂ ಇದು ಕಾವ್ಯದಲ್ಲಿ ದೋಷವಲ್ಲ. ಕವಿ ಬರೆಯುವುದು ಮೊದಲು ತನ್ನ ಜನದ ಏಳ್ಗೆಗಾಗಿ. ಅವನು ಅವರ ಜೀವನದ ರೀತಿಯನ್ನು ವಾಸ್ತವವಾಗಿ ತೆಗೆದು ಕೊಂಡು ಅವರ ಕುಂದನ್ನು ತೋರಿಸಿದರೆ ಜನರಿಗೆ ಉಪಕಾರಮಾಡಿ ದಂತೆಯೇ. ಆದರೆ ಈ ನಾಟಕದ ಭಾವನೆ ಪಾಶ್ಚಾತ್ಯ ವಿವಾಹಗಳಿಗೆ ಅನ್ವಯಿಸುವುದಿಲ್ಲವೆನ್ನುವುದು ತಪ್ಪು ಅಭಿಪ್ರಾಯ. ನೋಡಿದ ಕ್ಷಣದಲ್ಲಿ ಕವಿಯುವ ಮೋಹ ದೈಹಿಕವಾಗಿ ಇರುವಂತೆ ಹಲವು ವರ್ಷಗಳ ಗೆಳೆತನದ ಮೇಲೆಯೂ ಪ್ರಣಯ ಆಧ್ಯಾತ್ಮಿಕವಾಗದೆ ನಿಲ್ಲಬಹುದು. ಈ ವಿಮರ್ಶಕರು ಹೇಳುವಂತೆ ನಮ್ಮಲ್ಲಿ ಎಳೆಯ ಮಕ್ಕಳಿಗೆ ಮದುವೆಮಾಡುವವರು ಒಂದು ರೀತಿಯಲ್ಲಿ ಜಂಭಕೊಚ್ಚಬಹುದು. "ಬೆಳೆದ ಹೆಣ್ಣು ಬೆಳೆದ ಗಂಡು ಆದರೆ ಶಾರೀರಕವಾದ ಅಭಿಲಾಷೆಯಿಂದ ಒಬ್ಬರನ್ನೊಬ್ಬರು ಸಮೀಪಿಸುತ್ತಾರೆ. ನಮ್ಮಲ್ಲಿ ನೋಡಿ, ಏನೂ ತಿಳಿಯದ ಎಳೆಯ ಮಕ್ಕಳು ಗಂಡ ಹೆಂಡಿ ರಾಗುತ್ತಾರೆ. ಮೊದಲು ತಾವು ಗಂಡ ಹೆಂಡಂದಿರೆಂಬ ಸಂಬಂಧವನ್ನು ತಿಳಿದು ಆಮೇಲೆ ಶಾರೀರಕ ಸಂಬಂಧವನ್ನು ಬೆಳಸುತ್ತಾರೆ." ನಾವೆಲ್ಲ ನಮ್ಮ ದೇಶವೆಂಬ ಹೆಮ್ಮೆ ನಮ್ಮ ಆಚಾರವೆಂಬ ಅಭಿಮಾನದಲ್ಲಿ ಈ ನಾಟಕದ ತತ್ವ ನಮಗೆ ಅನವಶ್ಯಕವೆಂದು ಹೀಗೆ ತಿಳಿದುಕೊಳ್ಳಬಹುದು. ಇದು

ನಮ್ಮ ಅಲ್ಪ ದೃಷ್ಟಿಯನ್ನು ತೋರಿಸುತ್ತದೆ ಅಷ್ಟೆ. ಕವಿಯ ಕತೆ ಒಂದು ಸಂದರ್ಭದಿಂದ ಬಂದದು; ಆದರೆ ಅದರ ತತ್ವ ಪ್ರಪಂಚಕ್ಕೆ ಅನ್ವಯಿಸ ತಕ್ಕದು. ದೇಶದೇಶಕ್ಕೆ ವ್ಯತ್ಯಾಸವಿರುವುದು ಒಂದು ಕಟ್ಟಲೆ ಒಂದು ಕಲಾಪದಲ್ಲಿ; ಮಾನವ ಸ್ವಭಾವದಲ್ಲಿಯೇ ವ್ಯತ್ಯಾಸವಿರುವುದಿಲ್ಲ. ಮನುಷ್ಯನು ನಾಗರಿಕತೆಯಲ್ಲಿ ಬೆಳೆಯುತ್ತ ಬಂದಹಾಗೆ ತನ್ನ ಸ್ವಭಾವದ ಜಘನ್ಯ ಪ್ರವೃತ್ತಿಗಳನ್ನು ಜಯಿಸುವುದಕ್ಕೆ ತಿದ್ದುವುದಕ್ಕೆ ಉದಾತ್ತ ಮಾಡುವುದಕ್ಕೆ ಯತ್ನಮಾಡುತ್ತಿದಾನೆ. ಆದರೆ ಆ ಪ್ರವೃತ್ತಿಗಳು ಮೂಲದಲ್ಲಿ ಪಾಶವವಲ್ಲದೆ ಹೋಗುವುದಿಲ್ಲ. ಪ್ರಣಯದ ಅಧಮಾವಸ್ಥೆ ಯಿಂದ ನಮ್ಮನ್ನು ರಕ್ಷಿಸುವ ಉಪಾಯ ಆಧ್ಯಾತ್ಮಿಕ ಸಂಬಂಧ; ಇದನ್ನು ಬೆಳಸಿಕೊಳ್ಳಿ ಎಂಬುದು ಕವಿಯ ಸಲಹೆ. ಇದನ್ನು ತಿಳಿದು ಉಪಯೋಗಿಸಿ ಕೊಂಡರೆ ಪಾಶ್ಚಾತ್ಯರಲ್ಲಿ ಗಂಡ ಹೆಂಡಿರಾದವರು ತಮ ತಮಗೆ ಹೊಂದ ಲಿಲ್ಲವೆಂದೂ ತಮಗೆ ಬೇರೊಬ್ಬರು ಬೇಕು ಎಂದೂ ಈಗ ಮಾಡಿಕೊಳ್ಳು ತ್ತಿರುವ ನಿರ್ಗ್ರಂಥನ ಸಮಾರಂಭಗಳು ಕಡಮೆಯಾಗುವುವು; ನಮ್ಮಲ್ಲಿ ಸಂಸಾರ ಮಾಡಲಾರೆನೆಂದು, ಮಾಡಿ ಸೋತೆನೆಂದು, ಹೆಂಗಸರು ಭಾವಿಗೆ ಬಿದ್ದೋ ಇಲ್ಲ ಹತ್ತನೆಯ ಮಗನನ್ನು ಹೆತ್ತೋ ಸಾಯುವುದೂ ಕಡಮೆ ಯಾಗುತ್ತದೆ. ಎಲ್ಲ ದೇಶದಲ್ಲಿಯೂ ವಿವಾಹದ ಆದರ್ಶವಸಿಷ್ಠ ಅರುಂಧತಿಯರ ಸಂಬಂಧ. ಈ ದಂಪತಿಗಳ ಆದರ್ಶ ಈಗ ಆಕಾಶದಲ್ಲಿ ನಿಂತಿದೆ. ನಾವು ಕವಿಯ ಸೂಚನೆಯನ್ನು ತಿಳಿದು ನಡೆದರೆ ಅದು ನಮ್ಮ ನಮ್ಮ ಮನೆಗಳಲ್ಲಿ ಮೂಡಿ ಬೆಳಗಬಹುದು.

### ೪೬. ಮಾಲಿನೀ

ಚಿತ್ರಾ ನಾಟಕವನ್ನು ಬರೆದಮೇಲೆ ಬರೆದದ್ದಾದರೂ ಮಾಲಿನೀ ನಾಟಕ ಸಂನ್ಯಾಸಿ ಬಲಿ ನಾಟಕಗಳ ರೀತಿಯದು. ಆದರೆ ಇದೂ ಕೈ ಸ್ವಲ್ಪ ಪಳಗಿದಮೇಲೆ ಬರೆದದು ಎನ್ನುವುದು ಕಾಣುತ್ತದೆ. ಮಾಲಿನಿ ಒಬ್ಬ ರಾಜನ ಮಗಳು. ಬೌದ್ಧ ಗುರುಗಳು ಬಂದು ಇವರ ರಾಜ್ಯದಲ್ಲಿ ಬುದ್ಧ ಧರ್ಮವನ್ನು ಪ್ರಚಾರಪಡಿಸಿದಾರೆ. ಮಾಲಿನಿ ಅವರ ಉಪದೇಶಕ್ಕೆ ಮನಸೋತು ತನ್ನ ಜನದಲ್ಲಿ ಆ ಮತವನ್ನು ಹರಡಬೇಕೆಂದು ಅಪೇಕ್ಷಿಸು

ತ್ತಿದಾಳೆ. ಇದು ರಾಜ್ಯದ ಬ್ರಾಹ್ಮಣರಿಗೆ ಕೋಪವನ್ನುಂಟುಮಾಡಿದೆ. ಅವರು ಅವಳನ್ನು ಗಡೀಪಾರು ಮಾಡಬೇಕೆಂದು ರಾಜನಿಗೆ ಹೇಳಿದಾರೆ. ಮಾಲಿನಿಯ ಧರ್ಮಾವಿಷ್ಟವಾದ ಮಾತು ಅವಳ ತಾಯಿಗೆ ಅರ್ಥವಾಗುವುದಿಲ್ಲ; ಆದರೂ ಅವಳನ್ನು ಗಡೀಪಾರು ಮಾಡಬೇಕೆಂದ ಮಾತಿಗೆ ತಾಯಿ ಅಡ್ಡಿಮಾಡುತ್ತಾಳೆ. ಮಾಲಿನಿ ತಾನು ಗಡೀಪಾರಾಗಿ ಹೋಗುತ್ತೇನೆ ಕಳುಹಿಸು ಎನ್ನುತ್ತಾಳೆ. ಬ್ರಾಹ್ಮಣರು ಅರಮನೆಯ ಮುಂದೆ ಬಂದು, ರಾಜಕುಮಾರಿಯನ್ನು ಹೊರಗಟ್ಟಿ, ಎಂದು ಕೂಗುತ್ತಾರೆ. ಅದರಲ್ಲಿ ಕ್ಷೇಮಂಕರನು ಮುಖಂಡ. ಸುಪ್ರಿಯನೆಂಬವನು ಅವನ ಮಿತ್ರ. ಅತಿಗೆ ಹೋಗುವುದು ಸುಪ್ರಿಯನಿಗೆ ಇಷ್ಟವಿಲ್ಲ. ಇಷ್ಟರಲ್ಲಿ ರಾಜನ ಸೇನೆ ಬ್ರಾಹ್ಮಣರ ಜೊತೆಗೆ ಸೇರುವಂತೆ ಇದೆಯೆಂದು ವರ್ತಮಾನ ಬರುತ್ತದೆ. ಕೆಲವರು, ನಮಗೆ ಸೇನೆಯೇಕೆ, ನಮ್ಮ ಲೋಕಮಾತೆ ನಮ್ಮ ನೆರವು, ತಾಯೇ ಬಂದು ಸಲಹು, ಎಂದು ಕೂಗುತ್ತಾರೆ. ಆ ವೇಳೆಗೆ ಸರಿಯಾಗಿ ಮಾಲಿನಿ ಅರಮನೆಯಿಂದ ಹೊರಕ್ಕೆ ಬರುತ್ತಾಳೆ. ಅವಳನ್ನು ಎಂದೂ ನೋಡದಿದ್ದ ಜನ ಈ ಬಂದವಳು ಲೋಕಮಾತೆ ಎಂದೇ ಭಾವಿಸುತ್ತಾರೆ; ಮಾಲಿನಿ ಹೋದಕಡೆ ಹಿಂಬಾಲಿಸುತ್ತಾರೆ. ಸುಪ್ರಿಯನೂ ಅವರ ಹಿಂದೆ ಹೋಗುವುದರಲ್ಲಿರುತ್ತಾನೆ; ಕ್ಷೇಮಂಕರನು ಅವನನ್ನು ತಡೆದು ನಿಲ್ಲಿಸುತ್ತಾನೆ. ಮಾಲಿನಿಯನ್ನು ನೋಡದಿದ್ದಾಗ ಅವಳನ್ನು ಹೊರಗಟ್ಟಬೇಕೆಂದ ಸೇನೆಕೂಡ ಈಗ ಅವಳಿಗೆ ಹಿತವನ್ನು ಬಯಸುತ್ತದೆ. ತನ್ನ ಪ್ರಯತ್ನವೆಲ್ಲ ವಿಫಲವಾಗಲಾಗಿ ಕ್ಷೇಮಂಕರನು ಪರದೇಶಕ್ಕೆ ಹೋಗಿ ಶತ್ರುಸೇನೆಯನ್ನು ತರುವೆನೆಂದು ಹೊರಡುತ್ತಾನೆ. ಕೆಲಕಾಲ ಕಳೆಯುತ್ತದೆ. ಸುಪ್ರಿಯನು ಮಾಲಿನಿಯ ಅನುಯಾಯಿಯಾಗಿದಾನೆ. ಮಾಲಿನಿಗಾದರೆ ಆವೇಶ ಇಳಿದು ಮನಸ್ಸು ಕುಗ್ಗಿದೆ. ಜನ ಬಂದು ಅವಳನ್ನು ನೋಡಬೇಕೆನ್ನುತ್ತಾರೆ. ಅವರನ್ನು ನೋಡುವುದಕ್ಕೆ ಅವಳಿಗೆ ಇಷ್ಟವಿಲ್ಲ; ಅವಳು ಸುಪ್ರಿಯನನ್ನು ಕ್ಷೇಮಂಕರನ ಮಾತು ಹೇಳೆಂದು ಕೇಳುತ್ತಿದಾಳೆ. ಆವೇಳೆಗೆ ಕ್ಷೇಮಂಕರನು ತಾನು ಸೇನೆಯನ್ನು ತರುತ್ತಿರುವುದಾಗಿ ಸುಪ್ರಿಯನಿಗೆ ಕಾಗದ ಬರೆದಿದಾನೆ. ಸುಪ್ರಿಯನು ಮಾಲಿನಿಯ ಮೇಲಣ ಪ್ರೇಮದ ಸಲುವಾಗಿ ಆ ಕಾಗದವನ್ನು ರಾಜನಿಗೆ ತೋರಿಸಿದಾನೆ. ತಾನು ಹೀಗೆ ಮಾಡಿದ್ದನ್ನು

ಅವನು ಮಾಲಿನಿಗೆ ಹೇಳುತ್ತಾನೆ. ಅವಳು ಅಯ್ಯೋ ಹೀಗೇಕೆಮಾಡಿದೆ ಎನ್ನುತ್ತಾಳೆ. ರಾಜ ಬಂದು ಸುಪ್ರಿಯನನ್ನು ವಂದಿಸಿ, ನೀನು ಮಾಡಿದ ಉಪಕಾರ ಹಿರಿಯದು, ಮಾಲಿನಿಯನ್ನು ಮದುವೆಯಾಗು, ಎನ್ನುತ್ತಾನೆ. ಸುಪ್ರಿಯನಿಗೆ ತನ್ನ ಅನ್ಯಾಯ ಮನಸ್ಸಿಗೆ ತಗಲಿ ಇದು ಒಂದೂ ಬೇಡ ವಾಗಿದೆ. ಆ ವೇಳೆಗೆ ರಾಜನ ಕಡೆಯವರು ಖೇಮಂಕರನನ್ನು ಸೆರೆಹಿಡಿದಿದ್ದಾರೆ. ರಾಜ ಖೇಮಂಕರನನ್ನು ಕೊಲ್ಲಿಸುವುದಾಗಿ ಹೇಳುತ್ತಾನೆ. ಮಾಲಿನಿ ಅವನನ್ನು ಕ್ಷಮಿಸು ಎನ್ನುತ್ತಾಳೆ. ಸುಪ್ರಿಯನೂ ಅದನ್ನೇ ಬೇಡುತ್ತಾನೆ. ಆಗ ಸೇವಕರು ಖೇಮಂಕರನನ್ನು ಕರೆತರುವರು. ಅವನು ಸೋತಿದಾನೆ, ಆದರೆ ತಾನು ಮಾಡಿದ್ದು ತಪ್ಪು ಎಂದು ಒಪ್ಪುವುದಿಲ್ಲ. ಅವನು ಸುಪ್ರಿಯನನ್ನು ಕುರಿತು ಏಕೆ ಹೀಗೆ ದ್ರೋಹಮಾಡಿದೆ ಎನ್ನುತ್ತಾನೆ. ಅವರವರಿಗೆ ನಾಲ್ಕು ಮಾತು ನಡೆಯುತ್ತದೆ. ಖೇಮಂಕರನು ಸುಪ್ರಿಯನನ್ನು, ಆದದ್ದಾಯಿತು ಈಗ ಬಂದು ನನ್ನನ್ನು ಅಪ್ಪಿಕೊ, ಎಂದು ಕೇಳುತ್ತಾನೆ. ಸುಪ್ರಿಯನು ಅವನ ಬಳಿಗೆ ಹೋಗುತ್ತಾನೆ. ಖೇಮಂಕರನು ಅವನನ್ನು ತನ್ನ ಬಂಧನದ ಸರಪಳಿಯಿಂದ ಹೊಡೆಯುತ್ತಾನೆ. ಈ ಪೆಟ್ಟಿನಿಂದ ಸುಪ್ರಿಯನು ಸತ್ತುಬೀಳುವನು. ರಾಜ ಕೋಪದಿಂದ ತನ್ನ ಕತ್ತಿಯನ್ನು ಹಿರಿದು ಖೇಮಂಕರನನ್ನು ಶಿಕ್ಷಿಸಲು ನೋಡುತ್ತಾನೆ. ಆಗ ಮಾಲಿನಿ, ಅಪ್ಪಾಜಿ ಖೇಮಂಕರನನ್ನು ಮನ್ನಿಸಿ, ಎಂದು ಪ್ರಾರ್ಥಿಸುತ್ತಾಳೆ. ನಾಟಕ ಮುಗಿಯುತ್ತದೆ.

ನಾಟಕದ ವಸ್ತು ಭಾರತವರ್ಷದಲ್ಲಿ ಬುದ್ಧ ಧರ್ಮ ಹರಡುವ ಕಾಲದಲ್ಲಿ ದೇಶದ ಸ್ಥಿತಿ ಹೇಗಿದ್ದಿರಬಹುದೆಂದು ತೋರಿಸುವುದಕ್ಕಾಗಿ ಊಹಿಸಿರುವ ಕತೆ. ಕತೆ ಅಚ್ಚುಕಟ್ಟಾಗಿದೆ; ಆದದರಿಂದ ನಾಟಕದ ಕಟ್ಟಡ ಭದ್ರವಾಗಿದೆ. ಮಾಲಿನೀ, ಖೇಮಂಕರ, ಸುಪ್ರಿಯ, ಇವರು ದೊಡ್ಡ ರೀತಿಯ ಜನರು. ಮಾಲಿನಿಯ ತಾಯಿತಂದೆ ಇಷ್ಟು ದೊಡ್ಡವರಲ್ಲ; ಆದರೂ ಉತ್ತಮ ರೀತಿಯ ವ್ಯಕ್ತಿಗಳು. ವಿಷಯವೂ ಹಿರಿಯದು: ಉದಾತ್ತ ಭಾವದಿಂದ ಹೊರಟ ಹೊಸ ಮತ ಹಳೆಯ ಮತದೊಂದಿಗೆ ಹೋರಾಡಿದ ವಿವರ. ಹೋರಾಟದ ಸಮಯಕ್ಕೆ ಅನುಗುಣವಾಗಿ ಎರಡು ಪಕ್ಷದವರೂ ತಮ್ಮ ತಮ್ಮ ಭಾವದ ವಿಷಯದಲ್ಲಿ ಉಗ್ರವಾದ ದೀಕ್ಷೆಯನ್ನು ವಹಿಸಿದಾರೆ.

ಮಾಲಿನಿ ತನ್ನ ನಂಬಿಕೆಗಾಗಿ ಊರು ದೇಶ ಅರಮನೆ ಐಶ್ವರ್ಯ ಎಲ್ಲವನ್ನೂ ಬಿಡುವುದಕ್ಕೆ ಸಿದ್ಧಳಾಗಿದಾಳೆ. ಕ್ಷೇಮಂಕರನು ತನ್ನ ಮತಕ್ಕಾಗಿ, ಮೊದಲು ರಾಜಕುಮಾರಿಯನ್ನು ಅಟ್ಟುವುದಕ್ಕೆ, ಆಮೇಲೆ ರಾಜ್ಯವನ್ನು ಹೆರವರ ಪಾಲು ಮಾಡುವುದಕ್ಕೆ, ಹಿಂದೆಗೆಯುವುದಿಲ್ಲ. ಸುಪ್ರಿಯನು ಕ್ಷೇಮಂಕರನ ಗುಣಗಳಿಗಾಗಿ ಅವನಲ್ಲಿ ಪ್ರೇಮ ಗೌರವಗಳನ್ನುಳ್ಳವನಾದರೂ ಈ ತರುಣಿಯ ವಿಲಕ್ಷಣವಾದ ಮನೋದಾರ್ಢ್ಯಕ್ಕೆ ಸೋತು ಸ್ವಲ್ಪ ಹೀಗೆ ಸ್ವಲ್ಪ ಹಾಗೆ ಬಾಗುವನು. ಕೊನೆಗೆ, ಚಂಡಮಾರುತನಂತೆ ಕ್ಷೇಮಂಕರನು ಸತ್ಯವನ್ನರಿಯನು, ಸತ್ಯ ಇರುವುದಾದರೆ ಈ ಸೌಮ್ಯ ಚಂದ್ರಕಲೆಯಲ್ಲಿ ಇರಬಹುದು, ಎಂದು ನಿರ್ಧರಿಸುವ ಈ ಮಧ್ಯವರ್ತಿಯೂ ಧೀರನೇ. ಇವರು ಬೀದಿಯಲ್ಲಿ ಬಂದು ಗಲಭೆಮಾಡಿದರೆನ್ನುವುದು ಸ್ವಲ್ಪ ಅಸಂಭವವೆಂದು ತೋರುತ್ತದೆ; ಆದರೆ ಅದರಿಂದ ತೊಂದರೆ ಇಲ್ಲ. ಮೊದಲು ಧರ್ಮದ ಸಲುವಾಗಿ ಬ್ರಾಹ್ಮಣರೊಂದಿಗೆ ಸೇರಿಕೊಳ್ಳುವುದರಲ್ಲಿದ್ದ ಸೇನೆ ಮಾಲಿನಿಯನ್ನು ನೋಡಿ ಅವಳ ಕಡೆಗೆ ನಿಂತಿತೆಂದು ಹೇಳುವಲ್ಲಿಯೂ ಚಿತ್ರದಲ್ಲಿ ಬಣ್ಣ ತೀವ್ರವಾಗಿ ಬಿದ್ದಿದೆ. ಒಟ್ಟಿನಲ್ಲಿ ನಾಟಕವನ್ನು ಓದುವವರು ಇದು ಹೇಗೆ ಕೊನೆಯಾಗುತ್ತದೆ ಎಂದು ಕುತೂಹಲದಿಂದ ನೋಡುತ್ತಾರೆ. ಕ್ಷೇಮಂಕರನ ಸಂಕೋಲೆಯ ಬಡಿತದಿಂದ ಬರುವ ಸುಪ್ರಿಯನ ಸಾವು ಈ ಕುತೂಹಲವನ್ನು ತಕ್ಕಂತೆ ತುಂಬುತ್ತದೆ; ಆ ಕೊಲೆಪಾತಕನ ಧರ್ಮಸಂರಕ್ಷಣ ಪದ್ಧತಿಯನ್ನು ನೋಡುವ ನಮಗೆ ವಿಸ್ಮಯವುಂಟಾಗುತ್ತದೆ. ಅಲ್ಪಜೀವಿಗಳನ್ನು ಬಂದಿಸುವ ಸಾಧನ ಈ ಧೀರನ ಸೋಕಿನಿಂದ ಇಬ್ಬರಿಗೆ ಬಿಡುಗಡೆಯನ್ನು ತರುತ್ತದೆ. ಇದೇ ವೇಳೆಗೆ ಇದಕ್ಕಿಂತ ಹೆಚ್ಚು ವಿಸ್ಮಯವನ್ನುಂಟುಮಾಡುವ ಇನ್ನೊಂದು ಸಂಗತಿ ಕಣ್ಣಿಗೆ ಕಾಣುತ್ತದೆ. ಸುಪ್ರಿಯನ ಘಾತಕನಮೇಲೆ ಮಾಲಿನಿ ಕೋಪಗೊಳ್ಳುವುದಿಲ್ಲ; ಅವನನ್ನು ಮನ್ನಿಸೆಂದು ತಂದೆಯನ್ನು ಬೇಡುತ್ತಾಳೆ. ಹಳೆಯ ಮತದ ಶ್ರದ್ಧೆಗಿಂತ ಹೊಸ ಮತದ ಕ್ಷಮಾಬುದ್ಧಿ ಹಿರಿದಾಗಿ ಹೊಳೆಯುತ್ತದೆ.

ನಾಟಕದ ವಸ್ತು ಹೀಗೆ ಚೆನ್ನಾಗಿರುವುದಾದರೂ ನಾಟಕ ಇದಕ್ಕೆ ತಕ್ಕಂತೆ ಬೆಳೆದಿದೆ ಎಂದು ಹೇಳುವುದಕ್ಕಾಗುವುದಿಲ್ಲ. ಮೂಲ ಇದಕ್ಕಿಂತ ತುಂಬಿಕೊಂಡಿರಬಹುದು. ಇಂಗ್ಲೀಷ್ ಭಾಷಾಂತರವೇನೋ

ತಡಿಕೆಯ ಹಾಗೆ ಕಾಣುತ್ತದೆ. ಅಟ್ಟೆ ಇದೆ, ಮೈತುಂಬಿಕೊಂಡಿಲ್ಲ; ರೇಖೆ ಗಳಿವೆ, ಬಣ್ಣ ಹತ್ತಿಲ್ಲ; ಚಿತ್ರ ಅಸಂಪೂರ್ಣವಾಗಿದೆ. ಕಥೆ ಹೇಳುವುದಕ್ಕೆ ಹೊರಟ ಕಥೆಗಾರನು ಕಥೆಯ ಪಾತ್ರಗಳ ಬಾಯಿಂದ ಬಂದಷ್ಟು ಮಾತನ್ನು ಮಾತ್ರ ಹಾಕಿ ಮಧ್ಯೆ ತಾನು ಹೇಳುವ ಮಾತನ್ನೆಲ್ಲ ಬಿಟ್ಟರೆ ಹೇಗೆ ಇರಬಹುದೋ ಹಾಗೆ ಇದೆ. ವ್ಯಕ್ತಿಗಳ ಮನೋಭಾವ ಸ್ಪಷ್ಟವಾಗು ವಂತೆಯೂ ಸನ್ನಿವೇಶವನ್ನು ಕಣ್ಣಿಗೆ ಕಟ್ಟುವಂತೆಯೂ ಬೇರೆ ವಿಷಯಗಳೂ ನಾಟಕದಲ್ಲಿ ಸೇರಿರಬೇಕು. ಇದು ನಾಟಕ ರಚನೆಯನ್ನು ಸೋಕುವ ನಿಯಮದ ಮಾತು; ಒಂದು ನಾಟಕದ ವಿಮರ್ಶೆಯಲ್ಲಿ ಇದನ್ನು ಲಂಬ ವಾಗಿ ಚರ್ಚೆಮಾಡುವುದು ಸರಿಯಾಗಲಾರದು. ಆದರೂ ನಟರು ನಾಟ್ಯ ರಂಗದಲ್ಲಿ ಬಂದು ನುಡಿದಾಗ ಈ ನಾಟಕದ ಮಾತುಗಳ ಭಾವ ಇನ್ನು ಸ್ವಲ್ಪ ಚೆನ್ನಾಗಿ ಕಾಣಬಹುದು. ಅಗ್ಗೆ ನಟರು ತಾವೇ ಊಹಿಸಿಕೊಂಡು ಮನೋಭಾವಗಳನ್ನೂ ಸನ್ನಿವೇಶಗಳನ್ನೂ ತೋರಿಸಬೇಕಾಗುತ್ತದೆ. ಇದಕ್ಕೆ ಉದಾಹರಣೆಯಾಗಿ ಒಂದು ವಿಷಯವನ್ನು ಸೂಚಿಸಬಹುದು. ಮಾಲಿನಿ ಕ್ಷೇಮಂಕರನ ವಿಷಯದಲ್ಲಿ ಕುತೂಹಲವನ್ನು ತೋರಿಸುತ್ತಾಳೆ; ಕೊನೆಗೆ ಅವನ ಜೀವವನ್ನು ಉಳಿಸಲು ಯತ್ನಮಾಡುತ್ತಾಳೆ. ಅವಳಿಗೆ ಕ್ಷೇಮಂಕರನ ಮೇಲೆ ಪ್ರೀತಿ ಹುಟ್ಟಿತ್ತೇ ಹೇಗೆ? ಇತ್ತೋ ಇಲ್ಲವೋ ನಾಟಕದ ಮಾತುಗಳನ್ನು ಓದಿ ಹೇಳುವಂತಿಲ್ಲ. ನಟರು ಇತ್ತೆಂಬಂತೆ ನಟಿಸಿದರೂ ತಪ್ಪಲ್ಲ: ಉನ್ನತವಾದ ಭಾವ ಆ ಉನ್ನತ ಭಾವಕ್ಕೆ ಒಲಿದಿತ್ತು ಎಂಬಂತೆ ಆಯಿತು. ಇಲ್ಲವೆಂಬಂತೆ ನಟಿಸಿದರೂ ತಪ್ಪಲ್ಲ: ಈ ಕ್ಷಮೆಗೆ ಯಾವ ಪಾತಕವೂ ಅಕ್ಷಮ್ಯವಲ್ಲ ಎಂಬಂತೆ ಆಯಿತು. ಹೀಗೆ ಹಲವು ಪ್ರಮುಖವಾದ ಅಂಶಗಳು ಓದುವವರು ನೋಡುವವರು ಊಹಿಸಿ ಕೊಳ್ಳಬೇಕಾದ ಸ್ಥಿತಿಯಲ್ಲಿ ಅಸ್ಪಷ್ಟವಾಗಿ ನಿಂತುಹೋಗಿವೆ. ನಾಟಕದಲ್ಲಿ ಸಂಗತಿಗಳಿಗೆ ಸರಿತೂಗುವಷ್ಟು ಸ್ವಭಾವನಿರೂಪಣವಿಲ್ಲ.

### ೪೭. ಶಾರದೋತ್ಸವ

ಲಕ್ಷ್ಮೇಶ್ವರ ಒಬ್ಬ ಜಿಪುಣ; ವಾಡಿಕೆಯ ಉಪಾಯಗಳಿಂದ ತುಂಬ ಹಣಗಳಿಸಿದಾನೆ. ಅವನ ಒಬ್ಬ ಸಾಲಗಾರ, ಸಂಗೀತಕಲಾನಿಪುಣ,

ರಾಜಾಶ್ರಯವನ್ನು ಒಲ್ಲದೆ ಬಡತನದಲ್ಲಿ ಸತ್ತಿದಾನೆ. ಅವನ ಸಾಕು ಮಗ ಸಾಹುಕಾರನಿಗೆ ಈ ಸುದ್ದಿಯನ್ನು ತಿಳಿಸಿ ತಾನು ತನ್ನ ತಂದೆಯ ಸಾಲವನ್ನು ತೀರಿಸುವುದಕ್ಕಾಗಿ ಅವನಿಗೆ ಕೆಲವು ಪುಸ್ತಕಗಳನ್ನು ಪ್ರತಿ ಮಾಡಿ ಕೊಡುವೆನೆಂದು ಹೇಳುತ್ತಾನೆ. ಲಕ್ಷ್ಮೀಶ್ವರ ಅವನನ್ನು ಆ ಕೆಲಸಕ್ಕೆ ಹಚ್ಚಿ ಹೊರಡುತ್ತಾನೆ. ಆಗ ಅಲ್ಲಿಗೆ ಕೆಲವು ಮಕ್ಕಳು ಠಾಕೂರ್ ದಾದಾ ಒಡನೆ ಆಟಕ್ಕೆ ಬರುತ್ತಾರೆ; ಅತ್ತ ಒಬ್ಬ ಸಂನ್ಯಾಸಿ ಬರಲು ಅವನನ್ನೂ ಆಟಕ್ಕೆ ಸೇರಿಸಿಕೊಳ್ಳುತ್ತಾರೆ. ಸಾಕುತಂದೆಯ ಸಾಲವನ್ನು ತೀರಿಸಲು ಪುಸ್ತಕಗಳನ್ನು ಪ್ರತಿಮಾಡುತ್ತಿರುವ ಉಪಾನಂದನನ್ನು ಕಂಡು ಸಂನ್ಯಾಸಿ ಮೆಚ್ಚಿಕೊಂಡು ಸಾಲ ತೀರಿಸುವ ಒಳ್ಳೆಯತನದಲ್ಲಿ ಹೂವಿನಲ್ಲಿ ರುವ ಚೆಲುವು ಇದೆ ಎಂದು ಅವನ ಕೆಲಸದಲ್ಲಿ ನೆರವಾಗುತ್ತಾನೆ; ಅದೇ ಆಟ ಎನ್ನುತ್ತಾನೆ. ಮಕ್ಕಳು ಇವರ ಜೊತೆಗೆ ಸೇರುತ್ತಾರೆ. ಆಗ ಲಕ್ಷ್ಮೀಶ್ವರ ಮತ್ತೆ ಬರುತ್ತಾನೆ. ಮಕ್ಕಳು ಅವನನ್ನು ಕಂಡು ಓಡುತ್ತಾರೆ. ಲಕ್ಷ್ಮೀಶ್ವರ ಕಳ್ಳಕಾಕರಿಗೆ ಸಿಕ್ಕದಂತೆ ಒಂದು ಆಣಿ ಮುತ್ತನ್ನು ಒಂದು ಕಡೆ ಹೂತಿಟ್ಟಿದಾನೆ. ಅಕಸ್ಮಾತ್ ಅದೇ ಸ್ಥಳದಮೇಲೆ ಉಪಾನಂದ ಕುಳಿತಿದಾನೆ. ಅವನನ್ನೂ ಸಂನ್ಯಾಸಿಯನ್ನೂ ಅಲ್ಲಿ ಕಂಡು ಲಕ್ಷ್ಮೀಶ್ವರನ ಮನಸ್ಸಿನಲ್ಲಿ ಶಂಕೆಹುಟ್ಟುತ್ತದೆ; ಅವನು ಅವರನ್ನು ಈಚೆಗೆ ಬನ್ನಿ ಎಂದು ಗದರುತ್ತಾನೆ. ಒಡನೆಯೇ ಸಂನ್ಯಾಸಿ ಶಾಪಕೊಟ್ಟಾನೆಂದು ಹೆದರಿ ಅವನಲ್ಲಿ ಅಲ್ಪರಿಯುತ್ತಾನೆ. ಉಪಾನಂದ ಕೋಪಗೊಂಡು ಸಾಲಹರಿಯಿತೆಂದು ಹೇಳಿ ಹೊರಟುಹೋಗುತ್ತಾನೆ. ಅಷ್ಟರಲ್ಲಿ ರಾಜನ ದೂತನೊಬ್ಬ ಬಂದು ಸಂನ್ಯಾಸಿಯನ್ನು ರಾಜ ಬರಹೇಳಿದುದಾಗಿ ತಿಳಿಸುತ್ತಾನೆ. ಸಂನ್ಯಾಸಿ ಹೋಗುವುದಿಲ್ಲ. ಲಕ್ಷ್ಮೀಶ್ವರ ಸಂನ್ಯಾಸಿಯನ್ನು ಆಶ್ರಯಿಸಿ ಅವನಿಂದ ಚಿನ್ನಮಾಡುವ ಉಪಾಯವನ್ನು ಕಲಿಯುವ ಪ್ರಯತ್ನದಲ್ಲಿದಾನೆ. ತನ್ನ ಬಳಿಗೆ ಬಾರದ ಸಂನ್ಯಾಸಿಯನ್ನು ಕಾಣುವುದಕ್ಕೆ ರಾಜ ತಾನೇ ಬರುತ್ತಾನೆ. ಅವನು ಧನವನ್ನು ಬಯಸಿಯಾನೆಂದು ಹೆದರಿ ಲಕ್ಷ್ಮೀಶ್ವರ ಓಟಕೀಳುತ್ತಾನೆ. ರಾಜ ಆಶೆಯ ಮನುಷ್ಯ ಹೌದು. ಅವನು ಸಂನ್ಯಾಸಿಯ ಬಳಿಗೆ ಬಂದದು ಚಕ್ರವರ್ತಿ ವಿಜಯಾದಿತ್ಯನ ಕೈಯಿಂದ ಹೇಗೆ ಕೊಸರಿಕೊಳ್ಳುವುದು ಎಂದು ಕೇಳುವುದಕ್ಕಾಗಿ.

ಸಂನ್ಯಾಸಿ ಅಪೂರ್ವಾನಂದ ರಾಜನೊಡನೆ ಮಾತನಾಡುತ್ತಿರುವಾಗ ಉಪಾನಂದ ಬರುತ್ತಾನೆ ; ತಂದೆಯ ಸಾಲವನ್ನು ತೀರಿಸಬೇಕು, ನನ್ನನ್ನು ಯಾರಿಗಾದರೂ ಮಾರು, ಹಾಗೆ ಬಂದ ಹಣವನ್ನು ಲಕ್ಷ್ಮೇಶ್ವರನಿಗೆ ಕೊಡುತ್ತೇನೆ, ಎನ್ನುತ್ತಾನೆ. ಚಕ್ರವರ್ತಿ ವಿಜಯಾದಿತ್ಯ ನಿಮ್ಮ ತಂದೆಗೆ ಆಶ್ರಯ ಕೊಡುವೆನೆಂದನು, ಅವನನ್ನು ಕೇಳೋಣವೇ, ಎಂದು ಸಂನ್ಯಾಸಿ ಪ್ರಶ್ನೆಮಾಡುತ್ತಾನೆ. ಲಕ್ಷ್ಮೇಶ್ವರ ಸಂನ್ಯಾಸಿಯ ಮಹಿಮೆಯನ್ನು ಕೇಳಿ ಅವನ ಶಿಷ್ಯನಾಗಬೇಕೆಂದು ಆಶಿಸುತ್ತಾನೆ. ಆದರೂ ಮನಸ್ಸು ಮಾಡಲಾರ. ಒಂದು ಒಡವೆಯ ಪೆಟ್ಟಿಗೆಯನ್ನು ತಂದು ಅವನಿಗೆ ಒಪ್ಪಿಸಲು ಯೋಚಿಸುತ್ತಿದಾನೆ. ಕೆಲವರು ಗ್ರಾಮಜನ ಸಂನ್ಯಾಸಿಯ ದರ್ಶನಕ್ಕಾಗಿ ಬರುತ್ತಾರೆ. ಅವನು ಪವಾಡಗಳನ್ನು ಮಾಡಲಾರೆನೆಂದು ತಿಳಿದು ಆಶಾಭಂಗದಿಂದ ಹಿಂದಿರುಗುತ್ತಾರೆ. ಆಟದ ಹುಡುಗರು ಮತ್ತೆ ಬರಲು ಸಂನ್ಯಾಸಿ ಅವರೊಂದಿಗೆ ಮತ್ತೆ ಆಟದಲ್ಲಿ ತೊಡಗುತ್ತಾನೆ. ಲಕ್ಷ್ಮೇಶ್ವರ, ಠಾಕೂರ್ ದಾದಾ ರಾಜ ಇವರು ಆಟವನ್ನು ನೋಡುತ್ತಿರುವಾಗಲೆ ವಿಜಯಾದಿತ್ಯನ ಮಂತ್ರಿಯೊಬ್ಬ ಬರುತ್ತಾನೆ. ಚಕ್ರವರ್ತಿಯೆಂದು ಸಂಬೋಧಿಸಿ ಸಂನ್ಯಾಸಿಗೆ ನಮಸ್ಕಾರ ಮಾಡುತ್ತಾನೆ. ಸಂನ್ಯಾಸಿ ಮಂತ್ರಿಗೆ ಹೇಳಿ ಉಪಾನಂದನಿಂದ ಲಕ್ಷ್ಮೇಶ್ವರನಿಗೆ ಸಲ್ಲಬೇಕಾದ ಹಣವನ್ನು ಅವನಿಗೆ ಸಲ್ಲಿಸಿ ಉಪಾನಂದನನ್ನು ದತ್ತಾಗಿ ತೆಗೆದುಕೊಳ್ಳುತ್ತಾನೆ. ಲಕ್ಷ್ಮೇಶ್ವರನಿಗೆ ಒಂದೇ ವ್ಯಸನ: ತನಗೆ ವಯಸ್ಸಾಗಿ ಹೋಗಿದೆ, ಚಕ್ರವರ್ತಿ ತನ್ನನ್ನು ದತ್ತು ತೆಗೆದುಕೊಳ್ಳುವಂತಿಲ್ಲ, ಎನ್ನುವುದು. ಲಕ್ಷ್ಮೇಶ್ವರ ರಾಜ ಹೋರಟು ಹೋಗುತ್ತಾರೆ. ಚಕ್ರವರ್ತಿ ಮಕ್ಕಳೊಂದಿಗೆ ಶಾರದೋತ್ಸವದಲ್ಲಿ ಬೆರೆಯುತ್ತಾನೆ.

ಈ ನಾಟಕದ ಕತೆ ತೆಳು ; ಆದರೆ ಚೆನ್ನಾಗಿದೆ. ಪಾತ್ರಗಳು ತಕ್ಕಷ್ಟು ಸ್ಫುಟವಾಗಿ ಆಕಾರಪಡೆದಿವೆ. ನಾಟಕದಲ್ಲಿ ಮಾತು ಹಾಸ್ಯ ಅರ್ಥಗರ್ಭಿತವಾಗಿವೆ. ನೀನು ಸಂನ್ಯಾಸಿಯಾಗಿರುವುದು ಕನಸೆ ಎಂದು ಕೇಳಿದಾಗ ವಿಜಯಾದಿತ್ಯ ತನ್ನ ಸಂನ್ಯಾಸ ಚಕ್ರಾಧಿಪತ್ಯ ಎರಡೂ ನಿಜವಾದರೂ ಆಗಬಹುದು ಕನಸಾದರೂ ಆಗಬಹುದು ಎನ್ನುತ್ತಾನೆ. ಏನಾದರೂ ಮಾಡಿ ತಂದೆಯ ಸಾಲವನ್ನು ತೀರಿಸಬೇಕೆಂಬ ಉಪಾನಂದನ ಶೀಲ

ಸೌಂದರ್ಯವನ್ನು ಹೊಗಳುತ್ತ ಸಂನ್ಯಾಸಿ "ಲೋಕ ಸದಾ ಒಂದು ಸಾಲವನ್ನು ತೀರಿಸುತ್ತಲಿದೆ. ಅದರಿಂದಲೇ ಅದು ಸುಂದರವಾಗಿರುವುದು" ಎನ್ನುತ್ತಾನೆ. ಇವನನ್ನು ನೋಡಬಂದ ಹಳ್ಳಿಯವರು ಬೇರೆ ಒಬ್ಬ ಸಂನ್ಯಾಸಿಯನ್ನು ನೋಡಿದ್ದರು. ಅವನು ಪವಾಡಮಾಡಬಲ್ಲವನು. ಒಬ್ಬ ಹುಡುಗ ಸಾಯುವಂತಿದ್ದಾಗ ಆ ಸಂನ್ಯಾಸಿ ಅವನನ್ನು ಉಳಿಸುವುದಕ್ಕೆ ಹೋದನು; ಏನೋ ಹೆಚ್ಚು ಕಡಮೆ ಆಗಿ ಉಸಿರನ್ನು ಅಲ್ಲಿ ನಿಲ್ಲಿಸಲಾಗಲಿಲ್ಲ; ಅದು ವ್ಯರ್ಥವಾಗದಂತೆ ಅವನು ಅದನ್ನು ಒಂದು ಚಿರತೆಯಲ್ಲಿ ನಿಲ್ಲಿಸಿದನು; ಆದ್ದರಿಂದ ಹುಡುಗ ತೀರಿಕೊಂಡರೂ ಚಿರತೆ ಇನ್ನೂ ಸುಖವಾಗಿ ಓಡಾಡುತಿತ್ತು. ಹಳ್ಳಿಯ ಜನದ ಮುಗ್ಧತೆಯ ಈ ವರ್ಣನೆಯಂತೆ ವಿಜಯಾದಿತ್ಯನ ಕಲಿಕೆಯ ಈ ಮಾತೂ ಚಿತ್ರವಾಗಿದೆ. ರಾಜ ಸಂನ್ಯಾಸಿಯನ್ನು ಈ ಚಕ್ರವರ್ತಿ ಎಂಬಾತ ನಿಜವಾಗಿಯೂ ಅಂತಹ ಶ್ರೇಷ್ಠ ಪುರುಷನೇ ಎಂದು ಕೇಳುತ್ತಾನೆ. ಸಂನ್ಯಾಸಿ, ವೇಷದ ವಿಜಯಾದಿತ್ಯ, "ಎಲ್ಲಾದರೂ ಉಂಟೆ? ಅವನೂ ಎಲ್ಲರಂತೆ ಒಬ್ಬ ಮನುಷ್ಯ. ಅವನ ವೇಷ, ಭೂಷಣದಿಂದ ಅವನಿಗಿಲ್ಲದ ದೊಡ್ಡತನ ಅಡಸಿದೆ" ಎನ್ನುತ್ತಾನೆ. ಇದು ಒಂದು ದೃಷ್ಟಿಯಿಂದ ನಿಜ; ಮತ್ತೊಂದು ದೃಷ್ಟಿಯಿಂದ ವ್ಯಂಗ್ಯ. ಠಾಕೂರರ ಜೊತೆಯ ಸಾಹಿತಿಗಳು ತಮಗಿಂತ ಇವರೇಕೆ ಇಷ್ಟು ದೊಡ್ಡವರಾಗಿರಬೇಕು ಎಂದು ಯೋಚಿಸುತ್ತ ಇದ್ದರೆ ಅಂತಹವರಿಗೆ ಇದು ಕವಿಗಳು ಹೇಳಿದ ವ್ಯಂಗ್ಯದ ಉತ್ತರ ಆಗಬಹುದು.

**೪೮. ರಾಜಾ**

ಶಾರದೋತ್ಸವವನ್ನು ಬರೆದಮೇಲೆ ಸುಮಾರು ಹದಿನೈದು ವರುಷಗಳವರೆಗೆ ಠಾಕೂರರು ಬೇರೆ ದೊಡ್ಡ ನಾಟಕವನ್ನು ಬರೆಯಲಿಲ್ಲ. ಆಗಾಗ ಸಣ್ಣ ಸಣ್ಣ ದೃಶ್ಯಗಳನ್ನು ಬರೆದರೂ ಪುನಃ ನಾಟಕ ಬರೆಯುವ ಮನಸ್ಸು ಬಂದಾಗ ಇವರು ಭಕ್ತಿಸ್ಥಲಕ್ಕೆ ಬಂದಿದ್ದರು. ಅದರ ಫಲವಾಗಿ ನಾಟಕ ದೇವರನ್ನು ಕುರಿತ ಒಂದು ಸಂಕೇತ ದೃಶ್ಯವಾಯಿತು. ಇದು ರಾಜಾ ಎಂಬುದು. ಈ ದೃಶ್ಯ ಇಂಗ್ಲೀಷಿನಲ್ಲಿ ಕತ್ತಲೆಯ ಕೋಣೆಯ ಪ್ರಭು ಎಂದು ಭಾಷಾಂತರವಾಗಿದೆ. ಒಂದು ರಾಜ್ಯದಲ್ಲಿ ಒಂದು ಹಬ್ಬವಾಗುತ್ತಿದೆ.

ಅಲ್ಲಿಗೆ ಪರದೇಶದ ಜನ ಬಂದಿದ್ದಾರೆ; ರಾಜ್ಯದಲ್ಲಿ ಜನ ಸೇರಿರುವ ರೀತಿ ಊರು ಇರುವ ಸ್ಥಿತಿ ಇದನ್ನೆಲ್ಲ ನೋಡಿ ಬಹಳ ಮೆಚ್ಚಿಕೊಳ್ಳುತ್ತಾರೆ. ಊರಜನಕ್ಕೂ ಬಹಳ ಸಂತೋಷ; ಆದರೆ ಯಾರೂ ರಾಜನನ್ನು ನೋಡಿ ರುವುದಿಲ್ಲ. ರಾಜನಿಲ್ಲವೆಂದು ಕೆಲವರು, ಅವನ ಮುಖ ಬಹು ವಿರೂಪ ಆದರಿಂದ ಅವನು ಯಾರಿಗೂ ಮುಖ ತೋರಿಸುವುದಿಲ್ಲ ಎಂದು ಕೆಲವರು, ಹೇಳುತ್ತಿರುವರು. ಊರಿನಲ್ಲಿರುವ ಬಹು ಮುದುಕನೊಬ್ಬನು ಅರಮನೆ ಯಲ್ಲಿ ಸುರಂಗಮ ಎಂಬ ಸೇವಕಿಯೊಬ್ಬಳು ರಾಜನಿರುವನೆಂದೂ ಅವನು ಮಹಾಮಹಿಮನೆಂದೂ ಬಲ್ಲರು. ರಾಣಿ ಕೂಡ ಅವನನ್ನು ನೋಡಿಲ್ಲ. ಬಾಲ್ಯದಲ್ಲಿ ಅವಳಿಗೆ ಅರಿಯದ ಕಾಲದಲ್ಲಿ ಅವಳು ರಾಜನನ್ನು ಮದುವೆ ಯಾದಳು; ಈಗಲೂ ಅರಮನೆಯಲ್ಲಿ ಅವಳು ರಾಜನನ್ನು ಒಂದು ಕತ್ತ ಲೆಯ ಕೋಣೆಯಲ್ಲಿ ಮಾತ್ರ ಸಮೀಪಿಸಬಹುದು; ಕಣ್ಣಿನಿಂದ ನೋಡು ವಂತಿಲ್ಲ. ಆ ಹಬ್ಬದ ದಿನ ಅವಳು ರಾಜನನ್ನು ತಾನು ಬೆಳಕಿನಲ್ಲಿ ನೋಡ ಬೇಕೆಂದು ಅಪೇಕ್ಷಿಸುವಳು. ಅವನು, ಆಗಲಿ ಗುಂಪಿನಲ್ಲಿರುತ್ತೇನೆ, ನನ್ನನ್ನು ಗುರುತಿಸು, ಎನ್ನುವನು. ಹಬ್ಬಕ್ಕೆ ಹಲವು ದೇಶದ ರಾಜರು ಬಂದಿರುವರು. ಅವರಿಗೂ ಈ ರಾಜನೆನ್ನುವನಿರುವ ವಿಷಯದಲ್ಲಿ ಸಂದೇಹ. ಯಾವನೋ ಒಬ್ಬನು ರಾಜನ ವೇಷ ಹಾಕಿಕೊಂಡು ಬೀದಿಯಲ್ಲಿ ಮೆರವಣಿಗೆ ಬರುವನು. ಜನ ಮರುಳಾಗುವದು; ಪರದೇಶದ ರಾಜರು ಇದು ವೇಷವೆಂದು ತಿಳಿಯುವರು, ಅವನನ್ನು ಹಿಡಿದು ಹೆದರಿಸುವರು. ವೇಷದ ರಾಜ ತನ್ನದು ವೇಷವೆಂದು ಒಪ್ಪಿಕೊಳ್ಳುವನು. ಅವನು ರಾಜನಲ್ಲ; ಸುವರ್ಣನೆಂಬ ಒಬ್ಬನು. ಅವನು ರಾಣಿಯನ್ನು ಈ ಪರರಿಗೆ ತೋರಿಸುವೆನೆಂದು ಆಸೆಕೊಟ್ಟು ಗುಟ್ಟು ಬಯಲಾಗದಂತೆ ಮಾಡಿ ಕೊಳ್ಳುವನು. ರಾಣಿ ಹೊರಗೆನೋಡಿ ವೇಷದ ರಾಜನನ್ನು ತನ್ನ ಪತಿಯೆಂದು ಭಾವಿಸಿ ಅವನಿಗೆ ಒಂದು ಹಾರವನ್ನು ಕಳುಹಿಸುವಳು. ಅವನಿಗೆ ಇದು ಅರ್ಥವಾಗುವುದಿಲ್ಲ; ಆದರೆ ಹತ್ತಿರಿದ್ದ ಕಂಚೀ ರಾಜ ಅವನ ಕೊರಳ ಹಾರವನ್ನು ತೆಗೆದು ಅವಳಿಗೆ ಪ್ರತಿಯಾಗಿ ಕಳುಹಿಸು ವನು. ರಾಣಿ ಇವನು ತನ್ನ ರಾಜನಲ್ಲವೆಂದು ತಿಳಿದು ಅವಮಾನ ಪಡುವಳು; ಆದರೂ ಇವನ ಮುಖ ಚೆನ್ನಾಗಿರುವುದರಿಂದ ಇವನು

ಕಳುಹಿಸಿದ ಹಾರವನ್ನು ತನ್ನ ಬಳಿ ಇರಿಸಿಕೊಳ್ಳುವಳು. ಕಂಚಿಯ ರಾಜ ವೇಷದ ರಾಜನನ್ನು ಜೊತೆಗೆ ಸೇರಿಸಿಕೊಂಡು ಅರಮನೆಯ ಉದ್ಯಾನದಲ್ಲಿ ಬೆಂಕಿ ಹಚ್ಚಿ ರಾಣಿಯನ್ನು ಹೊರಗೆ ಬರುವಂತೆ ಮಾಡ ಬೇಕೆಂದು ಏರ್ಪಾಡನ್ನು ಹೂಡುತ್ತಾನೆ. ಬೆಂಕಿ ಇವರು ಹಚ್ಚಿದಷ್ಟಕ್ಕೆ ನಿಲ್ಲದೆ ವಿಸ್ತಾರವಾಗಿ ಇವರೂ ಇದರಲ್ಲಿ ಸಿಕ್ಕಿಕೊಳ್ಳುತ್ತಾರೆ. ರಾಣಿ, ದೊರೆಯೇ ನನ್ನನ್ನು ರಕ್ಷಿಸು, ಎಂದು ಇವನನ್ನು ಕೂಗುತ್ತಾಳೆ. ವೇಷದ ರಾಜ, ನಾನು ರಾಜನಲ್ಲ, ಎನ್ನುತ್ತಾನೆ. ರಾಣಿ ಮರಳಿ ಅವಮಾನ ಗೊಂಡು ರಾಣಿವಾಸವನ್ನು ಹೊಗುತ್ತಾಳೆ. ಅಲ್ಲಿ ನಿಜದ ರಾಜ ಅವಳನ್ನು ಸಂತೈಸುತ್ತಾನೆ. ರಾಣಿ, ನಾನು ಒಳ್ಳೆಯವಳಲ್ಲ, ನಿನ್ನಿಂದ ದೂರ ಇರು ತ್ತೇನೆ, ಎನ್ನುತ್ತಾಳೆ; ಹತ್ತಿರದಲ್ಲೇ ಇರೆಂದು ರಾಜ ತನ್ನನ್ನು ಬಲ ವಂತಪಡಿಸದೆ ಇರುವುದರಿಂದ ಅಸಮಾಧಾನಗೊಂಡು ಹೊರಟುಹೋಗು ತ್ತಾಳೆ. ಸುರಂಗಮಳೂ ಅವಳ ಜೊತೆಗೆ ಹೋಗುವಳು. ಇಬ್ಬರೂ ರಾಣಿಯ ತಂದೆಯಾದ ಕನ್ಯಾಕುಬ್ಜದ ರಾಜನ ಅರಮನೆಗೆ ಬರುವರು. ರಾಣಿಗೆ ವೇಷದ ರಾಜನ ವಿಷಯದಲ್ಲಿ ಇನ್ನೂ ಬುದ್ಧಿ ತಿಳಿಯಾಗಿಲ್ಲ. ಉದ್ಯಾನ ಉರಿಯುತ್ತಿದ್ದಾಗ ಅವನು ಹೆದರಿದನೆಂದು ಕೇಳಿ ಸ್ವಲ್ಪ ಮಂಕು ಕಡಮೆಯಾಗುತ್ತದೆ. ರಾಜ ತನ್ನನ್ನು ಹುಡುಕಿಕೊಂಡು ಬರಲೆಂದು ಅವಳಿಗೆ ಆಸೆ; ಬರದಿರುವುದರಿಂದ ಅಸಮಾಧಾನ. ಕಂಚಿಯ ರಾಜ ವೇಷದ ರಾಜನನ್ನು ಕರೆದುಕೊಂಡು ಸೈನ್ಯದೊಡನೆ ಕನ್ಯಾಕುಬ್ಜಕ್ಕೆ ಬರುವನು; ರಾಣಿಯನ್ನು ತನಗೆ ಬಿಟ್ಟುಕೊಡಬೇಕೆಂದು ಅವಳ ತಂದೆ ಯನ್ನು ಕೇಳುವನು. ಇವನು ಒಪ್ಪುವುದಿಲ್ಲ. ಇವರಿವರಿಗೆ ಯುದ್ಧ ವಾಗುವುದು. ಈ ಮಧ್ಯೆ ರಾಣಿಗೆ ಪತಿಯ ಪ್ರೇಮವನ್ನು ಸೂಚಿಸುವ ಗಾನಗಳು ಕೇಳಿಬರುವುವು. ಯುದ್ಧದಲ್ಲಿ ಕನ್ಯಾಕುಬ್ಜದ ರಾಜ ಸೆರೆಯಾಗುವನು. ಕಂಚಿಯ ರಾಜ, ರಾಣಿ ಸ್ವಯಂವರದಲ್ಲಿ ಯಾರನ್ನು ವರಿಸಿದರೆ ಅವನಿಗೆ ಸೇರಲಿ, ಎಂದು ಇತರ ರಾಜರೊಂದಿಗೆ ಒಪ್ಪಂದ ಮಾಡಿಕೊಳ್ಳುವನು; ತಾನು ವೇಷದ ರಾಜನನ್ನು ತನಗೆ ಕೊಡೆ ಹಿಡಿಯ ನಿಲ್ಲಿಸಿ ಸಭೆ ಸೇರಿಸುವನು. ರಾಣಿ ಬರುವ ಮೊದಲು ರಾಜನ ಊರ ಮುದುಕ ತಾತಯ್ಯ ಬಂದು ರಾಜ ಬಂದನೆಂದೂ ತಾನು ಅವನ ಸೇನಾ

ಪತಿಯೆಂದೂ ಹೇಳುವನು. ಎಲ್ಲ ರಾಜರಿಗೂ ಬಹಳ ಭಯವಾಗುವುದು; ವೇಷದ ರಾಜ ಓಟಕೀಳುವನು. ಯುದ್ಧ ನಡೆದು ರಾಜನಿಗೆ ಜಯ ವಾಗುವುದು. ಆದರೆ ಆಮೇಲೆ ಅವನು ಎಲ್ಲಿ ಹೋದನೆಂದು ಯಾರಿಗೂ ತಿಳಿಯದು. ರಾಜ ತನಗಾಗಿ ಯುದ್ಧಮಾಡಿ ಗೆದ್ದು ತನ್ನ ಬಳಿಗೆ ಬರಲಿಲ್ಲ ವೆಂದು ರಾಣಿಗೆ ಅಸಮಾಧಾನ. ಆದರೂ ಅವಳು ಅವನನ್ನು ಹುಡುಕಿ ಕೊಂಡು ಹೊರಡುವಳು. ಕಂಚಿಯ ರಾಜನೂ ರಾಜನನ್ನು ಒಪ್ಪಿಕೊಂಡು ಅವನನ್ನು ಓಲೈಸಲು ಹೊರಡುವನು. ದಾರಿಯಲ್ಲಿ ಅವನು ರಾಣಿಯ ವಿಷಯದಲ್ಲಿ ತಾನು ಎಣಿಸಿದ ತಪ್ಪನ್ನು ಮನ್ನಿಸುವಂತೆ ಬೇಡಿಕೊಳ್ಳು ವನು. ಕೊನೆಗೆ ಅವರು ಮೊದಲಿನ ನಗರಕ್ಕೆ ಬರುವರು. ಮೊದಲಿನ ಅರಮನೆಯಲ್ಲಿ ಅದೇ ಕತ್ತಲೆಯ ಗೃಹದಲ್ಲಿ ರಾಣಿ ರಾಜನನ್ನು ಒಪ್ಪಿ ಕೊಳ್ಳುವಳು. ಅವಳಿಗೆ ತಾನು ರಾಣಿಯೆಂಬ ಹೆಮ್ಮೆಯಿಲ್ಲ, ತನಗಾಗಿ ರಾಜ ಹಂಬಲಿಸಬೇಕೆಂಬ ಹಂಬಲಿಲ್ಲ. ಅವಳು ಎಲ್ಲ ಅವನ ಇಷ್ಟ ಎನ್ನುವ ಸ್ಥಿತಿಗೆ ಬಂದಿದಾಳೆ. ಆಗ ರಾಜ, ಈ ಕತ್ತಲೆಯ ಮನೆಯನ್ನು ಈಗ ತೆರೆಯುತ್ತೇನೆ, ಇನ್ನು ಬೆಳಕಿಗೆ ಹೋಗೋಣ ಬಾ, ಎಂದು ಹೇಳುತ್ತಾನೆ. ಬೆಳಕಿಗೆ ಹೋಗುವ ಮೊದಲು ರಾಣಿ ಕಠಿಣನಾದ ಭೀಕರನಾದ ಅಸಮಾನ ನಾದ ಈ ಅಂಧಕಾರದ ರಾಜನ ಕಾಲಿಗೆ ನಮಸ್ಕಾರಮಾಡುತ್ತಾಳೆ.

ಇದು ಒಂದು ತತ್ತ್ವಾರ್ಥವನ್ನು ಪ್ರತಿಪಾದಿಸುವುದಕ್ಕಾಗಿ ಒಂದು ಸಂಕೇತವನ್ನಿಟ್ಟುಕೊಂಡು ಬರೆದಿರುವ ನಾಟಕವೆಂದು ಒಡನೆಯೇ ಸ್ಪಷ್ಟ ವಾಗುತ್ತದೆ. ರಾಜ ದೇವರು; ರಾಣಿ ಜೀವಾತ್ಮ; ಕತ್ತಲೆಯ ಕೋಣೆ ಹೃದಯ; ಸುರಂಗಮ ಸಿದ್ಧಿಹೊಂದಿದ ಜೀವ; ತಾತಯ್ಯ ಶರಣ; ಸುವರ್ಣ ಐಶ್ವರ್ಯದ ಡಂಭ. ಜೀವಾತ್ಮವು ಪರಮಾತ್ಮನಿಗೆ ಮದುವೆ ಯಾದ ಪತ್ನಿ. ಅದು ಆತನನ್ನು ತನ್ನ ಹೃದಯದಲ್ಲಿಯೇ ಕಾಣಬೇಕು. ಹೊರಗೆ ಕಾಣುವ ಮೊದಲು ನಾನು ಎಂಬ ಭಾವವನ್ನು ಬಿಟ್ಟು ಅವನನ್ನೇ ನಂಬಬೇಕು. ಇದು ಆಗುವವರೆಗೆ ಅದು ಅವನನ್ನು ನಂಬುವುದಿಲ್ಲ; ನಿಜವಾದ ದೈವ ಕಾಣದೆ ಇರುವುದರಿಂದ ನಿಜವಲ್ಲದನ್ನೆಲ್ಲ ನಂಬುತ್ತ ತೊಂದರೆಪಡುತ್ತದೆ. ಜೀವ ಕಷ್ಟಪಟ್ಟು ನಿಷ್ಠುರಪಟ್ಟು ಪರದೇಶಿ ಯಾಗಿ ದಿಕ್ಕುಗೆಟ್ಟು ನೀನೇ ಗತಿ ಎಂದು ದೇವರಮೇಲೆ ಭಾರಹಾಕಿದ

ಮೇಲೆ ದೇವರು ಕತ್ತಲೆಯ ಕೋಣೆಯನ್ನು ಬಿಟ್ಟು ಹೊರಗೆ ಜೀವಾತ್ಮಕ್ಕೆ ಕಾಣುತ್ತಾನೆ. ಇದೇ ಇಲ್ಲಿಯ ಕತೆ ಸೂಚಿಸುವ ಅರ್ಥ. ಸಂಸ್ಕೃತದ ಪ್ರಬೋಧಚಂದ್ರೋದಯದಂತೆ ಅಥವಾ ಇಂಗ್ಲೀಷಿನ ಮಧ್ಯಯುಗದ ನೀತಿಯ ನಾಟಕಗಳಂತೆ ಇದರಲ್ಲಿ ಈ ಅರ್ಥ ಮುಖ್ಯ; ಉಳಿದದ್ದೆಲ್ಲ ಈ ಅರ್ಥಕ್ಕೆ ಪೋಷಕವಾಗಿ ಬಂದಿರುವ ಭಾವ. ಆದರೆ ಈ ನಾಟಕದಲ್ಲಿ ಕತೆಯೆಲ್ಲ ಒಂದು ಮುಖವಾಗಿ ಬೆಳೆದಿಲ್ಲ. ಜೀವಾತ್ಮ ಪರಮಾತ್ಮಗಳ ಸಂಬಂಧವನ್ನು ತೋರಿಸುವ ಉದ್ದೇಶದಲ್ಲಿ ಇನ್ನೂ ಬೇರೆ ಬೇರೆ ಉದ್ದೇಶಗಳು ಬೆರೆತಿವೆ. ಉದಾಹರಣೆಗೆ, ಸುರಂಗಮಾ ಪಾತ್ರವನ್ನು ತೆಗೆದುಕೊಳ್ಳೋಣ. ಜೀವಾತ್ಮ ಪರಮಾತ್ಮಗಳ ಸಂಬಂಧದಲ್ಲಿ ಸುರಂಗಮಾ ಎನ್ನುವುದು ಏನು? ಮನುಷ್ಯನ ವಿವೇಚನಾಶಕ್ತಿಯೆಂತಲೆ? ಒಂದು ಸಲ ಹೀಗಿರಬಹುದೆಂದು ತೋರುತ್ತದೆ. ಆದರೆ ಸುರಂಗಮಾ ಹೇಳುವ ಮಾತುಗಳು ಕೆಲವುವೇಳೆ ವಿವೇಚನೆಯ ಭಾವವನ್ನು ಸೂಚಿಸುವುದಿಲ್ಲ, ನೊಂದು ದೇವರನ್ನು ಕಂಡ ಸಿದ್ಧ ಜೀವದ ಭಾವವನ್ನು ಸೂಚಿಸುತ್ತವೆ. ಸುವರ್ಣನೆಂಬ ವೇಷದ ರಾಜನೂ ಹಾಗೆಯೇ. ರಾಣಿ ಅವನನ್ನು ಕಂಡು ಮೋಸಹೋಗುವಾಗ ಆತ್ಮವನ್ನು ಮೋಸಗೊಳಿಸುವ ಐಹಿಕವಾದ ಐಶ್ವರ್ಯವೆಂಬಂತೆ ಅರ್ಥವಾಗುತ್ತದೆ. ಆಮೇಲೆ ಅವನು ಭಯಪಡುವುದು ಕಂಚಿಯ ರಾಜನ ಸೇವೆಯಲ್ಲಿ ನಿಲ್ಲುವುದು ಓಡಿಹೋಗುವುದು ಇದನ್ನು ನೋಡಿ ಜೀವಾತ್ಮಪುರಾಣದಲ್ಲಿ ಇವನ ಸ್ಥಾನ ಯಾವುದು ಎಂದು ತಿಳಿಯುವುದಿಲ್ಲ. ಇನ್ನಿದರಂತೆಯೇ ಕಂಚಿಯ ರಾಜ, ಉಳಿದ ರಾಜರು, ರಾಣಿಯ ತಂದೆ ಕನ್ಯಾಕುಬ್ಜದ ರಾಜ; ಇವರೆಲ್ಲ ಏನು ಎಂದು ತಿಳಿಯುವುದಿಲ್ಲ. ಇಲ್ಲಿ ಎರಡು ಸಮಯಗಳು ಬೆರತು ನಾಟಕ ತೊಡಕಾಗಿದೆಯೆಂದು ತೋರುತ್ತದೆ.

ಅರ್ಥದ ವಿಚಾರ ತೊಡಕಾಗುವುದಲ್ಲದೆ ಇದರ ರಸವೂ ಅಷ್ಟೇನೂ ಸುಖವಾಗಿಲ್ಲ. ಇದೂ ಸಮಯಗಳ ಬೆರಕೆಯಿಂದಲೇ ಉಂಟಾಗಿರುವ ನ್ಯೂನತೆ. ರಾಣಿ ಒಬ್ಬ ಸ್ತ್ರೀ ಎಂದರೆ ಅಯ್ಯೋ ನೊಂದಳೇ ಎಂದು ನಾವೂ ನೋಯುತ್ತೇವೆ; ತಪ್ಪು ಮಾಡಿದಳೇ ಎಂದು ವಿಷಾದಪಡುತ್ತೇವೆ. ಇವಳು ನಿಜವಾದ ಸ್ತ್ರೀಯಲ್ಲ, ನಮ್ಮ ಜೀವಾತ್ಮದ ಸಂಕೇತ ಸ್ವರೂಪವೆಂದರೆ

ಇಷ್ಟೇಯೇ ಎನ್ನುತ್ತೇವೆ. ಇದು ಮನುಷ್ಯನ ಸ್ವಭಾವದ ಒಂದು ಗುಣ. ನಿಜವಾದ ಕತೆಗಳನ್ನು ಬರಿಯ ಇಂಥ ಉಬ್ಬರದ ಉಪಮಾನಗಳಿಂದು ಹೇಳುವ ವ್ಯಾಖ್ಯಾನಕಾರರು ನಮ್ಮಲ್ಲುಂಟು. ಇಂಥವರು ರಾಮಾಯಣ ವನ್ನು ಆಧ್ಯಾತ್ಮಿಕ ಪ್ರಸಂಗಮಾಡಿ ಸೀತೆಯನ್ನು ಮಾಯಮಾಡುತ್ತಾರೆ. ತೀಕ್ಷ್ಣವಾದ ಇಂಥ ಊಹೆಗೆ ಸಿಕ್ಕಿ ರಾಮಾಯಣದ ರಸ ಇಂಗುತ್ತದೆ. ಕತೆಯಲ್ಲಿ ಬರಿಯ ಉಪಮಾನವನ್ನು ಕಂಡು ಕೆಡಿಸುವ ರೀತಿ ಅದು. ರಾಜಾ ನಾಟಕದಂಥ ಸಂಕೇತಕತೆಗಳು ಈ ಪದ್ಧತಿಯ ಇನ್ನೊಂದು ಕೊನೆ. ಇವು ಮಿತಿ ಮರೆತು ಬೆಳೆದ ಉಪಮಾನಗಳು. ಇಂಥ ಉಪಮಾನಗಳೇ ನಮ್ಮಲ್ಲಿ ಪ್ರಹ್ಲಾದನ ಕತೆ, ವಾಮನನ ಕತೆ, ಗಜೇಂದ್ರ ಮೋಕ್ಷದ ಕತೆ, ಮುಂತಾದ ಕತೆಗಳಾಗಿರುವುದು. ಈ ಕತೆಗಳು ಮನುಷ್ಯನ ಮನಸ್ಸನ್ನು ಮುಟ್ಟುವವೇಳೆಗೆ ಅವು ಉಪಮಾನಗಳೆನ್ನುವುದು ಮರೆತಿರುತ್ತದೆ. ಉಪಮಾನ ಉಕ್ತಿಯಲ್ಲಿ ಒಂದು ರೀತಿ; ಅತಿಯಾಗಿ ಬೆಳಸಿದರೆ ಅದು ಜೊಂಡಾಗುತ್ತದೆ. ಜೇನು ಒಳ್ಳೆಯ ಪದಾರ್ಥ, ಸೀಯಾಗಿದೆ, ಎಂದು ಭೋಜನದಲ್ಲಿ ಅದನ್ನು ಸ್ವಲ್ಪ ಸೇರಿಕೊಳ್ಳಬಹುದು; ಕುಡಿಯುವ ನೀರೆಲ್ಲ ಇದರಿಂದ ಸೇರಿರಬೇಕು ಎಂದರೆ ನಮಗೆ ಒಳ್ಳೆಯ ನೀರೂ ಇಲ್ಲ ಒಳ್ಳೆಯ ಜೇನೂ ಇಲ್ಲ. ಉಪಮಾನವನ್ನು ದೊಡ್ಡದುಮಾಡುವುದಕ್ಕೆ ಹೋಗಿ ನಾವು ಅದರ ರುಚಿಯನ್ನು ಕಳೆದುಕೊಳ್ಳುತ್ತೇವೆ. ಕವಿ ಇನ್ನೂ ಸ್ವಲ್ಪ ಶ್ರಮ ತೆಗೆದುಕೊಂಡರೆ, ಅವನ ಊಹೆ ವಿಷಯವನ್ನು ಇನ್ನೂ ಸ್ವಲ್ಪ ಪಾಕಮಾಡಿದರೆ, ಕತೆ ಕೆಡದೆ ಉಪಮಾನವನ್ನು ಬಿಡದೆ ಇದೇ ಭಾವ ವನ್ನು ಪ್ರತಿ ಪಾದಿಸುವುದು ಸಾಧ್ಯ. ನ್ಯಾಯವಾಗಿ ನೋಡಿದರೆ ಎಲ್ಲ ಕತೆಯ ಸಂಗತಿಯೂ ಭಾವಗಳೂ ಆಟವೇ. ಉತ್ತಮ ಕಾವ್ಯದ ಪದ್ಧತಿಯಲ್ಲಿ ಈ ಎರಡು ಸಮಯಗಳೂ ಸಮನ್ವಯವಾಗಿ ಕಾಣುತ್ತವೆ. ಇಲ್ಲಿ ಕವಿವರರು ಚಮತ್ಕಾರಕ್ಕೆ ಹೆಚ್ಚು ಗಮನಕೊಟ್ಟಿರುವುದರಿಂದ ಇವು ಬೇರೆ ಬೇರೆಯಾಗಿಯೇ ಉಳಿದು ಕೃತಿ ಒಂದು ಸಮಸ್ಯೆಯಾಗಿ ನಿಂತುಹೋಗಿದೆ.

ಮತದ ದೃಷ್ಟಿಯಿಂದಲೂ ಈ ಪದ್ಧತಿ ಅಷ್ಟು ಸಾಧುವೆಂದು ತೋರು ವುದಿಲ್ಲ. ಸ್ಪಷ್ಟವಾಗಿ ಹೇಳಿದರೆ ಜನ ಕುತೂಹಲಪಡುವುದಿಲ್ಲ ಅಥವಾ

ಭಾವದಿಂದ ಗ್ರಹಿಸುವುದಿಲ್ಲ ಎಂದು ತತ್ವವನ್ನು ಮರೆಯ ಮಾತುಗಳಲ್ಲಿ ಹೇಳುವುದು ಒಂದು ಪದ್ಧತಿ. ಇದರ ಮೂಲದಲ್ಲಿ, ಸತ್ಯವನ್ನು ಹೇಳಿದರೆ ಮಾನವನ ಬುದ್ಧಿ ಅದನ್ನು ಪರೀಕ್ಷಿಸುವುದಕ್ಕೆ ಹೋಗುತ್ತದೆ, ಗೌರವದಿಂದ ನಡೆಯುವುದಿಲ್ಲ, ಎಂಬ ಶಂಕೆಯಿದೆ. ಸತ್ಯವನ್ನು ಕಂಡಂತೆ ಹೇಳುವುದು ಇನ್ನೊಂದು ಪದ್ಧತಿ. ಮಾನವರಲ್ಲಿರುವ ಬುದ್ಧಿಯೂ ದೇವರಿಂದ ಬಂದದ್ದೇ, ಅದು ಪರೀಕ್ಷಿಸುವುದೆನ್ನುವುದು ಅಪೇಕ್ಷಣೀಯವಾದ ವ್ಯಾಪಾರವೇ, ಇರುವುದನ್ನು ಇರುವಂತೆ ಹೇಳುವುದರಿಂದ ಸತ್ಯಕ್ಕೆ ಭಯವಿಲ್ಲ, ಎನ್ನುವುದು ಇದರ ಮೂಲದ ಭಾವನೆ. ಮೊದಲನೆಯ ಪದ್ಧತಿ ಆತ್ಮದ ಭಾವ ಬುದ್ಧಿಗಳಲ್ಲಿ ವೈಷಮ್ಯವನ್ನು ಊಹಿಸುತ್ತದೆ; ಎರಡನೆಯದು ಅವು ಎರಡೂ ಒಂದು ಚೇತನದ ಎರಡು ಕೈ ಅಥವಾ ಕಣ್ಣು ಎಂಬಂತೆ ವರ್ತಿಸುತ್ತದೆ. ವೈಷಮ್ಯವನ್ನು ಊಹಿಸುವ ಪದ್ಧತಿ ಮಾನವನ ಚರಿತ್ರೆಯ ಆದಿಯಿಂದ ಬಂದಿರತಕ್ಕದು; ಎರಡನೆಯ ಪದ್ಧತಿ ಮೆಲ್ಲನೆ ಬೆಳೆಯುತ್ತಬಂದಿದೆ. ಈ ನಾಟಕದಲ್ಲಿ ಅವಲಂಬಿಸಿರುವುದು ಆ ಹಳೆಯ ಪದ್ಧತಿ: ಪೂರ್ವದವರು ಹಳೆಯ ಪುರಾಣವನ್ನು ಬರೆದಂತೆ ಆಧುನಿಕರು ಹೊಸ ಪುರಾಣಗಳನ್ನು ಬರೆಯುವ ಪರಿ. ಪೂರ್ವದ ಪುರಾಣಗಳ ಸಂಕೇತ ಮರೆತು ಪ್ರಹ್ಲಾದ ನಿಜವಾದ ಹುಡುಗನಾಗಿ ಬಲಿ ಉದಾರಿಯಾದ ದಾತನಾಗಿ ವಾಮನ ಮೋಸಮಾಡಿದ ವಟುವಾಗಿ ಗಜೇಂದ್ರ ನಿಜವಾದ ಗಜವಾಗಿ ಆ ಕತೆಗಳು ಪ್ರತಿಪಾದಿಸಿದ ತತ್ವಗಳು ಅವುಗಳ ಕುಕ್ಷಿಯಲ್ಲೇ ಜೀರ್ಣಿಸಿಹೋಗಿವೆ. ಹೊಸದಾಗಿ ಬರೆದ ಇಂಥ ಕತೆಗಳಿಗೆ ಈ ಸ್ಥಿತಿ ಬರುತ್ತದೋ ಇಲ್ಲವೋ ಹೇಳುವಂತಿಲ್ಲ. ಬಂದರೂ ಬಾರದಿದ್ದರೂ ಅರ್ಥದ ಕ್ಲಿಷ್ಟತೆ ಇದ್ದೇ ಇರುತ್ತದೆ. ಸಾಮಾನ್ಯರಿಗೆ ಇವುಗಳ ಅರ್ಥ ಆಗುವುದಿಲ್ಲ; ಬಲ್ಲವರೆಂಬ ಕೆಲವರು ಓದಿದರೆ ಹುಡುಕಿ ಕೆದಕಿ ಮೊದಲೇ ತಿಳಿದಿದ್ದಷ್ಟು ಅರ್ಥವನ್ನು ಗುರುತಿಸುತ್ತಾರೆ ಅಥವಾ ಊಹಿಸುತ್ತಾರೆ. ಠಾಕೂರರು ಒಂದು ಕಡೆ "Your speech is simple, my master, but not theirs who talk of you" ಎಂದು ಹೇಳಿದಾರೆ. ಈ ನಾಟಕವನ್ನು ಓದಿದಾಗಲೆಲ್ಲ ನನಗೆ ಈ ಮಾತನಾಡಿದ ಕವಿವರರು ದೇವರನ್ನು ಕುರಿತು ಈ ಸಂಕೇತ ಕತೆಯನ್ನು ಬರೆದರೇಕೆ ಎಂದು ವಿಸ್ಮಯವಾಗುತ್ತದೆ.

### ೪೯. ಅಂಚೆಯ ಮನೆ

ಡಾಕ್‌ಘರ್ ಅಥವಾ ಅಂಚೆಯ ಮನೆ ಎನ್ನುವುದು ಒಬ್ಬ ಸಣ್ಣ ಹುಡುಗನ ವಿಷಯವಾದ ನಾಟಕ. ಮಾಧವ ಎಂಬವನೊಬ್ಬ ಗೃಹಸ್ಥ. ಅವನಿಗೆ ಮಕ್ಕಳಿಲ್ಲ. ಅವನು ಹೆಂಡತಿಯ ಊರಿನ ಒಂದು ತಬ್ಬಲಿ ಮಗುವನ್ನು ಕರೆದುಕೊಂಡುಬಂದು ಸಾಕುತ್ತಿರುತ್ತಾನೆ. ಆ ಮಗುವಿಗೆ ಕಾಯಿಲೆ; ವೈದ್ಯನು ಬಂದು ನೋಡಿ ಹುಡುಗನನ್ನು ಹೊರಗೆಲ್ಲಿಯೂ ಬಿಡಕೂಡದು ಎನ್ನುತ್ತಾನೆ. ಹುಡುಗನಿಗೆ ಆಟದಮೇಲೆ ಆಸೆ; ಅದಕ್ಕೆ ದಾರಿಯಿಲ್ಲ. ಅವನು ಹೊರಗೆ ಬೀದಿಯಲ್ಲಿ ಆಗುತ್ತಿರುವುದನ್ನೆಲ್ಲ ನೋಡುತ್ತಿರುತ್ತಾನೆ. ಅಂಗಳದಲ್ಲಿ ಒಂದು ಅಳಿಲು ಹಿಂಗಾಲಮೇಲೆ ಕುಳಿತು ಬಾಲವನ್ನು ಮೇಲಕ್ಕೆತ್ತಿ ಅಲಸಂದಿಯನ್ನು ಸುಲಿದು ತಿನ್ನುತ್ತಿರುವುದು. ಹುಡುಗ ನಾನು ಒಂದು ಅಳಿಲಾಗಿದ್ದರೆ ಚೆನ್ನಾಗಿತ್ತು ಎನ್ನುವನು. ಮನೆಯಲ್ಲೇ ಕುಳಿತಿದ್ದರೆ ನೀನು ಒಬ್ಬ ಪಂಡಿತನಾಗುವೆ ಎಂದು ಮಾಧವ ಹೇಳುತ್ತಾನೆ. ಅಮಲನಿಗೆ ಪಾಂಡಿತ್ಯ ಬೇಡ; ಎಲ್ಲಾದರೂ ಹೋಗಿ ಏನನ್ನಾದರೂ ನೋಡಬೇಕೆಂದು ಅವನ ಆಸೆ; ಕಿಟಕಿಯಿಂದ ಅಲ್ಲಿ ಕಾಣುವ ಗುಡ್ಡ ಇದೆಯಲ್ಲಾ ಅದರ ಹತ್ತಿರ ಹೋಗಿ ಅದನ್ನು ದಾಟಿ ಹೊರಟು ಹೋಗಬೇಕು. ಇದು ಎಲ್ಲಾ ಮಕ್ಕಳಿಗೂ ಇರುವ ಆಸೆ. ಮಾಧವನ ಭಾವನೆಯಲ್ಲಿ ಆ ಬೆಟ್ಟ ಇರುವುದು ಅಲ್ಲಿಂದಾಚೆಗೆ ಜನ ಹೋಗದೆ ಇರಲಿ ಎಂದು. ಅಮಲನ ಭಾವನೆ, ಭೂಮಿಗೆ ಮಾತು ಬಾರದು ಆದ್ದರಿಂದ ಅದು ಬೆಟ್ಟವಾಗಿ ಆಕಾಶಕ್ಕೆ ಕೈ ಎತ್ತಿ ಸನ್ನೆ ಮಾಡುತ್ತದೆ, ಎಂದು. ಭಿಕ್ಷುಕನೊಬ್ಬನು ಹೋಗುತಿದ್ದಾಗ ಅಮಲ ಅವನನ್ನು ಎಲ್ಲಿಗೆ ಹೋಗುತ್ತೀಯೆ ಎನ್ನುವನು; ಅವನು ನನಗೆ ತಿಳಿಯದು ಎನ್ನುವನು. ಅಮಲನಿಗೆ ಇದು ಬಹಳ ಆಶ್ಚರ್ಯ. ಭಿಕ್ಷುಕನು ಸ್ವಲ್ಪ ದೂರದಲ್ಲಿ ಹಳ್ಳದ ಪಕ್ಕದಲ್ಲಿ ಅತ್ತಿಯ ಮರದ ಕೆಳಗೆ ಕುಳಿತು ಹುರಿಹಿಟ್ಟು ಕಲಸಿ ತಿನ್ನುವನು. ಈ ಹುಡುಗನಿಗೆ ತಾನೂ ಹಾಗೆ ಮಾಡಬೇಕೆಂದು ಆಸೆ. ಯಾರಾದರೂ ಎತ್ತಿಕೊಂಡು ಹೊರಟುಹೋದಾರು ಎಂದರೆ ಇವನು ಅದು ಎಷ್ಟು ಚೆನ್ನಾಗಿದ್ದೀತು ಎನ್ನುತ್ತಾನೆ. ಒಬ್ಬ ಮೊಸರಿನವನು ಅತ್ತ ಬರುತ್ತಾನೆ. ಅಮಲ ಮೊಸರೂ ಮೊಸರೂ ಎಂದು ಕರೆಯುತ್ತಾನೆ. "ಏನು ಕರೆಯುತೀಯೆ?

ಮೊಸರು ತಕ್ಕೊಳ್ತೀಯಾ?'' "ಹ್ಯಾಗೆ ತಕ್ಕೊಳ್ಳೋದು. ನನ್ನ ಹತ್ತಿರ ಕಾಸಿಲ್ಲ.'' "ಎಂತಾ ಹುಡುಗ ನೀನು! ಹಾಗಾದರೆ ಕೂಗಿದ್ದು ಯಾಕೆ? ನನಗೆ ಬೇರೆ ಕೆಲಸಾ ಇಲ್ಲವೆ?'' "ನನ್ನ ನಿನ್ನ ಜೊತೆಗೆ ಕರೆದುಕೊಂಡು ಹೋಗುತೀಯಾ?'' "ನನ್ನ ಜೊತೆಗೆ?'' "ಹೌದು. ನೀನು ರಸ್ತೆಯ ಆ ಕಡೆಯಿಂದ ಕೂಗಿದರೆ ನನ್ನ ಊರ ನೆನಪು ಆಗುತ್ತದೆ.'' ಮೊಸರಿ ನವನಿಗೆ ಕನಿಕರವಾಗುತ್ತದೆ. ಅವನು ಮೊಸರಿನ ಮಕ್ಕರಿಯನ್ನು ಅಲ್ಲಿ ಇಳಿಸಿ ಹುಡುಗನ ಸಂಗಡ ಎರಡು ಮಾತನಾಡಿ ಅವನಿಗೆ ಸ್ವಲ್ಪ ಮೊಸ ರನ್ನು ಕೊಡುತ್ತಾನೆ. ಊರ ತಳವಾರ ಬರುತ್ತಾನೆ. ಘಂಟೆ ಆದಾಗ ಲೆಲ್ಲಾ ಅವನು ಘಂಟೆ ಹೊಡೆಯುವುದನ್ನು ಕೇಳಿ ಅಮಲನಿಗೆ ಅದರ ಮೇಲೆ ಆಸೆ. ಅಮಲ ಅಲ್ಲಿ ಕಟ್ಟುತ್ತಿರುವ ಮನೆ ಯಾವುದು ಎಂದು ಕೇಳುತ್ತಾನೆ. ತಳವಾರ ಅದು ಅಂಚೆಯ ಮನೆ ಎಂದು ಹೇಳುತ್ತಾನೆ. "ಯಾರದು?'' "ರಾಜನದು.'' "ರಾಜನ ಕಾಗದ ಇಲ್ಲಿಗೆ ಬರುತ್ತ ವೆಯೆ?'' "ಹೌದು. ಎಂದಾದರೂ ಒಂದು ದಿನ ರಾಜರು ನಿನಗೆ ಒಂದು ಕಾಗದ ಕಳುಹಿಸಬಹುದು.'' "ನನಗೆ? ನಾನು ಸಣ್ಣ ಹುಡುಗ.'' "ರಾಜ ಸಣ್ಣ ಹುಡುಗರಿಗೆ ಸಣ್ಣ ಕಾಗದ ಕಳುಹಿಸುತ್ತಾನೆ.'' ಇದರಿಂದ ಅಮಲನ ಮನಸ್ಸಿನಲ್ಲಿ ತನಗೆ ರಾಜನಿಂದ ಒಂದು ಕಾಗದ ಬರಬಹುದು ಎಂದು ನಿರೀಕ್ಷೆ ಹುಟ್ಟುತ್ತದೆ. ಆಮೇಲೆ ಊರ ಗೌಡ ಅಲ್ಲಿ ಬರುತ್ತಾನೆ; ರಾಜನಿಂದ ತನಗೆ ಕಾಗದ ಬರಬಹುದೆಂದು ಹುಡುಗ ಹೇಳಿದ ಮಾತಿಗೆ ಕೋಪಗೊಳ್ಳುತ್ತಾನೆ. ಅಲ್ಲಿ ಹೂವಾಡಿಗರ ಒಬ್ಬ ಸಣ್ಣ ಹುಡುಗಿ ಬರುತ್ತಾಳೆ. ಅವಳ ಹೆಸರು ಸುಧಾ. ಅಮಲ ಸುಧಾ ಇವರ ಮಾತು ಸ್ವಲ್ಪ ಬರುತ್ತದೆ. "ನಾನು ಚಂಪಾ ಆಗುತ್ತೇನೆ, ನೀನು ಪರುಳ ಪುಷ್ಪ ವಾಗುತ್ತೀಯಾ?'' "ನಾನು ಸುಧಾ. ನಾನು ಪರುಳ ಹೇಗಾದೇನು?'' ಎಂದು ಅವಳು "ನಾನು ಮುಂದೆ ಹೋಗಬೇಕು. ಪುನಃ ಬರುತ್ತೇನೆ, ನಿನಗೆ ಒಂದು ಹೂವು ತಂದು ಕೊಡುತ್ತೇನೆ'' ಎಂದು ಹೇಳಿ ಹೋಗು ತ್ತಾಳೆ. ಆ ಮೇಲೆ ಕೆಲವರು ಮಕ್ಕಳು ಬರುತ್ತಾರೆ. ಅಮಲ ಆಟದಲ್ಲಿ ಸೇರುವಂತಿಲ್ಲ. ಅವನು ಅವರನ್ನು ಕಿಟಕಿಯ ಮುಂದೆ ಬಂದು ಆಡಿ ಎಂದು ಬೇಡುತ್ತಾನೆ; ತನ್ನ ಆಟದ ಸಾಮಾನುಗಳನ್ನೆಲ್ಲಾ ಅವರಿಗೆ

ಕೊಡುತ್ತಾನೆ; ಆಮೇಲೆ ಅವರು ಹೊರಟುಹೋಗುವಾಗ ಅಂಚೆಯವನ ಹೆಸರನ್ನು ಕೇಳಿ ತಿಳಿದುಕೊಳ್ಳುತ್ತಾನೆ. ಇವನಿಗೆ ಕಾಯಿಲೆ ಹೆಚ್ಚಾಗುತ್ತದೆ. ಊರಲ್ಲಿಯ ಮುದುಕನೊಬ್ಬ ಬಂದು ಅಮಲನ ಹತ್ತಿರ ಇರುತ್ತಾ ಅವನಿಗೆ ಇಷ್ಟವಾದ ಕತೆಗಳನ್ನು ಹೇಳುತ್ತ ಹೊತ್ತುಕಳೆಯುವಂತೆ ಮಾಡುತ್ತಾನೆ. ಅಮಲ ತನಗೆ ರಾಜ ಒಂದು ಕಾಗದ ಬರೆದಿದ್ದಾನೆ ಅದು ಬರುತ್ತಿದೆ ಎಂದು ತಿಳಿದುಕೊಂಡಿದಾನೆ. ಊರ ಗೌಡ ಬಂದು ಈ ಮಾತಿಗೆ ಇವನ ಮನೆಯವರನ್ನು ಪರಿಹಾಸ್ಯ ಮಾಡುತ್ತಾನೆ; ಒಂದು ಬರಿಯ ಕಾಗದವನ್ನು ತೋರಿಸಿ, ಇಕೋ ನೋಡು ರಾಜನ ಕಾಗದ, ಎನ್ನುತ್ತಾನೆ. ಹುಡುಗನಿಗೆ ಬಹಳ ಸಂತೋಷ. ಊರ ಮುದುಕ ಅದು ನಿಜವೆಂಬಂತೆ ನಟಿಸುತ್ತಾನೆ. ಅಷ್ಟರಲ್ಲಿ ನಿಜವಾಗಿಯೂ ಯಾರೋ ಬಾಗಿಲು ತಟ್ಟುತ್ತಾರೆ. ಯಾರೆಂದು ನೋಡಿದರೆ ರಾಜನ ಭೃತ್ಯ. ಅವನು ರಾಜರು ರಾತ್ರಿಗೆ ಬರುತ್ತಾರೆ ಎನ್ನುತ್ತಾನೆ. ರಾಜ ವೈದ್ಯ ಬರುತ್ತಾನೆ; ಹುಡುಗನಿಗೆ ಚಿಕಿತ್ಸೆಮಾಡುತ್ತಾನೆ. ಮಗು ನಿದ್ದೆಹೋಗುತ್ತದೆ, ಮರಳಿ ಏಳುವುದಿಲ್ಲ. ಸುಧಾ ಅವನಿಗೆ ಹೂವು ಕೊಡಬೇಕೆಂದು ಬರುತ್ತಾಳೆ; ಮಗು ನಿದ್ದೆಯಲ್ಲಿರುವುದನ್ನು ನೋಡಿ, ಅವನು ಎದ್ದಾಗ ನಾನು ಅವನನ್ನು ಮರೆಯಲಿಲ್ಲವೆಂದು ಹೇಳಿ, ಎನ್ನುತ್ತಾಳೆ. ನಾಟಕ ಮುಗಿಯುತ್ತದೆ.

ಇದು ಒಂದು ಎಳೆಯ ಜೀವನದ ಚಿತ್ರ. ಅಮಲನ ಮಾತು ಅಮಲನ ಭಾವನೆ ಇವುಗಳ ಸರಳತೆ ಇದರಲ್ಲಿ ಮುದ್ದಾಗಿ ರೂಪುಗೊಂಡಿದೆ. ಎಳೆಯ ಜೀವಕ್ಕೆ ಭೂಮಿ ಮಾತನಾಡುತ್ತದೆ; ಹಳ್ಳದ ಬದಿಯ ಮರದಡಿ ಸುಖ ಕಾದಿರುತ್ತದೆ; ಬೆಟ್ಟದಾಚೆಗೆ ಏನೋ ಸೊಗಸಿದೆ. ಎಳೆಯ ಮನಸ್ಸಿಗೆ ಅರಳ ಹಿಟ್ಟು ತಿನ್ನುವುದು ಸುಖ, ಎಳೆಯ ಕಣ್ಣಿಗೆ ಅಳಿಲು ಅಲಸಂದಿ ತಿನ್ನುವಾಗ ಕುಳ್ಳಿರುವರೀತಿ ಚಂದ, ಎಳೆಯ ಭಾವನೆಗೆ ಮಕ್ಕಳಿಗೆಲ್ಲ ಕಾಗದ ಬರೆಯುವ ರಾಜ ಸಾಧ್ಯ. ವರ್ಡ್ಸ್‌ವರ್ತ್ ಕವಿ ಹೇಳುವಂತೆ ಎಳೆಯ ಮನಸ್ಸಿಗೆ ಬಾಳು ಕನಸಿನದೆಂಬ ಒಂದು ವೈಭವ ಒಂದು ನವ್ಯತೆಯೊಡನೆ ಬೆಳಗುತ್ತದೆ. ದೇವರು ನಮ್ಮ ಆವಾಸ. ಅಲ್ಲಿಂದ ಇಲ್ಲಿಗೆ ಬರುತ್ತ ನಾವು ವೈಭವದ ಮೋಡಗಳನ್ನು ಸುತ್ತಿಕೊಂಡು ಕೆದರಿಕೊಂಡು ಬರುತ್ತೇವೆ. ಆ ಸ್ಥಿತಿಯಲ್ಲಿ, ಜೀವ

ದಿಂದಿರುವುದೇ ಒಂದು ಸುಖ. ಇದನ್ನು ಠಾಕೂರರು ಬಹಳ ಚೆನ್ನಾಗಿ ಅನುಭವಿಸಿದಾರೆನ್ನುವುದು ಅವರ ಮಾತಿನಲ್ಲೆಲ್ಲ ಕಾಣುತ್ತದೆ. ಶಿಶು ಕಾವ್ಯ ದಲ್ಲಿ ಇದರ ಒಂದು ಫಲ ಕಂಡಿತು; ಈ ನಾಟಕದಲ್ಲಿ ಇನ್ನೊಂದು ಫಲ ಕಾಣುತ್ತದೆ. ಉತ್ಸಾಹದಿಂದ ಉಕ್ಕುವ ಎಳೆಯ ಜೀವದ ಬುಗ್ಗೆ ಇಲ್ಲಿ ಎಳೆಯದರಲ್ಲೇ ಬತ್ತಿಹೋಗುತ್ತದೆ. ಇದಿಷ್ಟನ್ನು ತೋರಿಸುವುದೇ ಇಲ್ಲಿಯ ಉದ್ದೇಶ. ಹೋಗುವ ಮೊದಲು ಅದು ತನ್ನ ಆಶೆಗಳನ್ನೆಲ್ಲ ಪ್ರಕಟ ಮಾಡುತ್ತದೆ; ಊರ ಜನರೊಂದಿಗೆ ಸಂಬಂಧವನ್ನು ಬೆಳಸುತ್ತದೆ. ಕೆಲಸ ದಲ್ಲೇ ನಿರತರಾದವರನ್ನು ಕೆಲಸ ಬಿಡಿಸಿ ಹತ್ತಿರಕ್ಕೆ ಕರೆದು ಒಲಿಸಿಕೊಳ್ಳು ತ್ತದೆ; ಸುಂದರವಾದ ಕೆಲಸದಲ್ಲಿ ತೊಡಗಿರುವ ಸುಧೆಯ ಸ್ನೇಹವನ್ನು ಪಡೆಯುತ್ತದೆ.

ಇದಿಷ್ಟೂ ಸೊಗಸಿನ ಮಾತಾಯಿತು. ಮಧ್ಯೆ ಅಂಚೆಯ ಮನೆ ಒಂದು, ಅದರಿಂದ ಕಾಗದ ಬರುವುದು ಒಂದು, ರಾಜನ ವೈದ್ಯ ಬರುವುದು ಒಂದು, ಈ ಮಾತುಗಳು ಸನ್ನಿವೇಶದ ನೈಜಭಾವವನ್ನು ಕೆಡಿಸುತ್ತವೆ. ರಾಜ ದೇವರು ರಾಜನ ವೈದ್ಯ ಸಾವು ಎಂಬ ಅರ್ಥ ಕೊನೆಯಲ್ಲಿ ಭಾಸವಾಗುತ್ತದೆ. ನಿಜವಾದದೊಂದು ಅಂಚೆಯ ಮನೆ, ಕೆಂಪು ಬಣ್ಣ ಬಳಿದ ಸ್ಥೂಲವಾದ ಒಂದು ಪೆಟ್ಟಗೆ; ಇವುಗಳೊಂದಿಗೆ ಸಾಮ್ಯದ ರಾಜ ಸಾಮ್ಯದ ರಾಜವೈದ್ಯರು ಹೊಂದುವುದಿಲ್ಲ. ಈ ನಾಟಕವನ್ನು ನೋಡಿದವರು ಇದರಲ್ಲಿ ಬರುವ ವ್ಯಕ್ತಿಗಳಿಗೆಲ್ಲಾ ಒಂದೊಂದು ಭಾವನೆಯನ್ನು ಅನ್ವಯಿಸುವುದಕ್ಕೆ ನೋಡಿದರಂತೆ. ಗೌಡನೆಂದರೆ ರಾಷ್ಟ್ರಶಕ್ತಿ, ಮೊಸರು ಮಾರುವನೆಂದರೆ ಕೆಲಸಗಾರ, ಆಡುವ ಹುಡುಗರು ಕವಿಗಳು ಕಲಾವಿನೋದಿಗಳು, ಇತ್ಯಾದಿ, ಇತ್ಯಾದಿ. ಇದೆಲ್ಲ ನಾಟಕದ ಉದ್ದೇಶವಲ್ಲವೆಂದು ಇದರ ಮುನ್ನುಡಿಯಲ್ಲಿ ಹೇಳಿದೆ. ಅಲ್ಲವೆನ್ನುವುದೇನೋ ನಿಜ. ಆದರೆ ಕಡೆಯ ಸನ್ನಿವೇಶ ಇದು ಹೌದೋ ಎಂದು ಭ್ರಾಂತಿಯನ್ನು ಉಂಟುಮಾಡುತ್ತದೆ. ಠಾಕೂರರ ನಾಟಕದಲ್ಲಿ ಅದರಲ್ಲಿಯೂ ಕೊನೆಕೊನೆಗೆ ಬರೆದ ನಾಟಕ ಗಳಲ್ಲಿ ಈ ತೊಡಕು ಬಹು ಸಾಮಾನ್ಯವಾಗಿ ಬಂದುಬಿಡುತ್ತದೆ. ಸಹಜ ಜೀವನದ ಸಮಯ ಒಂದು, ಸಾಮ್ಯ ಜೀವನದ ಸಮಯ ಒಂದು, ಹೀಗೆ ಜೊತೆಯಲ್ಲಿ ಬೆರೆಯಲಾದ ಎರಡು ಸಮಯಗಳು ಹೆಣೆದುಕೊಂಡು

ನಾಟಕದ ಅರ್ಥವನ್ನು ಕ್ಲಿಷ್ಟಮಾಡುತ್ತವೆ. ರಾಜಾ ನಾಟಕದಲ್ಲಿ ಇದು ಇನ್ನೂ ಹೆಚ್ಚಾಗಿ ಕವಿಯ ಅರ್ಥವನ್ನು ಮರೆಯಿಸಿರುವುದನ್ನು ಆ ನಾಟಕವನ್ನು ಕುರಿತ ವಿಮರ್ಶೆಯಲ್ಲಿ ವಿಸ್ತಾರವಾಗಿ ಚರ್ಚೆಮಾಡಿದೆ. ಆದರೂ ಇದಿಷ್ಟರಿಂದ ಈ ಮಗುವಿನ ಜೀವವನ್ನು ಕುರಿತು ನಾಟಕದ ಚೆಲುವು ಕೆಟ್ಟಿಲ್ಲ. ಇದನ್ನು ಬರೆದ ಕೈ ನಾಟಕದಲ್ಲಿ ಸುಲಭವಾಗಿ ಕಾವ್ಯದ ರಸವನ್ನು ತರಬಲ್ಲದು. ಇಲ್ಲಿ ಪ್ರೇಕ್ಷಕನ ಮನಸ್ಸು ಕವಿಯ ಮನಸ್ಸಿನೊಂದಿಗೆ ಬೆರೆತು ಕವಿ ಯಾವ ಕನಿಕರದಿಂದ ಕರಗಿದ್ದನೋ ಅದಕ್ಕೆ ತಾನೂ ಸ್ವಲ್ಪ ಎಡೆಗೊಡುತ್ತದೆ; ಅಷ್ಟರಮಟ್ಟಿಗೆ ಒಂದು ಆವಶ್ಯಕವಾದ ಸಂಸ್ಕಾರವನ್ನು ಪಡೆಯುತ್ತದೆ.

### ೫೦. ಫಾಲ್ಗುಣಿ

ರಾಜಾ ನಾಟಕಕ್ಕಿಂತ ಅಂಚೆ ಮನೆ ನಾಟಕದಲ್ಲಿ ತತ್ವ ಕಡಮೆ, ಕಾವ್ಯ ಹೆಚ್ಚು, ಕತೆ ತೆಳುವು. ಫಾಲ್ಗುಣಿಯಲ್ಲಿ ಕಾವ್ಯ ಇನ್ನೂ ಸ್ವಲ್ಪ ಹೆಚ್ಚಾಗಿದೆ; ಕತೆಯಂತೂ ತೀರಾ ತೆಳುವಾಗಿಹೋಗಿದೆ. ಒಬ್ಬ ರಾಜ. ಅವನಿಗೆ ತಲೆಯಲ್ಲಿ ಎರಡು ನರೆಕೂದಲು ಕಾಣುವುದು. ಇದು ಹತ್ತಿರಕ್ಕೆ ಬರುತ್ತಿರುವ ಸಾವಿನ ಚಿಹ್ನೆಯೆಂದು ಅವನು ಚಿಂತಾಕ್ರಾಂತನಾಗುವನು. ಗಡಿಗಳಲ್ಲಿ ಯುದ್ಧದ ಸಂಭವವಿದೆಯೆಂದೂ ಚೈನಾದೇಶದ ರಾಯಭಾರಿ ಬಂದಿದಾನೆಂದೂ ಮಂತ್ರಿ ಹೇಳುವನು. ರಾಜನಿಗೆ ಒಂದೂ ಬೇಕಾಗುವುದಿಲ್ಲ. ಕವಿಶೇಖರ ಒಂದು ನಾಟಕವನ್ನು ಬರೆದಿದಾನೆ ಎಂದರೂ ರಾಜನ ಮನಸ್ಸಿಗೆ ಬರುವುದಿಲ್ಲ. ಅವನು, ಪಂಡಿತ ಶ್ರುತಿಭೂಷಣನನ್ನು ಕರಸು, ನಾನು ವೈರಾಗ್ಯವನ್ನು ಕಲಿಯಬೇಕು, ಎನ್ನುತ್ತಾನೆ. ದೇಶದಲ್ಲಿ ಕ್ಷಾಮವೆಂದರೆ ನಮಗೆಲ್ಲ ಕಾಲದ ಕ್ಷಾಮ ಎನ್ನುತ್ತಾನೆ. ಶ್ರುತಿಭೂಷಣ ಬಂದು ದೊಡ್ಡ ದೊಡ್ಡ ಮಾತುಗಳನ್ನು ಹೇಳಿ ಹೆಂಡತಿಗೆ ಒಡವೆಗಳನ್ನೂ ತನಗೆ ಜಹಗೀರನ್ನೂ ಒಂದು ಮನೆಯನ್ನೂ ಬೇಡಿ ತೆಗೆದುಕೊಳ್ಳುತ್ತಾನೆ. ಆ ವೇಳೆಗೆ ಕವಿ ಬರುತ್ತಾನೆ; ಬಿಳಿಕೂದಲು ದೇವರು ಬರೆಯುತ್ತಿರುವ ಚಿತ್ರದ ಒಂದು ಭಾಗವೆಂದು ರಾಜನಿಗೆ ಹೇಳುತ್ತಾನೆ; ವಯಸ್ಸಿನಿಂದ ತೊಂದರೆ ಇಲ್ಲ, ಮನಸ್ಸಿನಲ್ಲಿ ಯೌವನವನ್ನು ಉಳಿಸಿಕೊಳ್ಳಬೇಕು,

ಎನ್ನುತ್ತಾನೆ. ಜೀವ ಜೀವಕ್ಕಾಗಿ ದುಡಿಯುವುದರಿಂದ ಈ ಯೌವನ ನಿಲ್ಲುತ್ತದೆಂದು ತಿಳಿಸುತ್ತಾನೆ. ರಾಜ ಹಿಂದೆ ಹೇಳಿದ ಮಾತನ್ನೆಲ್ಲಾ ಬಿಟ್ಟು ಕವಿ ಬರೆದಿರುವ ಒಂದು ನಾಟಕವನ್ನು ನೋಡುವುದಕ್ಕೆ ಒಪ್ಪುತ್ತಾನೆ. ಇದು ಈ ನಾಟಕದಲ್ಲಿ ಪ್ರಸ್ತಾವನೆ.

ನಾಟಕದಲ್ಲಿ ವಸಂತದ ವೈತಾಳಿಕ ಗಣ ಹಾಡುತ್ತದೆ: ಬೊಂಬಿನ ಮೆಳೆ, ಹಕ್ಕಿ, ಅರಳಿದ ಸಂಪಿಗೆ. ಮಕ್ಕಳು ವಸಂತೋತ್ಸವಕ್ಕಾಗಿ ಬೀದಿಯಲ್ಲಿ ಬಂದು ಸೇರಿದಾರೆ. ಅಣ್ಣಯ್ಯ ಕೂಡ ಬಂದಿದಾನೆ. ಅವನು ನೀತಿಯ ಪದ್ಯಗಳನ್ನು ಬರೆಯುವವನು; ಬರೆದದನ್ನು ಸಿಕ್ಕಿದವರಿಗೆ ಓದಿ ಅರ್ಥ ಹೇಳುವುದು ಅವನ ಕೆಲಸ. ಹುಡುಗರಿಗೆ ಓದಿ ಹೇಳುವೆನೆನ್ನುತ್ತಾನೆ. ಅವರು ಅವನನ್ನು ಗೇಲಿಮಾಡುತ್ತಾರೆ. ಗದ್ದಲವನ್ನು ಕೇಳಿ ಹುಡುಗರ ಮುಂದಾಳು ಬರುತ್ತಾನೆ. ಮಾತಿನಲ್ಲಿ ಆದಿ ವೃದ್ಧನ ಮಾತು ಬರುತ್ತದೆ; ಮುಂದಾಳು, ಅವನಿಲ್ಲವೇ ಇಲ್ಲ, ಇದ್ದರೆ ಹಿಡಿಯೋಣ ಅದೇ ಆಟ, ಎಂದು ಹೇಳುತ್ತಾನೆ. ಅವನು ಸಿಕ್ಕಿದರೆ ನಿನ್ನ ಮುಂದಾಳುತನವನ್ನು ತೆಗೆದುಹಾಕುತ್ತೇವೆ ಎಂದು ಹುಡುಗರು ಹೇಳುತ್ತಾರೆ. ಎಲ್ಲ ಹೊರಡುತ್ತಾರೆ. ಅಷ್ಟರಲ್ಲಿ ಅವರಿಗೆ ಒಬ್ಬ ಅಂಬಿಗ ಸಿಕ್ಕುತ್ತಾನೆ. ಆದಿವೃದ್ಧನೆಲ್ಲಿ ಎಂದು ಅವರು ಅವನನ್ನು ಕೇಳುತ್ತಾರೆ. ಅವನಿಗೆ ತಿಳಿಯದು. ಒಬ್ಬ ತಳವಾರ ಬರುತ್ತಾನೆ; ಇವರು ಅವನನ್ನು ಕೇಳುತ್ತಾರೆ; ಅವನೂ ಕಂಡಿಲ್ಲ. ಅಣ್ಣಯ್ಯ ಮರಳಿ ಬಂದು ಪದ್ಯ ಓದುತ್ತಾನೆ. ಅಷ್ಟರಲ್ಲಿ ಒಬ್ಬ ಎಣ್ಣೆಯ ವ್ಯಾಪಾರಿ ಬಂದು, ಆದಿ ವೃದ್ಧನನ್ನು ನಿನ್ನೆ ರಾತ್ರಿ ನೋಡಿದಂತಿತ್ತು, ಎನ್ನುತ್ತಾನೆ. ಅಷ್ಟು ಹೊತ್ತಿಗೆ ಮುಂದಾಳು ಅಲ್ಲಿರುವುದಿಲ್ಲ. ಹುಡುಗನೊಬ್ಬ, ಆದಿ ವೃದ್ಧ ಅಲ್ಲಿದ್ದಂತಿತ್ತು, ಅವನನ್ನು ಹಿಡಿಯಲಾಗಲಿಲ್ಲ, ಎನ್ನುವನು. ಅಣ್ಣಯ್ಯನನ್ನೂ ಅಂಬಿಗ ಮುಂತಾದವರನ್ನೂ ಬಿಟ್ಟು ಹುಡುಗರು ಆದಿ ವೃದ್ಧನನ್ನು ಹಿಡಿಯಲು ಓಡುವರು. ಅವರಲ್ಲಿ ಒಬ್ಬನಾದ ಚಂದ್ರ ಬಹು ಮುಂದಾಗಿಬಿಡುವನು. ಇತರರು ಓಡಿ ಓಡಿ ಸೋತು ನಿಲ್ಲುವರು. ಸಾಕಾಗಿ ಇವರು ಬೇಸರದಲ್ಲಿರುವಾಗ ಚಂದ್ರ ಮರಳಿ ಬಂದು ನಕ್ಕು ನಗಿಸಿ ಇವರನ್ನು ಚೇತನಗೊಳಿಸುವನು. ಅವನ ಜೊತೆಗೆ ಒಬ್ಬ ದಾಸರಿ ಬರುವನು; ಅವನು ದಾರಿ ತೋರಿಸುವೆನೆನ್ನುವನು. ಎಲ್ಲಾ

ಹೊರಡುವರು. ಚಂದ್ರ ಮರಳಿ ಮುಂದಾಗುವನು. ಅವನು ಆದಿ ವೃದ್ಧನನ್ನು ಗೆದ್ದುಬರಲು ಹೋಗಿದಾನೆಂದು ದಾಸರಿ ಹೇಳುವನು. ಕತ್ತಲೆ ಹೆಚ್ಚುವುದು. ಇವರು ಶಂಕೆಯಲ್ಲಿರುವರು. ಆಗ ಚಂದ್ರ ಹಿಂದಿರುಗಿ ಬರುವನು; ಆದಿವೃದ್ಧ ಒಂದು ಗುಹೆಯಿಂದ ಹೊರಗೆ ಬರುತ್ತಿರುವನೆನ್ನುವನು. ಇವರೆಲ್ಲ ನೋಡುತ್ತಿರುವರು. ಆದಿವೃದ್ಧ ಬರುವನು: ಅವನು ಇವರ ಮುಂದಾಳು. ಇವರಿಗೆ ಆಶ್ಚರ್ಯವಾಗುವುದು. "ನೀನೇಯೋ ಆದಿವೃದ್ಧ." "ಹೌದು." ಆಮೇಲೆ ಎಲ್ಲ ಊರಿಗೆ ಬರುವರು; ಹಬ್ಬದಲ್ಲಿ ಸೇರುವರು; ಅಣ್ಣಯ್ಯನಿಗೆ ಒಂದು ಹಾರವನ್ನು ಹಾಕಿ ಎಲ್ಲರೂ ಹಾಡುವರು.

ಇದೂ ಒಂದು ಸಂಕೇತ ಪದ್ಧತಿಯ ನಾಟಕ. ಆದರೆ ಇದರಲ್ಲಿ ವಿಷಯ ಅಷ್ಟು ಭಾರವಾದದಲ್ಲ; ಅರ್ಥ ಅಷ್ಟು ಹೊರೆಯಾಗಿಲ್ಲ. ಇಲ್ಲಿಯು ರಾಜ ನಾಟಕದಲ್ಲಿ ಪದವಿಗೆ ರಾಜನೇ ಹೊರತು ಮತ್ತೆ ಯಾವ ವಿಧದಲ್ಲೂ ರಾಜನಲ್ಲ. ಅವನು ಆಡುವ ಮಾತೂ ಪಡುವ ಭಯವೂ ಸಾಮಾನ್ಯನ ಮಾತು ಭಯಗಳ ಅತಿರೇಕಗಳು. ಇಲ್ಲಿಯು ಕವಿಗೆ ಬಹಳ ಸಲಿಗೆ. ಇಲ್ಲಿಯು ಪಂಡಿತ ಧನದಾಸೆಯಿಂದ ತುಂಬಿದ ಪಂಡಿತವರ್ಗದ ಒಂದ ತುಂಡು. ಶ್ಲೋಕಗಳನ್ನು ಬರೆಯುವ ಅಣ್ಣಯ್ಯನೂ ಒಂದು ರೀತಿಯ ಕವಿವರ್ಗದ ಮಾದರಿ. ಇಲ್ಲಿ ಕತೆ ಮುಖ್ಯವಲ್ಲ; ಸ್ವಭಾವ ನಿರೂಪಣೆ ಮುಖ್ಯವಲ್ಲ; ಒಂದು ಭಾವವನ್ನು ವಿಲಾಸಯುಕ್ತವಾಗಿ ವ್ಯಕ್ತಪಡಿಸುವುದೇ ಮುಖ್ಯವಾದ ಉದ್ದೇಶ. ಇಲ್ಲಿ ಸ್ವಲ್ಪ ಹಾಸ್ಯ, ಅಲ್ಲಿ ಸ್ವಲ್ಪ ಗೀತ, ಇನ್ನೊಂದು ಕಡೆ ಸ್ವಲ್ಪ ವಿವೇಕ. ಅಲ್ಲಲ್ಲಿ ಅವಿವೇಕದಂತಿರುವ ಮಾತಿನಲ್ಲಿ ಅಡಗಿರುವ ವಿವೇಕ; ಇಲ್ಲಿಂದ ಅಲ್ಲಿಗೂ ಅಲ್ಲಲ್ಲಿ ಚೆನ್ನಾಗಿರುವ ತುಣುಕುಗಳು ಕೈಗೆ ಸಿಕ್ಕುವ ಸಂವಾದ. ಇದು ನಾಟಕಗಳಲ್ಲಿ ರಾಜಮಾರ್ಗದಲ್ಲಿ ಕಟ್ಟಿದ ಸೌಧವಲ್ಲ; ಸಣ್ಣ ಬೀದಿಯಲ್ಲಿ ಕಟ್ಟಿರುವ ಗೊಂಬೆಯ ಮನೆ. ಇದರ ಮುಖ್ಯಭಾವ, ಕವಿ ರಾಜನಿಗೆ ಹೇಳುವಂತೆ, ಮುದಿತನ ಬಂದಿತು ಸಾವು ಬರುವುದು ಎಂದು ಭಯಪಡಬೇಕಾದದಿಲ್ಲ, ಇತರರ ಕಷ್ಟಸುಖದಲ್ಲಿ ಆಗುವುದೇ ಬದುಕುವ ರೀತಿ, ಎನ್ನುವುದು. ಅಲ್ಲಲ್ಲಿ ಲೇಖಕರ ಚಮತ್ಕಾರವಾದ ಮಾತುಗಳು ಬರುತ್ತವೆ. ಗೀತಗಳು ಚೆನ್ನಾಗಿವೆ. ಹುಡುಗರು

ಯಾವುದಕ್ಕೆ ಹೆದರಿ ಓಡಿಯಾಡುತ್ತಿದ್ದರೋ ಅದು ಇನ್ನು ಯಾರೂ ಅಲ್ಲ ಇವರ ಪ್ರಿಯನಾದ ಮುಂದಾಳು ಎನ್ನುವುದರಲ್ಲಿ, ನಾವು ಭಯಪಡುವ ವೃದ್ಧಾಪ್ಯ ಸಾವು ಎನ್ನುವುದು ನಮ್ಮ ಇಷ್ಟವಸ್ತು ಮುಖಮುರಿಸಿಕೊಂಡಿರುವ ರೀತಿ, ಎನ್ನುವ ಗೂಢವಾದ ಅರ್ಥಹೊಳೆದು ಸುಂದರವಾಗಿದೆ.

**೫೧. ಮುಕ್ತಧಾರಾ**

ಉತ್ತರ ಕೂಟದ ಅರಸು ರಣಜಿತ್ ತನ್ನ ಉತ್ತರಾಧಿಕಾರಿಯಾಗಿ ಅಭಿಜಿತ್ ಎಂಬ ಹುಡುಗನನ್ನು ಸಾಕಿಕೊಂಡಿದಾನೆ. ಅಭಿಜಿತ್ ದೊರೆಗೆ ಸಿಕ್ಕಿದ ಕೂಸು. ಅವನ ತಂದೆ ತಾಯಿ ಯಾರೆಂದು ತಿಳಿಯದು. ಶಿವತರಾಯಿ ಎಂಬ ಪ್ರಾಂತ ಉತ್ತರಕೂಟಕ್ಕೆ ಅಧೀನ ರಾಷ್ಟ್ರವಾಗಿದೆ. ಅದರ ಜನ ಬಡವರು. ಉತ್ತರಕೂಟದಿಂದ ಹರಿದು ಬರುವ ನೀರಿಂದ ಸಾಗುವಳಿ ಮಾಡಿಯೇ ಇವರು ಬದುಕಬೇಕು. ಆ ನೀರು ಹೊರತು ಇವರಿಗೆ ಕುಡಿಯುವ ನೀರೂ ಇಲ್ಲ. ಶಿವತರಾಯಿಯ ಜನ ಇದುವರೆಗೆ ಉತ್ತರಕೂಟಕ್ಕೆ ವಿಧೇಯವಾಗಿ ನಡೆದುಕೊಂಡು ಬಂದಿದಾರೆ. ಆದರೆ ಅಲ್ಲಿ ಈಚೆಗೆ ಅತೃಪ್ತಿ ತಲೆಯೆತ್ತಿದೆ. ಇದಕ್ಕೆ ಸ್ವಲ್ಪ ಮಟ್ಟಿಗೆ ಕಾರಣ ಧನಂಜಯ ಎಂಬ ಬೈರಾಗಿ ಮಾಡಿರುವ ಉಪದೇಶ. ಬೆಳೆ ಕೆಟ್ಟರೆ ನಾವು ತೆರಿಗೆ ಕೊಡುವುದಿಲ್ಲ ಎಂದು ಈ ಜನ ಒಂದೆರಡು ಸಲ ಮುಷ್ಕರಮಾಡಿದ್ದಾರೆ. ನೆರೆಯ ರಾಷ್ಟ್ರ ಒಂದರೊಡನೆ ವ್ಯಾಪಾರ ಮಾಡಬಹುದಾದರೆ ಇವರಿಗೆ ವರಮಾನ ಬರಬಹುದು; ಇವರು ತೆರಿಗೆ ಕೊಡಬಹುದು. ಆದರೆ ಅದಕ್ಕೆ ಅವಕಾಶವಿಲ್ಲದಂತೆ ಉತ್ತರಕೂಟ ಶಿವತರಾಯಿಗೂ ನೆರೆಯ ರಾಷ್ಟ್ರಕ್ಕೂ ಮಧ್ಯೆ ಒಂದು ಗೋಡೆಯನ್ನು ಹಾಕಿದೆ. ಹೀಗಾಗಿ ಉತ್ತರಕೂಟಕ್ಕೆ ಶಿವತರಾಯಿಯಿಂದ ಕಪ್ಪ ಮುಟ್ಟುವುದಕ್ಕೆ ಉಳಿದಿರುವುದು ಒಂದೇ ದಾರಿ: ಬಲಾತ್ಕಾರ. ಈ ಉದ್ದೇಶದಿಂದ ಉತ್ತರಕೂಟ ತನ್ನ ನದಿಯ ನೀರು ಶಿವತರಾಯಿಗೆ ಹರಿಯದಂತೆ ಒಂದು ಅಣೆಯನ್ನು ಕಟ್ಟಲು ಏರ್ಪಾಡುಮಾಡಿದೆ. ಈ ಯತ್ನ ಒಂದೆರಡು ಸಲ ನಿಷ್ಫಲವಾಯಿತು. ಆದರೆ ಈಗ ವಿಭೂತಿ ಎಂಬ ಯಂತ್ರ ವಿಜ್ಞಾನಿ ಒಂದು ಯಂತ್ರವನ್ನು ಸ್ಥಾಪಿಸಿ ನೀರನ್ನು ನಿಲ್ಲಿಸಿಬಿಟ್ಟಿದಾನೆ.

ಈ ಯಂತ್ರವನ್ನು ಸ್ಥಾಪಿಸಿದ ಸಂದರ್ಭ ನಾಟಕದ ಮೊದಲು. ಯಂತ್ರದ ಹತ್ತಿರದಲ್ಲಿಯೇ ಭೈರವನ ಮಂದಿರ. ಉತ್ತರಕೂಟದ ಜನ ತಮ್ಮ ಯತ್ನ ಸಫಲವಾದ ಬಗ್ಗೆ ದೇವರನ್ನು ವಂದಿಸಲು ಮಂದಿರಕ್ಕೆ ಬರುತ್ತಿದಾರೆ. ಅಭಿಜಿತ್ ಶಿವತರಾಯಿಗೆ ಹೋಗಿ ಅದರ ಕಷ್ಟಕ್ಕೆ ಮನ ಮರುಗಿ ಅದಕ್ಕೆ ಸಹಾಯಮಾಡಬೇಕೆಂದು ನಿಶ್ಚಯಿಸಿಕೊಂಡು ಹಿಂದಿರುಗಿದಾನೆ. ಈ ಹೊತ್ತಿಗೆ ಇವನಿಗೆ, ತಾನು ರಾಜನ ಮಗನಲ್ಲ, ಪರದೇಶಿ ತಬ್ಬಲಿ ಒಬ್ಬ, ಎಂದು ತಿಳಿದಿದೆ. ಮಗುವಾಗಿ ಹೊಳೆಯ ಪಕ್ಕದಲ್ಲಿ ಸಿಕ್ಕಿದ ಕಾರಣದಿಂದ ತನಗೂ ಈ ಹೊಳೆಗೂ ಒಂದು ರಹಸ್ಯ ಸಂಬಂಧವಿದೆ, ತಾನು ತನ್ನ ಜೀವನವನ್ನು, ಜೊತೆಗೆ ಈ ಹೊಳೆಯನ್ನು, ಇವನ್ನು ತಡೆದಿರುವ ಬಂಧನಗಳಿಂದ ಬಿಡಿಸಬೇಕು, ಎಂದು ಊಹಿಸಿಕೊಂಡಿದಾನೆ. ಶಿವತರಾಯಿ ಜನ ಕೆಲವರು ಧನಂಜಯನನ್ನು ಮುಂದಿಟ್ಟುಕೊಂಡು ಉತ್ತರಕೂಟಕ್ಕೆ ಬಂದಿದಾರೆ. ಹೊಸ ಯಂತ್ರ ಪ್ರವಾಹವನ್ನು ತಡೆದುದಾಗಿದೆ ಎಂಬುದನ್ನು ಅವರು ಕಾಣರು. ಇದು ತಿಳಿದಾಗ ಅವರು ಹೀಗೆ ಹಾಗೆ ಮಾಡುತ್ತೇವೆಂದು ಕುಣಿಯುತ್ತಾರೆ. ಧನಂಜಯನ ಹೆಸರು ಹೇಳುವರಾದರೂ ಇವರು ಅವನ ನೀತಿಯನ್ನು ಸ್ವೀಕರಿಸಿಲ್ಲ. ಇತ್ತ ಉತ್ತರಕೂಟದ ಜನರಿಗೆ ಅಭಿಜಿತ್ ಶಿವತರಾಯಿಪಕ್ಷಪಾತಿ ಎಂದು ಅಸಮಾಧಾನ. ಅವನು ಒಂದು ಗುಡಾರದಲ್ಲಿ ಬಂದಿಯಾಗಿದಾನೆ. ಸಂಜಯ ಎಂಬ ಮಿತ್ರ ಅವನ ಜೊತೆಗಿರಲು ಬಯಸುತ್ತಾನೆ. ಅದು ಸಾಧ್ಯವಾಗುವುದಿಲ್ಲ. ಗಲಭೆಯಲ್ಲಿ ಗುಡಾರಕ್ಕೆ ಬೆಂಕಿ ಹೊತ್ತುತ್ತದೆ. ಅಭಿಜಿತ್ ಅದರಿಂದ ಹೊರಗೆ ಬಂದು ಎತ್ತಲೋ ಹೋಗುತ್ತಾನೆ. ಅವನ ಜನ ಅವನನ್ನು ಅರಸುತ್ತಾರೆ; ಅವನು ಸಿಕ್ಕುವುದಿಲ್ಲ. ಅವನನ್ನು ಹಿಂಬಾಲಿಸಿದ್ದ ಸಂಜಯ ಆದ ಸಂಗತಿಯನ್ನು ತಿಳಿಸುತ್ತಾನೆ. ಹೊಸ ಯಂತ್ರದಲ್ಲಿ ಒಂದು ದೋಷವಿತ್ತು; ಅದನ್ನು ಅಭಿಜಿತ್ ಬಲ್ಲನು; ಅವನು ಹೋಗಿ ಆ ದುರ್ಬಲ ಸ್ಥಾನದಲ್ಲಿ ಯಂತ್ರವನ್ನು ಭೇದಿಸಿ ಅಣೆಯನ್ನು ನಾಶಮಾಡಿದ್ದನು; ತಡೆ ಹರಿದು ಮೇಲೆ ಹಾಯ್ದ ಹೊನಲಲ್ಲಿ ಸಿಕ್ಕಿ ಕೊಚ್ಚಿಹೋಗಿದ್ದನು; ಅವನು ದುಃಖಿಸಲಿಲ್ಲ; ತಾಯ ತೆಕ್ಕೆಗೆ ಸಿಕ್ಕಿದ ಮಗುವಿನಂತೆ ಸುಖಿಯಾಗಿ ಮುಗಿದನು. ನಾಟಕದ ಸಂಗತಿ

ನಡೆಯುತ್ತಿರುವಲ್ಲಿ, ಅಲ್ಲೇ ಹತ್ತಿರ ಒಬ್ಬ ಹೆಂಗಸು, ನಾಟಕದ ಮೊದಲಲ್ಲಿ ಮಧ್ಯದಲ್ಲಿ ಕೊನೆಯಲ್ಲಿ, 'ನನ್ನ ಮಗ ಎಲ್ಲಿ?' ಎಂದು ಕೇಳುತ್ತ ಸುಳಿಯುತ್ತಾಳೆ. ಅವಳು ಅಭಿಜಿತ್ ಕುಮಾರನ ತಾಯಿ ಇರಬೇಕು. ಇವಳೊಬ್ಬ ಹುಚ್ಚಿ ಎಂದು ತಿಳಿದು ಯಾರೋ ಇವಳಿಗೆ 'ನಿನ್ನ ಮಗ ಸುಖವಾಗಿದಾನೆ' ಎಂದು ಸಮಾಧಾನ ಹೇಳುವರು. ಅವಳು ತೃಪ್ತಳಾಗುವಳು.

ಠಾಕೂರರು ಈ ನಾಟಕಕ್ಕೆ ಮುನ್ನುಡಿಯಾಗಿ ನಾಲ್ಕು ಮಾತು ಬರೆದು, ನಾಟಕದ ಹೆಸರಿನಿಂದಲೂ ಅದರಲ್ಲಿ ಬಂದಿರುವ ಯಂತ್ರದ ಮಾತಿನಿಂದಲೂ ಓದುವರು ಅದನ್ನು ಒಂದು ಸಂಕೇತ ನಾಟಕ ಎಂದು ಎಣಿಸುವುದೇ ನಿಶ್ಚಯ, ಇದು ತಪ್ಪಲ್ಲ, ಆದರೂ ನಾಟಕದ ಮುಖ್ಯ ಸಂಗತಿಯನ್ನು ಮನಸ್ಸಿನ ಸ್ಪಷ್ಟವಾದ ಸತ್ಯವಾದ ಒಂದು ಪರಿಸ್ಥಿತಿ ಎಂದು ತಿಳಿಯುವುದು ಸರಿ, ಎಂದು ವಿವರಿಸಿದರು. ಅಭಿಜಿತ್ ಕುಮಾರನ ಮನಸ್ಸಿನ ಒಂದು ಗ್ರಹಿಕೆ ಕಥೆಯ ಮೂಲ: ಹೊಳೆಯೂ ತಾನೂ ಒಂದು; ಹೊಳೆಯನ್ನು ಅಣೆ ತಡೆದಿತ್ತು. ತನ್ನನ್ನು ಅರಮನೆ ತಡೆದಿತ್ತು. ಎರಡಕ್ಕೂ ಬಿಡುಗಡೆಬೇಕು; ಎರಡನ್ನೂ ಅವನು ಬಿಡಿಸಿದನು.

ಕವಿವರರ ಈ ಮಾತು ಸರಿಯೆ, ಅಡ್ಡಿ ಇಲ್ಲ. ಆದರೂ ನಾಟಕದ ಗರ್ಭದಲ್ಲಿ ರಾಜಕೀಯ ಭಾವ ಕೆಲವು ಅಡಕವಾಗಿರುವುದೂ ನಿಜ. ಉತ್ತರಕೂಟ ಇಂಗ್ಲೆಂಡಾಗಿ ಶಿವತರಾಯಿ ಇಂಡಿಯಾ ಆಗಿ ನೆರೆಯ ರಾಷ್ಟ್ರದೊಂದಿಗೆ ವ್ಯಾಪಾರ ಮಾಡದಂತೆ ತಡೆದ ಗೋಡೆ ತೆರಿಗೆ ಸುಂಕಗಳ ಭಿತ್ತಿ ಎಂದೆಣಿಸಿದರೆ ಇಲ್ಲಿ ಒಪ್ಪುತ್ತದೆ. ಉತ್ತರಕೂಟ ತಡೆದ ಹೊಳೆ ಭರತವರ್ಷದ ಮುಂಬರಿವು; ಆಳುವ ಜನ ಅದನ್ನು ಅನೇಕ ತಂತ್ರಗಳಿಂದ ತಡೆದಿದಾರೆ. ಧನಂಜಯ ಬೈರಾಗಿ ಮಹಾತ್ಮಾ ಗಾಂಧಿ ಎಂದರೆ ಒಪ್ಪುವುದು. ಉತ್ತರಕೂಟದಲ್ಲಿ ಒಬ್ಬ ಉಪಾಧ್ಯಾಯನುಂಟು; ಅವನು ತನ್ನ ತರುಣ ಶಿಷ್ಯರಿಗೆ ಶಿವತರಾಯಿ ಜನರು ದುಷ್ಟರೆಂದೂ ಅವರು ಅನುಸರಿಸುವುದು ಒಂದು ಹೊಲಸು ಮತವೆಂದೂ ಅವರನ್ನು ತುಳಿದಿಟ್ಟಿರಬೇಕೆಂದೂ ಪಾಠ ಹೇಳುತ್ತಾನೆ. ಇದು ಇಂಗ್ಲೆಂಡಿನ ಉಪಾಧ್ಯಾಯರ, ಇಂಗ್ಲೆಂಡಿನ ಮಕ್ಕಳು ಓದುವ ಪುಸ್ತಕಗಳ, ಒಂದು ವರ್ಣನೆ ಆಗಬಹುದು. ಆದರೂ ಜೊತೆಗೆ ಈ ವಿಷಯವನ್ನೂ ನಾವು ನೆನೆಯಬೇಕು. ಸ್ವಾರ್ಥವೆನ್ನುವುದೂ

ಒಬ್ಬರ ಸ್ವಾರ್ಥದಿಂದ ಮತ್ತೊಬ್ಬರು ಅನುಭವಿಸುವ ಯಾತನೆ ಎನ್ನು ವುದೂ, ಬಿಡಿಸಿಕೊಳ್ಳುವ ಪ್ರಯತ್ನವೂ ತಡೆಯುವ ದುರ್ಬುದ್ಧಿಯೂ, ಕೆಟ್ಟುದನ್ನು ಒಳ್ಳೆಯತನದಿಂದ ಗೆಲ್ಲುವೆನೆಂಬ ಆತ್ಮ ವಿಶ್ವಾಸ, ತಪ್ಪಿದ ಜನ ರಲ್ಲಿಯೇ ಅವರಿಗೆ ಶಿಕ್ಷೆಯನ್ನು ತರುವ ಪ್ರಹ್ಲಾದ ಜೀವವೊಂದು ಹುಟ್ಟಿ ಕೊಳ್ಳುವುದು, ಇದೆಲ್ಲ ನಿತ್ಯದ ಮಾತು. ಇಂಗ್ಲೆಂಡ್ ಇಂಡಿಯಾಗಳ ಇಂದಿನ ಸ್ಥಿತಿಯನ್ನು ಕುರಿತದ್ದು ಮಾತ್ರ ಅಲ್ಲ.

ನಾಟಕದ ಕಥೆ ಮನಸ್ಸನ್ನು ಹಿಡಿದಿಟ್ಟು ಅದರ ಉದ್ದೇಶ್ಯ ತಕ್ಕಷ್ಟು ಸ್ಪಷ್ಟವಾಗುವುದಾದರೂ ಈ ನಾಟಕ ಒಂದು ನಾಟಕವೆಂಬ ದೃಷ್ಟಿಯಿಂದ ತಕ್ಕಷ್ಟು ಚೆನ್ನಾಗಿಲ್ಲ. ತೆಳುವಾದ ಒಂದು ಭಾವನೆ ಮಧ್ಯೆ ಹರಿದು ಅದರ ವಿವರಣಕ್ಕೆಂದು ಎಷ್ಟು ಆವಶ್ಯಕವೊ ಅಷ್ಟು ಮಾತ್ರ ಕೆಲವು ಪಾತ್ರಗಳು ಒಂದು ಆಕಾರವನ್ನು ಪಡೆಯುತ್ತವೆ. ನಾಟಕದ ಇತರ ಪಾತ್ರಗಳು ಬರಿಯ ಹೆಸರುಗಳು ಅಥವಾ ಮೊದಲನೆಯವನು, ಎರಡನೆಯವನು, ಮೂರನೆಯವನು ಎಂದು ಸಂಖ್ಯೆಯ ಮೂರ್ತಿಗಳು. ಎಲ್ಲರಿಗಿಂತಲೂ ಚೆನ್ನಾಗಿ ರೂಪುಗೊಳ್ಳುವನು ಉತ್ತರಕೂಟದ ಉಪಾಧ್ಯಾಯ. ಅಂದಿನ ನಮ್ಮ ರಾಜಕೀಯ ಪರಿಸ್ಥಿತಿ ಠಾಕೂರರ ಮನಸ್ಸಿನಲ್ಲಿ ಉತ್ಕಂಠೆಯನ್ನು ಉಂಟುಮಾಡಿತ್ತೆಂದು ಕಾಣುತ್ತದೆ. ಅದರಿಂದ ಬಿಡಿಸಿಕೊಳ್ಳುವುದಕ್ಕಾಗಿ ಅವರು ಈ ನಾಟಕವನ್ನು ಬರೆದಿರಬೇಕು. ಕಾರಣ ಅಂದಿನದಾದರೂ ಅವರು ವ್ಯಕ್ತಪಡಿಸಿದ ತತ್ವ ನಿತ್ಯದ್ದು. ಈ ದೃಷ್ಟಿಯಿಂದ ನಾಟಕ ಗ್ರಾಹ್ಯವಾಗಿದೆ.

### ೫೨. ರಥಯಾತ್ರಾ

ರಥಯಾತ್ರಾ ಒಂದು ಸಣ್ಣ ದೃಶ್ಯ. ಕಾಲದೈವದ ತೇರ ಹಬ್ಬ ಬಂದಿದೆ; ಆದರೆ ತೇರು ಏನುಮಾಡಿದರೂ ಅಲುಗದೆ ನಿಂತಿದೆ. ಯಾರೂ ನೋಡುವ ಮುನ್ನ ಪುರೋಹಿತ ಮಂದಿ ಅದನ್ನು ಜಗ್ಗಿ ನೋಡಿದರು; ಅದು ಕದಲಲಿಲ್ಲ. ಆಮೇಲೆ ಅವರು ಅದರಮೇಲೆ ಕುಳಿತು ಮಂತ್ರ ಗಳನ್ನು ನುಡಿದರು; ಅದರಿಂದಲೂ ಏನೂ ಆಗಲಿಲ್ಲ. ಒಂದು ಕಾಲಕ್ಕೆ ಅವರದನ್ನು ಕದಲಿಸುತ್ತಿದ್ದರು; ಇಂದು ಆವರ ಶಕ್ತಿ ಇಂಗಿತ್ತು.

ಯೋಧರೂ ಕೈ ಹಾಕಿ ನೋಡಿದರು; ರಥ ಸಾಗಲಿಲ್ಲ. ಅಮಾತ್ಯನು ಧನಿಕನಿಗೆ ಹೇಳಿಕಳುಹಿಸಿದನು. ಮಧ್ಯೆ ಕೆಲಸಗಾರರು ತಾವು ತೇರನ್ನೆಳೆಯುತ್ತೇವೆಂದು ಹೇಳುತ್ತಿದ್ದಾರೆ ಎಂದು ಸುದ್ದಿ ಬಂದಿದೆ. ಧನಿಕ ಗೆದ್ದರೆ ಯೋಧರಿಗೆ ಸಮ್ಮತವೇ: ಅವನು ಎಲ್ಲೂ ಗೆಲ್ಲುವುದು ನಿಜ. ಆದರೆ ಈ ಕೂಲಿಯ ಜನ ತೇರು ಎಳೆದದ್ದಾದರೆ ತಮಗೆ ಬಹು ಅವಮಾನ ಎಂದು ಯೋಧರ ತಿಳುವಳಿಕೆ. ಧನಪತಿಯೂ ಅವನ ಜನವೂ ತೇರೆಳೆಯಲು ಯತ್ನ ಮಾಡುತ್ತಾರೆ; ಅವರಿಂದಾಗುವುದಿಲ್ಲ. ಅದು ಧನಪತಿಗೆ ಸಂತೋಷವೇ; ಇತರರ ಹೊಟ್ಟೆಯುರಿಯಿಂದ ತಪ್ಪಿಸಿಕೊಂಡಂತಾಯಿತು. ಶೂದ್ರರು ತೇರೆಡೆಗೆ ಬರುತ್ತಿದ್ದಾರೆಂದು ತಿಳಿಯುಬರುತ್ತದೆ. ಬ್ರಾಹ್ಮಣ ಕ್ಷತ್ರಿಯರು ಅವರಿಂದ ತೇರನ್ನು ಮುಟ್ಟಗೊಡಿಸದೆ ತಡೆಯುತ್ತೇವೆನ್ನುತ್ತಾರೆ; ಆ ಗುಂಪನ್ನು ತಡೆಯುವುದು ಅಸಾಧ್ಯವೆಂದು ಕೇಳಿ ಆ ಯೋಚನೆಯನ್ನು ಬಿಡುತ್ತಾರೆ. ಶೂದ್ರರು ಬರುತ್ತಾರೆ. ಅವರು ತೇರನ್ನೆಳೆಯಬಹುದೆಂದು ಮಂತ್ರಿ ಅಪ್ಪಣೆಕೊಡುತ್ತಾನೆ; ಆದರೆ ಸರಿಯಾದ ದಾರಿಯಲ್ಲಿ ಎಳೆಯಲಿ ಎನ್ನುತ್ತಾನೆ. ಅವರ ಮುಖಂಡ "ನಾವು ಬರಿಯ ತೇಜಿಗಳು, ಸರಿಯಾದ ದಾರಿ ತಪ್ಪು ದಾರಿ ನಮಗೇನು ಗೊತ್ತು?" ಎನ್ನುತ್ತಾನೆ. ಅವನ ಅನುಯಾಯಿಗಳು ತೇರನ್ನು ಎಳೆಯುತ್ತಾರೆ; ಅದು ನಡೆಯುತ್ತದೆ. ತೇರನ್ನು ಮೈಲಿಗೆ ಮಾಡಿದ್ದಕ್ಕೆ ಯೋಧರು ಅವನನ್ನು ಶಿಕ್ಷಿಸುವೆವೆನ್ನುತ್ತಾರೆ. ಪುರೋಹಿತ "ರಥದ ದೈವ ಆಗಲಿ ಎಂದಮೇಲೆ ನಾವು ಹೇಗೆ ಬೇಡ ಎನ್ನುವುದು?" ಎನ್ನುತ್ತಾನೆ. ಮಂತ್ರಿ ಪರಿಸ್ಥಿತಿಯನ್ನು ಒಪ್ಪಿಕೊಂಡು ಕೆಲಸಗಾರರ ಗುಂಪಿನಲ್ಲಿ ಬೆರೆಯುತ್ತಾನೆ. ತೇರು ಹೋಗುವ ಧಾಟಿಯನ್ನು ನೋಡಿದರೆ ಅದು ಧನಪತಿಯ ಮನೆಯನ್ನು ನೆಲಸಮಮಾಡಲು ಹೊರಟಂತೆ ಕಾಣುತ್ತದೆ. ಧನಪತಿಯ ಸೇವಕರು ಅದನ್ನು ಉಳಿಸಿ ಎಂದು ಕೂಗಿಕೊಳ್ಳುತ್ತಾರೆ. ಯೋಧರು 'ಏನು ಮಾಡೋಣ' ಎನ್ನುತ್ತಾರೆ. 'ಮಂತ್ರಿ ಗುಂಪಿನೊಂದಿಗೆ ಸೇರಿ ತೇರು ಹರಿಯುವ ದಿಕ್ಕನ್ನು ತಿದ್ದಿ' ಎನ್ನುತ್ತಾನೆ. ಮತ್ತೆ ನೋಡಲು ತೇರು ಯೋಧರ ಆಯುಧ ಶಾಲೆಯಮೇಲೆ ನುಗ್ಗುವಂತೆ ಕಾಣುತ್ತದೆ. ಒಬ್ಬ ಯೋಧನಿಗೆ ತೋಚುತ್ತದೆ: ಶೂದ್ರರು ತೇರನ್ನೆಳೆಯುತ್ತಿಲ್ಲ, ತೇರು ಶೂದ್ರರನ್ನು

ಮುಂದಿಟ್ಟುಕೊಂಡು ತನ್ನ ಇಷ್ಟದ ದಾರಿಯಲ್ಲಿ ಅವರನ್ನು ನೂಕುತ್ತದೆ ಎಂದು. ಅಷ್ಟರಲ್ಲಿ ಅಲ್ಲಿಗೆ ಕವಿ ಬರುತ್ತಾನೆ. ಯೋಧನೊಬ್ಬನು ಅವನನ್ನು ಇದೇನು ಸಂಗತಿ ಎಂದು ಕೇಳಲು ಬಯಸುತ್ತಾನೆ. ಪುರೋಹಿತ, ನಮಗೆ ತಿಳಿಯದ್ದು ಅವನಿಗೆ ತಿಳಿಯುತ್ತದೆಯೇ, ಎನ್ನುತ್ತಾನೆ. ಯೋಧ "ತಿಳಿಯುತ್ತದೆ. ನಿಮ್ಮ ಆಧಾರ ಶಾಸ್ತ್ರ; ಅದರಲ್ಲಿ ಜೀವ ಇಲ್ಲ. ಕವಿಯ ನುಡಿ ಜೀವಂತ; ಸತ್ಯ ಅದನ್ನು ಬಳಸುತ್ತದೆ" ಎನ್ನುತ್ತಾನೆ. ಯೋಧನು ಪ್ರಶ್ನಿಸಲು ಕವಿ ಹೇಳುತ್ತಾನೆ. "ಪುರೋಹಿತರೂ ಯೋಧರೂ ಒಂದು ಸಂಗತಿ ಮರೆಯುತ್ತೀರಿ. ತೇರನ್ನು ಮಾತ್ರ ನಂಬಿದರೆ ಸಾಲದು. ಅದರ ದಿಕ್ಕನ್ನು ತಿದ್ದುವುದು ಕಟ್ಟು ಹಗ್ಗ; ಅದಕ್ಕೂ ಗಮನಕೊಡಬೇಕು." "ಶೂದ್ರರು ಈ ಸಂಗತಿಯನ್ನು ಬಲ್ಲರೇನು?" "ಅವರೂ ನಿಮ್ಮಂತೆಯೇ ಮರೆಯುತ್ತಾರೆ. ಬೇಗನೆಯೇ ಮರೆಯುತ್ತಾರೆ. ಜೈ ಗುದ್ದಲಿ, ಜೈ ನೇಗಿಲು, ಜೈ ಚರಕ, ಜೈ ಮಗ್ಗ, ಎಂದು ಕೂಗುತ್ತಾರೆ." ಪುರೋಹಿತ ಕೊಂಕು ನುಡಿಯುತ್ತಾನೆ: "ಹೀಗಾಗಿ ತೇರು ಮತ್ತೆ ನಿಂತರೆ ಆಗ ಅದನ್ನು ಎಳೆಯುವುದಕ್ಕೆ ನೀನು ಬರುತ್ತೀಯೋ?" ಕವಿ ಉತ್ತರ ಕೊಡುತ್ತಾನೆ: "ನಿನ್ನ ಹಾಸ್ಯದ ಮಾತು ಹಾಸ್ಯವಲ್ಲ ದಿಟ. ಹಿಂದೆ ನಾವು ಈ ತೇರನ್ನು ಎಳೆದುದುಂಟು." "ಹಾಗಾದರೆ ಈಗ ನೀನೇನು ಮಾಡುತ್ತೀಯೆ?" "ಶಕ್ತಿ ನೀಡುವ, ಆಶೆಯನ್ನು ಮೂಡಿಸುವ, ಗೀತವೊಂದನ್ನು ಹಾಡುತ್ತೇನೆ; ಅದು ತೇರಳೆಯುವವರ ಹೆಜ್ಜೆಯನ್ನು ತಿದ್ದುತ್ತದೆ." "ಉಳಿದ ನಾವೇನು ಮಾಡಬೇಕು?" "ಎಚ್ಚರಿಕೆಯಿಂದಿರಿ. ಯೋಚನೆಮಾಡುತ್ತಿರಿ. ಕರೆ ಬರುವ ವೇಳೆಗೆ ಸಿದ್ಧರಾಗಿರಲು ಯತ್ನದಲ್ಲಿ ತೊಡಗಿರಿ."

ನಾಟಕ ಇಂಗ್ಲೆಂಡಿನಲ್ಲಿ ದುಡಿಮೆಗಾರರ ಪಕ್ಷ ರಾಜ್ಯಸೂತ್ರವನ್ನು ವಹಿಸಿಕೊಳ್ಳುವ ಸಮಯದಲ್ಲಿ ಪ್ರಕಟವಾಯಿತು. ದುಡಿಮೆಗಾರರು ಆಡಳಿತಗಾರರಾದದ್ದು ಇಂಗ್ಲೆಂಡಿನಲ್ಲಿ ಅದೇ ಮೊದಲು. Labour cannot govern ಎನ್ನುವುದು ಸ್ವಾಭಿಮಾನಿ ವಿದ್ಯಾವಂತ ಧನಿಕ ಪಂಗಡವಾದ ಕನ್‌ಸರ್‌ವೆಟಿವ್ ಪಕ್ಷದ ನಂಬಿಕೆಯ ಸೂತ್ರ. ಇತರ ಪಕ್ಷಗಳೂ ಹೆಚ್ಚು ಕಡಮೆ ಹೀಗೆಯೇ ತಿಳಿದಿದ್ದುವು. ನಾಟಕದಲ್ಲಿ 'ಲೇಬರ್'

ಪಕ್ಷ ರಾಜ್ಯವನ್ನು ವಹಿಸಿಕೊಂಡ ಸಂದರ್ಭದ ಚರ್ಚೆ ಇರುವುದು ಸ್ಪಷ್ಟವಾಗಿದೆ. ಜೊತೆಗೆ, ಈ ಪಕ್ಷವೂ ಗುರಿಯನ್ನು ಮರೆಯುತ್ತದೆ, ಮತ್ತೆ ರಾಷ್ಟ್ರ ಬೇರೆ ತಿಳುವಳಿಕೆಯಿಂದ ನಡೆಯಬೇಕಾಗುತ್ತದೆ, ಎಂಬ ಸೂಚನೆಯೂ ಇದೆ. ಯಾವ ಪಕ್ಷವಾದರೂ ಜೀವಂತವಾದ ಸತ್ಯದೊಂದಿಗೆ ಸಂಬಂಧ ಬೆಳೆಸಿಕೊಂಡರೆ ಮಾತ್ರ ರಾಜ್ಯವನ್ನು ನಡೆಸಬಹುದು. ಸತ್ಯವನ್ನು ಬಿಟ್ಟು, ಓಂ ಹ್ರೀಂ ಎಂದರೂ ಫಲವಿಲ್ಲ, ಜೈ ಚರಕ ಎಂದರೂ ಪ್ರಯೋಜನವಿಲ್ಲ. ಇದು ಸರಿಯಾದ ಮಾತೇ. ಈ ಸಂದರ್ಭದ ಕವಿ, ಬರಿಯ ಶಾಸ್ತ್ರದಮೇಲೆ ಗುಂಪಿನ ಕೂಗಿನಮೇಲೆ ಭಾರ ಹಾಕದೆ ಜೀವನದ ಕೊರೆಯೇನೆಂದು ತಿಳಿದು ಅದನ್ನು ತುಂಬುವ ಶಕ್ತಿ. ಇಲ್ಲಿ ಮಾತನಾಡುವ ಕವಿ ನಾಟಕ ಬರೆಯುವ ಕವಿ ಎಂದು ಗ್ರಹಿಸಿದರೆ ರಸ ಕೆಡುತ್ತದೆ.

ಜೈ ಇದು, ಜೈ ಅದು, ಎಂದು ಜೈ ಯಾವುದನ್ನೇ ಆಗಲಿ ಒಂದು ಗುಂಪಿನ ಬರಿಯ ಕೂಗುಮಾಡಿ ಅರ್ಥ ತಿಳಿದ ಹತ್ತು ಜನದೊಂದಿಗೆ ಅರ್ಥ ತಿಳಿಯದ ಲಕ್ಷ ಜನ ಅದನ್ನು ಮೊರೆದರೆ ಲೋಕ ನಡೆಯುವುದಿಲ್ಲ ಎಂಬಲ್ಲಿ ಚರಕ ಮಗ್ಗಗಳ ಮಾತನ್ನೂ ತಂದಿರುವುದರಿಂದ ಠಾಕೂರರ ಮನಸ್ಸಿನಲ್ಲಿ ನಮ್ಮ ದೇಶದ ರಾಜಕೀಯ ಚಳುವಳಿಯ ವಿಷಯವೂ ಇದ್ದಿತೆಂದು ಕಾಣುತ್ತದೆ. ಆತ್ಮವನ್ನೂ ನೀತಿಯನ್ನೂ ಜನಜೀವನದ ರಚನೆಯನ್ನೂ ಕುರಿತ ಮಹಾತ್ಮಾ ಗಾಂಧಿಯವರ ಉಳಿದ ಮಾತಿಗೆ ಮನಕೊಡದೆ ಬರಿಯ ನೂಲುವೆ ನೆಯ್ಗೆಯಿಂದ ಸ್ವಾತಂತ್ರ್ಯವನ್ನು ಗಳಿಸುವೆವೆಂದು ಹೊರಟ ರಾಜಕೀಯ ಮಂದಿಯ ನಡತೆ ರವೀಂದ್ರರಿಗೆ ಸರಿಹೋಗಲಿಲ್ಲ.

ಈ ಸಣ್ಣ ದೃಶ್ಯ ಅಂದಿನ ಒಂದು ಸಂಗತಿಯನ್ನು ಬಿಂಬಿಸುವುದರಲ್ಲಿ ನಿತ್ಯವಾದ ಒಂದು ತತ್ವವನ್ನು ಪ್ರತಿಪಾದಿಸಿದೆ. ರವೀಂದ್ರರ ಕೃತಿಯಲ್ಲಿ ಎಲ್ಲೂ ಕಾಣುವ ಸೂಕ್ಷ್ಮಬುದ್ಧಿ, ಚಮತ್ಕಾರವೂ, ಜೀವನವನ್ನು ಚಿತ್ರಿಸುವುದರಲ್ಲಿ ಅವರಲ್ಲಿದ್ದ ವ್ಯಕ್ತಿತ್ವವೂ ಹೊಸತನವೂ, ಇದರಲ್ಲೂ ಕಾಣುತ್ತವೆ. ಆದರೆ ಇದರ ನಾಟಕೀಯ ಗುಣ ಹೆಚ್ಚಿನದೇನಲ್ಲ. ಸಮಾಜದ ಸಂಗಡಗಳ ಪ್ರತಿನಿಧಿಗಳು ಹೊರತಾಗಿ ವ್ಯಕ್ತಿ ಜೀವನಗಳು ಇಲ್ಲಿ ಕಾಣುವುದಿಲ್ಲ. ಎಷ್ಟೇ ಪ್ರತಿನಿಧಿಯಾದರೂ ತಿರುಳಲ್ಲಿ ವ್ಯಕ್ತಿಯಾದ ಜೀವ ಚಿತ್ರಿತವಾಗದೆ ಒಂದು ದೃಶ್ಯ ಸ್ವರೂಪತಃ ನಾಟಕ ಆಗುವುದಿಲ್ಲ.

**೫೩. ರಕ್ತಕರವೀ**

ಯಕ್ಷನಗರದಲ್ಲಿ ಅಧಿಕಾರಿಗಳು ಸರಕಾರದ ಆಜ್ಞೆಯಂತೆ ಎಲ್ಲಿಂದಲೋ ಹಿಡಿತಂದ ಜನರಿಂದ ನೆಲ ಅಗೆಸುವುದು ಚಿನ್ನ ತೆಗೆಸುವುದು ಮುಂತಾದ ಕೆಲಸಗಳನ್ನು ಮಾಡಿಸುತ್ತಿರುವರು. ಹೊರಗಿನಿಂದ ತಂದ ಜನರಲ್ಲಿ ನಂದಿನಿ ಎಂಬ ತರುಣಿ ಇರುವಳು; ಅವಳು ರಂಜನ ಎಂಬವನನ್ನು ನಿರೀಕ್ಷಿಸುತ್ತಿದಾಳೆ; ಅವನು ಅಲ್ಲಿಲ್ಲ. ನಂದಿನಿ ಕೆಲಸಗಾರರಿಗೆ ಬೇಕಾದವಳು; ಸರಕಾರಕ್ಕೆ ವಿರೋಧಿ. ಆದರೂ ಅಧಿಕಾರಿ ಜನ ಅವಳ ವಿಷಯದಲ್ಲಿ ಸ್ವಲ್ಪ ಸರಳರಾಗಿರುವರು. ನಂದಿನಿ ರಂಜನನ ವಿಚಾರದಲ್ಲಿ ರಾಜನೊಂದಿಗೆ ಮಾತನಾಡಹೋಗುವಳು. ರಾಜ ಒಂದು ತೆರೆಯ ಹಿಂದುಗಡೆಯಿಂದ ಮಾತನಾಡುವನು. ನಂದಿನಿ ರಾಜನಿಗೆ ರಂಜನನನ್ನು ಕರಸಿಕೋ ಎನ್ನುವಳು. ಯಕ್ಷನಗರದ ಸ್ಥಿತಿ ವಿಚಿತ್ರ. ಇಲ್ಲಿಗೆ ಬಂದ ಕೆಲಸಗಾರರು ತಮ್ಮ ಊರಿಗೆ ಮರಳಿ ಹೋಗುವಂತಿಲ್ಲ. ಮದ್ಯ ಕುಡಿಯುವುದು, ತಮ್ಮನ್ನು ಬದುಕಿಸಬೇಕೆಂಬ ಜನರ ವಿಷಯದಲ್ಲಿಯೇ ಅಸಮಾಧಾನಪಡುವುದು, ಇದು ಇವರ ದಾರಿ. ಇವರಲ್ಲಿ ವಿಶು ಎಂಬುವನು ಮಾತ್ರ ಇತರ ಸುಖಗಳ ವಿಷಯದಲ್ಲಿ ಸ್ವಲ್ಪ ಯೋಚಿಸುವನು, ಹಾಡುವನು. ಕೆಲಸಗಾರರು ಸಂಖ್ಯೆಗಳಿಂದ ನಿರ್ದೇಶಿಸಲ್ಪಡುವರು; ಒಳ್ಳೆಯ ಗೃಹಗಳಲ್ಲಿ ವಾಸವಾಗಿರುವರು. ಇವರಿಗೆ ಮತವನ್ನು ಉಪದೇಶಿಸಲು ಏರ್ಪಾಡಿರುವುದು. ಉಪದೇಶಕರು ಕೆಲಸಗಾರರಿಗೆ ಕಷ್ಟಗಳನ್ನು ತಡೆಯಬೇಕೆಂದು ಉಪದೇಶ ಮಾಡುವರು. ವಿಶು ಕೆಲಸಗಾರರಿಗೆ ಸ್ವಾತಂತ್ರ್ಯದ ವಿಷಯವನ್ನು ಹೇಳಿದನೆಂದು ಬಂದಿಯಾಗುವನು. ನಂದಿನಿ ಅವನೊಂದಿಗೆ ಮಾತನಾಡುವಳು. ಇದರಿಂದ ಸರಕಾರಕ್ಕೆ ಅಸಮಾಧಾನ. ನಂದಿನಿ ಕೊನೆಗೆ ತನ್ನವರ ಸಹಾಯದಿಂದ ವಿಶುವನ್ನು ಬಿಡಿಸಲು ಯತ್ನಮಾಡುವಳು. ರಂಜನನು ಅವಳಿಗೆ ಸಹಾಯಮಾಡುವನು. ಇವರು ಸೆರೆಯನ್ನು ಒಡೆಯುವರು. ಆವೇಳೆಗೆ ಮೊದಲೇ ರಂಜನ ಅಲ್ಲಿ ಸತ್ತುಬಿದ್ದಿರುವನು. ಅದನ್ನು ನೋಡಿ ನಂದಿನಿಯೂ ಸಾಯುವಳು. ವಿಶು ವಿಜಯಗೀತವನ್ನು ಹಾಡುವನು.

ಈ ನಾಟಕದಲ್ಲಿಯೂ ಸಂಕೇತಾರ್ಥಗಳಿವೆಯೆಂದು ಸ್ಪಷ್ಟವಾಗಿ ಕಾಣುತ್ತದೆ. ಯಕ್ಷನಗರದ ಏರ್ಪಾಡುಗಳೂ ಅಲ್ಲಿಯ ಗದ್ದಲ ಗಲಭೆಯೂ ಅಲ್ಲಿ ಕೆಲಸಗಾರರನ್ನು ಹೆಸರಿಂದ ಕರೆಯದೆ ಸಂಖ್ಯೆಗಳಿಂದ ಗುರುತಿಸುವುದೂ ಆಧುನಿಕ ನಾಗರಿಕತೆಯ ಅವಲಕ್ಷಣಗಳನ್ನು ವಿಡಂಬನದಿಂದ ಸೂಚಿಸುತ್ತವೆ. ಕೆಲಸಗಾರರಿಗೆ ಕಷ್ಟವನ್ನು ಸಹಿಸಬೇಕೆಂದು ಕಲಿಸುವ ಉಪದೇಶಕರು ರಾಜ್ಯವ್ಯವಸ್ಥೆಯಿಂದ ಏರ್ಪಾಡಾದ ವಿದ್ಯಾಭ್ಯಾಸ ದೇವತಾರ್ಚನೆಗಳನ್ನು ಸೂಚಿಸುತ್ತಾರೆ. ಅಧಿಕಾರದಲ್ಲಿರುವುದನ್ನು ತಪ್ಪು ಎಂದು ಹೇಳುವುದಕ್ಕೆ ಈ ಸಂಸ್ಥೆಗಳಿಗೆ ಧೈರ್ಯವಿಲ್ಲ. ಒಳ್ಳೆಯ ಮನಸ್ಸಿನವನಾದರೂ ಮರೆಯಲ್ಲಿರುತ್ತ ನಗರದ ಕಾರ್ಯಗಳನ್ನೆಲ್ಲ ಒಪ್ಪಿಕೊಂಡು ಕುಳಿತಿರುವ ರಾಜ ರಾಜ್ಯವ್ಯವಸ್ಥೆಯ ಸ್ವರೂಪ. ಒಳ್ಳೆಯದಾಗಬೇಕೆಂದು ಎಲ್ಲರಿಗೂ ಆಸೆ: ಆಗುವುದೇನೋ ಅನ್ಯಾಯ. ಈ ದುರವಸ್ಥೆಯಲ್ಲಿರುವ ಜನಕ್ಕೆ ಬಿಡುಗಡೆ ತರಬೇಕೆಂದು ಯತ್ನಮಾಡುವವನು ಕಾರ್ಯಕಾರಿಯಾದ ಸ್ವಾತಂತ್ರ್ಯಾಭಿಲಾಷೆ. ವಿಶು ಇದನ್ನು ಹುರಿಗೊಳಿಸುವ ಮನೋಧರ್ಮ. ನಂದಿನಿ ಮನುಷ್ಯನಿಗೆ ಪ್ರಿಯವಾದ ಆನಂದ. ಹೀಗೆ ಒಂದೊಂದು ವ್ಯಕ್ತಿಯೂ ಒಂದೊಂದು ತತ್ವದ ಅವತಾರ. ಕೊನೆಗೆ ಈ ದುಷ್ಟವಾದ ರಾಜ್ಯವ್ಯವಸ್ಥೆ ಹೋಗುತ್ತದೆ; ಅಧಿಕಾರಶಕ್ತಿಯೂ ಸ್ವಾತಂತ್ರ್ಯದ ಕಡೆಗೆ ಸೇರುತ್ತದೆ. ಆದರೆ ಬಿಡುಗಡೆಯನ್ನು ತರುವುದರಲ್ಲಿ ಒಳ್ಳೆಯದನ್ನು ಮಾಡಬಹುದಾದ ಹಲವು ಜೀವ ಹೋಗುತ್ತವೆ; ಜನ ದುಃಖಿತರಾಗುತ್ತಾರೆ; ಮೃತಪ್ರಾಯರಾಗುತ್ತಾರೆ. ಹೀಗೆ ಈ ನಾಟಕದಲ್ಲಿ ಬಹಳ ಶ್ರೇಷ್ಠವಾದ ಭಾವನೆ ಗಂಭೀರವಾದ ರೀತಿಯಲ್ಲಿ ಅವರ್ಣನೀಯವಾದ ನೋವಿನ ಪಟದಮೇಲೆ ರಕ್ತವರ್ಣದಲ್ಲಿ ಚಿತ್ರಿತವಾಗಿದೆ.

ಆದರೆ ನಾಟಕ ತನ್ನ ಉದ್ದೇಶವನ್ನು ಸಾಧಿಸಿದೆಯೋ ಎನ್ನುವ ವಿಷಯದಲ್ಲಿ ಸಂದೇಹ ಹುಟ್ಟುತ್ತದೆ. ಇವರಿಗೆರಡು ಏಟು, ಅವರಿಗೆರಡು ಗುದ್ದು; ಇಲ್ಲಿ ದೊರೆಯನ್ನು ಅಲ್ಲಿ ಪುರೋಹಿತನನ್ನು ಬಯ್ಯುವ ಒಂದು ಮಾತು ಅರ್ಧಮಾತು; ಇವುಗಳಿಂದ ಓದುವ ಕ್ಷಣದಲ್ಲಿ, ಕೊಟ್ಟರು ಸರಕಾರಕ್ಕೆ, ಕೊಟ್ಟರು ಹಣವಂತರಿಗೆ, ಎಂದು ಸರಕಾರವಲ್ಲದೆ ಹಣವಂತರಲ್ಲದೆ ಅತೃಪ್ತರಾದ ಜನಕ್ಕೆ ಸ್ವಲ್ಪ ಉತ್ಸಾಹ ಹುಟ್ಟುವುದಾದರೂ ಕೊನೆಗೆ

ಬರುವ ಭಾವನೆ ಸ್ಫುಟವಾಗಿಲ್ಲ. ಜನಕ್ಕೆ ಬರಬೇಕಾದದ್ದು ಯಾವುದು? ಆಗಬೇಕಾದದು ಏನು? ಇದು ಸ್ಫುಟವಾಗಿಲ್ಲ. ಹೀಗಿರಲೆಂದೇ ಕವಿಯ ಉದ್ದೇಶ ಇರಬಹುದೋ ಏನೋ? ಈಗ ಬಳಕೆಯಲ್ಲಿರುವ ಸಮಾಜ ವ್ಯವಸ್ಥೆಯಿಂದ ಜನಕ್ಕೆ ಹುಟ್ಟಿರುವ ಮೂಕನೋವನ್ನು ವರ್ಣಿಸುವುದೇ ಸಾಲದೆ? ಏನೋ ಬೇನೆ, ಏನೋ ಅತೃಪ್ತಿ. ಎಲ್ಲೋ ಎದ್ದ ಒಂದು ಕುರುವಿನಿಂದ ಮೈಗೆ ಅನುಕ; ಎಂದೋ ಹಿಡಿದ ಒಂದು ಪಿಶಾಚದಿಂದ ಜೀವಕ್ಕೆ ಮುಜಗರ. ಏನೋ ಒಡೆಯಬೇಕು, ಯಾವುದೋ ಬಿಡಬೇಕು. ಜನದ ಈ ಅಸ್ಪಷ್ಟವಾದ ಆಶೆಯನ್ನು ವ್ಯಕ್ತಪಡಿಸುವುದೇ ದೊಡ್ಡ ಸೇವೆ. ಆದರೆ ಈ ಕೆಲಸವಾದರೂ ಸ್ಪಷ್ಟವಾದ ಮಾತುಗಳಿಂದ ಇನ್ನಷ್ಟು ಚೆನ್ನಾಗಿ ಆಗಬಹುದಾಗಿತ್ತು. ವಿವೇಕ ಎಂತಲೋ ತಿಳಿವಯ್ಯ ಎಂತಲೋ ಹೆಸರಿಟ್ಟು ಒಂದು ಪಾತ್ರದಿಂದ ವಿವೇಕದ ಮಾತುಗಳನ್ನು ಆಡಿಸಿ ಆಗ್ರಹ ಅಥವಾ ಕೋಪಯ್ಯ ಎಂಬ ಇನ್ನೊಂದು ಪಾತ್ರದಿಂದ ವಿವೇಕವನ್ನು ಕೊಲ್ಲಿಸುವುದರಿಂದ ಕೋಪದಲ್ಲಿ ವಿವೇಕ ಹಾಳಾಗುತ್ತದೆ ಎಂದು ತಿಳಿಸಬಹುದು. ಅಥವಾ ಯಾವನಾದರೊಬ್ಬನ ಜೀವನದಲ್ಲಿ ಕೋಪಬಂದಾಗ ಅವನ ವಿವೇಕ ಹೇಗೆ ಹಾಳಾಯಿತೆಂಬುದನ್ನು ಚಿತ್ರಿಸಿ ಇದೇ ಕೆಲಸವನ್ನು ಮಾಡಬಹುದು. ಉದ್ದೇಶ ಎರಡನೆಯ ಸಂದರ್ಭದಲ್ಲಿ ಮೊದಲನೆಯ ಸಂದರ್ಭಕ್ಕಿಂತ ಸ್ಪಷ್ಟವಾಗಿರುತ್ತದೆ. ಮೊದಲನೆಯ ಪದ್ಧತಿಯನ್ನು ಅವಲಂಬಿಸಿ, ಅದರಲ್ಲಿಯೂ ಕವಿಗೇ ಭಾವ ಸ್ಪಷ್ಟವಾಗಿಲ್ಲದ್ದರಿಂದಲೋ ಅಥವಾ ಜನ ಯೋಚಿಸಲಿ ಎಂಬ ಉದ್ದೇಶದಿಂದಲೋ, ಮಾತು ಅರ್ಥವನ್ನು ಮರೆಯಿಸುವುದು ಬೇರೆ ಆಗಿಬಿಟ್ಟರೆ, ಓದುವವರಿಗೆ ಸಂಕೇತದಿಂದ ತೊಂದರೆಯಾದಂತೆಯೇ ಹೊರತು ಬೇರೆ ಇಲ್ಲ. ಕವಿಗೂ ಇದರಿಂದ ನಷ್ಟವೆಂದು ಹೇಳಿದರೆ ಮಾತು ಹೆಚ್ಚಾಗಲಾರದು.

### ೫೪. ನಟಿಯ ಪೂಜೆ

ಮಗಧ ದೇಶದ ಅರಸು ಬುದ್ಧ ಭಕ್ತ ಬಿಂಬಿಸಾರ ಸಿಂಹಾಸನ ತ್ಯಾಗಮಾಡಿ ರಾಜ್ಯವನ್ನು ತನ್ನ ಮಗ ಬ್ರಾಹ್ಮಣ ಪಕ್ಷಪಾತಿ ಅಜಾತ ಶತ್ರುವಿಗೆ ಬಿಟ್ಟುಕೊಟ್ಟಿದಾನೆ; ಬುದ್ಧನ ಉಪದೇಶದ ಮಹಿಮೆಯಿಂದ ಶಾಂತಿಯನ್ನರಸಿ ನಗರದ ಆಚೆ ಒಂದು ಆಶ್ರಮದಲ್ಲಿದಾನೆ. ಅವನ

ರಾಣಿ ಲೋಕೇಶ್ವರಿ ನಷ್ಟವಾದ ತನ್ನ ಪದವಿಯನ್ನು ಕುರಿತು ದುಃಖಿಸುತ್ತಿದಾಳೆ. ಸಾಲದ್ದಕ್ಕೆ ಅವಳ ಮಗ ಚಿತ್ರಕುಶಲಶೀಲ ಎಂಬ ಹೆಸರಿನಿಂದ ಭಿಕ್ಷುವಾಗಿ ಇವಳ ಲೋಕವನ್ನು ಬರಿದು ಮಾಡಿದಾನೆ. ಬುದ್ಧನ ಉಪದೇಶದಿಂದ ಲೋಕದ ಸ್ಥಿತಿ ತಲೆಕೆಳಗಾಗಿದೆ. ತುರುಗಾಹಿ ನಾಯಿಂದರು ಶ್ರವಣರಾಗಿದಾರೆ; ಜನರು ಅವರಿಗೆ ಗೌರವ ತೋರಿಸುತ್ತಿದಾರೆ. ಬಡ ಹೆಂಗಸರು ಭಿಕ್ಷುಣಿಗಳಾಗಿ ರಾಣಿಗೆ ಸಮನೆಂಬಂತೆ, ಹಿರಿಯರೆಂಬಂತೆ, ಮಾತನಾಡುತ್ತಾರೆ. ಅರಮನೆಯ ನಟಿ ಶ್ರೀಮತಿ ಉಪಾಸನೆಯಲ್ಲಿ ಮುಂದರಿದು ಉಳಿದವರಿಗೆ ಉಪದೇಶಮಾಡುವ ಸ್ಥಿತಿಗೆ ಬಂದಿದಾಳೆ. ನಾಟಕದ ಮೊದಲ ಸ್ಥಾನದಲ್ಲಿ ಭಿಕ್ಷು ಉಪಾಲಿ ಅರಮನೆಗೆ ಭಿಕ್ಷಕ್ಕೆ ಬಂದು ರಾಜಕುಮಾರಿಯರು ಬರುವುದರಲ್ಲಿ ಸಾವಕಾಶವಾದುದರಿಂದ ಶ್ರೀಮತಿಯಿಂದ ಭಿಕ್ಷೆ ಪಡೆದು ಮುಂದೆ ನಡೆಯುತ್ತಾನೆ. ಅರಗುವರಿಯರಲ್ಲಿ ಒಬ್ಬಳು ಇದನ್ನು ಕಂಡು ಬೇಸರಪಡುತ್ತಾಳೆ. ರಾಣಿ ಲೋಕೇಶ್ವರಿಯೂ ಹಿಂದೆ ಬುದ್ಧನನ್ನು ಪೂಜಿಸುವುದಕ್ಕೆ ಸಮ್ಮತಿಸಿದ್ದಳು. ಆದರೆ ಅವನ ಉಪದೇಶದಿಂದ ಬಾಳು ಹೀಗೆ ತಲೆಕೆಳಗಾಗುವುದನ್ನು ಅವಳು ಒಪ್ಪಲಾರಳು. ಅಜಾತಶತ್ರು ಬ್ರಾಹ್ಮಣ ದೇವದತ್ತನನ್ನು ಕರೆತರುವನೆಂದು ಕೇಳಿ ಇವಳಿಗೆ ಒಂದು ದೃಷ್ಟಿಯಿಂದ ಬೇಸರ, ಮತ್ತೊಂದು ದೃಷ್ಟಿಯಿಂದ ಸಮಾಧಾನ. ಮಾಲತಿ ಎಂಬ ಹಳ್ಳಿಯ ಹುಡುಗಿ ಅರಮನೆಗೆ ಶ್ರೀಮತಿಯ ಬಳಿಗೆ ಬರುತ್ತಾಳೆ. ಅವಳನ್ನು ಮದುವೆಯಾಗ ಬೇಕಾಗಿದ್ದ ತರುಣ ಬೌದ್ಧ ಉಪದೇಶದ ಮಹಿಮೆಯಿಂದ ಸಂನ್ಯಾಸಿಯಾಗಿ ಅವಳು ಮುಂದುಗೆಟ್ಟಿದಾಳೆ; ಅವನು ಇರುವ ಕಡೆ ಇರೋಣ ಎಂದು ನಗರಕ್ಕೆ ಬಂದಿದಾಳೆ; ಶ್ರೀಮತಿ ಜ್ಞಾನಿ ಎಂದು ಕೇಳಿ ಅವಳೊಡನೆ ನಿಲ್ಲಲು ಬಯಸುತ್ತಾಳೆ. ರಾಜಾ ಬಿಂಬಿಸಾರನು ಅರಮನೆಯಲ್ಲಿ ಒಂದು ಮರದಕೆಳಗೆ ಬುದ್ಧ ಗುರು ಒಮ್ಮೆ ಕುಳಿತಿದ್ದ ತಾಣವನ್ನು ಪುಣ್ಯಭೂಮಿಯೆಂದೆಣಿಸಿ ಅಲ್ಲಿ ಗುಡಿಯೊಂದನ್ನು ಕಟ್ಟಿಸಿರುವನು. ಅಜಾತಶತ್ರು ಅಲ್ಲಿ ಪೂಜೆ ನಡೆಯಕೂಡದೆಂದೂ ಯಾರಾದರೂ ಪೂಜೆ ಮಾಡಿದರೆ ಕಾವಲವರು ಅವರ ತಲೆಯನ್ನು ಕಡಿಯಬೇಕೆಂದೂ ಆಜ್ಞೆ ಮಾಡಿದಾನೆ. ವೈಶಾಖ ಪೂರ್ಣಿಮೆ ಸಮೀಪಿಸಿದೆ. ಅಂದು ಬುದ್ಧನ

ಜನ್ಮೋತ್ಸವ. ಗುಡಿಯ ಮುಂದೆ ತಾನು ನಾಟ್ಯ ಮಾಡಬೇಕೆಂದು ಶ್ರೀಮತಿ ನಿಶ್ಚಯಿಸುತ್ತಾಳೆ. ಈ ವೇಳೆಗೆ ರಾಜ್ಯದಲ್ಲಿ ಈ ಪಕ್ಷ ಆ ಪಕ್ಷ ಮಸಗಿ ಭಿಕ್ಷುಣಿ ಉತ್ಪಲೆಯನ್ನು ಪ್ರತಿ ಪಕ್ಷದವರು ಕೊಂದಿದಾರೆ. ಬುದ್ಧನ ಪೂಜೆಗೆಂದು ಅರಮನೆಗೆ ಬರುತಿದ್ದ ರಾಜಾ ಬಿಂಬಿಸಾರನನ್ನು ದಾರಿಯಲ್ಲಿ ಹಗೆಗಳು ಕೊಲೆಮಾಡಿದಾರೆ. ಇದರಿಂದೆಲ್ಲ ಕ್ಷುಬ್ಧನಾಗಿ ಅಜಾತಶತ್ರು ತನ್ನ ಆಜ್ಞೆಯನ್ನು ಅಳಿಸುವ ಯೋಚನೆಯಲ್ಲಿರುವಂತೆ ಕಾಣುತ್ತದೆ. ಗುಡಿಯಲ್ಲಿ ಅವನೇ ಪೂಜೆಯನ್ನು ನಡೆಸುವನೋ ಎಂಬಂತೆಯೂ ಇದೆ. ಹುಣ್ಣಿಮೆಯ ರಾತ್ರಿ; ಪೂಜೆಯ ಹೊತ್ತು; ಶ್ರೀಮತಿ ಪೂಜೆಯ ನೃತ್ಯವನ್ನು ಮೊದಲು ಮಾಡುತ್ತಾಳೆ. ಕಾವಲವರು ವಿಧಿಯಿಲ್ಲದೆ ಅವಳನ್ನು ಕಡಿಯುತ್ತಾರೆ. ಆ ವೇಳೆಯಲ್ಲಿ ಅಜಾತಶತ್ರು ಅರಮನೆಯ ಬಾಗಿಲಿಗೆ ಬಂದಿದ್ದನು. ಅಲ್ಲಿ ಅವನಿಗೆ ಶ್ರೀಮತಿ ಕೊಲೆಯಾದಳೆಂಬ ಸುದ್ದಿ ಮುಟ್ಟಿತು. ಇದನ್ನು ಕೇಳಿ ಅವನು ನಡುಗಿದನು; ಅಲ್ಲಿಂದಲೇ ಹಿಂದಿರುಗಿದನು. ಸೇವಕಿ ಈ ಮಾತನ್ನು ಹೇಳಲು ರಾಣಿ 'ನಡುಗಿದನೆ! ಭಯವೇನು?' ಎನ್ನುವಳು. ಸೇವಕಿ 'ನಟಿಯ ಭಯ' ಎನ್ನುವಳು. ರಾಜಕುಮಾರಿಯರಲ್ಲಿ ಒಬ್ಬಳು ಶ್ರೀಮತಿಯ ಕಾಲಬಳಿ ಮಂಡಿ ಊರಿ ಬುದ್ಧನಿಗೆ ಶರಣು, ಸಂಘಕ್ಕೆ ಶರಣು, ಧರ್ಮಕ್ಕೆ ಶರಣು ಎಂದು ಬೌದ್ಧ ಮಂತ್ರವನ್ನು ಜಪಿಸುತ್ತಾಳೆ.

ಮಾಲಿನೀ ನಾಟಕದಲ್ಲಿರುವಂತೆ ಈ ನಾಟಕದಲ್ಲಿಯೂ ಸಂಪ್ರದಾಯದ ಧರ್ಮ ಮತ್ತು ಬೌದ್ಧ ಧರ್ಮಗಳ ಮಧ್ಯೆ ಸಂಭವಿಸಿದ ಘರ್ಷಣ ಕಥೆಯ ಹಿನ್ನೆಲೆಯಾಗಿದೆ. ಸಂಪ್ರದಾಯಕ್ಕೂ ಸುಧಾರಕ ಮತಕ್ಕೂ ಭಾವನೆಯಲ್ಲಿ ಭೇದವಿತ್ತು ಎನ್ನುವುದು ಸ್ಪಷ್ಟವೇ ಆಗಿದೆ. ಬೌದ್ಧ ಗ್ರಂಥಗಳಲ್ಲಿರುವ ಚರ್ಚೆಗಳನ್ನು ನೋಡಿದರೆ ಬುದ್ಧನು ಅನೇಕ ಬ್ರಾಹ್ಮಣರೊಂದಿಗೆ ತತ್ವ ನೀತಿಗಳನ್ನು ಕುರಿತು ಅನೇಕ ಚರ್ಚೆಗಳನ್ನು ನಡಸಿದ್ದೂ ಕಾಣುತ್ತದೆ. ಆದರೆ ಈ ಚರ್ಚೆಗಳು ಈ ನಾಟಕದಲ್ಲಿ ಕಲ್ಪಿಸಿರುವಂತೆ ರಾಷ್ಟ್ರವಿಕ್ಷೋಭದಲ್ಲಿ ಪರಿಣಾಮಗೊಂಡವೇ ಎನ್ನುವುದು ನಿಶ್ಚಿತವಲ್ಲ. ವಿಕ್ಷೋಭ ಉಂಟಾಯಿತೆಂದು ಗ್ರಹಿಸಿದ್ದಾದರೆ ಈ ನಾಟಕದ ವಸ್ತು ಸಿದ್ಧಿಸುತ್ತದೆ. ಹೀಗೆ ಸಿದ್ಧಿಸಿದ ವಸ್ತುವನ್ನು ಕತೆಯಾಗಿ ಕಟ್ಟಿರುವುದು

ಒಪ್ಪವಾಗಿದೆ. ಶ್ರೀಮತಿಯ ಕೊಲೆ ಐತಿಹಾಸಿಕ. ಅದು ಈ ಕತೆಯಲ್ಲಿ ಲಕ್ಷಣವಾಗಿ ಅಡಕವಾಗಿದೆ. ರಾಣಿ ಲೋಕೇಶ್ವರಿ, ನಟಿ ಶ್ರೀಮತಿ, ಇವರ ಸ್ವಭಾವ ಚೆನ್ನಾಗಿ ಚಿತ್ರಿತವಾಗಿವೆ. ರಾಣಿಯ ಮೂರ್ತಿಯನ್ನು ಕವಿ ತುಂಬ ಸಹಾನುಭೂತಿಯಿಂದ ಬಹು ಸ್ಪಷ್ಟವಾಗಿ ಚಿತ್ರಿಸಿದಾರೆ. ಶ್ರೀಮತಿಯ ಮೂರ್ತಿ ಇಷ್ಟು ಸ್ಪಷ್ಟವಾಗುವುದಿಲ್ಲ. ಗಾದಿಯನ್ನು ಬಯಸುವನೂ ತಂದೆಯ ಕೊಲೆಯಾದಾಗ ಕ್ಷೋಭೆಗೊಳ್ಳುವನೂ ಒಮ್ಮೆ ಬುದ್ಧನ ಕಡೆಗೆ ಒಮ್ಮೆ ದೇವದತ್ತನ ಕಡೆಗೆ ಒಲೆಯುವವನೂ ಶ್ರೀಮತಿ ಸತ್ತಳೆಂದು ಕೇಳಿ ನಡುಗುವವನೂ ಆದ ಅಜಾತಶತ್ರು ಇವರಂತೆಯೇ ಪೂರ್ಣಾಕಾರದ ಮೂರ್ತಿಯಾಗುತ್ತಾನೆ. ಒಮ್ಮೆ ಕೂಡ ರಂಗಕ್ಕೆ ಬರದೆ ಬಂದ ಇವರಷ್ಟೇ ಚೆನ್ನಾಗಿ ದೃಷ್ಟಿಗೆ ಗೋಚರನಾಗುತ್ತಾನೆ.

ಚಿತ್ರಾ ನಾಟಕ ಆದಮೇಲೆ ಪ್ರಾಯಶಃ ಈ ನಾಟಕವನ್ನು ಠಾಕೂರರ ನಾಟಕಗಳಲ್ಲಿ ಉತ್ತಮವಾದುದೆಂದು ಹೇಳಬೇಕು. ಇದರ ಕಥೆಯಲ್ಲಿ ಯಾವ ಒಂದು ಸಂಕೇತದ ತೊಡಕಾಗಲಿ ಇಲ್ಲ. ಇದರಿಂದ ಕಥೆ ಯಥಾರ್ಥ ಜೀವನವನ್ನು ಚಿತ್ರಿಸಬಹುದಾಗಿದೆ. ಕವಿ ಈ ಅವಕಾಶವನ್ನು ಚೆನ್ನಾಗಿ ಉಪಯೋಗಿಸಿದಾರೆ. ಒಂದರ ಮೇಲೊಂದು ಬರುವ ಸಂಗತಿಗಳ ಸಾಲೂ ತೀರಾ ಸಹಜವೆಂದು ಕಾಣುತ್ತದೆ. ಧರ್ಮ ಕಸಿದುಕೊಂಡ ಗಂಡನಿಗೆಂದು, ಮಗನಿಗೆಂದು, ದುಃಖಿಸುವ ರಾಣಿ, ಧರ್ಮ ಕಸಿದುಕೊಂಡ ಪ್ರಿಯನನ್ನು ಬಿಡಲಾರದೆ ಬಂದಿರುವ ಗ್ರಾಮೀಣ ತರುಣಿ, ಠಾಕೂರರ ಸಣ್ಣ ದೊಡ್ಡ ಕತೆಗಳ ಹಲವು ಪಾತ್ರಗಳಂತೆ ನಿಜವಾದ ವ್ಯಕ್ತಿಗಳು, ಜೀವಂತ ಆಗುತ್ತಾರೆ. ಈ ನಾಟಕವನ್ನು ಓದಿದರೆ ಇದನ್ನು ರಚಿಸಬಲ್ಲ ಕವಿ ಸಹಜ ಜೀವನವನ್ನು ಕುರಿತ ಇನ್ನಷ್ಟು ನಾಟಕವನ್ನು ಬರೆಯದೆ ಬಿಟ್ಟರಲ್ಲ ಎಂದು ವ್ಯಥೆಯಾಗುತ್ತದೆ. ಇಲ್ಲಿ ಕಾಣುವ ಜೀವನ ವಿಜ್ಞಾನ ಕಾಳಿದಾಸ ಷೇಕ್ಸ್‌ಪಿಯರುಗಳ ಕೃತಿಗಳಂತೆ ರಂಗದಲ್ಲಿ ಹೇಗೋ ಹಾಗೆ ಓದಿನಲ್ಲಿಯೂ ರುಚಿಸುವುದಾಗಿ ಮಾನವ ಹೃದಯದ ಬಹು ಅಂಶಕ್ಕೆ ಒಪ್ಪಿಗೆಯಾಗುವ ನಾಟಕವನ್ನು ನಿರ್ಮಿಸಬಹುದಾಗಿತ್ತು.

**೫೫. ಇತರ ದೃಶ್ಯ ಗ್ರಂಥಗಳು**

ಕವಿವರರ ಉಳಿದ ಕೆಲವು ದೃಶ್ಯ ಪ್ರಬಂಧಗಳನ್ನು ಕುರಿತು ಎರಡು ಮಾತನ್ನು ಹೇಳುವುದು ಆವಶ್ಯಕ. ಮಾಲಿನೀ ಮತ್ತು ರಾಜಾ ನಾಟಕಗಳನ್ನು ಬರೆದ ಕಾಲದ ಅಂತರದಲ್ಲಿ ಇವರು ಹಲವು ಸಣ್ಣ ದೃಶ್ಯಗಳನ್ನು ರಚಿಸಿದರು. "ಹೋಗಿಬರುವವನಿಗೆ ಶಾಪ" ಎನ್ನುವುದು ಕಚನಲ್ಲಿ ದೇವಯಾನಿ ತೋರಿದ ಪ್ರಣಯದ ಕತೆ. "ನರಕ ನಿವಾಸ" ಎನ್ನುವುದು ಪುರೋಹಿತನಿಗಾಗಿ ಮಗನನ್ನು ಬಲಿಕೊಟ್ಟ ಸೋಮಕ ಎಂಬ ರಾಜನ ಕತೆ. ಇನ್ನೊಂದು ಕತೆ, ಒಬ್ಬ ಮುಸಲ್ಮಾನನು ಕದ್ದ ಒಬ್ಬ ರಜಪೂತ ಕನ್ಯೆ ಅವನನ್ನು ಮೆಚ್ಚಿರುವುದು, ಅವಳ ತಾಯಿ ಕೋಪಗೊಳ್ಳುವುದು, ತಂದೆ ಸಮಾಧಾನ ಮಾಡುವುದು, ಇದನ್ನು ಕುರಿತದು. "ಕರ್ಣ ಕುಂತಿ" ಎನ್ನುವ ಸಣ್ಣ ದೃಶ್ಯದಲ್ಲಿ ಕುಂತೀದೇವಿ ಬಂದು ಕರ್ಣನನ್ನು ಪಾಂಡವರ ಪಕ್ಷ ಬಾರೆಂದು ಕರೆಯುವುದೂ ಅವನು ಬಾರೆನೆನ್ನುವುದೂ ಚಿತ್ರಿತವಾಗಿದೆ. "ಗಾಂಧಾರಿಯ ಪ್ರಾರ್ಥನೆ" ಎಂಬ ಸಣ್ಣ ದೃಶ್ಯದಲ್ಲಿ ದುರ್ಯೋಧನನ ಅಹಂಕಾರ ವಿಜೃಂಭಣೆ, ಧೃತರಾಷ್ಟ್ರನ ಪುತ್ರ ಪಕ್ಷಪಾತ, ಗಾಂಧಾರಿಯ ಧರ್ಮಬುದ್ಧಿ, ಇವು ಚಿತ್ರಿತವಾಗಿವೆ. ಈ ಸಣ್ಣ ದೃಶ್ಯಗಳಲ್ಲಿ ಚಿತ್ರವೇನೋ ಸ್ಫುಟವಾಗಿ ಬರುತ್ತದೆ; ಆದರೆ ಎಲ್ಲರೂ ಅತಿ ಚಚ್ಚೌಕವಾಗಿ ಮಾತನಾಡುತ್ತಾರೆ; ವ್ಯಕ್ತಿಗಳು ಕೆತ್ತಿ ನಿಲ್ಲಿಸಿದ ಗೊಂಬೆಗಳಂತೆ ಕಾಣುತ್ತಾರೆ. ಇವುಗಳಲ್ಲಿ ಭಾವಗಳು ಉದಾತ್ತವಾಗಿವೆ. 'ಲಕ್ಷ್ಮಿಯ ಪರೀಕ್ಷೆ' ಎನ್ನುವುದು ಹಗುರವಾದ ಪರಿಹಾಸದ ಒಂದು ಸಣ್ಣ ದೃಶ್ಯ. ರಾಣಿ ದುಂದುಗಾರಳು, ತಾನು ರಾಣಿಯಾದರೆ ಹೇಗೆ ಇದ್ದೇನೋ, ಎಂದ ಒಬ್ಬ ಸೇವಕಿ ಕನಸಿನಲ್ಲಿ ರಾಣಿಯಾದಂತೆ ಅನುಭವಿಸಿ ಹುಚ್ಚು ಹುಚ್ಚು ಆಡಿ ಎಚ್ಚರಗೊಂಡು ತನ್ನ ತಪ್ಪನ್ನು ತಾನು ತಿಳಿಯುತ್ತಾಳೆ. ಇದರಲ್ಲಿ ಸನ್ನಿವೇಶ ಸ್ವಭಾವ ನಿರೂಪಣ ಯಾವುದೂ ಅಷ್ಟೇನೂ ಎತ್ತರವನ್ನೇರುವುದಿಲ್ಲ. ಇಂಥ ದೃಶ್ಯಗಳಲ್ಲಿ ಎತ್ತರವನ್ನುಏರಬೇಕೆಂದು ಪ್ರಯತ್ನವೂ ಇಲ್ಲವೆಂದೇ ಹೇಳಬಹುದು. ಇಂಥ ಸಣ್ಣ ಕೃತಿಗಳು ಕವಿಯ ಮನಸ್ಸಿನ ನೂರು ಅಲೆಗಳನ್ನು ಚಿತ್ರಿಸುತ್ತವೆ. ಬರೆದವರಿಗೆ ಇದರಿಂದ ಸಮಾಧಾನ; ಓದುವವರಿಗೆ ಸ್ವಲ್ಪ ಸಂತೋಷ. ಆದರೂ ಎಷ್ಟು ಸಣ್ಣ ಕೃತಿಯಾದರೂ ಈ ಎಲ್ಲ ಬರೆವಣಿಗೆ ನುರಿತ ಕವಿಯದೆಂದು ಸ್ಪಷ್ಟವಾಗುತ್ತದೆ.

## ಅಧ್ಯಾಯ ೭

## ಭಾಷಣ ಲೇಖನಗಳು

### ೫೬. ಬಹುವಿಧದ ಬರವಣಿಗೆ

ನೋಬೆಲ್ ಬಹುಮತಿ ಬಂದು ಠಾಕೂರರ ಹೆಸರು ಪಾಶ್ಚಾತ್ಯರಲ್ಲಿ ಪ್ರಸಿದ್ಧವಾದಮೇಲೆ ಬೇರೆ ಬೇರೆ ದೇಶಗಳ ಜನರು ಇವರನ್ನು ಬರಮಾಡಿ ಕೊಂಡು ಉಪನ್ಯಾಸಗಳನ್ನು ಕೇಳಿದರು. ಇವುಗಳಲ್ಲಿ ಮುಖ್ಯವಾದವು ಸಾಧನಾ, ಅಹಂತತ್ತ್ವ, ಸೃಷ್ಟಿಯ ಏಕಮೂಲ, ರಾಷ್ಟ್ರತತ್ತ್ವ ಎಂಬ ಲೇಖನಮಾಲೆಗಳಲ್ಲಿ ಪ್ರಕಟವಾಗಿವೆ. ಇದಲ್ಲದೆ ಕವಿವರರು ದೇಶಸೇವೆಯ ಸಂದರ್ಭದಲ್ಲಿ ಬಂಗಾಳಿಯಲ್ಲಿ ಬರೆದ ಹಲವು ಲೇಖನಗಳು ತರ್ಜುಮೆ ಯಾಗಿ ಇಂಗ್ಲೀಷಿನಲ್ಲಿ ಪ್ರಕಟವಾಗಿವೆ. ಹಾಗೆಯೇ ಇವರ ಪತ್ರಗಳೂ ವಿಮರ್ಶನ ಲೇಖನಗಳೂ ಗಮನಿಸಬೇಕಾದವು. ಈ ಅಧ್ಯಾಯದಲ್ಲಿ ಈ ಕೃತಿಗಳ ವಿಷಯವನ್ನು ಹೇಳಿದೆ.

### ೫೭. ತತ್ತ್ವವಿಚಾರ

ತತ್ತ್ವವಿಚಾರದ ಇವರ ಉಪನ್ಯಾಸಗಳ ಸಾರಾಂಶವನ್ನು ಇಲ್ಲಿ ಕೊಟ್ಟಿದೆ.

ಜೀವ ವಿಶ್ವಗಳ ಸಂಬಂಧ. ಒಂದೊಂದು ಸಂಸ್ಕೃತಿಗೂ ಒಂದೊಂದು ಆವರಣವಿರುತ್ತದೆ. ಗ್ರೀಸಿನ ಮತ್ತು ಈಗ ಪಾಶ್ಚಾತ್ಯರು ಹೊಸದೆಂಬ ಇತರ ಸಂಸ್ಕೃತಿಗಳಿಗೆ ಇಟ್ಟಿಗೆ ಗಾರೆಯ ಕಟ್ಟಡ ತೊಟ್ಟಿಲು. ಇವು ಗಳಲ್ಲಿ ವಸ್ತುಗಳನ್ನು ಶೇಖರಿಸುವುದು, ಅವುಗಳನ್ನು ಭದ್ರವಾಗಿಟ್ಟು ಕೊಳ್ಳುವುದು, ಮುಖ್ಯ ಸೂತ್ರ. ಭಾರತವರ್ಷದ ಸಂಸ್ಕೃತಿಯ ತೊಟ್ಟಿಲು ವಿಸ್ತಾರವಾದ ವನಪ್ರದೇಶ. ಈ ಕಾರಣದಿಂದ ಭಾರತ ಸಂಸ್ಕೃತಿಯಲ್ಲಿ ಮನುಷ್ಯನಿಗೂ ಪ್ರಕೃತಿಗೂ ನಿಕಟವಾದ ಒಂದು ಸಂಬಂಧ ಉಂಟಾಯಿತು. ಪ್ರಕೃತಿಯನ್ನು ಕಟ್ಟಿಕೊಂಡೇ ಬೆಳೆಯುವಲ್ಲಿ ಬದುಕು ನಿಸ್ಸಾರವಾಗಿ

ಬುದ್ಧಿ ಮಂಕಾಗುವ ಸಂಭವವುಂಟು. ಇಲ್ಲಿ ಅದು ಆಗಲಿಲ್ಲ. ಅರಣ್ಯಗಳು ಹೋಗಿ ಊರುಗಳು ಬಂದಮೇಲೂ ಈ ಸಂಸ್ಕೃತಿಯಲ್ಲಿ ಹಿಂದಣದಾದ ಒಂದು ನೆನಪು ನಿಂತಿದ್ದಿತು. ಪಶ್ಚಿಮ ದೇಶದ ಸಂಸ್ಕೃತಿ ಪ್ರಕೃತಿಯನ್ನು ಗೆಲ್ಲುವ ದೃಷ್ಟಿಯಲ್ಲಿ ನಡೆಯುತ್ತಿರಲಾಗಿ ಭಾರತೀಯ ಸಂಸ್ಕೃತಿ ಮನುಷ್ಯನು ಸೃಷ್ಟಿಯಲ್ಲಿ ಎಲ್ಲದರ ಜೊತೆಗೆ ಸೇರಿರುವನೆಂಬ ಮತ್ತು ಎಲ್ಲವೂ ಒಂದು ಸತ್ಯವೆಂಬ ದೃಷ್ಟಿಯಲ್ಲಿ ನಡೆಯಿತು. ಒಂದು ದಾರಿಯನ್ನು ಎರಡು ದೃಷ್ಟಿಯಿಂದ ನೋಡಬಹುದು. ಅದು ನಮ್ಮ ಗುರಿಗೆ ಕರೆದುಕೊಂಡು ಹೋಗುವುದಾಗಿ ನಮಗೆ ಸಹಾಯವಾಗಿದೆ ಎಂಬುದು ಒಂದು; ನಮಗೂ ನಮ್ಮ ಗುರಿಗೂ ಮಧ್ಯೆ ಇದು ಉದ್ದವಾಗಿ ಬೆಳೆದು ಅಡ್ಡಮಾಡಿದೆ ಎನ್ನುವುದು ಇನ್ನೊಂದು. ಪಶ್ಚಿಮ ದೇಶದ ಮತ್ತು ಭಾರತೀಯರ ದೃಷ್ಟಿ ಪ್ರಕೃತಿಯ ವಿಷಯದಲ್ಲಿ ಹೀಗೆ ಭಿನ್ನವಾಗಿದೆ. ಅಲ್ಲದೆ ಸೃಷ್ಟಿಯೆಲ್ಲ ಒಂದು ಎಂಬ ಭಾವ ನಮ್ಮಲ್ಲಿ ಬುದ್ಧಿಯಿಂದ ಮಾತ್ರ ತಿಳಿದ ಒಂದು ತತ್ವವಾಗಿ ಕೊನೆಯಾಗಲಿಲ್ಲ. ಭಾರತವರ್ಷ ಇದನ್ನು ಅನುಭವದಲ್ಲಿ ಸಾಧಿಸುವುದಕ್ಕೆ ಪ್ರಯತ್ನಮಾಡಿದೆ. ಲೋಕ ನಮಗೆ ಕಾಣುವ ವಸ್ತುವಿನಷ್ಟೆ ಅಲ್ಲ, ಇವಕ್ಕೆ ಮಿಂಚಿದ ಯಾವುದೋ ಶಕ್ತಿ ಈ ವಸ್ತುಗಳಲ್ಲಿ ಪ್ರಕಟವಾಗಿದೆ, ಎಂದು ವೈಜ್ಞಾನಿಕನು ಬಲ್ಲನು. ಆತ್ಮಜ್ಞಾನವುಳ್ಳವನಿಗೂ ಇದೇ ರೀತಿಯ ಒಂದು ಅಂತರ್ದೃಷ್ಟಿ ಉಂಟು. ವಿಜ್ಞಾನದ್ದು ತಿಳಿವು. ಆತ್ಮಜ್ಞಾನದ್ದು ಹೊಳವು. ಅದು ಶಕ್ತಿಯನ್ನು ಕೊಡುತ್ತದೆ, ಇದು ಆನಂದವನ್ನು ಕೊಡುತ್ತದೆ. ವಿಜ್ಞಾನಿಗೆ ನೀರು ದೇಹವನ್ನು ತೊಳೆಯುವುದು ಮಾತ್ರ ಕಾಣುತ್ತದೆ, ಆತ್ಮಜ್ಞಾನಿಗೆ ಅದು ಮನಸ್ಸನ್ನು ಶುದ್ಧಿ ಮಾಡುವುದೂ ತಿಳಿಯುತ್ತದೆ. ಹೀಗೆ ಗಾಯತ್ರಿಯಿಂದ ಇತರ ಮಂತ್ರಗಳಿಂದ ಭಾರತದೇಶವು ಸೃಷ್ಟಿಯನ್ನೆಲ್ಲ ಸೇರಿಸಿ ಹಿಡಿದಿರುವ ವಿಶ್ವಾತ್ಮದ ಅನುಭವಕ್ಕೆ ಯತ್ನಮಾಡಿದೆ. ಎಂದ ಮಾತ್ರಕ್ಕೆ ಎಲ್ಲವನ್ನೂ ಒಂದೇ ವಸ್ತುವೆಂದೂ ಒಂದರಿಂದ ಒಂದಕ್ಕೆ ಭೇದವಿಲ್ಲವೆಂದೂ ಹೇಳುವುದಲ್ಲ. ಅಭೇದ ಎನ್ನುವುದರ ಅರ್ಥ ಬೇರೆ. ಮನುಷ್ಯನು ಮೃಗಕ್ಕಿಂತ ಮೇಲಣ ಜೀವ, ಆದರೆ ಆ ಮೇಲುತನ ಮೃಗವನ್ನು ಸ್ವಾರ್ಥಕ್ಕಾಗಿ ಉಪಯೋಗಿಸುವ ಕಾರ್ಯಕ್ಕಾಗಿ ಉದ್ದಿಷ್ಟವಾಗಿಲ್ಲ. ಮನುಷ್ಯನನ್ನು ಉಳಿದ ಸೃಷ್ಟಿಯಿಂದ ಬೇರೆಯಾಗಿ

ಎಣಿಸಿದರೆ ಕೊನೆಮೊದಲಿಲ್ಲದ ಪ್ರಶ್ನೆಗಳುಂಟಾಗುತ್ತವೆ. ತಾನು ಬೇರೆ ಎಂಬ ಸೂತ್ರವನ್ನು ಅನುಸರಿಸುವ ಮನುಷ್ಯನು ಹಗ್ಗದಮೇಲೆ ನಡೆಯುವವನಂತೆ, ಇಲ್ಲವೇ ಸದಾ ಕುಣಿಯುತ್ತಿರಬೇಕು, ಇಲ್ಲವೇ ಬೀಳಬೇಕು. ವಿಶ್ವದೊಂದಿಗೆ ಬೆರೆಯದವನ ಆತ್ಮ ಸಂಪೂರ್ಣವಾದ ವಿಶ್ವಾಸವನ್ನು ಹೊಂದಲಾರದು. ಹೀಗೆ ವಿಶ್ವದೊಂದಿಗೆ ಬೆರೆಯುವ ಯತ್ನ ಭಾರತ ವರ್ಷದಲ್ಲಿ ನಡೆದಂತೆ ಇತರ ಸ್ಥಳಗಳಲ್ಲಿ ನಡೆಯಲಿಲ್ಲ. ಐಶ್ವರ್ಯಕ್ಕಾಗಿ ಶಕ್ತಿಗಾಗಿ ದುಡಿಯುವ ಪ್ರಯತ್ನ ಇತರ ಕಡೆಗಳಲ್ಲಿ ನಡೆದಂತೆ ಭಾರತ ವರ್ಷದಲ್ಲಿ ನಡೆಯಲಿಲ್ಲ. ಅದಕ್ಕೆ ಪ್ರತಿಯಾಗಿ ಭಾರತವರ್ಷದಲ್ಲಿ ವಿಶ್ವವನ್ನು ಅನುಭವಿಸುವ ಪ್ರಯತ್ನ ನಡೆಯಿತು. ಈ ಪ್ರಯತ್ನವನ್ನು ಮಾಡಿದವರು ನಮ್ಮ ಋಷಿಗಳು. ಇವರು ಪ್ರಶಾಂತರು. ವಿಶ್ವನಿಯಮಕ್ಕೆ ವಿರೋಧವಾದ ಪ್ರವೃತ್ತಿಗಳು ಇವರಲ್ಲಿರಲಿಲ್ಲ. ಮನುಷ್ಯರೆಲ್ಲ ಹೀಗಾಗಬೇಕೆಂದೇ ಉಪನಿಷತ್ತುಗಳ ಉಪದೇಶ. ಉಪನಿಷತ್ತುಗಳನ್ನು ತಿಳಿದು ಅವುಗಳಿಂದ ಪ್ರಯೋಜನ ಹೊಂದಿರುವ ಕೆಲವು ಪಾಶ್ಚಾತ್ಯ ತತ್ವಜ್ಞರು ಈ ಶ್ರುತಿಗಳು ದೇವರನ್ನು ನೇತಿ ನೇತಿ ಎನ್ನುತ್ತವೆ, ಇಲ್ಲಿರುವುದು ಯಾವುದೂ ಅಲ್ಲ ಎಂದು ಹೇಳುತ್ತವೆ, ಎಂದು ಪ್ರತಿಪಾದಿಸಿದಾರೆ. ಇದು ನಮ್ಮ ಸೀಮೆಯಲ್ಲಿ ಕೆಲವರ ಮತವಾಗಿರಬಹುದು. ಆದರೆ ಬ್ರಹ್ಮವನ್ನು ಎಲ್ಲ ಕಡೆಯೂ ಕಾಣುವುದೆಂಬ ಮತವೇ ನಮ್ಮಲ್ಲಿ ಬಹುಜನದ ಮತ. ಶ್ರುತಿಗಳ ದೈವ ನಿರ್ಗುಣ ನಿರಾಕಾರವಾಗಿ ಬರಿಯ ಜ್ಞಾನದಲ್ಲಿ ಅಡಗಿರುವ ತತ್ವವಲ್ಲ. ಇದೇ ರೀತಿ ಬುದ್ಧನು ಕೂಡ ಬ್ರಹ್ಮವಿಹಾರವೆಂಬುದನ್ನು ವಿಶ್ವಪ್ರೇಮ ಎಂಬ ಭಾವದಲ್ಲಿ ಪರಿಣಾಮಗೊಳಿಸಿದನು. ಬ್ರಹ್ಮವನ್ನು ಅರಿಯುವುದು ಸತ್ಯ. ಅರಿಯದಿದ್ದರೆ ಆತ್ಮನಾಶ. ಎಂದರೆ ಸೃಷ್ಟಿಯೆಲ್ಲವೂ ಮಾನವಜೀನನದ ಒಂದು ದೊಡ್ಡ ಬಿಂಬ ಎಂದು ಕಾಣು ಎಂದಲ್ಲ. ಮಾನವಜೀವನದಲ್ಲಿ ವಿಶ್ವಜೀವನದ ಬಿಂಬವನ್ನು ಕಾಣು ಎನ್ನುವುದು ಇಲ್ಲಿ ಅಭಿಪ್ರಾಯ. ಋಷಿಗಳಿಗೆ ಸಾವು ಎನ್ನುವುದು ಜೀವನದ ಕೊನೆಯೆಂದು ಕಾಣಲಿಲ್ಲ. ಹೋದಬರುವ ಎಲ್ಲ ಬಾಳನ್ನೂ ಅವರು ಸ್ವಾಗತದಿಂದ ಕರೆದರು. "ಪ್ರಾಣೋ ವಿರಾಟ್" ಎಂದು ವಿಶ್ವದ ವಿಸ್ತಾರವನ್ನು ವರ್ಣಿಸಿದರು.

ಆತ್ಮ ವಿಜ್ಞಾನ. ಎಲ್ಲದರಲ್ಲಿಯೂ ಬ್ರಹ್ಮವನ್ನು ಕಾಣು ಎಂದರೆ ಅಸಾಧ್ಯವಾಯಿತೆಂದು ತೋರಬಹುದು. ಆದರೆ ಇದರ ಅರ್ಥ ಸೃಷ್ಟಿ ಯನ್ನೆಲ್ಲ ನೋಡಿ ಅದರಲ್ಲಿ ಬ್ರಹ್ಮವನ್ನು ಕಾಣು ಎಂದಲ್ಲ. ತನ್ನಲ್ಲಿ ಬ್ರಹ್ಮವನ್ನು ಕಾಣುವುದೇ ಬ್ರಹ್ಮಜ್ಞಾನ, ಆತ್ಮಜ್ಞಾನ. ಹತ್ತಾರು ಪ್ರತ್ಯೇಕವಾದ ಅಂಶಗಳನ್ನು ಒಂದು ಸೂತ್ರದಿಂದ ತಿಳಿಯುವಂತೆ ಆತ್ಮ ವನ್ನು ತಿಳಿಯುವುದರಿಂದ ವಿಶ್ವವನ್ನು ತಿಳಿಯಬಹುದು. ಪದಗಳಲ್ಲಿ ಜೋಡಿ ಸದ ಅಕ್ಷರವನ್ನು ಕಲಿಯುವಾಗ ಮಗುವಿಗೆ ಅಕ್ಷರಗಳಿಂದ ಬೇಸರವಾಗು ತ್ತದೆ. ಅಕ್ಷರಗಳನ್ನು ಜೋಡಿಸಿದಾಗ ಅವು ಪದವಾಗಿ ಅದರ ಮನಸ್ಸಿಗೆ ಓದು ಸೊಗಸುತ್ತದೆ. ಹೀಗೆ ಅನೇಕ ವಿಷಯಗಳನ್ನು ಬೇರೆ ಬೇರೆಯಾಗಿ ತಿಳಿಯುವುದು ಮನುಷ್ಯನಿಗೆ ಬೇಸರದ ಕೆಲಸ; ಒಟ್ಟಿನ ಅರ್ಥವನ್ನು ತಿಳಿಯುವುದು ಸುಖದಾಯಕ. ನಾನೂ ವಿಶ್ವವೂ ಒಂದು ಎಂಬುದೇ ಈ ಅರ್ಥ, ಈ ಸೂತ್ರ. ಇದನ್ನು ತಿಳಿದು ಬಾಳಿದವರನ್ನು ಭಾರತವರ್ಷದಲ್ಲಿ ಮಹಾತ್ಮರೆಂದು ಕರೆದಿದಾರೆ. ಮನುಷ್ಯನು ಯಾವುದನ್ನು ಪ್ರೀತಿಸಿದರೂ ಅಲ್ಲಿ ತನ್ನನ್ನೇ ಪ್ರೀತಿಸಿಕೊಳ್ಳುತ್ತಾನೆ ಎಂದು ಶ್ರುತಿಯಲ್ಲಿ ಹೇಳಿದೆ. ಎಂದರೆ ನಮ್ಮ ಪ್ರೇಮ ಎಲ್ಲಿ ವ್ಯಾಪಿಸಿದರೆ ಅಲ್ಲಿ ನಾವು ಕಾಣುವುದು ನಮ್ಮ ಆತ್ಮವನ್ನೇ; ನಮ್ಮ ಪ್ರೀತಿಯ ವಸ್ತು ಬೇರೆಯಲ್ಲ, ಪರಮಾತ್ಮ. ಅದು ಇಲ್ಲಿದೆ; ಅಲ್ಲಿದೆ; ನಾನು ಅದನ್ನು ಇಲ್ಲಿ ಅಲ್ಲಿ ಕಾಣುತ್ತೇನೆ; ನನ್ನ ಆತ್ಮ ಅಷ್ಟರಮಟ್ಟಿಗೆ ವಿಸ್ತಾರವಾಗುತ್ತದೆ. ಹೀಗೆ ನಾನು ಎನ್ನುವುದನ್ನು ವಿಸ್ತಾರಮಾಡಿಕೊಳ್ಳುವುದು, ಸ್ವಾರ್ಥದಿಂದ ಬಿಡುಗಡೆಮಾಡಿಕೊಳ್ಳುವುದೇ ಬ್ರಹ್ಮಜ್ಞಾನದ ಮುಖ್ಯ ಸೂತ್ರ. ನಾನು ಎನ್ನುವುದು ಬೇಕಾದದು, ಸುಖ ಕರವಾದದು. ಆದರೆ ಅದನ್ನು ಹೊಡೆದು ಕಡಿದೇ ಮನುಷ್ಯನು ಬ್ರಹ್ಮವನ್ನು ತಿಳಿಯಬೇಕು. ಇದರಿಂದಲೇ ಜ್ಞಾನಿಯನ್ನು ಸಂಸ್ಕೃತದಲ್ಲಿ ದ್ವಿಜನೆಂದು ಕರೆದಿರುವುದು. ನಾನು ಎನ್ನುವುದನ್ನು ಬಿಡು ಎಂದರೆ ಶುಷ್ಕ ವೈರಾಗ್ಯವನ್ನು ಹೊದೆ ಎಂದು ಅರ್ಥವಲ್ಲ. ಬುದ್ಧನು ಹೇಳಿದನು, ಬ್ರಹ್ಮಜ್ಞಾನಿ ಹೇಳು ತ್ತಾನೆ: ಕರ್ಮವನ್ನು ಬಿಡು ಎಂದು. ಆದರೆ ಆ ಕರ್ಮ ದುಷ್ಕರ್ಮ. ಜ್ಞಾನಿ ಶೂನ್ಯತೆಯನ್ನು ಬೋಧಿಸುವುದು ನಿಜ; ಆದರೆ ಆ ಶೂನ್ಯ ಜಂಭ ಅಹಂಕಾರ ದುರಾಲೋಚನೆ ಅಜ್ಞಾನ ಇವುಗಳ ಶೂನ್ಯ. ಪ್ರೇಮ ದಯೆ

ತ್ಯ ಕ್ಷಮೆಗಳ ಶೂನ್ಯವಲ್ಲ. ಅವಿದ್ಯೆಯಿಂದ ಬಿಡುಗಡೆಹೊಂದು ಎನ್ನು ವುದೇ ಈ ಉಪದೇಶ. ನಾನು ಬೇರೆ ಎನ್ನುವುದೇ ಅವಿದ್ಯೆ. ನಿದ್ದೆಯಲ್ಲಿರು ವವನು ಜೀವಿಸಿದ್ದರೂ ಕಾರ್ಯಕ್ಷೇತ್ರದಲ್ಲಿಲ್ಲ. ಹಾಗೆ ನಾನು ಎನ್ನುತ್ತಿರು ವವನು ಬದುಕಿದ್ದರೂ ಸರಿಯಾಗಿ ಬಾಳುತ್ತಿಲ್ಲ. ಮನುಷ್ಯವರ್ಗ ತನ್ನ ಚರಿತ್ರೆಯಲ್ಲಿ ಈ ಸತ್ಯವನ್ನು ಕಲಿಯುವುದಕ್ಕೆ ತೊಡಗಿದೆ. ಆಸೆಗಳ ಕಾವಿ ನಲ್ಲಿ ಮನುಷ್ಯನಿಗೆ ಆತ್ಮಜ್ಞಾನ ಅಸಾಧ್ಯ. ಸೃಷ್ಟಿಯ ಕಾವು ಆರಿದಾಗ ಗ್ರಹ ಗಳ ಮಾಲೆಯಾಗಿ ಅವುಗಳಲ್ಲಿ ಭೂಮಿ ಕಂಡಂತೆ ಆಸೆಗಳ ಕಾವು ಹೋದಾಗ ಮನುಷ್ಯ ತನ್ನ ಆತ್ಮವನ್ನು ಕಾಣಬಹುದು. ನಾನು ಎನ್ನುವುದು ಆ ಅವಸ್ಥೆಯಲ್ಲಿ ಪರಮಾತ್ಮನನ್ನು ಅರಿಯುವ ದಾರಿಯಾಗುವುದು. ಸ್ವಪ್ರಕಾಶವಾದ ತತ್ವವೇ ನನ್ನಲ್ಲಿ ಪ್ರಕಾಶವಾಗ' ಎನ್ನುವುದು ಭಾರತ ವರ್ಷದ ಶ್ರದ್ಧಾಯುಕ್ತವಾದ ಪ್ರಾರ್ಥನೆ. ನಾನು ವಿಶ್ವದೊಂದಿಗೆ ಬೆರೆತಾಗ ತಾಯ ಗರ್ಭದ ಮಗುವಿನಂತೆ ನನಗೆ ಬೇಕಾದ ಒಳ್ಳೆಯದನ್ನೆಲ್ಲ ವಿಶ್ವವು ನನಗೆ ಕೊಡುತ್ತದೆ. ಮನಃಪೂರ್ವಕವಾಗಿ ವಿಶ್ವದೊಂದಿಗೆ ಹೀಗೆ ಬೆರೆಯಲಿ ಎನ್ನುವುದಕ್ಕಾಗಿಯೇ ಭಗವಂತನು ಮಾನವನ ಆತ್ಮವನ್ನು ಸ್ವತಂತ್ರವಾಗಿ ಬಿಟ್ಟಿದಾನೆ. ಈ ಕಾರಣದಿಂದ ಭಾರತವರ್ಷದಲ್ಲಿ ಬ್ರಹ್ಮ ಜ್ಞಾನಿಯಾದವನಿಗೆ ಕೊನೆಮೊದಲಿಲ್ಲದ ಮರ್ಯಾದೆ ದೊರೆಯುವುದು. ಇಂಥವನಿಗೆ ಜ್ಞಾನ ಭಕ್ತಿ ಕರ್ಮಗಳು ಸಮವಾಗಿ ಸಾಧ್ಯವಾಗುತ್ತವೆ. ಸುಖದುಃಖ ಲಾಭಾಲಾಭ ಜಯಾಪಜಯಗಳು ಸಮವಾಗುತ್ತವೆ. ಅಂತ್ಯ ಅನಂತ್ಯಗಳ ಮಧ್ಯೆ ಪ್ರೇಮ ತುಂಬಿ ಆ ಎರಡನ್ನೂ ಒಂದುಮಾಡುತ್ತದೆ.

ಕೆಟ್ಟದೆಂಬ ಸಮಸ್ಯೆ. ಸೃಷ್ಟಿಯಲ್ಲಿ ಕೆಟ್ಟದು ಇರುವುದೇತಕ್ಕೆ, ಎಲ್ಲವೂ ಒಳ್ಳೆಯದಾಗಿ ಏಕೆ ಇರಬಾರದು? ಈ ಪ್ರಶ್ನೆಯನ್ನು ಹಾಕಿ ಪ್ರಯೋಜನವಿಲ್ಲ. ನದಿಗೆ ದಡವಿದೆ, ಅದು ತಟಿನಿ; ಆದರೆ ಅದು ಕೇವಲ ತಟನಿ ಮಾತ್ರವಲ್ಲ, ವಾಹಿನಿಯೂ ಹೌದು. ಅಂತ್ಯವುಳ್ಳ ಬಾಳಿನಲ್ಲಿ ತಪ್ಪೂ ಕೆಟ್ಟದೂ ತಪ್ಪಿದುವಲ್ಲ. ತತ್ವಾನ್ವೇಷಣದಲ್ಲಿ ಅನ್ವೇಷಕನು ತಪ್ಪುಗಳನ್ನು ಮಾಡುವುದು ನಿಜ. ಆದರೆ ತತ್ವಾನ್ವೇಷಣದ ಉದ್ದೇಶ ತಪ್ಪನ್ನು ಮಾಡುವುದು, ತಪ್ಪನ್ನು ಹರಡುವುದು, ಅಲ್ಲ. ಹಾಗೆಯೇ ಸೃಷ್ಟಿಯ ಉದ್ದೇಶ ನೋವಲ್ಲ. ಒಂದು ಪಂಚೆಯನ್ನು ತೆಗೆದುಕೊಂಡು ಭೂತಕನ್ನಡಿ

ಯಿಂದ ಅದನ್ನು ನೋಡಿದರೆ ಅದರಲ್ಲಿ ತುಂಬ ರಂಧ್ರಗಳು ಕಾಣುವುವು. ಆದರೆ ಪಂಚೆ ರಂಧ್ರಗಳ ಸಮುಚ್ಚಯವಲ್ಲ. ಒಂದೇ ದೃಷ್ಟಿಯಿಂದ ನೋಡಿದರೆ ಲೋಕದ ತುಂಬ ನೋವೇ ಕಾಣುತ್ತದೆ. ಈ ದೃಷ್ಟಿ ತತ್ವ ಪರವಾದದಲ್ಲ. ಮಗು ನಡೆಯುತ್ತ ಬೀಳುತ್ತದೆ; ನಡೆಯುವುದಕ್ಕಿಂತ ಹೆಚ್ಚಾಗಿ ಬೀಳಬಹುದು. ಆದರೆ ಇಲ್ಲಿ ಬೀಳುವುದು ಮುಖ್ಯವಲ್ಲ; ನಡೆಯ ಬೇಕೆಂಬ ಯತ್ನ, ನಡೆದಾಗ ಬರುವ ಸಂತೋಷ, ಇವು ಮುಖ್ಯ. ಬಾಳಿನ ಎಲ್ಲ ಕುಂದೂ ಬಾಳನ್ನು ಮೀರಿದ ಕುಂದಿಲ್ಲದ ಒಂದು ಅವಸ್ಥೆ ಯನ್ನು ಸಿದ್ಧಾಂತ ಮಾಡುತ್ತದೆ. ಒಳ್ಳೆಯುದು ಯಾವುದು? ಮನುಷ್ಯನು ತನ್ನ ಸುಖದಷ್ಟನ್ನು ನೋಡಿಕೊಳ್ಳದೆ ಹೆಚ್ಚಿನ ಒಂದು ಒಳ್ಳೆಯುದಕ್ಕೆ ಹಾತೊರೆಯುತ್ತಾನೆ. ಇದೇ ವಿಶ್ವಪ್ರೇಮದ ಆರಂಭ. ಇದೇ ಒಳ್ಳೆಯುದು ಎನ್ನುವುದರ ಮೂಲ. ಈ ಭಾವನೆ ಉಂಟಾದ ಮನುಷ್ಯನಿಗೆ ತನ್ನ ನೋವು ತಿಳಿಯುವುದಿಲ್ಲ. ತನ್ನದೆನ್ನುವುದನ್ನು ವಿಶ್ವದ ಸುಖದಲ್ಲಿ ಕಾಣುವ ಸ್ಥಿತಿಯೇ ಸಿದ್ಧನ ಸ್ಥಿತಿ. ಕ್ರೈಸ್ತನು ಉಪದೇಶಿಸಿದ್ದು ಈ ಸ್ಥಿತಿಯನ್ನು; ಭಗವದ್ಗೀತೆಯ ಕರ್ಮಯೋಗಿ ಈ ಸ್ಥಿತಿಯ ಜೀವಿ; ಬುದ್ಧನ ಮುಕ್ತಿ ಮಾರ್ಗ ಇದೇ. ಆದರೆ ಸೃಷ್ಟಿ ನಾವು ಒಳ್ಳೆಯುದೆಂದು ಭಾವಿಸುವುದಕ್ಕೆ ವಿರೋಧವಾಗಿ ನಡೆದಂತೆ ಕಾಣಬಹುದು. ಇಂಥ ಸಂದರ್ಭದಲ್ಲಿ ಸೃಷ್ಟಿ ಯದು ತಪ್ಪೆಂದು ಹೇಳಬಾರದು. ನಮ್ಮ ಭಾವನೆಯಲ್ಲಿ ತಪ್ಪಿದೆಯೆ ಎಂದು ಪರೀಕ್ಷಿಸಬೇಕು. ಪೂರ್ವದಲ್ಲಿ ಮನುಷ್ಯರು ಭಗವಂತನಿಂದ ತಮ್ಮ ತಮ್ಮ ಜನದ ಸುಖವನ್ನು ಮಾತ್ರ ಬಯಸುತ್ತಿದ್ದರು. ನಮ್ಮ ಬಾಳು ವಿಸ್ತಾರವಾದ ಹಾಗೆ ನಮ್ಮ ದೃಷ್ಟಿ ವಿಸ್ತಾರವಾಗಿದೆ. ಹೀಗೆ ನೋಡಿದಲ್ಲಿ ಸೃಷ್ಟಿಯಲ್ಲಿ ಕೆಟ್ಟುದು ಇದೆ ಎನ್ನುವುದು ನಮಗೆ ಮುಖ್ಯವಾಗಿ ಕಾಣುವು ದಿಲ್ಲ; ಕೆಟ್ಟುದನ್ನು ಒಳ್ಳೆಯುದಕ್ಕೆ ತಿರುಗಿಸುವುದು ನಮ್ಮ ಕೆಲಸ ಎನ್ನು ವುದು ಕಾಣುವುದು. ನೋವು ದೈವ ಸಾನ್ನಿಧ್ಯದ ಬ್ರಹ್ಮಚಾರಿಣಿ. ಅದನ್ನು ನಾವು ನಮ್ಮ ಸುಖಕ್ಕಾಗಿ ಉಪಯೋಗಿಸಿಕೊಳ್ಳುವೆವೆಂದರೆ ಅದು ನಮಗೆ ಶಾಪ ಕೊಡುವುದು. ಅಮರವಾದ ಒಂದು ಪೂರ್ಣತೆಯ ಸೇವೆಯಲ್ಲಿ ಅದು ಇದೆಯೆಂದು ನಾವು ತಿಳಿದರೆ ಅದು ಬ್ರಹ್ಮಾನಂದದ ಒಂದು ಆಕಾರ ವಾಗಿಯೇ ನಮ್ಮ ಕಣ್ಣಿಗೆ ಕಾಣುವುದು.

ಸ್ವಾರ್ಥದ ಸಮಸ್ಯೆ. ಒಂದು ಕಡೆಯಿಂದ ನೋಡಿದರೆ ನಾನು ಸೃಷ್ಟಿಯ ಸಾವಿರ ವಸ್ತು ಸಮೂಹದಲ್ಲಿ ಒಂದು ವಸ್ತು. ಇನ್ನೊಂದು ದೃಷ್ಟಿಯಿಂದ ನಾನು ಬೇರೆ, ಉಳಿದುದೆಲ್ಲ ನನ್ನಿಂದ ಬೇರೆ. ಈ ನಾನು ಎಂಬ ಬುದ್ಧಿ ನಮಗೆ ಬಹಳ ಪ್ರಿಯವಾದುದು. ಇದನ್ನು ಉಳಿಸಿಕೊಳ್ಳುವುದಕ್ಕೆ ನಾವು ಬಹಳ ಪ್ರಯತ್ನಮಾಡುತ್ತೇವೆ. ಆತ್ಮವನ್ನು ನಾಶಮಾಡುವುದು ಭಾರತಧರ್ಮದ ಮುಖ್ಯೋದ್ದೇಶವಲ್ಲವೆ? ಎಂದು ಕೆಲವರು ಕೇಳುವರು. ಆತ್ಮವೆನ್ನುವುದು ಸ್ವಾರ್ಥವಾದಾಗ ಅದನ್ನು ನಾಶಮಾಡಬೇಕೆನ್ನುವುದೇ ಭಾರತ ಧರ್ಮದ ಉದ್ದೇಶ. ನಾನು ಎನ್ನುವುದು ವಿಶ್ವದ ನೆಯ್ಗೆಯ ಮಗ್ಗದಲ್ಲಿ ಯಾವುದೋ ಒಂದು ಕೆಲಸಕ್ಕಾಗಿ ಹೊರಟಿರುವ ಎಳೆ. ಈ ನಾನು ಬೇರೆಯಾಗಬೇಕೆಂದರೆ ಅದು ನಿಷ್ಫಲವಾಗುವುದು. ನಮಗೆ ತಿಳಿಯದ ಭಾಷೆಯ ಮಾತು ನಮ್ಮನ್ನು ತಡೆಯುತ್ತದೆ, ನಮಗೆ ಫಲವನ್ನು ಕೊಡುವುದಿಲ್ಲ. ನಾನು ಎಂಬುದರ ಸರಿಯಾದ ಅರ್ಥವನ್ನು ತಿಳಿಯದೆ ಇರುವುದು ಇದೇ ರೀತಿಯಾಗಿ ನಮ್ಮ ಜನ್ಮ ಸಫಲವಾಗುವುದನ್ನು ತಡೆಯುತ್ತದೆ, ನಮಗೆ ಏನನ್ನೂ ಸಾಧಿಸಿಕೊಡುವುದಿಲ್ಲ. ನಮ್ಮ ಸ್ವಭಾವದ ಸಹಜ ಗುಣವನ್ನು ಸಾಧಿಸಿದಾಗ ನಾವು ಸ್ವತಂತ್ರರಾಗುತ್ತೇವೆ; ಎಂದರೆ ನಮ್ಮ ಧರ್ಮವನ್ನು ನಾವು ಅನುಸರಿಸಿದಾಗ. ಆ ಧರ್ಮ ಮಾನವನ ಧರ್ಮ: ಸ್ವಾರ್ಥವನ್ನು ಬಿಡುವುದು, ವಿಶ್ವದ ಕ್ಷೇಮಕ್ಕಾಗಿ ದುಡಿಯುವುದು. ದೀಪ ತನ್ನ ಎಣ್ಣೆಯನ್ನೆಲ್ಲ ಉಳಿಸಿಕೊಂಡು ಉರಿಯದೆ ಇರುವಾಗ ದೀಪವೇ ಅಲ್ಲ. ಅದನ್ನು ಹಚ್ಚಿದರೆ ಅದರ ಸ್ವಭಾವ ಪೂರ್ಣವಾಗುತ್ತದೆ; ಅದು ತನ್ನ ಎಣ್ಣೆಯನ್ನು ಉರಿಸಿಬಿಡುತ್ತದೆ. ಇತರರ ಶುಭಕ್ಕಾಗಿ ತನ್ನನ್ನು ಹೀಗೆ ದಾನ ಮಾಡಿಕೊಳ್ಳುವುದೇ ಬುದ್ಧನು ಉಪದೇಶಿಸಿದ ನಿರ್ವಾಣ. ಈ ಸ್ಥಿತಿಯಲ್ಲಿ ಕೊಡುವುದು ಏಕೆ ಎಂದು ಯೋಚನೆ ಬರುವುದಿಲ್ಲ. ಆಗ ಮನುಷ್ಯನು ಕೊಡುವುದರಲ್ಲಿಯೇ ಸುಖವನ್ನು ಕಾಣುತ್ತಾನೆ. ಭಗವದ್ಗೀತೆಯಲ್ಲಿ ಉಪದೇಶಿಸಿರುವುದೂ ಇದೇ ವಿಷಯ. ಹೀಗೆ ಕೊಡುವುದರಲ್ಲಿ ಹಿರಿಯದೊಂದು ಆನಂದವಿದೆ. ಕಲೆಗಾರನು ತನ್ನ ಆನಂದಕ್ಕೆ ರೂಪವನ್ನು ಕೊಟ್ಟಾಗ ಇದೇ ವ್ಯಾಪಾರ ನಡೆಯುತ್ತದೆ. ತಂದೆ ಮಗುವನ್ನು ಆನಂದದಲ್ಲಿ ಮೇಲಕ್ಕೆ ಎಸೆದಾಗ ಅದನ್ನು ಅವನು ಬಿಟ್ಟಂತೆ ಕಾಣುತ್ತದೆ.

ನಿಜದಲ್ಲಿ ಅದು ಬಹಳ ಪ್ರೇಮದ ವ್ಯಾಪಾರ. ಈ ಕಾರಣದಿಂದಲೇ ಸ್ವಾರ್ಥಬುದ್ಧಿಯೂ ನಾನು ಎಂಬ ಭಾವವೂ ಮಾಯೆ ಎಂದು ನಮ್ಮವರು ಹೇಳಿರುವರು. ನಾಗರಿಕತೆ ತಿಳಿಯದ ಕಾಡುಮನುಷ್ಯನು ಸರಕಾರದ ನೋಟುಗಳನ್ನು ಸೇರಿಸಿಡುವಂತೆ ನಾವು ನಾನು ನಾನು ಎಂದು ಮಮಕಾರವನ್ನು ಸೇರಿಸಿಟ್ಟರೆ ಉಪಯೋಗವಿಲ್ಲ. ಅವನು ನೋಟನ್ನು ಸರಕಾರಕ್ಕೆ ಒಪ್ಪಿಸಿದಾಗ ಅದು ಧನವಾಗುತ್ತದೆ. ಹಾಗೆಯೇ ನಾವು ಮಮಕಾರವನ್ನು ಸೃಷ್ಟಿಗೆ ಒಪ್ಪಿಸಿದಾಗ ನಮಗೆ ಆನಂದ ದೊರೆಯುತ್ತದೆ. ನಾವು ಭಗವಂತನ ಆನಂದದ ಒಂದು ಸ್ವರೂಪ. ಆ ಆನಂದ ಅಮೃತವಾದದು. ಇದರಿಂದಲೇ ನಮಗೆ ಸಾವು ಕೊನೆಯೆಂದು ತೋರುವುದಿಲ್ಲ, ನಮ್ಮ ಬದುಕು ಅನಂತವೆಂದು ಮನಸ್ಸಿನಲ್ಲಿ ರೂಢಮೂಲವಾದ ಭಾವನೆ ಇರುವುದು. ಮನುಷ್ಯನು ಸ್ವಾತಂತ್ರ್ಯವನ್ನು ಸಾಧಿಸಿ ಅಲ್ಪವಾದ ಆಸೆಗಳನ್ನೆಲ್ಲ ಬಿಟ್ಟು ಮರಳಿ ಮರಳಿ ಹುಟ್ಟಿ ಅನಂತ ಯೌವನದಲ್ಲಿ ಉಕ್ಕಿ ಬಾಳಬೇಕು. ದಡಗಳು ತಡೆದದರಿಂದ ತನ್ನ ಮುಂದಣ ದಾರಿಯನ್ನು ಕಾಣುವ ನದಿಯಂತೆ, ಛಂದಸ್ಸು ಕಟ್ಟಿದ್ದರಿಂದ ತನ್ನ ಲಯವನ್ನು ಸಾಧಿಸುವ ಗೀತದಂತೆ, ತನ್ನ ಕಟ್ಟುಗಳಿಂದ ಬಾಳು ತನ್ನ ಮುಂದಣ ದಾರಿಯನ್ನು ತಿಳಿಯಬೇಕು. ನಾನು ಎನ್ನುವುದು ಬೇಕು; ಆದರೆ ಅದನ್ನು ಬಿಡಲಾರದೆ ಹೋದರೆ ನಮ್ಮ ಅವಸ್ಥೆ ಶೋಚನೀಯವಾಗುವುದು. ಮಗುವಿಗೆ ಆಟ ಬೇಕು. ಆದರೆ ಅದನ್ನು ಬಿಟ್ಟು ತಾಯಬಳಿ ಬರುವುದಕ್ಕೆ ಇಲ್ಲದೆ ಹೋಯಿತೆನ್ನಿ. ಆ ಆಟವೇಕೆ? ನಾನು ಎನ್ನುವುದು ನನಗೆ ಬೇಕಾಗಿರುವುದಕ್ಕೆ ಕಾರಣ ನನ್ನಲ್ಲಿ ಅನಂತ ಜೀವನ ಪ್ರಕಟವಾಗಿದೆ ಎನ್ನುವುದು.

ಯೋಗ. ಸೃಷ್ಟಿಯಲ್ಲಿರುವ ಸೊಬಗು ಭಗವಂತನು ನಮ್ಮಲ್ಲಿ ತೋರಿರುವ ಪ್ರೇಮದ ಕುರುಹು. ಇದನ್ನು ತಿಳಿದು ನಾವು ಎಲ್ಲ ವಸ್ತುಗಳಲ್ಲಿಯೂ ಪ್ರೇಮವನ್ನು ತೋರಬೇಕು. ಇದೇ ಪ್ರೇಮಯೋಗ. ಪ್ರೇಮ ತೋರಿದೆವೋ ಸೃಷ್ಟಿಯೆಲ್ಲ ನಮಗೆ ಒಂದು ಹೊಸ ಸೊಬಗಿಂದ ಕಾಣುತ್ತದೆ; ತೋರಲಿಲ್ಲವೇ ಅದು ಕೇವಲ ಭೋಗ್ಯವಸ್ತುವಾಗಿ ಮುಗಿಯುತ್ತದೆ. ಈ ಪ್ರೇಮವನ್ನು ತಿಳಿದರೆ ನಮ್ಮ ಬಾಳು ನಮಗೆ ಬಂಧನವಾಗಿ ಕಾಣುವುದಿಲ್ಲ; ಮನುಷ್ಯನು ಸ್ವತಂತ್ರನೇ

ಅಸ್ವತಂತ್ರನೇ ಎಂಬ ರೀತಿಯ ಪ್ರಶ್ನೆಗಳು ತೋರುವುದಿಲ್ಲ. ವೈಷ್ಣವ ಮತದಲ್ಲಿ ಹೇಳಿರುವಂತೆ ಭಗವಂತನೇ ಮನುಷ್ಯನಿಗಾಗಿ ಬಂಧನವನ್ನು ಒಪ್ಪಿಕೊಂಡಿದಾನೆ. ಇದನ್ನು ತಿಳಿದವನಿಗೆ ಕರ್ಮವೆನ್ನುವುದು ಬಂಧನ ವಾಗುವುದಿಲ್ಲ. ಹೀಗೆ ಬಂಧನವಾಗದಂತೆ ಕರ್ಮಮಾಡುವುದೇ ಕರ್ಮ ಯೋಗ. ಕಟ್ಟಿಲ್ಲ ಬಂಧನವಲ್ಲ; ಕಟ್ಟಿಲ್ಲದ ಸ್ಥಿತಿಯೆಲ್ಲ ಸ್ವಾತಂತ್ರ್ಯವಲ್ಲ. ದುಡಿಯದೆ ಕುಳಿತ ಮನುಷ್ಯನು ಕಸದ ಗಿಡಗಳ ಮಧ್ಯೆ ಇರಬಹುದು. ಅವನ್ನು ಕಡಿದು ತೋಟಮಾಡುವವನು ದುಡಿಯುತ್ತಿರಬಹುದು. ಈ ದುಡಿತದಲ್ಲಿ ಮನುಷ್ಯನು ತನ್ನ ಆತ್ಮದ ಸೌಂದರ್ಯವನ್ನೇ ವಿಕಾಸ ಮಾಡುತ್ತಾನೆ. ಆ ಸೌಂದರ್ಯ ಹೊರಗೆ ತೋಟದ ಸೌಂದರ್ಯವಾಗಿ ಕಾಣುತ್ತದೆ. ಕರ್ಮವೆನ್ನುವುದು ಒತ್ತಾಯದಿಂದ ಮಾಡಬೇಕಾದ ಕೆಲಸವಲ್ಲ. ಕರ್ಮವನ್ನು ಮಾಡುವುದೇ ಒಂದು ಸುಖ. ಬಲ್ಲವನಿಗೆ ಎಲ್ಲ ಕೆಲಸವೂ ಆಟವಾಗಿರುತ್ತದೆ. ಕಾಣದವನಿಗೆ ಆಟವೆನ್ನುವುದು ತನ್ನ ದಿನದ ಕೆಲಸದಿಂದ ಬೇರೆಯಾದ ಒಂದು ವ್ಯಾಪಾರ. ಲೋಕವು ಅನಂತದ ಸ್ವರೂಪವೆಂಬ ಕಾರಣದಿಂದ ಪಾಶ್ಚಾತ್ಯ ತತ್ವಜ್ಞರು ಭಗವಂತನು ಇನ್ನೂ ಬೆಳೆಯುತ್ತಿದಾನೆ ಎಂದು ಹೇಳುತ್ತಿದಾರೆ. ಕೆಲಸ ಕೆಲಸ ಕೆಲಸ ಎಂದು ಇವರಿಗೆ ಒಂದು ಹುಚ್ಚು. ಇದು ಒಂದು ಅತಿ. ಭಾರತವರ್ಷದಲ್ಲಿ ಧ್ಯಾನ ದಲ್ಲಿ ಕುಳಿತು ಕೆಲಸವನ್ನೇ ಮಾಡದೆ ಇರುವುದು ಒಂದು ಸಂಪ್ರದಾಯ ಬೆಳೆದುಬಂದಿದೆ. ಅದು ಒಂದು ಅತಿ. ಸರಿಯಾದ ದೃಷ್ಟಿಯಲ್ಲಿ ಅನಂತ ವಾದದು ಬ್ರಹ್ಮವೆನ್ನತಕ್ಕದು ಇಲ್ಲಿ ಆಗುತ್ತಿದೆ, ಅಲ್ಲಿ ಆಗಿದೆ. ಇಲ್ಲಿಯ ನಾವು ಅದರ ನಿಯಮಕ್ಕನುಸಾರವಾಗಿ ದುಡಿಯಬೇಕು. ಇನ್ನೊಂದು ಜೀವದ ಸ್ವಾರ್ಥ ನಮಗೆ ಹಿತಾರ್ಥವಾಗುವುದೇ ಶುಭ ಬುದ್ಧಿ. ಇದೇ ರೀತಿಯಲ್ಲಿ ಸೊಗಸನ್ನು ಸಾಧಿಸುವುದರಲ್ಲಿ ಸೌಂದರ್ಯ ಯೋಗ ಕಾಣು ತ್ತದೆ. ವಿಶ್ವದ ಒಂದು ನಿಯಮನಿವಿಷ್ಟವಾದ ಗತಿಯಲ್ಲಿ ನಮ್ಮ ಬಾಳಿನ ಗತಿ ಬೆರೆತಿದೆ. ಅದನ್ನರಿತು ನಮ್ಮ ಸುಖವನ್ನು ಹೊರಗೆಡಹುವುದೇ ಇದರ ತತ್ವ. ಅನಂತವನ್ನು ಸಾಧಿಸುವುದು ಗುರಿಯನ್ನು ಹೊಕ್ಕ ಅಂಬಿನಂತೆ ಬ್ರಹ್ಮನಲ್ಲಿ ಮನಸ್ಸನ್ನು ಹೊಗಿಸಿ ನಿಲ್ಲಿಸುವುದು; ಬ್ರಹ್ಮನನ್ನು ಸಂಪಾದಿ ಸುವುದಲ್ಲ. ಮನೆ ಬಿಟ್ಟು ಹೊರಟ ಪತಿ ಐಶ್ವರ್ಯವನ್ನೆಲ್ಲ ತನಗೆ

ಬಿಡಲು, ಮೈತ್ರೇಯಿ ಇದರಿಂದ ನಾನು ಸಾಧಿಸುವ ಕಲ್ಯಾಣ ಉತ್ತಮ ವಾದದೇ ಎಂದು ಕೇಳಿದಳು. ಅವನು ಅಲ್ಲವೆಂದನು. ಹಾಗಾದರೆ ಇವು ಗಳಿಂದ ನನಗೇನು ಪ್ರಯೋಜನ ಎಂದು ಅವಳು ಹೇಳಿದಳು. ಸಂಪಾದನೆ ಯೆನ್ನುವುದು ಸಂಸಾರದ ಮಾತು. ಜೀವಾತ್ಮವು ಬ್ರಹ್ಮವನ್ನರಿಯುವು ದೆಂದರೆ ನದಿ ಸಾಗರದಲ್ಲಿ ಸೇರಿದಂತೆ; ಆ ಸ್ಥಿತಿಯನ್ನು ವರ್ಣಿಸುವುದು ಸಾಧ್ಯವಲ್ಲ. ಬ್ರಹ್ಮವನ್ನು ತಿಳಿದವನು ತಿಳಿದೆನೆಂದು ಹೇಳುವುದು ಕೂಡ ಇಲ್ಲ. ಅಂತ ಅನಂತಗಳ ಮಧ್ಯೆ ಸಾಗರಗಳ ಅಂತರವಿದೆ. ಇದನ್ನು ದಾಟಬೇಕೆನ್ನುವುದೇ ನಮ್ಮ ಯತ್ನ. ಆದರೆ ಈ ಅಂತರ ಮಾನಸಿಕ ವಾದದು, ಬುದ್ಧಿಸ್ಥವಾದದು. ತಿಳಿದ ಜೀವ ಭಗವಂತನಿಗೆ ಸದಾ ಈ ಸಾಗರವನ್ನು ದಾಟಿಸು ಎಂದು ಮೊರೆಯುತ್ತಿರುತ್ತದೆ. ಭಗವಂತನಲ್ಲಿ ಈ ತೀರ ಆ ತೀರ ಎರಡೂ ಒಂದೇ. ಇದು ನನ್ನ ತೀರ ಎಂದು ತಿಳಿದಷ್ಟು ಕಾಲ ನಾನು ಅಸುಖಿಯಾಗಿಯೇ ಇರಬೇಕು. ಇದೂ ಅವನ ತೀರ ವೆಂದೊಡನೆ ಆ ಅಂತರ ಮರೆಯಿತು. "ಹೇ ದೇವ! ನನ್ನ ಮನೆಯನ್ನು ನಿನ್ನದಾಗಿ ಮಾಡಿಯಲ್ಲದೆ ನಾನು ನಿನ್ನನ್ನು ಇನ್ನೆಲ್ಲಿ ನೋಡಬಹುದು? ನನ್ನ ಈ ಕೆಲಸವನ್ನು ನಿನ್ನ ಕೆಲಸವಾಗಿ ಮಾರ್ಪಡಿಸಿದಲ್ಲದೆ ನಾನು ನಿನ್ನನ್ನು ಸೇರುವುದು ಹೇಗೆ? ನಾನು ನನ್ನ ಮನೆಯನ್ನು ಬಿಟ್ಟರೆ ನಿನ್ನ ಮನೆಯನ್ನು ಸೇರುವಂತಿಲ್ಲ. ನನ್ನ ಕೆಲಸವನ್ನು ಬಿಟ್ಟರೆ ನಿನ್ನ ಕೆಲಸದಲ್ಲಿ ಸೇರುವಂತಿಲ್ಲ. ನೀನು ನನ್ನಲ್ಲಿದೀಯೆ, ನಾನು ನಿನ್ನಲ್ಲಿದೇನೆ. ನನ್ನನ್ನು ಬಿಟ್ಟು ನೀನು ಎಂಬ ಮಾತು ನಿನ್ನನ್ನು ಬಿಟ್ಟು ನಾನು ಎಂಬ ಮಾತು ನಿರರ್ಥಕ. ಇಲ್ಲಿಯೇ ಭವಸಾಗರ; ಇಲ್ಲಿಯೇ ಆಚೆಯ ತೀರ; ತನ್ನನ್ನು ಸೇರೆಂದು ಅದು ನನ್ನನ್ನು ಕರೆಯುತ್ತಿದೆ. ಇಲ್ಲಿ; ಈಗ; ಇನ್ನೆಲ್ಲೂ ಅಲ್ಲ, ಇನ್ನೆಂದಿಗೂ ಅಲ್ಲ."

### ೫೮. ವಿವಿಧ ವಿಚಾರ

ವಿವಿಧ ವಿಷಯಗಳನ್ನು ಕುರಿತ ಕೆಲವು ಮುಖ್ಯ ಲೇಖನಗಳ ಸಾರ ವನ್ನು ಇಲ್ಲಿ ಕೊಟ್ಟಿದೆ:

ಕಲೆಯೆಂದರೇನು? ನಮಗೂ ನಾವು ವಾಸವಾಗಿರುವ ಈ ಪ್ರಪಂಚಕ್ಕೂ ಸಂಬಂಧ ಬಹು ವಿಧವಾಗಿದೆ. ಒಂದು ನಮ್ಮ ದೇಹದ

ಪೋಷಣೆಯ ವಿಷಯದ್ದು; ಒಂದು ನಮ್ಮ ಬುದ್ಧಿಗೆ ಸೇರಿದ್ದು; ಇನ್ನೊಂದು ನಮ್ಮ ಆತ್ಮಕ್ಕೆ ಸಂಬಂಧಪಟ್ಟದು. ಈ ಕೊನೆಯದು ಪ್ರೇಮದಲ್ಲಿ ಪರ್ಯವಸಾನವಾದದು; ಬುದ್ಧಿಯನ್ನು ಮಿಂಚಿದೆ, ಬುದ್ಧಿಯ ಹೊಲಬಾದ ವಿಜ್ಞಾನವನ್ನು ಮೀರಿದೆ. ವಿಜ್ಞಾನದ ಪ್ರಪಂಚ ನಮ್ಮ ಭಾವನೆಗೆ ವಿಷಯ. ಆತ್ಮದ ಪ್ರಪಂಚ ಅದಕ್ಕಿಂತ ಬಹು ಸಮೀಪ, ಬಹು ನಿಜ. ಮನುಷ್ಯನಿಗೂ ಮೃಗಗಳಿಗೂ ಇರುವ ವ್ಯತ್ಯಾಸ ಮುಖ್ಯವಾಗಿ ಇದರಲ್ಲಿ. ಅವುಗಳ ತಿಳಿವೆಲ್ಲ ಉಪಯೋಗಕ್ಕೆ ಸಾಕಾದಷ್ಟು. ಮನುಷ್ಯನ ತಿಳಿವು ಇಷ್ಟಕ್ಕೆ ಕೊನೆಯಾಗುವುದಿಲ್ಲ; ಉಪಯೋಗಕ್ಕಾಗಿ ಮಾತ್ರವಲ್ಲದೆ ಬೇರೆಯ ತೃಪ್ತಿಗಾಗಿ ಅವನು ಆಸೆಪಡುತ್ತಾನೆ. ಮನುಷ್ಯನು ಒಳ್ಳೆಯವನಾಗಿರಬೇಕೆನ್ನುವುದು ಒಳ್ಳೆಯತನದಿಂದ ಬರುವ ಫಲಕ್ಕಾಗಿ ಅಲ್ಲ. ಒಳ್ಳೆಯತನವೇ ಅವನಿಗೆ ಬೇಕು. ಹೀಗೆ ಒಂದು ಪ್ರಯೋಜನಕ್ಕಾಗಿ ಅಲ್ಲದೆ ತನ್ನ ಆತ್ಮತತ್ವದ ವ್ಯಂಜನೆಗಾಗಿ ಅವನು ಕೆಲವು ಕೆಲಸವನ್ನು ಮಾಡುತ್ತಾನೆ. ಈ ಸಂದರ್ಭದಲ್ಲಿ ಅವನು ಪ್ರಪಂಚವನ್ನು ತಿಳಿಯುವುದು ಮಾತ್ರವಲ್ಲ. ಅದನ್ನು ಅನುಭವಿಸುತ್ತಾನೆ. ಹಾಗೆ ಅವನು ಅನುಭವಿಸುವುದು ಪ್ರಪಂಚದಲ್ಲಿರುವ ತನ್ನ ಆತ್ಮವನ್ನೆ. ಈ ಅನುಭವ ಕಾವ್ಯದಲ್ಲಿ ಆಕಾರವನ್ನು ಪಡೆದಾಗ ಕಲೆ ಸೃಷ್ಟಿಯಾಗುತ್ತದೆ. ಈ ಕಾರಣದಿಂದ ಕಲೆಯೆನ್ನುವುದು ತನಗಾಗಿ ತಾನೇ ಅಪೇಕ್ಷಣೀಯ. ಅದಲ್ಲದ ಬೇರೆ ಏನೊಂದು ಪ್ರಯೋಜನ ದೊರೆಯುವುದಕ್ಕಾಗಿ ನಾವು ಅದನ್ನು ಸೃಷ್ಟಿಸುವುದಿಲ್ಲ. ಕಲೆಯಲ್ಲಿ ಸೌಂದರ್ಯ ರೂಪುಗೊಳ್ಳುತ್ತದೆ. ಆದರೆ ಸೌಂದರ್ಯವನ್ನು ಸೃಷ್ಟಿಮಾಡುವುದಕ್ಕಾಗಿ ಕಲೆ ಹೊರಡುವುದಿಲ್ಲ. ಈ ಕಾರಣದಿಂದ ಕಲೆ ರೀತಿಯಲ್ಲಿ ಇದೆಯೋ ವಿಷಯದಲ್ಲಿದೆಯೋ ಎಂದು ಮೊದಲಾದ ಪ್ರಶ್ನೆಗಳು ಅಪ್ರಸಕ್ತ. ಹೀಗೆ ವಿವೇಚನೆಮಾಡಿ ನಾವು ಕಲೆಯ ತತ್ವವನ್ನು ತಿಳಿಯಲಾರೆವು. ಮನುಷ್ಯನ ಅನುಭವಕ್ಕೆ ಬರಬೇಕು ಎಂಬ ಕಾರಣದಿಂದ ಬುದ್ಧಿಯ ವಿಷಯವಾದ ಭಾವಗಳು ಕಲೆಯಲ್ಲಿ ಬರಲಾರವೆಂದು ತಿಳಿಯಕೂಡದು. ಅಂಥ ಭಾವನೆಗಳು ಕಲೆಯಲ್ಲಿ ಬರಬಹುದು. ಆದರೆ ಹಾಗೆ ಬರುವ ಮೊದಲು ಅವು ವ್ಯಕ್ತಿಗಳಾಗಬೇಕು. ಅವುಗಳನ್ನು ಹೇಳುವ ಶಬ್ದಕ್ಕೆ ಜೀವ ಬರಬೇಕು. ಎಂದರೆ ಕಲೆ ವಸ್ತುವಿನ ಅಂತರ್ಯದ

ತತ್ವವನ್ನು ಹೊರಗೆಡಹುತ್ತದೆ. ಬರಿಯ ಹೊರಗಣ ವರ್ಣನೆಯನ್ನು ಮಾಡುವುದಿಲ್ಲ. ಪೂರ್ವದೇಶದ ಕಲೆ ಮುಖ್ಯವಾಗಿ ಈ ಗುರಿಯಿಂದ ಮುಂದೆ ಸಾಗಿದೆ. ನಮ್ಮ ಋಷಿಗಳು ಬ್ರಹ್ಮವನ್ನು ಅರಿತಂತೆ ನಮ್ಮ ಕಲೋಪಾಸಕರು ತಮ್ಮ ಕಲೆಯಿಂದ ಬ್ರಹ್ಮವನ್ನು ಸಾಧಿಸಿದಾರೆ, ಪರಮಪುರುಷನನ್ನು ತಮ್ಮ ಕಾವ್ಯದಲ್ಲಿ ವ್ಯಕ್ತಗೊಳಿಸಿದಾರೆ. ಈ ಕಾರಣ ದಿಂದ ಭಾರತವರ್ಷದ ಸಾಹಿತ್ಯದಲ್ಲಿ ಮತವಿಷಯವಾದ ಕವಿತೆ ತುಂಬಿದೆ. ದೇವರು ನಮ್ಮ ಜನಕ್ಕೆ ಎಲ್ಲಿಯೋ ದೂರದಲ್ಲಿರುವ ದೇವರಲ್ಲ. ಅವನು ದೇವಾಲಯದಲ್ಲಿ ಇರುವಂತೆ ನಮ್ಮ ಮನೆಗಳಲ್ಲಿಯೂ ಇದಾನೆ. ಪ್ರೀತಿಯ ಸಂಬಂಧದಲ್ಲೆಲ್ಲ ನಾವು ಅವನ ಸಮೀಪ್ಯವನ್ನು ಅನುಭವಿಸುತ್ತೇವೆ. ನಮ್ಮ ಹಬ್ಬಗಳಲ್ಲಿ ಅವನು ನಮ್ಮ ಆರಾಧನದ ಪ್ರಮುಖ ಅತಿಥಿ. ಹೂವು ಹಣ್ಣಿನ-ಕಾಲದಲ್ಲಿ, ಪರಿಣತವಾದ ವರ್ಷದ ತುಂಬಿದ ಬೆಳಸಿನಲ್ಲಿ, ನಾವು ಅವನ ಪೀತಾಂಬರದ ಅಂಚನ್ನು ನೋಡುತ್ತೇವೆ, ಅವನ ಹೆಜ್ಜೆಯ ಸಪ್ಪುಳನ್ನು ಕೇಳುತ್ತೇವೆ. ನಮ್ಮ ಪೂಜೆಯ ಎಲ್ಲ ನಿಜವಾದ ವಸ್ತುವಿನಲ್ಲೂ ನಾವು ಅವನನ್ನು ಪೂಜಿಸುತ್ತೇವೆ; ನಮ್ಮ ಪ್ರೀತಿಯ ನಿಜವಾದ ಆಶಯಗಳಲ್ಲೆಲ್ಲ ಅವನನ್ನು ಪ್ರೀತಿಸುತ್ತೇವೆ. ಸತ್ಯವಂತೆಯಾದ ಸ್ತ್ರೀಯಲ್ಲಿ, ಸತ್ಯವಂತನಾದ ಪುರುಷನಲ್ಲಿ, ನಾವು ಅವನನ್ನು ನೋಡು ತ್ತೇವೆ. ಅವನು ನಮ್ಮ ಮಕ್ಕಳಲ್ಲಿ ಮರಳಿ ಮರಳಿ ಆಕಾರವನ್ನು ತಳೆಯು ತ್ತಾನೆ. ಅನಾದಿಯ ನಿತ್ಯಶಿಶು ಅವನು. ಆದಕಾರಣದಿಂದಲೇ ನಮ್ಮ ಪ್ರೇಮ ಗೀತೆಗಳು ದೇವರ ಕೀರ್ತನೆಗಳು. ನಮ್ಮ ಮಗನ ಹುಟ್ಟಿದ ಹಬ್ಬ, ಮಗಳು ತೌರುಮನೆಗೆ ಬರುವುದು ಗಂಡನ ಮನೆಗೆ ಹೋಗುವುದು, ಇಂಥ ವಿಷಯಗಳನ್ನು ಸಾಹಿತ್ಯ ಪರತತ್ವದ ಮಾತೆಂಬಂತೆ ಕೃತಿಮಾಡಿದೆ. ಈ ದೃಷ್ಟಿಯಿಂದ ನೋಡಿದರೆ ಕಾವ್ಯಕ್ಕೆ ವಿಷಯ ಎನ್ನುವುದು ನಾವು ಎಷ್ಟು ಅನುಭವವನ್ನು ವಿಸ್ತಾರ ಮಾಡಿಕೊಂಡರೆ ಅಷ್ಟು ಹೆಚ್ಚುವುದು. ರಾಜರಾಣಿಯವರ ಸಂಸಾರ ಮಾತ್ರ ಕಾವ್ಯಕ್ಕೆ ವಸ್ತುವಲ್ಲ; ಸಾಮಾನ್ಯ ಜೀವನವೂ ಯೋಗ್ಯ ವಸ್ತುವೇ. ಈ ಅನುಭವ ಮನುಷ್ಯನಿಗೆ ಬಹಳ ಆವಶ್ಯಕವಾದ ಕಾರಣ ಅದು ಅಪಿರೀಕ್ಷಿತವಾದ ಅನೇಕ ಕಡೆಗಳಲ್ಲಿ ಕಲೆಯನ್ನು ತೋರಿಸುತ್ತದೆ: ರೈಲ್ವೆ ಸ್ಟೇಷನ್ನಿನಲ್ಲಿ ಗಿರಣಿಗಳಲ್ಲಿ ಬಂದೀ

ಖಾನೆಗಳಲ್ಲಿ. ಎಂದರೆ ಕಲೆಯೆನ್ನುವುದು ಆತ್ಮದ ಐಶ್ವರ್ಯದ ಹೊರ ಹೊಮ್ಮು. ಬೇರೆ ಯಾವುದರಿಂದಲೂ ತುಂಬದ ಒಂದು ಪ್ರವೃತ್ತಿ ಅದರಿಂದ ಪೂರ್ತಿಯಾಗುತ್ತದೆ. ಅದರಲ್ಲಿ ನಾವು ಅಮರವಾದ ಒಂದು ತತ್ವಕ್ಕೂ ನಮಗೂ ಬೆಳೆಯುವ ಪ್ರೇಮವನ್ನು ವ್ಯಕ್ತಪಡಿಸುತ್ತೇವೆ. ಇದರಿಂದಲೇ ನಮ್ಮ ಪೂರ್ವಿಕರು ಸುಂದರವಾದ ಸ್ಥಳಗಳಲ್ಲಿ ಯಾತ್ರಾ ಸ್ಥಾನಗಳನ್ನು ಮಾಡಿದರು.

ಆತ್ಮಪ್ರಪಂಚ. ವಿಜ್ಞಾನ ನಮ್ಮ ಇಂದ್ರಿಯಗಳ ಅನುಭವವನ್ನು ಅತಂತ್ರವೆನ್ನುತ್ತದೆ; ಅವುಗಳಿಗೆ ಅದು ಬಹಳ ಬೆಲೆಯನ್ನು ಕೊಡುವುದಿಲ್ಲ. ವ್ಯಕ್ತಿಗಾದರೋ ಈ ಅತಂತ್ರವಾದ ಅನುಭವವೆನ್ನುವುದೇ ನಿಜವಾದ ಅನುಭವ. ನ್ಯಾಯವಾಗಿ ನೋಡಿದರೆ ವಿಜ್ಞಾನ ಯಾವುದನ್ನು ಬಹಳ ಪರೀಕ್ಷೆಯಿಂದ ಸರಿ ಎಂದು ಹೇಳುತ್ತದೆಯೋ ಅದರಂತೆಯೇ ಬರಿಯ ಅನುಭವದಿಂದ ನಾವು ಗ್ರಹಿಸುವ ವಿಷಯವೂ ನಿಜವಾದದು. ಮನುಷ್ಯನ ಅನುಭವಕ್ಕೆ ವಿಷಯಗಳು ಕಾಲದೇಶಗಳು. ಈ ಎರಡರಲ್ಲಿಯೂ ಅನುಭವಕ್ಕೆ ಬರತಕ್ಕದು ಬೇರೊಂದು ದೃಷ್ಟಿಯಿಂದ ನಿಜವಲ್ಲದಿದ್ದರೂ ನಮ್ಮ ದೃಷ್ಟಿಯಿಂದ ನಮಗೆ ನಿಜವಾಗಿರುತ್ತದೆ. ಒಂದು ತಿಂಗಳನ್ನು ಒಂದು ದಿವಸದಂತೆ ಓಡಿಸಬಲ್ಲೆವಾದರೆ ಸುಮ್ಮನಿರುವ ಮರಗಳು ಬೆಳೆಯು ವಂತೆ ಕಾಣುವುವು. ಒಂದು ಕ್ಷಣವನ್ನು ಒಂದು ತಿಂಗಳಂತೆ ಎಳೆದೆವಾದರೆ ಒಂದು ಜಲಪಾತ ನಿಶ್ಚಲವಾಗಿ ಮರದಂತೆ ಕಾಣುವುದು. ಎಂದರೆ ನಮ್ಮ ಮನಸ್ಸು ಕಾಲ ದೇಶದ ಯಾವ ಪರಿಮಿತಿಯನ್ನಿಟ್ಟುಕೊಂಡು ಆಗಿದೆಯೋ ಅದಕ್ಕೆ ಅನುಸಾರವಾಗಿ ಸೃಷ್ಟಿ ನಮ್ಮ ಅನುಭವಕ್ಕೆ ಬರುತ್ತದೆ. ಎಂದರೆ ಆ ಸೃಷ್ಟಿಯ ಸ್ಥಿತಿ ಬೇರೆ ಯಾವುದೋ ಒಂದಿದೆಯೆಂದೂ ಅದು ಮನಸ್ಸಿನಲ್ಲಿ ಪ್ರತಿಬಿಂಬವಾಗುವುದು ಹೀಗೆ ಎಂದೂ ಹೇಳುವುದಾಗದು. ನಮ್ಮ ಪಾಲಿಗೆ ಸೃಷ್ಟಿ ಇರುವುದೆನ್ನುವುದೇ ಹಾಗೆ. ಈ ಕಾರಣದಿಂದ ಆತ್ಮದ ಸಂಸ್ಕಾರ ಬೇರೆಯಾಗುವಹಾಗೆ ಅನುಭವ ಬೇರೆಯಾಗುತ್ತದೆ. ಒಂದು ಗೀತದ ಹಿಂದೆ ಒಂದು ಮನಸ್ಸಿರುತ್ತದೆ. ಗೀತೆಗೆ ಪ್ರಸ್ತಾರಹಾಕಿದರೆ ಆ ಮನಸ್ಸನ್ನು ತಿಳಿದಂತಾಗುವುದಿಲ್ಲ. ಆ ಗೀತೆಯಲ್ಲಿ ಅದರ ಪ್ರಸ್ತಾರಕ್ಕೆ ಮಿಗಿಲಾದ ಒಂದು ತತ್ವವಿದೆ. ಒಂದೇ ಆಟದಲ್ಲಿ ಹತ್ತು ಜನಕ್ಕೆ ಹತ್ತು ವಿಧವಾದ

ಸುಖ ಕಾಣಬಹುದು. ಇಂಥ ಎಡೆಯಲ್ಲಿ ಮುಖ್ಯವಾದದು ಆತ್ಮತತ್ವ. ಅನಂತವಾದ ವಸ್ತು ಅಂತ್ಯವುಳ್ಳ ಸೃಷ್ಟಿಯಲ್ಲಿ ತನ್ನ ವ್ಯಂಜನೆಗಾಗಿ ಜೀವಗಳನ್ನು ಮಾಡಿಕೊಂಡಿದೆ. ವಿಜ್ಞಾನಕ್ಕೆ ಈ ಮಾತು ಅವಿವೇಕವೆಂದು ಕಾಣಬಹುದು. ಅನಂತವಾದದು ಅಂತ್ಯದಲ್ಲಿ ರೂಪುಗೊಂಡಿದೆ ಎನ್ನುವುದು ಹೇಗೆ? ಆದರೆ ಈ ಅವಿವೇಕವು ಬಹು ಹಿಂದಣಿಂದ ಬಂದಿರತಕ್ಕದು. ವಿಜ್ಞಾನ ಮಾತ್ರದಿಂದ ಮನುಷ್ಯನಿಗೆ ನಿಜ ತಿಳಿಯುವುದಿಲ್ಲ. ಹಾಗೆಯೇ ಅನಂತವೆನ್ನುವುದನ್ನು ಮಾತ್ರ ಹುಡುಕುವುದರಿಂದಲೂ ಫಲವಿಲ್ಲ. ಒಂದು ಕಥೆಯಲ್ಲಿ ಒಂದೊಂದು ವಾಕ್ಯಕ್ಕೂ ಅರ್ಥವಿದೆ; ಹಾಗೆಯೇ ಎಲ್ಲ ವಾಕ್ಯವೂ ಸೇರಿ ಒಂದು ಅರ್ಥವಿದೆ. ಮಾತಿಗೆ ಮಾತಿಗೆ ಸಂಬಂಧವಿಲ್ಲದೆ ವಾಕ್ಯವಾಕ್ಯಕ್ಕೆ ಸಂಬಂಧವಿಲ್ಲದಿದ್ದರೆ ನಾವು ಮಾತಿನ ಹಿಂದೆ ಒಂದು ಮನಸ್ಸಿತ್ತೆಂದು ಹೇಳುವಂತಿಲ್ಲ. ವಾಕ್ಯಗಳು ಸೇರಿ ಒಂದು ಕಥೆ ಆಗುವುದರಿಂದಲೇ ಅದನ್ನು ಹೇಳಿದ್ದು ಒಂದು ಮನಸ್ಸು ಎಂದು ವ್ಯಕ್ತ ವಾಗುವುದು. ಹಾಗೆಯೇ ಅರ್ಥಪೂರ್ಣವಾದ ಈ ಸೃಷ್ಟಿಯಲ್ಲಿ ಅನಂತ ವಾದ ಒಂದು ತತ್ವ ಕಾಣುತ್ತದೆ. ತತ್ವ ಕಾಣುವುದಕ್ಕೆ ಆಕಾರ ಆವಶ್ಯಕ. ಅನಂತವಾದ ತತ್ವ ಅಂತ್ಯವುಳ್ಳ ಆಕಾರದಲ್ಲಿ ಕಾಣಲಾರದ್ದರಿಂದ ಆ ಆಕಾರವು ಮಾರ್ಪಡುತ್ತಲೇ ಇರಬೇಕು. ಅದರಿಂದಲೇ ಈಶೋಪನಿಷತ್ತಿ ನಲ್ಲಿ ಈ ಜಗತ್ತೆಲ್ಲ ಈಶನದೆಂದು ತಿಳಿ ಎಂದು ಹೇಳಿರುವುದು. ರೂಪವನ್ನು ಮಾತ್ರ ನೋಡಿದರೆ ಎಲ್ಲವೂ ಮಾಯೆಯೆಂದು ಕಾಣುವುದು. ಒಂದು ಹೂವನ್ನು ಕಡಿದು ಅರೆದು ಪುಡಿಮಾಡಿದರೆ ಅದರ ಸ್ವರೂಪ ನಮಗೆ ತಿಳಿಯು ವುದಿಲ್ಲ. ಅದರ ಸ್ವರೂಪ ನಮಗೆ ತಿಳಿಯುವುದು ನಾವು ಅದರ ಸೊಗಸನ್ನು ಅನುಭವಿಸಿದಾಗ. ಅದರಿಂದಲೇ ಉಪನಿಷತ್ಕಾರರು, ಪರತತ್ವವನ್ನುವರ್ಣಿಸ ಹೋದ ಮಾತು ಹಿಂದಿರುಗುತ್ತದೆ, ಮನಸ್ಸೂ ಹಾಗೆಯೇ, ಎಂದು ಹೇಳಿ ದರು. ಆದರೆ ಬ್ರಹ್ಮದ ಆನಂದವನ್ನು ಅನುಭವಿಸಿದವನು ಯಾವುದಕ್ಕೂ ಭಯಪಡಬೇಕಾದದಿಲ್ಲ. ಮನುಷ್ಯನು ಅಂತ್ಯವುಳ್ಳದರಲ್ಲಿ ಕೆಲಸಮಾಡ ಬೇಕು, ಅನಂತವಾದದರಲ್ಲಿ ಸುಖಿಯಾಗಬೇಕು. ಆದುದರಿಂದ ಪ್ರಪಂಚ ದಲ್ಲಿ ಕೆಲಸದಲ್ಲಿ ತೊಡಗುವುದು ಅವನ ಕರ್ತವ್ಯ. ಹಾಗೆ ಮಾಡದೆ ಇದ್ದರೆ ಮನುಷ್ಯನು ಮಾನವಜನ್ಮದಿಂದ ಮುಂದುವರಿಯಲಾರನು. ಕೆಲಸ ಮಾಡ

ಬೇಕು; ಕೆಲಸಕ್ಕೆ ಮಿಗಿಲಾಗಿರಬೇಕು. ಬಾಳ ಕೆಲಸಕ್ಕೆ ಮಿಗಿಲಾಗಿರದೆ ಅದರ ತೊಡಕಿಗೆ ಸಿಕ್ಕಿದೆವಾದರೆ ತನ್ನ ಹಳ್ಳಕ್ಕೆ ಹೆಚ್ಚು ಮರಳನ್ನು ಹೊತ್ತು ತರುವ ಹೊಳೆಯಂತೆ ನಮ್ಮ ಬದುಕಿನ ದಾರಿಯನ್ನು ನಾವೇ ಮುಚ್ಚಿ ಬಿಡುವೆವು. ಕೆಲಸ ಆವಶ್ಯಕ; ಆದರೆ ಅದಕ್ಕೆ ಮಿಂಚಿದ ಬದುಕು ಒಂದಿದೆ; ಅದೇ ಪರಮಾತ್ಮನ ಬದುಕು. ನಾವು ಇದನ್ನು ತಿಳಿದು ನಡೆಯಬೇಕು. ಇದನ್ನು ತಿಳಿಯುವುದರಿಂದ ನಮಗೆ ಬಾಳಿನಲ್ಲಿ ಎಂದಿನಂತೆ ಶ್ರದ್ಧೆಯೇನೋ ಇರುತ್ತದೆ; ಆದರೂ ತ್ಯಾಗದಲ್ಲಿ ಸುಖ ಕಾಣುತ್ತದೆ. ಮಾನವನು ತನ್ನ ಹೃದಯದೊಳಗೆ ಪರತತ್ವವನ್ನು ಅರಿತಿದಾನೆ. ಅದನ್ನನುಭವಿಸಿದ ಉಪನಿಷತ್ಕಾರನು ಪ್ರಪಂಚವನ್ನು ಬಿಡಲಿಲ್ಲ, ಪರತತ್ವವನ್ನು ಉಳಿಸಿಕೊಂಡನು. ಇದನ್ನು ಬಲ್ಲವನಿಗೆ ಈ ಲೋಕ ಎಲ್ಲಿಗೋ ಹೋಗುವ ಜೀವನಿಗೆ ದಾರಿಯ ಒಂದು ಛತ್ರವೆಂದು ತೋರುವುದಿಲ್ಲ; ಅದಕ್ಕೆ ಇಷ್ಟವಾದ ಆವಾಸ ಸ್ಥಾನವಾಗಿ ಕಾಣುತ್ತದೆ. ಬಲ್ಲ ಜೀವನಿಗೆ ಈ ಸೃಷ್ಟಿ ತಾನು ಅಪೇಕ್ಷಿಸುವ ಪರತತ್ವದ ಆನಂದ ಮಂದಿರ.

ದ್ವಿಜತ್ವ. ಒಂದು ಮರ ಮತ್ತು ಅದು ಇರುವ ಪ್ರಪಂಚ ಎಂಬಲ್ಲಿ, ಒಬ್ಬ ವ್ಯಕ್ತಿ ಅವನಿರುವ ಪ್ರಪಂಚ ಎಂಬಲ್ಲಿ, ಒಂದು ವಿಧದಲ್ಲಿ ದ್ವೈತ ಇದೆ. ಆದರೆ ಇದು ಒಂದೇ ವಸ್ತುವಿನ ಅಂಗಗಳ ದ್ವಿಧಾಭಾವ. ಮರ ತಾನಿರುವ ಸೃಷ್ಟಿಯ ಸ್ಥಾನದೊಂದಿಗೆ ಬೆರೆತು ಬೆಳೆದ ಹಾಗೆಲ್ಲ ದೊಡ್ಡದಾಗುತ್ತದೆ. ಹೀಗೆಯೇ ಒಬ್ಬ ವ್ಯಕ್ತಿಯೂ ಸೃಷ್ಟಿಯ ನಿಯಮಕ್ಕೆ ಅನುಗುಣವಾಗಿ ಬೆಳೆದ ಹಾಗೆ ದೊಡ್ಡವನಾಗುತ್ತಾನೆ. ಬದುಕು ಮೇಲಣ ಮೆಟ್ಟಲಿಗೆ ಹೋದಹಾಗೆಲ್ಲ ಒಂದು ವಸ್ತು ಯಾವುದೋ ಒಂದು ಗುಣದಲ್ಲಿ ಮುಂದುವರಿಯುವುದೆನ್ನುವುದು, ಇತರ ಗುಣಗಳಿಗಾಗಿ ಇತರ ವಸ್ತುಗಳನ್ನು ಅವಲಂಬಿಸಿರುವುದೆನ್ನುವುದು, ಹೆಚ್ಚುತ್ತದೆ. ಮೇಲ್ತರದ ಜೀವಗಳಲ್ಲಿ ಲಿಂಗಭೇದ ಉಂಟಾಗುವುದು ಇದಕ್ಕೆ ಉದಾಹರಣೆ. ಹೀಗೆ ಒಂದೊಂದು ವಸ್ತುವೂ ಸಾಪೇಕ್ಷವಾಗಿ ಅವಲಂಬಿಯಾಗಿ ತಾನೂ ಆ ಬೇರೆಯ ಇನ್ನೊಂದು ವಸ್ತುವೂ ಒಂದು ಎಂಬುದನ್ನು ತೀವ್ರವಾಗಿ ಅನುಭವಿಸಬೇಕಾಗುತ್ತದೆ. ಅಪೇಕ್ಷೆಯ ಕಾರಣದಿಂದ ಮೈತ್ರಿ ಬೆಳೆಯುತ್ತದೆ; ಸೃಷ್ಟಿಯೊಂದಿಗೆ ಸಾಮರಸ್ಯವು ಆವಶ್ಯಕ ಎಂಬುದು ಕಾಣುತ್ತದೆ.

ಮರಗಳಲ್ಲಿ ಮೃಗಗಳಲ್ಲಿ ದೇಹಸಂಬಂಧವಾಗಿ ಮಾತ್ರ ಇರುವ ಈ ಸಾಪೇಕ್ಷತೆ ಮನುಷ್ಯನಲ್ಲಿ ನೀತಿಯಲ್ಲಿಯೂ ಕಾಣುತ್ತದೆ. ಎದುರಿಗೆ ಕಾಣುವುದು ಅಸಮಗ್ರಸ್ಥಿತಿಯಾದುದರಿಂದ ಸಮಗ್ರವಾದ ಸ್ಥಿತಿಯೊಂದು ಊಹೆಗೆ ಬರುತ್ತದೆ. ಎಲ್ಲದರೊಂದಿಗೆ ಸೇರಿ ಒಂದಾಗುವುದು ಎನ್ನುವುದೇ ಮನುಷ್ಯನ ಆತ್ಮದ ದೊಡ್ಡ ಆಸೆ. ಈ ಉದ್ದೇಶದಿಂದ ಉತ್ತಮ ಜೀವವು ತಾನು ಬೆಳೆಯುವಲ್ಲಿ ತೆಗೆದುಕೊಳ್ಳುವಂತೆ ಕೊಡಲೂ ಕೊಡುತ್ತದೆ; ಹಾಗೆ ಕೊಟ್ಟು ಅಸಂಪೂರ್ಣವಾದ ಬಾಳನ್ನು ಸಂಪೂರ್ಣವಾಗಿ ಮಾಡಲು ಯತ್ನಿಸುತ್ತದೆ. ಈ ದೃಷ್ಟಿಯಿಂದ ನೋಡಿದರೆ ವಿಜ್ಞಾನಶಾಸ್ತ್ರವೆಲ್ಲವೂ ಸಂಪೂರ್ಣತೆಯನ್ನು ಸಾಧಿಸುವುದಕ್ಕೆ ಬೇಕಾದ ಶಕ್ತಿಗಾಗಿ ಮಾನವನು ಮಾಡಿರುವ ಪ್ರಯತ್ನ. ಇರುವಷ್ಟರಿಂದ ತೃಪ್ತನಾಗದೆ ಬೇರೆ ಯಾವುದೋ ಕಲ್ಯಾಣಕ್ಕೆ ಹಾರೈಸುವುದರಿಂದ ಮಾನವನು ಆ ಕಲ್ಯಾಣದ ವಿಷಯದಲ್ಲಿ ನಂಬಿಕೆಯುಳ್ಳವನಾಗಿದಾನೆ ಎನ್ನುವುದು ಕಾಣುತ್ತದೆ. ಈ ಕಲ್ಯಾಣವನ್ನು ಸಾಧಿಸುವುದಕ್ಕಾಗಿ ಮಾನವನು ಪ್ರಕೃತಿಯನ್ನು ವಿರೋಧಿಸಿದಂತೆ ಕಾಣಬಹುದು. ಇದು ಹಗೆಯಿಂದ ಬರುವ ವಿರೋಧವಲ್ಲ. ತಾಯ ಗರ್ಭದಿಂದ ಬೇರೆಯಾಗಲು ಯತ್ನಿಸುವ ಮಗುವಿನ ರೀತಿ. ಮತಗಳಲ್ಲಿ ಅಲ್ಲಲ್ಲಿ ಪ್ರಪಂಚವನ್ನು ಹಳಿಯುವ ಭಾವ ಕಾಣುತ್ತದೆ. ಅದೆಲ್ಲದರ ಅರ್ಥವೂ ಇದೇ. ಮನುಷ್ಯನು ಇರುವಷ್ಟು ಸುಖದಿಂದ ತೃಪ್ತನಾಗಲಾರನು. ಅವನು ಸಾಧಿಸಬೇಕಾದ ಹೆಚ್ಚಿನ ಸುಖ ಬೇರೆ ಇದೆ. ಇದು ಯಾವುದೆಂದರೆ ವಿಶ್ವದೊಂದಿಗೆ ಬೆರೆಯುವುದು. ವಿಸ್ತಾರವಾದ ವಿಶ್ವದೊಂದಿಗೆ ತಾನು ಬೆರೆಯುವುದೆಂದರೆ ಏನು? ತಾನೂ ಅನಂತನಾಗುವುದು. ಎಂದರೆ ಅನಂತವಾದ ವಸ್ತುಚಯವನ್ನು ಪರಿಚಯಮಾಡಿಕೊಳ್ಳುವುದರಿಂದ ಎಂದಲ್ಲ. ತನ್ನನ್ನು ತಾನು ತಿಳಿದುಕೊಳ್ಳುವುದರಿಂದ ಮನುಷ್ಯನು ಈ ಪರಮ ಉದ್ದೇಶವನ್ನು ಸಾಧಿಸುವನು. ನಾನು ಎನ್ನುವುದು ಬೇರೆ ಎಂದು ಸಾಧಿಸುವುದು ಮೊದಲ ಅವಸ್ಥೆ. ನಮ್ಮದೊಂದು ಪ್ರಪಂಚ ಇರುವುದಕ್ಕೆ ಈ ನಾನು ಎನ್ನುವುದರ ಭಾವ ಅವಶ್ಯಕ. ಇದಾದಮೇಲೆ, ಈ ಪ್ರಪಂಚ ಇತರರ ಪ್ರಪಂಚವೂ ಹೌದು, ಇದು ನಮ್ಮೆಲ್ಲರ ಪ್ರಪಂಚ, ನಾವೆಲ್ಲರೂ ಒಂದು, ಒಂದು ಮಹಾತತ್ವದ ಬಿಂಬಗಳು ನಾವು, ಎಂದು

ಕಾಣುವುದು ಎರಡನೆಯ ಅವಸ್ಥೆ. ಈ ಸ್ಥಿತಿಗೆ ಬರಬೇಕಾದರೆ ಮನುಷ್ಯನು ಆಸೆಗಳನ್ನು ಜಯಿಸಬೇಕು; ತನ್ನ ಶಕ್ತಿಯನ್ನು ಉಪಯೋಗಿಸಿ ಶುಭವನ್ನು ಸೃಜಿಸಬೇಕು; ತನ್ನಂತೆ ಇತರರೂ ಸ್ವತಂತ್ರರಾಗಿರುವುದಕ್ಕೆ ಅವಕಾಶ ಕೊಡಬೇಕು; ದೇವರು ಮಾನವನನ್ನು ಹುಡುಕುತ್ತಿರುವಂತೆ ತಾನು ದೇವರನ್ನು ಹುಡುಕುತ್ತಾ ಹೋಗಬೇಕು. ಮಾನವನ ಚರಿತ್ರೆಯಲ್ಲಿ ಈ ಬೆಳವಣಿಗೆ ಕಾಣುತ್ತದೆ. ಮಾನವನು ಅನೇಕ ವೇಳೆ ಸೋತು, ಅನೇಕ ವೇಳೆ ನಿಂತು, ಅನೇಕ ವೇಳೆ ಹಿಮ್ಮೆಟ್ಟಿದಂತೆ ಕಂಡು, ಈ ಭಾವವನ್ನು ಮತದಲ್ಲಿ ಮುಂದುವರಿಸಿದಾನೆ. ಈ ಯತ್ನದಲ್ಲಿ ಮನುಷ್ಯನು ಅನುಭವಿಸಿರುವ ಅಪಜಯವೆಲ್ಲ ಮುಂದೆ ಬರುವ ಜಯವನ್ನು ಉದ್ಘೋಷಿಸಿ ಹೇಳುತ್ತದೆ. ಬದುಕು ಅಸಂಪೂರ್ಣವಾಗಿರುವುದು, ಬದುಕಿನಲ್ಲಿ ಕಷ್ಟವಿರುವುದು, ನಮಗೆ ಸಂತೋಷಕ್ಕೆ ದೊಡ್ಡ ಕಾರಣ. ಇದು ಅಸಂಪೂರ್ಣ, ಇಲ್ಲಿ ಕಷ್ಟ ಎಂಬಲ್ಲಿಯೇ ಸಂಪೂರ್ಣವಾದದು, ಆನಂದಮಯವಾದದು ನಮ್ಮ ಗುರಿ ಒಂದು ಇದೆ ಎಂದು ನಿರ್ಧರವಾಗುತ್ತದೆ. ಆ ಸ್ಥಿತಿ ಈ ಸ್ಥಿತಿಯ ಪರಮ ಗತಿ, ಪರಮ ಸಂಪತ್ತು, ಪರಮ ಲೋಕ, ಪರಮ ಆನಂದ.

ಕವಿಯ ಧರ್ಮ. ಸೃಷ್ಟಿಯ ತತ್ತ್ವ ಸಂಖ್ಯೆಯಲ್ಲ, ವಿಸ್ತಾರವಲ್ಲ; ಇವುಗಳನ್ನು ಒಳಗೊಂಡ ಏಕತೆ. ಅದನ್ನು ತಿಳಿಯುವುದಕ್ಕೆ ಪರೀಕ್ಷೆ ಸಾಧನವಲ್ಲ; ಸಹಾನುಭೂತಿ ಸಾಧನ. ಕವಿ ಬಾಲಕನಾಗಿದ್ದಾಗ ಮರಗಳೆಲ್ಲ ಸತ್ವಗಳೆಂಬ ಭಾವನೆಯಲ್ಲಿದ್ದರು. ಅವು ಸತ್ವಗಳೆನ್ನುವುದು ನಿಜ. ಇದೇ ಅಭಿಪ್ರಾಯವನ್ನು ವರ್ಡ್ಸ್‌ವರ್ತ್ ಕವಿ ಹೇಳಿದಾನೆ. ಬಾಲ್ಯದ ಈ ಭಾವನೆ ವಯಸ್ಸಾದಮೇಲೂ ಇರುತ್ತದೆ. ಚಂದ್ರನಿಂದ ಒಬ್ಬ ಮನುಷ್ಯನು ಭೂಲೋಕಕ್ಕೆ ಬಂದು ಗ್ರಾಮೋಫೋನ್ ಹಾಡುವುದನ್ನು ಕೇಳಿದರೆ ಅದರ ಪೆಟ್ಟಿಗೆಯಲ್ಲಿ ಕಿನ್ನರಿಯೊಬ್ಬಳನ್ನು ಸೆರೆಹಿಡಿದು ಹಾಕಿದೆಯೆಂದು ಊಹಿಸಬಹುದು. ಮೊತ್ತದಲ್ಲಿ ಆ ಭಾವನೆ ನಿಜ. ಹಾಗೆಯೇ ನಾವು ಸೃಷ್ಟಿಯ ಈ ಲೀಲೆಯನ್ನು ಮಾಡತಕ್ಕ ಒಂದು ಸತ್ವವಿದೆಯೆಂದು ಊಹಿಸುತ್ತೇವೆ. ಇದೇ ಕವಿಯ ದೃಷ್ಟಿಯ ಮುಖ್ಯಫಲ. ಈ ದೃಷ್ಟಿ ಕೀಟ್ಸ್ ಕವಿಗೆ ಇತ್ತು. ಇದೇ ಕವಿಯ ಧರ್ಮಮೀಮಾಂಸೆ. ಇದು ಸ್ಪಷ್ಟವಾದ ನಿರ್ದಿಷ್ಟವಾದ ಧರ್ಮವಲ್ಲವೆಂದು ತೋರಬಹುದು. ಆದರೆ ಯಾವ

ಸ್ಪಷ್ಟವಾದ ನಿರ್ದಿಷ್ಟವಾದ ಧರ್ಮಕ್ಕಿಂತಲೂ ಇದು ಕಡಮೆಯಲ್ಲ. ಈ ಧರ್ಮದ ಜ್ಞಾನವು ಬೆಳೆದ ರೀತಿ ಷೆಲ್ಲೀ ಕವಿಯ ಕಾವ್ಯದಲ್ಲಿ ಕಾಣುತ್ತದೆ. ಸೃಷ್ಟಿಯ ಸೌಂದರ್ಯ ಬಹು ದುರ್ಬಲವಾಗಿರುವಂತೆ ಕ್ಷಣಭಂಗುರವೆಂಬಂತೆ ಕಾಣುತ್ತದೆ. ಆದರೆ ಹಾಗೆ ಕಾಣುವುದಕ್ಕೆ ಮನುಷ್ಯನ ಬಾಳು ದುರ್ಬಲವೂ ಕ್ಷಣಭಂಗುರವೂ ಆಗಿರುವುದು ಕಾರಣ. ಸತ್ಯವಾಗಿ ನೋಡಿದರೆ ಸೌಂದರ್ಯ ಆದ್ಯಂತರಹಿತವಾದುದು. ಈ ಆದ್ಯಂತರಹಿತವಾದ ಸೌಂದರ್ಯದ ಹಾರೈಕೆಯಲ್ಲಿ ಬದುಕೆಲ್ಲ ನಿಂತಿದೆ. ಈ ಹಾರೈಕೆಯಿಂದಲೇ ಷೆಲ್ಲೀ ಕವಿ ಜೀವಿಸುತಿದ್ದನು. ಅವನಂತೆ ಎಲ್ಲ ಆಸ್ತಿಕರೂ ಈ ಹಾರೈಕೆಯಲ್ಲಿ ಜೀವಿಸುವರು.

ವನದ ಧರ್ಮ. ಸೃಷ್ಟಿಯ ಎದುರಿಗೆ ನಿಂತ ಮನುಷ್ಯನು ಅದರ ವಿಷಯದಲ್ಲಿ ತನ್ನ ಪರಿಸ್ಥಿತಿಗನುಸಾರವಾಗಿ ನಡೆದುಕೊಳ್ಳುತ್ತಾನೆ. ಭಾರತವರ್ಷದ ಋಷಿಗಳು ವಿಶ್ವದ ಏಕತ್ವವನ್ನು ತಿಳಿಯುವುದರಿಂದ ಮನುಷ್ಯನು ಮುಕ್ತನಾಗುವನೆಂದು ಅಭಿಪ್ರಾಯಪಟ್ಟರು. ಪ್ರಪಂಚ ವಸ್ತು ನಿಜಯವೆಂದು ಭಾವಿಸುವಂದು ನಾವು ಸಂಪಾದನೆಯಲ್ಲಿ ತೊಡಗುತ್ತೇವೆ. ಎಲ್ಲವೂ ಆತ್ಮ ತತ್ವವೇ ಎಂದು ಭಾವಿಸಿದಂದು ಆತ್ಮಜ್ಞಾನಕ್ಕೆ ಯತ್ನಮಾಡುತ್ತೇವೆ. ಮನುಷ್ಯನು ಸಂಪೂರ್ಣನಾಗುವುದಕ್ಕೆ ಪ್ರಕೃತಿಯೊಂದಿಗೆ ಸ್ನೇಹವನ್ನು ಬೆಳಸಿ ಒಂದಾಗಬೇಕು. ತಪೋವನ ನಿವಾಸಿಗಳಾದ ಋಷಿಗಳ ಈ ಭಾವ ಭಾರತವರ್ಷದ ಸಾಹಿತ್ಯದಲ್ಲಿ ಪ್ರತಿಬಿಂಬಿಸಿದೆ. ಪಾಶ್ಚಾತ್ಯರ ಪೂರ್ವಸಾಹಿತ್ಯದಲ್ಲಿ ಎಲ್ಲೆಲ್ಲೂ ಸಮುದ್ರ ಕಾಣುತ್ತದೆ. ಪ್ರಕೃತಿ ಸಾಗರದಲ್ಲಿ ಭೀಕರಸ್ವರೂಪದಿಂದ ಕಂಡು ಮಾನವನ ಅಜೇಯವಾದ ಮನೋಬಲಕ್ಕೆ ಒಂದು ಪಂಥವನ್ನು ಒಡ್ಡಿತು. ಇದರಿಂದ ಪೂರ್ವಕಾಲದ ಪಾಶ್ಚಾತ್ಯರು ಪ್ರಕೃತಿಯೊಂದಿಗೆ ಯುದ್ಧಮಾಡುವ ಭಾವನೆಯಲ್ಲಿ ಬೆಳೆದರು. ಭಾರತವರ್ಷದ ತಪೋವನಗಳ ಜೀವನ ಇದಕ್ಕೆ ಪ್ರತಿಯಾಗಿ ಪ್ರಕೃತಿಯೊಂದಿಗೆ ಮೈತ್ರಿಯನ್ನುಬೆಳಸುವುದರಲ್ಲಿ ಮಗ್ನವಾಯಿತು. ಐಶ್ವರ್ಯದ ನಿವಾಸವಾದ ಉಜ್ಜಯಿನಿಯಲ್ಲಿ ವಿಕ್ರಮಾದಿತ್ಯನು ರಾಜನಾದಾಗ ಕಾಳಿದಾಸನು ಕವಿಯಾಗಿದ್ದನು. ಆಗ್ಗ ತಪೋವನಗಳು ಕಡಮೆಯಾಗಿದ್ದುವು. ಆದರೂ ಕವಿ ಅವುಗಳನ್ನು ನೆನೆದು ಹಾತೊರೆದನು.

ಶಾಕುಂತಲ ನಾಟಕದಲ್ಲಿ ಇದು ಸ್ಪಷ್ಟವಾಗಿ ಕಾಣುತ್ತದೆ. ಕಾದಂಬರೀ ಗ್ರಂಥದಲ್ಲಿ ಕವಿಯು ಇದೇ ಮನೋಧರ್ಮ ವ್ಯಕ್ತವಾಗುತ್ತದೆ. ಪಾಶ್ಚಾತ್ಯ ನಾಟಕಗಳಲ್ಲಿ ಕಾವ್ಯಗಳಲ್ಲಿ ಪ್ರಕೃತಿ, ಬೇರೆಯಾಗಿರುವಂತೆ, ಮಾನವನಿಗೆ ಪ್ರತಿಸ್ಪರ್ಧಿಯಾಗಿರುವಂತೆ, ಕಾಣುತ್ತದೆ. ನಮ್ಮಲ್ಲಿ ಮಾನವನ ಜೀವನದೊಂದಿಗೆ ಅದೂ ಒಂದು ಮುಖ್ಯ ತತ್ವವಾಗಿ ಕಾಣು ತ್ತದೆ. ಕುಮಾರಸಂಭವದಲ್ಲಿ ರಘುವಂಶದಲ್ಲಿ ರಾಮಾಯಣದಲ್ಲಿ ಎಲ್ಲ ಕಡೆಯಲ್ಲಿಯೂ ಇದು ಕಾಣುತ್ತದೆ. ಭಾರತವರ್ಷದ ಪುರಾಣದಲ್ಲಿ ವಿಶ್ವಾಮಿತ್ರ ವಸಿಷ್ಠರ ವಿರೋಧ ವರ್ಣಿಸಲ್ಪಟ್ಟಿದೆ. ವಿಶ್ವಾಮಿತ್ರನು ಶಕ್ತಿ ಸ್ವರೂಪನು. ವಸಿಷ್ಠನು ಸತ್ವಾತ್ಮನು. ಪಶ್ಚಿಮ ದೇಶ ಶಕ್ತಿಯನ್ನು ಸಂಪಾ ದಿಸುವುದರಲ್ಲಿ ವಿಶ್ವಾಮಿತ್ರನಂತೆ ಇದೆ. ಪೂರ್ವದೇಶ ಸಾತ್ವಿಕತೆಗೆ ಮನ ಸ್ಸನ್ನು ಕೊಟ್ಟಿದೆ. ಪುರಾಣದಲ್ಲಿ ವಸಿಷ್ಠ ವಿಶ್ವಾಮಿತ್ರರು ಬಹುಕಾಲ ಜಗಳವಾಡಿ ಕೊನೆಗೆ ಮೈತ್ರಿಯನ್ನು ಬೆಳಸಿದರು. ಲೋಕದ ಕಲ್ಯಾಣಕ್ಕಾಗಿ ಪೂರ್ವ ಪಶ್ಚಿಮ ದೇಶಗಳು ಈ ರೀತಿ ಮೈತ್ರಿಯನ್ನು ಬೆಳಸುವುದು ಅವಶ್ಯಕ.

ಜನತೆಯ ಧರ್ಮ. ಮಾನವ ಚರಿತ್ರೆಯಲ್ಲಿ ನಮಗೆ ತಿಳಿದಮಟ್ಟಿಗೆ ಜೀವಗಳಿಗೆಲ್ಲ ಮುಕ್ತಿಯಿದೆಯೆಂದು ಸಾರಿದವರಲ್ಲಿ ಮೊದಲನೆಯವನು ಬುದ್ಧದೇವ. ಬೌದ್ಧಮತ ಶೂನ್ಯವಾದವೆಂದೂ ನಿರ್ವಾಣವೆಂಬ ಮಾತಿನಿಂದ ಆತ್ಮಹತ್ಯೆಯನ್ನು ಮುಚ್ಚಿ ಅದನ್ನು ಮುಕ್ತಿಯಾಗಿ ಬೋಧಿಸಿದೆ ಯೆಂದೂ ಹೇಳುವುದುಂಟು. ಇದು ಈ ಮತವನ್ನು ತಿಳಿಯದವರ ಭಾವನೆ. ಬೌದ್ಧಮತದಲ್ಲಿ ಎರಡು ಮುಖ್ಯ ಭಾವಗಳು ಪ್ರಕಟವಾದವು. ಒಂದು ಆತ್ಮಸಂಯಮದಿಂದ ಅಹಂಕಾರವನ್ನು ನಿರಸನಮಾಡುವುದು ; ಇನ್ನೊಂದು ಪ್ರೇಮದ ಅನಂತಶಕ್ತಿಯಿಂದ ವಿಶ್ವದೊಂದಿಗೆ ಸಹಾನುಭೂತಿಯನ್ನು ಬೆಳಸುವುದು. ಬುದ್ಧನ ದಿನದಲ್ಲಿ ಎಲ್ಲ ಜೀವಕ್ಕೂ ಮುಕ್ತಿಯುಂಟೆಂದು ಬೋಧೆ ಹರಡಿದಂತೆ ಈಗಲೂ ನಮ್ಮ ಸೀಮೆಯಲ್ಲಿ ಬಹು ಸಾಮಾನ್ಯವೆಂಬ ಜನರಲ್ಲಿ ಬಹು ಒಳ್ಳೆಯ ಸಂಸ್ಕಾರವು ಕಾಣುತ್ತದೆ. ಬಂಗಾಳದೇಶದ ಬೌಲ್ ಜನರು ಪುರುಷೋತ್ತಮನನ್ನು, ಹೃದಯೇಶ್ವರನನ್ನು, ಕುರಿತು ಹಾಡುವ ಹಾಡುಗಳಲ್ಲಿ ಸಾಮಾನ್ಯ ಜೀವನದ ಸಂಸ್ಕೃತ ಭಾವ ವ್ಯಕ್ತವಾಗಿದೆ. ಈ ಗೀತಗಳ ಸೊಗಸು ತಿಳಿದವರನ್ನೂ ಮನಸೋಲಿಸುವಂತಿದೆ. ಈ ಬೌಲ್

ಜನ ದೇವರನ್ನು ಹಿರಿಯ ವ್ಯಕ್ತಿಯಾಗಿ ಭಾವಿಸಿ ಅವನೊಂದಿಗೆ ಸಂಬಂಧ ವನ್ನು ಕಲ್ಪಿಸಿಕೊಂಡಿದಾರೆ; ನನಗೆ ನೀನು ಹೇಗೆ ಆವಶ್ಯಕವೋ ನಿನಗೆ ನಾನೂ ಹಾಗೆ ಆವಶ್ಯಕ ಎನ್ನುತ್ತಾರೆ. ಈ ಭಾವನೆ ಭಾರತವರ್ಷದ ಇತರ ಮತಗಳಲ್ಲಿಯೂ ಕಾಣುತ್ತದೆ. ಈ ಜನ ಮುಖದಮೇಲೆ ಯಾವ ಒಂದು ಲಾಂಛನವನ್ನೂ ಹಚ್ಚಿಕೊಳ್ಳುವುದಿಲ್ಲ; ದೇವಸ್ಥಾನವನ್ನು ಕಟ್ಟಿ ಅಲ್ಲಿ ದೇವರನ್ನು ಪೂಜಿಸುವುದಿಲ್ಲ. ಇವರೇ ಒಂದು ತತ್ವವನ್ನು ರಹಸ್ಯವಾಗಿಟ್ಟುಕೊಂಡಿದಾರೆ. ಪುಣ್ಯವಂತರು ಇವರನ್ನು ಬೇಡವೆನ್ನುವಂತೆ ಇವರು ಐಶ್ವರ್ಯವನ್ನು ಬೇಡವೆನ್ನುತ್ತಾರೆ; ಪ್ರಪಂಚದ ಐಶ್ವರ್ಯ ತಮ್ಮನ್ನು ಸೋಕಿದರೆ ತಾವು ಕೆಡುವೆವೆಂದು ಹೇಳುತ್ತಾರೆ. ಇವರ ಬದುಕನ್ನು ನೋಡಿದರೆ ಭಗವಂತನ ಕೃಪೆ ಎಲ್ಲ ದೀನಹೃದಯದಲ್ಲಿಯೂ ಶುಭವನ್ನು ಸಾಧಿಸುತ್ತಿದೆಯೆನ್ನುವುದು ಸ್ಪಷ್ಟವಾಗಿ ಕಾಣುತ್ತದೆ.

"ನನ್ನ ಶಾಲೆ". ಮನುಷ್ಯನು ಅವನಿಗೆ ಸಹಜವಾದ ಆವರಣದಲ್ಲಿ ಬೆಳೆಯಬೇಕು, ಅವನ ಬಾಳಿನ ಸಹಜವಾದ ಪ್ರವೃತ್ತಿಗಳನ್ನು ವಿನಿಯೋಗಿಸ ಬೇಕು. ನಮ್ಮ ಪಾಠಶಾಲೆಗಳಲ್ಲಿ ಇದಕ್ಕೆ ಅಡ್ಡಿ ಬಹಳ. ಯಾವುದೋ ಒಂದು ಧ್ಯೇಯವನ್ನು ಮುಂದಿಟ್ಟುಕೊಂಡು ನಾವು ಮಕ್ಕಳು ಸಹಜವಾಗಿ ಬೆಳೆಯದಂತೆ ತಡೆಯುತ್ತೇವೆ. ಮಣ್ಣಿನಲ್ಲಿ ಆಡಕೂಡದೆನ್ನುತ್ತೇವೆ; ಪಾಠವನ್ನು ಸರಿಯಾಗಿ ಕಲಿಯಬೇಕೆನ್ನುತ್ತೇವೆ; ಹೇಳಿದಂತೆ ಕೇಳಬೇಕೆನ್ನು ತ್ತೇವೆ. ಮಗು ಮರವೆಂದರೆ ಏನು ಎಂಬದನ್ನು ಪುಸ್ತಕದಲ್ಲಿ ಕಲಿಯ ಬೇಕು; ಅದು ಮರ ಹತ್ತುವುದಕ್ಕೆ ಹೋದರೆ ಬೇಡವೆನ್ನುತ್ತೇವೆ; ಮರದ ಹಣ್ಣನ್ನು ಕಿತ್ತುಕೊಳ್ಳುವುದಕ್ಕೆ ಬಿಡುವುದಿಲ್ಲ. ಈ ರೀತಿಯ ನಿರ್ಬಂಧ ದಿಂದ ಠಾಕೂರರ ಜೀವನ ಅಸುಖವಾಗಿತ್ತು. ಶಾಂತಿನಿಕೇತನದಲ್ಲಿ ಶಾಲೆಯನ್ನು ಆರಂಭಿಸಿದಾಗ ಅವರು ಇಂಥ ನಿರ್ಬಂಧಗಳಿರಕೂಡದೆಂದು ಮನಸ್ಸು ಮಾಡಿದರು. ಈ ಶಾಲೆಯಲ್ಲಿ ಹುಡುಗರು ಆಟಪಾಟಗಳಲ್ಲಿ ಸ್ವತಂತ್ರರು. ಅವರು ಬರಿಯಕಾಲಿನಲ್ಲಿ ನಡೆಯುವರು; ನೀರಿನಲ್ಲಾಡು ವರು; ಮರಗಳನ್ನೇರುವರು. ಬಡತನದಲ್ಲಿ ಬೆಳೆದು ಬಾಳನ್ನೆಲ್ಲ ಅರಿಯು ವರು. ಠಾಕೂರರು ತಮ್ಮ ಮಗನನ್ನು ಹೀಗೆಯೇ ಸಾಕಿದರು. ತಮ್ಮ ಹಿರಿ ಯರ ಸಹವಾಸದಿಂದ ಈ ಶಾಲೆಯ ಹುಡುಗರು ಆತ್ಮಜೀವನ ಒಂದಿದೆ

ಎಂಬ ಭಾವದಲ್ಲಿ ಬೆಳೆಯುವರು. ಪೂರ್ವದಲ್ಲಿ ತಪೋವನಗಳಲ್ಲಿ ಬಾಲಕರು ಬೆಳೆಯುತಿದ್ದದು ಪ್ರಾಯಶಃ ಹೀಗೆ. ಅವರು ಗುರುವಿನೊಂದಿಗೆ ವಾಸ ಮಾಡುತ್ತ ಅವನ ಸೇವೆಯನ್ನು ಮಾಡುತ್ತ ಕೆಲಸಮಾಡುತ್ತ ತಿಳಿವನ್ನು ಪಡೆದರು. ಶಾಂತಿನಿಕೇತನ ಶಾಲೆಯ ಸ್ಥಳ ಇದಕ್ಕೆಲ್ಲ ಅನುಕೂಲವಾದದು. ಇಲ್ಲಿ ದೇವೇಂದ್ರನಾಥರು ಭಗವದ್ಧ್ಯಾನದಲ್ಲಿ ಕೂಡುತಿದ್ದರು. ಈ ಶಾಲೆ ಆರಂಭವಾದ ಈಚೆಗೆ ಅದರ ಭಾವನೆಯೂ ಬೆಳೆದಿದೆ. ಮೊದಲು ಕವಿ ಇತರರಿಗೆ ಒಳ್ಳೆಯದನ್ನು ಮಾಡುವುದೆಂಬ ಯೋಚನೆಯಲ್ಲಿ ಹೊರಟರು. ಅದಕ್ಕೆ ಏರ್ಪಾಡುಗಳನ್ನು ಹೂಡಿದರು. ಆಮೇಲೆ ಈ ಸ್ಪಷ್ಟವಾದ ಉದ್ದೇಶವೂ ಸ್ಪಷ್ಟವಾದ ಏರ್ಪಾಡೂ ಮರೆತವು. ಶಾಲೆಯ ಮುಖ್ಯ ಭಾವವೇನೆಂದು ಹೇಳಿದ ಮಾತ್ರಕ್ಕೆ ಅದು ತನ್ನ ಗುರಿಯನ್ನು ಸಾಧಿಸಿದೆಯೆಂದು ತಿಳಿಯಬಾರದು. ಅದು ಗುರಿಯನ್ನು ಸಾಧಿಸಲು ಯತ್ನ ಮಾಡುತ್ತಿದೆ, ಬಿಟ್ಟಿಲ್ಲ. ಈ ಶಾಲೆಯಲ್ಲಿ ಲಲಿತಕಲೆಗಳಿಗೆ ಒಂದು ವಿಶೇಷ ಸ್ಥಾನವಿದೆ, ಗುರುವಿನ ಸಹವಾಸಕ್ಕೆ ಹೆಚ್ಚು ಬೆಲೆಯಿದೆ. ಕವಿಯ ಜೊತೆಗೆ ಕೆಲಸಮಾಡಲು ಬಂದ ಸತೀಶಚಂದ್ರ ಎಂಬ ತರುಣ ಕವಿ ಈ ಹುಡುಗರೊಂದಿಗೆ ಆಡುತಿದ್ದನು. ಅವರಿಗೆ ರುಚಿಹುಟ್ಟುವಂತೆ ದೊಡ್ಡ ಗ್ರಂಥಗಳನ್ನು ಪಾಠ ಹೇಳುತಿದ್ದನು. ಇಲ್ಲಿ ಮಕ್ಕಳು ಠಾಕೂರರ ಗೀತಗಳನ್ನು ಹಾಡುತ್ತಾರೆ, ಅವರ ನಾಟಕಗಳನ್ನು ಆಡುತ್ತಾರೆ. ಅವರು ಆಡುವುದು ಚೆನ್ನಾಗಿದೆಯೆಂದು ನೋಡುವವರು ಹೇಳಿದಾರೆ. ಇಲ್ಲಿ ಧ್ಯಾನಕ್ಕೆ ಒಂದು ಕಾಲವಿದೆ. ಮಕ್ಕಳು ಆ ಹೊತ್ತಿನಲ್ಲಿ ಮೌನವಾಗಿ ಕುಳಿತಿರುತ್ತಾರೆ; ಹಿರಿಯ ಒಂದು ಹಾರೈಕೆ, ಹಿರಿಯದೊಂದು ಯತ್ನ, ಇದರಲ್ಲಿ ಬೆಳೆಯುತ್ತಿದಾರೆ.

ಹೆಂಗಸು. ಪುರುಷನ ಸಹಜ ಧರ್ಮ ಉದ್ಯಮ; ಸ್ತ್ರೀಯ ಸಹಜ ಧರ್ಮ ಸ್ಥೈರ್ಯ. ಈಗಣ ನಾಗರಿಕತೆ ಕೇವಲ ಪುರುಷ ಸಂಬಂಧವಾದದು. ಇನ್ನು ಬರುವ ನಾಗರಿಕತೆ ಇದಕ್ಕಿಂತಲೂ ಹೆಚ್ಚಾಗಿ ಸ್ತ್ರೀಯ ಕೈವಾಡದಿಂದ ಕೂಡಿರಬೇಕು. ಸ್ತ್ರೀಯ ಸಹನೆ ಸೌಂದರ್ಯವನ್ನು ಸಾಧಿಸುವ ಮುಖ್ಯ ಸಾಧನ. ಪಾಶ್ಚಾತ್ಯರಲ್ಲಿ ಈಗಣ ಸ್ತ್ರೀಯರು ಸಹನೆಯನ್ನು ಮುಖ್ಯ ಗುಣವೆಂದು ತಿಳಿದು ನಡೆಯುತ್ತಿಲ್ಲ. ಅದರ ಪ್ರಯೋಜ

ನಕ್ಕೆ ಮನಸ್ಸನ್ನು ಕೊಟ್ಟಿಲ್ಲ. ಆದರೆ ಅದೇ ನಿಜ. ಹೆಂಗಸು ಸಹನೆಯಿಂದ ಸಾಮಾನ್ಯ ಜೀವನದಲ್ಲಿಯೂ ಸೊಗಸನ್ನು ಸಾಧಿಸುವಳು. ಹೀಗೆಂದ ಮಾತ್ರಕ್ಕೆ ಹೆಂಗಸು ಸುಮ್ಮನೆ ಮನೆಯಲ್ಲಿ ಸೇವೆಮಾಡುತ್ತ ಇರಬೇಕೆಂದು ಅಭಿಪ್ರಾಯವಲ್ಲ. ಸಾಮಾನ್ಯ ಜೀವನದಲ್ಲಿಯೂ ಹಿರಿಯ ಫಲವನ್ನು ಸಾಧಿಸುವುದು ಅವಳ ಕೆಲಸ ಎಂದರ್ಥ. ಮನಸ್ಸುಮಾಡಿದರೆ ಹೆಣ್ಣಿಗೆ ಇದು ಕಷ್ಟವಲ್ಲ. ಏನು ಮಾಡಿದರೂ ಗಂಡಿಗೆ ಇದು ಸಾಧ್ಯವಲ್ಲ. ಉದ್ಯಮ ವನ್ನು ಹುಡುಕುತ್ತ ಬಾಳನ್ನು ಬರಿಯ ಗಲಭೆಯಾಗಿ ಮಾಡಿರುವ ಈಗಣ ನಾಗರಿಕತೆಯ ಅತಿಯನ್ನು ಅಗಡನ್ನು ಬಿಡಿಸಿ ನಮ್ಮ ಜೀವನದಲ್ಲಿ ಪುನಃ ಸೊಗಸನ್ನು ಮೊಳೆಯಿಸುವುದು ಸ್ತ್ರೀಯರ ಕರ್ತವ್ಯ.

### ೫೯. ರಾಷ್ಟ್ರತತ್ವ

ರಾಷ್ಟ್ರತತ್ವವನ್ನು ಕುರಿತ ಉಪನ್ಯಾಸಗಳ ಸಾರವನ್ನು ಇಲ್ಲಿ ಕೊಟ್ಟಿದೆ :

ಮನುಷ್ಯನ ಚರಿತ್ರೆಯ ರೂಪ ಅವನು ಜಯಿಸಬೇಕಾದ ಕಷ್ಟಗಳಿಂದ ನಿರ್ಧರವಾಗುತ್ತದೆ. ಭಾರತವರ್ಷದ ಸಮಸ್ಯೆ ಬಹು ಜನಾಂಗಗಳ ಸಮನ್ವಯವನ್ನು ಮಾಡುವುದು ಹೇಗೆ ಎಂಬುದು. ಭಾರತವರ್ಷ ತಾನೊಂದು ಜನಾಂಗ, ಇತರ ಜನಾಂಗಗಳೊಂದಿಗೆ ಹೋರಾಡಬೇಕು, ಎಂದು ಯಾವಾಗಲೂ ಯೋಚಿಸಿಲ್ಲ. ಹೀಗೆ ಇದ್ದ ಈ ದೇಶಕ್ಕೆ ಪಾಶ್ಚಾತ್ಯ ರಾಷ್ಟ್ರ ಪದ್ಧತಿ ಬಂದಿದೆ. ಈ ರಾಷ್ಟ್ರಪದ್ಧತಿಯ ಮುಖ್ಯ ಲಕ್ಷಣವೇನೆಂದರೆ ಒಟ್ಟು ಜನಾಂಗ ಒಂದಾಗಿ ಇತರ ಜನರಿಂದ ಐಶ್ವರ್ಯವನ್ನು ಶೇಖರಿಸುವುದು. ಪಾಶ್ಚಾತ್ಯ ಜನಾಂಗಗಳು ಹಣದ ಆಸೆಯಿಂದ ಒಂದೊಂದೂ ಯುದ್ಧದ ಒಂದು ಪಾಳಯವಾದವು. ಧನದ ಆಸೆಗಾಗಿಯೇ ಪಾಶ್ಚಾತ್ಯರಲ್ಲಿ ರಾಷ್ಟ್ರಕಲಹಗಳು, ಕೈಗಾರಿಕೆಯ ಕಲಹಗಳು, ಸ್ತ್ರೀಪುರುಷ ಸಮೂಹಗಳ ಕಲಹಗಳು, ಬಂದಿರುವುದು. ಈ ಸ್ವಭಾವದ ರಾಷ್ಟ್ರವೊಂದು ಭಾರತ ವರ್ಷದಲ್ಲಿ ಆಳತೊಡಗಿತು. ಇದರಿಂದ ಬಂದಿರುವ ದುಷ್ಪರಿಣಾಮ ಏನೆಂಬುದನ್ನು ಜಗತ್ತೆಲ್ಲ ತಿಳಿಯಬೇಕು, ಇನ್ನು ಹೀಗಾಗದಂತೆ ನೋಡಿ ಕೊಳ್ಳಬೇಕು. ಎಂದರೆ ಆಂಗ್ಲೇಯ ಜನ ನಮಗೆ ಬೇಡವೆಂದು ಅಭಿ

ಪ್ರಾಯವಲ್ಲ. ಅವರಲ್ಲಿ ಬಹಳ ಒಳ್ಳೆಯ ಗುಣಗಳಿವೆ. ಅನೇಕ ಜನಾಂಗ ಗಳಿಗೆ ಸ್ಥಳವನ್ನು ಕೊಟ್ಟ ನಮ್ಮ ದೇಶದಿಂದ ಈ ಒಂದು ಜನಾಂಗವನ್ನು ಬೇಡವೆಂದು ಕಳುಹಿಸುವುದಕ್ಕೆ ನಾವು ಅಪೇಕ್ಷಿಸುವುದಿಲ್ಲ. ಆದರೆ ಇಲ್ಲಿ ಹೇಳುವುದು ಆಂಗ್ಲೇಯ ಜನವನ್ನು ಕುರಿತಲ್ಲ; ಆಂಗ್ಲೇಯ ಜನಾಂಗ ವನ್ನು ಕುರಿತು, ಅವರ ರಾಷ್ಟ್ರಭಾವವನ್ನು ಕುರಿತು. ಆಂಗ್ಲೇಯ ಜನತೆಯ ಗುಣಗಳಿಂದ ನಮಗೆ ಒಳ್ಳೆಯದೇ ಆಗಿದೆ. ಅವರ ರಾಷ್ಟ್ರದ ಆಳಿಕೆ ಯಿಂದ ಆಗಿರುವುದು ಮಾತ್ರ ತೊಂದರೆಯೇ. ಉಳಿದ ದೇಶಗಳಲ್ಲಿ ಸರಕಾರವು ಜನಕ್ಕೆ ಮುಂದುವರಿಯುವ ದಾರಿಯನ್ನು ಹೇಳಿಕೊಡುತ್ತದೆ; ನಮ್ಮ ದೇಶದಲ್ಲಿ ಸರಕಾರ ಜನವನ್ನು ಮುಂದುವರಿಯಲಿಲ್ಲವೆಂದು ಹಳಿಯುತ್ತದೆ. ಇದರಿಂದ ನಮಗೆ ಮಾತ್ರ ನಷ್ಟವಲ್ಲ; ಸರಕಾರಕ್ಕೂ ನಷ್ಟವೇ. ಹೀಗೆ ಮಾಡುವ ಜನಾಂಗ ವಿಶ್ವದ ನಿಯಮಕ್ಕೆ ವಿರೋಧ ವಾಗಿ ನಡೆಯುತ್ತದೆ; ತನ್ನ ನಡವಳಿಯಿಂದ ಕೆಡುತ್ತದೆ. ಆಳುವ ಜನಾಂಗ ತನ್ನ ಆಳಿಕೆಯಲ್ಲಿ ಗಲಭೆಗೊಂದಲಗಳಿಲ್ಲವೆಂದು ಹೆಮ್ಮೆಪಡು ತ್ತದೆ; ದೇಶ ಶಾಂತವಾಗಿದೆಯೆಂದು ಉಬ್ಬುತ್ತದೆ. ಆದರೆ ಅದು ಸಾಧಿಸಿರುವ ಈ ಶಾಂತಿ ಸಮಾಧಾನಗಳು ನಮಗೆ ಬೇಕಾದುದಕ್ಕಿಂತ ಸ್ವಲ್ಪ ಹೆಚ್ಚು. ಇಂಥ ಜನಾಂಗವನ್ನು ಕಟ್ಟಬೇಕಾದರೆ ಜನ ಬಹಳ ಸ್ವಾತಂತ್ರ್ಯ ವನ್ನು ಬಿಟ್ಟುಕೊಟ್ಟು ರಾಜ್ಯದಲ್ಲಿ ಮುಳುಗಿರಬೇಕಾಗುತ್ತದೆ, ರಾಜ್ಯದ ಹೆಸರಿನಲ್ಲಿ ತಪ್ಪುಗಳಿಗೆ ಒಪ್ಪಬೇಕಾಗುತ್ತದೆ. ಹೀಗೆ ಸ್ವಾತಂತ್ರ್ಯವನ್ನು ಬಿಟ್ಟುಕೊಟ್ಟು ವಿಶ್ವನಿಯಮಕ್ಕೆ ವಿರೋಧವಾಗಿ ನಡೆದು ರಾಷ್ಟ್ರಗಳು ಸಾಯುತ್ತವೆ. ಸ್ಪಾರ್ಟಾದೇಶ ಇದಕ್ಕೆ ಉದಾಹರಣೆ. ಜನಾಂಗ ಭಾವ ಕೆಟ್ಟದೆನ್ನುವುದಕ್ಕೆ ಹೊಸಕಾಲದ ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರದ ವಿಷಯದಲ್ಲಿ ತೋರಿಸುವ ಅಸೂಯೆಯೇ ನಿದರ್ಶನ. ರಾಷ್ಟ್ರ ವಾಗಿರುವ ಜನರು ಬೇರೆ ಜನರು ರಾಷ್ಟ್ರವಾಗದಂತೆ ಯತ್ನಮಾಡುತ್ತಾರೆ. ಒಂದು ರಾಷ್ಟ್ರದಿಂದ ಇಷ್ಟು ಕೆಡಕಾಗಿರುವುದಾದರೆ ನೀವೂ ರಾಷ್ಟ್ರ ವಾಗಿ ಇತರ ರಾಷ್ಟ್ರಗಳನ್ನು ತಡೆಯುವುದು ತಾನೆ ಎಂದು ಕೇಳಬಹುದು. ರಾಷ್ಟ್ರಭಾವದ ರೋಗಕ್ಕೆ ರಾಷ್ಟ್ರನಿರ್ಮಾಣ ನಿವಾರಣೆಯಾಗುವುದಿಲ್ಲ. ಇದರ ನಿಜವಾದ ನಿವಾರಣೆ ರಾಷ್ಟ್ರಗಳಾಗಿರುವವರು ಒಳಗೆ ಯಾವ

ಭಾವನೆಯಿದೆಯೋ ಅದನ್ನೇ ಹೊರಗೂ ಇಟ್ಟುಕೊಳ್ಳುವುದು: ಎಂದರೆ ದುರ್ಬಲರಾದವರಿಂದ ಕಸಿದುಕೊಂಡು ತಮ್ಮ ಆನುಕೂಲ್ಯವನ್ನು ಒದಗಿಸಿಕೊಳ್ಳುವುದಕ್ಕೆ ಯತ್ನಿಸುವುದನ್ನು ಬಿಟ್ಟು ದುರ್ಬಲರಿಗೆ ಸಹಾಯಮಾಡುವುದು. ರಾಷ್ಟ್ರ ಸಂಪಾದಿಸುವ ಶಕ್ತಿ ನಮಗೆ ದೇಹಸುಖವನ್ನು ಕೊಡಬಹುದು; ಅದರ ಜೊತೆಗೆ ನಾವು ನಮ್ಮ ನೀತಿಬುದ್ಧಿಯನ್ನು ಬೆಳಸಿಕೊಳ್ಳಬೇಕು. ಅದಿಲ್ಲದಿದ್ದರೆ ಜನಾಂಗದ ವ್ಯವಸ್ಥೆ ಹೊಟ್ಟೆಬಾಕವಾಗುತ್ತದೆ. ರಾಷ್ಟ್ರೀಯ ಭಾವ ಅತಿಯಾಗಬಾರದೆಂದು ಕವಿ ಜಪಾನಿನ ಜನಕ್ಕೆ ಹೇಳಿದರು. ಅವರು ಕವಿ ಹೇಳಿದ ರೀತಿಯನ್ನು ಒಪ್ಪಿದರು, ಮಾತನ್ನು ಮೆಚ್ಚಿದರು; ಆದರೆ ಭಾವವನ್ನು ಒಪ್ಪಿಕೊಳ್ಳಲಿಲ್ಲ. ಈತ ಸೋತ ಜನಾಂಗದವನಾದದರಿಂದ ಹೀಗೆ ಹೇಳುತ್ತಿದಾನೆಂದು ತಿಳಿದರು. ಈ ರೀತಿಯ ಭಾವನೆ ತಪ್ಪೆಂದು ಜನಾಂಗಗಳು ಇನ್ನುಮುಂದೆ ಕಲಿಯುವರು. ಅದುವರೆಗೆ ಜನಾಂಗಗಳಾಗದ ಜನರು ತಲೆತಗ್ಗಿಸಿಕೊಂಡು ತಾಳ್ಮೆಯಿಂದ ಕಾಯಬೇಕಾಗಿದೆ. ಜನಾಂಗಗಳಿಗೆ ಬುದ್ಧಿ ಬಂದು ಅವು ಲೋಕ ಕಲ್ಯಾಣಕ್ಕಾಗಿ ದುಡಿಯುವುದು ಮೊದಲಾದಮೇಲೆ ನಾವೂ ಸಹಾಯಕ್ಕೆ ಹೋಗಬಹುದು.

ಏಷ್ಯಾಖಂಡ ಸೋತುಹೋಗಿದೆಯೆಂದೂ ಕಾರ್ಯತತ್ಪರವಾಗಲಾರದೆಂದೂ ಜನ ತಿಳಿದಿದ್ದರು. ಜಪಾನ್ ದೇಶ ಈ ಭಾವನೆ ತಪ್ಪೆನ್ನುವುದನ್ನು ತೋರಿಸಿತು. ಈ ಭಾವನೆ ಚರಿತ್ರೆಯ ಅಸಮಗ್ರ ದೃಷ್ಟಿಯಿಂದ ಬರತಕ್ಕದು. ನ್ಯಾಯವಾಗಿ ನೋಡಿದರೆ ಜಪಾನ್ ಮಾಡಿದ್ದು ಹೊಸದೇನೂ ಅಲ್ಲ. ರೀತಿಯಲ್ಲಿ ಪಾಶ್ಚಾತ್ಯರದಾದರೂ ಜಪಾನಿನ ಈ ಪುರೋಭಿವೃದ್ಧಿ ಅದರ ಒಳಗಿನಿಂದ ಬಂದದೇ. ಪೂರ್ವದಿಂದ ಸಂಸ್ಕೃತವಾದ ಜನ ವಿಜ್ಞಾನಶಾಸ್ತ್ರಗಳ ಸಹಾಯದಿಂದ ಹೇಗೆ ಬೆಳೆಯಬೇಕೆಂಬುದನ್ನು ಈ ದೇಶ ಪ್ರಪಂಚಕ್ಕೆ ತೋರಿಸಬೇಕಾಗಿದೆ. ಎಂದರೆ ವಿಜ್ಞಾನದಿಂದ ಬರುವ ತಿಳಿವನ್ನು ಕೇವಲ ಶಕ್ತಿಗಾಗಿ ಕೇವಲ ಐಶ್ವರ್ಯಕ್ಕಾಗಿ ಉಪಯೋಗಿಸದೆ ಸತ್ಯಕ್ಕಾಗಿ ಸೌಂದರ್ಯಕ್ಕಾಗಿ ಉಪಯೋಗಿಸಬೇಕು. ಪೂರ್ವದಲ್ಲಿ ಈ ದೇಶ ಏಷ್ಯಾಖಂಡದ ಇತರ ದೇಶಗಳೊಡನೆಯೂ ಭಾರತವರ್ಷದೊಂದಿಗೂ ಸ್ನೇಹದಿಂದ ಬೆರೆತಿತ್ತು. ಆಗ ನಮ್ಮ ಜನಾಂಗಗಳು

ಯುದ್ಧಮಾಡಲಿಲ್ಲ. ಒಂದಕ್ಕೆ ಒಂದು ನೆರವಾಗಿ ಬೆಳೆದವು. ನಾವು ಶಕ್ತಿಯನ್ನು ಸಂಪಾದಿಸಿದರೆ ಅಂದಿನಂತೆ ವಿಶ್ವಾಸದಿಂದ ಬೆಳೆಯೋಣ; ಶಕ್ತಿಯನ್ನು ಹೊಡೆದಾಟಕ್ಕೆ ನಿವೇದಿಸದೆ ಇರೋಣ. ಪೂರ್ವದೇಶೀಯರಿಗೆ ಅಭಿವೃದ್ಧಿಯೆನ್ನುವುದು ಮುಂದೆ ಹೋಗುವುದೆನ್ನುವುದು ಮಾತ್ರವಲ್ಲ; ಇದ್ದಲ್ಲಿಯೇ ಬೆಳೆಯುವುದೂ ಒಂದು ತೆರದ ಅಭಿವೃದ್ಧಿ. ರೈಲಿನಂತೆ ನಾವು ಮುಂದಕ್ಕೆ ಹೋಗಬೇಕಾದದಿಲ್ಲ; ಮರದಂತೆ ಬೆಳೆಯಬಹುದು. ಕೆಲವು ಕೆಲಸ ಕಾಯಲಾರದು; ಸಂತೆಗೆ ಹೋಗಿ ವ್ಯಾಪಾರಮಾಡುವುದು ಇಂತಹ ಕೆಲಸ. ಇಂಥ ಉದ್ದೇಶವುಳ್ಳ ಪಾಶ್ಚಾತ್ಯರು ಅವಸರಪಡುವುದು ನ್ಯಾಯ. ಹೊಲದಲ್ಲಿ ಕುಳಿತು ಬೆಳಸನ್ನು ಕೊಯ್ಯುವ ಮನುಷ್ಯನು ಸಂತೆಗೆ ಹೋಗುವವನಂತೆ ಅವಸರಪಡಬೇಕಾದದಿಲ್ಲ. ಎಂದ ಮಾತ್ರಕ್ಕೆ ಯೂರೋಪು ಕೆಲಸಕ್ಕೆ ಬಾರದ ದೇಶವೆಂದು ಅಭಿಪ್ರಾಯವಲ್ಲ. ಅಲ್ಲಿ ದೊಡ್ಡ ಗುಣಗಳಿವೆ; ಆ ಗುಣಗಳು ಆತ್ಮಬಲದಿಂದ ಬಂದಿವೆ. ಆದರೆ ಸುಮ್ಮನೆ ಬಲವನ್ನು ಬೆಳಸುವ ಅಪೇಕ್ಷೆಯಲ್ಲಿ ಯೂರೋಪು ದುರ್ಬಲತೆ ಯನ್ನು ತೋರಿದೆ. ಜಪಾನ್ ದೇಶ ಈ ದೌರ್ಬಲ್ಯವನ್ನು ತಪ್ಪಿಸಿಕೊಳ್ಳ ಬೇಕು; ಮಾನವ ವರ್ಗದ ಪೂರ್ಣ ಮಹತ್ವವನ್ನು ಸಾಧಿಸಬೇಕು. ಜಪಾನ್ ದೇಶದ ಬದುಕನ್ನು ನೋಡಿದರೆ ಅದು ಪ್ರಕೃತಿಯ ವಾತ್ಸಲ್ಯ ದಿಂದ ಬೆಳೆದಿರುವುದು ಕಾಣುವುದು. ಅದು ಪ್ರಕೃತಿಯನ್ನು ಪರೀಕ್ಷೆ ಮಾಡಿ ಜಯಿಸಿ ಗೆಲ್ಲುವ ದಾರಿಯನ್ನು ಹಿಡಿಯಲಿಲ್ಲ. ಯೂರೋಪಿನ ಜನರು ಎಲ್ಲಿ ಹೊಡೆದಾಟಕ್ಕೆ ಕಣವನ್ನು ಕಂಡರೋ ಅಲ್ಲಿ ಜಪಾನ್ ದೇಶ ಮೈತ್ರಿಯ ಮುದ್ರೆಯನ್ನು ಕಂಡಿತು. ಈ ವಿಶ್ವ ಸೌಹಾರ್ದದಿಂದ ಪ್ರವರ್ತಿ ಸಿದ ಜಪಾನ್ ದೇಶ ಯಾವ ಕೆಲಸವನ್ನು ಮಾಡಿದೆಯೋ ಅದರಲ್ಲೆಲ್ಲ ವಿನಯ ಕಾಣುತ್ತದೆ. ಇಲ್ಲಿಯ ಸಾಮಾನ್ಯ ಜನರೂ ಪುಣ್ಯವಂತರಂತೆ ವಿನಯಶೀಲರಾಗಿದ್ದಾರೆ. ಈಚೆಗೆ ಪಾಶ್ಚಾತ್ಯರ ರೀತಿಯನ್ನು ಅನುಕರಿಸು ವುದರಲ್ಲಿ ಈ ವಿನಯಕ್ಕೆ ಸ್ವಲ್ಪ ವ್ಯಾಘಾತಬರುವಂತಿದೆ. ನಿಜವಾದ ಪುರೋಭಿವೃದ್ಧಿ ಮನಸ್ಸಿನ ಸ್ವಾತಂತ್ರ್ಯ; ಹೊರಗಣ ಆಡಂಬರವಲ್ಲ. ಕೆಲವರು ಈ ಆಡಂಬರವನ್ನೇ ಅಪೇಕ್ಷಿಸುತ್ತಾರೆ; ಇನ್ನು ಕೆಲವರು ಪೂರ್ವದಿಂದ ಬಂದಿರುವ ಸಂಪ್ರದಾಯವನ್ನು ಬಿಟ್ಟು ಹೊರಗಣ ಒಂದು

ಸಂಪ್ರದಾಯವನ್ನೇ ಅಪೇಕ್ಷಣೀಯವೆಂದು ತಿಳಿಯಬಹುದು: ಶಕ್ತಿಯುಳ್ಳವರೇ ಬದುಕಬಹುದು ಎಂಬ ವಿಜ್ಞಾನಶಾಸ್ತ್ರದ ತತ್ವವನ್ನು ತಪ್ಪಾಗಿ ತಿಳಿದುಕೊಂಡು ಹರಡಬಹುದು. ಹಳೆಯದಾದ ಜಪಾನ್ ದೇಶ ಇಂಥ ಬೋಧೆಯಿಂದ ಸ್ವಾರ್ಥಪರವಾಗುವ ಸಂಭವ ಉಂಟು. ನಮ್ಮ ಪೂರ್ವ ಸಂಸ್ಕೃತಿ ತಪ್ಪೆ ಎಂದು ಜಪಾನರು ಯೋಚನೆಮಾಡಬೇಕು. ಪಾಶ್ಚಾತ್ಯರಿಂದ ನಮಗೆ ಬಂದಿರುವ ಭಾವನೆಗಳೆಲ್ಲ ಸರಿಯಾದುವೇ ಎಂದು ಪರೀಕ್ಷಿಸಬೇಕು. ಪೂರ್ವದೇಶದವರು ನಮ್ಮಂತೆ ಆದಾರೆಂದು ಪಾಶ್ಚಾತ್ಯರು ಹೆದರುತ್ತಿದಾರೆ. ಇದರಿಂದಲೇ ಅವರ ಸ್ಥಿತಿ ಒಳ್ಳೆಯದಲ್ಲವೆಂದು ಸ್ಪಷ್ಟವಾಗುತ್ತದೆ. ಈಗ ಪಾಶ್ಚಾತ್ಯರು ಜಪಾನರಿಗೆ ಹೆದರುವುದಾದರೆ ಜಪಾನರ ಗುಣವನ್ನು ನೋಡಿ ಅಲ್ಲ; ತಮ್ಮಂತೆ ಇವರೂ ಘಾತಕರಾಗಬಹುದೆಂಬ ಕಾರಣದಿಂದ. ಪಾಶ್ಚಾತ್ಯರು ಯಂತ್ರವನ್ನು ದೈವವೆಂದಂತೆ ನಾವು ಎನ್ನಬಾರದು: ನಾವು ಅದನ್ನು ಉಪಯೋಗಿಸೋಣ; ಆದರೆ ಅದನ್ನು ದೈವವಾಗಿ ಮಾಡದಿರೋಣ. ಪಾಶ್ಚಾತ್ಯವಾದದನ್ನೆಲ್ಲ ಸಂದೇಹ ದೃಷ್ಟಿಯಿಂದ ನೋಡಿ ಎಂದು ಕವಿ ಹೇಳುವುದಿಲ್ಲ. ನಾವು ಅಲ್ಲಿಂದ ಕಲಿಯಬೇಕಾದದು ಬಹಳವಿದೆ; ಆದರೆ ಅಲ್ಲಿಯ ಆಹಾರವನ್ನು ಬಿಟ್ಟು ವಿಷವನ್ನು ತೆಗೆದುಕೊಳ್ಳಬಾರದು. ಪಾಶ್ಚಾತ್ಯ ಸಂಸ್ಕೃತಿ ದುರ್ಬಲವಾದದು; ಅದು ಸೋಲುವುದರಲ್ಲಿದೆ. ಅದು ಸೋತಾಗ ಮಾನವ ವರ್ಗವನ್ನು ಮುಂದುವರಿಸುವುದಕ್ಕೆ ಪೂರ್ವದೇಶೀಯರು ಸಿದ್ಧವಾಗಿರಬೇಕು.

ಭಾರತವರ್ಷದ ಕಾರ್ಯ ಬೇರೆ ಬೇರೆ ಜನತೆಯ ಸಮನ್ವಯ. ಅಮೆರಿಕಾ ದೇಶವೂ ಇದೇ ಕಾರ್ಯವನ್ನು ಮಾಡಬೇಕಾಯಿತು. ಭಾರತವರ್ಷ ವರ್ಣವ್ಯವಸ್ಥೆಯಿಂದ ಈ ಸಮಸ್ಯೆಯನ್ನು ಹರಿಸುವುದಕ್ಕೆ ನೋಡಿತು. ಆಧುನಿಕ ಪ್ರಪಂಚ ರಾಷ್ಟ್ರೀಯಭಾವವನ್ನು ಬಿಟ್ಟು ವಿಶ್ವಪ್ರೇಮ ಎಂಬ ಸೂತ್ರದಿಂದ ಈ ಸಮಸ್ಯೆಯನ್ನು ಹರಿಸಬೇಕಾಗಿದೆ. ಈ ಸೂತ್ರವನ್ನು ಪ್ರಪಂಚದಲ್ಲಿ ಬಳಕೆಗೆ ತರುವುದು ಅಮೆರಿಕಾ ದೇಶದ ಕರ್ತವ್ಯ. ಅಮೆರಿಕಾ ದೇಶ ಹೊಸದು. ಲೋಕ ಕಲ್ಯಾಣಕ್ಕಾಗಿ ಬೇರೆ ಬೇರೆ ದಾರಿಯನ್ನು ಪರೀಕ್ಷಿಸುತ್ತಿದೆ. ಹಿಂದಣಿಂದ ಬಂದ ಸಂಪ್ರದಾಯದ

ಕೋಟಲೆಗೆ ಅದು ಸಿಕ್ಕಿಲ್ಲ. ಯೂರೋಪಿನ ಜನಾಂಗಗಳು ಪಡೆದಿರುವಂತೆ ಅಮೆರಿಕದ ಜನರು ಆಶ್ರಿತ ಜನಾಂಗಗಳನ್ನು ಕಟ್ಟಿಕೊಂಡಿಲ್ಲ. ಯೂರೋಪಿನವರು ಯಾವುದನ್ನು ಒಳ್ಳೆಯದೆಂದುಕೊಂಡಿದ್ದರೋ ಅದನ್ನೇ ನಾವು ಒಳ್ಳೆಯದೆಂದು ತಿಳಿಯುವುದು ಬೇಡ. ರಾಷ್ಟ್ರೀಯಭಾವದಿಂದ ಯುದ್ಧ ಮಾಡುವುದು, ಒಬ್ಬರನ್ನೊಬ್ಬರು ಮೆಟ್ಟುವುದು, ಯೂರೋಪಿನ ಪದ್ಧತಿ. ಈ ಬಾಣ ಬಿರುಸಿಗೆ ಬೆರಗಾಗಿ ನಾವು ನಮ್ಮ ಮನೆಯ ಹಣತೆಯನ್ನು ಅಥವಾ ನಕ್ಷತ್ರಗಳನ್ನು ಹಳಿಯುವಂತಾಗಬಾರದು. ಬಾಣ ಬಿರುಸಿನಿಂದ ಬೆಳಕು ಬರುವುದಿಲ್ಲ; ಗಲಭೆಯೇ ಹೆಚ್ಚು. ಸಮಾಧಾನವಾಗಿ ನೀತಿಯಲ್ಲಿ ಬೆಳೆಯುವುದು ಇದಕ್ಕಿಂತ ದೊಡ್ಡದು. ಯೂರೋಪು ಇದನ್ನು ಮರೆತು ಶಕ್ತಿ ದೊಡ್ಡದೆಂಬಂತೆ ನಡೆಯಬಹುದು; ರಾಷ್ಟ್ರಕ್ಕಾಗಿ ಮನುಷ್ಯನು ನೀತಿಯನ್ನು ಬಿಡಬೇಕೆಂದು ಹೇಳಬಹುದು. ಅದು ಹೀಗೆ ಹೇಳುವುದನ್ನು ನಿಜವೆಂದು ಭ್ರಮಿಸುವುದು ಇಂಡಿಯಾದೇಶದ ಚರಿತ್ರೆಯಲ್ಲಿ ಕಂಡುಬಂದಿದೆ. ನಮ್ಮ ಸೀಮೆಯ ಕಾಂಗ್ರೆಸ್ಸು ಮೊದಮೊದಲಲ್ಲಿ ಪರದೇಶದಿಂದ ಬಂದ ಸರಕಾರದ ಮುಂದೆ ಗೋಪಾಳ ಬೇಡುವುದರಲ್ಲಿ ತೊಡಗಿತು. ಆಮೇಲೆ ಬಂದ ಉಗ್ರವಾದಿಗಳು ಇದನ್ನು ಬಿಟ್ಟು ತಾವೂ ರಾಷ್ಟ್ರವಾಗಬೇಕೆಂದು ತೊಡಗಿದರು. ರಾಷ್ಟ್ರವಾಗುವ ಅನುಕೂಲ್ಯ ನಮಗಿಲ್ಲವೆಂದು ಅವರಿಗೆ ತಿಳಿಯಲಿಲ್ಲ. ವರ್ಣವ್ಯವಸ್ಥೆ ಬೇರೆ ಬೇರೆ ರೀತಿಯ ಜನರನ್ನು ಒಪ್ಪಿಕೊಳ್ಳುವಷ್ಟರಮಟ್ಟಿಗೆ ಒಳ್ಳೆಯದನ್ನು ಮಾಡಿದ್ದರೂ ಅವರನ್ನು ಸರ್ವಕಾಲಕ್ಕೂ ಬೇರೆ ಬೇರೆಯೆನ್ನುವುದರಲ್ಲಿ ಕೆಟ್ಟುದನ್ನೇ ಮಾಡಿತು. ಪಾಶ್ಚಾತ್ಯರು ಆದಿ ಜನಾಂಗಗಳನ್ನು ಕೊಂದುಹಾಕಿದರು. ಭಾರತವರ್ಷ ಅಂಥವರನ್ನು ಕೊಲ್ಲಲಿಲ್ಲ; ಆದರೂ ಅವರನ್ನು ತುಚ್ಛವಾಗಿ ಎಣಿಸಿ ದೇಶದಲ್ಲಿ ಐಕಮತ್ಯ ಅಸಾಧ್ಯವಾಗುವಂತೆ ಮಾಡಿತು. ನಮಗೆ ಸ್ವರಾಜ್ಯ ಬರಬಹುದು; ಸ್ವಾತಂತ್ರ್ಯ ಬರಲಾರದು. ನಾವು ಒಂದು ಜನಾಂಗವಾಗಿಲ್ಲ; ನಾವು ಒಬ್ಬರನ್ನೊಬ್ಬರು ಗೌರವದಿಂದ ಕಾಣುತ್ತಿಲ್ಲ; ಸಮಾಜದಲ್ಲಿ ನಮಗೆ ಸರಿಯೆಂದು ತೋರುವುದನ್ನು ಮಾಡುತ್ತಿಲ್ಲ; ಹಾಗೆ ಮಾಡಿದವರಿಗೆ ತೊಂದರೆ ಕೊಡುತ್ತೇವೆ. ನಮ್ಮಲ್ಲಿ ಕೈಗಾರಿಕೆಗಳಿಲ್ಲ; ಅವು ಬೇಕೆನ್ನುತ್ತೇವೆ; ಅವು ಬಂದಾಗ್ಗೆ ಅವುಗಳ

ಜೊತೆಗೆ ಬರುವ ಕೇಡನ್ನು ತಡೆಯುಲಾಗದೆ ಹೋಗಬಹುದು. ಹೀಗೆ ಭಾರತವರ್ಷದಲ್ಲಿ ಜನಾಂಗಭಾವನೆಯು ಬೆಳವಣಿಗೆ ವಿಷಮವಾದ ಪಥದಲ್ಲಿ ಮುಂದುವರಿದಿದೆ. ಈ ಮಾತಿನಿಂದ ಕವಿ ಅರ್ಥಶಾಸ್ತ್ರಜ್ಞರಲ್ಲವೆಂದು ಜನರಿಗೆ ಸ್ಪಷ್ಟವಾಗಬೇಕು. ಇವರು ಅರ್ಥಶಾಸ್ತ್ರದಷ್ಟನ್ನೇ ಬೇಕೆನ್ನುವುದಿಲ್ಲ. ಅದಕ್ಕಿಂತ ಹೆಚ್ಚಿನದು ಒಂದು ಇದೆ, ಅದನ್ನು ಸಾಧಿಸಿ, ಎನ್ನುತ್ತಾರೆ. ಅದು ಯಾವುದೆಂದರೆ ಬಲಿಷ್ಠರು ದುರ್ಬಲರಿಗೆ ಸಹಾಯ ಮಾಡಿರೆನ್ನುವುದು. ಕೊನೆಗಾದರು ದುರ್ಬಲರಿಗೆ ಒಳ್ಳೆಯದಾಗುತ್ತದೆ. ಈ ವಿಚಾರದಲ್ಲಿ ಕವಿಗೆ ಸಂದೇಹವಿಲ್ಲ.

## ೬೦. ವಿಮರ್ಶೆ

ಠಾಕೂರರು ಬಾಲ್ಯದಲ್ಲಿ ಮಧುಸೂದನದತ್ತನ ಮೇಘನಾದವಧ ಕಾವ್ಯವನ್ನು ವಿಮರ್ಶಿಸಿದ ವಿಷಯವನ್ನು ಹೇಳಿದಾರಷ್ಟೆ. ಅಲ್ಲಿಂದ ಆಚೆಗೆ ಅವರು ಆಗಾಗ ಒಟ್ಟಿನಲ್ಲಿ ಸಾಹಿತ್ಯವನ್ನು ಕುರಿತು ಒಂದೊಂದು ಕೃತಿಯನ್ನು ಕುರಿತು ಅನೇಕ ಲೇಖನಗಳನ್ನು ಪ್ರಕಟಿಸಿದರು. ಇವುಗಳಲ್ಲಿ ಬಹುಭಾಗ ಇಂಗ್ಲೀಷಿನಲ್ಲಿ ಬಂದಿಲ್ಲ. ಪ್ರಾಚೀನ ಸಾಹಿತ್ಯವನ್ನು ಕುರಿತ ಕೆಲವನ್ನು ಶ್ರೀಮಾನ್ ತಳಕಿನ ವೆಂಕಣ್ಣಯ್ಯನವರು ಕೆಲವು ವರ್ಷದ ಹಿಂದೆ ಕನ್ನಡದಲ್ಲಿ ಪ್ರಕಟಿಸಿದರು. ಈಚೆಗೆ ಡಾಕ್ಟರ್ ಶ್ರೀಮಾನ್ ಅಗರದ ನರಸಿಂಹಯ್ಯನವರು ಸಾಹಿತ್ಯ ಎಂಬ ಉಪನ್ಯಾಸ ಗುಚ್ಛವನ್ನು ಕನ್ನಡಿಸಿದಾರೆ. ಈ ಗ್ರಂಥಗಳಲ್ಲಿರುವ ಕಾದಂಬರೀ ಕುಮಾರಸಂಭವ ರಾಮಾಯಣ ಶಾಕುಂತಲ ಮುಂತಾದ ಕೃತಿಗಳನ್ನು ಕುರಿತ ಪ್ರಸಂಗ ಪೀಠಿಕೆಗಳಿಂದಲೂ ಸಾಹಿತ್ಯ ಮೀಮಾಂಸೆಯಿಂದಲೂ ನಾವು ಕವಿವರರ ವಿಮರ್ಶೆಯ ಪದ್ಧತಿಯನ್ನು ಊಹಿಸಬಹುದು. ಇವರು ಸಾಹಿತ್ಯವನ್ನು ಕುರಿತು ಆಳವಾಗಿ ಯೋಚನೆಮಾಡಿದರು; ಕಾವ್ಯವನ್ನು ಓದಿ ಸುಖಿಸಿದರು; ಅದರಿಂದ ತಮ್ಮ ಮನಸ್ಸಿನಲ್ಲಿ ಹುಟ್ಟಿದ ಭಾವನೆಯನ್ನು ವಿವರಿಸಿದರು. ಕವಿತೆಗಳನ್ನು ಕುರಿತ ಇವರ ಭಾವನೆ ಅನೇಕ ವೇಳೆ ಓದಿದ ಕಾವ್ಯದಿಂದ ಬಂದದಲ್ಲ; ಓದುವ ಕವಿಯ ಸಂಸ್ಕಾರದಿಂದ ಬಂದದು. ಹಲವು ವೇಳೆ ಇವರು ಕೊಡುವ ಅರ್ಥದಿಂದ ಪೂರ್ವದ ಕೃತಿಯಲ್ಲಿ ಒಂದು ಹೊಸ ಅರ್ಥ

ಹೊಳೆಯುತ್ತದೆ. ಮೊತ್ತದಲ್ಲಿ ಇವರ ಕಾವ್ಯದಲ್ಲಿ ಪ್ರಕಟವಾಗುವ ಊಹೆಯೇ ಇಲ್ಲಿಯೂ ಎಲ್ಲ ವಿಷಯಕ್ಕೂ ಒಂದು ಹೊಸ ಬೆಳಕನ್ನು ತರುತ್ತದೆ. ಜೀವನದ ಯಾವ ವಿಷಯವನ್ನಾದರೂ ಬರೆಯುವಲ್ಲಿ ಹೇಗೋ ಹಾಗೆ ಠಾಕೂರರು ವಿಮರ್ಶೆಯಲ್ಲಿಯೂ ಸಾವಧಾನವಾಗಿ ಕುಳಿತು ಎಲ್ಲ ಸಂಗತಿಯನ್ನೂ ವಿವರವಾಗಿ ಗ್ರಹಿಸಿ ವಿವರವಾಗಿ ಸೊಗಸಾಗಿ ವರ್ಣಿಸು ತ್ತಾರೆ. ನಾವು ಕೃತಿಗಳನ್ನು ಓದುವಂತೆ ಈ ವಿಮರ್ಶನ ಲೇಖನಗಳನ್ನು ಓದಿ ಆನಂದಪಡುವುದು ಸಾಧ್ಯ. ವಿಮರ್ಶೆಯನ್ನು ಓದುವಂದು ಸಾಹಿತ್ಯ ವನ್ನು ಕುರಿತ ನಮ್ಮ ಭಾವನೆ ವಿಸ್ತಾರವಾಗುತ್ತದೆ; ವಿಮೃಷ್ಟ ಕೃತಿಯ ವಿಚಾರವಾಗಿ ನಮ್ಮ ಕುತೂಹಲ ಹೆಚ್ಚುತ್ತದೆ; ಅನುಭವಶಕ್ತಿ ಒಂದು ಮೆಟ್ಟಲು ಮಿಗಿಲಾಗುತ್ತದೆ. ಇಲ್ಲಿಯೂ ಕವಿ ಭಾವಗೀತಿಕಾ ಕರ್ತೃ ವಾಗಿರುತ್ತಾನೆ. ಠಾಕೂರರ ವಿಮರ್ಶೆಗಳು ವಿಮರ್ಶೆಯಲ್ಲಿ ಭಾವಗೀತೆ ಗಳು, ಶ್ರೇಷ್ಠ ರೀತಿಯ ಉಪನ್ಯಾಸಗಳು.

### ೬೧. ಪತ್ರಗಳು

ವಿಮರ್ಶೆಯಂತೆ ಪತ್ರಲೇಖನವೂ ಠಾಕೂರರು ಬಾಲ್ಯದಿಂದ ಕೈಗೊಂಡ ವ್ಯವಸಾಯ. ಇವರು ಜಮೀನ್‌ದಾರಿಯಲ್ಲಿದ್ದ ಕಾಲದಲ್ಲಿ ಬರೆದ ಪತ್ರಗಳ ವಿಷಯವನ್ನು ಈ ಮೊದಲೇ ಹೇಳಿದೆ. ಈಚೆಗೆ ಇವರು ಎಲ್ಲ ದೇಶಗಳಲ್ಲಿಯೂ ಉಪನ್ಯಾಸಮಾಡಿದ ಕಾಲದಲ್ಲಿ ಇಲ್ಲಿಯ ತಮ್ಮ ಮಿತ್ರರಿಗೆ ಬರೆದ ಅನೇಕ ಪತ್ರಗಳು ಪ್ರಕಟವಾಗಿವೆ. ಇವೆಲ್ಲ ಇವರ ದಿನದ ಜೀವನದ ವಿಚಾರವನ್ನು, ಸುತ್ತ ಕಂಡ ಜನದ ಬಾಳಿನಿಂದ ಇವರ ಮನಸ್ಸಿ ನಲ್ಲಿ ಆದ ಪರಿಣಾಮದ ವಿಚಾರವನ್ನು, ತಮ್ಮ ಕೆಲಸದ ತಮ್ಮ ವಿದ್ಯಾ ನಿಲಯದ ವಿಷಯವಾಗಿ ಇವರಲ್ಲಿ ತಲೆದೋರಿದ ಭಾವನೆಯ ತರಂಗದ ಸ್ವರೂಪವನ್ನು, ತೋರಿಸುತ್ತವೆ. ಇವರು ಉಪಯೋಗಿಸಿದ ಉಳಿದೆಲ್ಲ ಸಾಹಿತ್ಯರೂಪದಂತೆ ಪತ್ರಲೇಖನವೆನ್ನುವುದು ಪಾಶ್ಚಾತ್ಯರಿಂದ ನಮಗೆ ಬಂದಿರುವ ಪದ್ಧತಿ. ದಿನದಿನದ ನಮ್ಮ ಸ್ವಂತ ಅನುಭವವನ್ನೂ ಸಣ್ಣ ಪುಟ್ಟ ವಿಷಯವನ್ನೂ, ಪ್ರಕಟಿಸುವುದಕ್ಕೆಂದಲ್ಲ, ಕೆಳೆಯ ಕಿವಿಗೆ ಮೆಲ್ಲನೆ ಹೇಳುವುದಕ್ಕೆಂದು, ಬರೆದಿಡುವ ಪತ್ರಲೇಖಕನು ಈ ಜಾತಿಯಲ್ಲಿ ಆದರ್ಶ

ಜೀವಿ. ಇಂಥವನು, ಉಳಿದಹಾಗೆ ಮಾತನಾಡದ ಕಾರಣದಿಂದ, ಈ ರೀತಿಯ ಬರವಣಿಗೆಗೆ ಹೆಚ್ಚಿನ ಒಂದು ಕಳೆಯನ್ನು ತರುತ್ತಾನೆ. ಠಾಕೂರರಂತೆ ಬಾಳುವೆಯೇ ಬರಹವಾಗಿರುವವರ ಪತ್ರಗಳಿಗೆ ಇಂಥ ಕಳೆ ಬರುವುದು ಸಾಧ್ಯವಲ್ಲ. ಆದರೆ ಉಳಿದ ಕಡೆ ಹೇಳದ ಮಾತನ್ನು ಇಲ್ಲಿ ಹೇಳಬಹುದಾದ್ದರಿಂದ, ಅವರ ಕೃತಿಗಳ ಅರ್ಥ ಮುಂತಾದ್ದನ್ನು ಗ್ರಹಿಸುವುದಕ್ಕೆ ಇಲ್ಲಿ ಅವರು ಸಾಮಗ್ರಿ ಒದಗಿಸಬಹುದು ಎಂಬ ಕಾರಣದಿಂದ, ಇಂಥವರ ಪತ್ರಗಳಲ್ಲಿಯೂ ರುಚಿಯಾದ ವಿಷಯ ಸಿಕ್ಕುತ್ತದೆ. ಠಾಕೂರರ ಎಳೆತನದ ಪತ್ರಗಳು ಈ ದೃಷ್ಟಿಯಿಂದ ಕುತೂಹಲವನ್ನುಂಟುಮಾಡುತ್ತವೆ; ಆಮೇಲಿನ ಪತ್ರಗಳಲ್ಲಿಯೂ ಹಿರಿಯದೊಂದು ಜೀವ ತನ್ನ ಹಿರಿತನಕ್ಕೆ ತಕ್ಕಂತೆ ಮಾತನಾಡುತ್ತಿರುವುದು ಕಾಣುತ್ತದೆ.

# ಅಧ್ಯಾಯ ೮

## ಇತರ ಕಾರ್ಯಕಲಾಪಗಳು

### ೬೨. ವಿಸ್ತಾರವಾದ ಕಾರ್ಯಕ್ಷೇತ್ರ

ಠಾಕೂರರ ಬಾಲ್ಯದಲ್ಲಿ ಅವರ ಮನೆಯಲ್ಲಿ ನಡೆಯುತ್ತಿದ್ದ ಕಾರ್ಯ ಸಮಾರಂಭಗಳ ವಿಷಯವನ್ನು ಈ ಮೊದಲೇ ಸೂಚಿಸಿದೆ. ಬೆಳೆದ ಹಾಗೆ ಇವರು ಈ ಎಲ್ಲ ಕಾರ್ಯಕ್ಷೇತ್ರಗಳಲ್ಲಿಯೂ ಕೆಲಸಮಾಡಿದರು, ಎಲ್ಲದ ರಲ್ಲಿಯೂ ಕೀರ್ತಿಯನ್ನು ಪಡೆದರು. ಇವರು ಬರೆದಿರುವ ಗ್ರಂಥಗಳಷ್ಟ ರಿಂದಲೇ ಇವರ ಕಾರ್ಯಶಕ್ತಿ ಎಷ್ಟು ಅದ್ಭುತವಾದದೆಂದು ತೋರ ಬೇಕು. ಆದರೆ ಈ ಕಾರಣಪುರುಷರ ಒಟ್ಟು ಕೆಲಸದಲ್ಲಿ ಇದು ಒಂದು ಭಾಗ ಮಾತ್ರ. ಈ ಅಧ್ಯಾಯದಲ್ಲಿ ಇವರ ಇತರ ಕಾರ್ಯಕಲಾಪಗಳ ವಿಷಯವಾಗಿ ನಾಲ್ಕು ಮಾತನ್ನು ಹೇಳಿದೆ.

### ೬೩. ರಾಷ್ಟ್ರಸೇವೆ

ಇವುಗಳಲ್ಲೆಲ್ಲ ಮೊದಲು ಇವರ ರಾಷ್ಟ್ರಸೇವೆ ಹಿರಿಯದು. ಠಾಕೂರರ ಮನೆತನ ಮೊದಲಿಂದಲೂ ಪ್ರಸಿದ್ಧವಾದದು. ಪರದೇಶೀಯ ರಾದ ಅಧಿಕಾರಿಗಳ ವಿಷಯದಲ್ಲಿ ರಾಜಾರಾಮಮೋಹನರಾಯನು ಖಂಡಿಸಿ ಮಾತನಾಡಿದ ಸಂಪ್ರದಾಯ ಬಂಗಾಳದಲ್ಲಿ ಇವರ ಮನೆ ಯಲ್ಲಿಯೂ ಇನ್ನಿಂಥ ಕೆಲವು ದೊಡ್ಡ ಮನೆಗಳಲ್ಲಿಯೂ ಬೆಳೆಯಿತು. ರವೀಂದ್ರನಾಥರು ಎಳೆಯರಾಗಿದ್ದಾಗಲೇ ಒಂದು ಸಮಾಜದಲ್ಲಿ ಸೇರಿದ್ದ ವಿಷಯ ಅವರ ಜೀವನಸ್ಮೃತಿಯಲ್ಲಿ ಬಂದಿದೆ. ಆಗ್ಗೆ ಅದು ಆಟವಾಗಿತ್ತು. ಆದರೆ ಆಟದಲ್ಲಿ ಮಾಡಿದ ಅಭ್ಯಾಸ ಆಮೇಲೆ ಕಾರ್ಯದಲ್ಲಿ ಉಪಯೋಗಕ್ಕೆ ಬಂದಿತು. ನಮ್ಮ ಸೀಮೆಯಲ್ಲಿ ದೇಶಪ್ರೇಮ ಮೊದಲು ರೂಪುಗೊಂಡದು ವೈಸ್‌ರಾಯ್ ಲಾರ್ಡ್ ಕರ್ಜನ್‌ರವರು ಬಂಗಾಳ ದೇಶವನ್ನು ಎರಡು ಭಾಗ

ಮಾಡಿದಾಗ. ಈ ವೈಸ್‌ರಾಯರು ಇದನ್ನು ಒಳ್ಳೆಯ ಭಾವನೆಯಿಂದಲೇ ಮಾಡಿರಬಹುದು. ಆದರೆ ಆ ಮೊದಲು ನಡೆದಿದ್ದ ಸಂದರ್ಭಗಳಿಂದ ಬಂಗಾಳದ ಜನಕ್ಕೆ ಇದು ಬಂಗಾಳಿಗಳನ್ನು ವಿಭಾಗಮಾಡಬೇಕೆಂಬ ದುರಭಿಸಂಧಿಯಿಂದ ಬಂದ ಏರ್ಪಾಡೆಂದು ತೋರಿತು; ಬಂಗಾಳವನ್ನು ಪುನಃ ಒಂದಾಗಿ ಮಾಡಬೇಕೆಂದು ದೇಶದಲ್ಲಿ ಕೋಲಾಹಲವೆದ್ದಿತು. ಠಾಕೂರರು ಈ ಕಾಲದಲ್ಲಿ ನಡೆದ ಸಭೆಗಳಲ್ಲಿ ಭಾಷಣಗಳನ್ನು ಮಾಡಿದರು, ಗೀತಗಳನ್ನು ಹಾಡಿದರು, ಜನದ ತೇಜಸ್ಸನ್ನು ಉಜ್ವಲಗೊಳಿಸಿದರು. ರಾಷ್ಟ್ರಸೇವೆಯಲ್ಲಿ ಕೆಲ ಜನರು ಅನುಸರಿಸಿದ ದಾರಿ ಸರಿಯಲ್ಲವೆಂದು ತೋರಿ ಇವರು ಕೆಲವು ವರ್ಷಗಳಮೇಲೆ ಈ ಕ್ಷೇತ್ರದಿಂದ ಹಿಂದಕ್ಕೆ ಸರಿದರು. ಇವರ ಕತೆಗಳಲ್ಲಿ ಇದರ ಸೂಚನೆ ಬರುತ್ತದೆ. ವಿಶ್ವಸೌಹಾರ್ದದ ವಿಷಯ ಇವರು ಹೇಳಿರುವ ಮಾತು ಈ ಮೊದಲೇ ಬಂದಿದೆ. ಆದರೆ ಠಾಕೂರರ ದೇಶಪ್ರೇಮ ಈ ವಿಶ್ವಪ್ರೇಮದ ಮುಂಜಿನಲ್ಲಿ ದಾರಿತಪ್ಪಿಲ್ಲ. ಅಮೃತಸರೋವರದ ಕೊಲೆಯ ಕಾಲದಲ್ಲಿ ದೇಶವೆಲ್ಲ ಕ್ಷೋಭೆಗೊಂಡಿರುವಾಗ ಇವರು ತಮ್ಮ ದುಃಖವನ್ನೂ ಅಸಮ್ಮತಿಯನ್ನೂ ಸೂಚಿಸುವುದಕ್ಕಾಗಿ ಸರಕಾರದವರು ಕೊಟ್ಟಿದ್ದ ನೈಟ್‌ಪದವಿಯನ್ನು ಅವರಿಗೆ ಹಿಂದಕ್ಕೆ ಕಳುಹಿಸಿದರು. ಈ ಸಂದರ್ಭದಲ್ಲಿ ಇವರು ಬರೆದ ಪತ್ರವು ಧೀರವಾಗಿದೆ, ಗಂಭೀರವಾಗಿದೆ, ಆತ್ಮಗೌರವದಿಂದ ತುಂಬಿ ಹರಿದಿದೆ. ಹಾಗೆಯೇ ಇವರು ಅಮೆರಿಕಾ ದೇಶಕ್ಕೆ ಹೋದ ಸಂದರ್ಭದಲ್ಲಿ ಭಾರತೀಯರನ್ನು ಹೀನವಾಗಿ ಕಾಣುವ ಕೆನಡಾ ದೇಶದವರು ಇವರನ್ನು ಉಪನ್ಯಾಸಮಾಡ ಬರಹೇಳಿ ಆಹ್ವಾನ ಕೊಟ್ಟಾಗ ಇವರು, ನಮ್ಮ ಜನರನ್ನು ನೀವು ಗೌರವದಿಂದ ಕಾಣುವುದಿಲ್ಲ, ನಾನು ಮಾತ್ರ ನಿಮಗೆ ಹೇಗೆ ಬೇಕಾದೇನು, ನಾನು ಬರುವುದಿಲ್ಲ, ಎಂದರು. ಠಾಕೂರರಿಗೆ ಅಸಹಕಾರ ಸಮ್ಮತವಲ್ಲ. ಎಂದರೆ ಸಹಕಾರ ಸಮ್ಮತವೆಂದೂ ಅರ್ಥವಲ್ಲ. ಇವರ ಅಭಿಪ್ರಾಯದಲ್ಲಿ, ಸ್ವಾತಂತ್ರ್ಯ ಯಾರೂ ಕೊಡುವುದರಿಂದ ಬರುವುದಿಲ್ಲ. ನಾವು ಸ್ವತಂತ್ರರಾಗಿರುವ ಅಪೇಕ್ಷೆಯಿಂದ ಯತ್ನಮಾಡಿ ನಮ್ಮ ಬಾಳನ್ನು ಪರಿಷ್ಕರಿಸಿಕೊಂಡರೆ ಅಂದೇ ಸ್ವಾತಂತ್ರ್ಯ ಬರುತ್ತದೆ. ಸ್ವಾತಂತ್ರ್ಯವೆನ್ನುವುದು ರಾಷ್ಟ್ರಜೀವನದಲ್ಲಿ ಸಕಾಲದಲ್ಲಿ ಬರುವ ಹೂ. ಅದು ಮರಕ್ಕೆ ತಗಲು

ಹಾಕುವ ಲಾಂದರವಲ್ಲ. ಆದದರಿಂದ ನಾವು ಸರಕಾರದೊಂದಿಗೆ ವಾದ ಮಾಡಬೇಕಾದದಿಲ್ಲ; ನೀವು ನಮಗೆ ಬೇಕಾದಷ್ಟನ್ನು ಕೊಡಲಿಲ್ಲ ಇದು ನಮಗೆ ಬೇಡ ಎಂದು ಹೇಳಬೇಕಾದದಿಲ್ಲ. ಪರದೇಶದವರು ನಮ್ಮ ಮೇಲೆ ದರ್ಪತೋರುತ್ತಿದಾರಲ್ಲ ಎಂಬ ಕಾರಣದಿಂದ ಅವರ ದೇಶದಿಂದ ಬರುವ ಬಟ್ಟೆಯನ್ನು ಸುಡಬೇಕಾದದಿಲ್ಲ. ಈ ಭಾವನೆಯಿಂದ ಇವರು ೧೯೨೧ರಲ್ಲಿ ಮಹಾತ್ಮಾ ಗಾಂಧಿಯವರು ಅಸಹಕಾರವನ್ನು ಆರಂಭಿಸಿದಾಗ ಒಂದು ಕಡೆಗೆ ನಿಂತರು; ಅವರೊಂದಿಗೆ ಚರ್ಚೆ ಬೆಳಸಿದರು. ೧೯೦೫ರಲ್ಲಿ ಇವರು ಸ್ವದೇಶೀ ಚಳವಳಿಯನ್ನು ಬಿಟ್ಟು ಒಂದು ಪಕ್ಕಕ್ಕೆ ನಿಂತಾಗ ಜನರಲ್ಲಿ ಅಸಮಾಧಾನ ಉಂಟಾದಂತೆ ಈ ಸಲವೂ ಆಯಿತು. ಅನೇಕರು ಠಾಕೂರ ರಿಗೆ ದೇಶಪ್ರೇಮ ಕಡಮೆ ಎಂದೇ ಹೇಳಿದರು. ಆಮೇಲೆ ಇವರು ಮಹಾತ್ಮಾಗಾಂಧಿಯವರ ವಿಷಯದಲ್ಲಿ ಇದಕ್ಕಿಂತ ಹೆಚ್ಚಿನ ಒಪ್ಪಿಗೆಯಿಂದ ನಡೆದುಕೊಂಡರು. ಇದು ಹೇಗಾದರೂ ಠಾಕೂರರ ಪ್ರೇಮ ಎಷ್ಟು ನಿಜವಾದದು ಹಿರಿಯದು ಎಂಬ ವಿಷಯದಲ್ಲಿ ಯಾರಿಗೂ ಸಂದೇಹವಿರ ಬೇಕಾದದಿಲ್ಲ. "ಜನಗಣಮನ ಅಧಿನಾಯಕ" ಎಂದು ಮೊದಲಾಗುವ ಇವರ ರಾಷ್ಟ್ರಗೀತದಲ್ಲಿ ಕಾಣುವ ರಾಷ್ಟ್ರಪ್ರೇಮ ಉತ್ತಮ ರೀತಿಯದು. "ಎಲ್ಲಿ ಚಿತ್ತ ಭಯಶೂನ್ಯ" ಎಂಬ ಮಾತಿನ ಗೀತವೂ ಹೀಗೆಯೇ. ಠಾಕೂರರು ಬಂಗಾಳದ ಸ್ವದೇಶೀ ಚಳವಳಿಯ ಜೀವವಾಗಿದ್ದರು. ಈಗಲೂ ದೇಶಪ್ರೇಮಿಗಳಾಗಿ ಕೆಲಸಮಾಡುವ ಜನರಲ್ಲಿ ಇವರ ಮಾತಿ ನಿಂದ ಹುರುಪುಗೊಳ್ಳದ ದೇಶಸೇವಕರು ವಿರಳ. ಕವಿವರರು ಹೇಳಿದ ಮಾತನ್ನು ನಾವು ಈಗ ನಡಸುತ್ತಿದೇವೆ ಎಂದು ಮಹಾತ್ಮಾ ಗಾಂಧಿ ಯವರು ಹೇಳಿದಾರೆ. ಇದು ಬರಿಯ ಮರ್ಯಾದೆಗೆ ಹೇಳಿದ ಮಾತಲ್ಲ. ಮಹಾತ್ಮರು ಬೆಂಗಳೂರಿಗೆ ಬಂದಿದ್ದಾಗ ಒಂದು ಸಭೆಯಲ್ಲಿ ಠಾಕೂರರ "Leave this chanting and singing and telling of beads (ಭಜನ ಪೂಜನ ಸಾಧನ ಆರಾಧನ)" ಪದ್ಯವನ್ನು ಕೇಳಿ ತಮ್ಮ ವಸ್ತ್ರ ವನ್ನು ನೋಡಿಕೊಂಡು, ನಾನು ಬಡವನಂತೆ ಬಟ್ಟೆ ಹಾಕಿಕೊಂಡಿಲ್ಲ, ಎಂದುಕೊಂಡರು. ಇದಾದಮೇಲೆಯೇ ಅವರು ಪಗಡಿಯನ್ನು ಬಿಟ್ಟದು, ಚಡ್ಡಿಯನ್ನು ತೆಗೆದುಕೊಂಡದು. ನಮ್ಮ ರಾಷ್ಟ್ರಸೇವೆಯ ಹಲವು

ಮುಖಂಡರ ಹಲವು ಭಾವನೆಗಳು ಹೀಗೆಯೇ ಠಾಕೂರರ ಗ್ರಂಥಗಳಿಂದ ಎಚ್ಚತ್ತಿರುವುದರಲ್ಲಿ ಸಂದೇಹವಿಲ್ಲ. ಅವರ ಕತೆಗಳಲ್ಲಿ ಉಪನ್ಯಾಸಗಳಲ್ಲಿ ಪದ್ಯಗಳಲ್ಲಿ ದೇಶಪ್ರೇಮವೂ ದೇಶದ ಶುಭವನ್ನು ಕುರಿತ ಹಲವು ವಿಧವಾದ ವಿಚಾರವೂ ಉಜ್ವಲವಾದ ರೂಪವನ್ನು ಪಡೆದಿವೆ. ಇದರಿಂದ ಕವಿವರರು ತಾವು ದೇಶಸೇವೆ ಮಾಡಿರುವುದಲ್ಲದೆ ನೂರು ಜನರನ್ನು ದೇಶ ಸೇವೆಯಲ್ಲಿ ನಡಸಿದಾರೆ.

## ೬೪. ವಾಗ್ಮಿತೆ

ಠಾಕೂರರು ಶ್ರೇಷ್ಠ ರೀತಿಯ ಉಪನ್ಯಾಸಕಾರರು. ಒಳ್ಳೆಯ ಗ್ರಂಥವನ್ನು ಬರೆಯುವ ಮನುಷ್ಯನು ವಾಗ್ಮಿಯಲ್ಲದೆ ಇರಬಹುದು; ವಾಗ್ಮಿಯಾದವನು ಬರೆದ ಗ್ರಂಥದಲ್ಲಿ ಅಷ್ಟು ಬೆಲೆಯಿಲ್ಲದಿರಬಹುದು. ಕವಿವರರಲ್ಲಿ ಇವೆರಡು ಶಕ್ತಿಗಳೂ ಸೇರಿದ್ದವು. ಇವರ ಕಂಠ ಕಂಚಿನ ತಾಳದ ಸ್ವನದಂತೆ ಎತ್ತಿ ಕೇಳುತಿತ್ತು, ಇಂಪಾಗಿತ್ತು. ಮಾತು ಮುದ್ದಾಗಿತ್ತು; ವಿಷಯದ ಪ್ರತಿಪಾದನೆ ಸುಂದರವಾಗಿರುತಿತ್ತು. ಹೇಳುವ ಮುಖ್ಯ ವಿಚಾರವನ್ನು ವಿಶದಪಡಿಸಿ ಉದಾಹರಿಸಿ ಒಕ್ಕಣೆ ಹೇಳಿ, ಕೇಳಿದವರಿಗೆ ಅರ್ಥವಾಗುವಂತೆ ಕೇಳುವಷ್ಟೂ ಹಿತವಾಗಿರುವಂತೆ, ವಿವರಿಸುವ ಕಲೆ ಇವರ ಉಪನ್ಯಾಸಗಳಲ್ಲಿ ಉದ್ದಕ್ಕೂ ಕಾಣುತ್ತದೆ. ಇದು ನಮಗೆ ತಿಳಿದಿರುವುದು ಇವರ ಇಂಗ್ಲೀಷ್ ಭಾಷಣಗಳಲ್ಲಿ. ಬಂಗಾಳಿಯಲ್ಲಿ ಇವರ ಈ ಶಕ್ತಿ ಇನ್ನೂ ಅದ್ಭುತವಾದದೆಂದು ಜನರು ಹೇಳಿದಾರೆ. ಇವರು ಉಪನ್ಯಾಸಗಳನ್ನು ಕೊಡುತ್ತಿದ್ದ ಕಾಲದಲ್ಲಿ ಜನ ಕಿಕ್ಕಿರಿದು ಕೇಳುತಿದ್ದರಂತೆ. ಬ್ರಾಹ್ಮಸಮಾಜದಲ್ಲಿ ಇವರು ಕೊಡುತಿದ್ದ ಭಾಷಣಗಳನ್ನು ಕೇಳ ಬಂದವರು ಸ್ಥಳವಿಲ್ಲದೆ ನಿಲ್ಲುತಿದ್ದರೆಂದು ತಿಳಿಯುತ್ತದೆ. ಇವರ ಧೀರವಾದ ಆಕಾರ, ಗಂಭೀರವಾದ ಮುಖಮುದ್ರೆ, ಸುಖವಾದ ಶರೀರ, ನಯವನ್ನು ಸೂಚಿಸುವ ಹಸ್ತವಿನ್ಯಾಸ, ಇವೆಲ್ಲ ಇವರ ಉಪನ್ಯಾಸಕ್ಕೆ ಒಂದು ಅಪೂರ್ವವಾದ ಕಳೆಯನ್ನು ಕಟ್ಟಿದುವು. ಹತ್ತಾರು ದೇಶಗಳಲ್ಲಿ ಇವರು ಉಪನ್ಯಾಸ ಮಾಡಿದರು. ಎಲ್ಲ ಕಡೆಯಲ್ಲಿಯೂ ಬಲ್ಲ ಜನರೂ ಅಲ್ಲದವರೂ ಇವರ ವಾಗ್ಮಿತೆಯಿಂದ ಮುಗ್ಧರಾದರು.

೬೫. ಬ್ರಾಹ್ಮ ಸಮಾಜ

ಠಾಕೂರರು ಬ್ರಾಹ್ಮಸಮಾಜದಲ್ಲಿ ಮಾಡಿದ ಕೆಲಸ ಅದರ ಚರಿತ್ರೆಯಲ್ಲಿ ಬಹು ಮುಖ್ಯವಾದದು. ದೇವೇಂದ್ರನಾಥ ಠಾಕೂರರು ಸ್ವಲ್ಪ ಮಟ್ಟಿಗೆ ಸಂಪ್ರದಾಯಕ್ಕೆ ತಗ್ಗಿ ನಡೆಯುತಿದ್ದರು. ಬ್ರಾಹ್ಮಸಮಾಜದ ವೇದಿಯಿಂದ ಬ್ರಾಹ್ಮಣರು ಮಾತ್ರ ಉಪದೇಶ ಮಾಡಬಹುದೆಂಬ ಒಂದು ಕಟ್ಟಳೆಯನ್ನು ಅವರು ನಡಸುತಿದ್ದರು. ರವೀಂದ್ರನಾಥರು ಅದನ್ನು ಕಿತ್ತುಹಾಕಿದರು. ಈಚೆಗೆ ಬ್ರಾಹ್ಮ ಸಮಾಜ ಹಿಂದೂ ಸಮಾಜದ ಒಂದು ಭಾಗವೆಂಬ ಭಾವನೆಯನ್ನು ಬೆಳಸಿಕೊಂಡಿದೆ. ಇದಕ್ಕೆ ಠಾಕೂರರ ಮನೆತನದವರೇ ಕಾರಣವೆನ್ನಬಹುದು. ಕೇಶವಚಂದ್ರಸೇನರ ಅನುಯಾಯಿಗಳು ಅತಿಸುಧಾರಣೆಯ ಉಪಾಸನೆಯಲ್ಲಿ ಪಾಶ್ಚಾತ್ಯರ ಪಡಿಯಚ್ಚಾಗುತ್ತಿರಲಾಗಿ ಈ ಶಾಖೆಯವರು ದೇಶೀಯ ಭಾವನೆಗಳನ್ನು ಹೆಚ್ಚಾಗಿ ಬೆಳಸಿಕೊಂಡು ಈಗ ಹಿಂದೂ ಸಮಾಜದ ಮುಂದಾಳುಗಳಾಗಿದಾರೆ. ಇದಕ್ಕೆ ಬಹುಮಟ್ಟಿಗೆ ರವೀಂದ್ರನಾಥರು ಕಾರಣರು.

೬೬. ವಿದ್ಯಾಭ್ಯಾಸ: ಶಾಂತಿನಿಕೇತನ

ರವೀಂದ್ರನಾಥರು ಪ್ರಾಪ್ತವಯಸ್ಕರಾದ ಮೊದಲು ಮಕ್ಕಳ ವಿದ್ಯಾಭ್ಯಾಸವನ್ನು ಕುರಿತು ಯೋಚನೆಮಾಡಿದರು. ನಮ್ಮ ಪೂರ್ವ ಚರಿತ್ರೆಯಲ್ಲಿ ಕುಲಪತಿಗಳ ಆಶ್ರಮದಲ್ಲಿ ಪೂಜ್ಯಗುರುಗಳಿಂದ ವಿದ್ಯೆ ಕಲಿಯುತ್ತಿದ್ದ ಬಾಲಕರು ಈಚೆಗೆ ಕವಿಯ ಕನಸಿನ ಚಿತ್ರವಾಗಿ ಕರಗಿಹೋದರು. ಆಂಗ್ಲೇಯರು ಬರುವ ವೇಳೆಗೆ ನಮ್ಮ ಸೀಮೆಯಲ್ಲಿ ಗುರುವಿಂದ ಶಿಷ್ಯನಿಗೆ ಪ್ರವಹಿಸುವ ಜ್ಞಾನ ಬಹುಮಟ್ಟಿಗೆ ದೊಣ್ಣೆ ದಂಡುಕೋಲಿನ ಸಹಾಯದಿಂದ ಹರಿಯುತಿತ್ತು. ಆಂಗ್ಲೇಯ ಪದ್ಧತಿಗಳು ಆರಂಭವಾದಮೇಲೆ ದಂಡುಕೋಲು ಹೋಯಿತು, ದೊಣ್ಣೆ ಸ್ವಲ್ಪ ಮರೆಯಾಯಿತು. ಆದರೆ ವಿದ್ಯೆ'ಎನ್ನುವುದು ಮುಖ್ಯವಾಗಿ ಶಿಕ್ಷಣ ಎಂಬ ಭಾವ ಮತ್ತಷ್ಟು ಬೆಳೆಯಿತು. ಠಾಕೂರರು ಪಾಠಶಾಲೆಯಲ್ಲಿ ಕಳೆದ ವರ್ಷಗಳು ಅವರಿಗೆ ದುಃಖಮಯವಾಗಿ ನೆನವಿನಲ್ಲಿ ನಿಂತವು. ಈ ಕಾರಣದಿಂದ ಅವರು ವಿದ್ಯೆಯನ್ನು ಸುಖದ ದಾರಿಯಾಗಿ ಮಾಡುವುದು ಹೇಗೆಂದು ಯೋಚಿಸಿ ೧೯೦೨ರಲ್ಲಿ ಶಾಂತಿ

ನಿಕೇತನದ ಪಾಠಶಾಲೆಯನ್ನು ಆರಂಭಿಸಿದರು. ಇವರೇ ಇದರ ವಿಚಾರವನ್ನು ಒಂದು ಉಪನ್ಯಾಸದಲ್ಲಿ ಹೇಳಿದಾರೆ; ಅದರ ಸಾರಾಂಶವನ್ನು ಮೇಲೆ ಕೊಟ್ಟಿದೆ. ಈ ಶಾಲೆ ಈಗ ದೊಡ್ಡದಾಗಿ ಬೆಳೆದಿದೆ. ಈಚೆಗೆ ಇದರಲ್ಲಿ ಶಿಶು ವಿಭಾಗ ಒಂದು ಏರ್ಪಾಡಾಗಿದೆ. ಇಲ್ಲಿ ಮಕ್ಕಳು ಒಂದು ಕೋಟಡಿಯಲ್ಲಿ ಕುಳಿತು ಪಾಠವೆನ್ನುವುದು ಏನೋ ಒಂದು ನಿರ್ಬಂಧವೆಂಬಂತೆ ನಡೆದುಕೊಳ್ಳುವುದಿಲ್ಲ. ಮರದ ಕೆಳಗೆ ಎಲ್ಲಿ ಅನುಕೂಲವಾದರೆ ಅಲ್ಲಿ ಉಪಾಧ್ಯಾಯನೂ ಆಯಾ ತರಗತಿಯ ಹುಡುಗರೂ ಸೇರುತ್ತಾರೆ. ಮಕ್ಕಳು ಮರದ ನೆರಳಲ್ಲಿಯೋ ಹೂಬಿಸಿಲಲ್ಲಿಯೋ ಹುಲ್ಲಮೇಲೆ ಕುಳಿತು ಪಾಠ ಕಲಿಯುತ್ತಾರೆ. ಪಾಠ ಮುಖ್ಯವಾಗಿ ಮಾತೃಭಾಷೆಯಲ್ಲಿ. ಕಲಿವು ರುಚಿಸಬೇಕಾದರೆ, ಅದರಿಂದ ಜೀವಕ್ಕೆ ಸಂಪೂರ್ಣವಾದ ಫಲ ದೊರೆಯಬೇಕಾದರೆ, ಮಕ್ಕಳಿಗೆ ಮಾತೃಭಾಷೆಯಲ್ಲಿ ಪಾಠವಾಗಬೇಕೆಂದು ಠಾಕೂರರ ಅಭಿಪ್ರಾಯ. ಇದನ್ನು ಇವರು ತಮ್ಮ ಜೀವನಸ್ಮೃತಿಯಲ್ಲಿ ಒತ್ತಿ ಹೇಳಿದಾರೆ. ಇದು ಇವರ ಶಾಂತಿನಿಕೇತನದ ಶಾಲೆಯಲ್ಲಿ ಕಾರ್ಯಕಾರಿಯಾಗಿದೆ. ಠಾಕೂರರು ಕವಿಸಹಜವಾದ ಪ್ರವೃತ್ತಿಯಿಂದ ಶಾಲೆಯ ಕಾರ್ಯಕ್ರಮದಲ್ಲಿ ಬಣ್ಣವನ್ನು ತುಂಬಿದರು. ಬೆಳಗಾಗ ಮಕ್ಕಳು ಸುಪ್ರಭಾತವನ್ನು ಹಾಡುವುದು; ಎರಡು ನಿಮಿಷ ಧ್ಯಾನದಲ್ಲಿ ಕುಳ್ಳಿರುವುದು; ವಸಂತೋತ್ಸವ, ಪುಷ್ಯಮಾಸದ ಹಬ್ಬ, ಇಂಥ ಹಬ್ಬ ಹುಣ್ಣಿಮೆಗಳಲ್ಲಿ ಕಲೆತು ಹರ್ಷವಾಗಿರುವುದು; ಯಾವುದಾದರೂ ಸಂದರ್ಭದಲ್ಲಿ ಕವಿಗಳ ಹಾಡನ್ನು ಕಲಿಯುವುದು, ಹೇಳುವುದು; ಐನೂರು ಜನ ಸೇರಿ ಒಂದು ಮದುವೆಯ ಮನೆಯಲ್ಲೆಂಬಂತೆ ನಗುತ್ತಿರುವುದು; ಇದೆಲ್ಲ ಈ ಶಾಲೆಯನ್ನು ಒಂದು ಗುರುಕುಲದಂತೆ ಮಾಡಿದೆ. ಇಲ್ಲಿ ಕಲೆಗೆ ಮುಖ್ಯವಾದ ಸ್ಥಾನ ಉಂಟು. ಚಿತ್ರಕಲೆಗೆ ಒಂದು ಶಾಖೆಯೇ ಇದೆ. ಇದರ ಮುಖ್ಯಾಧ್ಯಾಪಕರು ಶ್ರೀ ನಂದಲಾಲ ಬಸು ಅವರು. ಶ್ರೀ ಅವನೀಂದ್ರನಾಥ ಠಾಕೂರರ ಶಿಷ್ಯವರ್ಗದಲ್ಲಿ ಹೆಸರಾದವರೆಂದರೆ ಮೈಸೂರಿನ ವೆಂಕಟಪ್ಪನವರು ನಂದಲಾಲ ಬಸುಗಳು. ಇವರ ಸೇವೆಯನ್ನು ಹಿಡಿಯಬೇಕಾದರೆ ಸಂಸ್ಥೆ ಎಷ್ಟು ಹಿರಿಯದೆಂದು ಹೇಳಬೇಕಾದದಿಲ್ಲ. ಪರದೇಶದಿಂದ ಬಂದಿರುವ ಅನೇಕ ಮಹನೀಯರು ಈ ಶಾಲೆಯ ವ್ಯವಸ್ಥೆಯನ್ನು ನೋಡಿ

ಬಾಯ್ತುಂಬ ಹೊಗಳಿದಾರೆ. ನಮ್ಮವರೂ ಕೆಲವರು ಹೊಗಳಿದಾರೆ. ಆದರೆ ಇವರ ಸಂಖ್ಯೆ ಕಡಮೆ. ನಡೆಯುತ್ತಿರುವ ಕೆಲಸದಲ್ಲಿ ಕುಂದು ಮಾತ್ರ ಕಂಡು ತೆಗಳಿರುವವರೂ ಇದಾರೆ. ಬಂಗಾಳದಲ್ಲಿ ಬ್ರಾಹ್ಮಸಮಾಜದ ವಿಷಯದಲ್ಲಿ ಅಸಮಾಧಾನವುಳ್ಳವರು ಈ ಪಾಠಶಾಲೆಯಮೇಲೆ ತಮ್ಮ ಕೋಪವನ್ನು ತೀರಿಸಿಕೊಳ್ಳುವುದುಂಟು. ಇಂಥವರೊಬ್ಬರು, ಇದು ಪೂರ್ವದ ಆಶ್ರಮಗಳಂತೆ ಇದೆ ಎಂಬ ಮಾತಿಗೆ, ಆಶ್ರಮಗಳಲ್ಲಿದ್ದಂತೆ ಇಲ್ಲಿ ಮರಗಳಿವೆ ಇನ್ನೇನೂ ಕಾಣಲಿಲ್ಲ ಎಂದರಂತೆ. ಇಂಥ ಬುದ್ಧಿವಂತಿಕೆಯ ಮಾತಿನಿಂದ ಒಂದು ಸಂಸ್ಥೆಯ ಯೋಗ್ಯತೆಯನ್ನು ಅಳೆದು ಮುಗಿಸುವೆನೆನ್ನುವುದು ಅವಿಶ್ವಾಸದ ಚಿಹ್ನೆ. ಇದರಿಂದ ಹೇಳುವವನ ಮನೋಧರ್ಮ ವ್ಯಕ್ತವಾಗುತ್ತದೆ ಹೊರತಾಗಿ ವಿಷಯ ನಿರ್ಧಾರವಾಗುವುದಿಲ್ಲ. ಏನಿಲ್ಲವೆಂದರೂ ಈ ಶಾಲೆ ಧೀರನಾದ ಕವಿವೀರನ ಆಶಾಪೂರ್ಣವಾದ ಒಂದು ಯತ್ನ, ಒಂದು ಉದ್ಯಮ. ನಮ್ಮ ದೇಶದ ವಿದ್ಯಾಭ್ಯಾಸ ಕ್ರಮ ಇನ್ನೂ ಸರಿಯಾದ ದಾರಿಗೆ ಬಂದಿಲ್ಲ. ಮುಂದೆ ಅದು ಸರಿಯಾದ ದಾರಿಗೆ ಬರುವುದಕ್ಕೆ ಈ ಶಾಲೆಯಲ್ಲಿ ನಡೆಯುತ್ತಿರುವ ಪರೀಕ್ಷೆಯೂ ಸಹಾಯಮಾಡುತ್ತದೆ ಎನ್ನುವುದು ನಿರ್ವಿವಾದ ಅಂಶ. ಈಗ ಇಲ್ಲಿ ನೂರಾರು ಹುಡುಗರು ಹುಡುಗಿಯರು ಇದಾರೆ; ಐವತ್ತು ಜನ ಉಪಾಧ್ಯಾಯರೂ ಉಪಾಧ್ಯಾಯಿನಿಯರೂ ಇದಾರೆ; ಇವರೆಲ್ಲ ಜಾತಿ ಕುಲಗಳ ಭೇದವನ್ನೆಣಿಸದೆ ಭಾರತವರ್ಷದ ಮಕ್ಕಳೆಂಬ ಒಂದು ಮುಖ್ಯ ಸೂತ್ರವನ್ನು ಹಿಡಿದು ಸೋದರ ಸೋದರಿಯರಂತೆ ಜೊತೆಯಾಗಿ ಸೌಹಾರ್ದದಲ್ಲಿ ವರ್ತಿಸುತ್ತ ಕವಿಯ ಕನಸನ್ನು ನಿಜವಾಗಿ ಮಾಡಲು ಯತ್ನ ಮಾಡುತ್ತಿದಾರೆ.

### ೬೭. ವಿಶ್ವಭಾರತಿ

ಕವಿವರರು ದೇಶ ವಿದೇಶಗಳನ್ನು ಸುತ್ತಿ ಅಲ್ಲಲ್ಲಿ ಉಪನ್ಯಾಸ ಮಾಡುವುದರಲ್ಲಿ ಅವರ ಮನಸ್ಸಿನಲ್ಲಿ ಒಂದು ಭಾವ ಮೂಡಿತು. ಈಗ ನಮ್ಮ ದೇಶದಲ್ಲಿರುವ ವಿಶ್ವವಿದ್ಯಾನಿಲಯಗಳು ನಮ್ಮ ಸಂಸ್ಕೃತಿಯನ್ನು ಬೆಳಸುವ ಅಥವಾ ಪ್ರಕಾಶಪಡಿಸುವ ಸಂಸ್ಥೆಗಳಲ್ಲ. ಪಾಶ್ಚಾತ್ಯ ಸರಕಾರ

ದಿಂದ ಏರ್ಪಟ್ಟು ಇವು ನಮ್ಮ ಜನಕ್ಕೆ ಪಾಶ್ಚಾತ್ಯರಲ್ಲಿ ಬಳಕೆಯಾಗಿರುವ ತಿಳಿವಳಿಕೆಯನ್ನು ಹರಡುವ ಪ್ರಯತ್ನದಲ್ಲಿ ತೊಡಗಿವೆ. ಸೋತ ಜನವೆಂದರೂ ನಮಗೆ ಒಂದು ವ್ಯಕ್ತಿತ್ವವಿದೆ. ಅದರ ಮೂಲದಲ್ಲಿ ಬಹು ಕಾಲದಿಂದ ಬೆಳೆದ ಒಂದು ಸಂಸ್ಕೃತಿ ಇದೆ. ಅದನ್ನು ಮುಖ್ಯವಾಗಿಟ್ಟುಕೊಂಡು ಒಂದು ಸರಸ್ವತೀಪೀಠ ಇರಬೇಕು. ಅಲ್ಲಿಗೆ ಪಾಶ್ಚಾತ್ಯ ವಿದ್ವಾಂಸರು ಬಂದು ನಮ್ಮ ಸಂಸ್ಕೃತಿಯನ್ನು ಕುರಿತು ಹೇಳುವುದಿದ್ದರೆ ಹೇಳಬೇಕು, ಕೇಳುವುದಿದ್ದರೆ ಕೇಳಿ ತಿಳಿಯಬೇಕು. ಠಾಕೂರರು ಈ ಉದ್ದೇಶದಿಂದ ಒಂದು ಸಂಸ್ಥೆಯನ್ನು ತಾವೇ ಏರ್ಪಡಿಸುವುದೆಂದು ನಿರ್ಧರಿಸಿದರು. ಶಾಂತಿನಿಕೇತನದ ಶಾಲೆಗೆ ಮೇಲಣ ಕಟ್ಟಡವಾಗಿ ಒಂದು ಸರಸ್ವತೀಪೀಠವನ್ನು ಏರ್ಪಡಿಸಿ ಅದಕ್ಕೆ ವಿಶ್ವಭಾರತಿ ಎಂದು ಹೆಸರಿಟ್ಟರು. ೧೯೨೧ರಲ್ಲಿ ಠಾಕೂರರ ಮಿತ್ರರು, ಆಗ ನಮ್ಮ ಮೈಸೂರಿನ ವಿಶ್ವವಿದ್ಯಾನಿಲಯದ ವೈಸ್‌ಛಾನ್ಸಲರಾಗಿದ್ದ, ಸರ್ ಬ್ರಜೇಂದ್ರನಾಥ ಶೀಲರಿಂದ ಇದರ ಆರಂಭೋತ್ಸವ ಜರುಗಿತು. ಶ್ರೀ ವಿಂಟರ್‌ನಿಟ್ಸ್, ಸ್ಟೆನ್‌ಕೋನೋ, ಸಿಲ್ವೇನ್ ಲೆವಿ ಮೊದಲಾದ ಪಾಶ್ಚಾತ್ಯ ವಿದ್ವಾಂಸರು ಬಂದು ಇಲ್ಲಿ ಉಪನ್ಯಾಸಮಾಡಿದ್ದಾರೆ. ಪಾಶ್ಚಾತ್ಯ ಮಿತ್ರಸಮಾಜದ ಪ್ರಮುಖರು ಹಣಕೊಟ್ಟು ತಮ್ಮ ಪರವಾಗಿ ಇಲ್ಲಿ ಪಾಶ್ಚಾತ್ಯ ಪಂಡಿತರನ್ನು ಉಪನ್ಯಾಸಮಾಡಲು ನಿಲ್ಲಿಸಿದ್ದಾರೆ. ಈ ಪೀಠದ ಕಡೆಯಿಂದ "ವಿಶ್ವಭಾರತಿ" ಎಂಬದೊಂದು ತ್ರೈಮಾಸಿಕ ಪತ್ರಿಕೆ ಹೊರಡುತ್ತಿದೆ. ಇದರಲ್ಲಿ ಅಮೂಲ್ಯವಾದ ಲೇಖನಗಳು ಬರುತ್ತವೆ. ವಿಶ್ವಭಾರತಿಗೆ ಸೇರಿದಹಾಗೆ ಒಂದು ಪುಸ್ತಕ ಭಂಡಾರವಿದೆ. ಇಲ್ಲಿ ಹಲವರು ಪಂಡಿತರು ಸಂಶೋಧನ ಕಾರ್ಯದಲ್ಲಿ ತೊಡಗಿದ್ದಾರೆ; ಹಲವರು ವಿದ್ಯಾರ್ಥಿಗಳು ತಮ್ಮ ಇಷ್ಟದ ವಿಷಯವನ್ನು ಆರಿಸಿಕೊಂಡು ಅಭ್ಯಾಸದಲ್ಲಿ ಅನ್ವೇಷಣದಲ್ಲಿ ಮುಂದುವರಿಯುತ್ತಿದಾರೆ. ಇಲ್ಲಿಯ ಗುರುವರ್ಗದಲ್ಲಿ ವಿಧುಶೇಖರ ಭಟ್ಟಾಚಾರ್ಯರು ಒಬ್ಬರು. ಠಾಕೂರರು ಪರ್ಷಿಯಾ ದೇಶಕ್ಕೆ ಹೋಗಿ ಬಂದ ಆಚೆಗೆ ಇಲ್ಲಿಗೆ ಪರ್ಷಿಯಾದ ಚಕ್ರವರ್ತಿಗಳು ಶ್ರೀ ದಾವೂದ್ ಎಂಬ ಒಬ್ಬ ವಿದ್ವಾಂಸರನ್ನು ಕಳುಹಿಸಿದರು. ಇದು ಇನ್ನೂ ಬೆಳೆಯಬೇಕಾದ ಸಂಸ್ಥೆ; ಬೆಳೆಯುತ್ತಿರುವುದು ಕಾಣುತ್ತದೆ.

## ೬೮. ಪ್ರಾಚ್ಯ ಸಂಸ್ಕೃತಿ, ಪ್ರಾಚ್ಯ ಸಂಘಟನ

ಠಾಕೂರರು ತಾವು ದೊಡ್ಡ ಕೆಲಸವನ್ನು ಮಾಡಿದ್ದಲ್ಲದೆ ಇತರರಿಂದಲೂ ಮಾಡಿಸಿದರು. ಸ್ವತಂತ್ರ ರಾಷ್ಟ್ರಗಳಾಗಿ ತಕ್ಕಮಟ್ಟಿಗೆ ಒಳ್ಳೆಯ ಸ್ಥಿತಿಯಲ್ಲಿದ್ದ ಜಪಾನ್ ದೇಶಕ್ಕೂ ಪರ್ಷಿಯಾ ದೇಶಕ್ಕೂ ಹೋಗಿ ಕವಿವರರು ಅಲ್ಲಿಯ ಜನರಿಗೆ ಏಷ್ಯಾಖಂಡದ ಸಂಸ್ಕೃತಿ ಅವರಿಂದ ಏನನ್ನು ನಿರೀಕ್ಷಿಸುತ್ತಿದೆ ಎಂಬುದನ್ನು ಹೇಳಿದರು; ದುರ್ಬಲನನ್ನು ಬಡಿದು ಬಾಯಿಗೆ ಹಾಕಿಕೊಳ್ಳುವ ನೀತಿ ನಮಗೆ ತರವಲ್ಲ, ನಮ್ಮ ಪೂರ್ವಿಕರು ವಿಶ್ವಪ್ರೇಮದ ಪಥದಲ್ಲಿ ನಡೆದರು, ನಾವು ಈಗ ನಡೆಯಬೇಕಾದದು ಅದೇ ಪಥ ಎಂದು ಸಾರಿದರು. ಪ್ರಾಚ್ಯದೇಶಗಳ ಸಂಸ್ಕೃತಿಯ ರಕ್ಷಣೆಗಾಗಿ ಏರ್ಪಾಡಾದ ಸಂಸ್ಥೆಗಳಲ್ಲಿ ಇವರು ಕೈಯಲ್ಲಾದ ಕೆಲಸವನ್ನು ವಹಿಸಿ ದುಡಿದರು. ಕೆಲವು ವರುಷಗಳ ಹಿಂದೆ "National University" ಎನ್ನುವುದು ಒಂದು ಏರ್ಪಟ್ಟಾಗ ಠಾಕೂರರು ಅದಕ್ಕೆ ವೈಸ್‌ಛಾನ್ಸಲರ್ ಆದರು. ಪೂರ್ವದಲ್ಲಿ ಭಾರತವರ್ಷದ ಸಂಸ್ಕೃತಿ ಹರಡಿದ ವಿಷಯವನ್ನು ಅನ್ವೇಷಿಸುವ ಒಂದು ಸಂಘಕ್ಕೆ ಇವರು ಪುರೋಧರರಾದರು. ಈ ಸಂಬಂಧದಲ್ಲಿ ಬಲಿದ್ವೀಪಕ್ಕೆ ಹೋಗಿ ಅಲ್ಲಿರುವ ಚಿತ್ರ ಕಟ್ಟಡ ನಾಟ್ಯ ಎಲ್ಲವನ್ನೂ ನೋಡಿಕೊಂಡು ಬಂದರು. ಹಿಂದೆಬಿದ್ದಿರುವ ಪ್ರಾಚ್ಯ ರಾಷ್ಟ್ರಗಳೆಲ್ಲ ಎಚ್ಚತ್ತು ಒಂದಾಗಿ ನಡೆದು ಹಿಂದಣ ವೈಭವವನ್ನು ಮರಳಿ ಕಾಣಬೇಕೆಂಬ ಪಲ್ಲವಿಯನ್ನು ಇವರು ತಮ್ಮ ಉಪನ್ಯಾಸಗಳಲ್ಲೆಲ್ಲ ಹೇಳುತ್ತಲೇ ಇದ್ದರು. ಪ್ರಾಚ್ಯಜನಾಂಗಗಳ ಸಂಘಟನದ ಮಹಾಕಾರ್ಯವನ್ನು ಕಾರ್ಯವೆಂದು ಕಂಡ ಮುಖಂಡರಲ್ಲಿ ಠಾಕೂರ ಕವಿವರರು ಒಬ್ಬರು. ಆ ಕನಸನ್ನು ಸಾಧಿಸುವುದಕ್ಕೆ ಇನ್ನು ಯಾರಿಂದಲೂ ಸಾಧ್ಯವಲ್ಲದ ಹೆಚ್ಚಿನ ಕೆಲಸವನ್ನು ಇವರು ಮಾಡಿದರು.

## ೬೯. ವಿಶ್ವಮೈತ್ರಿ

ಕವಿವರರ ಜೀವನದ ಕೊನೆಯ ಭಾಗ ಮುಖ್ಯವಾಗಿ ವಿಶ್ವಮೈತ್ರಿಯನ್ನು ಸಾಧಿಸುವುದರಲ್ಲೇ ಕಳೆಯಿತು. ಪ್ರಪಂಚ ಬಹುಕಾಲ ದೇಶಗಳಾಗಿ ಇದ್ದು ಜೀವಿಸಿ ಈಗ ಆಧುನಿಕ ಸಾಧನಗಳ ಫಲವಾಗಿ ಒಂದು

ಕುಟುಂಬದಂತೆ ಬಾಳಬಹುದಾದ ಸ್ಥಿತಿಗೆ ಬಂದಿದೆ. ಇದುವರೆಗೆ ದೇಶ ಗಳು ನಾನು ಶ್ರೇಷ್ಠ, ತಾನು ಶ್ರೇಷ್ಠ ಎಂದುಕೊಂಡರೆ ಬಹುತೊಂದರೆ ಇರಲಿಲ್ಲ; ಇನ್ನುಮೇಲೆ ಇಂತಹ ದುರಭಿಮಾನ ಲೋಕಕ್ಕೇ ಅಪಾಯ ವನ್ನು ತರುತ್ತದೆ. "East is East and West is West and never the twain shall meet" ಪೂರ್ವ ಪೂರ್ವವೇ, ಪಶ್ಚಿಮ ಪಶ್ಚಿಮವೇ, ಇವು ಬೆರೆತು ಬಾಳುವುದು ಸಾಧ್ಯವಲ್ಲ, ಎಂಬ ಮನೋಧರ್ಮ ಪೂರ್ವ ದೇಶೀಯರಲ್ಲಿದ್ದರೂ ತಪ್ಪು; ಪಶ್ಚಿಮ ದೇಶೀಯರಲ್ಲಿದ್ದರೂ ತಪ್ಪು. ಠಾಕೂರರು ಈ ವಿವರವನ್ನು ಎಲ್ಲ ಜನಾಂಗಗಳಿಗೂ ಮನಮುಟ್ಟುವಂತೆ ಉಪದೇಶಮಾಡಿದರು. ಪೂರ್ವ ದೇಶಗಳ ಸಂಸ್ಕೃತಿಯ ಲ್ಲಿ ಕೆಲವು ಗುಣ ಇವೆ; ಕೆಲವು ದೋಷ ಇವೆ. ಪಶ್ಚಿಮ ದೇಶಗಳ ಸಂಸ್ಕೃತಿಯಲ್ಲಿ ಕೆಲವು ಗುಣ ಇವೆ; ಕೆಲವು ದೋಷ ಇವೆ. ಮಾನವಕುಲ ಎರಡರ ಗುಣಾಂಶವನ್ನೂ ಗ್ರಹಿಸಿ ಎರಡರ ದೋಷವನ್ನೂ ತ್ಯಜಿಸಿ ಲೋಕ ಸಂಸ್ಕೃತಿ ಒಂದನ್ನು ಮಾಡಿ ಕೊಳ್ಳಬೇಕು. ವಶಿಷ್ಠ ವಿಶ್ವಾಮಿತ್ರರಂತೆ ಪೂರ್ವ ಪಶ್ಚಿಮಗಳು ಕಾದು ವುದನ್ನು ಮುಗಿಸಿ ಮಿತ್ರವಾಗಬೇಕು. ಎಲ್ಲ ಜನಾಂಗಗಳೂ ಒಟ್ಟುಗೂಡಿ ಒಂದು ಜನಾಂಗದಂತೆ ಬಾಳಬೇಕು. ವಿಶ್ವ ಒಂದು ಕುಟುಂಬ ಎಂಬುದರ ಲಕ್ಷಣವಾಗಿ ಜನಾಂಗ ಯಾವುದೇ ಆಗಲಿ ಬೇರೊಂದು ಜನಾಂಗವನ್ನು ದುರ್ಬಲವಾಗಿದೆ ಎಂಬ ಕಾರಣದಿಂದ ಅಡಗಿಸಿಟ್ಟು ಸ್ವಾರ್ಥಕ್ಕಾಗಿ ಬಳಸಿ ಕೊಳ್ಳುವುದು ನಿಲ್ಲಬೇಕು. ಪ್ರಬಲಜನಾಂಗಗಳು ದುರ್ಬಲ ಜನಾಂಗ ಗಳನ್ನು ಹೊರೆಯಬೇಕು, ಬೆಳಸಬೇಕು. ಜನಾಂಗ ಜೀವನದಲ್ಲಿ ಕೂಡ ಐಶ್ವರ್ಯವೆನ್ನುವುದು ಬಾಹ್ಯವಸ್ತು ಸಂಚಯ ಅಲ್ಲ, ಆಧ್ಯಾತ್ಮಿಕ ಉನ್ನತಿ, ಎನ್ನುವುದನ್ನು ತಿಳಿದು ನಡೆಯಬೇಕು. ಠಾಕೂರರ ಈ ಉಪದೇಶ ಮುಂದೆ ಬರಬೇಕಾಗಿರುವ ವಿಶ್ವಮೈತ್ರಿಯ ತಳಹದಿ. ಈ ಧ್ಯೇಯಕ್ಕಾಗಿ ಇವರು ಮಾಡಿದ ಸೇವೆ ಅಮೋಘವಾದದು, ಅಮೂಲ್ಯವಾದದು.

## ೭೦. ಗ್ರಾಮೋಜ್ಜೀವನ

ವಿಶ್ವಭಾರತಿಗೆ ಸೇರಿದ ಹಾಗೆ ಠಾಕೂರರು ಶ್ರೀನಿಕೇತನ ಎಂಬ ಹೆಸರಿನಿಂದ ಗ್ರಾಮೋಜ್ಜೀವನ ಕೇಂದ್ರವೊಂದನ್ನು ಏರ್ಪಡಿಸಿದರು. ನಮ್ಮ

ರಾಷ್ಟ್ರದಲ್ಲಿ ಬಹುಕಾಲದಿಂದಲೂ ಗ್ರಾಮಗಳೇ ಜನಜೀವನದ ಮೂಲ ಸಂಸ್ಥೆಗಳು. ಸರಕಾರದವರು ಏನುಮಾಡಿದರೂ ಬಿಟ್ಟರೂ ಗ್ರಾಮದವರು ತಮ್ಮ ಸೌಕರ್ಯವನ್ನು ತಾವು ಕಲ್ಪಿಸಿಕೊಳ್ಳುತಿದ್ದರು. ಈಗಲೂ ನಮ್ಮ ಜನ ಸುಖಿಗಳಾಗಬೇಕಾದರೆ ಗ್ರಾಮಗಳು ತಮ್ಮ ಕೆಲಸವನ್ನು ಮಾಡಿ ಕೊಳ್ಳುವುದನ್ನು ಕಲಿಯಬೇಕು, ಎಂದು ಕವಿಗಳದು ಮೊದಲಿಂದ ಅಭಿ ಪ್ರಾಯ. ಶ್ರೀನಿಕೇತನದಲ್ಲಿ ಇವರು ಈ ಅಭಿಪ್ರಾಯವನ್ನು ಕಾರ್ಯದಲ್ಲಿ ತಂದರು. ಗ್ರಾಮೋಜ್ಜೀವನವೆಂದರೆ ಪೂರ್ವದಲ್ಲಿ ಇದ್ದ ಸ್ಥಿತಿಯಲ್ಲಿಯೇ ಇರಬೇಕೆಂಬ ಅಭಿಪ್ರಾಯವಲ್ಲ. ಹೊಸ ರೀತಿಯ ಉಳುಮೆ, ಹೊಸ ಹೊಸ ಬೆಳೆ, ಇದಕ್ಕೆಲ್ಲ ಬೇಕಾದ ಸಂಶೋಧನ ಅನ್ವೇಷಣ, ಗ್ರಾಮಗಳಲ್ಲಿರುವ ಕೈಗಾರಿಕೆಗಳನ್ನು ಅಭಿವೃದ್ಧಿಗೊಳಿಸುವುದು, ಹೊಸವು ಅನುಕೂಲವಾಗಿ ದ್ದರೆ ಅವುಗಳನ್ನು ತಂದು ನಿಲ್ಲಿಸುವುದು, ದನಗಳು ಕುರಿಗಳು ಇವುಗಳ ಪೋಷಣೆಯನ್ನು ಆಧುನಿಕ ರೀತಿಯಲ್ಲಿ ಹೆಚ್ಚು ಲಾಭ ಬರುವಂತೆ ಪರಿಷ್ಕರಿಸುವುದು ; ಇದೆಲ್ಲ ಈ ಕೇಂದ್ರದಲ್ಲಿ ಕಾಣುತ್ತದೆ. ಇಲ್ಲಿ ಪಾಶ್ಚಾತ್ಯ ಕೃಷಿಶಾಸ್ತ್ರಜ್ಞರೊಬ್ಬರು ಕೆಲಕಾಲ ಮುಖಂಡರಾಗಿದ್ದರು ; ಈಗ ಇಲ್ಲಿಯ ವರೇ ಒಬ್ಬರು ಆ ಸ್ಥಾನದಲ್ಲಿದಾರೆ. ಇಲ್ಲಿಯ ಅನ್ವೇಷಕರಲ್ಲಿ ಹಲವರು ಪಾಶ್ಚಾತ್ಯ ವಿಶ್ವವಿದ್ಯಾನಿಲಯಗಳಲ್ಲಿ ಒಳ್ಳೆಯ ಪದವಿಗಳನ್ನು ಪಡೆದಿರು ವಂಥವರು. ಇಲ್ಲಿ ಏರ್ಪಟ್ಟಿರುವ ಕೈಗಾರಿಕೆಗಳು ಒಂದೆರಡಲ್ಲ. ಬಟ್ಟೆಯ ಕೆಲಸ, ಮರಗೆಲಸ, ಚರ್ಮದ ಕೆಲಸ, ಕೊಂಬಿನ ಕೆಲಸ, ಇದರಲ್ಲಿ ಸಾಮಾನ್ಯ ಉಪಯೋಗಕ್ಕೆ ತಕ್ಕ ಕೆಲಸ, ಭೋಗಿಗಳು ಅಪೇಕ್ಷಿಸಬಹು ದಾದ ಚಿತ್ರದ ಕೆಲಸ, ಹೀಗೆ ವಿಧ ವಿಧವಾದ ಕೆಲಸದಲ್ಲಿ ಶಿಕ್ಷೆ ನಡೆಯು ತ್ತಿದೆ. ಇದರಲ್ಲಿ ಗ್ರಾಮದ ಜನರಿಗೆ ಕೆಲಸವನ್ನು ಒದಗಿಸುತ್ತಿದಾರೆ. ಇಲ್ಲಿ ಆಗಾಗ ಪ್ರದರ್ಶನ ನಡೆಯುತ್ತದೆ. ಉಳಿದ ಕಡೆ ಇಂಥ ಉದ್ಯಮಗಳಲ್ಲಿ ಇಲ್ಲದೆ ಇಲ್ಲಿ ಇರುವುದೆಂದರೆ ಕಲಾಪರಿಪೂರ್ಣವಾದ ಒಂದು ಆವರಣ ಚಿಹ್ನೆ: ಗೋಡೆಗಳಮೇಲೆ ಇರುವ ಚಿತ್ರಗಳು, ಕವಿತೆಗಳು ; ನೆಲದಮೇಲೆ ಹಾಕಿರುವ ರಂಗವಲ್ಲಿ ; ಒಂದು ಚಿತ್ರಮಾಲೆಯಲ್ಲಿ ಠಾಕೂರರು ಉಳುವಂತೆ ಗಿಡಹಾಕುವಂತೆ ಮುಂತಾಗಿ ಚಿತ್ರಗಳು ; ಆ ಕೊನೆ ಈ ಕೊನೆಗೆ ಬಂಗಾ ಳಿಯ ಲಿಪಿಯಲ್ಲಿ ಬರೆದಿರುವ ಅವರ ಕವಿತೆಯೊಂದು. ಒಟ್ಟಿನಲ್ಲಿ ಒಂದು

ಸರಕಾರ ಏರ್ಪಡಿಸುವುದಕ್ಕೆ ಅಂಜಬಹುದಾದ ಖರ್ಚಿನ ಪ್ರಯತ್ನಗಳನ್ನು ಠಾಕೂರರು ತಮ್ಮ ಒಬ್ಬರ ಶಕ್ತಿಯಿಂದಲೇ ಆರಂಭಿಸಿದರು. ಸರಕಾರದ ಕೆಲಸದಲ್ಲಿ ಸಾಮಾನ್ಯವಾಗಿ ಕಾಣಲಾಗದ ಒಂದು ಶ್ರದ್ಧೆ ಇಲ್ಲಿಯ ಕೆಲಸಗಾರರಲ್ಲಿ ಕಾಣುತ್ತದೆ. ಎಲ್ಲದರಲ್ಲಿಯೂ ಒಬ್ಬ ಕವಿಯ ಕಲಾಪ್ರೇಮದ ಬೆಳಕು ಹೊಳೆಯುತ್ತಿದೆ. ಇದರಿಂದ ಠಾಕೂರರು ಸೌಂದರ್ಯವನ್ನು ಊಹೆಯಲ್ಲಿ ಮಾತ್ರ ಕಾಣುವವರಲ್ಲ ಕಾರ್ಯದಲ್ಲಿ ತರಬಲ್ಲವರೆಂದು ಸ್ಪಷ್ಟವಾಗುತ್ತದೆ. ಈ ರೀತಿಯ ಪ್ರಯತ್ನ ಹರಡಿದಲ್ಲಿ ನಮ್ಮ ಗ್ರಾಮಗಳ ಜೀವನದಲ್ಲಿ ಅದ್ಭುತವಾದ ಪರಿಷ್ಕರಣ ಉಂಟಾಗುವುದೆನ್ನುವುದು ನಿರ್ವಿವಾದವಾದ ವಿಷಯ.

## ೭೧. ಸಂಗೀತ

ಕವಿವರರು ತಾರುಣ್ಯದಲ್ಲಿ ಸಂಗೀತ ನಾಟಕಗಳನ್ನು ಬರೆದರು; ಅಣ್ಣ ಜ್ಯೋತಿರಿಂದ್ರನ ಜೊತೆಗೆ ಸಂಗೀತದಲ್ಲಿ ಹೊಸ ಮಟ್ಟುಗಳನ್ನು ಹಾಕಿ ನೋಡಿದರು. ಆಮೇಲಣ ಇವರ ಕವನದಲ್ಲಿ ಬಹುಭಾಗ ಗೀತ; ಕವಿ ಹಾಡುತ್ತಾ ಬರೆದದು, ಹಾಡುವುದಕ್ಕೇ ರಚಿಸಿರತಕ್ಕದು. ಇವರು ತಮ್ಮ ಗೀತೆಗಳನ್ನು ಹಾಡಿ ಹೇಳುವುದು ಬಹಳ ಇಂಪಾಗಿರುತಿತ್ತೆಂದು ಕೇಳಿದವರು ಹೇಳುತ್ತಾರೆ. ಕೊನೆಗೂ ಇವರು ಹಾಡಿನಲ್ಲಿ ಹೊಸ ಹೊಸ ಗತಿಗಳನ್ನು ನೋಡುತ್ತಲೇ ಇದ್ದರು. ಸಾಮಾನ್ಯವಾಗಿ ಇವರ ಗೀತೆಗಳ ರಾಗವನ್ನು ಇವರ ಸಂಬಂಧದ ದಿನೇಂದ್ರನಾಥರು ಪಾಠಮಾಡಿ ಜ್ಞಾಪಕದಲ್ಲಿಟ್ಟುಕೊಳ್ಳುವರು. ಇವರ ಶಾಲೆಯ ಹಬ್ಬ ಹುಣ್ಣಿಮೆಗಳಲ್ಲಿ ವಿದ್ಯಾರ್ಥಿಗಳು ಸೇರಿ ಹಾಡಬೇಕೆಂದು ಬರೆದ ಹಾಡುಗಳನ್ನು ದಿನೇಂದ್ರರಿಂದ ಯಾರಾದರೊಬ್ಬರು ಕಲಿತು ಉಳಿದವರಿಗೆ ಹೇಳಿಕೊಡುತ್ತಾರೆ. ಇಂಥ ಗೀತ ಎಷ್ಟು ಚೆನ್ನಾಗಿರುತ್ತದೆಂಬುದನ್ನು ಗುಂಪಿನಿಂದ ಹಾಡಿದಾಗಲೇ ತಿಳಿಯಬೇಕು. ಹಲವು ಕಂಠಗಳು ಸೇರಿ ಒಂದು ಗಾನಗತಿಯನ್ನು ಸಮರಸದಿಂದ ತರುವಾಗ ಸಾಮಾನ್ಯವಾದ ಗತಿಯಾದರೂ ವಿಚಿತ್ರವಾದ ಸೊಗಸನ್ನು ಪಡೆಯುತ್ತದೆ. ಇಂಥದರಲ್ಲಿ ಠಾಕೂರರ ಊಹೆ ಹುಡುಕಿ ತಂದ ಚಿತ್ರ ಚಿತ್ರವಾದ ಗತಿಗಳು ಇಂಥ ಸಂದರ್ಭದಲ್ಲಿ ಎಷ್ಟು ಚೆನ್ನಾಗಿರ

ಬಹುದೆಂಬುದು ಅನುಭವೈಕವೇದ್ಯ. ಠಾಕೂರರು ಬಂಗಾಳದ ಸಂಗೀತ ಸಾಮ್ರಾಜ್ಯವನ್ನು ಅಸಾಧಾರಣವೂ ಆನಂದದಾಯಕವೂ ಆದ ಗತಿಗಳಿಂದ ವಿಸ್ತಾರಪಡಿಸಿದರು; ಕವಿಯಲ್ಲದ ಸಂಗೀತಗಾರನಿಂದಾಗಲಿ ಸಂಗೀತ ವನ್ನರಿಯದ ಕವಿಯಿಂದಲಾಗಲಿ ಸಾಧ್ಯವಲ್ಲದ ಒಂದು ರೀತಿಯಲ್ಲಿ ಭಾವ ರಾಗಗಳನ್ನು ಹೊಂದಿಸಿ ತಮ್ಮ ಗೀತಗಳಲ್ಲಿ ಎರಡು ಕಲೆಗಳ ಸುಖವನ್ನು ಏಕಕಾಲದಲ್ಲಿ ಕೊಟ್ಟರು.

## ೭೨. ನಾಟಕರಂಗ

ಇವರು ನಾಟಕರಂಗದಲ್ಲಿ ಮಾಡಿದ ಮಾರ್ಪಾಡು ಇದರಂತೆಯೇ ಸ್ತೋತ್ರಾರ್ಹವಾದದು. ನಮ್ಮ ಸೀಮೆಯ ನಗರಗಳ ಈಗಣ ಸಾಮಾನ್ಯ ನಾಟಕದ ಪರದೆ ಪೋಷಾಕು ನಾವು ಪಾಶ್ಚಾತ್ಯರ ಅನುಕರಣದಿಂದ ತಂದುಕೊಂಡಿರತಕ್ಕದು. ಒಳ್ಳೆಯ ನಾಟಕಕ್ಕೆ ಈ ರೀತಿಯ ಹೆಚ್ಚು ಖರ್ಚಿನ ಕಾರುಬಾರು ಅನವಶ್ಯಕ. ನಾಟಕಕ್ಕೆ ಬರುವವರಿಗೆ ಸಹೃದಯತೆ ಯಿಂದ ಬರುವ ತಲ್ಲೀನತೆ ಮುಖ್ಯ. ಪರದೆ ಪೋಷಾಕಿನಿಂದ ಈ ತಲ್ಲೀನತೆ ಬರಲಾರದು. ಇದು ಠಾಕೂರರ ಅಭಿಪ್ರಾಯ. ಈ ಕಾರಣದಿಂದ ಇವರು ತಮ್ಮ ನಾಟಕಗಳನ್ನು ಮರದ ಕೆಳಗೆ ಬಯಲಿನಲ್ಲಿ ಬಹಳ ಸಾಮಾನಿಲ್ಲದೆ ಅಭಿನಯಕ್ಕೆ ತಂದರು. ತಾವೂ ಪಾತ್ರಗಳನ್ನು ವಹಿಸಿ ನಾಟಕಗಳ ಅಭಿನಯದಲ್ಲಿ ಭಾಗಿಗಳಾದರು. ಇಂಥ ಸಂದರ್ಭಗಳನ್ನು ನೋಡಿರು ವವರು ಇವರ ನಾಟಕವೂ ನಟನೆಯೂ ಬಹು ಚೆನ್ನಾಗಿದ್ದವೆಂದು ಹೇಳಿ ದಾರೆ. ಮುಖ್ಯ ಈ ಭಾಗದಲ್ಲಿ, ನಾಟಕದ ಸುಖ ನಟನನ್ನೂ ಕತೆಯ ರಸವನ್ನೂ ಅವಲಂಬಿಸಿದ್ದು, ಪರದೆ ಪೋಷಾಕನ್ನಲ್ಲ, ಎಂದು ಇವರು ತೋರಿಸಿದ್ದು ನಾವು ಗಮನಿಸಬೇಕಾದ ವಿಷಯ. ಇದು ನಾಟಕದ ಪೂರ್ವದ ಸ್ಥಿತಿ; ಹಾಗೆಯೇ ಆಧುನಿಕ ನಾಟಕದ ಧ್ಯೇಯ. ಇದನ್ನು ಸಾಧಿಸುವುದಕ್ಕೆ ಠಾಕೂರರ ರಂಗ ಸನ್ನಾಹ ಬಹಳ ಸಹಾಯಮಾಡಿತು.

## ೭೩. ಚಿತ್ರಕಲೆ

ಇಷ್ಟು ಕಲೆಗಳಲ್ಲಿ ಪ್ರವೇಶವುಳ್ಳ ಕವಿವರರಿಗೆ ಚಿತ್ರಕಲೆಯೂ ಬಾಗಿ ಲನ್ನು ತೆರೆಯಿತು. ಇವರು ಇದಕ್ಕೆ ಕೈಹಾಕಿದ್ದು ಕೊನೆಕೊನೆಗೆ. ಕವಿ

ಒಮ್ಮೆ ಇಂಗ್ಲೆಂಡಿಗೆ ಹೋದಾಗ್ಗೆ ಇವರು ಚಿತ್ರಗಳನ್ನು ಬರೆಯುತ್ತಿದಾರೆ ಎಂದು ತಿಳಿಯಿತು. ಆಮೇಲೆ ಇವರು ಅವುಗಳನ್ನೆಲ್ಲ ಪ್ರದರ್ಶಿಸಿದರು. ಠಾಕೂರರು ಯಾರಲ್ಲೂ ಚಿತ್ರಕರ್ಮವನ್ನು ಕಲಿತವರಲ್ಲ. ಇದರಿಂದ ಅನೇಕರಿಗೆ ಈ ಚಿತ್ರಗಳ ವಿಷಯದಲ್ಲಿ ಅಪನಂಬಿಕೆ. ಸಾಲದ್ದಕ್ಕೆ ಈ ಚಿತ್ರಗಳು ಯಾವುದಾದರೊಂದು ಸಂಪ್ರದಾಯದ ಪ್ರಕಾರ ಬರೆದುವಲ್ಲ. ಈ ಕಾರಣದಿಂದ ಇವರ ಚಿತ್ರಗಳ ವಿಷಯ ಬಹಳ ಭಿನ್ನಾಭಿಪ್ರಾಯವಿದೆ. ಇವುಗಳಲ್ಲಿ ಕೆಲವನ್ನು ನೋಡಿದವರಾದರೂ ಅವುಗಳ ಭಾವನೆ ವಿಚಿತ್ರವಾದದೆಂದೂ ಅದನ್ನು ತಂದಿರುವ ರೀತಿಯಲ್ಲಿ ಬಹಳ ಕೌಶಲ್ಯವಿದೆಯೆಂದೂ ಒಪ್ಪಬೇಕು. ಕೆಲವು ಚಿತ್ರಗಳು ಚೆನ್ನಾಗಿದ್ದಂತೆ ಕಾಣದಿದ್ದರೂ ಇನ್ನು ಕೆಲವು ಚಿತ್ರ ಯಾವುದೋ ಒಂದು ವಿಲಕ್ಷಣ ಸನ್ನಿವೇಶವನ್ನು ಆಕಾರದ ಭಾಷೆಯಲ್ಲಿ ಹೇಳುತ್ತಿವೆಯೆನ್ನುವುದು ಸ್ಪಷ್ಟವಾಗಿದೆ. ನಿಮ್ಮ ಚಿತ್ರಗಳ ಅರ್ಥವೇನು ಎಂದು ಕೇಳಿದವರಿಗೆ ಠಾಕೂರರು ಅರ್ಥ ಇದು ಎಂದು ಹೇಳಿಲ್ಲ; ಅದನ್ನು ನೀವೇ ತಿಳಿಯಬೇಕು ಎಂದಿದಾರೆ. ಈ ಚಿತ್ರಗಳನ್ನು ಮೆಚ್ಚದವರೂ ಕೂಡ ಎಪ್ಪತ್ತು ವರುಷ ವಯಸ್ಸಿನಲ್ಲಿ ಹೊಸ ಕಲೆಗೆ ಕೈಹಾಕಿದ ಕವಿವರರ ಊಹೆ ಉದ್ಯಮಗಳನ್ನು ಹಿರಿಯುವೆಂದು ಒಪ್ಪಿಕೊಳ್ಳಬೇಕು. ಇದರ ಜೊತೆಗೆ ಇನ್ನೊಂದು ಭಾವದಿಂದ ಹೊರಟರೆ ಚಿತ್ರಗಳ ಅರ್ಥವೂ ಸ್ವಲ್ಪಮಟ್ಟಿಗೆ ಆಗಬಹುದು. ಇವುಗಳನ್ನು ಬರೆದವರು ಭಾವ ರಸಗಳನ್ನು ತಿಳಿಯದ ಮಂಕರಲ್ಲ; ಒಳ್ಳೆಯ ಚಿತ್ರಗಳನ್ನು ನೋಡಿ ಅರಿಯದ ಮೂಢರಲ್ಲ; ಊಹಾವಂತರು, ಕಲಾಭಿಜ್ಞರು. ಇವರು ಸಂತೋಷದಿಂದ ಬರೆದದಲ್ಲದೆ ಇವುಗಳನ್ನು ನೋಡಿ ಎಂದು ಈ ಚಿತ್ರಗಳನ್ನು ನಮ್ಮೆದುರಿಗೆ ಇಟ್ಟರಾದದರಿಂದ, ಈ ಕೆಲಸದಲ್ಲಿ ಏನಾದರೂ ಗುಣವಿರಬೇಕು, ನೋಡೋಣ, ಎನ್ನುವುದೆ ಆ ಭಾವ. ಇಲ್ಲಿ ನಾನು ಇಷ್ಟನ್ನು ಹೇಳುತ್ತೇನೆ. ಈ ಚಿತ್ರಗಳು ಕೆಲ ಜನ ಹೇಳುವಂತೆ ನಿರುಪಯುಕ್ತವಾದುವಲ್ಲ; ಇವುಗಳಲ್ಲಿ ಕೆಲವನ್ನು ನೋಡಿ ನನಗೆ ಸಂತೋಷವಾಗಿದೆ.

# ಅಧ್ಯಾಯ ೯

## ಸಂಭಾವನೆ

### ೭೪. ವ್ಯಂಜಕ ಕಾವ್ಯ, ಕಥೆ

ಠಾಕೂರರ ಕಾವ್ಯ ಮುಖ್ಯವಾಗಿ ವ್ಯಂಜಕ ಕಾವ್ಯ ಅಥವಾ ಕಥೆ. ಇವರ ಕಾವ್ಯದ ಮುಖ್ಯ ಕಾರ್ಯ ಇವರ ಜೀವನದ ಅವಸ್ಥೆ ಭಾವಗಳನ್ನು ಚಿತ್ರಿಸುವುದು. ಹೀಗೆ ಇಲ್ಲದ್ದು ಕತೆಯನ್ನು ಹೇಳುತ್ತದೆ. ಅಲ್ಲಿಯೂ ಕತೆ ಇವರ ಮನಸ್ಸಿನ ಒಂದು ಭಾವವನ್ನು ರೂಪಿಸುವುದಕ್ಕಾಗಿಯೇ ಬಂದಿದೆ; ಆದರೆ ಕತೆಯಲ್ಲಿ ಇದು ಮರೆದಿರುತ್ತದೆ. ಎಂದರೆ ಠಾಕೂರರು ಮುಖ್ಯವಾಗಿ ಗೀತಿಕಾಕರ್ತರು. ಇಂಥ ಬರಹದಲ್ಲಿ ಕವಿಯ ಜೀವನದ ಒಂದು ನೋವು ಒಂದು ನಲಿವು, ಒಂದು ಬೇನೆ ಒಂದು ಬಯಕೆ, ಒಂದು ಹಸಿವು ಒಂದು ಹಾರೈಕೆ, ತೀವ್ರವಾದ ಮಾತಿನಲ್ಲಿ ರೂಪುಗೊಂಡು ಹೇಳುವವರ ಮನಸ್ಸನ್ನು ಹಗುರಮಾಡುತ್ತದೆ, ಕೇಳುವವರ ಮನಸ್ಸನ್ನು ಮೋಹಗೊಳಿಸುತ್ತದೆ. ಇದರಲ್ಲಿ ಜೀವ ಇರುವುದು ಕವಿಯ ಅನುಭವದ ಯಾಥಾರ್ಥ್ಯದಿಂದ, ಅವನ ಭಾವನೆಯ ತೈಕ್ಷ್ಣ್ಯದಿಂದ, ಅವನ ಆತ್ಮ ವ್ಯಂಜನದ ಕೌಶಲದಿಂದ. ಇಂಥ ಕವಿತೆ ಒಬ್ಬನ ಅನುಭವದಿಂದ ಹೊರಟು ಸಾವಿರ ಜನರ ಅನುಭವವನ್ನು ವಿಶದಪಡಿಸುತ್ತದೆ, ಮಾನವನ ಅನುಭವಕ್ಕೇ ಬಾಯಾಗುತ್ತದೆ. ಕವಿತೆಯಲ್ಲಿ ಜೀವನದ ನಿಲುವಿಗೆ ಅನುಸಾರವಾಗಿ ಎರಡು ಮಾರ್ಗವಿದೆ. ಒಬ್ಬ ಕವಿ ತನ್ನದಾದ ಅನುಭವವನ್ನು ಚೆನ್ನಾಗಿ ಅರಿತು ಹಾಡಿ ಎಲ್ಲ ಜೀವಗಳ ಪ್ರತಿನಿಧಿಯಾಗುತ್ತಾನೆ; ಇನ್ನೊಬ್ಬನು ಎಲ್ಲ ಜೀವಗಳ ಭಾವವನ್ನೂ ಸಹಾನುಭೂತಿಯಿಂದ ತನ್ನಲ್ಲಿ ಅನುಭವಿಸಿ ಆ ನೋವು ನಗೆಯನ್ನು ತನ್ನ ಮಾತಿನಲ್ಲಿ ವ್ಯಕ್ತಪಡಿಸುತ್ತಾನೆ, ಹೀಗೆ ಇತರ ಜೀವಗಳಿಗೆ ಪ್ರತಿನಿಧಿಯಾಗುತ್ತಾನೆ. ಕಾಳಿದಾಸನದು ಷೇಕ್ಸ್ ಪಿಯರರದು ಈ ಎರಡನೆಯ ದಾರಿ; ವರ್ಣನೆಯ ದಾರಿ. ಷೆಲ್ಲಿಯದು ಠಾಕೂರರದು ಮೊದಲನೆಯದು, ವ್ಯಂಜನೆಯದು. ವರ್ಣನೆಯ ಕವಿ ಪಾತ್ರ ಗಳನ್ನು ಊಹಿಸ ವುದೆಷ್ಟೋ ಅಷ್ಟೇ. ಆಮೇಲೆ ಅವರು ಹೇಳುತ್ತಿರು ವುದನ್ನು ಕೇಳಿ ಬರೆದುಕೊಳ್ಳುತ್ತಿದಾನೋ ಎಂಬಂತೆ ತಾನು ಕಾವ್ಯದಲ್ಲಿ

ಮರೆಯಾಗುತ್ತಾನೆ. ವ್ಯಂಜನೆಯ ಕವಿ ಪಾತ್ರವನ್ನು ಊಹಿಸುವುದಲ್ಲದೆ ಅದರ ಬಾಯಲ್ಲಿ ತನ್ನ ಮಾತನ್ನೂ ಇಡುತ್ತಾನೆ. ಒಂದು ದಾರಿ ಮೇಲು ಇನ್ನೊಂದು ದಾರಿ ಕೀಳು ಎಂದು ಹೇಳುವಂತಿಲ್ಲ. ಕವಿ ಶಕ್ತನಾದರೆ ಒಂದರಲ್ಲಿ ಅತ್ಯುತ್ತಮ ನಾಟಕ ಬರುತ್ತದೆ; ಒಂದರಲ್ಲಿ ಅತ್ಯುತ್ತಮವಾದ ಗೀತ. ತಿಳಿಯದವನ ಕೈಯಲ್ಲಿ ಎರಡು ಪದ್ಧತಿಯೂ ನಿಷ್ಪ್ರಯೋಜಕ ವಾಗುತ್ತದೆ. ಎರಡರಲ್ಲಿ ಯಾವುದರಿಂದಲಾದರೂ ಬರುವ ಸಿದ್ಧಿ ಒಂದೇ: ಅನುಭವ ರಸದ ಮಟ್ಟವನ್ನು ಮುಟ್ಟಿ ವ್ಯಕ್ತವಾಗುವುದು; ಆ ರಸ ಇನ್ನೊಂದು ಮನಸ್ಸನ್ನು ಹೊಕ್ಕು ಅಲ್ಲಿ ಆ ಅನುಭವವನ್ನು ಉತ್ಪಾದನ ಮಾಡುವುದು. ಠಾಕೂರರ ಕಾವ್ಯ ಕತೆ ವ್ಯಂಜನ ಕಾವ್ಯ ದಲ್ಲಿ ಅತ್ಯುತ್ತಮ ವರ್ಗಕ್ಕೆ ಸೇರಿದುವು. ಇದೇ ಕಾರಣದಿಂದ ಗೀತೆ ಗಳಲ್ಲಿ ನಿಲುಕಿರುವ ಮಟ್ಟ ಇವರಿಗೆ ನಾಟಕದಲ್ಲಿ ನಿಲುಕಿಲ್ಲ. ಆದರೂ ಇವರ ನಾಟಕಗಳು ಕಾವ್ಯ ಅಥವಾ ಕತೆಯ ದೃಷ್ಟಿಯಿಂದ ಸುಂದರ ವಾದುವೆಂದೇ ಹೇಳಬೇಕು.

### ೭೫. ಸಾಮಗ್ರಿಯ ವೈಪುಲ್ಯ

ಈ ಅತ್ಯುತ್ತಮವಾದ ಕವಿತೆಯಲ್ಲಿ ಕತೆಯಲ್ಲಿ ಕಾಣುವ ಸಾಮಗ್ರಿಯ ವೈಪುಲ್ಯ ಆಶ್ಚರ್ಯಕರವಾದದು. ಮನಸ್ಸಿಗೆ ತೋರಿದ ಯಾವ ವಿಷಯ ವನ್ನೂ ಇವರು ಬರೆಯದೆ ಬಿಡಲಿಲ್ಲವೆನ್ನಬಹುದು. ತಮ್ಮ ಮನಸ್ಸಿನ ಅವಸ್ಥೆ ಗಳು, ತಾವು ನೋಡಿದ ಜನರ ಜೀವನದ ವಿಷಯಗಳು, ಜನಜೀವನದ ವಿಚಾರವಾಗಿ ತಮಗೆ ತೋರಿದ ಭಾವನೆಗಳು, ಎಲ್ಲವನ್ನೂ ಇವರು ಒಂದಲ್ಲ ಒಂದುಕಡೆ ಬರೆದಿಟ್ಟರು. ಜೀವನದ ವಿಷಯದಲ್ಲಿ ಕುತೂಹಲವುಳ್ಳ ಮನಸ್ಸಿಗೆ ಎಲ್ಲವೂ ವಸ್ತುವಾಗುತ್ತದೆ. ವೈರಾಗ್ಯದಿಂದ ಜೀವನದ ರಸವತ್ತಾದ ಸನ್ನಿವೇಶವೂ ಶುಷ್ಕವಾಗಿ ತೋರುತ್ತದೆ; ರಾಗ ವೈಶಾಲ್ಯ ದಿಂದ ಒಣಬಾಳಿನಲ್ಲಿಯೇ ರಸ ಕಾಣುತ್ತದೆ. ಠಾಕೂರರು ಅನೇಕ ವೇಳೆ ತಾವು ವಯಸ್ಸಿನಲ್ಲಿ ದೊಡ್ಡವರಾದರೂ ಚೇತನದಲ್ಲಿ ಇನ್ನೂ ತರುಣರೆಂದು ಹೇಳುತಿದ್ದರು. ಇದು ನಿಜ. ಜೀವನದ ವಿಚಾರದಲ್ಲಿ ಇವರು ತಾರುಣ್ಯಕ್ಕೆ ಸಹಜವಾದ, ತಾರುಣ್ಯಕ್ಕೆ ಮಾತ್ರ ಸಾಧ್ಯವಾದ, ಉತ್ಸಾಹವನ್ನು ಕೊನೆಯ

ವರೆಗೂ ಅನುಭವಿಸಿದರು. ಇದರಿಂದ ಇವರ ಕಾವ್ಯಕ್ಕೆ ಸಾಮಗ್ರಿ ಅನಂತ ವಾಯಿತು. ಇದಕ್ಕೆ ಅನುಕೂಲವಾಗಿ ಇವರು ಕೇವಲ ರುಚಿಗೋಸ್ಕರ ಆಧುನಿಕಕಾಲದ ಸಾಹಿತ್ಯಗಳನ್ನೂ ಶಾಸ್ತ್ರಗಳನ್ನೂ ಓದಿ ತಿಳಿದಿದ್ದರು. ಪೂರ್ವ ಕಾಲದ್ದೆನ್ನುವುದರಲ್ಲಿ ವಿದ್ವತ್ ಕಲ್ಪವಾದ ಜ್ಞಾನವನ್ನು ಪಡೆದಿದ್ದರು. ಇವರ ಕಾವ್ಯದ ವಸ್ತುವೈವಿಧ್ಯ ಯಾರನ್ನಾದರೂ ವಿಸ್ಮಯಪಡಿಸುವಂತಿದೆ. ಮನಸ್ಸಿಗೆ ತೋರಿದ ಎಲ್ಲವನ್ನೂ ಬರೆದಿರುವುದರಿಂದ ಈ ಕಾವ್ಯದಲ್ಲಿ ಪುನರುಕ್ತಿ ಇರುವಂತೆ ಅನೇಕರಿಗೆ ಕಾಣುತ್ತದೆ. ಸ್ವಲ್ಪ ಪುನರುಕ್ತಿ ಇರುವುದೂ ನಿಜವೆ. ಆದರೆ ಅದು ಸ್ಥೂಲವಾಗಿ ನೋಡಿದರೆ ಎಷ್ಟೆಂದು ಕಾಣುತ್ತದೆ; ಅಷ್ಟು ಹೆಚ್ಚಾಗಿಲ್ಲ. ವಸಂತದ ವಿಚಾರವಾಗಿ ನಾಲ್ಕು ಕವಿತೆಯಿದ್ದರೆ ಒಂದೊಂದರಲ್ಲಿ ಒಂದು ಮುಖ್ಯ ಭಾವ ವ್ಯಕ್ತವಾಗಿರುತ್ತದೆ. ಎಲ್ಲದರಲ್ಲಿಯೂ ಮಂದಮಾರುತವೂ ಮಲ್ಲಿಗೆಯ ಹೂವೂ ಬರಬಹುದು. ಆದರೆ ಇದರಿಂದ ಕವಿತೆ ಪುನರುಕ್ತಿಯಾಗುವುದಿಲ್ಲ. ಸಂಗೀತದಲ್ಲಿಯ ಸಂಗತಿಗಳಂತೆ ಈ ಕವಿತೆಗಳು ಬಲ್ಲವರಿಗೆ ಬೇರೆಯಾಗಿಯೇ ಕಾಣುತ್ತವೆ. ಒಂದೊಂದಕ್ಕೆ ವ್ಯತ್ಯಾಸ ಅಷ್ಟು ಕಡಮೆಯಾಗಿದ್ದರೆ ಬೇರೆ ಬೇರೆಯಾಗಿ ಬರೆಯಬೇಕಾದದೇನು ಎನ್ನಬಹುದು. ಕವಿಯ ಭಾವನೆಯ ವೇಗಕ್ಕೆ ಆಗ ಆ ಬರಹ ಬೇಕಾಗಿತ್ತು ಎನ್ನುವುದೇ ಇದಕ್ಕೆ ಉತ್ತರ. ತುಂಬ ಬರೆದಿರುವುದರಲ್ಲಿ ಕೆಲವು ಭಾಗ ಕೆಲವರಿಗೆ ರುಚಿಸುತ್ತದೆ, ಇನ್ನು ಕೆಲವು ಭಾಗ ಇತರರಿಗೆ ರುಚಿಸುತ್ತದೆ. ಯಾರೂ ಯಾವ ಭಾಗವನ್ನೂ ಬೇಡ ವೆಂದು ಹೇಳಬೇಕಾದದಿಲ್ಲ, ತಮಗೆ ರುಚಿಸಿದ್ದನ್ನು ತೆಗೆದುಕೊಳ್ಳಬಹುದು. ಕೆಲವು ಭಾಗ ಬಹು ಕಡಮೆ ಜನಕ್ಕೆ ರುಚಿಸಬಹುದು. ಇದರಿಂದಲೂ ತೊಂದರೆಯಿಲ್ಲ. ಇಷ್ಟು ಒಳ್ಳೆಯದನ್ನು ಬರೆದಿರುವ ಕವಿಗೆ ನಾವು ಸಾಮಾನ್ಯವಾದ ಬರವಣಿಗೆ ಸ್ವಲ್ಪವನ್ನು ಬರೆಯುವ ಸ್ವಾತಂತ್ರ್ಯವನ್ನು ಕೊಡಬಹುದು.

### ೭೬. ಶಬ್ದಭಾಂಡಾರ, ಶೈಲಿ

ವಸ್ತುವೈವಿಧ್ಯಕ್ಕೆ ತಕ್ಕಹಾಗೆ ಠಾಕೂರರ ಶಬ್ದಭಾಂಡಾರವೂ ಅನ್ಯಾದೃಶವಾದದು. ಇವರಿಗೆ ಹಿಂದೆ ಬರವಣಿಗೆಯ ಬಂಗಾಳಿ ತುಂಬ

ಸಂಸ್ಕೃತ ಪದಗಳನ್ನು ಉಪಯೋಗಿಸುತಿದ್ದಿತ್ತಂತೆ. ಇವರೂ ವಿಮರ್ಶೆಯಲ್ಲಿ ತತ್ವವಿಚಾರದಲ್ಲಿ ಇಷ್ಟಬಂದಷ್ಟು ಸಂಸ್ಕೃತವನ್ನು ಉಪಯೋಗಿಸಿದಾರೆ. ಕಾವ್ಯದಲ್ಲಿಯೂ ಸಂಸ್ಕೃತವನ್ನು ತುಂಬುವುದಕ್ಕೆ ಹಿಂತೆಗೆಯಲಿಲ್ಲ. ಆದರೆ ಇದರೊಂದಿಗೆ ಬಳಕೆಯ ಮಾತುಗಳನ್ನು ತುಂಬಾ ಉಪಯೋಗಿಸಿದಾರೆ. ಶೈಲಿಯೂ ಹಾಗೆಯೇ: ಅಲ್ಲಲ್ಲಿ ಸಂಸ್ಕೃತ ಪದಗಳಿಂದ ಕ್ಲಿಷ್ಟವಾಗುವುದಾದರೂ ಬಹುಮಟ್ಟಿಗೆ ಸಮಯಕ್ಕೆ ಸರಿಯಾಗಿ ವ್ಯಾಕರಣಬದ್ಧವಾಗಿಯೋ ಸರಳವಾಗಿ ಬಳಕೆಯದಾಗಿಯೋ ಇರುತ್ತದೆ. ಹೊಸ ದಾರಿಯಲ್ಲಿ ಬಂದ ಇವರ ಬರವಣಿಗೆಯನ್ನು ನೋಡಿ ಇವರು ಬಂಗಾಳಿಯನ್ನು ಕೆಡಿಸುತ್ತಿದಾರೆ ಎಂದವರುಂಟು. ಠಾಕೂರರ ಕೈಯಲ್ಲಿ ಕೆಟ್ಟಂತೆ ಕೆಡುವುದಕ್ಕೆ ಭಾಷೆ ಪುಣ್ಯಮಾಡಿರಬೇಕು. ಈ ವಿಚಾರ ಬಂಗಾಳಿಯನ್ನು ಕುರಿತದು. ಆದರೆ ಠಾಕೂರರಲ್ಲಿ ವಿಶೇಷವೇನೆಂದರೆ, ಇವರ ಇಂಗ್ಲೀಷಿನ ಬರವಣಿಗೆಯೂ ಸಾಹಿತ್ಯದಲ್ಲಿ ಗಣ್ಯವಾದ ಸ್ಥಾನವನ್ನು ಪಡೆಯಿತು. ಇವರ ಗೀತಾಂಜಲಿಯ ಅಥವಾ ಸಾಧನಾಗ್ರಂಥದ ಭಾಷೆ ಶ್ರೇಷ್ಠರಾದ ಆಂಗ್ಲ ಲೇಖಕರ ಭಾಷೆಗೆ ಸಮನಾಗಿದೆ. ಇಲ್ಲಿ ಕಾಣುವುದು ಇಂಗ್ಲೀಷ್ ಮಾತಿನ ಎಲ್ಲ ಬಣ್ಣ ಬೆರಗುಗಳನ್ನೂ ತಿಳಿದ ಲೇಖಕನ ಉಕ್ತಿಕೌಶಲ. ಪದದ ಪ್ರಯೋಗದಲ್ಲಿ, ವಾಕ್ಯದ ಕಟ್ಟಡದಲ್ಲಿ, ಭಾವದ ಪ್ರತಿಪಾದನದಲ್ಲಿ, ಆಂಗ್ಲಭಾಷೆಯ ಮರ್ಯಾದೆಯನ್ನು ಸ್ವಲ್ಪವಾದರೂ ಬಿಟ್ಟಿಲ್ಲವೆನ್ನಬಹುದು. ಒಂದು ಮಾತು ಅರ್ಥ ಮಾತು ಲೇಖಕನು ಆಂಗ್ಲೇಯನಲ್ಲವೆಂದು ತೋರಿಸುತ್ತದೆ. ಆದರೆ ಒಟ್ಟಿನ ಬರವಣಿಗೆ ಹತ್ತು ಸಾವಿರ ಆಂಗ್ಲೇಯರಲ್ಲಿ ಒಬ್ಬನಿಗೆ ಸಾಧ್ಯವಾಗದ ಮೆಟ್ಟಲನ್ನು ಮುಟ್ಟುತ್ತದೆ. ಇವರ ಕಾವ್ಯಗಳನ್ನು ಓದಿರುವವರು ಇವರ ಈ ಉಭಯಭಾಷಾ ವಿಶಾರದತೆಯನ್ನು ಬಹಳವಾಗಿ ಹೊಗಳುತ್ತಾರೆ. ಸಾಹಿತ್ಯದಲ್ಲಿ ಇದು ಅಪೂರ್ವವಾದ ವಿಷಯ. ಒಬ್ಬನೇ ಕವಿ ಪರಸ್ಪರ ಸಂಬಂಧವಿಲ್ಲದ ಇಂಥ ಎರಡು ಭಾಷೆಗಳಲ್ಲಿ ತನ್ನ ಭಾವವನ್ನು ಸರಿಯಾಗಿಯೂ ಸೊಗಸಾಗಿಯೂ ವ್ಯಕ್ತಪಡಿಸಿ ಎರಡು ಭಾಷೆಯಲ್ಲಿಯೂ ಇಷ್ಟು ಎತ್ತರವನ್ನು ಮುಟ್ಟಿರುವುದು ಒಂದು ಪವಾಡವೆಂದು ಆಗ್ಲೇಯ ವಿದ್ವಾಂಸರೊಬ್ಬರು ಹೇಳಿದಾರೆ.

**೭೭. ಛಂದಸ್ಸು : ಹೊಸ ದಾರಿ**

ಭಾಷೆಯಲ್ಲಿ ಹೇಗೋ ಹಾಗೆ ಛಂದಸ್ಸಿನಲ್ಲಿಯೂ ಠಾಕೂರರು ಹೊಸ ದಾರಿಯಲ್ಲಿ ನಡೆಯುವುದಕ್ಕೆ ಹಿಂತೆಗೆಯಲಿಲ್ಲ. ಮುಖ್ಯವಾಗಿ ಠಾಕೂರರು ತಂದ ಮಾರ್ಪಾಡು ಇಂಗ್ಲೀಷ್ ಸಾಹಿತ್ಯದ ಪದ್ಯರೂಪಗಳನ್ನು ಅವಲಂಬಿಸಿದ್ದೆಂದು ತೋರುತ್ತದೆ. ಬಂಗಾಳಿಯಲ್ಲಿ ಅಂತ್ಯಪ್ರಾಸ ವಾಡಿಕೆ. ಇದರಿಂದ ಇವರಿಗೆ ಅಂತ್ಯಪ್ರಾಸದ ಇಂಗ್ಲೀಷಿನ ಪದ್ಯಗಳ ರೀತಿಯನ್ನು ಹೊಂದಿಸಿಕೊಳ್ಳುವುದು ಸುಲಭವಾಯಿತು. ಇದಲ್ಲದೆ ಇವರು ಹಲವು ಹೊಸ ಪದ್ಧತಿಗಳನ್ನು ವಾಡಿಕೆಗೆ ತಂದರಂತೆ. ಇದರಲ್ಲಿ ಇವರು ಹಸಾಂತವನ್ನು ಪದ್ಯದಲ್ಲಿ ಉಪಯೋಗಿಸಿದ್ದು ಒಂದು. ಮೂರನೆಯ ಅಕ್ಷರವಾಗಿ ಬರುವ ರಕಾರ ಬಂಗಾಳಿಯಲ್ಲಿ ಸಾಮಾನ್ಯ ಉಚ್ಚಾರಣೆಯಲ್ಲಿ ಅರ್ಧಾಕ್ಷರವಾಗುತ್ತದೆ. (ದಿನೇರ ಎಂಬ ಬರಹ ದಿನೇರ್ ಎಂದು ಓದುತ್ತದೆ.) ಆದರೂ ಛಂದಸ್ಸಿನಲ್ಲಿ ಇದು ಪೂರ್ಣಾಕ್ಷರವಾಗಿಯೇ ಗಣಿಸಲ್ಪಡುತಿತ್ತು, ಪದ್ಯದಲ್ಲಿ ಪೂರ್ಣದಂತೆ ಉಚ್ಚರಿಸಲ್ಪಡುತಿತ್ತು. ಹೀಗೆ ಓದುವುದರಿಂದ ಮಾತಿನ ಕೊನೆಯೆಲ್ಲ ಮೆದುವಾಗುತ್ತದೆ. ಠಾಕೂರರು ಅಂಥ ಸಂದರ್ಭದಲ್ಲಿ ಉಚ್ಚಾರಣೆಯ ಅರ್ಧಾಕ್ಷರಕ್ಕೆ ಛಂದಸ್ಸಿನಲ್ಲಿಯೂ ಅರ್ಧಾಕ್ಷರದ ಬೆಲೆಯನ್ನೇ ಕೊಟ್ಟರು. ಇದರಿಂದ ಓದುವಲ್ಲಿ ಪದ್ಯದಲ್ಲಿ ಸ್ವಲ್ಪ ಬಿಗಿಬಂದಿತು. ಈ ಪದ್ಧತಿಯನ್ನು ಆರಂಭಮಾಡಿದಾಗ ಬಹು ಜನ ಠಾಕೂರರನ್ನು ದೂಷಿಸಿದರಂತೆ. ಅವರು ಲಕ್ಷ್ಯಮಾಡಲಿಲ್ಲ. ಕೆಲವು ಶಬ್ದರೂಪಗಳನ್ನೂ ಇವರೇ ಆರಂಭಿಸಿದರೆಂದು ಹೇಳುತ್ತಾರೆ. ಇದನ್ನೆಲ್ಲ ಬಂಗಾಳಿಯನ್ನು ಬಲ್ಲವರು ಮಾತ್ರ ಚೆನ್ನಾಗಿ ತಿಳಿಯಬಹುದು. ನಮಗೆ ಬೇಕಾದ ವಿಷಯವೇನೆಂದರೆ, ಕವಿವರರು ಅನೇಕ ಮಾರ್ಪಾಡುಗಳನ್ನು ಮಾಡಿ ಬಂಗಾಳಿಯ ಛಂದಸ್ಸನ್ನು ವಿಸ್ತಾರಪಡಿಸಿದರು. ಈಗಲೂ ಇವರ ದಾರಿಯಲ್ಲಿ ಇವರಂತೆ ಬರೆಯಬಲ್ಲವರಿಲ್ಲವೆಂದೇ ಹೇಳುತ್ತಾರೆ. ಠಾಕೂರರು ಇಂಗ್ಲೀಷಿನಲ್ಲಿ ಉಪನ್ಯಾಸ ಕತೆಗಳಲ್ಲಿ ಸಾಧಾರಣ ಗದ್ಯವನ್ನೂ ಪದ್ಯಗಳಲ್ಲಿ ಒಂದು ರೀತಿಯ ನಿಯತಗತಿಯ ಗದ್ಯವನ್ನೂ ಉಪಯೋಗಿಸಿದಾರೆ. ಚೆನ್ನಾಗಿ ಬಂದಾಗ ಈ ಪದ್ಯಗಂಧಿ ಗದ್ಯ ನಿಯಮ ಸ್ವಾತಂತ್ರ್ಯಗಳ ಒಂದು ವಿಲಕ್ಷಣವಾದ ಸಂಮಿಶ್ರಣವಾಗಿ ಕಿವಿಗೆ ಇಂಪಾಗಿ ಕೇಳುತ್ತದೆ. ಇದರಲ್ಲಿ ಪ್ರಾಸ

ವಿಲ್ಲ, ನಿಯತವಾದ ಪ್ರಸ್ತಾರವಿಲ್ಲ. ಆದರೆ ಇದು ಸಾಧಾರಣವಾದ ಗದ್ಯವೆಂದು ತೋರುವುದಿಲ್ಲ; ಕಾವ್ಯಕ್ಕಾಗಿ ಅನುಸರಿಸಿರುವ ರೀತಿ ಎಂದು ಸ್ಪಷ್ಟವಾಗುತ್ತದೆ. ಈ ಪದ್ಯ ಸಮವಾದ ಗದ್ಯ ಇಂಗ್ಲೀಷಿನಲ್ಲಿ ಒಬ್ಬೊಬ್ಬ ಕವಿ ಉಪಯೋಗಿಸಿರತಕ್ಕದೇ. ಆದರೆ ಇವರು ಬರೆದಿರುವಷ್ಟು ಸೊಗಸಾಗಿ ಬೈಬಲಿನಲ್ಲಿ ಹೊರತು ಅವರಲ್ಲಿಯೂ ಯಾರೂ ಬರೆದಿದ್ದಂತೆ ಕಾಣುವುದಿಲ್ಲ. ಆಂಗ್ಲೇಯ ವಿಮರ್ಶಕರೇ ಠಾಕೂರರ ಈ ಕೌಶಲವನ್ನು ಬಹಳವಾಗಿ ಹೊಗಳಿದಾರೆ. ಇಂಗ್ಲೀಷು ಮಾತೃಭಾಷೆಯಲ್ಲದಿರುವ ಕವಿವರರು ಆ ಭಾಷೆಯಲ್ಲಿ ಬರೆಯುತ್ತಾ ಇಷ್ಟು ಸೊಗಸಾದ ಶಬ್ದಸರಣಿಯನ್ನೂ ಪದಗುಂಫನವನ್ನೂ ಸಾಧಿಸಿರುವುದು ಆಶ್ಚರ್ಯವೇ ಸರಿ. ಸಹಜವಾದ ಕವಿತಾಶಕ್ತಿಗೆ, ಬೇರೆಯದೆಂಬ ಭಾಷೆ ಕಲಿಯುವವರೆಗೆ ಮಾತ್ರ ಬೇರೆಯದು; ಕಲಿತಮೇಲೆ ತನ್ನ ಭಾಷೆಯಲ್ಲಿ ಹೇಗೋ ಹಾಗೆ ತನ್ನದಲ್ಲದ ಭಾಷೆಯಲ್ಲಿ ಕವಿಗೆ ಮಾತಿನ ಮಾಯೆ ತಾನಾಗಿ ಒದಗಿ ಬರುತ್ತದೆ.

**೭೮. ಉಕ್ತಿ ಚಾತುರ್ಯ; ಉಪಮಾನ**

ಠಾಕೂರರ ಲೇಖನಗಳಲ್ಲಿ ಕಾಣುವ ಒಂದು ದೊಡ್ಡಗುಣ ಅವರ ಉಕ್ತಿಯ ಚಾತುರ್ಯ. ಇವರು ಭಾವವನ್ನು ವ್ಯಕ್ತಪಡಿಸುವ ಪದ ಸೇರುವ ರೀತಿಯಲ್ಲಿಯೇ ಅಲ್ಲಲ್ಲಿ ಬೆಡಗು ಕಾಣುವುದು. ಇದರ ಮೂಲ ಭಾವದಲ್ಲಿಯೇ ಇರುತ್ತದೆ. ಆದರೆ ಭಾವದ ವಿಲಾಸವನ್ನು ಸಂಪೂರ್ಣವಾಗಿ ಮಾತಿನಲ್ಲಿ ತರುವುದು ಬಹು ಹಿರಿಯ ಕವಿಗಳಿಗೆ ಮಾತ್ರ ಸಾಧ್ಯ. ಉಕ್ತಿ ಚಾತುರ್ಯದ ಜೊತೆಗೆ ಠಾಕೂರರಲ್ಲಿ ಉಪಮಾ ಅಲಂಕಾರದ ಹುಲುಸಾದ ಬಳಕೆ ಕಾಣುತ್ತದೆ. ಠಾಕೂರರು ಭಾವ ವಿವರಣಕ್ಕಾಗಿ ಉಪಮೆಯನ್ನು ಬಳಸಿರುವ ರೀತಿ ಪ್ರತ್ಯೇಕ ಪರಿಶೀಲನೆಗೆ ಅರ್ಹವಾದ ಒಂದು ವಿಸ್ತಾರವಾದ ವಿಷಯ. "ದೇಹ ಅಥವಾ ಲೋಕ ನಮ್ಮನ್ನು ದೈವದ ಬಳಿಗೆ ಒಯ್ಯುವ ಸಾಧನವೆಂದೂ ಕಾಣಬಹುದು. ದೈವದಿಂದ ನಮ್ಮನ್ನು ಪ್ರತ್ಯೇಕಿಸಿರುವ ಒಂದು ಅಡ್ಡಿಯೆಂದೂ ಕಾಣಬಹುದು" ಎಂಬುದನ್ನು ವಿವರಿಸುವುದಕ್ಕೆ ಕವಿ ದಾರಿಯ ಉಪಮೆಯನ್ನು ಕೊಟ್ಟ

ದಾರೆ. ಸ್ವಾರ್ಥವನ್ನು ಕಳೆದುಕೊಳ್ಳುವುದರಲ್ಲಿಯೇ ಜೀವನ ಸಾರ್ಥಕವಾಗುವುದು ಎಂಬ ತತ್ವವನ್ನು ಪ್ರತಿಪಾದಿಸಲು ಹಣತೆಯ ಉದಾಹರಣೆಯನ್ನು ಕೊಟ್ಟಿದಾರೆ: ತನ್ನಲ್ಲಿರುವ ಎಣ್ಣೆ ಬತ್ತಿಯನ್ನು ಸುಟ್ಟಿಲ್ಲದ ಹಣತೆ ತಾನು ಹಣತೆಯಾದ ಉದ್ದೇಶವನ್ನು ಸಾಧಿಸಲಾರದು. ಜೀವನದಲ್ಲಿರುವ ಕಷ್ಟ ಕೆಡುಕು ವಸ್ತ್ರದಲ್ಲಿ ನೂಲು ನೂಲಿನ ಮಧ್ಯೆ ಇರುವ ಎಡೆಯಂತೆ. ಸಾವು ಎಂದರೆ ನಮಗೆ ಭಯ; ಆದರೆ ಜೀವವಿತ್ತ ಶಕ್ತಿ ನಮ್ಮನ್ನು ಈ ಜೀವನದಿಂದ ಬಿಡಿಸಿ ಮತ್ತೊಂದು ಜೀವನಕ್ಕೆ ಹಚ್ಚುವ ವಿನ್ಯಾಸವೇ ಸಾವು. ತಾಯಿ ಕೂಸನ್ನು ಬಲ ಮೊಲೆಯಿಂದ ಬಿಡಿಸಿ ಎಡ ಮೊಲೆಯನ್ನು ಕೊಡುವಂತೆ. ಇಂತಹ ಉಪಮಾನ ಚೆಲುವಾಗಿರುವುದಲ್ಲದೆ ಒಂದು ಸಿದ್ಧಾಂತವನ್ನೇ ಪ್ರತಿಪಾದಿಸುತ್ತದೆ. ಈ ಸಿದ್ಧಾಂತ ಮೇಲು ಮೇಲಿನದೆಂದೂ ಕೂಸಿಗೆ ತಾಯಿ ತನ್ನನ್ನು ಎರಡನೆಯ ಸ್ತನದಿಂದಲೂ ಎತ್ತಿದಳೆಂಬ ಭಯವಿರಬಹುದು ಎಂದೂ ಇದಕ್ಕೆ ಆಕ್ಷೇಪ ಹೇಳಬಹುದು. ಆದರೆ ಹೀಗೆ ಆಕ್ಷೇಪ ಮಾಡುವವರು ಉಪಮೆಯಿಂದ ಅದರ ಕ್ಷೇತ್ರದ ಹೊರಗಿನ ಒಂದು ಫಲವನ್ನು ಬಯಸಿದಂತಾಗುತ್ತದೆ. ಉಪಮೆ ಸಿದ್ಧಾಂತವನ್ನು ಮಾಡುವುದಿಲ್ಲ; ಮಾಡಿರುವ ಸಿದ್ಧಾಂತದ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ. ಠಾಕೂರರ ಉಪಮಾ ಚಾತುರ್ಯ ಪ್ರಪಂಚದ ಅತ್ಯುತ್ತಮ ಕವಿಗಳಲ್ಲಿ ಕಾಣತಕ್ಕಂತಹದು. ಈ ವಿವರದಲ್ಲಿ ಇವರು ವಾಲ್ಮೀಕಿ, ಷೇಕ್ಸ್‌ಪಿಯರ್ ಕಾಳಿದಾಸರ ಜೊತೆಗೆ ನಿಲ್ಲುತ್ತಾರೆ.

### ೭೯. ರಸಸಿದ್ಧಿ, ಹಾಸ್ಯ

ಈ ಎಲ್ಲ ಮಾತಿನ ಅರ್ಥ ಕವಿವರರ ಜೀವನ ಮತ್ತು ಸಾಹಿತ್ಯ ಸಂತತವಾಗಿ ತೀವ್ರವಾದ ರಸಾನುಭವದಿಂದ ಸಾಧ್ಯವಾದವು ಎನ್ನುವುದು. ನಿಜವಾದ ರಸಾನುಭವ ಕ್ಷಣಮಾತ್ರ ದೊರೆತರೂ ಮಾನವ ಜೀವಕ್ಕೆ ಅಷ್ಟೇ ಒಂದು ಪುಣ್ಯ. ಹೀಗಿರುವಲ್ಲಿ ಠಾಕೂರರಂತೆ ಅದರಲ್ಲಿಯೇ ತೇಲಿ ಮುಳುಗುವ ಪುಣ್ಯ ಎಷ್ಟು ಹೆಚ್ಚಿನದೆಂದು ಹೇಳಬೇಕಾಗಿಲ್ಲ. ರಸವೇ ಬ್ರಹ್ಮ; ರಸಾನುಭೂತಿ ಇಲ್ಲಿಯೇ ಈಗಲೇ ಲಭಿಸುವ ಪರನಿರ್

ವೃತ್ತಿ: ಈ ಮಾತು ನಿಜವೆಂದು ಕಾಣುವುದು ಇಂತಹ ಜೀವನದಲ್ಲಿ. ಠಾಕೂರರಿಗೆ ರಸದಿಂದ ಬ್ರಹ್ಮಸಿದ್ಧಿಯಾಯಿತು.

ಅದರಲ್ಲಿಯೂ ಮುಖ್ಯವಾಗಿ ಇವರಿಗೆ ಹಾಸ್ಯರಸ ಸಿದ್ಧಿಸಿದ ರೀತಿ ಗಮನಾರ್ಹವಾದದು. ಅನುಭವ ತೀವ್ರವಾದಂತೆ ಮನುಷ್ಯನಿಗೆ ಲೋಕದ ಸುಖ ದುಃಖಗಳ ಅರಿವು ತೀವ್ರವಾಗುವುದು ಸಹಜ ಮತ್ತು ಸಾಮಾನ್ಯ. ಲೋಕದ ಸುಖ ದುಃಖಗಳಲ್ಲಿ ಬೆರೆತು ಮುಳುಗಿದ ಕವಿ ಶೃಂಗಾರ, ಕರುಣೆ, ಭಯಾನಕ, ಭೀಭತ್ಸ, ಇವೇ ಮುಖ್ಯವಾದ ರಸಗಳನ್ನು ತನ್ನ ಕಾವ್ಯದಲ್ಲಿ ಚಿತ್ರಿಸುತ್ತಾನೆ. ಕವಿಯಾದವನಿಗೆಲ್ಲ ಈ ಶಕ್ತಿ ಅಲ್ಪವಾಗಿಯೋ ಹೆಚ್ಚಾಗಿಯೋ ಇರುತ್ತದೆ. ಲೋಕದ ಸುಖ ದುಃಖವನ್ನು ಹೀಗೆ ತೀವ್ರವಾಗಿ ಅನುಭವಿಸುವ ಹೊತ್ತಿನಲ್ಲೇ ಬಾಳನ್ನು ಕುರಿತು ನಗಲೂ ಬೇಕಾದರೆ ಕವಿ ತನ್ನ ತಲೆಯಷ್ಟನ್ನು ಅನುಭವದಲ್ಲಿ ಮುಳುಗುವುದಕ್ಕೆ ಬಿಡದೆ ಹೊರಗಿಟ್ಟುಕೊಂಡಿರಬೇಕು. ಠಾಕೂರರು ಇದನ್ನು ಮಾಡಬಲ್ಲವರಾಗಿದ್ದರು. ತಾನೇ ಬರೆದ ಮೊದಲ ಕವಿತೆಯ ಮಾತನ್ನು ಹೇಳುತ್ತ, ಕವಿತೆಯೆಂದರೆ ಏನೋ ಎಂದು ತಿಳಿದುಕೊಂಡಿದ್ದ ತನಗೆ ಅದು, ಅಯ್ಯೋ ಇಷ್ಟೇನೆ ಎನ್ನುವಂತೆ ಮಾಡಿತೆಂದು ಹೇಳುತ್ತಾ ಕವಿ ಒಂದು ಉಪಮಾನ ಕೊಟ್ಟಿದಾರೆ. ಇವರ ಚಿಕ್ಕಂದು ಇವರ ಮನೆಯಲ್ಲಿ ಕಳ್ಳ ಒಬ್ಬ ಸಿಕ್ಕಿಕೊಂಡ. ಅವನನ್ನು ಮನೆಯ ಆಳುಗಳು ಹೊಡೆದು ಬಡಿದು ಮೆತ್ತಗೆಮಾಡಿದ್ದರು. ಹುಡುಗ ಕಳ್ಳ ಹೇಗಿರುತ್ತಾನೋ ಎಂದು ನೋಡಿದನಂತೆ. ಹೇಗೂ ಇಲ್ಲ; ಎಲ್ಲರಂತೆ ಇದಾನೆ; ವಿಶೇಷವೆಂದರೆ ಆಳುಗಳ ಕೈಗೆ ಸಿಕ್ಕಿಕೊಂಡು ಪೆಟ್ಟು ತಿಂದಿದಾನೆ. ಕಾವ್ಯವೂ ಇಷ್ಟೆ. ಅದರಲ್ಲಿ ಎಲ್ಲ ಮಾತುಗಳಂತೆ ಕೆಲವು ಮಾತು ಇವೆ. ಕವಿಗಳ ಕೈಗೆ ಸಿಕ್ಕಿ ಬಂಧನದಲ್ಲಿವೆ, ಪೆಟ್ಟು ತಿಂದಿವೆ. "ನಾನು ಹಿರಿಯನಾದಾಗ ನನ್ನ ಅಂಗಿ ನನಗೆ ಸಾಕಾಗುವುದಿಲ್ಲ, ಅದನ್ನು ಅಣ್ಣನಿಗೆ ಕೊಡುತ್ತೇನೆ" ಎಂದು ಮಾತು ಕೊಡುವ, "ನಾನು ಕಾಗದದಮೇಲೆ ಅ ಆ ಇ ಈ ಬರೆದರೆ ಬೇಡವೆನ್ನುತ್ತೀಯೆ. ಅಪ್ಪ ಎಷ್ಟು ಕಾಗದ ಕೆಡಿಸುತ್ತಾರೆ ಸುಮ್ಮನಿರುತ್ತೀಯೆ" ಎಂದು ತಾಯನ್ನು ಆಕ್ಷೇಪಿಸುವ, ಹಸುಳೆಯ ಮಾತಿನ ಸುಂದರ ಹಾಸ್ಯ ಶಿಶುಗ್ರಂಥದ ಉದ್ದಕ್ಕೂ ಕಾಣುತ್ತದೆ. ಕೆಲವು ವೇಳೆ ಕವಿವರರು ಬರಿಯ ಚಮ

ತ್ಕಾರ, ಬರಿಯ ಬಳಕೆಯ ನಗೆಗೆ ಎಡೆ ಕೊಡುವುದುಂಟು. ಆದರೆ ಇಂತಹ ಸಂದರ್ಭ ಬಹಳವಿಲ್ಲ. ಇವರ ಹಾಸ್ಯದಲ್ಲಿ ವಿಶೇಷವಾಗಿ ಕಣ್ಣಿಗೆ ಕಾಣುವುದು ಅನುಭವದ ಮಧ್ಯೆ ಎಚ್ಚರವಾಗಿರುವ ಅನಾಸಕ್ತಿ ಮತ್ತು ಅದರಿಂದ ಬರುವ ಜೀವನ ವಿಜ್ಞಾನ. ಉಳಿದರಸಗಳಂತೆ ಹಾಸ್ಯರಸದಲ್ಲಿಯೂ ಸಿದ್ಧಿಯನ್ನು ಪಡೆದ ಅಲ್ಪಸಂಖ್ಯೆಯ ಹಿರಿಯ ಕವಿಗಳಲ್ಲಿ ಠಾಕೂರರು ಒಬ್ಬರು.

## ೮೦. ಸೌಂದರ್ಯೋಪಾಸನ

ಈ ಎಲ್ಲ ಅನುಭವದ ತಳಹದಿ ಸಹಜವಾದ ಸೌಂದರ್ಯೋಪಾಸನ. ಎಳೆಯ ಮಗುವಾಗಿದ್ದಾಗ ಕವಿಯ ಮನಸ್ಸಿಗೆ ಹಿಡಿದ ಮಾತು "ಜಲ್ ಪಡೇ ಪಾತಾನಡೇ" "ನೀರು ಉದುರುತ್ತದೆ ಎಲೆ ಅದುರುತ್ತದೆ." ಮಾತುಗಳ ಪ್ರಾಸ, ಅದು ನೀರು ಎಲೆಗಳನ್ನು ಕುರಿತಿರುವುದು, ಈ ಎರಡೂ ಎಳದಾಗಿದ್ದ ಕವಿಯ ಮನಸ್ಸನ್ನು ಹಿಡಿದುವು. ಹುಡುಗನಾಗಿದ್ದಾಗ ಇವರು ಕವಿತೆಗಳನ್ನು ಬರೆದದು ಮರದ ಕೆಳಗೆ ಮಲಗಿ: ಹುಲ್ಲು ಮರ ಬಳ್ಳಿ, ಚಂದ್ರ ಸೂರ್ಯ ನಕ್ಷತ್ರಗಳು, ಬೀಸುವ ಗಾಳಿ ಹಾರುವ ಹಕ್ಕಿ, ಇವು ಈ ಚೇತನದೊಂದಿಗೆ ಎಳೆಯತನದಿಂದಲೂ ಸ್ನೇಹವನ್ನು ಬೆಳಸಿದವು. ಕವಿಗೆ ಬೆಳದಿಂಗಳೆಂದರೆ ಬಹಳ ಪ್ರೇಮ; ತಿಂಗಳ ರಾತ್ರಿಯಲ್ಲಿ ಇವರು ಹೊರಗಡೆ ಸುಮ್ಮನೆ ಅಲೆದಾಡುತಿದ್ದರು. ಈ ಸಹಜವಾದ ಸೌಂದರ್ಯ ಪ್ರೇಮವನ್ನು ಇವರು ಧಾರಾಳವಾಗಿ ಬೆಳಸಿಕೊಂಡರು; ಮನಸ್ಸಿನಲ್ಲಿ ತೋರಿದ ಭಾವನೆಗಳ ವಿಷಯದಲ್ಲಿ ಸಂಕೋಚಪಟ್ಟುಕೊಂಡು ಜೀವನವನ್ನು ಶುಷ್ಕವಾಗಿ ಮಾಡಿಕೊಳ್ಳಲಿಲ್ಲ. ಇವರು ಪ್ರಣಯದ ವಿಷಯದಲ್ಲಿ ಬರೆದ ಚತುರ್ದಶಪದಿಗಳು ಈ ಕಾರಣದಿಂದ ಬಹು ಕ್ರೂರವಾದ ಟೀಕೆಗೆ ಗುರಿಯಾದವು. ಆದರೆ ಕವಿಯ ಸೌಂದರ್ಯೋಪಾಸನೆ ಇಷ್ಟರಲ್ಲೇ ನಿಲ್ಲಲಿಲ್ಲ. ಹೊರಗಣ ಸೌಂದರ್ಯದ ಮೂಲಕ ಅದು ಆತ್ಮದ ಸೌಂದರ್ಯವನ್ನು ಸಾಧಿಸಿತು. ಮನುಷ್ಯನನ್ನು ಮೋಹಗೊಳಿಸುವ ಸೌಂದರ್ಯ ಹೆಚ್ಚಿನ ಸೌಂದರ್ಯ. ಅದು ಊರ್ವಶಿಯಂತೆ ಎಡದ ಕೈಯಲ್ಲಿ ವಿಷದ ಪಾತ್ರೆಯನ್ನು ಹಿಡಿದಿದೆ; ಬಲದ ಕೈಯಲ್ಲಿ ಅಮೃತವನ್ನು ಹಿಡಿದಿದೆ. ಮೋಹದಷ್ಟಕ್ಕೆ ಮರುಳಾಗಿ ಆತ್ಮವನ್ನು ಅದಕ್ಕೆ

ತೆರುವವನಿಗೆ ಸಿಕ್ಕುವುದು ಆ ಎಡದ ಕೈಯ ವಿಷದ ರಸ. ಧೀರವಾದ ಜೀವ ಇದನ್ನು ಅಪೇಕ್ಷಿಸುವುದಿಲ್ಲ. ಅರ್ಜುನನಂತೆ ಚಿತ್ರಾ ಅಂತೆ ಅದು ಮೆಯ್ಯ ಸೊಗಸಿನ ಮೇರೆಯನ್ನು ಮೀರಿ ಬಾಳ ಸೊಗಸಿನ ಕಡೆಗೆ ಒಲೆಯುತ್ತದೆ. ಈ ಸೌಂದರ್ಯದ ಮೂಲತತ್ವವೋ ನಮ್ಮ ಸುತ್ತ ತುಂಬಿದೆ, ನೋಡಿಯೇವೇ ಎಂದು ಕಾದಿದೆ, ಕೊಂಚಕ್ಕೆಲ್ಲ ಮರೆಯಾಗಿ ನಿಲ್ಲುತ್ತದೆ. ನಕ್ಷತ್ರಗಳ ಬೆಳಕು ಒಂದು ಕೋಟಿ ಮೈಲಿ ಹಾಯ್ದು ಬಂದು ನಮ್ಮ ಕಣ್ಣುಗಳನ್ನು ಮುಟ್ಟುತ್ತದೆ; ಅಲ್ಲಿಂದ ಹೃದಯಕ್ಕೆ ಅದರಲ್ಲಿ ಕೋಟಿಯಲ್ಲಿ ಒಂದು ಭಾಗ ದೂರವಿಲ್ಲ, ಆದರೂ ಅಷ್ಟನ್ನು ಅದು ದಾಟ ಲಾರದು: ಎಂದು ಠಾಕೂರರು ಒಂದು ಕಡೆ ಹೇಳಿದಾರೆ. ದೀಪವಿಟ್ಟು ಕೊಂಡಿದ್ದರೆ ಬೆಳದಿಂಗಳಿನ ಚೆಲುವು ನಮಗೆ ಕಾಣುವುದಿಲ್ಲ. ಕವಿಯ ಕೆಲಸ ಇಂಥ ತಡೆಗಳನ್ನು ತೆಗೆದುಹಾಕಿ ಜನಕ್ಕೆ ಒಳಗಣ ಸೊಗಸು ಹೊರಗಣ ಸೊಗಸು ತಿಳಿಯುವಂತೆ ಮಾಡುವುದು. ಸೌಂದರ್ಯಪ್ರೇಮ ಮನುಷ್ಯ ನನ್ನು ಮಂಕನಾಗಿ ನಿಲ್ಲಿಸುವುದಿಲ್ಲ; ತನ್ನ ಸುತ್ತ ಸೌಂದರ್ಯವನ್ನು ಸಾಧಿಸುವುದಕ್ಕೆ ನಿಯೋಜಿಸುತ್ತದೆ. ಈ ಭಾವನೆಗಳು ಠಾಕೂರರ ಕಾವ್ಯ ಗಳಲ್ಲಿ ಪುನಃ ಪುನಃ ಬರುತ್ತಲೇ ಇರುತ್ತವೆ. ಎಲ್ಲ ಉತ್ತಮ ಕಾವ್ಯವೂ ಸೌಂದರ್ಯೋಪಾಸನೆಯನ್ನೇ, ಒಂದಲ್ಲ ಒಂದು ರೀತಿಯಲ್ಲಿ, ಒಂದಲ್ಲ ಒಂದು ಭಾಗವನ್ನು ಮುಖ್ಯಮಾಡಿ, ಹೇಳುತ್ತದೆ. ಠಾಕೂರರು ತಮ್ಮ ವಿಸ್ತಾರವಾದ ಕಾವ್ಯಮಾಲೆಯಲ್ಲಿ ಈ ಉಪಾಸನೆಯ ಹಲವು ಮೆಟ್ಟಲು ಗಳನ್ನು ವ್ಯಕ್ತಪಡಿಸಿದರು. ತಮ್ಮ ಕೆಲಸದ ಮುಖ್ಯ ಉದ್ದೇಶವೇನೆಂದರೆ, ಜನರು ಈ ಗೀತಗಳನ್ನು ನೋಡಿ ಎಲೆ ಅದುರುತ್ತದೆ ಹುಲ್ಲು ಹಚ್ಚಗಿದೆ ಎಂದು ತಿಳಿಯಲಿ ಹೇಳಲಿ ಎನ್ನುವುದೇ ಎಂದರು. ದೇವದೇವನ ಉತ್ಸವ ಬರುವ ದಾರಿಯಲ್ಲಿ ಪ್ರಕೃತಿದೇವಿ ಹಾಸಿರುವ ವಸ್ತ್ರವನ್ನು ಜನದ ಕಣ್ಣಿಗೆ ಎತ್ತಿ ತೋರಿಸುವುದು ಈ ಕವಿಗೆ ಬಂದ ಕರ್ತವ್ಯ.

### ೮೧. ಪ್ರೇಮ ಸಮಾಧಿ

ಸೌಂದರ್ಯವನ್ನು ಕಾಣುವುದರಿಂದ ಮನಸ್ಸು ಅದರೆಡೆಗೆ ಹರಿಯು ತ್ತದೆ, ಜೀವ ಆ ಸೌಂದರ್ಯದೊಂದಿಗೆ ಸಂಬಂಧವನ್ನು ಅಪೇಕ್ಷಿಸುತ್ತದೆ.

ಈ ಸಂಬಂಧಾಪೇಕ್ಷೆಯೇ ಪ್ರೇಮವೆನ್ನುವುದು. ಇದರ ಬಹು ಸಾಮಾನ್ಯ ಸ್ವರೂಪ ಗಂಡು ಹೆಣ್ಣಿನ ಪ್ರೇಮ. ಠಾಕೂರರು ಇದನ್ನು ಅತ್ಯುತ್ತಮ ರೀತಿಯಲ್ಲಿ ಚಿತ್ರಿಸಿದಾರೆ. ಸಾಮಾನ್ಯವಾದ ಕವಿತೆಯಲ್ಲಿ ಇದು ಬರಿಯ ಶರೀರದ ಹಂಬಲು ಆಗುತ್ತದೆ; ಬಹು ಸಂಸ್ಕೃತ ಕವಿತೆಯಲ್ಲಿ ಇದು ಗಾಳಿಯಲ್ಲಿ ಬೆರೆದ ಬೆಳಕಿನಂತೆ ಅತಿನಯವಾಗಿ ಹೋಗುತ್ತದೆ. ಮೊದಲ ಸಂದರ್ಭದಲ್ಲಿ ಮಾನವವರ್ಗದ ಪ್ರೇಮ ಪಶುವರ್ಗದ ಪ್ರೇಮದಿಂದ ಬೇರೆ ಯೆಂದೆನಿಸುವುದಿಲ್ಲ; ಎರಡನೆಯ ಸಂದರ್ಭದಲ್ಲಿ ನಮಗೆ ನಾವೆಲ್ಲ ಪ್ರೀತಿಸಿದೆವೋ ಇಲ್ಲವೋ ಎಂದು ಸಂದೇಹವೇ ಹುಟ್ಟುತ್ತದೆ. ನಿಜವಾಗಿ ಪ್ರೇಮವೆನ್ನುವುದು ಇಷ್ಟು ಅಲ್ಪವಾದ ವಸ್ತುವೂ ಅಲ್ಲ, ಇಷ್ಟು ಅಪೂರ್ವ ವಾದ ವಸ್ತುವೂ ಅಲ್ಲ. ಅದು ಜಗತ್ತನ್ನೇ ತುಂಬಿದೆ; ಜಗತ್ತನ್ನು ನಡೆಯಿಸುತ್ತಿರುವ ಶ್ರೇಷ್ಠ ತತ್ವವಾಗಿದೆ. ಠಾಕೂರರ ಕವಿತೆಗಳು ಇದನ್ನು ಸ್ಪಷ್ಟವಾಗಿ ತೋರಿಸುತ್ತವೆ. ದಾರಿಯಲ್ಲಿ ನಡೆಯುತ್ತ ಇರುವವನು ಒಂದು ಮುಖವನ್ನು ನೋಡುವನು; ಅವನ ಬಟ್ಟೆಗೆ ಯಾವುದೋ ಸೆರಗು ಸೋಕುವುದು; ಎಲ್ಲಿಯೋ ಒಂದು ಕಣ್ಣಿನ ನೋಟ ಅವನ ಕಡೆಗೆ ಹರಿಯುವುದು. ಅಷ್ಟರಿಂದ ಅವನಿಗೆ ಕುತೂಹಲ ಹುಟ್ಟುತ್ತದೆ, ಹರ್ಷ ವಾಗುತ್ತದೆ. ಅದು ಪ್ರೇಮಸಾಗರದ ಒಂದು ಲಹರಿ. ಇದರಿಂದ ಕೆಟ್ಟುದನ್ನು ಎಣಿಸಬೇಕಾದದಿಲ್ಲ. ಸಾಮಾನ್ಯರು ಇದನ್ನು ಒಪ್ಪಿಕೊಳ್ಳು ವುದಕ್ಕೆ ಹೆದರುತ್ತೇವೆ. ಕವಿಯಾದವನಿಗೆ ಈ ಹೆದರಿಕೆಯಿಲ್ಲ. ಅದು ಮನಸ್ಸಿನ ಪ್ರವೃತ್ತಿ. ಅವನಿಗೆ ಅದರಲ್ಲಿ ಕಲ್ಮಷ ಕಾಣುವುದಿಲ್ಲ. ಸರಿಯಾಗಿ ಸಂಬಂಧವೇ ಇರುವಲ್ಲಿ ಹೀಗೆಯೇ. ಪರಸ್ಪರ ನಡೆಯುವ ಒಂದೊಂದು ಮಾತೂ ನೋಡುವ ಒಂದೊಂದು ನೋಟವೂ ಕವಿಗೆ ದೊಡ್ಡ ವಿಷಯ. ಹತ್ತಿರ ಕುಳಿತಿರುವುದು, ಮಾತನಾಡುವುದು, ಮಾತನಾಡದೆ ನೋಡು ವುದು, ಕೈಯಲ್ಲಿ ಕೈಯಿಡುವುದು, ಹೋಗುವೆನೆನ್ನುವುದು, ಹೋಗದೆ ನಿಲ್ಲುವುದು, ಹೋಗುವೆನೆಂದಾಗ ಸ್ವಲ್ಪ ನೊಂದಂತೆ ಕಂಡರೆ ಸಾಕು ಎನ್ನುವುದು, ಹೋಗದೆ ನಿಂತಾಗ ನನ್ನನ್ನು ಬಿಟ್ಟು ನೀನು ಇರಲಾರೆ ಎಂಬ ತಾತ್ಸಾರಬೇಡ, ಬಿಡದೆ ಬಂದೆಯಲ್ಲಾ ಎಂದು ಸಂತೋಷಪಡು ಎನ್ನು ವುದು: ಇಂಥ ಎಲ್ಲ ಸಣ್ಣ ವಿಷಯವೂ ಪ್ರೇಮದ ಬೆಳವಣಿಗೆಯಲ್ಲಿ

ಮುಖ್ಯಾಂಗಗಳು. ಪ್ರೇಮ ಒಂದು ಗೀತದಂತೆ ಸರಳ. ಗಾನದ ಅನಂತವಾದ ಆನಂದ ಒಂದು ಸಣ್ಣ ಗೀತದಲ್ಲಿ ಅಡಗುವಂತೆ ಅನಂತವಾದ ಜೀವನ ವೈಭವ ಒಂದು ಕ್ಷಣದ ಪ್ರೇಮದಲ್ಲಿ ಅಡಗಬಹುದು. ಈ ಪ್ರೇಮವೆನ್ನುವುದು ಹೆಣ್ಣು ಗಂಡಿನ ಮಧ್ಯದ ಆಕರ್ಷಕಶಕ್ತಿ ಮಾತ್ರವಲ್ಲ. ಮನುಷ್ಯನು ಮೂಗ ಜಂತುವಿನೊಂದಿಗೆ ಬೆಳಸುವ ಸೌಹಾರ್ದದಲ್ಲಿ ಇದೇ ತತ್ವವಿದೆ; ಶಕುಂತಲೆಯಂಥ ಜೀವ ಹೂ ಬಿಡುವ ಲತೆಯಲ್ಲಿ ತೋರಿಸುವ ಸ್ನೇಹದಲ್ಲಿ ಇದೇ ಮಾಯೆ ಇದೆ. ಒಂದು ಚೇತನ ವಿಶ್ವಚೇತನದೊಂದಿಗೆ ಬೆರೆಯಲೆಳಸಿ ವಿಸ್ತಾರವಾಗುವುದಕ್ಕೆ ವಿಕಾಸವಾಗುವುದಕ್ಕೆ ಮಾಡುವ ಎಲ್ಲ ಪ್ರಯತ್ನದಲ್ಲಿಯೂ ಇದೇ ಆಸೆಯಿದೆ. ಇದನ್ನು ತಿಳಿದವನಿಗೆ ಪ್ರೇಮಕ್ಕೆ ಹಿರಿದಾದ ತತ್ವವಿಲ್ಲ. ಅದನ್ನು ಬೆಳಸುವುದೇ ಕರ್ತವ್ಯವೆಂದು ಅವನು ಭಾವಿಸುತ್ತಾನೆ. ಮುದುಕನಾಗುತ್ತ ನೀನು ಬಾಳ ಆಚೆಯ ದಡವನ್ನು ಕುರಿತು ಯೋಚಿಸುವುದಿಲ್ಲವೇ ಎಂದರೆ, ಕವಿ, ಇಲ್ಲ, ಎನ್ನುತ್ತಾನೆ. ಈ ಬಾಳಿನಲ್ಲಿ ಎಳೆಯ ಹೃದಯಗಳು ಹೇಗೆ ಬೆರೆಯಬೇಕೆಂದು ಯೋಚಿಸಿ ಸಹಾಯ ಮಾಡುವುದು ಮುಖ್ಯವಾದ ಕೆಲಸ. ಅವನು ಅದರಲ್ಲಿ ತೊಡಗುತ್ತಾನೆ.

### ೮೨. ಜೀವನ ಮೀಮಾಂಸೆ

ಜೀವನದಲ್ಲಿರುವ ಸೌಂದರ್ಯವನ್ನು ತಿಳಿದಿರುವುದರಿಂದಲೂ ಅದರಲ್ಲಿಯ ಮುಖ್ಯ ತತ್ವ ಪ್ರೇಮ ಎನ್ನುವುದರಿಂದಲೂ ಕವಿವರರ ಜೀವನ ಮೀಮಾಂಸೆಯಲ್ಲಿ ಅಸಾಮಾನ್ಯವಾದ ಕೆಲವು ಲಕ್ಷಣಗಳು ಕಾಣುತ್ತವೆ. ಇವುಗಳಲ್ಲಿ ಮೊದಲನೆಯದು ಏನೆಂದರೆ ಬಾಳು ಬರಿದಲ್ಲ ಎನ್ನುವುದು. ಜೀವನದಲ್ಲಿ ನೋವಿದೆ, ಬಾಳಿನ ಸುಖ ನಿತ್ಯವಲ್ಲ, ಭೂದೇವಿ ಅವಳ ಮಕ್ಕಳಿಗಾಗಿ ಕಟ್ಟುತ್ತಿರುವ ಆನಂದಸೌಧದಲ್ಲಿ ಅವಳ ಕಷ್ಟಕ್ಕೆ ತಕ್ಕಷ್ಟು ಕಟ್ಟಡ ವೇಳುತ್ತಿಲ್ಲ; ಆದರೂ ಇವರು, ಇಹದಲ್ಲಿ ಸುಖವಿಲ್ಲ, ಪರದ ಚಿಂತೆ ಮಾಡು, ಎಂದು ಹೇಳುವುದಿಲ್ಲ. ಬಾಳಿನ ಸುಖ ನಶ್ವರವಾದದರಿಂದಲೇ ನಮಗೆ ಅದು ಅಷ್ಟು ಇನಿದಾಗಿರುವುದು; ಪರವೆನ್ನುವುದರ ಸುಖಕ್ಕೆ ಈಗಣ ಸುಖ ಸಂಚಕಾರ; ಅದನ್ನು ಮರೆಯಬೇಡ, ಆದರೆ ಇದನ್ನಾಗಲಿ ತೊರೆಯಬೇಡ, ಎನ್ನುವ ತತ್ವ ಠಾಕೂರರದು. ಇದು ತತ್ವದಲ್ಲಿ ಇರುವ

ವ್ಯತ್ಯಾಸಕ್ಕಿಂತ ಹೆಚ್ಚಾಗಿ ನಿಲುವಿನಲ್ಲಿಯ ಒಂದು ವ್ಯತ್ಯಾಸ. ಮನುಜ ಶರೀರವಿದೇನು ಸುಖಾ ಎನ್ನುವ ಹಾಡೂ ಹರಿಯನ್ನು ನೆನೆದು ಬದುಕು ಎನ್ನುತ್ತದೆ; ಮಾನವಜನ್ಮ ದೊಡ್ಡದು ಎನ್ನುವ ಹಾಡೂ ಹರಿಯನ್ನು ನೆನೆದು ಬದುಕು ಎಂದೇ ಹೇಳುತ್ತದೆ. ಆದರೆ ಅದು ಬಾಳಿನ ಕೊರತೆಗಳನ್ನೇ ತೋರಿಸುತ್ತದೆ, ಇದು ಅದರಲ್ಲಿರುವ ಸಲಕರಣೆಗಳನ್ನು ಎಣಿಸುತ್ತದೆ. ಈಸಬೇಕು ಇದ್ದು ಜೈಸಬೇಕು ಎನ್ನುವ ಮನೋಧರ್ಮವಿದು. ಆದರೆ ಹೇಸಿಗೆಯ ಸಂಸಾರದಲ್ಲಿ ಎಂದು ಹೇಳುವುದಲ್ಲ. ಆನಂದಾತ್ಮಕವಾದ ವಿಶ್ವಜೀವನದ ಲತೆಯಲ್ಲಿ ಬಂದಿರುವ ಹೂವು ಸಂಸಾರ; ಅದರ ಮುಖ್ಯ ಭಾವ ಆನಂದ. ಅದರ ಸುಖದ ವೇಳೆಯಲ್ಲಿ ನಾವು ಭಗವಂತನ ಸ್ವಭಾವವನ್ನು ಅರಿಯುತ್ತೇವೆ. ಅದರ ಕಷ್ಟದಲ್ಲಿ ಅವನಲ್ಲದ ಸುಖ ಸುಖವಲ್ಲವೆಂದರಿದು ಅವನ ಕಡೆಗೇ ತಿರುಗುತ್ತೇವೆ. ಕಷ್ಟವಾಗಲಿ ಸುಖವಾಗಲಿ ಬಾಳು ಬಾಳಬೇಕಾದ ವಸ್ತು ಹೊರತು ಬಿಟ್ಟು ಓಡಿಹೋಗಬೇಕಾದದಲ್ಲ. ಇದು ನಮ್ಮ ದೇಶದ ಜೀವನ ಮೀಮಾಂಸೆಯಲ್ಲಿ ಹೊಸ ಮಾತೇನೂ ಅಲ್ಲ. "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ" ಎಂದ ಉಪನಿಷತ್ಕಾರರು ಇದೇ ಸೂತ್ರವನ್ನು ಜನದ ಮುಂದಿಟ್ಟರು. ಠಾಕೂರರೂ ಅದನ್ನೇ ಎತ್ತಿಹೇಳಿದರು. ತಪಸ್ವಿಗಳಲ್ಲಿ ಪ್ರಮುಖನಾಗಿದ್ದು ರಾಜನಿಗೆ ಮಂತ್ರಿಯಾಗಿದ್ದ ವಸಿಷ್ಠನು ಈ ಧರ್ಮಕ್ಕೇ ತನ್ನ ಬಾಳನ್ನು ಉದಾಹರಣೆಯಾಗಿ ಬೆಳಸಿದ್ದು. ಕರ್ಮದಲ್ಲಿ ಸಿದ್ಧಿಹೊಂದಿದ ಜನಕರಾಜನನ್ನು ಗೀತಾಚಾರ್ಯರು ಉದಾಹರಿಸಿದ್ದೂ ಈ ಉತ್ತಮ ಸೂತ್ರದ ಅನುವರ್ತಿ ಎಂಬ ಕಾರಣದಿಂದಲೇ. ನಮ್ಮ ಜನಾಂಗ ಕೆಲವು ಶತಮಾನಗಳ ಹಿಂದೆ ಜೀವನದಲ್ಲಿ ಸೋತು ಕುಳಿತು ಬಾಳೇ ಬೇಸರವೆಂಬಂತೆ ಸ್ವಲ್ಪ ನುಡಿಯಿತು; ಆ ತಾಮಸ ವೈರಾಗ್ಯದ ಫಲವಾಗಿ ಬದುಕೂ ಅಲ್ಲದ ಸಾವೂ ಅಲ್ಲದ ಒಂದು ವಿಷಮಾವಸ್ಥೆಯಲ್ಲಿ ಬಂದು ನಿಂತಿತು. ದೇವೇಂದ್ರನಾಥರ ಹೃದಯದಲ್ಲಿ ಅಂದು ಕೇಳಿಬಂದಂತೆ ನಮ್ಮ ಜನದ ಹೃದಯದಲ್ಲಿ ಇಂದು, ದೇವರನ್ನು ಹಿಡಿಯುವುದಕ್ಕೆ ಬಾಳನ್ನು ಬಿಡಬೇಕಾಗಿಲ್ಲ, ಎಂಬ ಧ್ವನಿ ಕೇಳಬಂದಿದೆ. ಠಾಕೂರ ಕವಿವರರು ಈ ಮಾತನ್ನು ಹೇಳುವುದಕ್ಕಾಗಿಯೇ ಕವಿಯಾದರೋ ಎಂದು ಕಾಣುವಂತೆ ಇವರ ಲೇಖನವೆಲ್ಲ ಈ ತತ್ವವನ್ನು

ಉಸುರಿದೆ. ನಮಗೆ ನಮ್ಮ ಬಾಳು ಬೇಕು, ಎಲ್ಲರ ಬಾಳೂ ನಮಗೆ ಬೇಕು; ನಮ್ಮ ದೇಶ ಬೇಕು, ಇತರ ದೇಶಗಳೂ ಬೇಕು; ನಮಗೆ ಸ್ವರ್ಗ ಬೇಕು, ಭೂಮಿಯೂ ಬೇಕು: ಎಂದು ಮಾನವನು ತನ್ನಲ್ಲಿ ಎಲ್ಲವನ್ನೂ ಕಂಡು ತನ್ನನ್ನು ಎಲ್ಲದರಲ್ಲಿಯೂ ಕಂಡು ಈ ಜೀವನದಿಂದ ಆತ್ಮವನ್ನೇ ಸಾಧಿಸುವ ದಾರಿಯನ್ನು ಇವರು ಒತ್ತಿಹೇಳಿದಾರೆ. ರವೀಂದ್ರನಾಥ ಠಾಕೂರರು ಸಮಗ್ರ ಜೀವನದ ನವೀನಾಚಾರ್ಯರು.

## ೮೩. ಅನುಭವದ ತತ್ವ

ವಿಚಾರಪೂರ್ಣವಾದ ಬಾಳುವೆಯೆಲ್ಲ ತತ್ವದ ಕಡೆಗೆ ನಡೆಯುತ್ತದೆ. ಕಸ್ತ್ವಂ ಕೋಹಂ ಎನ್ನುವುದು ಬೇರೆ ಕೆಲಸವಿಲ್ಲದ ಆಲಸನಿಗೆ ಮಾತ್ರ ಬರುವ ಪ್ರಶ್ನೆಯಲ್ಲ. ಕೆಲಸದಲ್ಲಿರುತ್ತಲೇ ಮನುಷ್ಯನು ಈ ಪ್ರಶ್ನೆಗಳನ್ನು ಕೇಳುತ್ತಾ ಅವಕ್ಕೆ ಉತ್ತರವನ್ನು ಕಾಣುತ್ತಾ ಮುಂದೆ ನಡೆಯಬಹುದು. ಠಾಕೂರರಿಗೆ ತತ್ವಜ್ಞಾನ ಹೀಗೆ ಬಂದಿತು. ದೇವೇಂದ್ರನಾಥರು ಅವರಿಗೆ ಚಿಕ್ಕಂದಿನಲ್ಲೇ ಭಗವದ್ಗೀತೆಯ ಪರಿಚಯಮಾಡಿಕೊಟ್ಟರು. ತಮ್ಮ ಮನೆಯಲ್ಲಿ ತಮಗೆ ಉಪನಿಷತ್ತು ಕಿವಿಗೆ ಬೀಳುತ್ತಲೇ ಇತ್ತು, ಎಂದು ಇವರು ಹೇಳಿದಾರೆ. ಬ್ರಾಹ್ಮಸಮಾಜದ ಆಗಣ ಸ್ಥಿತಿಯಲ್ಲಿ ತತ್ವದ ವಿಚಾರವೆನ್ನುವುದು ಸದಾ ನಡೆಯುತ್ತಿದ್ದ ಕಾರ್ಯಕ್ರಮವೆಂಬಂತೆ ತೋರುತ್ತದೆ. ಹೀಗೆ ತಾನಾಗಿ ಸಮಗ್ರವಾಗಿ ಬೆಳೆಯುತಿದ್ದ ಇವರ ಬಾಳು ಪ್ರಾಚೀನದ ವಿಚಾರದ ಸಂಬಂಧದಲ್ಲಿ ವಿಲಕ್ಷಣವಾದ ಸಂಸ್ಕಾರವನ್ನು ಪಡೆಯಿತು. ಯಾವ ಉಪದೇಶಕ್ಕಿಂತಲೂ ಹೆಚ್ಚಾಗಿ ಪಿತೃದೇವನ ಬಾಳು ಉಪನಿಷತ್ತುಗಳ ಸಾರವನ್ನು ಇವರ ಮನಸ್ಸಿನಲ್ಲಿ ತುಂಬಿತು; ಯಾವ ಚರ್ಚೆಗೂ ಹೆಚ್ಚಾಗಿ ಇವರ ಅನುಭವದಲ್ಲಿ ಆ ಸಾರ ಸೂತ್ರಗಳ ಟೀಕೆ ಟಿಪ್ಪಣಿ ದೊರೆಯಿತು. ಇದರಿಂದ ಇವರು ಬ್ರಾಹ್ಮಸಮಾಜದಲ್ಲಿ ಮಾತನಾಡಿದಾಗ ಜನ ಕಿಕ್ಕಿರಿದು ನಿಂತು ಕೇಳುತಿದ್ದರು. ಶಾಂತಿನಿಕೇತನದಲ್ಲಿ ಇವರು ಉಪದೇಶ ಮಾಡಿದಾಗ ಚಿಕ್ಕವರೆಲ್ಲ ಕೇಳಿ ಆನಂದಿಸುತಿದ್ದರು. ಇಂಗ್ಲೆಂಡಿನಲ್ಲಿ ಫ್ರಾನ್ಸಿನಲ್ಲಿ ಅಮೆರಿಕಾದಲ್ಲಿ ಇವರ ಉಪನ್ಯಾಸಗಳಿಗೆ ಅಷ್ಟು ಗಮನವನ್ನು ತಂದದು ಇವರ ತತ್ವಬೋಧೆ. ಕೆಲವರು ಈ ತತ್ವವಿಚಾರದಲ್ಲಿ ಶಾಸ್ತ್ರ

ಪ್ರಕ್ರಿಯೆ ಇಲ್ಲ, ಇದರಲ್ಲಿ ಹೆಜ್ಜೆ ಹೆಜ್ಜೆಯಾಗಿ ನಡೆದು ವಿಷಯವನ್ನು ವಿಶದ ಪಡಿಸಿಕೊಂಡು ಕೊನೆಗೆ ಸೇರಿರುವ ಸಿದ್ಧಾಂತವಿಲ್ಲ, ಎಂದು ಹೇಳಿದಾರೆ. ಎಂದರೆ ಠಾಕೂರರು ಶಂಕರಾಚಾರ್ಯರಂತೆ ಅಥವಾ ರಾಮಾನುಜಾ ಚಾರ್ಯರಂತೆ ತತ್ತ್ವದಲ್ಲಿ ಒಂದು ಮತವನ್ನು ಪ್ರತಿಪಾದಿಸಲಿಲ್ಲ ಎಂದು ಇವರ ಅಭಿಪ್ರಾಯವೆಂದು ಕಾಣುತ್ತದೆ. ಇದು ನಿಜವಾದ ಮಾತೇ. ಕವಿವರರು ಹೊಸದೊಂದು ಮತವನ್ನು ಸಿದ್ಧಾಂತಮಾಡಲಿಲ್ಲ; ಹಳೆಯ ವೆಂದೇ ಹೇಳಬಹುದಾದ ವಿಷಯವನ್ನು ಹೊಸದಾಗಿ ಅನುಭವಿಸಿದರು, ಹೊಸ ರೀತಿಯಲ್ಲಿ ಹೇಳಿದರು. ಆದರೆ ಹೆಜ್ಜೆ ಹೆಜ್ಜೆ ನಡೆದು ಕೊಂಡಿ ಕೊಂಡಿ ಬಡಿದು ಮಾಡದ ಮಾತ್ರಕ್ಕೆ, ಇದು ಒಂದು ಹೊಸ ಸಿದ್ಧಾಂತವೆಂದು ಹೇಳಲಾಗದ ಮಾತ್ರಕ್ಕೆ, ಇದು ತತ್ತ್ವವಲ್ಲವೆಂದು ಯಾರೂ ಭಾವಿಸ ಲಾಗದು. ಹೇಳಿರುವ ರೀತಿಯಿಂದ ಈ ವಿಷಯ ಬುದ್ಧಿಯನ್ನು ಮುಟ್ಟುವ ಮೊದಲು ಮನಸ್ಸನ್ನು ಒಪ್ಪಿಸಿರುತ್ತದೆ; ಅಲ್ಲಲ್ಲಿ ಕಾಣುವ ಪ್ರತಿಭೆಯಿಂದ ಹೊಸದಾಗಿಯೇ ಇದೆ. ಮುಖ್ಯವಾಗಿ ಇದು ಕವಿಯಾದವನ ತತ್ತ್ವವಿಚಾರ. ಇದರಲ್ಲಿ ಸಿದ್ಧಾಂತವನ್ನು ಮಾಡಿ ಮುಗಿಸಿದರೆ ತೃಪ್ತಿಯಿಲ್ಲ. ಅದನ್ನು ಮಾಡುವುದರಲ್ಲಿ ಊಹೆ, ಹೇಳುವುದರಲ್ಲಿ ವಿಲಾಸ, ವಿವರಿಸುವುದರಲ್ಲಿ ಚಮತ್ಕಾರ, ಉದಾಹರಿಸುವುದರಲ್ಲಿ ಸೊಗಸು, ಇವು ಮುಖ್ಯ. ಇಲ್ಲಿ ವಿಚಾರ ಸದಾ ಮುಂದೆ ಹೋಗುವುದರಲ್ಲಿ ತೊಡಗಿರುವುದಿಲ್ಲ; ಇದ್ದಲ್ಲಿಯೇ ಸೊಗಸಾಗಿ ಸುತ್ತುವಂತೆ ಕಾಣುತ್ತದೆ. ಸುಂದರವೆಂದು ಕಂಡ ಒಂದೊಂದು ಭಾವದ ಸುತ್ತಲೂ ಕವಿಯ ಊಹೆ ಒಂದು ದುಂಬಿಯಂತೆ ಸುತ್ತಿ ಸುತ್ತಿ ಅದರ ಸತ್ಯವನ್ನು ತಾನು ಅನುಭವಿಸಿ ನಮ್ಮ ಅನುಭವಕ್ಕೆ ತರುತ್ತದೆ. ಕವಿ ಗುರು ತತ್ತ್ವದ ಕೈಯನ್ನು ನಮ್ಮ ಕೈಯಲ್ಲಿಟ್ಟು ಜೊತೆಯಾಗಿ ಬಾಳಿ ಎನ್ನು ತ್ತಾನೆ. ತತ್ತ್ವವೆಂದಮೇಲೆ ಇದೆಂಥ ಸಂನ್ಯಾಸಿನಿಯೋ ಎಂದು ನಾವು ಕಣ್ಣೆತ್ತಿನೋಡುತ್ತೇವೆ. ಕವಿ ಸಾಕಿದ ಈ ನಮ್ಮ ಸಂಗಾತಿ ಕಾಷಾಯ ವಸ್ತ್ರವನ್ನು ಹೊದೆದಿರುವುದಿಲ್ಲ; ಶುಭ್ರವಸನವನ್ನು ಧರಿಸಿದಾಳೆ. ನಾವು ಭಯಪಡದೆ ಇರಲೆಂದು ಕವಿ ಇವಳನ್ನು ಸಾಲಂಕೃತ ಸುಂದರಿಯಾಗಿ ಮಾಡಿದಾನೆ. ಕವಿಯ ಎಲ್ಲ ಕೆಲಸದಂತೆ ಅವನ ಕೈಯಲ್ಲಿ ತತ್ತ್ವವಿಚಾರವೂ ಕಾವ್ಯವಾಗಿದೆ.

## ೪೪. ವಿಶ್ವಧರ್ಮದ ಕಲ್ಪನೆ

ರವೀಂದ್ರನಾಥರ ಸಮಗ್ರ ಜೀವನದಲ್ಲಿ ಧರ್ಮಬೋಧೆ ಒಂದು ಕಾರ್ಯವಾಗಿ ಬಂದಿತು. ಇದು ಕಾರ್ಯವಾಗಿ ಬರುವ ಮುನ್ನ ಅದಕ್ಕೆ ಬೇಕಾದ ಶಿಕ್ಷೆಯೂ ಅವರಿಗೆ ದೊರೆಯಿತು. ಠಾಕೂರರು ಪ್ರತಿಪಾದಿಸುವ ಧರ್ಮವನ್ನು ವಿಶ್ವಧರ್ಮವೆನ್ನಬಹುದು. ದೇವೇಂದ್ರನಾಥರು ಅದನ್ನು ಬ್ರಾಹ್ಮಧರ್ಮವೆಂದರು. ಇದು ಬ್ರಾಹ್ಮಸಮಾಜದ ಧರ್ಮಕಲ್ಪನೆಯೆಂದು ನಾವು ಎಣಿಸಬಾರದು. ದಾರಿತಪ್ಪಿ ಕಾಡಿನಲ್ಲಿ ಅಲೆದು ಕೆಸರಿನಲ್ಲಿ ನಡೆದ ಸನಾತನ ಧರ್ಮ ಬ್ರಾಹ್ಮಸಮಾಜದ ಮೂಲಭಾವನೆಯಲ್ಲಿ ತನ್ನ ಪೂರ್ವದ ಸ್ಥಿತಿಯನ್ನು ನೆನೆಯಿತೆನ್ನುವುದು ನಿಜ. ದೇವೇಂದ್ರನಾಥರಲ್ಲಿ ಅದು ತನ್ನನ್ನು ತಾನು ಮತ್ತಷ್ಟು ಅರಿತುಕೊಂಡಿತು. ಆದರೂ ಎಲ್ಲ ದೇಶಗಳ ಜನರು ಧರ್ಮವೆಂದು ಒಪ್ಪುವ ಸ್ಥಾನದಲ್ಲಿ ಅದು ಬಂದು ನಿಲ್ಲಲಿಲ್ಲ. ಅಥವಾ ಬಂದಿದ್ದರೂ ಸಂಸ್ಕೃತರಾದವರಿಗೆ ಮಾತ್ರ ಒಪ್ಪತಕ್ಕದಾಗಿ ಅಸಂಸ್ಕೃತರಾಗಿ ಆರಂಭದ ಅವಸ್ಥೆಗಳಲ್ಲಿ ಇರುವವರನ್ನು ಒಲಿಸಿಕೊಳ್ಳಲಾರದೆ ನಿಂತಿತು. ಠಾಕೂರರಲ್ಲಿ ಅದು ಮತ್ತಷ್ಟು ವಿಸ್ತಾರವಾಗಿದೆ. ಇದು ಇವರ ಹಿಬರ್ಟ್ ಉಪನ್ಯಾಸಗಳಲ್ಲಿ ಒಂದು ಸಂಪೂರ್ಣವಾದ ರೂಪವನ್ನು ಪಡೆಯಿತು. ಸನಾತನಧರ್ಮ ಸಹಜವಾಗಿ ವಿಶ್ವಧರ್ಮ. ಆದರೆ ಅದು ಈ ಮುನ್ನ ಬಾಯಿಬಿಟ್ಟು ಎಲ್ಲರನ್ನೂ ತನ್ನ ರೆಕ್ಕೆಯೊಳಕ್ಕೆ ಕರೆಯಲಿಲ್ಲ; ಇಂದು ಕರೆಯುತ್ತಿದೆ. ಆ ಕರೆ ಕೇಳಿ ಬಂದದು ಮೊದಲು ರಾಮಕೃಷ್ಣ ಪರಮಹಂಸರ ಜೀವನದಲ್ಲಿ. ಆಮೇಲೆ ಸ್ವಾಮಿ ವಿವೇಕಾನಂದರ ಘೋಷದಲ್ಲಿ ರೂಪುಗೊಂಡು ಅದು ಮತಾಭಿಮಾನಿಗಳಿಗೆ ಮೆಚ್ಚಿಗೆಯಾಯಿತು. ಮತ್ತೆ ಅದು ರವೀಂದ್ರನಾಥರ ವಾಣಿಯಲ್ಲಿ ಕೇಳಿಬಂದು ಒಳ್ಳೆವೆನ್ನುವವರ ಮನಸ್ಸನ್ನೆಲ್ಲ ಸೂರೆಗೊಂಡಿತು. ವಸುಧೆಯೆಲ್ಲ ಒಂದು ಕುಟುಂಬ ಎಂಬ ಉದಾರಭಾವ ಇವರ ಲೇಖನದಲ್ಲಿ ಮೂರ್ತಿಗೊಂಡಿದೆ. ಜಾತಿ ಜಾತಿಯ ಕಲಹ, ಮತ ಮತದ ಕಲಹ, ಜನಾಂಗ ಜನಾಂಗಗಳ ಕಲಹ, ಎಲ್ಲ ಕಲಹದ ಮೂಲ, ನಾವು ಬೇರೆ ನೀವು ಬೇರೆ ಎಂಬ ಭಾವ; ನೀವು ಹೇಗಾದರೂ ಇರಿ, ಮೊದಲು ನಮ್ಮ ಕಷ್ಟಸುಖ ನೋಡಿಕೊಂಡು ನಿಮ್ಮ ವಿಚಾರ ಮಾಡುತ್ತೇವೆ, ಎನ್ನುವ ಮನೋಧರ್ಮ. ಕಲಹಮಾಡುವುದು

ಬೇಡ ಎನ್ನುವ ಜನರಾದರೂ, ಸ್ನೇಹಿತರಾಗಿರೋಣ ಆದರೆ ಪೃಥಕ್ಕಾಗಿರೋಣ, ಎನ್ನುವರುಂಟು. ಅಂತವರಲ್ಲಿ ಈ ಭಾವನೆಯ ಮುಸುರೆ ಒಂದಷ್ಟು ಉಳಿದಿರುತ್ತದೆ. ನಾವು ನೀವು ಒಂದು ಎಂದು ನಿರ್ಧರಮಾಡಿಕೊಂಡು, ಎಲ್ಲ ಜನರೂ ತಮ್ಮ ಮನಸ್ಸನ್ನು ಚೊಕ್ಕವಾಗಿ ತೊಳೆದರೆ ಮಾತ್ರ ಅವರ ಭಾವ ಮಾನವವರ್ಗವೆಲ್ಲಕ್ಕೆ ಒಪ್ಪಾಗಿ ಕಾಣಬಹುದು. ವಿಶ್ವಧರ್ಮವೆನ್ನುವುದು ಇಲ್ಲಿಗೂ ಪೂರ್ಣವಾಗಲಿಲ್ಲ. ಮಾನವನಿಗೆ ತಿಳಿದಿರುವ ವಿಶ್ವವೆಲ್ಲವನ್ನೂ ಮೈತ್ರಿಯಿಂದ ಬೆಳಸುವ ನಿಲುವಿಗೆ ಬಂದೇ ಅದು ಸುಮ್ಮನಾಗಬಹುದು. ಧರ್ಮದ ಈ ಕಲ್ಪನೆ ಮಾನವ ವರ್ಗದ ಎಲ್ಲ ಅನುಭವದ ಸಾರವಾಗಿ ಅದರ ಉದಾತ್ತ ಜೀವಗಳ ಕನಸಿನ ಮೇರೆಯನ್ನು ಮುಟ್ಟುತ್ತದೆ. ಇದು ಕನಸಾಗಿ ಕಾಣುವುದೇ ಬಹು ಅಲ್ಪ ಸಂಖ್ಯೆಯ ಜನಕ್ಕೆ. ಇದು ಅನುಭವಕ್ಕೆ ಬರುವುದು ಎಷ್ಟು ಕಲ್ಪದಲ್ಲಿ ಒಬ್ಬನಿಗೋ. ಆದರೂ ಇದು ಕೇಳಿ ತಿಳಿಯಬೇಕಾದ ಧರ್ಮ, ತಿಳಿದು ಸಾರಬೇಕಾದ ಧರ್ಮ. ಠಾಕೂರರು ಇದರ ಕನಸನ್ನು ಕಂಡರು, ಅದರ ಸೊಗಸನ್ನು ಸಾರಿಹೇಳಿದರು.

### ೮೫. ದೈವಸಿದ್ಧಿ

ಕವಿವರರಿಗೆ ಈ ಜೀವನದಲ್ಲಿ ದೈವಸಿದ್ಧಿಯಾಯಿತೆನ್ನುವುದು ಇದೆಲ್ಲ ಮಾತಿನ ಮುಖ್ಯ ಸಾರಾಂಶ. ಇವರ ತಂದೆಯವರಿಗೆ ದಿವ್ಯಜ್ಞಾನ ಮೊದಲು ಬಂದದ್ದು ಹೇಗೆಂದು ಅವರ ಜೀವನ ಚರಿತ್ರೆಯಲ್ಲಿ ಹೇಳಿದೆ. ಠಾಕೂರರ ಜೀವನ ಚರಿತ್ರೆಯಲ್ಲಿಯೂ ಅಂಥದೇ ಸಂದರ್ಭ ಎಳೆಯತನದಲ್ಲೇ ಬಂದದು ವರ್ಣಿತವಾಗಿದೆ. ಇದಾದಮೇಲೆ ಇವರಿಗೆ ಕಾವ್ಯಾವೇಶದ ಸಂದರ್ಭದಲ್ಲಿ ತನ್ನ ಜೀವನ ದೇವತೆ ತನ್ನ ಕೃತಿಯನ್ನು ನಡಸುತ್ತಿರುವಂತೆ ತೋರಿಬಂದ ವಿಷಯವೂ ಉಕ್ತವಾಗಿದೆ. ಆಮೇಲೆ ಇವರು ದೇವರನ್ನು ಕುರಿತು ಹೇಳಿದ ಮಾತಿನಲ್ಲೆಲ್ಲ ಈ ಸಂಬಂಧ ಹೇಗೆ ಬರಬರುತ್ತ ಹತ್ತಿರವಾಯಿತೆಂಬುದು ಕಂಡುಬಂದಿದೆ. ಕವಿವರರು ತಮ್ಮ ಬಾಳಿನಲ್ಲಿ ಭಗವಂತನ ಲೀಲೆಯನ್ನು ಕಂಡರು; ಅದರ ಸುಖದಿಂದ ನಲಿದಂತೆ ದುಃಖದಿಂದ ಬೆಂದು, ನಕ್ಕು ಕರೆದರೂ ತಾಯಿ, ಹೊಡೆದು

ದೂಡಿದರೂ ತಾಯಿ, ಎಂದು ಮಗು ತಾಯಿ ಬಳಿ ಹೋಗುವಂತೆ ಬಾಳ ಎಲ್ಲ ಅವಸ್ಥೆಗಳಲ್ಲಿಯೂ ದೇವರನ್ನು ಸಮೀಪಿಸಿದರು. ಜೀವ ಕರೆದೀತೆ ಎಂದು ದೈವ ಕಾದಿರುತ್ತದೆಯೆಂದು ಬಲ್ಲವರು ಹೇಳುವರು. ಠಾಕೂರರ ಜೀವ ಹತ್ತಾರುಸಲ ಕರೆಯಿತು, ಅದರ ದೈವ ಅದಕ್ಕೆ ಓ ಎಂದು ಉತ್ತರ ಕೊಟ್ಟಿತು. ದೇವರು ಎಂಬ ತತ್ವ ಸೃಷ್ಟಿಗೆಲ್ಲ ಒಂದೇ ಆದರೂ ಅದು ಒಂದೊಂದು ಚೇತನಕ್ಕೂ ಅದರ ಸ್ಥಿತಿಗನುಸಾರವಾಗಿ ಬೇರೆಯ ದೈವ ವಾಗುತ್ತದೆ. ಠಾಕೂರರ ದೈವ ಅವರ ಒಡನಾಡಿ; ತನ್ನ ಸಿಂಹಾಸನ ವನ್ನಿಳಿದು ಇವರ ಜೊತೆಗೆ ಆಡಬಂದಿರುವ ರಾಜ; ಇವರನ್ನು ಹಾಡ ಹೇಳಿ ಸಂತೋಷಿಸುವ ಪ್ರಭು; ಇವರ ತಪ್ಪುಗಳನ್ನು ಮನ್ನಿಸುವ, ಇವರ ಗುಣಕ್ಕೆ ಮೆಚ್ಚುವ, ಸದಾ ಇವರನ್ನು ಹಿಡಿದು ಮೇಲಕ್ಕೆ ಎತ್ತುವ, ಸುಹೃತ್ತತ್ವ. ದೇವರನ್ನು ಈ ರೀತಿ ಭಾವಿಸುವುದು ಸನಾತನ ಧರ್ಮದಲ್ಲಿ ಬಹು ಪೂರ್ವದ ಸಂಪ್ರದಾಯ. ಉಪನಿಷತ್ತುಗಳ ಪರಂಜ್ಯೋತಿ ಭಕ್ತಿಮಾರ್ಗದಲ್ಲಿ ವತ್ಸಲ ಮೂರ್ತಿಯಾಯಿತು. ಠಾಕೂರರು ಬಾಲ್ಯದಲ್ಲಿ ಭಾನುಸಿಂಹನೆಂಬ ಹೆಸರಿನಿಂದ ಆಟಕ್ಕೆ ದೇವರನಾಮಗಳನ್ನು ಬರೆದರಷ್ಟೆ. ಗೊಂಬೆಯನ್ನು ತೊಟ್ಟಿಲಲ್ಲಿಟ್ಟು ಲಾಲಿ ಹೇಳುವ ಹೆಣ್ಣುಮಗುವಿನ ಆಟದಂತೆ ಇದು ಇವರ ಜೀವನದ ಮುಂದಣ ಪರಿಣಾಮವನ್ನೇ ಸೂಚಿಸಿತು. ದೈವ ಇಷ್ಟು ಹತ್ತಿರವಾಗಿ ಇರಬಹುದು ಹೇಗೆ ಎಂದು ಕಾಣದ ಜನರು ಇವರು ದೈವದ ವಿಷಯವಾಗಿ ಸಲಿಗೆಯಲ್ಲಿ ಹೇಳುವ ಮಾತನ್ನೆಲ್ಲ ತಿಳಿಯಲಾರರು. ನಾವು ದೈವವನ್ನು ಬಲ್ಲೆವೆಂಬ ಕೆಲವರು ಇವರ ಬಾಳಿನ ರೀತಿಯನ್ನು ನೋಡಿ ಇವರು ಬೂಟಾಟಿಕೆ ಮಾಡುತ್ತಿದಾರೆಂದು ಹೇಳುವುದುಂಟು. ದೇವರನ್ನು ಕಂಡವರಿಗೆ ಇಷ್ಟು ಸುಖವೇಕೆ ಇಷ್ಟು ಸಂತೋಷವೇಕೆ ಎಂದು ಇಂಥವರ ಸಂದೇಹ. ಹರಿವಾಸರ ಮಾಡುವವನು ಹಸಿದುಕೊಂಡೇ ಇರಬೇಕು. ಜೀವನ ಭಗವಂತನ ಲೀಲೆಯೆಂದು ಇವರ ಕೃತಿಗಳಲ್ಲಿ ಕಾಣುವ ಭಾವವನ್ನು ಹಿಡಿದು ಇನ್ನು ಕೆಲವರು ಇಂಥ ಭಾವನೆಯಿಂದ ಬಾಳು ಉದ್ಧಾರವಾಗಲಾರದು ಎಂದು ಹೇಳಿದಾರೆ. ಲೀಲೆಯೆಂದರೆ ಆಟ; ಬಾಳು ಆಟವಾದಮೇಲೆ ಅದರಲ್ಲಿ ಸರಿಯಿಲ್ಲ ತಪ್ಪು ಇಲ್ಲ; ಹೇಗೆ ನಡೆದರೂ ನಡೆಯ ಬಹುದು ಅಲ್ಲವೆ? ಈ ವಾದ ನೀತಿಯನ್ನು ನಿರಸಿಸುತ್ತದೆ ಎಂಬದು ಇವರು

ಹೇಳುವ ಆಕ್ಷೇಪ. ಈ ಆಕ್ಷೇಪ ಲೀಲಾವಾದವನ್ನರಿಯದ್ವರ ಲಕ್ಷಣ. ಲೀಲಾವಾದದಲ್ಲಿ ಬಾಳು ಭಗವಂತನಿಗೆ ಲೀಲೆಯೆಂದು ಹೇಳಿದೆಯೇ ಹೊರತು ಮನುಷ್ಯನಿಗೆ ಲೀಲೆ ಎಂದು ಹೇಳಿಲ್ಲ. ಭಗವಂತನಿಗೆ ಇದರಿಂದ ಆಗಬೇಕಾದದೇನೂ ಇಲ್ಲ. ಆದರೆ ಅದರಲ್ಲಿ ತೊಡಗಿರುವ ನಮಗೆ ಆಟದ ನಿಯಮ ಅನುಲ್ಲಂಘ್ಯವಾದದು. ಆಟವನ್ನು ಹೂಡಿ ಹೊರಗೆ ನಿಂತಿರುವ ಸತ್ವಕ್ಕೆ ಆಟದ ನಿಯಮಗಳು ಸೋಕವು ತಾನೆ. ಆದರೆ ಆಟದಲ್ಲಿಯೇ ನಡೆಯುತ್ತಿರುವ ನಮಗೆ ಅದರ ನೀತಿಯನ್ನು ಬಿಟ್ಟು ಜನ್ಮಸಾರ್ಥಕ್ಯವಿಲ್ಲ. ಠಾಕೂರರು ಎಲ್ಲ ಭಕ್ತರಂತೆ ದುರ್ಜ್ಞೇಯವಾದ ದೇವರನ್ನು ಸಲಿಗೆಯಿಂದ ತಮ್ಮ ಮಿತ್ರನಂತೆ ಕರೆದರು; ಬಾಳು ಆ ದೇವರ ಲೀಲೆಯೆಂದರಿತು ಅವನ ನಿಯಮವನ್ನು ಸದಾ ದೃಷ್ಟಿಯಲ್ಲಿಟ್ಟುಕೊಂಡಿದ್ದರು; ಸೋತು ಬಿದ್ದಂದು ನನ್ನನ್ನು ಹಿಡಿದೆತ್ತು ಎಂದು ತನ್ನ ದೈವವನ್ನು ಬೇಡಿದರು; ಆ ದೈವ ತಮ್ಮನ್ನು ಹಿಡಿದೆತ್ತಿ ಸಲಹುತ್ತಿದ್ದದನ್ನು ಅನುಭವಿಸಿದರು. ಇದೇ ದೈವಸಿದ್ಧಿ; ಇದರಿಂದಲೇ ಇವರು ಪ್ರಪಂಚದ ಸಾವಿರಾರು ಚೇತನಗಳನ್ನು ಎತ್ತಿ ಎಚ್ಚರಗೊಳಿಸಲು ಶಕ್ತರಾದರು.

## ಅಧ್ಯಾಯ ೧೦

## ಮಂಗಳಾಚರಣ

### ೮೬. ಎಚ್ಚತ್ತ ಭಾರತದ ವಾಣಿ

ಈ ಜೀವನವನ್ನು ನೋಡುವವರಿಗೆ ಮೊದಲು ಮನಸ್ಸಿಗೆ ಸೋಕುವ ವಿಚಾರ ಅದರ ವಿಸ್ತಾರ ಮತ್ತು ಅದು ಒಂದು ಮುಖವಾಗಿ ಬೆಳೆದಿರುವ ರೀತಿ. ಠಾಕೂರರು ಹುಟ್ಟಿದಾಗ ಅವರಸುತ್ತ ಮತ ತತ್ವ ಕಾವ್ಯ ಸಂಗೀತ ದೇಶಪ್ರೇಮ ಸಮಾಜಸುಧಾರಣೆ ಗಾಳಿಯಲ್ಲಿ ತುಂಬಿದ್ದುವು. ಮಗು ಮೊದಲು ತೆಗೆದುಕೊಂಡ ಉಸುರಿನಲ್ಲಿ ಇವೆಲ್ಲ ಅದನ್ನು ಪೋಷಿಸುವುದಕ್ಕೆ ತೊಡಗಿದುವು. ಅಂದಿನಿಂದ ಎಂಬತ್ತು ವರುಷ ಈ ಜೀವ ಇದೇ ಭಾವನೆಗಳಲ್ಲಿ ಬೆಳೆಯಿತು. ಇದು ಬಹು ಅಪೂರ್ವವಾದ ಸುಕೃತ. ಒಂದು ನಿಟ್ಟಿನಲ್ಲಿ ಕಣ್ಣಿನ್ನಿಟ್ಟು ಹೊರಟ ಇವರು ಊಟವನ್ನು ಸಂಪಾದಿಸುವುದಕ್ಕಾಗಿಯಾಗಲಿ ಇನ್ನು ಯಾವ ಕಾರಣದಿಂದಲಾಗಲಿ ಕಲೋಪಾಸನೆಯನ್ನು ಬಿಟ್ಟು ಬೇರೆ ಯೋಚನೆ ಮಾಡಬೇಕಾಗಿ ಬರಲಿಲ್ಲ. ಒಂದು ಜೀವಮಾನವನ್ನೆಲ್ಲ ಕಲೆಯ ಸೇವೆಯಲ್ಲಿ ಕಳೆಯುವ ಸಂದರ್ಭದಲ್ಲಿ ಇವರು ಸಾಹಿತ್ಯದ ಹಲವು ರೂಪಗಳಲ್ಲಿ ಕೆಲಸಮಾಡಿದರು. ಇದಲ್ಲದೆ ಇನ್ನೂ ಹಲವು ಕಾರ್ಯಕ್ಷೇತ್ರಗಳಲ್ಲಿ ಇವರು ಮಾಡಿದ ಕೆಲಸ ಒಂದು ಸಾಮಾನ್ಯ ಜೀವನದ ಕೀರ್ತಿಗೆ ಸಾಕಾದಷ್ಟು ಇದೆ; ಇವರ ಜೀವನದಲ್ಲಿ ಅದು ಬರಿಯ ಅಷ್ಟು ಕೊಸರು. ಇಷ್ಟೆಲ್ಲ ಕೆಲಸಮಾಡಿದ ಇವರ ಶಕ್ತಿ ಅದ್ಭುತವಾದದೆಂದು ಬೇರೆಯಾಗಿ ಹೇಳಬೇಕಾದದಿಲ್ಲ. ಆದರೆ ಇವರ ಜೀವನ ದೊರೆಕೊಂಡ ಆವರಣದ ವಿಚಾರವನ್ನು ನಾವು ಮರೆಯಬಾರದು. ಪ್ರಾಯಶಃ ಬಂಗಾಳದಲ್ಲಿ ಅಲ್ಲದೆ ಇನ್ನು ಎಲ್ಲಿಯೂ, ಠಾಕೂರರ ಮನೆತನದಲ್ಲಲ್ಲದೆ ಇನ್ನು ಎಲ್ಲಿಯೂ, ಇವರ ಜೀವನದಲ್ಲಿ ಸಹಕರಿಸಿ ಸೇರಿದ ಅನುಭವಗಳು ಒಂದಾಗಿ ಸೇರುವುದು ಸಾಧ್ಯವಿರಲಿಲ್ಲವೆಂದು ಹೇಳಬಹುದು. ರಾಜಾ ರಾಮಮೋಹನರಾಯ, ಈಶ್ವರಚಂದ್ರ ವಿದ್ಯಾಸಾಗರ, ದೇವೇಂದ್ರನಾಥ ಠಾಕೂರ, ಬಂಕಿಂಚಂದ್ರ ಚಟ್ಟೋಪಾಧ್ಯಾಯ: ರವೀಂದ್ರನಾಥರು

ಎಂಥ ಪರಂಪರೆಯಲ್ಲಿ ಬೆಳೆದುಬಂದರು! ರಾಮಮೋಹನರಾಯನ ಜಗದ್ವ್ಯಾಪಿಯಾದ ಸಂಸ್ಕೃತಿ, ವಿದ್ಯಾಸಾಗರನ ದೇಶೀಯತೆಯ ಅಟ್ಟಹಾಸ, ದೇವೇಂದ್ರನಾಥನ ಆತ್ಮಸಂಸಿದ್ಧಿ, ಬಂಕಿಂಚಂದ್ರನ ಕಲಾನೈಪುಣ್ಯ, ಇವಕ್ಕಿಂತ ಹಿರಿಯ ಮೇಲ್ಪಂಕ್ತಿ ಯಾರಿಗೆ ಎಲ್ಲಿ ದೊರೆಯಬಹುದು? ಈ ಮಹಾತ್ಮರ ಚರಿತ ದೂರದಿಂದ ತಿಳಿಯುವವರಿಗೆ ಕೂಡ ಸ್ಫೂರ್ತಿಯನ್ನು ಕೊಡಬಲ್ಲವು. ಇನ್ನು ಇಂಥವರನ್ನು ಬಾಲ್ಯದಲ್ಲಿ ನೋಡಿ, ಅವರೊಂದಿಗೆ ಮಾತನಾಡಿ, ಅವರಿಂದ ಪಾಠವನ್ನು ಕಲಿತು, ಬರೆದುದನ್ನು ಅವರಿಗೆ ಓದಿಹೇಳಿ, ಅವರ ಪ್ರೇಮದ ಬೆಳಕಿನಲ್ಲಿಯೂ ಉತ್ತೇಜನದ ಹೊಂಬಿಸಿಲಲ್ಲಿಯೂ ಬೆಳೆದ ಕವಿಯ ಮನಸ್ಸು ಎಂತಹ ಹೂವನ್ನು ಬಿಡಲಾರದು? ಈ ನಾಲ್ವರು ಮಾತ್ರವಲ್ಲ. ಇವರ ನೆರಳಲ್ಲಿ ಇರುವುದಕ್ಕೆ ಯೋಗ್ಯರಾದ ಇನ್ನೈವತ್ತು ಜನ ಆಗ ದೇಶದಲ್ಲಿ ಕೆಲಸಮಾಡಿದ್ದರು ಮಾಡುತಿದ್ದರು. ಠಾಕೂರರ ಜೀವನ ಅವರ ಮಧ್ಯೆ ಬಂದಿತು. ಈ ಕಾರಣದಿಂದ ಕವಿವರರ ಕೃತಿಮಾಲೆ ಅವರೊಬ್ಬರ ಕೃತಿ ಹೇಗೋ ಹಾಗೆ ಒಂದು ಜನಾಂಗದ ಕೃತಿಯೂ ಆಗಿದೆ. ಇದು ಒಂದು ರೀತಿಯಲ್ಲಿ ಎಲ್ಲ ಕವಿಗಳಿಗೂ ಅನ್ವಯಿಸುವ ಮಾತು; ಆದರೆ ವಿಶಾಲವಾದ ಕಾರ್ಯಕ್ಷೇತ್ರದ ಕಾರಣದಿಂದ ಠಾಕೂರರಿಗೆ ಇನ್ನಷ್ಟು ಚೆನ್ನಾಗಿ ಒಪ್ಪುತ್ತದೆ. ಇವರಿಗೆ ನೋಬಲ್ ಬಹುಮತಿ ಬಂದಾಗ ವೈಸ್‌ರಾಯರಾಗಿದ್ದ ಲಾರ್ಡ್ ಹಾರ್ಡಿಂಗ್‌ಅವರು ಒಂದು ಸಭೆಯಲ್ಲಿ ಠಾಕೂರರನ್ನು ಏಷ್ಯಾಖಂಡದ ರಾಜಕವಿ ಎಂದರು. ಇವರ ಕೃತಿಗಳನ್ನು ನೋಡಿದವರಿಗೆ ಇವರು ಒಟ್ಟು ಒಂದು ಸಂಸ್ಕೃತಿಯ ವಾಣಿ ಎಂಬ ಭಾವನೆ ಹೀಗೆ ಸಹಜವಾಗಿ ಹುಟ್ಟುತ್ತದೆ. ಆ ಸಂಸ್ಕೃತಿ ಭಾರತವರ್ಷದ ಸಂಸ್ಕೃತಿಯೆಂದೂ ಭಾರತೀಯರಿಗೆ ಸ್ಪಷ್ಟವಾಗಿ ಕಾಣುತ್ತದೆ. ಇದರಲ್ಲಿಯ ಒಂದೆರಡು ಲಕ್ಷಣಗಳನ್ನು ತಮ್ಮ ಮತದವೆಂದು ಗುರುತಿಸಿ ಕ್ರೈಸ್ತ ಮಿಷನೆರಿಗಳು ಕೆಲವರು ಇವರ ಕಾವ್ಯದಲ್ಲಿ ಕ್ರೈಸ್ತಾನುಭಾವವನ್ನು ಊಹಿಸಿದಾರೆ. ಇಂಥವರು ಗುರುತಿಸುವ ಲಕ್ಷಣಗಳು ಕ್ರೈಸ್ತಮತದಲ್ಲಿ ಮಾತ್ರ ಕಾಣತಕ್ಕವು ಎಂದು ಹೇಳುವಂತಿಲ್ಲ. ಕ್ರಿಸ್ತನೂ ಅವನ ಮತವೂ ಭಾರತವರ್ಷಕ್ಕೆ ಬೇಕು; ನಮ್ಮ ಬೆಳವಣಿಗೆಗೆ ಕ್ರೈಸ್ತಮತ ಸಹಾಯವಾಗಿದೆ. ಆದರೆ ಅದರ ಪ್ರಭಾವವನ್ನು

ನಮ್ಮ ಕೃತಿಗಳಲ್ಲಿ ಹೀಗೆ ಪ್ರತ್ಯೇಕಿಸಿ ನೋಡುವ ವಿಮರ್ಶೆ ಸ್ವಲ್ಪ ಅತಂತ್ರ ವಾಗುತ್ತದೆ. ಠಾಕೂರರ ಕವಿತೆಯಲ್ಲಿ ಕತೆಯಲ್ಲಿ ತತ್ವವಿಚಾರದಲ್ಲಿ ವಿಮರ್ಶೆ ಯಲ್ಲಿ, ಎಲ್ಲ ಲೇಖನದ ಹಿಂದೆಯೂ, ಭಾರತವರ್ಷದ ಪ್ರಾಚೀನ ಸಂಸ್ಕೃ ತಿಯ ಪಟವಿದೆ; ಅದರಮೇಲೆ ಈಗಣ ಜೀವನದ ಬಣ್ಣವಿದೆ. ಇವರ ಜೀವನ ಯಾವ ಸಂದರ್ಭದಲ್ಲಿ ಬೆಳೆಯಿತೋ ಆ ಸಂದರ್ಭದ ಬಿಸಿಲು ನೆರಳು ಇವರ ಬರಹದಲ್ಲೆಲ್ಲ ಕಾಣುತ್ತದೆ. ಠಾಕೂರರು ನೋಬಲ್ ಬಹುಮತಿ ಬಂದದು ತಮಗಲ್ಲ ತಮ್ಮ ಸೀಮೆಗೆ ಎಂದು ಹೇಳಿದರು. ಇದು ಅವರ ವಿನಯ ವನ್ನು ಸೂಚಿಸುತ್ತದೆ. ಆದರೆ ಇನ್ನೊಂದರ್ಥದಲ್ಲಿ ಈ ಮಾತು ತೀರಾ ನಿಜ. ಪರದೇಶೀಯರು ಮೆಚ್ಚಿ ಬಹುಮಾನಿಸಿದ ಇವರ ಕವಿತೆಯ ಒಳಗು ಹೊರಗು ಎಲ್ಲವೂ ಭಾರತವರ್ಷದ ಜೀವನದಿಂದ ಬಂದಿರತಕ್ಕದು. ಭಾರತ ವರ್ಷದ ಹಿರಿಯ ಭಾವನೆಯೇ ಠಾಕೂರರಲ್ಲಿ ಮಾತನಾಡಿತು. ಹೀಗೆಂದರೆ ಠಾಕೂರರ ಗೌರವ ಕಡಮೆಯಾದೀತೆಂದು ನಾವು ಹೆದರಬೇಕಾದದಿಲ್ಲ. ಎಲ್ಲ ನಾಡೂ ತನ್ನ ಕವಿತೆಯನ್ನು ನುಡಿಯುವುದಕ್ಕೆ ನಾಲಗೆಯನ್ನು ಹುಡುಕುತ್ತದೆ. ಸರಿಯಾದ ನಾಲಗೆ ಸಿಕ್ಕಿದಾಗ ಆ ಕವಿತೆ ಹೊರಕ್ಕೆ ಕೇಳುತ್ತದೆ. ಭಾರತವರ್ಷದ ಹೃದಯದಾಸೆಯನ್ನು ರವೀಂದ್ರರು ತಮ್ಮ ಮಾತಿನಿಂದ ತೀರಿಸಿದರೆಂದರೆ ಅದು ಅವರ ಮಹಿಮೆಯನ್ನು ಹೇಳಿದಂತಾ ಯಿತು ಹೊರತು ಬೇರೆಯಲ್ಲ.

## ೮೭. ಯುಗದ ವಾಣಿ

ಭಾರತೀಯ ಸಂಸ್ಕೃತಿಯ ವಾಣಿಯಾದರೂ ಇದು ಈಗ ಎಲ್ಲ ಪ್ರಪಂಚದ ವಾಣಿಯೂ ಆಗಿದೆ. ಜಯ ಭಾರತವರ್ಷ ಎಂದು ಗೋರ ಕೂಗಿದಾಗ ವಿನಯ, ನಿನ್ನ ಭಾರತವರ್ಷ ಹಿಂದೂಗಳ ಭಾರತವರ್ಷ ಮಾತ್ರವೋ ಅದು ಮುಸಲ್ಮಾನ ಕ್ರೈಸ್ತರನ್ನೂ ಒಳಗೊಂಡಿದೆಯೋ, ಎಂದು ಕೇಳುತ್ತಾನೆ. ಕೊನೆಗೆ ಗೋರ ತಿಳಿಯುವ ತತ್ವ, ತಾನು ಹಿಂದು ಮಾತ್ರವಲ್ಲ, ಹಿಂದುಗಳಿಗೆ ಮಾತ್ರ ಸೇರಿದವನಲ್ಲ, ಎಲ್ಲರಿಗೂ ಸೇರಿದವನು, ಎಂಬುದೇ. ಠಾಕೂರರು ಒಂದುಸಲ, ನಾವು ಯಾವಾಗ ವಂದೇ ಮಾತರಂ ಎನ್ನುತ್ತೇವೋ ಆಗ ಉಳಿದ ರಾಜ್ಯ ನಮಗೆ ಬೇಡ ಎಂದು ಹೇಳಿದಂತಾಗು

ತ್ತದೆ, ಆದರೆ ಇದನ್ನು ಭಾರತವರ್ಷ ಒಂದು ಧ್ಯೇಯವಾಗಿ ಎಂದೂ ಇಟ್ಟುಕೊಳ್ಳಲಿಲ್ಲ, ನಮ್ಮ ಸಂಸ್ಕೃತಿಯ ಧ್ಯೇಯ ವಿಶ್ವಸೌಹಾರ್ದ, ಉಳಿದ ರಾಷ್ಟ್ರಗಳು ತಮ್ಮ ತಮ್ಮ ಕಷ್ಟ ಸುಖಗಳಷ್ಟನ್ನೇ ಕುರಿತು ಯೋಚಿಸುತ್ತಿರುವಲ್ಲಿ ತನ್ನನ್ನು ಮಾತ್ರ ಕುರಿತು ಯೋಚಿಸದ ದೇಶವಾಗಿ ನಮ್ಮದು ಒಂದಿರಲಿ, ಎಂದು ಹೇಳಿದರು. ಇದು ಭಾರತ ಸಂಸ್ಕೃತಿಯ ಸಹಜವಾದ ಉತ್ಕರ್ಷಭಾವ; ರಾಷ್ಟ್ರ ರಾಷ್ಟ್ರವೆಂದು ಅಣ್ಣತಮ್ಮಂದಿರು ಬಡಿದಾಡಬೇಡಿ ಸ್ನೇಹವಾಗಿರಿ ಎಂದು ಭೂಮಾತೆ ಬೇಡಿಕೊಳ್ಳುವ ರೀತಿ. ಇದನ್ನು ಗುರುತಿಸಿಯೇ ಹಲವು ರಾಷ್ಟ್ರಗಳು ತಮಗೆ ಅಷ್ಟು ಮರ್ಯಾದೆ ಮಾಡಿರಬೇಕೆಂದು ಠಾಕೂರರು ಹೇಳಿದಾರೆ. ಮರ್ಯಾದೆಯಿಂದ ಕಾಣುವ ಇಂಥ ಉಪದೇಶವನ್ನು ತಿರಸ್ಕರಿಸುವವರೂ ಇದಾರೆ. ನಿಮ್ಮ ಈಗಣ ಭಾವನೆ ಇಹದ ಸಂಪತ್ತಿಗೆ ಮನಸ್ಸನ್ನು ತೆತ್ತಿದೆ, ಇದು ದೊಡ್ಡದಲ್ಲ, ಎಂದು ಇವರು ಪಾಶ್ಚಾತ್ಯ ರಾಷ್ಟ್ರಗಳಿಗೆ ಹೇಳಿದರೆ ಆ ರಾಷ್ಟ್ರಗಳು ಒಡನೆಯೇ ಈ ಮಾತಿಗೆ ಒಪ್ಪಿಕೊಳ್ಳುವುವೇ? ಹೌದು ನೀನು ಬಹಳ ಬಲ್ಲೆ, ನಮಗೆ ಹೇಳಿಕೊಡುವುದಕ್ಕೆ ಬಂದಿದೀಯೆ, ಎಂದು ಒಂದು ಕಡೆಗೆ ಮುಸುಡಿ ತಿರುಹಿದುವು. ನೀವು ಪಾಶ್ಚಾತ್ಯರನ್ನು ಅನುಕರಿಸಿ ಪಶುಶಕ್ತಿಗೆ ಮನ ತೆರಬೇಡಿ ಎಂದು ಜಪಾನಿಗೆ ಹೇಳಿದರೆ ಜಪಾನ್ ಒಪ್ಪಿಕೊಳ್ಳಬಹುದೇ? ಉಸುರಿಲ್ಲದ ಜನಾಂಗದಿಂದ ಬಂದು ಈ ಉಪದೇಶಕನು ಇನ್ನೇನು ಹೇಳಿಯಾನು ಎಂದು ಅದು ಹೀಯಾಳಿಸಿತು. ಉಳಿದವರು ನಮಗೆ ಕೇಡನ್ನು ಬಯಸಿದರೆ ಬಯಸಲಿ, ನಾವು ಪ್ರತೀಕಾರಮಾಡುವ ಯೋಚನೆ ಬೇಡ, ನಮ್ಮ ಸ್ವರಾಜ್ಯ ನಮ್ಮ ಆತ್ಮವನ್ನವಲಂಬಿಸಿದ್ದು, ನಾವು ಆತ್ಮದಲ್ಲಿ ಸ್ವತಂತ್ರರಾಗೋಣ, ಉಳಿದ ಸ್ವಾತಂತ್ರ್ಯ ತಾನೇ ಬರುತ್ತದೆ, ಎಂದು ಹೇಳಿದರೆ ನಮ್ಮ ಜನವೇ ಎಲ್ಲರೂ ಒಪ್ಪುವುದಿಲ್ಲ. ಇವರಿಗೇನು ಬಂತು, ಮಿಥ್ಯವೇದಾಂತ ಹೇಳುತ್ತಾರೆ, ಮಾವಿನಕಾಯಿ ಮಂತ್ರಕ್ಕೆ ಉದುರು ತ್ತದೆಯೇ, ಎಂದು ನಾವು ಹೇಳುತ್ತೇವೆ. ಎಲ್ಲರಿಗೂ ಒಳ್ಳೆಯವನಾಗ ಬೇಕೆನ್ನುವವನು ಯಾರಿಗೂ ಬೇಡವಾಗುತ್ತಾನೆ. ಇದು ಠಾಕೂರರ ಉಪದೇಶದ ಸ್ಥಿತಿ. ಅವರೇನು ಭಾರತಭೂಮಿಯನ್ನು ಕೈಬಿಡಬೇಕೆಂದವ ವರಲ್ಲ, ತನ್ನದು ಸೋತ ಜನಾಂಗವೆಂಬ ಕಾರಣದಿಂದ ಆತ್ಮಗೌರವ

ವಿಲ್ಲದವರಲ್ಲ, ಆಧ್ಯಾತ್ಮಿಕ ಸಂಪತ್ತು ಹಿರಿದೆಂಬ ಕಾರಣದಿಂದ ಐಹಿಕ ಜೀವನವನ್ನು ತೆಗಳಿದವರಲ್ಲ. ಈ ಹಲವು ಭಾವಗಳ ಸಮನ್ವಯ ಆವಶ್ಯಕ ವೆಂದು ಗ್ರಹಿಸಿ ಅವುಗಳನ್ನು ಸಮನ್ವಯಿಸುವುದರಲ್ಲಿ ತೊಡಗಿದರು ಅಷ್ಟೆ. ಈ ಭಾವನೆ ಹಿಂದಣಿಂದ ಇದ್ದಿರತಕ್ಕದೇ. ಆದರೆ ಇವರಲ್ಲಿ ಅದಕ್ಕೆ ಸ್ಪಷ್ಟ ವಾದ ರೂಪುಬಂದಿತು. ಈ ಭಾವನೆಯುಳ್ಳ ಜನರು ಈಗ ಎಲ್ಲ ರಾಷ್ಟ್ರ ಗಳಲ್ಲಿಯೂ ಕೆಲವರಿದಾರೆ. ಇದು ಈ ಯುಗದ ಭಾವನೆ, ಈ ಯುಗದ ಆಸೆ. ಇದಕ್ಕೆ ಠಾಕೂರರು ತಮ್ಮ ಮಾತನ್ನು ಕೊಟ್ಟರು. ಹಲವು ದೇಶ ಗಳಿಗೆ ಹೋಗಿ ಈ ಭಾವನೆ ಈ ಆಸೆಯನ್ನು ಸಾರಿಹೇಳಿದವರೆಂದರೆ ಠಾಕೂರರೊಬ್ಬರೇ ಎಂದು ಧಾರಾಳವಾಗಿ ಹೇಳಬಹುದು. ಈ ಸಂದರ್ಭ ದಲ್ಲಿ ಠಾಕೂರರ ವಾಣಿ ಈ ಯುಗದ ವಾಣಿ.

## ೮೮. ಸ್ವರ್ಣ ಗ್ರಂಥ

ಕವಿವರರಿಗೆ ಎಪ್ಪತ್ತು ವರುಷ ತುಂಬಿದ ಸಂದರ್ಭದಲ್ಲಿ ಅವರ ಸುಹೃನ್ಮಂಡಲವೊಂದು ಅವರ ಮಿತ್ರರೆಲ್ಲರಿಂದ ಪ್ರೇಮ ಸಂದೇಶಗಳನ್ನು ತರಿಸಿ ಒಂದು ಪುಸ್ತಕವನ್ನು ಅಚ್ಚುಮಾಡಿತು. ಕವಿವರರ ಜೀವನ ಎಷ್ಟು ವಿಸ್ತಾರವಾದ ಕ್ಷೇತ್ರದಲ್ಲಿ ಕೆಲಸಮಾಡಿದೆಯೆನ್ನುವುದು ತಿಳಿಯುವುದಕ್ಕೆ ಈ ಸ್ವರ್ಣ ಪುಸ್ತಕದಲ್ಲಿ ಬಂದಿರುವ ಹೆಸರುಗಳನ್ನು ನೋಡಿದರೆಯೇ ಸಾಕು. ಸಂದೇಶ ಕಳುಹಿಸದ ದೇಶವಿಲ್ಲ. ಸಂದೇಶಗಳನ್ನು ಕಳುಹಿಸಿರು ವವರು ಆಯಾ ದೇಶಗಳಲ್ಲಿ ಉನ್ನತಪದವಿಗಳಲ್ಲಿರುವವರು, ಉದ್ದಾಮ ಪಂಡಿತರು, ವೀರ ಕಲೋಪಾಸಕರು, ಉದಾರಜೀವಿಗಳೆಂದು ಹೆಸರಾದ ವರು. ಅಂದು ನಮ್ಮ ದೇಶಮಾತೆ ತನ್ನ ಕವಿಕುಮಾರನನ್ನು ಹಸೆಯ ಮೇಲೆ ಕೂರಿಸಿ ಆರತಿಮಾಡಿದಳು; ಅವಳ ತಂಗಿಯರೆಲ್ಲ ಬಂದು ಹರಸಿ ದರು. ನಮ್ಮ ದೇಶದಲ್ಲಿಯೂ ಗಣ್ಯರಾದವರೆಲ್ಲ ಠಾಕೂರರಿಂದ ದೇಶಕ್ಕೆ ಆಗಿರುವ ಶುಭವನ್ನು ಹೊಗಳಿ ಹೇಳಿದರು. ನನ್ನ ಮಕ್ಕಳು ದೊಡ್ಡವ ರೆಂದು ಹೆಸರುಪಡೆದು ಬಹುದಿನವಾಯಿತು ಎಂದು ಖಿನ್ನಳಾಗಿ ಕುಳಿತ ತಾಯ ಕಿವಿಗೆ ಈಗ ನಲವತ್ತು ವರುಷದಿಂದ ಲೋಕ ಅವರ ಹೆಸರಲ್ಲಿ ಕೆಲವನ್ನು ಎತ್ತಿಕೂಗುವುದು ಕೇಳಿಸಿದೆ. ಅವುಗಳಲ್ಲಿ ಈಚೆಗೆ ಕೇಳಿದ

ಎರಡು ಹೆಸರು ಇಂದಿನ ಲೋಕದ ಇನ್ನು ಯಾವ ಹೆಸರಿಗೂ ಕಡಮೆಯಲ್ಲ, ಅನೇಕ ಹೆಸರಿಗಿಂತ ದೊಡ್ಡವು. ಆ ಎರಡರಲ್ಲಿ ಒಂದು ರವೀಂದ್ರನಾಥ ಎನ್ನುವುದು.

**೮೯. ಸಾಹಿತ್ಯದಲ್ಲಿ ಸ್ಥಾನ**

ಇಷ್ಟು ಹೇಳಿದರೂ ಪ್ರಶ್ನಕಾರನು ಒಂದು ಮಾತನ್ನು ಕೇಳಬಹುದು. ಅದೆಲ್ಲಾ ಸರಿ, ಸಾಹಿತ್ಯದಲ್ಲಿ ಇವರ ಸ್ಥಾನ ಎಷ್ಟು ಎತ್ತರದ್ದು? ಇವರು ಷೇಕ್ಸ್‌ಪಿಯರ್, ಗಯಟೆ, ಕಾಳಿದಾಸರಿಗೆ ಸಮನೆ? ಇಂಥ ಪ್ರಶ್ನೆ ಕೇಳುವಲ್ಲಿ ನಾವು ಸಾಹಿತ್ಯವಿಷಯಕವಾದ ಒಂದು ಮುಖ್ಯತತ್ವವನ್ನು ಮರೆಯುತ್ತೇವೆ. ಸಾಹಿತ್ಯರಾಷ್ಟ್ರದಲ್ಲಿ ಸಿಂಹಾಸನಗಳಿಲ್ಲ; ಅದರ ಸಿದ್ಧಸೇವಕರಲ್ಲಿ ಕಿರಿಯರಿಲ್ಲ. ಒಂದು ರೀತಿಯಿಂದ ನೋಡಿದರೆ ಠಾಕೂರರು ಆ ಮೂವರಿಗೆ ಸಮನಲ್ಲ; ಇನ್ನೊಂದು ರೀತಿಯಿಂದ ನೋಡಿದರೆ ಸಮನೆ. ಒಬ್ಬನ ದೃಷ್ಟಿಪ್ರಸಾದ, ಇನ್ನೊಬ್ಬನ ಭಾವ ವೈಶಾಲ್ಯ, ಮತ್ತೊಬ್ಬನ ರಸ ಸಂಸ್ಕಾರ ಇಲ್ಲಿ ಇಲ್ಲ. ಒಬ್ಬನ ನಾಟಕ, ಇನ್ನೊಬ್ಬನ ಜೀವನ ವಿಮರ್ಶೆ, ಮತ್ತೊಬ್ಬನ ಕಾವ್ಯವಾಹಿನಿ ಇವರವಲ್ಲ. ಆದರೆ ಒಂದೊಂದು ದೃಷ್ಟಿಯಿಂದ ಅವರಿಗಿಂತ ಕಡಮೆಯದೆನ್ನುವ ಈ ಕವಿಯ ಶಕ್ತಿ ಹಲವು ರೀತಿಯ ಅಭಿವ್ಯಕ್ತಿಯಿಂದ ಅವರ ಜೊತೆಗೆ ನಿಲ್ಲುವ ಯೋಗ್ಯತೆಯನ್ನು ಪಡೆದಿದೆ. ಸೃಷ್ಟಿಯಾದ ತಲೆಮಾರಿನಲ್ಲಿಯೇ ಇಷ್ಟು ಜನ ಇಷ್ಟು ಜನಾಂಗಗಳ ಮನಸ್ಸನ್ನು ಮುಟ್ಟಿದ ಕವಿತೆ ಹಿಂದೆ ಯಾವುದು ಇತ್ತು? ಇಂಥ ಕವಿತೆಯ ಮುಂದೆ ನಿಂತು ಇದು ದೊಡ್ಡದೋ ಚಿಕ್ಕದೋ ಅಳೆದು ನೋಡುವೆವೆನ್ನುವವರು ತಾವು ನಿಂತಿರುವುದು ಶಿಲ್ಪಿಯ ಶಾಲೆಯಲ್ಲಿರುವ ಪ್ರತಿಮೆಯ ಮುಂದಲ್ಲ, ದೇವಸ್ಥಾನದಲ್ಲಿ ಪ್ರತಿಷ್ಠಿಸಿರುವ ಮೂರ್ತಿಯ ಮುಂದೆ, ಎನ್ನುವುದನ್ನು ಮರೆಯುತ್ತಾರೆ. ಮೆಚ್ಚುವುದು ಸಂತೋಷಪಡುವುದು ಇಲ್ಲಿ ಶಿಷ್ಟಾಚಾರ; ಅಳತೆಯ ಕಟ್ಟಿಗೆಯನ್ನು ತೆಗೆಯುವುದು ಧೃಷ್ಟತನ.

**೯೦. ಒಂದು ನೆನಹು**

ಬೋಲ್ಪುರದ ಬಯಲು; ಮಧ್ಯೆ ಶಾಂತಿನಿಕೇತನದ ಹಸುರು. ಅಲ್ಲಲ್ಲಿ ಗುಡಿಸಲುಗಳು, ಮನೆಗಳು; ಹೋಗುತ್ತ ಬರುತ್ತ ಹಲ ಕೆಲವು

ಜನರು. ಒಂದು ಕೊನೆಗೆ ಎರಡು ದೊಡ್ಡ ಕಟ್ಟಡ; ಅಲ್ಲಿಯೇ ಕವಿಯ ವಾಸ. ಹೊಸದಾಗಿ ಹೋದವನಿಗೆ ಇಲ್ಲಿ ಏನು ವಿಶೇಷ ಎನ್ನುವುದು ಕಾಣುವುದಿಲ್ಲ. ಕವಿ ಸಂಜೆಯಲ್ಲಿ ಅವರ ಗೃಹದಲ್ಲಿ ಒಂದು ಉಪನ್ಯಾಸ ವನ್ನು ಓದುತ್ತಾರಂತೆ. ನಾವೆಲ್ಲ ಹೋಗಿ ಕೇಳುತ್ತೇವೆ. ಕವಿ ಆಗತಾನೇ ಬರೆದು ಮುಗಿಸಿದ ಲೇಖನವೊಂದನ್ನು ತಂದು ಓದುತ್ತಾರೆ. ನಮಗೆ ಅರ್ಥವಾಗುವುದಿಲ್ಲ. ಆದರೆ ಅರ್ಥಮಾಡಿಕೊಂಡವರೆಲ್ಲ ಬಹಳ ಸುಖಿ ಗಳಾಗಿದಾರೆ. ಅದೇ ರಾತ್ರಿ ಒಂದು ಸಮಾರಂಭ. ಒಬ್ಬ ವಂಗ ಶಿಲ್ಪ ಶಾಸ್ತ್ರಜ್ಞರು ನೆಲವನ್ನು ಕೊರೆದು ಕೊಳವೆಯ ಬಾವಿಯೊಂದನ್ನು ಮಾಡಿದ್ದ ರಿಂದ ಶಾಂತಿನಿಕೇತನದಲ್ಲಿ ಈಗತಾನೆ ನೀರಿನ ಕಷ್ಟ ತಪ್ಪಿದೆ. ಇದರಿಂದ ಆ ಶಿಲ್ಪಿಗೆ ಸಂಜೆ ಸ್ವಲ್ಪ ಹೊತ್ತಾಗಮೇಲೆ ಮರ್ಯಾದೆ. ಹಜಾರದಲ್ಲಿ ರಂಗವಲ್ಲಿ, ಅಲ್ಲಿ ಪೀಠಗಳು. ಕವಿ ಅಲ್ಲಿಗೆ ಬರುತ್ತಾರೆ; ಎಲ್ಲ ಏರ್ಪಾಡನ್ನೂ ನೋಡುತ್ತಾರೆ; ಶಿಲ್ಪಿಯ ಜೊತೆಗೆ ಕುಳಿತು ಆತನನ್ನು ವಂದಿಸಿ ಅಭಿನಂದಿಸಿ ಅವನಿಗೆ ಒಂದು ಉಚಿತವನ್ನು ಕೊಡುತ್ತಾರೆ. ರಾಜರಿಂದ ಸನ್ಮಾನಬಂದರೆ ಆ ಶಿಲ್ಪಿ ಅಷ್ಟು ಸಂತೋಷಪಡನು. ಈ ಸಂದರ್ಭದಲ್ಲಿ ಕವಿಯ ಗೀತವೊಂದನ್ನು ನಿಕೇತನದ ತರುಣ ತರುಣೀ ಗಾಯಕರು ಹಾಡಿ ಹೇಳುತ್ತಾರೆ. ಕವಿಯ ಹೃದಯದ ಆನಂದ ಉಕ್ಕಿಬಂದಿರುವ ಮಾಯೆ ಯಿಂದ ಕೇಳುವ ಜನವೆಲ್ಲ ಮುಗ್ಧವಾಗಿದೆ. ಕವಿಯೂ ಆ ಸುಖವನ್ನು ಅನುಭವಿಸುತ್ತಿದಾರೆ. ಇನ್ನೊಂದು ಸಂಜೆ ಕವಿ ಪೂರ್ವದ ಹಜಾರದಲ್ಲಿ ಕುಳಿತಿದಾರೆ; ಪರಸ್ಥಳದಿಂದ ಬಂದಿರುವ ಇಬ್ಬರೊಂದಿಗೆ ಮಾತನಾಡು ತ್ತಿದಾರೆ. ಕವಿಗೆ ವಯಸ್ಸಾಗಿದೆ, ಧ್ವನಿ ಸ್ವಲ್ಪ ಕುಗ್ಗಿದೆ; ಆದರೆ ಜೀವನ ದಲ್ಲಿ ಶ್ರದ್ಧೆ ಕಡಮೆಯಾಗಿಲ್ಲ. ಆಶ್ರಮದ ಪ್ರಮುಖರು ಆ ಮಾತು ಈ ಮಾತು ಹೇಳುವುದಕ್ಕೆ ಕೇಳುವುದಕ್ಕೆ ಹತ್ತಿರ ಬರುತ್ತಾರೆ; ಕುಳಿತು ಕವಿಯೊಂದಿಗೆ ಮಾತನಾಡುತ್ತಾರೆ. ಸ್ವಲ್ಪ ಹೊತ್ತಾದ ಮೇಲೆ ಎಲ್ಲ ಹೊರಡುತ್ತಾರೆ. ಕವಿ ಮಾತ್ರ ಅಲ್ಲಿಯೇ ಕುಳಿತಿದಾರೆ. ಆ ಮನಸ್ಸಿನಲ್ಲಿ ಸುಳಿಯುವ ಭಾವನೆಗಳೆಂಥವು? ಇನ್ನೂ ಈ ಜೀವನಕ್ಕೆ ಆಸೆಗಳುಂಟೊ? ಉಂಟೆಂದು ತೋರುತ್ತದೆ. ತನ್ನ ಮಾತ್ರಕ್ಕೆ ನೋಡಿದರೆ ಇನ್ನು ಕವಿ ಬೇಡಬೇಕಾದುದು ಏನೂ ಇಲ್ಲ. ಆದರೆ ಈ ಜೀವನದ ಶಾಂತಿಯನ್ನು

ಹಗಲುಕನಸಿನ ತಂಡವೊಂದು ದರೋಡೆಮಾಡಿಹೋಗಿದೆ. ಹೊಟ್ಟೆಗಿಲ್ಲದ ಮೂರು ಹತ್ತು ಕೋಟಿ ಸೋದರರು, ಜ್ಞಾನವಿಲ್ಲದವರು ಅದರ ಜೊತೆಗೆ ಇನ್ನರ್ಧ ಹತ್ತು ಕೋಟಿ. ನನ್ನ ತಮ್ಮಂದಿರನ್ನು ಎಚ್ಚರಗೊಳಿಸುತ್ತೇನೆ ಎಂದು ಎಳೆಯತನದಲ್ಲಿ ಮಾತೃಭೂಮಿಗೆ ವಚನಕೊಟ್ಟು ಹುಮ್ಮಸಿನಿಂದ ಎದ್ದ ಕವಿ ತಾನು ಹಿಡಿದ ಕೆಲಸ ಮುಗಿಯಿತೆನ್ನಬಲ್ಲನೆ? ಇಲ್ಲ. ಇದು ಒಬ್ಬನ ಕೆಲಸವಲ್ಲ. ಸಾವಿರ ಜನ ದುಡಿದು ಸಾವಿರ ಜನ ಮಡಿದು ಹಾ ಸೋತೆವೆಂದರೂ ಮುಗಿಯದ ಕೆಲಸ. ತಾನು ದುಡಿದಂತೆ ಇತರರು ದುಡಿಯಲೆಂದು ಕವಿ ಆಸೆಯಿಂದ ನೋಡುತ್ತಿದಾರೆ; ಭಾರತವರ್ಷ ಭಾವಿಸಿದ ಶಾಂತ ಶಿವ ಅದ್ವೈತವನ್ನು ಸಾಧನೆಮಾಡುತ್ತ ಕುಳಿತಿದಾರೆ. ಆ ದೃಷ್ಟಿ ದೂರಕ್ಕೆ ಹಾಯ್ದಿದೆ; ಅದಕ್ಕೆ ಸಿಲುಕಡೆ ಇಲ್ಲ. ಆ ಕಿವಿ ಲೋಕ ಕಲ್ಯಾಣದ ಮಂಗಳ ಗೀತವನ್ನು ಕೇಳಲು ತೆರೆದಿದೆ; ಅದರ ಬಯಕೆ ತೀರಿಲ್ಲ. "ಓ ಪರಾತ್ಪರವೇ ಓ ಕೊಳಲ ಗಾನವೇ."

೯೧. ಭದ್ರಂ ಶುಭಂ

ಇದು ಒಂದು ನೆನಹು; ಹನ್ನೆರಡು ವರ್ಷದ ಹಿಂದಿನದು. ಕವಿವರರು ಇನ್ನೆಂಟು ವರ್ಷ ಈ ಬಯಕೆಯಲ್ಲಿ ಜೀವಿಸಿದರು; ಬರೆವ ಕುಲದ ಹಿರಿಯರೆನಿಸಿದರು. ದೇಶ ಸೇವಕರ ಮುಂದಾಳಾಗಿದ್ದರು; ಧರ್ಮ ಕಿಂಕರರಲ್ಲಿ ಪ್ರಮುಖರಾದರು. ತಮ್ಮ ಕನಸನ್ನು ಸಾಧಿಸುವ ದುಡಿಮೆ ಯಲ್ಲಿ ದಣಿವೆಂಬುದನ್ನು ಕಾಣದೆ ನಾಲ್ಕು ವರ್ಷದ ಹಿಂದೆ ತಮ್ಮ ಇಹ ದೇಹವನ್ನು ತ್ಯಜಿಸಿದರು. ತನ್ನ ಮಂದಿರದ ಮುಂಗಡೆ ಕುಳಿತಿರುವ ಆ ಮೂರ್ತಿಯನ್ನು ಈಗ ನಾವು ನೋಡುವಂತಿಲ್ಲ. ಆದರೆ ಅದನ್ನು ಒಮ್ಮೆ ಕಂಡವರು ಎಂದೂ ಮರೆಯುವಂತಿಲ್ಲ. ಅಲ್ಲೇ ಕುಳಿತಿದೆ ಮೂರ್ತಿ: ಸ್ಥಳ ಬಿಟ್ಟು ಕದಲದೆ. ಅಂತೇ ನೆಟ್ಟಿದೆ ದೃಷ್ಟಿ: ದೂರದ ಪರಾತ್ಪರದಲ್ಲಿ. ಅಂತೆ ಅದರ ಗಾನವನ್ನು ಕೇಳುತ್ತ ಆ ಕಿವಿ ತೆರೆದಿದೆ. ಒಡಲಾದ ಆ ಮೂರ್ತಿ ಮಂದಿರದ ಕೈಸಾಲೆಯಲ್ಲಿ ಕುಳಿತಿತ್ತು; ನೆನಹಾದ ಈ ಮೂರ್ತಿ ನೆನೆವವರ ಹೃದಯದಲ್ಲಿ ಲೋಕ ಕಲ್ಯಾಣದ ಹರಿಗೋಲಲ್ಲಿ ಕುಳಿತಿದೆ. ಇದಕ್ಕೆ ಅಳಿವಿಲ್ಲ. ಇದು ಸೋಲನ್ನು ಕಾಣದು.

ಇದರ ಬಲದಿಂದ, ಇಂಥ ಬೇರೆ ಜೀವಗಳ ಬಲದಿಂದ, ಈ ಜನತೆ ಈ ಲೋಕ ದಡ ಮುಟ್ಟಬೇಕು, ಸುಖ ಕಾಣಬೇಕು. ಜನತೆಯೂ ಲೋಕವೂ ದಡ ಮುಟ್ಟುವಂತೆ, ಸುಖ ಕಾಣುವಂತೆ; ಈ ಜೀವ ಇತರ ಇಂಥ ಜೀವ, ಎಲ್ಲಿಯೋ ಇರಲಿ, ಜನತೆಗಳ ಪರವಾಗಿ ಲೋಕದ ಪರವಾಗಿ ಚಿಂತೆಮಾಡದಂತೆ ಶಾಂತಿತಾಳುವಂತೆ: ನಿತ್ಯಕರುಣಾತತ್ತ್ವ ದಯೆಪಾಲಿಸಲಿ.

1169—45.— ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು



ಶ್ರೀ ರಾಮಕೃಷ್ಣ ಪರಮಹಂಸರವರು

# ಮುನ್ನುಡಿ

ಶ್ರೀ ರಾಮಕೃಷ್ಣ ಪರಮಹಂಸರ ಉಪದೇಶವನ್ನು ಕುರಿತು ಸಣ್ಣ ಒಂದು ಉಪನ್ಯಾಸವನ್ನು ಬರೆಯಬೇಕೆಂದು ನನಗೆ ಬಹು ವರ್ಷಗಳಿಂದ ಅಪೇಕ್ಷೆ ಇದ್ದಿದೆ. ಗುರುವಿನ ಜನ್ಮದ ಶತಪೂರ್ಣೋತ್ಸವದ ಸಂದರ್ಭದಲ್ಲಿ ಅವನನ್ನು ಕುರಿತ ಒಂದು ಲೇಖನವನ್ನು ಪ್ರಕಟಿಸಬೇಕೆಂದು ಬೆಂಗಳೂರಿನ ಆಶ್ರಮದ ವ್ಯವಸ್ಥಾಪಕರು ನಿರ್ಣಯಿಸಲು, ಉಪನ್ಯಾಸ ಬರೆಯಬೇಕೆಂಬ ನನ್ನ ಉದ್ದೇಶವನ್ನು ತಿಳಿದಿದ್ದ ಸ್ವಾಮಿ ಸಿದ್ಧೇಶ್ವರಾನಂದ ಸ್ವಾಮಿ ರಂಗನಾಥಾನಂದರು ಈ ಕೆಲಸವನ್ನು ನನ್ನ ಪಾಲಿಗೆ ಕೊಟ್ಟರು. ಸಣ್ಣ ಲೇಖನ ಹೋಗಿ ಇದು ಸಣ್ಣ ಪುಸ್ತಕವಾಗಿದೆ. ಆದರೆ ಪುಸ್ತಕದ ವಿಷಯವಾದ ಜೀವನದ ದೃಷ್ಟಿಯಿಂದ ಇದು ದೀರ್ಘವಾಯಿತೆಂದು ಯಾರೂ ಹೇಳಲಾರರೆಂದು ನಂಬಿದೇನೆ.

ಪರಮಹಂಸನ ಜೀವನ ಉಪದೇಶಗಳನ್ನು ಕುರಿತು ಕನ್ನಡದಲ್ಲಿ ಈಗಾಗಲೇ ಹಲವು ಪುಸ್ತಕಗಳಿವೆ. ಆದರೂ ಈ ಪುಸ್ತಕಕ್ಕೆ ಎಡೆಯಿದೆಯೆಂದು ಓದುವವರಿಗೆ ತೋರೀತೆಂದು ನಾನು ನಿರೀಕ್ಷಿಸುತ್ತೇನೆ. ಈ ಮೊದಲೇ ಗುರುವನ್ನು ಕುರಿತು ಗ್ರಂಥಗಳನ್ನು ಬರೆದಿರುವ ಹಿರಿಯರು ಮಿತ್ರರೊಂದಿಗೆ ಪರಮಹಂಸನ ಬಾಳನ್ನು ವಿವರಿಸುವುದರಲ್ಲಿ ಜೊತೆಯಾಗಿ ನಿಲ್ಲುವುದು ನನಗೇನೋ ಬಹು ಹೆಮ್ಮೆ ಮತ್ತು ಸಂತೋಷದ ವಿಷಯವಾಗಿದೆ.

ಈ ಪುಸ್ತಕದಲ್ಲಿ ಕಾಣುವ ದೃಷ್ಟಿ ಲೇಖಕನದು. ಹಿಂದೂ ಧರ್ಮವನ್ನು ಕುರಿತು ಅಲ್ಲಲ್ಲಿ ಒಂದೆರಡು ಕಠಿಣವಾದ ಮಾತು ಕಾಣಬಹುದು; ಅಂಥ ಮಾತು ಹಿಂದೂ ಮತದಲ್ಲಿ ಪ್ರೀತಿ ಇಲ್ಲದ್ದರಿಂದ ಹೇಳಿದ್ದಲ್ಲ. ಇತರ ಮತಗಳನ್ನು ಕುರಿತು ಒಂದೆರಡು ಕಡೆ ಪ್ರಾಸಂಗಿಕವಾಗಿ ಇಂಥದೇ ಒಂದು ಮಾತು ಅರ್ಧ ಮಾತು ಬಂದಿರಬಹುದು; ಅಂಥ ಮಾತು ಆ ಮತಗಳಲ್ಲಿ ಗೌರವ ಇಲ್ಲದ್ದರಿಂದ ಹೇಳಿದ್ದಲ್ಲ. ರಾಮಕೃಷ್ಣನ ಹೆಸರನ್ನು ಹೇಳುವ ನಾಲಗೆ ಯಾವ ಮತದ ವಿಷಯದಲ್ಲಿಯೂ ಅಗೌರವದ ನುಡಿಯನ್ನು ನುಡಿಯಲಾರದು. ಎಲ್ಲ ಮತಗಳನ್ನೂ ಗೌರವದಿಂದ ಕಾಣುವುದೇ

ಈ ಗುರುವಿನ ಉಪದೇಶದ ಸಂಪರ್ಕದಿಂದ ಬರುವ ಮುಖ್ಯ ಮನೋಧರ್ಮ. ಮತಗಳನ್ನು ಕುರಿತ ಈ ನಿಲುವು ಈ ಪುಸ್ತಕದ ಒಟ್ಟು ನೋಟದಿಂದ ಸ್ಪಷ್ಟವಾಗಬಹುದೆಂದು ನಾನು ತಿಳಿದಿದ್ದೇನೆ.

ಈ ಉಪನ್ಯಾಸದಲ್ಲಿ ಅಲ್ಲಲ್ಲಿ ಅದ್ಭುತಗಳನ್ನು ಕುರಿತು ಸಂದೇಹವನ್ನು ಸೂಚಿಸಿದೆ. ಅದ್ಭುತಗಳಲ್ಲಿ ನಂಬಿಕೆವುಳ್ಳ ಜನರು ಇದನ್ನು ಸ್ವಲ್ಪ ತಾಳ್ಮೆಯಿಂದ ನೋಡಬೇಕು. ಇನ್ನು ಕೆಲವು ಕಡೆ ಈ ಲೇಖಕನು ಸಾಕಾದಷ್ಟು ಪ್ರಮಾಣವಿಲ್ಲದೆ ವಿಷಯಗಳನ್ನು ನಂಬುವಂತೆ ವಿಚಾರಪ್ರಮುಖರಾದ ಜನರಿಗೆ ಕಾಣಬಹುದು. ಅಂಥ ಸಂದರ್ಭದಲ್ಲಿಯೂ ತಾಳ್ಮೆ ಅವಶ್ಯಕ. ಮಧ್ಯದ ದಾರಿಯನ್ನು ಕುರಿತು ಈ ತಾಳ್ಮೆ ಇದ್ದರೆ ಮಾತ್ರ ಇಂಥ ಪುಸ್ತಕದಿಂದ ಸ್ವಲ್ಪ ಉಪಯೋಗ ಆಗಬಹುದು.

ಈ ಪುಸ್ತಕದ ಅಚ್ಚಿನ ಕರಡನ್ನು ಸ್ವಾಮಿ ಶ್ರೀವಾಸಾನಂದರವರು ಮೊದಲಿಂದ ಕೊನೆಯವರೆಗೂ ಓದಿ ಬಹಳ ಸಹಾಯಮಾಡಿದರು. ಗ್ರಂಥವನ್ನು ಬರೆಯುವಂತೆ ಪ್ರೇರಿಸಿದ್ದಕ್ಕಾಗಿ ಸ್ವಾಮಿಗಳು ಶ್ರೀ ಸಿದ್ಧೇಶ್ವರಾನಂದ ರಂಗನಾಥಾನಂದರಿಗೂ ಅಚ್ಚಿನ ಕೆಲಸದಲ್ಲಿ ನೆರವಾದುದಕ್ಕಾಗಿ ಸ್ವಾಮಿ ಶ್ರೀವಾಸಾನಂದರಿಗೂ ನಾನು ಬಹಳ ಕೃತಜ್ಞನಾಗಿದ್ದೇನೆ.

ಪುಸ್ತಕ ಅಚ್ಚಾಗುವುದಕ್ಕೆ ಸಾಕಾದಷ್ಟು ಕಾಲವಿಲ್ಲದೆ ಎಂದಿಗಿಂತಲೂ ಹೆಚ್ಚಿನ ಏರ್ಪಾಡು ಅವಶ್ಯಕವಾಯಿತು. ಬೆಂಗಳೂರು ಪ್ರೆಸ್ಸಿನ ಅಧಿಕಾರಿಗಳು ಈ ಏರ್ಪಾಡನ್ನು ಸಂತೋಷದಿಂದ ಮಾಡಿ ಅಲ್ಪಕಾಲದಲ್ಲೇ ಅಚ್ಚಿನ ಕೆಲಸವನ್ನು ಮುಗಿಸಿದರು. ಈ ನೆರವಿಗಾಗಿ ಅವರನ್ನೂ ವಂದಿಸುತ್ತೇನೆ.

ಪುಸ್ತಕವನ್ನು ಕುರಿತ ಎಲ್ಲ ಅಧಿಕಾರವನ್ನೂ ಗ್ರಂಥಕರ್ತನಿಗಾಗಿ ಉಳಿಸಿಕೊಂಡಿದೆಯಾದರೂ ಬೆಂಗಳೂರಿನ ಅಥವಾ ಮೈಸೂರಿನ ಶ್ರೀ ರಾಮಕೃಷ್ಣಾಶ್ರಮಗಳು ಪ್ರಚಾರಕ್ಕಾಗಿ ಬೇಕಾದಾಗಲೆಲ್ಲ ಇದರ ಅವಶ್ಯಕವಾದಷ್ಟು ಪ್ರತಿಗಳನ್ನು ಮುದ್ರಿಸಬಹುದು. ಇಷ್ಟಬಂದ ಬೆಲೆಗೆ ಅಥವಾ ಉಚಿತವಾಗಿ ಜನರಿಗೆ ಕೊಡಬಹುದು.

ಬೆಂಗಳೂರು, ಧಾತು ಸಂವತ್ಸರ,
ಕಾರ್ತಿಕ ಬಹುಳ ತೃತೀಯೆ.

ಮಾಸ್ತಿ ವೆಂಕಟೇಶ ಅಯ್ಯಂಗಾರ್

## ಚಿತ್ರಗಳು

# ಶ್ರೀ ರಾಮಕೃಷ್ಣ

ರಾಮಕೃಷ್ಣನೆಂದೂ ಪರಮಹಂಸನೆಂದೂ ದೇವರ ಅವತಾರವೆಂದೂ ಆಮೇಲೆ ಲೋಕದಲ್ಲಿ ಪ್ರಖ್ಯಾತಿಗೆ ಬಂದ ಮಹಾಪುರುಷನು ವಂಗದೇಶದ ಕಾಮಾರ್‌ಪುಕ್ಕುರ್ ಎಂಬ ಗ್ರಾಮದಲ್ಲಿ ಈಗ ನೂರು ವರ್ಷದ ಹಿಂದೆ ಜನ್ಮವೆತ್ತಿದನು. ಅವನ ತಂದೆ ಖುದೀರಾಮ ಚಟ್ಟೋಪಾಧ್ಯಾಯನೆಂಬ ಹೆಸರಿನ ಬ್ರಾಹ್ಮಣನು; ಅವನ ತಾಯಿ ಹೆಸರು ಚಂದ್ರಮಣಿದೇವಿ. ಕಾಮಾರ್‌ಪುಕ್ಕುರ ಸಣ್ಣದೊಂದು ಹಳ್ಳಿ; ಅಲ್ಲಿ ಇದು ಒಂದೇ ಬ್ರಾಹ್ಮಣರ ಮನೆ. ಇದಕ್ಕೆ ಮೊದಲು ಖುದೀರಾಮನು ಬೇರೆ ಒಂದು ಗ್ರಾಮದಲ್ಲಿ ವಾಸವಾಗಿದ್ದನು. ಅಲ್ಲಿಯ ಜಮೀನ್‌ದಾರನು ಯಾವುದೋ ಒಂದು ವ್ಯವಹಾರದಲ್ಲಿ ಖುದೀರಾಮನನ್ನು ತನ್ನ ಪರವಾಗಿ ಸಾಕ್ಷ್ಯ ಹೇಳಬೇಕೆಂದು ಕೇಳಿದನು. ಅವನಂಥ ಮನುಷ್ಯನು ನ್ಯಾಯಸ್ಥಾನದಲ್ಲಿ ಸಾಕ್ಷ್ಯ ಹೇಳಿದರೆ ಅಧಿಕಾರಿ ತನ್ನ ವಾದವನ್ನು ನಂಬುವನು, ಇವನಿಂದ ಸಾಕ್ಷ್ಯ ಹೇಳಿಸಿ ತಾನು ವ್ಯವಹಾರದಲ್ಲಿ ಗೆಲ್ಲಬೇಕು, ಎಂದು ಜಮೀನ್‌ದಾರನ ಅಪೇಕ್ಷೆ. ಆದರೆ ಅವನು ಹೇಳಬೇಕೆಂದ ಸಾಕ್ಷ್ಯದ ಸಂಗತಿ ಖುದೀರಾಮನಿಗೆ ತಿಳಿಯದು; ಅವನು ಜಮೀನ್‌ದಾರನಿಗಾಗಿ ಆ ಸುಳ್ಳನ್ನು ಹೇಳಲು ಒಪ್ಪಲಿಲ್ಲ. ಜಮೀನ್‌ದಾರನು ಆ ಸಾಕ್ಷ್ಯಕ್ಕೆ ಸ್ವಲ್ಪ ಮೌಲ್ಯವನ್ನು ಕೊಡುವುದಕ್ಕೆ ಹಿಂತೆಗೆಯುತ್ತಿರಲಿಲ್ಲವೆಂದೂ ಅದನ್ನು ಹೇಳದಿದ್ದರೆ ತನಗೆ ತೊಂದರೆ ಕೊಡುವನೆಂದೂ ಖುದೀರಾಮನಿಗೆ ತಿಳಿದಿತ್ತು. ಆದರೂ ಅವನು ಜಮೀನ್‌ದಾರನ ಸಾಕ್ಷಿಯಾಗಲಿಲ್ಲ. ಆಮೇಲೆ ಬಂದ ತೊಂದರೆಯಿಂದ ಆ ಗ್ರಾಮವನ್ನು ಬಿಟ್ಟು ಕಾಮಾರ್‌ಪುಕ್ಕುರಕ್ಕೆ ಬಂದು ನೆಲಸಿದನು. ಅಲ್ಲಿ ಸ್ವಲ್ಪ ಭೂಮಿಯನ್ನು ಸಂಪಾದಿಸಿ ತಾನೇ ಅದರ ಕೆಲಸವನ್ನು ಮಾಡಿಸುತ್ತ ಜೀವನವನ್ನು ನಡೆಸುತ್ತಿದ್ದನು. ಅವನಿಗೂ ಅವನ ಧರ್ಮಪತ್ನಿ ಚಂದ್ರಮಣಿದೇವಿಗೂ ಮೂವರು

ಗಂಡು ಮಕ್ಕಳು ಇಬ್ಬರು ಹೆಣ್ಣುಮಕ್ಕಳು ಆದರು. ಮೂರನೆಯ ಮಗನೇ ಆಮೇಲೆ ಪ್ರಸಿದ್ಧನಾದ ಶ್ರೀ ರಾಮಕೃಷ್ಣ ಪರಮಹಂಸ ದೇವನು.

ತಾಯಿತಂದೆಗಳು ಮಗುವಿಗೆ ಗದಾಧರನೆಂದು ಹೆಸರಿಟ್ಟರು. ಅವನನ್ನು ಗರ್ಭದಲ್ಲಿ ಧರಿಸುವ ತರುಣದಲ್ಲಿ ಚಂದ್ರಮಣಿದೇವಿ ತಾನು ಪೂಜಿಸುತಲಿದ್ದ ಶಿವಾಲಯದ ಮೂರ್ತಿ ತನ್ನನ್ನು ಪ್ರವೇಶಿಸಿದಂತೆ ಅನುಭವವನ್ನು ಕಂಡಳಂತೆ. ಆಗ ಖುದೀರಾಮನು ಗಯೆಗೆ ಯಾತ್ರೆ ಹೋಗಿದ್ದನು. ಅಲ್ಲಿ ಒಂದು ದಿನ ಅವನಿಗೆ ಗಯೆಯ ವಿಷ್ಣುಮೂರ್ತಿ ನಾನು ನಿನ್ನ ಮಗನಾಗಿ ಹುಟ್ಟುವೆನೆಂದು ಹೇಳಿದಂತೆ ಸ್ವಪ್ನವಾಯಿತಂತೆ. ಆ ವರ್ಷ ಹುಟ್ಟಿದ ಮಗುವಿಗೆ ಗದಾಧರನೆಂದು ಹೆಸರಿಟ್ಟದ್ದು ಈ ಕಾರಣದಿಂದ. ದೇವರ ಅವತಾರವೆಂಬಂತೆ ಆಮೇಲೆ ಮಹಿಮೆಯನ್ನು ತೋರಿದ ಈ ಮಗುವಿನ ಜನ್ಮವನ್ನು ಕುರಿತ ಈ ಕಥೆಗಳಿಂದ ಕೆಲವರು ರಾಮಕೃಷ್ಣನು ಖುದೀರಾಮನ ದೇಹದ ಪುತ್ರನಲ್ಲವೆಂಬಂತೆ ಧ್ವನಿಕೊಡುವ ಮಾತನ್ನಾಡುತ್ತಾರೆ. ಮನುಷ್ಯನಿಗೆ ವಿಚಿತ್ರವೆಂದರೆ ಆಸೆ. ನಿಜವಾಗಿ ನೋಡಿದರೆ ಬಾಳೇ ವಿಚಿತ್ರ; ಆದರೆ ದಿನವೂ ಕಾಣುವ ಕಾರಣದಿಂದ ಅದು ವಿಚಿತ್ರವೆಂಬುದು ನಮಗೆ ತೋರುವುದಿಲ್ಲ. ಆದಕಾರಣ ನಾವು ದಿನವೂ ಕಾಣದ ವಿಷಯವನ್ನು ಕಲ್ಪಿಸಿ ಅದನ್ನು ವಿಚಿತ್ರವೆನ್ನುತ್ತೇವೆ. ಗದಾಧರನ ಜನ್ಮ ಅಲೌಕಿಕ ರೀತಿಯಲ್ಲಿ ಆಯಿತೆಂದು ನಾವು ಇಷ್ಟವಿದ್ದರೆ ನಂಬಬಹುದು, ಇಲ್ಲದಿದ್ದರೆ ಬಿಡಬಹುದು. ಜನ್ಮ ಅಲೌಕಿಕ ರೀತಿಯಲ್ಲಿ ಆದರೂ ಆಗದಿದ್ದರೂ ಆ ಜೀವ ಅಲೌಕಿಕ ಪ್ರಭೆಯಿಂದ ಬೆಳೆಯಿತೆನ್ನುವುದು ನಿಜ, ಬೆಳಗಿತೆನ್ನುವುದು ನಿಜ. ಭಕ್ತನಾದ ಖುದೀರಾಮನೂ ಭಕ್ತೆಯಾದ ಚಂದ್ರಮಣಿ ದೇವಿಯೂ ತಮ್ಮ ದಿನದ ಪೂಜೆಯ ದೈವ ತಮ್ಮ ವಿಷಯದಲ್ಲಿ ಹೀಗೆ ಅನುಗ್ರಹಮಾಡಿತೆಂದು ಅನುಭವಿಸಿದ್ದಾಗಲಿ ತಿಳಿದದ್ದಾಗಲಿ ಆಶ್ಚರ್ಯವಲ್ಲ. ದೈವಭಕ್ತಿನಿರತರಾದ ತಾಯಿತಂದೆಗಳು ಹಲವರು ಈ ರೀತಿಯ ಭಾವನೆಯನ್ನು ಪಡೆಯುವುದುಂಟು; ತಾವು ಹೋಗಿದ್ದ ಯಾತ್ರೆ ತೀರ್ಥಗಳ ದೇವರ ಹೆಸರನ್ನು ಆ ವರ್ಷ ಹುಟ್ಟಿರುವ ತಮ್ಮ ಮಕ್ಕಳಿಗೆ ಕೊಟ್ಟಿರುವುದುಂಟು. ನಮಗೆ ಮುಖ್ಯವಾದ ವಿಷಯ ಗದಾಧರನು ದೈವಭಕ್ತಿಯಿಂದ ಪಕ್ವವಾಗಿದ್ದ ಎರಡು

ಬಾಳುಗಳ ಮಗು ಎನ್ನುವುದು. ಆ ಎರಡು ಜೀವನದ ಉತ್ತಮ ಪ್ರವೃತ್ತಿಗಳು ಇವನ ಬಾಳುವೆಯಲ್ಲಿ ಮುಂದರಿದು ಬೆಳೆದುವು.

ಖುದೀರಾಮ ಚಟ್ಟೋಪಾಧ್ಯಾಯನು ಸಂಸಾರದ ವಿಷಯದಲ್ಲಿ ಯಾವಾಗಲೂ ಕಾತರನಾಗಿದ್ದದಿಲ್ಲವೆಂದು ಕಾಣುತ್ತದೆ. ಗದಾಧರನು ಹುಟ್ಟುವಕಾಲದಲ್ಲಂತೂ ಅವನು ಕಾತರನಾಗಿದ್ದುದು ದೇವರ ಸೇವೆಯಲ್ಲಿ. ಈ ಮನೋಧರ್ಮದ ಪ್ರಭಾವ ಮನೆಯ ಜೀವನದಲ್ಲೆಲ್ಲ ಕಂಡಿರಬೇಕು. ಒಂದು ಸಂಗತಿಯಿಂದ ಈ ಮಾತು ನಿದರ್ಶನಕ್ಕೆ ಬರುತ್ತದೆ. ಇವರ ಒಬ್ಬ ಮಗಳ ಅತ್ತೆಯ ಮನೆ ಕಾಮಾರ್ ಪುಕ್ಕರದಿಂದ ಒಂದು ಗಾವುದ ದೂರದಲ್ಲಿ ಒಂದು ಹಳ್ಳಿ. ಒಂದುಸಲ ಖುದೀರಾಮನು ಮಗಳನ್ನುನೋಡಿಕೊಂಡು ಬರುವುದಕ್ಕೆಂದು ಹೊರಟನು. ಒಂದು ಹರಿದಾರಿ ನಡೆದಮೇಲೆ ಮಾರ್ಗದಲ್ಲಿ ಇವನಿಗೆ ಒಂದು ಬಿಲ್ವವೃಕ್ಷ ಕಂಡಿತು. ಅದರ ತುಂಬ ಚಿಗುರೆಲೆ. ಇದನ್ನು ನೋಡಿ ತುಂಬ ಪತ್ರೆ ತೆಗೆದುಕೊಂಡುಹೋಗಿ ಶಿವನಿಗೆ ಅರ್ಚನೆ ಮಾಡಬೇಕೆಂದು ಅವನಿಗೆ ತೋರಿತು. ಮಗಳನ್ನು ನೋಡುವುದಕ್ಕೆ ಹೋಗುವ ಯೋಚನೆಯನ್ನು ಬಿಟ್ಟು ಅವನು ಬಿಲ್ವದ ತಳಿರನ್ನು ಬೇಕಾದಷ್ಟು ಕುಯ್ದುಕೊಂಡು ಊರಿಗೆ ಹಿಂದಿರುಗಿ ಬಂದನು. ಬಹಳ ಹೊತ್ತು ದೇವರ ಪೂಜೆಮಾಡಿ ಆನಂದಿಸಿದನು. ಒಂದುಕಡೆಯಿಂದ ನೋಡಿದರೆ ಇದು ಒಂದು ರೀತಿಯ ಹುಚ್ಚೆಂದು ಕಾಣಬಹುದು; ಒಂದು ರೀತಿಯಿಂದ ಇದೇ ಸರಿಯಾದ ತಿಳಿವು ಎಂದೂ, ಮಗಳು ಹೇಗಿರುವಳೋ ಎಂದು ಚಿಂತಿಸುವುದು ತಪ್ಪು ಎಂದೂ, ತೋರುತ್ತದೆ. ಖುದೀರಾಮನು ಮಗನ ಓದು ಬರಹದ ವಿಷಯವನ್ನು ಕುರಿತೂ ಅಷ್ಟೇನೂ ಯೋಚನೆ ಮಾಡಿದಂತೆ ಕಾಣುವುದಿಲ್ಲ. ಗದಾಧರನು ಇಂಥ ನಂಬಿಕೆಯ ಆವರಣದಲ್ಲಿ ತಾಯ ಮಡಿಲು, ಅಣ್ಣಂದಿರ ನೆರೆ, ಊರಮಂದಿಯ ಸ್ನೇಹದಲ್ಲಿ ಹಳ್ಳಿಯ ಹುಡುಗನಾಗಿ ಬೆಳೆದು ದೊಡ್ಡವನಾದನು.

ಖುದೀರಾಮನ ಗ್ರಾಮದ ಬದುಕಾದರೂ ಇವನ ಮನೆಯದು ಹೇಗೋ ಹಾಗೆ ದೇವರೆಂಬ ಭಾವದಿಂದ ಸುವಾಸಿತವಾಗಿಯೇ ಇದ್ದಿತು. ಮನೆಯ ಮಕ್ಕಳಂತೆ ನಮ್ಮ ಜನಕ್ಕೆ ಊರದೇವರೂ ನಿಜವಾದ ವ್ಯಕ್ತಿ. ಮಗುವನ್ನು ಲಾಲಿಸಬೇಕು, ದೇವರನ್ನು ಪೂಜಿಸಬೇಕು. ಕಾಮಾರ್

ಪುಕ್ಕರ ವಂಗದೇಶದಿಂದ ಜಗನ್ನಾಥಪುರಿಗೆ ಹೋಗುವ ದಾರಿಯಲ್ಲಿದೆ. ಜಮೀನ್‌ದಾರರು ಗ್ರಾಮದಲ್ಲಿ ಯಾತ್ರಿಕರಿಗಾಗಿ ಒಂದು ಛತ್ರವನ್ನು ಕಟ್ಟಿದ್ದರು. ಮನಸ್ಸಿನಲ್ಲಿ ಭಕ್ತಿಯನ್ನು ತುಂಬಿಕೊಂಡು ಜಗನ್ನಾಥಕ್ಕೆ ಹೋಗುವ, ಅಲ್ಲಿಂದ ಬರುತ್ತ ಉದ್ರೇಕವಾದ ಮತ್ತಷ್ಟು ಭಕ್ತಿಯನ್ನು ತುಂಬಿಕೊಂಡು ಊರುಗಳಿಗೆ ಸಾಗುವ, ಅನೇಕ ಯಾತ್ರಿಕರನ್ನು ಬಾಲಕನು ಚಿಕ್ಕಂದಿನಲ್ಲಿ ನೋಡಿರಬೇಕು. ಜಗನ್ನಾಥವು ಚೈತನ್ಯದೇವನು ಮುಕ್ತನಾದ ಸ್ಥಳ. ಗದಾಧರನು ಚೈತನ್ಯನ ಕಥೆಯನ್ನು ಅನೇಕ ಸಲ ಕೇಳಿದನು. ಬಂಗಾಳದ ಭಕ್ತರು ರಚಿಸಿದ್ದ ವೈಷ್ಣವ ಶಾಕ್ತಗೀತೆಗಳು ಅವನ ಕಿವಿಗೆ ಅನೇಕ ಸಲ ಬಿದ್ದಿರಬೇಕು. ಅವನು ಈ ಗೀತಗಳನ್ನು ಹಾಡುವುದನ್ನು ಕಲಿತನು. ಹುಡುಗನು ನೋಡುವುದಕ್ಕೆ ಚೆನ್ನಾಗಿದ್ದನಂತೆ. ಹಳ್ಳಿಯ ಮಕ್ಕಳು ಒಂದು ಮನೆಯವಲ್ಲ. ಒಳ್ಳೆಯ ಹುಡುಗನೂ ಆದದರಿಂದ ಗದಾಧರನು ಊರ ಜನಕ್ಕೇ ಬೇಕಾದ ವಸ್ತು. ನೆರೆಹೊರೆಯ ಹೆಂಗಸರು ಇವನನ್ನು ಮನೆಗಳಿಗೆ ಕರೆಯುವರು, ಇವನಿಂದ ಹಾಡನ್ನು ಹೇಳಿಸಿ ಕೇಳುವರು. ಗದಾಧರನಿಗೆ ಮೃತ್ತಿಕೆಯಿಂದ ದೇವಮೂರ್ತಿಗಳನ್ನು ಮಾಡುವುದು ಬಹಳ ಇಷ್ಟ; ಅವನು ಅವನ್ನು ಬಹಳ ಚೆನ್ನಾಗಿ ಮಾಡುತ್ತಲೂ ಇದ್ದನು. ಗ್ರಾಮದಲ್ಲಿ ಹಬ್ಬಹುಣ್ಣಿಮೆಯಲ್ಲಿ ನಡೆಯುವ ಕಥೆ ಪ್ರಸಂಗಗಳನ್ನು ಇವನು ಆನಂದದಿಂದ ಕೇಳುತ್ತಿದ್ದನು; ತಾನೂ ಆ ಕಥೆಗಳಂತೆ ಕಥೆ ಮಾಡುವುದಕ್ಕೆ ಯತ್ನಮಾಡುತ್ತಿದ್ದನು. ಪಂಡಿತರು ಯಾವಾಗಲಾದರೂ ಕುಳಿತು ತತ್ವವಿಚಾರಗಳನ್ನು ಚರ್ಚೆಮಾಡಿದಾಗ ಕೇಳಿ ಕೇಳಿ ಇವನು ಆ ವಿಷಯಗಳನ್ನೂ ತಿಳಿದಿದ್ದನು. ಗ್ರಾಮದ ಜಮೀನ್‌ದಾರರ ಮನೆಯಲ್ಲಿ ಒಂದು ಸಂದರ್ಭದಲ್ಲಿ ಪಂಡಿತರ ಸದಸ್ಸು ಸೇರಿದ್ದಾಗ, ಇಬ್ಬರು ಪಂಡಿತರು ವಾದಮಾಡುತ್ತಿರುವಲ್ಲಿ ಈ ಬಾಲಕನು ಮಧ್ಯೆ ಬಾಯಿಹಾಕಿ ಒಂದು ತೊಡಕನ್ನು ಬಿಡಿಸಿದನಂತೆ. ಮಹನೀಯರ ಬಾಲ್ಯವನ್ನು ಕುರಿತ ಚರಿತ್ರೆಯಲ್ಲೆಲ್ಲ ಇಂಥ ಕಥೆ ಇರುವುದು ವಾಡಿಕೆ. ಆದರೆ ಇದು ನಡೆಯಲಿಲ್ಲವೆಂದು ನಾವು ಹೇಳಬೇಕಾದದಿಲ್ಲ. ಸಾಮಾನ್ಯವಾಗಿ ಇಂಥವರ ಬುದ್ಧಿ ಸೂಕ್ಷ್ಮವಾಗಿರುತ್ತದೆ; ಇಂಥ ಮಕ್ಕಳು ಈ ರೀತಿಯಾಗಿ ತಮ್ಮ ಸೂಕ್ಷ್ಮತೆಯನ್ನು ಹೊರಪಡಿಸುವುದು ಆಶ್ಚರ್ಯವೇನಲ್ಲ; ಹುಡುಗನು ದೊಡ್ಡವ

ನಾಗಿ ಮಹನೀಯನೆನಿಸಿಕೊಂಡಮೇಲೆ ಹಿಂದೆ ನಡೆದ ಸಂಗತಿಯನ್ನು ಜನರು ನೆನೆದುಕೊಳ್ಳುವುದೂ ಸಹಜವೇ. ವೊತ್ತದಲ್ಲಿ ಗದಾಧರನು ಆಟ ಪಾಟಗಳಲ್ಲಿ ಚಟುವಟಿಕೆಯಿಂದ ಸೇರುತ್ತ ಬುದ್ಧಿವಂತನಾಗಿ ಸತ್ಯವಂತ ನಾಗಿ ಜನರಿಗೆ ಪ್ರಿಯನಾಗಿ ಬಾಲ್ಯವನ್ನು ಕಳೆದನು.

ಈ ವಯಸ್ಸನ್ನು ಕುರಿತ ಎರಡು ಸಂಗತಿಯಿಂದ ಬಾಲಕನ ಚೇತನದ ಎರಡು ಲಕ್ಷಣ ವ್ಯಕ್ತವಾಗುತ್ತವೆ. ಗ್ರಾಮದಲ್ಲಿ ನಡೆದ ಒಂದು ಕೇಳಿಕೆ ಯಲ್ಲಿ ರಾಮಕೃಷ್ಣನನ್ನು ಶಿವನ ವೇಷಕ್ಕೆ ಸೇರಿಸಿಕೊಂಡರು. ಆ ಪಾತ್ರ ವನ್ನು ಅಭಿನಯಿಸುತ್ತ ರಂಗಕ್ಕೆ ಬಂದು ಇವನು ತಾದಾತ್ಮ್ಯದಿಂದ ಸ್ತಬ್ಧನಾಗಿ ನಿಂತುಬಿಟ್ಟನು. ಏನಾಯಿತೋ ಎಂದು ಹೆದರಿದ ಜನ ಇವನನ್ನು ಮನೆಗೆ ಕರೆದುಕೊಂಡು ಹೋಗಿ ಮೆಲ್ಲನೆ ಎಚ್ಚರಗೊಳಿಸಿದರು. ಸಭಾ ಕಂಪದಿಂದ ತರುಣನಾದ ನಟನು ಕಕಮಕನಾಗಬಹುದು; ಗದಾಧರನಿಗೆ ಆದದ್ದು ಇಂಥ ತ್ರಾಸವಲ್ಲ. ನೋಡುವವರಿಗೆ ಮೂರ್ಛೆಯಂತೆ ಕಾಣುವು ದಾಗಿತ್ತು. ನಿಜವಾಗಿಯೂ ಇದು ಸಮಾಧಿ. ಇನ್ನೊಂದು ಸಲ ಇವನು ಹೊಲದ ಮೇಲೆ ಹೋಗುತ್ತಿದ್ದಾಗ ಆಕಾಶದಲ್ಲಿ ಹಾರುತ್ತಿದ್ದ ಕೊಕ್ಕರೆಗಳ ಪಂಕ್ತಿಯೊಂದು ನೀಲವಾದ ಗಗನಪಟದಮೇಲೆ ಶುಭ್ರವಾಗಿ ಚಿತ್ರಿಸಿದಂತೆ ಇರುವುದನ್ನು ಕಂಡನು; ಕಂಡಹಾಗೆ ಆ ನೋಟದ ಆನಂದದಲ್ಲಿ ಮೈಮರೆ ತನು. ಹೇನಿ ಎಂಬ ಪ್ರಸಿದ್ಧ ಜರ್ಮನ್ ಕವಿ ತರುಣನಾಗಿದ್ದಾಗ ಒಂದು ಸಭೆಯಲ್ಲಿ ವಿದ್ಯಾಪ್ರಶಸ್ತಿಯನ್ನು ಪಡೆಯುವುದಕ್ಕೆ ಹೋದವೇಳೆ ಎದುರಿ ಗಿದ್ದ ತರುಣಿಯೊಬ್ಬಳ ಚೆಲುವಿಗೆ ಮನಸೋತು ಮೂರ್ಛೆಗೊಂಡನಂತೆ. ನಮ್ಮಲ್ಲಿ ಚೆಲುವನ್ನು ನೋಡಿ ಮರುಳಾದನೆಂದು ಮಾತು ಇದೆ; ಕೆಲವರು ಮರುಳು ಆಗಲೂ ಬಹುದೆಂದು ತೋರುತ್ತದೆ. ಸೌಂದರ್ಯಕ್ಕೆ ಸೋಲುವ ಈ ಚಿತ್ತವೃತ್ತಿ ಪ್ರಬಲವಾಗಿರುವವರು ಚೆಲುವನ್ನು ಕಂಡವೇಳೆ ಮೂರ್ಛೆ ಹೋಗುವುದು ಆಶ್ಚರ್ಯವಲ್ಲ. ಗದಾಧರನ ಚಿತ್ತವೃತ್ತಿ ಇಂಥದು. ಹೀಗೆ ಇವನಿಗೆ ಭಾವದ ಆವೇಶವೂ ಅಂಥ ಆವೇಶದಿಂದ ಸಮಾಧಿಗೆ ಹೋಗುವ, ಮತ್ತೆ ಮರಳುವ, ಶಕ್ತಿಯೂ ಸಹಜವಾಗಿ ಬಂದಿದ್ದುವು.

ಹುಡುಗನ ಏಳನೆಯ ವಯಸ್ಸಿನಲ್ಲಿ ತಂದೆ ತೀರಿಹೋದರು. ಮಕ್ಕಳು ಹೇಗೋ ಕಷ್ಟದಿಂದ ಸಂಸಾರವನ್ನು ನಡೆಸಿಕೊಳ್ಳುತ್ತಿದ್ದರು.

ಹುಡುಗನಿಗೆ ಉಪನಯನವಾಯಿತು. ಆ ಸಂದರ್ಭದಲ್ಲಿ ನಡೆದ ಒಂದು ಸಂಗತಿಯೂ ಅವನ ಮನೋಧರ್ಮವನ್ನು ಸೂಚಿಸುತ್ತದೆ. ಚಂದ್ರಮಣಿ ದೇವಿಗೆ ಮನೆ ಕೆಲಸವನ್ನು ಮಾಡಿಕೊಡುತ್ತ ಧನಿ ಎಂಬ ಒಬ್ಬ ಶೂದ್ರ ಹೆಂಗಸು ಇದ್ದಳು. ಅವಳಿಗೆ ಗದಾಧರನನ್ನು ಕಂಡರೆ ಬಹಳ ಪ್ರೀತಿ; ಇವನೂ ಅವಳನ್ನು ಪ್ರೀತಿಯಿಂದ ಕಾಣುತ್ತಿದ್ದನು. ಉಪನಯನದ ದಿನ ಮೊದಲ ಭಿಕ್ಷೆಯನ್ನು ಹಾಕುವುದು ಒಂದು ಮರ್ಯಾದೆಯ ಕೆಲಸ; ಯಾರಾದರೂ ಕುಲವಂತ ಪುಣ್ಯವಂತರಿಗೆ ದೊರೆಯತಕ್ಕದ್ದು. ಗದಾಧರನು ತನಗೆ ಆ ಭಿಕ್ಷೆಯನ್ನು ಧನಿ ಕೊಡಬೇಕೆಂದು ಹಟ ಮಾಡಿದನು. ಧನಿಗೆ ನಿರೀಕ್ಷಿಸಲಾಗದ ಗೌರವ ಕೈಸೇರಿತು. ವಟುವಿನ ಈ ವರ್ತನೆಯಿಂದ ಕೆಲವರಿಗೆ ಅಸಮಾಧಾನವಾಯಿತಂತೆ; ಆಗಿರಬೇಕೆಂದು ನಮಗಾದರೂ ತೋರತಕ್ಕದ್ದೇ. ಆದರೆ ಅವನು ಅದನ್ನು ಲಕ್ಷ್ಯಮಾಡಲಿಲ್ಲ. ಖುದೀರಾಮನು ತೀರಿಹೋದ ಮೇಲೆ ಕೆಲವು ವರ್ಷ ಕಳೆದುವು. ಮನೆಯಲ್ಲಿ ಜೀವನ ಕಳೆಯುವುದು ಕಷ್ಟವಾಗಲು ಅಣ್ಣ ರಾಮಕುಮಾರನು ಕಲಿಕತೆಗೆ ಹೋಗಿ ಒಂದು ಸಂಸ್ಕೃತ ಪಾಠಶಾಲೆಯನ್ನು ಇರಿಸಿದನು. ಕೆಲ ವರ್ಷದ ಮೇಲೆ ಅವನು ತಮ್ಮನನ್ನು ಅಲ್ಲಿಗೆ ಕರೆಸಿಕೊಂಡನು. ರಾಮಕೃಷ್ಣನು ಸ್ವಲ್ಪ ಸಂಸ್ಕೃತವನ್ನು ಕಲಿತಿರಬಹುದು; ಆದರೆ ಅದು ಬಹು ಸ್ವಲ್ಪ ಇದ್ದಿರಬೇಕು. ಏಕೆಂದರೆ ಕೊನೆಗೂ ಅವನಿಗೆ ತಿಳಿದಿದ್ದ ಸಂಸ್ಕೃತ ಸ್ವಲ್ಪವೇ. ಈ ಅರ್ಧಂಬರ್ಧದ ವಿದ್ಯಾಭ್ಯಾಸವನ್ನು ಮಾಡಿ ಮಾಡದೆ ಇರುತ್ತಿದ್ದ ಹಾಗೆಯೇ ಗದಾಧರನಿಗೆ ಹದಿನೇಳು ವರ್ಷ ವಯಸ್ಸಾಯಿತು.

ಆಗಿನ ಕಾಲದಲ್ಲಿ ಕಲಿಕತಾ ನಗರದಲ್ಲಿ ರಾಣಿ ರಾಸಮಣಿ ಎಂಬ ಒಬ್ಬ ಜಮೀನ್ದಾರಿಣಿ ಇದ್ದಳು. ಅವಳು ಗಂಗಾತೀರದಲ್ಲಿ ದಕ್ಷಿಣೇಶ್ವರವೆಂಬ ಸ್ಥಳದಲ್ಲಿ ದೊಡ್ಡದೊಂದು ದೇವಾಲಯವನ್ನು ಕಟ್ಟಿಸಿ ದೈವಪ್ರತಿಷ್ಠೆಯನ್ನು ಮಾಡಿಸಿದಳು. ಪ್ರಾಕಾರದಲ್ಲಿ ಹನ್ನೆರಡು ಶಿವಮಂದಿರ; ಒಳಗೆ, ಒಂದು ಕಡೆ ಭವತಾರಿಣೀ ರೂಪದ ಕಾಳಿಯ ಮಂದಿರ, ಇನ್ನೊಂದು ಕಡೆ ರಾಧಾಮಾಧವ ಮಂದಿರ. ದೇವಾಲಯಕ್ಕೆ ಲಕ್ಷಾಂತರ ಧನ ವೆಚ್ಚವಾಯಿತು. ಅಲ್ಲಿಯ ಪೂಜೆ ಪುರಸ್ಕಾರಗಳಿಗೆ ರಾಣಿ ತಕ್ಕ ಭಿತ್ತಿಯನ್ನು ಕಲ್ಪಿಸಿದ್ದಳು. ರಾಣಿ ಶೂದ್ರ ಕುಲದವಳು; ತನ್ನ ಹೆಸರಿನಲ್ಲಿ ಆಲಯವನ್ನು ಪ್ರತಿಷ್ಠಿಸಿದರೆ

ಬ್ರಾಹ್ಮಣ ಅರ್ಚಕನು ಬರಲಾರನೆಂದು ಅವಳಿಗೆ ಶಂಕೆ; ಆದ್ದರಿಂದ ಅವಳು ಅದನ್ನು ತನ್ನ ಗುರುವಿನ ಹೆಸರಿನಲ್ಲಿ ಪ್ರತಿಷ್ಠೆ ಮಾಡಿದಳು. ಆದರೆ ಬಂಗಾಳದ ಆಗಿನ ಸಮಾಜದ ಸ್ಥಿತಿಯಲ್ಲಿ ಹಾಗೂ ಈ ದೇವಾಲಯಕ್ಕೆ ಬ್ರಾಹ್ಮಣನು ಅರ್ಚಕನಾಗಿ ಬರುವುದು ಕಷ್ಟವೆಂದು ತೋರಿತು. ಆಗಮಶಾಸ್ತ್ರಜ್ಞರಲ್ಲಿ ಕೆಲವರು ಕೂಡದೆಂದು, ಕೆಲವರು ಆಗಬಹುದೆಂದು, ಹೇಳುತ್ತಿರುವಲ್ಲಿ ರಾಮಕುಮಾರನು ಕಾಳಿಕಾ ದೇವಾಲಯದ ಪೂಜೆಯ ಕೆಲಸವನ್ನು ಒಪ್ಪಿಕೊಂಡನು. ಮೊದಲಲ್ಲಿ ಇದು ರಾಮಕೃಷ್ಣನಿಗೆ ಸಮ್ಮತವಾಗಲಿಲ್ಲ. ದೇವಾಲಯದ ಪ್ರತಿಷ್ಠೆಯ ದಿನ ಸಾವಿರಾರು ಜನ ಸಂತರ್ಪಣೆಯ ಮೃಷ್ಟಾನ್ನವನ್ನು ಉಂಡು ಸುಖಪಟ್ಟರು; ರಾಮಕೃಷ್ಣನು ತಾನು ತಂದಿದ್ದ ನೆಲ್ಲಿನ ಅರಳು ಸ್ವಲ್ಪವನ್ನು ತಿಂದು ಗಂಗೆಯ ನೀರನ್ನು ಕುಡಿದು ಮನೆಗೆ ಹೋದನು. ಆದರೂ ಅಣ್ಣನಮೇಲಿನ ಮಮತೆಯಿಂದ ಆಮೇಲೆ ದೇವಾಲಯದಲ್ಲಿ ಓಡಿಯಾಡುತ್ತ ಅವನಿಗೆ ಸಹಾಯವಾಗಿ ಇರುತ್ತಿದ್ದನು. ಹೀಗೆ ಇವನಿಗೆ ದಕ್ಷಿಣೇಶ್ವರದ ದೇವಾಲಯದೊಂದಿಗೆ ಸಂಬಂಧ ಮೊದಲಾಯಿತು.

ರಾಮಕೃಷ್ಣನು ವರ್ಚಸ್ವಿಯಾದ ತರುಣ. ದೇವಾಲಯದಲ್ಲಿ ಇವನು ಹೋಗುತ್ತ ಬರುತ್ತ ಇರುವಲ್ಲಿ ರಾಣಿಯೂ ಅವಳ ಅಳಿಯ ಮಥುರಾನಾಥ ವಿಶ್ವಾಸನೂ ಇವನನ್ನು ನೋಡಿದರು. ನಿಷ್ಠನೂ ತೇಜಸ್ವಿಯೂ ಆದ ಈ ತರುಣನನ್ನು ಆಲಯದ ಯಾವುದಾದರೊಂದು ಕೆಲಸಕ್ಕೆ ನಿಯಮಿಸಬೇಕೆಂದು ಅವರಿಗೆ ಅಪೇಕ್ಷೆಯಾಯಿತು. ರಾಮಕೃಷ್ಣನು ಮೊದಲು ಇದಕ್ಕೆ ಒಪ್ಪಲಿಲ್ಲ. ಆದರೆ ಕೆಲವು ಕಾಲದ ಮೇಲೆ ರಾಧಾಗೋವಿಂದ ಮಂದಿರದ ಪೂಜಾರಿಯ ಕೆಲಸಕ್ಕೆ ಮತ್ತೊಬ್ಬನನ್ನು ನೇಮಿಸಲೇ ಬೇಕಾಗಿ ಬಂದಾಗ ರಾಮಕುಮಾರನು ಇವನಿಗೆ ಒತ್ತಾಯ ಮಾಡಿದನು. ಅಣ್ಣನ ಮಾತಿಗೆ ಕಟ್ಟುಬಿದ್ದು ರಾಮಕೃಷ್ಣನು ಆ ಕೆಲಸವನ್ನು ಒಪ್ಪಿಕೊಂಡನು. ಹೀಗೆ ಕೆಲವು ಕಾಲ ಇರಲಾಗಿ ರಾಮಕುಮಾರನಿಗೆ ಆರೋಗ್ಯ ತಪ್ಪಿ ರಾಮಕೃಷ್ಣನೇ ಕಾಳಿಕಾ ಮಂದಿರದ ಪೂಜೆಯ ಕೆಲಸವನ್ನೂ ಕೈಕೊಳ್ಳಬೇಕಾಯಿತು. ಸ್ವಲ್ಪ ಕಾಲದಲ್ಲಿ ರಾಮಕುಮಾರನು ತೀರಿಹೋದನು; ಭವತಾರಿಣಿಯ ಪೂಜೆಯ ಕೆಲಸ ಅನಿವಾರ್ಯವಾಗಿ ರಾಮಕೃಷ್ಣನ ಕೈಗೆ ಕಟ್ಟಿತು.

ರಾಮಕೃಷ್ಣನು ಸ್ವಭಾವತಃ ಶ್ರದ್ಧಾಳು; ನಿಷ್ಠಾವಂತ; ಆತ್ಮ ಪ್ರತ್ಯಯ ಉಳ್ಳವನು. ಇದು ಈ ವೇಳೆಗೆ ಸ್ಪಷ್ಟವಾಗಿರಬೇಕು. ಇದರ ಜೊತೆಗೆ ಇವನ ಭಾವನೆಯ ಪಾಟವವಾದರೂ ಅಸಾಧಾರಣವಾದದ್ದು ಎನ್ನುವುದೂ ವ್ಯಕ್ತವಾಗಿರಬೇಕು. ಚಿಕ್ಕಂದಿನಿಂದಲೂ ರಾಮಕೃಷ್ಣನು ಮನುಷ್ಯರು ಎಷ್ಟು ನಿಜವಾಗಿ ಇರುವರೋ ದೇವರೂ ಅಷ್ಟು ನಿಜ ಎಂದು ತಿಳಿದಿದ್ದ ತಂದೆತಾಯ ಪಕ್ಕದಲ್ಲಿ ಬೆಳೆದಿದ್ದನು. ಈಗ ಇವನ ಶ್ರದ್ಧೆಗೆ, ನಿಷ್ಠೆಗೆ, ಆತ್ಮಪ್ರತ್ಯಯಕ್ಕೆ, ಗುರಿಯಾಗಿ ಭವತಾರಿಣೀ ಮಾತೆ ಬಂದು ನಿಂತಳು. ಹೀಗೆ ಎದುರಿಗೆ ನಿಂತ ಮಂದಿರದ ದೈವ ಇವನ ತೀವ್ರವಾದ ಭಾವನೆಗೆ ಬರಿಯ ಪೂಜೆಯ ವಸ್ತು ಅಥವಾ ಮೂರ್ತಿಯಾಗಿರುವುದು ಸಾಧ್ಯವಲ್ಲದೆ ಹೋಯಿತು. ದೇವರನ್ನು ಅನೇಕರು ಪೂಜಿಸುತ್ತಾರೆ; ಅವರಲ್ಲಿ ಅನೇಕರಿಗೆ ಅವನು ಇದಾನೆಂದು ನಂಬಿಕೆಯೂ ಉಂಟು; ಅದರಲ್ಲಿ ಕೆಲವರಿಗೆ ತಾವು ಪೂಜೆಮಾಡುವ ಆ ಕ್ಷಣದಲ್ಲಿ ಆ ಸ್ಥಳದಲ್ಲಿ ಆ ಮೂರ್ತಿಯಲ್ಲಿ ಅವನು ವ್ಯಕ್ತವಾಗಿದ್ದಾನೆಂದೂ ವಿಶ್ವಾಸ ಇರಬಹುದು. ಆದರೆ ಅವನು ಆ ಮೂರ್ತಿಯಲ್ಲಿ ತಮಗೆ ಒಬ್ಬ ಎದುರಾಳಿಯಾಗಿ ಕುಳಿತಿರುವನೆಂದೂ ತಮ್ಮ ಮನೋಗತವನ್ನು ಅರಿಯುವನೆಂದೂ ತಾವು ಪ್ರಶ್ನೆಮಾಡಿದರೆ ಉತ್ತರ ಕೊಡುತ್ತ ಕಾಣು ಎಂದರೆ ಮುಖವನ್ನು ತೋರಿಸುತ್ತ ಪ್ರಾರ್ಥಿಸಿದರೆ ಕೈಹಿಡಿಯುತ್ತ ಎಲ್ಲ ಹೊತ್ತಿನಲ್ಲೂ ವ್ಯಕ್ತವಾಗುವನೆಂದೂ ಯಾರೂ ನಿರೀಕ್ಷಿಸುವುದಿಲ್ಲ. ಯಾರೂ ಮಾಡದ ಈ ನಿರೀಕ್ಷೆಯನ್ನು ರಾಮಕೃಷ್ಣನು ಮಾಡಿದನು. "ತಾಯೇ, ನನಗೆ ನಿನ್ನನ್ನು ನೋಡುವ ಪುಣ್ಯವನ್ನು ಕೊಡು; ನನಗೆ ಪ್ರತ್ಯಕ್ಷಳಾಗು; ನನ್ನನ್ನು ಉದ್ಧಾರಮಾಡು," ಎನ್ನುವುದು ಈ ಪೂಜಾರಿಗೆ ಕ್ಷಣಕ್ಷಣದ ಪ್ರಾರ್ಥನೆಯಾಯಿತು. ಉಳಿದವರು ದೇವರಪೂಜೆ ಮಾಡಿ ಇಲ್ಲಿ ಮನಸ್ಸಮಾಧಾನವನ್ನು ಪಡೆಯುತ್ತಾರೆ, ಮುಂದಕ್ಕೆ ಒಳ್ಳೆಯದನ್ನು ಬೇಡುತ್ತಾರೆ. ಅರ್ಚಕನಾದವನು ಇದರ ಜೊತೆಗೋ ಅಥವಾ ಇದನ್ನು ಬಿಟ್ಟೋ ಹೊಟ್ಟೆಯ ಪಾಡನ್ನು ಸಂಪಾದಿಸಿಕೊಳ್ಳುತ್ತಾನೆ. ಆದರೆ ಅಣ್ಣನಿಗಾಗಿ ಈ ಕೆಲಸಕ್ಕೆ ಒಪ್ಪಿಕೊಂಡು ಕೊನೆಗೆ ತಾನೇ ಅದನ್ನು ಕೈಗೊಳ್ಳಬೇಕಾದ ಸಂದರ್ಭದಲ್ಲಿ ರಾಮಕೃಷ್ಣನಿಗೆ ಪೂಜಾರಿಯ ಕೆಲಸ, ಜೀವನವನ್ನು ಸಂಪಾದಿಸುವ ಅಥವಾ ಎಂದಿಗೋ ಮುಂದಕ್ಕೆ ಯಾವುದೋ

ಬೇರೆಯ ಒಳ್ಳೆಯದನ್ನು ಪಡೆಯುವ, ಉದ್ಯೋಗವಾಗಲಿಲ್ಲ. ಪೂಜಾರಿತನ ಇವನ ಪಾಲಿಗೆ ಸಾಧನದ ಮಾರ್ಗವಾಯಿತು.

ನಿಲುವಿನಲ್ಲಿ ವ್ಯತ್ಯಾಸವಿದ್ದಂತೆ ರಾಮಕೃಷ್ಣನ ಪೂಜಾ ಪದ್ಧತಿಯಲ್ಲಿಯೂ ವ್ಯತ್ಯಾಸವಿದ್ದಿತು. ಅವನ ಪೂಜೆಗೆ ಹೊತ್ತುಗೊತ್ತಿನ ನಿಯಮವಿರಲಿಲ್ಲ. ಪೂಜೆಯ ಉಪಸ್ಕರಗಳೊಡನೆ ಮೂರ್ತಿಯ ಎದುರಿಗೆ ಕುಳಿತು ಅವನು ನಿಶ್ಚೇಷ್ಟನಾಗಿ ಧ್ಯಾನದಲ್ಲಿ ಮುಳುಗುತ್ತಿದ್ದನು. ದೇವಿಗೆ ಅರ್ಪಿಸುವುದಕ್ಕೆಂದು ಮೊದಲು ಕಣ್ಣಿಗೆ ತಲೆಗೆ ಒತ್ತಿಕೊಂಡ ಹೂವನ್ನು ತಲೆಯ ಮೇಲೆಯೇ ಇಟ್ಟುಕೊಂಡು ಮೈಮರೆಯುವನು. 'ನೀನು ನನಗೆ ದರ್ಶನವನ್ನು ಕೊಡು' ಎಂದು ಬೇಡುತ್ತ ತಾಯ ಕಾಲ ಮೇಲೆ ತಲೆಯನ್ನಿಟ್ಟು ಬಿಕ್ಕಿಬಿಕ್ಕಿ ಅಳುವನು. ಮೂರ್ತಿಯನ್ನು ಪ್ರತ್ಯಕ್ಷ ದೈವವೆಂದೇ ಭಾವಿಸಿ, ತಾಯಿಗೆ ಉಪಚಾರಮಾಡಿ ಪೂಜಿಸುವನು. ಮೊದಮೊದಲಲ್ಲಿ ಇವನ ವಿಚಿತ್ರವಾದ ಪೂಜಾಕ್ರಮವನ್ನು ನೋಡಿ ಜನರು ವಿಸ್ಮಯಗೊಂಡರು. ಕೆಲವರಿಗೆ ಇದು ತಪ್ಪೆಂದೇ ತೋರಿತು; ಅವರು ಧರ್ಮಕರ್ತರಿಗೆ ಚಾಡಿಹೇಳಿದರು. ರಾಣಿಯೂ ಅಳಿಯನೂ ಬಂದು ಈ ಪೂಜೆಯ ಕ್ರಮವನ್ನು ನೋಡಿದರು. ಹೊಸ ಅರ್ಚಕನ ಪದ್ಧತಿ ಶಾಸ್ತ್ರದ ಪ್ರಕಾರ ಇಲ್ಲದಿದ್ದರೂ ತಪ್ಪಲ್ಲವೆಂದು ಅವರಿಗೆ ತೋರಿತು. ಅವರು ಚಾಡಿ ಹೇಳಿದವರಿಗೆ, ಅವನಿಗೆ ಇಷ್ಟಬಂದಂತೆ ಪೂಜೆಮಾಡಲಿ ಸುಮ್ಮನೆ ಇರಿ, ಎಂದು ಅಪ್ಪಣೆಮಾಡಿದರು. ಅರ್ಚಕನಿಗೆ ಸಾಧನೆಗೆ ಸಂಪೂರ್ಣ ಅವಕಾಶ ದೊರೆಯಿತು. ದೇವಿಯನ್ನು ಪ್ರತ್ಯಕ್ಷಮಾಡಿಕೊಳ್ಳಬೇಕೆಂಬ ಪ್ರಯತ್ನದಲ್ಲಿ ಅವನು ಉನ್ಮತ್ತನಾದನು. ದೇವಿಯಾದರೂ ಇವನನ್ನು ಸಂದೇಹದಲ್ಲಿ ಬಿಡಲಿಲ್ಲ; ಇವನ ಮನಸ್ಸಿನ ಯೋಚನೆ ತನಗೆ ತಿಳಿದಿರುವುದನ್ನೂ ತಾನು ಅದಕ್ಕೆ ಪ್ರತಿಯಾಗಿ ಉತ್ತರಕೊಡುತ್ತಿರುವುದನ್ನೂ ಅನೇಕ ವಿಧದಿಂದ ಸೂಚಿಸಿದಳು. ಇದೇನು ಬರಿಯ ವಿಗ್ರಹವೇ, ಇಲ್ಲವೆ ನಿಜವಾಗಿ ಕಾಳಿಕಾ ಮಾತೆಯೇ, ಎಂದು ಇವನು ಒಂದು ಸಲ ಮೂರ್ತಿಯ ಮೂಗಿನ ಬಳಿ ಒಂದು ದಾರವನ್ನು ಹಿಡಿದನಂತೆ. ಎದುರಿಗಿರುವುದು ಬರಿಯ ವಿಗ್ರಹವಲ್ಲದೆ ನಿಜವಾಗಿಯೂ ದೇವಿಯಾದರೆ ಅವಳ ಶ್ವಾಸದಿಂದ ದಾರ ಆಡಬೇಕು ಎಂದು ಇವನ ಯೋಚನೆ. ದಾರ ಮೂರ್ತಿಯ ಶ್ವಾಸದಿಂದ ಅಲುಗಿತು.

ನಂಬಿಕೆ ಕಡಮೆಯಾದ ನಮಗೆ ಇದು ಬರಿಯ ಕತೆ ಎಂದು ಕಾಣುವುದು; ಆದರೆ ನಂಬಿದ ಭಕ್ತನಿಗೆ ಆ ನೂಲು ಆಡಿದ್ದೇನೂ ಆಶ್ಚರ್ಯವಲ್ಲ. ಇಂಥ ಸಂದರ್ಭದಲ್ಲಿ ಏನು ನಡೆಯಿತೆನ್ನುವುದು ಮುಖ್ಯವಲ್ಲ; ಏನು ಕಂಡಿತು ಎನ್ನುವುದು ಮುಖ್ಯ. ಈ ನಡವಳಿಕೆ ಸಂಭವಿಸಿದ್ದು ಒಬ್ಬ ವ್ಯಕ್ತಿಗೆ, ಆ ಪೂಜಾರಿಗೆ. ಅವನು ಅನುಭವಿಸಿದ್ದನ್ನು ಅಲ್ಲವೆನ್ನುವುದಕ್ಕೆ ನಮಗೆ ಅಧಿಕಾರವಿಲ್ಲ. ಹೀಗೆ ವಿಚಿತ್ರವಾದ ರೀತಿಯಿಂದ ಅನನ್ಯ ಸಾಧಾರಣವಾದ ವಿಶ್ವಾಸದಿಂದ ದೇವಿಯನ್ನು ಪೂಜಿಸುತ್ತ ಅವಳನ್ನು ಪ್ರತ್ಯಕ್ಷಪಡಿಸಿಕೊಳ್ಳುವ ಯತ್ನದಲ್ಲಿ ರಾಮಕೃಷ್ಣನು ಹಲವು ವರ್ಷಗಳನ್ನು ಕಳೆದನು.

ದೇವಿ ಪ್ರತ್ಯಕ್ಷಳಾಗಲಿಲ್ಲ. ಪ್ರತ್ಯಕ್ಷ ಮಾಡಿಕೊಳ್ಳುವ ಹಂಬಲು ಪ್ರಬಲವಾಗಿ ಇವನು ಒಂದು ಸಲ ಜೀವವನ್ನು ತೆಗೆದುಕೊಳ್ಳುವುದೆಂದು ಯೋಚನೆ ಮಾಡಿದನು. ಆಲಯದಲ್ಲಿ ಗೋಡೆಗೆ ಒಂದು ಕತ್ತಿಯನ್ನು ನೇತುಹಾಕಿತ್ತು. ಅದರಿಂದ ಇರಿದುಕೊಳ್ಳಬೇಕೆಂದು ಇವನು ಅದನ್ನು ಕೈಗೆ ತೆಗೆದುಕೊಂಡನು. ಉತ್ತರಕ್ಷಣದಲ್ಲಿ ಸಾಧಕನಿಗೆ ಪ್ರಜ್ಞೆತಪ್ಪಿತು. ಅವನು ಬಹಳ ಹೊತ್ತು ಮೈಮರೆತು ಬಿದ್ದಿದ್ದು ಆಮೇಲೆ ಎಚ್ಚತ್ತನು. ಆಗ ಆದ ಅನುಭವವನ್ನು ಆಮೇಲೆ ವರ್ಣಿಸಿದ್ದರಲ್ಲಿ, ಅಷ್ಟು ಕಾಲವೂ ಇವನ ಜೀವ ಒಂದು ಆನಂದಸಾಗರದ ಮಹದಾವರ್ತದಲ್ಲಿ ಸಿಕ್ಕಿ ಆತ್ಮದ ಅಂತರಾಳದಲ್ಲಿ ಮುಳುಗಿಹೋಗಿದ್ದಿತೆಂದು ಜನರಿಗೆ ತಿಳಿಯಿತು. ಗೋಡೆ, ನೆಲ, ಬಾಗಿಲು, ಚಾವಣಿ, ಎಲ್ಲವೂ ದೃಷ್ಟಿಯಿಂದ ದೂರವಾಯಿತು. ಜೀವಕ್ಕೆ ಯಾವುದೂ ಗೋಚರವಿಲ್ಲ. ಅನಂತವಾದ ಅಪಾರವಾದ ಜ್ಯೋತಿರ್ಮಯವಾದ ಚಿದಂಬುಧಿ ಒಂದು: ಅದರಲ್ಲಿ ಓಲಾಡುವ ಅನುಭವ. ಅಂಬುಧಿಯ ತೆರೆಗಳು ನಾಲ್ಕು ಕಡೆಯಿಂದಲೂ ಹೊಳೆ ಹೊಳೆದು ಮುಂಬರಿದುವು; ಭೀಷಣ ಘೋಷದಿಂದ ಘೂರ್ಮಿಸುತ್ತ ಮುಂಚಿ ಮೇಲ್ವಾಯ್ದು ಇವನನ್ನು ನುಂಗಿಕೊಂಡವು. ಈ ಅವಸ್ಥೆಯಲ್ಲಿ ಇವನಿಗೆ ತಾಯ ದರ್ಶನ ಆಯಿತು. ಪ್ರಜ್ಞೆ ತಿರುಗಿದಾಗ ಇವನು 'ತಾಯೇ, ತಾಯೇ' ಎನ್ನುತ್ತ ದೇವಿಯನ್ನು ಕೂಗುತ್ತ ಎಚ್ಚತ್ತನು. ಇದರಿಂದಾಚೆಗೆ ಇವನಿಗೆ ಆಗಾಗ ತಾಯನ್ನು ಕಂಡಂತೆ ಭಾಸವಾಗುತ್ತಿದ್ದಿತು. ಒಂದು ಸಲ ಅವಳು ರಾತ್ರಿಯಲ್ಲಿ ಪ್ರಪಂಚವೆಲ್ಲ ನಿದ್ರಿಸುತ್ತಿರುವ ವೇಳೆ ಎದ್ದು ತನ್ನ ಮಂದಿರದ ಬಿಸಿಲ

ಮಚ್ಚನ್ನೇರಿ ಗಂಗೆಯ ಮೇಲೆ ಬೀಸಿ ಬರುವ ತಂಗಾಳಿಗೆ ಮೈಗೊಟ್ಟು ಹೆರಳನ್ನು ಬಿಡಿಸಿ ಆರಿಸಿಕೊಳ್ಳುತ್ತಿರುವಂತೆ ಇವನಿಗೆ ಕಂಡಿತು. ತಾಯಿ ಮಚ್ಚಿಗೆ ಏರುವಾಗ, ಮಚ್ಚಿನಿಂದ ಇಳಿಯುವಾಗ. ನೂಪುರದ ಗೆಜ್ಜೆಯಿಂದಾದ ಸದ್ದೂ ಇವನಿಗೆ ಕೇಳಿಸಿತು. ಮರೆಯ ದೈವ ಇವನ ಹಠದ ಭಕ್ತಿಗಾಗಿ ಆಕಾರವನ್ನು ಪಡೆದು ಎದುರಿಗೆ ನಡೆಯಿತು. ಭವತಾರಿಣೀ ಮಾತೆ ಪ್ರಸನ್ನಳಾಗಿ ಪೂಜಾರಿಗಾಗಿ ವ್ಯಕ್ತಿಯಾದಳು; ಕಾತರವಾದ ಜೀವಕ್ಕೆ ಧೈರ್ಯ ಬರುವಂತೆ ಮಾಡಿದಳು. ಅರ್ಚಕನು ಅವಳನ್ನು ನೋಡಿದನು; ಅವಳನ್ನು ಕರುಣಾಮಯಿ ಎಂದು ತಿಳಿದನು.

ಸಾಮಾನ್ಯ ಚೇತನಕ್ಕೆ ಇಷ್ಟರಿಂದ ತೃಪ್ತಿಯಾಗಬೇಕು. ಆದರೆ ರಾಮಕೃಷ್ಣನು ಸಾಮಾನ್ಯ ಚೇತನನಲ್ಲ. ದೇವಿಯ ಈ ವ್ಯಕ್ತ ಸಾನ್ನಿಧ್ಯ ಸದಾ ಕಾಲ ದೊರೆತ ಹೊರತು ಅವನಿಗೆ ಆಸೆ ತೀರುವಂತೆ ಇರಲಿಲ್ಲ. ಆದಕಾರಣ ಅವನು ಸಾಧನೆಯನ್ನು ಮುಂದುವರಿಸಿದನು. ದಕ್ಷಿಣೇಶ್ವರದ ಆ ಪ್ರದೇಶ ಆಗಿನ ಕಾಲದಲ್ಲಿ ದಟ್ಟವಾದ ಒಂದು ಕಾಡಾಗಿದ್ದಿತು. ದೇವಾಲಯದ ಸ್ವಲ್ಪ ದೂರದಲ್ಲಿಯೇ ಒಂದು ಶ್ಮಶಾನ. ರಾಮಕೃಷ್ಣನು ಆಲಯದ ಪಕ್ಕದ ಈ ಅರಣ್ಯವನ್ನು ಹೊಕ್ಕು ಹಗಲೂ ರಾತ್ರಿ ಧ್ಯಾನದಲ್ಲಿ ಕುಳಿತಿರುವನು. ಮೊದಲಲ್ಲಿ ಇದರ ಅಭಿಪ್ರಾಯವೇನೆಂದು ತಿಳಿಯದೆ, ಇವನ ಜೊತೆಗಿದ್ದ ಅಳಿಯ ಹೃದಯರಾಮನು ತನ್ನ ಮಾವನಿಗೆ ತಿಳಿಯುವಂತೆ ಒಂದೆರಡು ಸಲ ಹೋಗಿ ಅವನನ್ನು ನೋಡಿದನು. ರಾಮಕೃಷ್ಣನು ಬಟ್ಟೆಯನ್ನೂ ಜನಿವಾರವನ್ನೂ ಒಂದುಕಡೆಗಿಟ್ಟು ಧ್ಯಾನದಲ್ಲಿರುವುದು ಅವನಿಗೆ ಕಂಡಿತು. ಅವನು ರಾಮಕೃಷ್ಣನನ್ನು ಎಬ್ಬಿಸಿ ಇದೇನು ಹೀಗೆ ಮಾಡುತ್ತಿದೀಯೆ ಎಂದು ಕೇಳಿದನು. ಕುಲದ ಹೆಮ್ಮೆ, ಮೆಯ್ಯ ನಾಚಿಕೆ, ಇವು ಪ್ರಪಂಚದಲ್ಲಿ ವಾಡಿಕೆಯಾದ ಭೇದಗಳ ಅರಿವಿನಿಂದ ಹುಟ್ಟುತ್ತವೆ, ಮನುಷ್ಯನು ಇವುಗಳಿಂದ ಬಿಡಿಸಿಕೊಳ್ಳಬೇಕು, ಅದೇ ಜ್ಞಾನ, ಅದನ್ನು ಪಡೆಯುವುದಕ್ಕಾಗಿ ತಾನು ಹೀಗೆ ಮಾಡುತ್ತಿದೇನೆ, ಎಂದು ರಾಮಕೃಷ್ಣನು ಅವನಿಗೆ ತಿಳಿಸಿದನು. ಸಾಧನದ ಈ ಕಾಲದಲ್ಲಿ ರಾಮಕೃಷ್ಣನಿಗೆ ತನ್ನೊಳಗಿಂದ ತಮೋಮಯಮೂರ್ತಿ ಒಂದು ಮೊದಲು ಹೊರಟಂತೆ, ಅದರ ಹಿಂದೆ ಒಂದು ತೇಜೋಮಯ ಮೂರ್ತಿ ಹೊರಟು ಮೊದಲಲ್ಲಿ ಹೊರಟ ಕರಿಯ

ಆಕೃತಿಯನ್ನು ತ್ರಿಶೂಲದಿಂದ ಇರಿದುಕೊಂದಂತೆ, ಕಾಣುತ್ತಿದ್ದಿತಂತೆ. ಆ ಕರಿಯ ಮೂರ್ತಿ ಪಾಪಪುರುಷನೆಂದೂ ಆ ತ್ರಿಶೂಲಧಾರಿ ದೈವೀಶಕ್ತಿಯೆಂದೂ ಅವನು ಆಮೇಲೆ ಬಿಡಿಸಿ ಹೇಳಿದನು. ಇಷ್ಟೆಲ್ಲ ಸಾಧನ ಸುಲಭವಲ್ಲ. ಸಾಮಾನ್ಯ ಜನರಿಗೆ ಭಾವನಾ ಪ್ರಪಂಚದಲ್ಲಿ ಹರಿದಾಡುವ ಸಂಕೇತ ತತ್ವಗಳು ಈ ಸಾಧಕನಿಗೆ ವ್ಯಕ್ತಿಯುಳ್ಳ ನಿಜವಾದ ಮೂರ್ತಿಗಳಾದುವು. ಇವನ್ನು ಎರಕ ಹುಯ್ಯುವುದರಲ್ಲಿ ಇವನ ಚೇತನ ಕರಗಿಹೋಯಿತು. ಇದರಿಂದ ಇವನ ದೇಹದಲ್ಲಿ ಶಕ್ತಿ ಕಡಮೆಯಾಯಿತು. ಸ್ವಲ್ಪ ಕಾಲದಲ್ಲೇ ಅದರಲ್ಲಿ ರೋಗಗಳು ಮುಖವಿಟ್ಟುವು. ಅನುಭವದ ಉದ್ವೇಗದಿಂದ ಅವನ ಮನಸ್ಸು ಕೂಡ ಅರ್ಧ ಮೂರುಪಾಲು ಹುಚ್ಚು ಹಿಡಿದಂತಾಯಿತು.

ಸುತ್ತ ಇದ್ದ ಜನರು ಇವನ ಈ ಅವಸ್ಥೆಯನ್ನು ಹುಚ್ಚು ಎಂದು ಕರೆಯುವುದಕ್ಕೆ ಹಿಂತೆಗೆಯಲಿಲ್ಲ. ಇದೆಲ್ಲ ಇಲ್ಲಿ ಹೇಳುವಷ್ಟು ಬೇಗನೆ ನಡೆದ ಸಂಗತಿಯಲ್ಲ. ಇದು ಹುಚ್ಚಲ್ಲವೆನ್ನುವುದಕ್ಕೆ ನಾಲ್ಕು ವರ್ಷದಲ್ಲಿ ಹತ್ತು ನಿದರ್ಶನ ದೊರೆಯಬಹುದಾಗಿದ್ದಿತು. ಆದರೆ ಆ ನಿದರ್ಶನಗಳನ್ನು ಆರಿಸಿ ಪೋಣಿಸಿ ಸಾಧಕನ ದಿನ ದಿನದ ಉನ್ಮಾದದ ಅವಸ್ಥೆಯನ್ನು ಉನ್ಮಾದವಲ್ಲ ಸಾಧನೆ ಎಂದು ಯಾರು ತಿಳಿಯಬೇಕು? ಹೇಗೆ ಹೇಳಬೇಕು? ಆದರೆ ಮೊತ್ತದಲ್ಲಿ ಸಾಧಕನಿಗೆ ತನ್ನ ದಾರಿಯ ವಿಷಯದಲ್ಲಿ ನಂಬಿಕೆ ತಪ್ಪಲಿಲ್ಲ. ಇಷ್ಟೇ ಅಲ್ಲದೆ ಅವನ ಸೇವೆಗೆ ನಿಂತ ಅಳಿಯ ಹೃದಯನೂ ಅವನಲ್ಲಿ ಅಪನಂಬಿಕೆ ಪಡಲಿಲ್ಲ; ದೇವಾಲಯದ ಧರ್ಮಕರ್ತರೂ ಸಂದೇಹಪಡಲಿಲ್ಲ. ಆದರೆ ಎಷ್ಟೇ ಆತ್ಮಪ್ರತ್ಯಯವಿದ್ದರೂ ರಾಮಕೃಷ್ಣನೇ ಒಂದೊಂದು ಸಲ ಇದು ಏನು ಬರಿಯ ಅವಿವೇಕವೋ ಎಂದುಕೊಂಡದ್ದೂ ಉಂಟು. ಇಂಥ ಸಂದರ್ಭದಲ್ಲಿ ಯಾವುದೋ ಒಂದು ಸನ್ನೆಯಿಂದ ದೇವಿ ಸಂದೇಹವನ್ನು ನಿವಾರಿಸುವಳು. ಒಂದು ದಿನ ರಾಮಕೃಷ್ಣನು, 'ಈ ನನ್ನ ಅವಸ್ಥೆಯನ್ನು ಎಲ್ಲರೂ ಹುಚ್ಚು ಎನ್ನುತ್ತಿದಾರೆ. ನಾನೋ ನಿನ್ನ ದರ್ಶನಕ್ಕಾಗಿ ಹಂಬಲಿಸುತ್ತಿದೇನೆ. ರಾಣಿ ರಾಸಮಣಿಯ ಹೆಣ್ಣು ಮಕ್ಕಳು ಬಂದು ನನಗೆ ಧೈರ್ಯ ಹೇಳಿದರೆ, ಇದು ಹುಚ್ಚಲ್ಲ ನಿನ್ನ ಇಚ್ಛೆ ಎಂದು ನಂಬಿಯೇನು,' ಎಂದುಕೊಂಡನಂತೆ. ರಾಣಿಯ ಮಕ್ಕಳು ಕೊಂಚದರಲ್ಲಿ ಹೊರಕ್ಕೆ ಬರುವವರಲ್ಲ, ಬಂದರೂ ಇವನಿಗೆ ಕಾಣುವವರಲ್ಲ,

ಇವನೊಂದಿಗೆ ಮಾತನಾಡುವವರಲ್ಲ. ಆದ್ದರಿಂದ ಅವರು ಬಂದು ಇವನಿಗೆ ಧೈರ್ಯ ಹೇಳುವುದು ಅಸಂಭವವಾದ ಮಾತು. ಸಾಧಕನು ಈ ಯೋಚನೆ ಮಾಡಿದ್ದೂ ಅದು ಅಸಂಭವವೆಂಬ ಕಾರಣದಿಂದಲೇ. ಆದರೆ ಅಂದಿನ ಮಧ್ಯಾಹ್ನ ಇವನು ಕಾಡಿನ ಒಳಗಡೆ ತನ್ನ ವಾಡಿಕೆಯ ಮರದ ಕೆಳಗೆ ಕುಳಿತಿರುವಾಗ ರಾಣಿಯ ಹೆಣ್ಣುಮಕ್ಕಳಿಬ್ಬರೂ ದೇವಾಲಯಕ್ಕೆ ಬಂದ ರಂತೆ. ಅಲ್ಲಿ ಅರ್ಚಕನ ವಿಚಾರವನ್ನು ತಿಳಿದು ತಾವೇ ಅವನಿರುವ ಕಡೆಗೆ ಬಂದು, 'ನೀವು ಚಿಂತೆಮಾಡಬೇಡಿ. ತಾಯಿ ನಿಮಗೆ ಒಳ್ಳೆಯದನ್ನುಮಾಡು ತ್ತಾಳೆ,' ಎಂದರಂತೆ. ಇದು ಒಂದು ಪವಾಡವೆಂದು ನಾವು ನೆನೆಯ ಬೇಕಾದದಿಲ್ಲ. ರಾಣಿಯ ಮಕ್ಕಳಿಗೆ ಅಂದು ದೇವಾಲಯವನ್ನು ನೋಡ ಬೇಕೆಂದು ಆಸೆಯಾಯಿತಂತೆ, ಅವರು ಬಂದರು. ಆಮೇಲೆ ನಡೆದುದೆಲ್ಲಾ ಆ ಸಂದರ್ಭದಲ್ಲಿ ಆಗಬಹುದಾದ ಮಾತು. ಆದರೆ ಸಾಧಕನಿಗೆ ಇಂಥ ಸಂಗತಿಯಿಂದ ಧೈರ್ಯ ಹುಟ್ಟುತ್ತದೆ. ಇನ್ನೊಂದು ಸಲ ದೇವಾಲಯದ ಹೊರಗಣ ಹೂವಿನ ತೋಟಕ್ಕೆ ಒಂದು ಬೇಲಿಯನ್ನು ಹಾಕಬೇಕೆಂದು ಉದ್ದೇಶಿಸಿ ಇವನು ಗಳುವಿಗೆ ಎಲ್ಲಿ ಹೋಗುವುದು, ಯಾರನ್ನು ಕೇಳುವುದು, ಎಂದು ಯೋಚಿಸುತ್ತಿರುವಲ್ಲಿ ಆ ದಿನವೋ ಮಾರನೆಯದಿನವೋ ಗಳುವಿನ ಒಂದು ಕಟ್ಟು, ಅದನ್ನು ಕಟ್ಟಿದ ಹಗ್ಗದೊಡನೆ, ಒಳಗೆ ಒಂದು ಚೂರಿ ಯೊಡನೆ, ಗಂಗಾನದಿಯ ಅಲೆಯಲ್ಲಿ ತೇಲಿ ಬಂದು ತೋಟದ ಬಳಿ ಬಿದ್ದಿತು. ಮತ್ತೊಂದು ಸಲ ದೇವರ ಶಕ್ತಿಯ ವಿಷಯ ಮಾತನಾಡುತ್ತಾ ಮಥುರಬಾಬು, ದೇವರಾದರೂ ನಿಯಮವನ್ನು ಅನುಸರಿಸಬೇಕು, ಈ ಬಿಳಿಯ ಗುಲಾಬಿ ಗಿಡದಲ್ಲಿ ಕೆಂಪು ಹೂವಾಗುತ್ತದೆಯೆ, ಎಂದು ಒಂದು ಗಿಡವನ್ನು ತೋರಿಸಿದನಂತೆ. 'ದೇವರು ನಿಯಮವನ್ನು ಮಾಡು ತ್ತಾನೆ. ಅದು ದೇವರಿಗೆ ಒಂದು ಅಡ್ಡಿಯಾಗುವುದಿಲ್ಲ. ಈ ಗಿಡದಲ್ಲಿ ಕೆಂಪು ಹೂ ಬಿಡುವುದು ಅಸಾಧ್ಯವಲ್ಲ,' ಎಂದು ರಾಮಕೃಷ್ಣನು ಹೇಳಿದ ನಂತೆ. ಇದಾದ ಒಂದೆರಡು ದಿನದಲ್ಲಿ ಆ ಗಿಡದಲ್ಲಿ ಒಂದೇ ಕಡ್ಡಿಯಲ್ಲಿ ಬಿಟ್ಟ ಗುಲಾಬಿ ಹೂವಿನಲ್ಲಿ ಒಂದು ಬಿಳಿಯದು ಒಂದು ಕೆಂಪಿನದು ಇದ್ದವು. ಮಥುರಾನಾಥನು ಅದನ್ನು ನೋಡಿ ಆಶ್ಚರ್ಯಪಟ್ಟನು; ರಾಮಕೃಷ್ಣನಿಗೂ ಸಂತೋಷವಾಯಿತು. ಈ ರೀತಿಯಲ್ಲಿ ಸಾಧಕನಿಗೆ ಪ್ರತ್ಯಯ ಹೆಚ್ಚುತ್ತಾ ಸಾಧನವು ನಿರಂತರವಾಗಿ ಮುಂದುವರಿಯಿತು.

ಅತ್ತ ಕಾಮಾರ್‌ಪುಕ್ಕುರದಲ್ಲಿ ತಾಯಿ ಚಂದ್ರಮಣಿದೇವಿಗೆ ಮಗನ ಅನಾರೋಗ್ಯದ ಸುದ್ದಿ ಮುಟ್ಟಿ ಬಹಳ ಭಯವನ್ನುಂಟುಮಾಡಿತು. ಆಕೆ ಮಗನಿಗೆ ಊರಿಗೆ ಬರಬೇಕೆಂದು ಹೇಳಿಕಳುಹಿಸಿದಳು. ರಾಮಕೃಷ್ಣನು ಅಲ್ಲಿಗೆ ಹೋದನು. ಆದರೆ ಸ್ಥಳ ಅವನಿಗೆ ಎಂದಿನಂತೆ ಸೊಗಸಲಿಲ್ಲ; ಜನ ಮೊದಲಿನಂತೆ ಬೇಕೆನ್ನಿಸಲಿಲ್ಲ. ಅಲ್ಲಿಯೂ ಅವನು ಶ್ಮಶಾನದಲ್ಲಿರುತ್ತ ಧ್ಯಾನದಲ್ಲಿ ಕಾಲಕಳೆಯುತ್ತಿದ್ದನು. ಆದರೂ ಬಾಲ್ಯದಲ್ಲಿ ನೋಡಿದ್ದ ತಾಣ ವೆಂಬ ಕಾರಣದಿಂದಲೋ, ಹೆತ್ತ ತಾಯ ಸಾನ್ನಿಧ್ಯದ ತಂಪಿನಿಂದಲೋ, ಅವನ ದೇಹದ ಕ್ಷೋಭೆ ಸ್ವಲ್ಪ ಕಡಮೆಯಾಯಿತು. ರಾಮಕೃಷ್ಣನಿಗೆ ಆಗ್ಗೆ ಸುಮಾರು ಇಪ್ಪತ್ತಮೂರು ವರ್ಷ ವಯಸ್ಸು. ಪ್ರಾಯ ಬಂದಾಗ ಹೆಂಡತಿ ಇಲ್ಲದಿದ್ದರೆ ಬುದ್ಧಿ ಭ್ರಮಿಸಬಹುದೆಂದು ಜನರಲ್ಲಿ ಒಂದು ತಿಳುವಳಿಕೆ. ಹೀಗೆ ಬುದ್ಧಿ ಭ್ರಮಿಸಿರುವ ತರುಣರಿಗೆ ಮದುವೆ ಮಾಡಿದರೆ ಸಮಾಧಾನವುಂಟಾಗುವುದೆಂದು ನಂಬಿಕೆಯಿದೆ. ಮದುವೆ ಮಾಡಿದರೆ ಇವನ ಬುದ್ಧಿ ಸ್ತಿಮಿತಕ್ಕೆ ಬರುವುದೇನೋ ಎಂದು ಚಂದ್ರಾದೇವಿ ಹಿರಿಯ ಮಗನೊಂದಿಗೆ ಆಲೋಚಿಸಿ ಹೆಣ್ಣನ್ನು ಹುಡುಕಿಸಿದಳು. ಈ ಬಡವರ ಮನೆಗೆ ಹೆಣ್ಣು ಕೊಡುವವರಿರಲಿಲ್ಲ. ಕೊಡಲು ಸಮ್ಮತಿಸುವವರು ಶುಲ್ಕ ವನ್ನು ಕೇಳುವರು; ಅದನ್ನು ತೆರಲು ಇವರಿಗೆ ಉಪಪತ್ತಿಯಿಲ್ಲ. ಈ ಮಧ್ಯೆ ಇವರು ಮಾಡುತ್ತಿರುವ ಪ್ರಯತ್ನ ರಾಮಕೃಷ್ಣನಿಗೆ ತಿಳಿಯಿತು. ಅವನು ಸಮೀಪದ ಗ್ರಾಮದ ಒಬ್ಬರ ಹೆಸರನ್ನು ಹೇಳಿ ಅವರ ಮಗಳು ತನಗೆ ಉದ್ದಿಷ್ಟಳಾದ ಗೃಹಿಣಿ ಎಂದೂ ಅವರಲ್ಲಿ ಹೋಗಿ ಸಂಬಂಧದ ಮಾತನ್ನು ಆಡುವುದೆಂದೂ ತಾಯಿಗೆ ತಿಳಿಸಿದನು. ಈ ಸಂಬಂಧ ಸರಿಹೋಯಿತು; ರಾಮಕೃಷ್ಣನಿಗೆ ಆ ಹುಡುಗಿಯನ್ನು ಕೊಟ್ಟು ಮದುವೆ ಆಯಿತು. ಹುಡುಗಿಗೆ ಆಗ ಐದು ವರ್ಷ ವಯಸ್ಸು; ಅವಳ ಹೆಸರು ಶಾರದಾ. ಹುಡುಗಿಗೆ ಅತ್ತೆ ಮದುವೆಯ ದಿನ ಅವರಿವರಿಂದ ಕೇಳಿ ಎರವಲು ತಂದು ಕೆಲವು ಒಡವೆಗಳನ್ನು ಹಾಕಿದ್ದಳು. ಮದುವೆಯ ಉತ್ಸವವೆಲ್ಲ ಮುಗಿದ ಮೇಲೆ ಅವನ್ನು ಹಿಂದಕ್ಕೆ ಕೊಡೆಂದು ಹೇಗೆ ಕೇಳುವುದೆಂದು ಆಕೆಗೆ ಸಂಕೋಚ ವಾಯಿತು. ರಾಮಕೃಷ್ಣನು ಹೆಂಡತಿ ಮಲಗಿದ್ದ ವೇಳೆ ಆ ಒಡವೆಯನ್ನೆಲ್ಲ ತೆಗೆದು ತಾಯ ಕೈಗೆ ಕೊಟ್ಟನು. ಆಕೆ ಅವನ್ನು ಎರವಲು ಕೊಟ್ಟಿದ್ದವರಿಗೆ

ಹಿಂದಕ್ಕೆ ಕೊಟ್ಟಳು. ಇದರಿಂದ ಸಂಬಂಧಿಗಳೊಡನೆ ಸ್ವಲ್ಪ ಅಸಮಾಧಾನ ವಾಯಿತಂತೆ. ಅವರು ಹೆಣ್ಣನ್ನು ಹಿಂದಕ್ಕೆ ಕರೆದುಕೊಂಡು ಹೋದರು. ಹೀಗಾಯಿತೇ ಎಂದು ತಾಯಿ ಖಿನ್ನಳಾಗಿರಲು ರಾಮಕೃಷ್ಣನು ನಗುತ್ತ, 'ಇದಕ್ಕೇನು ಯೋಚನೆ ಮಾಡುತ್ತೀಯೆ, ಮದುವೆಯನ್ನು ಅವರು ಸುಳ್ಳು ಏನ್ನುವಂತಿಲ್ಲವಲ್ಲ, ಸುಮ್ಮನಿರು' ಎಂದನಂತೆ. ಇದು ಭರತವರ್ಷದ ಪ್ರಾಚೀನಕರ್ಮ: ಅವತಾರ ಪುರುಷನಿಗಾದರೂ ಮದುವೆಯ ಸಂದರ್ಭ ವಲ್ಲಿ ಸಂಬಂಧಿಯೊಂದಿಗೆ ಒಡವೆಯ ಜಗಳ ತಪ್ಪಿದ್ದಲ್ಲ.

ಇದಾದ ಕೆಲವು ಕಾಲದಮೇಲೆ ರಾಮಕೃಷ್ಣನು ದಕ್ಷಿಣೇಶ್ವರಕ್ಕೆ ಹಿಂದಿರುಗಿದನು; ಮತ್ತೆ ಸಾಧನೆಯನ್ನು ಆರಂಭಮಾಡಿದನು. ಪ್ರತಿಷ್ಠೆ ಯಾದ ಮೊದಲು ಈ ಐದಾರು ವರ್ಷದಲ್ಲಿ ದಕ್ಷಿಣೇಶ್ವರವು ಅನೇಕ ಸಾಧು ಗಳಿಗೆ ಬರುವ ಹೋಗುವ ಸ್ಥಳವಾಗಿ ಪ್ರಸಿದ್ಧವಾಗಿದ್ದಿತು. ರಾಣಿ ರಾಸಮಣಿ ಹಲವುಸಲ ಕಾಶಿಗೆ ಹೋಗಲು ಯತ್ನ ಮಾಡಿ ಅನುಕೂಲಿಸದೆ ಪೇಚಾಡುತ್ತಿರುವಲ್ಲಿ, 'ನೀನಿರುವಲ್ಲೇ ಗಂಗಾತೀರದಲ್ಲಿ ಆಲಯವನ್ನು ನಿರ್ಮಿಸು, ನಾನು ಅಲ್ಲಿ ಬರುತ್ತೇನೆ,' ಎಂದು ವಿಶ್ವೇಶ್ವರನು ಹೇಳಿದಂತೆ ಸ್ವಪ್ನವಾಗಿ ಆವಳು ದಕ್ಷಿಣೇಶ್ವರದ ಆಲಯವನ್ನು ಕಟ್ಟಿಸಿದ್ದಳು. ಆ ಆರು ವರುಷದಲ್ಲಿಯೇ ವಿಶ್ವೇಶ್ವರನು ಅವಳಲ್ಲಿ ನಿಜವಾಗಿ ಅನುಗ್ರಹ ಮಾಡಿದ್ದ ನೆನ್ನುವುದು ವ್ಯಕ್ತವಾಯಿತು. ಧರ್ಮಕರ್ತೆ ರಾಣಿ ಬಂದವರ ಭಿಕ್ಷೆಗೆ ಏರ್ಪಾಡುಮಾಡಿದ್ದಳು. ಆದದರಿಂದ ಬಂದವರು ಕೆಲವುದಿನ ನಿಲ್ಲುವರು. ಇದರಿಂದ ರಾಮಕೃಷ್ಣನಿಗೆ ಬಹುರೀತಿಯ ಸಾಧುಸಂತರ ಪರಿಚಯವಾಗು ವುದು ಸಾಧ್ಯವಾಯಿತು; ಇವನ ಸಾಧನ ವಿಶ್ವತೋಮುಖವಾಯಿತು. ಸನಾತನ ಧರ್ಮದಲ್ಲಿ ಭಕ್ತಿಯನ್ನು ಐದು ರೀತಿಯೆಂದು ವರ್ಣಿಸಿದಾರೆ: ಇವು ಜ್ಞಾನದಭಕ್ತಿ, ದಾಸ್ಯದಭಕ್ತಿ, ಸಖ್ಯದಭಕ್ತಿ, ವಾತ್ಸಲ್ಯದಭಕ್ತಿ, ಪ್ರೇಮದಭಕ್ತಿ. ಇದುವರೆಗೆ ರಾಮಕೃಷ್ಣನು ದೇವರ ಸ್ವರೂಪವನ್ನು ತಿಳಿಯುವ ಯತ್ನದಲ್ಲಿ ಜ್ಞಾನದಭಕ್ತಿಯನ್ನು ಅಭ್ಯಾಸಮಾಡಿದ್ದನು. ಈಗ ದಾಸ್ಯದ ಭಕ್ತಿಯನ್ನು ಅನುಷ್ಠಿಸುವುದಕ್ಕೆ ಹನುಮಂತನಂತೆ ವೇಷವನ್ನು ಹಾಕಿಕೊಂಡು ಮರವನ್ನೇರುತ್ತ ಹಣ್ಣುಹಂಪಲುಗಳನ್ನು ಕಡಿದು ತಿನ್ನುತ್ತ 'ರಘುವೀರ, ರಘುವೀರ' ಎಂದು ರಾಮನನ್ನು ಕರೆಯುತ್ತ ಕೆಲವು ಕಾಲ

ವನ್ನು ಕಳೆದನು. ಒಂದು ದಿನ ಇವನ ಎದುರಿಗೆ ಅನುಪಮ ಲಾವಣ್ಯದಿಂದ ಶೋಭಿಸುತ್ತಿದ್ದ ಸ್ತ್ರೀಮೂರ್ತಿಯೊಂದು ಕಂಡುಬಂದಿತಂತೆ. ಈಕೆ ಯಾರಿರಬಹುದೆಂದು ಸಾಧಕನು ಚಿಂತಿಸುತ್ತಿರಲು, ವಾನರ ಮೂರ್ತಿಯೊಂದು ಬಂದು ಅವಳ ಕಾಲಬಳಿ ನಿಂತಿತು. ಇದರಿಂದ ಸಾಧಕನಿಗೆ ಅವಳು ಸೀತೆ ಎಂದು ತಿಳಿಯಿತು. ಇವನು ಆಶ್ಚರ್ಯದಿಂದ, ಆನಂದದಿಂದ, ನೋಡುತ್ತಿರಲು ಮೂರ್ತಿ ಹತ್ತಿರ ಹತ್ತಿರ ಬಂದು ಇವನನ್ನು ಪ್ರವೇಶಿಸಿತು. ಇದು ಆದದ್ದು ನಿದ್ರೆಯ ಅವಸ್ಥೆಯುಲ್ಲಲ್ಲ, ಸಮಾಧಿಯಲ್ಲಲ್ಲ; ಎಚ್ಚೆತ್ತು ಕಣ್ಣು ತೆಗೆದಿದ್ದ ವೇಳೆಯಲ್ಲಿ. ದಕ್ಷಿಣೇಶ್ವರಕ್ಕೆ ಬಂದ ಒಬ್ಬ ಸಾಧು ರಾಮಚಂದ್ರನ ಬಾಲಕಾವಸ್ಥೆಯ ಉಪಾಸಕನು. ಅವನು ತನ್ನಲ್ಲಿದ್ದ ಒಂದು ಮೂರ್ತಿಯನ್ನು ಪೂಜಿಸಿ ರಾಮಲಾಲ ಎಂಬ ಬಾಲರಾಮನನ್ನು ಪ್ರತ್ಯಕ್ಷಮಾಡಿಕೊಂಡು ಅವನೊಂದಿಗೆ ಆಡುತ್ತ ಹಾಡುತ್ತ ಪ್ರೇಮವನ್ನು ಬೆಳಸಿಕೊಂಡಿದ್ದನು. ರಾಮಕೃಷ್ಣನು ಇದನ್ನು ತಿಳಿದು ತಾನೂ ರಾಮಲಾಲನೊಂದಿಗೆ ಸ್ನೇಹವನ್ನು ಮಾಡಿಕೊಂಡನು. ಬಾಲರಾಮನು ಆ ಸಾಧುವಿನಲ್ಲಿ ತೋರಿದ ಪ್ರೇಮಕ್ಕಿಂತ ರಾಮಕೃಷ್ಣನಲ್ಲಿ ಹೆಚ್ಚು ಪ್ರೇಮವನ್ನು ತೋರಿದನು. ಕೊನೆಗೆ ಆ ಸಾಧು. 'ರಾಮಲಾಲನಿಗೆ ನಿನ್ನಮೇಲೆ ಹೆಚ್ಚು ಪ್ರೀತಿಯಿದೆ, ಇನ್ನುಮೇಲೆ ಅವನನ್ನು ನೀನು ನೋಡಿಕೊ,' ಎಂದು ಅವನನ್ನು ರಾಮಕೃಷ್ಣನಲ್ಲಿ ಬಿಟ್ಟು ಹೊರಟುಹೋದನು. ರಾಮಕೃಷ್ಣನು ರಾಮಲಾಲನಿಗೆ ಮುಖ ತೊಳೆಯುತ್ತ, ಊಟಮಾಡಿಸುತ್ತ, ಹೇಳಿದ ಮಾತು ಕೇಳದಿದ್ದರೆ ಹೊಡೆಯುತ್ತ, ಕೌಸಲ್ಯೆಯಂತೆ ವಾತ್ಸಲ್ಯದಿಂದ ನಡೆದುಕೊಂಡನು. ಆಮೇಲೆ ತಾನು ರಾಧೆ ಎಂಬಂತೆ ಭಾವಿಸಿಕೊಂಡು ಒಂದೆರಡು ವರುಷ ಮಧುರಾನಾಥನ ಹೆಣ್ಣುಮಕ್ಕಳ ಮನೆಯಲ್ಲಿ ಸೇರಿ ಹೆಣ್ಣಂತೆ ದೇವರನ್ನು ಪೂಜಿಸಿ ಮಧುರಭಾವವನ್ನು ಅನುಷ್ಠಾನಮಾಡಿದನು; ರಾಧೆ ಕೃಷ್ಣನನ್ನು ಅಪೇಕ್ಷಿಸಿದ್ದು ತನ್ನ ಸುಖಕ್ಕಾಗಿ ಅಲ್ಲ, ಕೃಷ್ಣನ ಸುಖಕ್ಕಾಗಿ, ಎಂದು ಮನಗಂಡನು. ಮಧ್ಯೆ ಇವನಿಗೆ ಇತರ ರೀತಿಯ ಭಕ್ತಿಯೂ ಸಾಧನೆಗೆ ಬಂದಿತು.

ಹೀಗಿರುತ್ತ ಒಂದುದಿನ ದಕ್ಷಿಣೇಶ್ವರಕ್ಕೆ ಒಬ್ಬ ಸಂನ್ಯಾಸಿನಿ ಬಂದಳು. ಗುರುವಿನ ಚರಿತ್ರೆಯಲ್ಲಿ ಅವಳು ಭೈರವಿಬ್ರಾಹ್ಮಣಿ ಎಂದು ಪ್ರಸಿದ್ಧ

ಳಾಗಿದ್ದಾಳೆ. ಅವಳು ಕುಳಿತಿದ್ದ ದೋಣಿ ದಡಕ್ಕೆ ಬರುವ ಸಮಯದಲ್ಲಿ ರಾಮಕೃಷ್ಣನು ಆಲಯದ ಮುಂಭಾಗದಲ್ಲಿದ್ದನು ; ಅವಳು ದೋಣಿಯಿಂದ ಇಳಿಯುವ ವೇಳೆಗೆ ತಾನು ಒಳಕ್ಕೆ ಹೋಗಿ, ಅವಳನ್ನು ಕರೆದುಕೊಂಡು ಬಾ, ಎಂದು ಹೃದಯನನ್ನು ಕಳುಹಿಸಿದನು. ಬ್ರಾಹ್ಮಣಿ ಒಳಕ್ಕೆ ಬಂದವಳು ರಾಮಕೃಷ್ಣನನ್ನು ನೋಡಿ, 'ನಾನು ನಿನ್ನನ್ನು ಎಷ್ಟು ದಿನ ಹುಡುಕಿದೆ, ಈಗಲಾದರೂ ಸಿಕ್ಕಿದೆಯಲ್ಲ,' ಎಂದು ಬಹು ಪ್ರೀತಿಯಿಂದ ಸಂಬೋಧಿಸಿ ಮಾತನಾಡಿದಳು. ಅವನು ಕೂಡ ಅವಳನ್ನು ಬಹುಕಾಲದಿಂದ ಕಂಡಿದ್ದರೆ ಹೇಗೋ ಹಾಗೆ ಮಾತನಾಡಿಸಿ ಅವಳಿಗೆ ತನ್ನ ಸಾಧನೆಯ ವಿಷಯವನ್ನೆಲ್ಲ ಮಗು ತಾಯಿಗೆ ಹೇಳುವಂತೆ ವಿವರಿಸಿ ಹೇಳಿದನು. ತನ್ನನ್ನು ಜನರು ಹುಚ್ಚನೆಂದು ಹೇಳುವರೆಂದೂ ತಿಳಿಸಿದನು. ಬ್ರಾಹ್ಮಣಿ ಎಲ್ಲವನ್ನೂ ಕೇಳಿ ಧೈರ್ಯ ಹೇಳಿದಳು. 'ಭಕ್ತಿಯ ಉತ್ಕಟಾವಸ್ಥೆಯಲ್ಲಿ ಈ ಉನ್ಮಾದ ಸಹಜವಾದದ್ದು, ಹಿಂದೆ ಭಕ್ತರಿಗೆ ಹೀಗೆ ಆದದ್ದು ಗ್ರಂಥಗಳಲ್ಲಿ ಉಕ್ತವಾಗಿದೆ, ನೀನು ಚಿಂತಿಸಬೇಡ,' ಎಂದಳು. ಬ್ರಾಹ್ಮಣಿ ಕೆಲವು ದಿನ ಅಲ್ಲಿದ್ದು ಆಮೇಲೆ ಸ್ವಲ್ಪ ದೂರದಲ್ಲಿ ಒಂದು ಸ್ಥಳವನ್ನು ಮಾಡಿಕೊಂಡು ದಿನವೂ ದಕ್ಷಿಣೇಶ್ವರಕ್ಕೆ ಬಂದು ರಾಮಕೃಷ್ಣನಿಗೆ ಸಾಧನಗಳನ್ನು ಉಪದೇಶಿಸಿ ಅವನನ್ನು ಮುಂದುವರಿಸಿದಳು. ಭೈರವಿ ಬ್ರಾಹ್ಮಣಿಯಿಂದ ರಾಮಕೃಷ್ಣನು ತಾಂತ್ರಿಕ ಸಾಧನೆಗಳ ಶಾಸ್ತ್ರೋಕ್ತ ರೀತಿಯನ್ನು ತಿಳಿದು ಅವನ್ನೆಲ್ಲ ಮುಗಿಸಿದನು. ಕೆಲವುಕಾಲದ ಮೇಲೆ ಭೈರವಿ ರಾಮಕೃಷ್ಣನು ದೇವರ ಅವತಾರವೇ ಎಂದು ಸಾರಿ ಇದನ್ನು ಅಲ್ಲವೆನ್ನುವವರಿಗೆ ತಾನು ಉತ್ತರ ಹೇಳುವುದಾಗಿ ಪ್ರಕಟಿಸಿದಳು. ಪ್ರಾಜ್ಞರಾದ ಇಬ್ಬರು ಪಂಡಿತರು ಬಂದು ಇವಳು ಹೇಳುವುದನ್ನು ಕೇಳಿ, ರಾಮಕೃಷ್ಣನನ್ನು ನೋಡಿ, ಇವನು ಅವತಾರ ಪುರುಷನೇ ಅಲ್ಲವೇ ಎಂದು ಚರ್ಚೆಮಾಡಿದರು. ತನ್ನನ್ನು ದೇವರ ಅವತಾರವೆನ್ನುವರೋ ಹುಚ್ಚನೆನ್ನುವರೋ ಎಂದು ರಾಮಕೃಷ್ಣನು ಸ್ವಲ್ಪವೂ ಉಬ್ಬಸಪಡಲಿಲ್ಲ. ಬ್ರಾಹ್ಮಣಿಯೂ ಪಂಡಿತರೂ ಮಾಡುವ ಚರ್ಚೆಯನ್ನು ಸಾವಧಾನವಾಗಿ ಕೇಳುತ್ತ, ನಿನಗೆ ಹೀಗಾಯಿತೆ ಹಾಗಾಯಿತೆ ಎಂದು ಕೇಳಿದಾಗ ಏನಾಯಿತೆನ್ನುವುದನ್ನು ವಿವರಿಸಿ ಹೇಳುತ್ತ, ಎಂದಿನಂತೆ ಎಲೆ ಅಡಕೆಯನ್ನು ಅಗಿಯುತ್ತ, ಚರ್ಚೆಯಾಗುತ್ತಿರುವುದು

ಇನ್ನು ಯಾರ ವಿಷಯವೋ ಎಂಬಂತೆ ಶಾಂತಚಿತ್ತನಾಗಿದ್ದನು. ಈ ಸನ್ನಿವೇಶದ ಚಿತ್ರ ಕಲ್ಪನೆಗೆ ಬಹು ಚೆನ್ನಾಗುತ್ತದೆ. ಚರ್ಚೆಯನ್ನು ಕೇಳುತ್ತ ನೂರಾರು ಜನರು; ಚರ್ಚೆಮಾಡುತ್ತ ಪಂಡಿತವರೇಣ್ಯರು; ಇವನನ್ನು ಕಾಯುತ್ತ ವ್ಯಾಘ್ರಿಯಂತೆ ಭೈರವಿ; ಮಧ್ಯೆ ಕಳವಳವಿಲ್ಲದೆ ಈ ಸಿಂಹ ಶಾಬ. ಚರ್ಚೆ ನಡೆದದ್ದು ಭವತಾರಿಣಿಯ ಸನ್ನಿಧಿಯಲ್ಲಿ. ಲೋಕಾಧ್ಯಕ್ಷೆ ಸಭೆಗೆ ಅಧ್ಯಕ್ಷಳಾಗಿದ್ದಳು. ಕೊನೆಗೆ ಇವನು ಅವತಾರ ಪುರುಷನು ಅಹುದೆಂದು ಸಿದ್ಧಾಂತ ಆಯಿತು.

ರಾಮಕೃಷ್ಣನು ಭೈರವಿಯ ಸಹಾಯದಿಂದ ತಾಂತ್ರಿಕ ಸಾಧನಗಳನ್ನು ಮುಗಿಸುವ ವೇಳೆಗೆ ಅವನನ್ನು ಮುಂದುವರಿಸುವುದಕ್ಕಾಗಿಯೋ ಐತಂದನೋ ಎಂಬಂತೆ ತೋತಾಪುರಿ ಎಂಬ ಅದ್ವೈತ ಸಾಧು ದಕ್ಷಿಣೇಶ್ವರಕ್ಕೆ ಬಂದನು. ಅವನು ರಾಮಕೃಷ್ಣನನ್ನು ನೋಡಿ ಬಹುದೂರ ನಡೆದಿರುವ ಸಾಧಕನೆಂದು ತಿಳಿದು ಅವನಿಗೆ, 'ನಿನಗೆ ಮುಂದಣ ಸಾಧನವನ್ನು ಹೇಳಿಕೊಡುತ್ತೇನೆ,' ಎಂದನು. ರಾಮಕೃಷ್ಣನು ಇದಕ್ಕೆ ಒಪ್ಪಿಕೊಂಡು ಅವನಿಂದ ಸಂನ್ಯಾಸವನ್ನು ಸ್ವೀಕರಿಸಿ ಸಾಧನೆಗೆ ನಿಂತನು. ರಾಮಕೃಷ್ಣನು ಅದುವರೆಗೆ ಸಮಾಧಿಯನ್ನು ಮುಟ್ಟಿದಾಗ ಸಮಾಧಿಯಲ್ಲಿ ಅಂತರ್ಯವನ್ನು ಕಾಳಿಕಾ ಮಾತೆಯ ಭಾವ ತುಂಬಿರುವುದು. ಅದ್ವೈತದ ಪರಮ ಸಾಧನಕ್ಕೆ ಸಮಾಧಿಯಲ್ಲಿ ಇದರಿಂದಲೂ ಒಂದು ಹೆಜ್ಜೆ ಮುಂದಕ್ಕೆ ಹೋಗಬೇಕಂತೆ. ತೋತಾಪುರಿ ಅದ್ವೈತ ಸಾಧನವನ್ನು ಉಪದೇಶಮಾಡಿದಾಗ ರಾಮಕೃಷ್ಣನು ಸಮಾಧಿಯನ್ನು ಪ್ರವೇಶಿಸಿ ತಾಯಭಾವದ ಸಮಾಧಿಗೆ ಸುಲಭವಾಗಿ ಹೋದನು. ಮುಂದಕ್ಕೆ ಹೋಗಲು ಆಗಲಿಲ್ಲ. ದಾರಿಯಲ್ಲಿ ಅವನಿಗೆ ತಾಯಿ ಎದುರಿಗೆ ಕಾಣುವಳು. ಸಮಾಧಿಯನ್ನು ಬಿಟ್ಟು ಅವನು ಗುರುವಿಗೆ ಈ ಕಷ್ಟವನ್ನು ಹೇಳಿದನು. ತೋತಾಪುರಿ ನಿನ್ನ ತಾಯನ್ನು ಜ್ಞಾನಖಡ್ಗದಿಂದ ಕಡಿದು ಕೆಲಕ್ಕೆ ಹಾಕಿ ಮುಂದೆ ಹೋಗು ಎಂದನು. ರಾಮಕೃಷ್ಣನು ಮತ್ತೊಂದು ಸಲ ಸಮಾಧಿಯನ್ನು ಪ್ರವೇಶಿಸಿ ಹೀಗೆ ಮಾಡಿ ನಿರ್ವಿಕಲ್ಪ ಸಮಾಧಿಯನ್ನು ಸುಲಭವಾಗಿ ಮುಟ್ಟಿದನು. ಮುಟ್ಟಿ ಆ ಅವಸ್ಥೆಯಲ್ಲಿ ಕಷ್ಟವಿಲ್ಲದೆ ನಿಂತುಬಿಟ್ಟನು. ತೋತಾಪುರಿ ಹತ್ತಿರವೇ ಕುಳಿತು ಶಿಷ್ಯನು ಬೇಗನೆ ಮರಳುವನೆಂದು ನಿರೀಕ್ಷಿಸುತ್ತ

ನೋಡುತ್ತಿದ್ದನು. ರಾಮಕೃಷ್ಣನು ಎಚ್ಚರಗೊಳ್ಳಲಿಲ್ಲ. ಒಂದು ಗಳಿಗೆಯಲ್ಲ, ಒಂದು ಯಾಮವಲ್ಲ, ಒಂದು ದಿನವಲ್ಲ, ಮೂರು ದಿನವಾಯಿತು, ರಾಮಕೃಷ್ಣನು ಈ ಅವಸ್ಥೆಯನ್ನು ಬಿಟ್ಟು ಬಾಹ್ಯಪ್ರಪಂಚಕ್ಕೆ ಮರಳಿ ಬರುವುದಕ್ಕೆ. ತೋತಾಪುರಿಗೆ ಬಹಳ ಆಶ್ಚರ್ಯವಾಯಿತು. ತಾನು ನಿರ್ವಿಕಲ್ಪ ಸಮಾಧಿಯನ್ನು ಸಾಧಿಸಬೇಕಾದರೆ ವರ್ಷಾಂತರ ಪ್ರಯತ್ನ ಮಾಡಿದನು. ಆಗಲೂ ಸಮಾಧಿಯಲ್ಲಿ ಇಷ್ಟು ಹೊತ್ತಿರಲು ಶಕ್ತಿಯಿಲ್ಲ. ಈ ಶಿಷ್ಯನಾದರೆ ಉಪದೇಶವಾದ ದಿನವೇ ಅದನ್ನು ಸಾಧಿಸಿದ್ದಲ್ಲದೆ, ಮೂರು ದಿನ ಸಮಾಧಿಯಲ್ಲಿದ್ದನು. ಇದು ಅವಧೂತನಿಗೆ ಅದ್ಭುತವೆಂದು ಕಂಡಿತು. ಅವನು ರಾಮಕೃಷ್ಣನನ್ನು ಬಹಳವಾಗಿ ಮೆಚ್ಚಿಕೊಂಡನು; ವಾಡಿಕೆಯಂತೆ ಸ್ಥಳದಿಂದ ಸ್ಥಳಕ್ಕೆ ಹೋಗದೆ ಇವನ ಜೊತೆಯಲ್ಲಿ ಇರಲು ಕೆಲವುಕಾಲ ಅಲ್ಲಿಯೇ ನಿಂತನು.

ಅದ್ವೈತದ ಸಾಧನ ಮುಗಿದಮೇಲೆ ರಾಮಕೃಷ್ಣನು ದಕ್ಷಿಣೇಶ್ವರಕ್ಕೆ ಬಂದ ಮಹಮ್ಮದೀಯ ಫಕೀರನೊಬ್ಬನಿಂದ ಮಹಮ್ಮದ್ ಗುರುವಿನ ಉಪದೇಶದ ವಿಷಯವನ್ನು ತಿಳಿದು ಆ ಧರ್ಮದ ಸಾಧುಗಳ ಸಾಧನದ ಕ್ರಮವೇನೆಂದು ಗ್ರಹಿಸಿ ತಾನೂ ಮುಸಲ್ಮಾನನಂತೆ ಇದ್ದು ಆ ಮತದ ಸಾರವನ್ನೂ ಸಿದ್ಧಿಮಾಡಿಕೊಂಡನು. ಹೀಗೆ ಕೆಲವು ತಿಂಗಳಾದಮೇಲೆ ಒಂದು ದಿನ ತುಂಬ ಬೆಳೆದ ದಾಡಿಯ ಗಂಭೀರಾಕೃತಿಯ ಮಹಾಪುರುಷನೊಬ್ಬನು ಎದುರಿಗೆ ಬಂದಂತೆ ಅವನಿಗೆ ಅನುಭವವಾಯಿತು; ಆ ವ್ಯಕ್ತಿ ಮೆಲ್ಲನೆ ತನ್ನ ಸಮೀಪಕ್ಕೆ ಬಂದು ತನ್ನನ್ನು ಪ್ರವೇಶಿಸಿದಂತೆ ತೋರಿತು. ಇದೇ ಕಾಲದಲ್ಲಿ ಈತನು ತನ್ನ ಪರಿಚಯದ ಮಲ್ಲಿಕ್ ಎಂಬ ಗೃಹಸ್ಥನಿಂದ ಕ್ರೈಸ್ತರ ಬೈಬಲ್ ಗ್ರಂಥವನ್ನು ಓದಿಸಿ ಅರ್ಥವನ್ನು ತಿಳಿದುಕೊಂಡನು. ಏಸುಕ್ರೀಸ್ತನ ವಿಷಯದಲ್ಲಿ ಇವನಿಗೆ ಬಹಳ ಗೌರವಬುದ್ಧಿ ಉಂಟಾಯಿತು. ಹೀಗಿರುತ್ತ ಒಂದು ಸಲ ಈತನು ಹೋಗಿದ್ದ ಒಂದು ಮನೆಯಲ್ಲಿ ಮಗುವಾದ ಏಸುಕ್ರೀಸ್ತನನ್ನು ಅವರ ತಾಯಿ ಎತ್ತಿಕೊಂಡಿದ್ದಂತೆ ಬರೆದಿದ್ದ ಚಿತ್ರ ಒಂದು ಇವನಿಗೆ ಕಂಡಿತು. ಭಾವ ಪ್ರಬಲವಾಗಿ ಇವನು ಸಮಾಧಿಯನ್ನು ಪ್ರವೇಶಿಸಿದನು. ಸ್ವಲ್ಪಕಾಲದಲ್ಲಿ ಏಸುಕ್ರೀಸ್ತನ ಆಕೃತಿಯೊಂದು ಇವನ ದೃಷ್ಟಿಗೆ ಗೋಚರವಾಯಿತು; ಮೆಲ್ಲನೆ ಸಮೀಪಕ್ಕೆ ಬಂದು ಇವನನ್ನು

ಪ್ರವೇಶಮಾಡಿತು. ಹೀಗೆ ಹಿಂದೂ ಧರ್ಮದ ದೇವಮೂರ್ತಿಗಳನ್ನು ನಿಜ ಮಾಡಿಕೊಂಡು ಒಳಗೆ ಸೇರಿಸಿಕೊಂಡಂತೆ ರಾಮಕೃಷ್ಣನು ಮಹಮ್ಮದೀಯ ಮತ್ತು ಕ್ರೈಸ್ತ ಮತಗಳ ಪ್ರತಿಷ್ಠಾಪಕರನ್ನು ಧ್ಯಾನದಿಂದ ವ್ಯಕ್ತಿಗಳನ್ನಾಗಿ ಮಾಡಿಕೊಂಡು ತನ್ನವರನ್ನಾಗಿ ಬಾಳಿನಲ್ಲಿ ಸೇರಿಸಿಕೊಂಡನು.

ಈ ಮಧ್ಯೆ ರಾಣಿರಾಸಮಣಿ ತೀರಿಹೋದಳು. ಅವಳು ದೈವಭಕ್ತೆ ಯಾಗಿದ್ದಂತೆ ಊಹಾವಂತಳೂ ಆಗಿದ್ದಳು. ಆದಕಾರಣ ಅವಳು ರಾಮ ಕೃಷ್ಣನ ಮಹಿಮೆಯನ್ನು ಬೇಗನೆ ಮನಗಂಡು ಅವನನ್ನು ಗುರುವಾಗಿ ಸ್ವೀಕರಿಸಿದ್ದಳು. ಒಂದು ಸಲ ಇವನನ್ನು ದೇವರನಾಮ ಹಾಡೆಂದು ಹೇಳಿ ಇವನು ಹಾಡುತ್ತಿರುವಾಗ ತಾನು ಅನ್ಯಮನಸ್ಕಳಾಗಿದ್ದಳಂತೆ. ರಾಮ ಕೃಷ್ಣನು ಇದನ್ನು ನೋಡಿ ಕೋಪಗೊಂಡು ಇವಳನ್ನು ಗದರಿದನು. ತಾನು ಧರ್ಮಕರ್ತೆ, ಇವನು ಅರ್ಚಕ; ಆದರೂ ಅವಳು ಅಸಮಾಧಾನ ಪಡಲಿಲ್ಲ; ತನ್ನದು ತಪ್ಪೆಂದು ಒಪ್ಪಿಕೊಂಡಳು. ರಾಣಿ ತೀರಿಹೋದ ಮೇಲೆ ರಾಮಕೃಷ್ಣನ ಕಷ್ಟಸುಖಕ್ಕೆಲ್ಲ ಅಳಿಯ ಮಥುರಾನಾಥನು ಗುರಿ ಯಾದನು. ಈ ವರ್ಷಗಳಲ್ಲೇ ಒಂದು ಸಲ ರಾಮಕೃಷ್ಣನು ತಾಯನ್ನು ನೋಡುವುದಕ್ಕೆಂದು ಕಾಮಾರ್‌ಪುಕ್ಕರಕ್ಕೆ ಹೋಗಿದ್ದನು. ಅವನು ಈ ಸಲ ಹಳ್ಳಿಯಲ್ಲಿ ಹಿಂದಿನ ಸಲ ಹೋಗಿದ್ದಾಗ ಇದ್ದಂತೆ ಅರ್ಧಜ್ಞಾನವಾಗಿ ಇರ ಲಿಲ್ಲ. ಅವನಿಗೆ ಊರು ಸೊಗಸಿತು, ಊರ ಜನ ಮೊದಲಿನಂತೆ ಬೇಕಾದವ ರಾಗಿ ಕಂಡರು. ಮಗನು ಬಂದನಲ್ಲಾ ಎಂದು ಚಂದ್ರಾದೇವಿ ಸೊಸೆಯನ್ನು ಬರಮಾಡಿದಳು. ರಾಮಕೃಷ್ಣನು ಆಕೆಯನ್ನು ವಿಶ್ವಾಸದಿಂದ ಕಂಡನು; ಕೆಲವುಕಾಲ ಅಲ್ಲಿದ್ದು ದಕ್ಷಿಣೇಶ್ವರಕ್ಕೆ ಹಿಂತಿರುಗಿದನು. ಚಂದ್ರಾ ದೇವಿಯೂ ಮಗನೊಂದಿಗೆ ಬಂದಳು. ದೇವಾಲಯದ ಸುತ್ತಣ ವಾಸದ ಕೋಣೆಗಳಲ್ಲಿ ಒಂದನ್ನು ಆಕೆಗೆ ಕೊಟ್ಟರು. ಆಕೆ ಅಲ್ಲಿಯೇ ಇರುತ್ತಿದ್ದಳು.

ಈ ವರ್ಷಗಳಲ್ಲಿ ಮಥುರಾನಾಥನು ಮನೆಮಂದಿಯನ್ನೆಲ್ಲಾ ಕರೆದು ಕೊಂಡು ವೃಂದಾವನಕ್ಕೆ, ವಾರಣಾಸಿಗೆ, ಯಾತ್ರೆ ಹೊರಟನು. ಜೊತೆಗೆ ಬರಬೇಕೆಂದು ಅವನು ರಾಮಕೃಷ್ಣನನ್ನು ಬೇಡಿದನು. ಮಥುರಾನಾಥನಿಗೆ ಈ ವೇಳೆಗೆ ರಾಮಕೃಷ್ಣನು ಗುರು, ತಂದೆ, ದೈವ ಎಲ್ಲವೂ ಆಗಿದ್ದನು. ಒಂದು ಸಲ ರಾಮಕೃಷ್ಣನು ಕೊಠಡಿಯ ಮುಂದುಗಡೆ ಜಗುಲಿಯಮೇಲೆ

ನಡೆಯುತ್ತಿದ್ದಾಗ ಅವನು ಮಧುರಾನಾಥನಿಗೆ ಒಂದು ಕಡೆಗೆ ಹೋಗುತ್ತ ಶಿವನಾಗಿಯೂ ಹಿಂದಿರುಗಿ ನಡೆಯುತ್ತ ಕಾಳಿಕಾ ಮಾತೆಯಾಗಿಯೂ ಕಂಡನಂತೆ. ಇಂಥ ಅದ್ಭುತಗಳ ಜೊತೆಗೆ ಗುರುವಿನ ಜೀವನದ ನೈರ್ಮಲ್ಯವೂ ಮಧುರಾನಾಥನನ್ನು ಅವನಿಗೆ ದಾಸನನ್ನಾಗಿ ಮಾಡಿದ್ದಿತು. ಯಾತ್ರೆ ಹೋಗುತ್ತ ಇವರು ಒಂದು ಗ್ರಾಮದಲ್ಲಿ ಇಳಿದುಕೊಂಡರು. ಆ ಸಲ ಕ್ಷಾಮವಾಗಿ ಅಲ್ಲಿಯ ಜನರು ನರಳುತ್ತಿದ್ದರು. ರಾಮಕೃಷ್ಣನು ಅವರಿಗೆ ಸಹಾಯಮಾಡಬೇಕೆಂದು ಮಧುರಾನಾಥನನ್ನು ಬೇಡಿದನು. ಮಧುರಬಾಬುವಿಗೆ ಆಗ ಹಣ ಕೊಡುವುದಕ್ಕೆ ಇಷ್ಟವಿಲ್ಲ; ಆದರೆ ರಾಮಕೃಷ್ಣನು ಬಿಡಲಿಲ್ಲ. ಇವನ ಮಾತನ್ನು ತೆಗೆಯಲಾರದೆ ಮಧುರಬಾಬು ಆ ಜನರಿಗೆ ಸಹಾಯಮಾಡಿದನು. ವಾರಣಾಸಿಯಲ್ಲಿ ರಾಮಕೃಷ್ಣನು ಹಲವು ಪಂಡಿತರನ್ನು ನೋಡಿದನು. ಅವರ ಚರ್ಚೆಗಳನ್ನು ಕೇಳಿದನು; ಗಂಗಾ ತೀರದ ಶ್ಮಶಾನದಲ್ಲಿ ಕಳೇಬರಹಗಳ ದಹನದ ಧೂಮರಾಜಿಯಲ್ಲಿ ಶಿವನನ್ನು ಕಂಡನು. ಬೃಂದಾವನದಲ್ಲಿ ಕೃಷ್ಣನ ಚರಿತ್ರೆಯ ಸ್ಥಳಗಳನ್ನೆಲ್ಲಾ ನೋಡಿ ಅವನ ದಿವ್ಯ ಲೀಲೆಯ ಅನುಭವವನ್ನು ಪಡೆದು ಆನಂದಿಸಿದನು. 'ಕೃಷ್ಣಾ, ಕೃಷ್ಣಾ' ಎಂದು ಕೂಗುತ್ತ ಅಲ್ಲೆಲ್ಲ ಓಡಿಯಾಡಿ ಕೃಷ್ಣನು ಇಲ್ಲದೆಹೋದನೆ ಎಂದು ನೊಂದನು. ಆಗ್ಗೆ ಬೃಂದಾವನದಲ್ಲಿ ಗಂಗಾಮಾಯಿ ಎಂಬ ಒಬ್ಬ ವೃದ್ಧೆ ಭಕ್ತಿಯಸಾಧನೆಯಲ್ಲಿ ಜೀವನವನ್ನು ನಡೆಸುತ್ತಿದ್ದಳಂತೆ. ಅವಳು ರಾಮಕೃಷ್ಣನನ್ನು ಮಗನಂತೆ ವಾತ್ಸಲ್ಯದಿಂದ ಕಂಡಳು. ಇವರು ಪರಸ್ಪರ ತಮ್ಮ ಅನುಭವಗಳನ್ನು ಹೇಳಿಕೊಂಡರು. ಕೊನೆಗೆ ಮಧುರಾನಾಥನು ಹಿಂದಕ್ಕೆ ಹೊರಡುವಾಗ್ಯೆ ಗಂಗಾಮಾಯಿ ರಾಮಕೃಷ್ಣನು ತನ್ನ ಜೊತೆಗೇ ಇದ್ದುಬಿಡಬೇಕೆಂದು ಕೂಡ ಹೇಳಿದಳಂತೆ. ಅವನಿಗೂ ಅಲ್ಲಿ ಇರಬೇಕೆಂದು ತೋರಿತು. ಆದರೆ ತನ್ನ ತಾಯನ್ನು ಬಿಟ್ಟುಬಂದಿದ್ದನಾದ ಕಾರಣ ಅವನು ಹಿಂದಕ್ಕೆ ಹೋಗುವುದೆಂದು ನಿರ್ಧರಿಸಿದನು. ಯಾತ್ರೆಯೆಲ್ಲ ಮುಗಿದು ಹಿಂತಿರುಗಿದ ಸ್ವಲ್ಪಕಾಲದನಂತರ ಮಧುರಾನಾಥನು ತೀರಿಹೋದನು.

ರಾಮಕೃಷ್ಣನಿಗೆ ಮಧುರಾನಾಥನಿಗೆ ಬೆಳೆದುಬಂದಿದ್ದ ಭಕ್ತಿವಾತ್ಸಲ್ಯಗಳನ್ನು ಕುರಿತು ಇಲ್ಲಿ ಎರಡು ಮಾತನ್ನು ಹೇಳಬಹುದು. ಮಧುರಾನಾಥನು ಪ್ರಪಂಚದ ವ್ಯವಹಾರದಲ್ಲಿ ಮುಳುಗಿದ್ದ ತರುಣನು; ರಾಣಿ

ರಾಸಮಣಿಯ ಅಳಿಯನಾಗಿ ಎಷ್ಟೋ ಲಕ್ಷ ಧನದ ಆಸ್ತಿಗೆ ಕರ್ತನಾಗಿದ್ದನು. ಇದಕ್ಕೆ ತಕ್ಕಂತೆ ಇವನ ಬುದ್ಧಿ ಪ್ರಾಪಂಚಿಕವಾಗಿಯೇ ಇದ್ದಿತೆಂದು ಕಾಣುತ್ತದೆ. ರಾಣಿ ದೈವಭಕ್ತೆಯಾಗಿದ್ದಂತೆ ಇವನು ದೈವಭಕ್ತನಾಗಿದ್ದನೆಂದು ಹೇಳುವುದಕ್ಕೆ ಕಾರಣವೇ ಕಾಣುವುದಿಲ್ಲ; ಬಹಳ ಹೆಚ್ಚಾಗಿ ಹೇಳಿದರೆ ಇವನನ್ನು ರಾಮಕೃಷ್ಣನ ಭಕ್ತನು ಎನ್ನಬಹುದು. ಒಂದೇ ಗುಲಾಬಿಯ ಗಿಡದಲ್ಲಿ ಎರಡು ಬಣ್ಣದ ಹೂ ಬಿಟ್ಟ ಮಾತು; ಇವನಿಗೆ ಒಂದು ಸಲ ರಾಮಕೃಷ್ಣನು ಒಂದು ಕಡೆಗೆ ನಡೆಯುವಾಗ ಶಿವನಂತೆ, ಇನ್ನೊಂದು ಕಡೆಗೆ ನಡೆಯುವಾಗ ಕಾಳಿಯಂತೆ ಕಂಡನೆನ್ನುವ ಮಾತು; ವಾರಣಾಸಿಗೆ ಹೋಗುತ್ತ ಖರ್ಚಿಗೆ ಹಣ ಸಾಲದೆಹೋದೀತೆನ್ನುವ ಭಯವಿದ್ದರೂ ಇವನು ರಾಮಕೃಷ್ಣನ ಮಾತನ್ನು ಮಿೀರಲಾರದೆ ದಾರಿಯ ಒಂದು ಗ್ರಾಮದಲ್ಲಿ ಬಡಬಗ್ಗರಿಗೆ ಹಣಕೊಟ್ಟನೆಂಬ ಮಾತು: ಇವು ಈ ಮೊದಲೇ ಬಂದಿವೆ. ಇಷ್ಟರಿಂದಲೇ ಇವನಿಗೆ ಪರಮಹಂಸನ ವಿಷಯದಲ್ಲಿ ಎಷ್ಟು ಭಕ್ತಿ ಇದ್ದಿತು ಎನ್ನುವುದು ಕಾಣುತ್ತದೆ. ರಾಮಕೃಷ್ಣನು ಮಧುರಾನಾಥನನ್ನು ಧರ್ಮಕರ್ತನೆಂಬ ಕಾರಣದಿಂದ ಮರ್ಯಾದೆಯಿಂದ ಕಂಡರೂ ಭಕ್ತನೆಂಬ ಕಾರಣದಿಂದ ಸಲಿಗೆಯಿಂದ ನೋಡುತ್ತಿದ್ದನು. ಒಂದು ಸಲ ಮಧುರಾನಾಥನು ಹೊಸ ಗಾಡಿ ಕುದುರೆಯನ್ನು ತೆಗೆದಾಗ ಗುರುವನ್ನು ಅದರಲ್ಲಿ ಕೂರಿಸಿ ಕಲಿಕತೆಗೆ ಹೋಗಿಬರಬೇಕು ಎಂದು ಅಪೇಕ್ಷಿಸಿದನು. ಗುರು ಬೇಡವೆಂದನಂತೆ; ಮಧುರಬಾಬು ಕೇಳಲಿಲ್ಲ. ಇಬ್ಬರೂ ಗಾಡಿಯಲ್ಲಿ ಕುಳಿತು ಹೊರಟರು. ಸ್ವಲ್ಪದೂರ ಹೋದಮೇಲೆ ಕುದುರೆ ಎಡವಿ ಬಿದ್ದಿತಂತೆ. ಇಬ್ಬರೂ ಗಾಡಿಯಿಂದ ಇಳಿದರು. ಮಧುರಾನಾಥನು ಹೀಗೇಕೆ ಆಯಿತು ಎಂದು ಗುರುವನ್ನು ಕೇಳಿದನಂತೆ. ಗುರು, 'ಗಾಡಿಯಲ್ಲಿ ಕುಳಿತು ನಿನ್ನನ್ನು ನೋಡುತ್ತ ನಿನ್ನ ಕಣ್ಣು, ನಿನ್ನ ಮಿೀಸೆ, ನಿನ್ನ ದರ್ಪ ಇದರಿಂದೆಲ್ಲ ನನಗೆ ರಾವಣನ ನೆನಪು ಬಂದಿತು. ನಾನು ಸೀತೆ, ನನ್ನನ್ನು ಬಲವಂತದಿಂದ ಎತ್ತಿಕೊಂಡು ಹೋಗುತ್ತಿದೀಯೆ, ಎಂದು ಎಣಿಸಿಕೊಂಡೆನು. ಭಯವಾಯಿತು ಆ ಭಯ ಎಲ್ಲೋ ಕುದುರೆಗೆ ತಟ್ಟಿ ಅದು ಮುಗ್ಗುರಿಸಿತೆಂದು ಕಾಣುತ್ತದೆ,' ಎಂದನಂತೆ. ಮಧುರ ದೊಡ್ಡ ಮುಖದ ತೀಕ್ಷ್ಣವಾದ ಕಣ್ಣಿನ ತೀಡಿದ ಹುಬ್ಬು ಮಿೀಸೆಯ ಜರ್ಬಿನ ಮನುಷ್ಯ-

ಗುರುವಿನ ಮಾತಿಗೆ ಅವನು ಕೋಪಿಸಿಕೊಂಡನೋ, ನಕ್ಕನೋ ತಿಳಿಯದು. ನಕ್ಕನೆಂದು ಎಣಿಸುವುದು ಚೆನ್ನಾಗಿರುತ್ತದೆ. ರಾಮಕೃಷ್ಣನ ಮಾತು ಕುದುರೆ ಭಯಪಟ್ಟದ್ದಕ್ಕೆ ನಿಜವಾದ ಕಾರಣವನ್ನೇ ಸೂಚಿಸುತ್ತದೆ ಎಂದು ಕೆಲವರು ನಂಬುತ್ತಾರೆ. ನಾವು ಆ ಮಾತಿನಲ್ಲಿ ಅವನು ಹಾಸ್ಯಪರನೆಂಬುದನ್ನೂ ಹಾಸ್ಯಕ್ಕೆ ವಿಷಯನಾದ ಮಥುರಾನಾಥನನ್ನು ಕುರಿತು ಅವನಿಗೆ ಎಷ್ಟು ಸಲಿಗೆ ಇದ್ದಿತೆಂಬುದನ್ನೂ ಗ್ರಹಿಸಿದರೂ ಸಾಕು. ಗುರು ಬಹಳ ಸಲ ಸಮಾಧಿ ಸಮಾಧಿ ಎಂದು ಹೇಳುವುದನ್ನು ಕೇಳಿ ಮಥುರಾನಾಥನಿಗೆ ತಾನೂ ಸಮಾಧಿಯನ್ನು ಅನುಭವಿಸಬೇಕೆಂದು ಕಂಡಿತು. ತನಗೆ ಸಮಾಧಿ ಬರುವಂತೆ ಮಾಡಬೇಕೆಂದು ಅವನು ಗುರುವನ್ನು ಕೇಳಿದನು. ಸಮಾಧಿಗೆ ಹೋಗುವುದು ಸುಖವಲ್ಲ, ನಿನಗೆ ಬೇಡ ಸುಮ್ಮನಿರು, ಎಂದು ಗುರು ಅವನಿಗೆ ಹೇಳಿದನು. ಮಥುರಾನಾಥನು ಒಪ್ಪಲಿಲ್ಲ. ಕೊನೆಗೆ ಒಂದು ದಿನ ಗುರು ಅವನನ್ನು ಹತ್ತಿರ ಕೂರಿಸಿಕೊಂಡು ಸಮಾಧಿಗೆ ಹೋಗುವುದು ಇಷ್ಟವಾದರೆ ಹೋಗು ಎಂದು ಅವನನ್ನು ಮುಟ್ಟಿದನು. ಮಥುರ ಬಾಬುವಿಗೆ ತಲೆ ತಿರುಗಿತು: ಜೀವದ ಕೀಲನ್ನು ಹಿಡಿದು ಎಳೆದಂತಾಯಿತು; ಬುದ್ಧಿಗೆ ಅರ್ಧ ಭ್ರಮೆ ಹಿಡಿದಂತಾಯಿತು. ಅವನಿಗೆ ಏನೋ ಆಗಿಹೋಗುತ್ತಿದೇನೆಂದು ಮನಸ್ಸಿಗೆ ಕಂಡಿತು. ಅವನು ಮನೆಗೆಹೋದನು. ಯಾವುದರಲ್ಲೂ ರುಚಿಕಾಣಲಿಲ್ಲ. ಅನ್ನ ಬೇಕಾಗಲಿಲ್ಲ, ಹೆಂಡತಿ ಮಕ್ಕಳು ಬೇಕಾಗಲಿಲ್ಲ, ಆಸ್ತಿ ಆಡಳಿತ ಬೇಕಾಗಲಿಲ್ಲ, ಯಾವುದರಲ್ಲಿಯೂ ಪ್ರವೃತ್ತಿಯಿಲ್ಲ: ಜೀವಕ್ಕೆ ಬದುಕಿನಲ್ಲಿ ಅರೋಚಿಕವಾಯಿತು. ಮಾರನೆಯ ದಿನ ಅವನು ಗುರುವಿನ ಬಳಿಗೆ ಬಂದು ಹೀಗಾಗಿದೆ ಎಂದು ತಿಳಿಸಿದನು. ಗುರು, 'ಇದು ಸಮಾಧಿಯ ಮೊದಲ ಮೆಟ್ಟಲು. ಇಳಿಯೋಣವೆನ್ನಿಸುತ್ತದೆಯೋ, ಇನ್ನೂ ಮೇಲೆ ಏರೋಣವೆನ್ನಿಸುತ್ತದೆಯೋ.' ಎಂದು ಕೇಳಿದನು. ಮಥುರಾನಾಥನು, 'ನಿಮ್ಮ ಪುಣ್ಯ, ನಿಮ್ಮ ಸಮಾಧಿ ನಿಮಗಿರಲಿ, ನಾನು ಹೀಗಾದರೆ ಈ ಆಸ್ತಿಯನ್ನು ನೋಡಿಕೊಳ್ಳುವರು ಯಾರು?' ಎಂದನು. ಗುರು ಮತ್ತೆ ಅವನನ್ನು ಮುಟ್ಟಿ, ಇನ್ನೇನೂ ಆಗುವುದಿಲ್ಲಬಿಡು, ಎಂದನು. ಮಥುರಾನಾಥನಿಗೆ ಬುದ್ಧಿ ಸ್ತಿಮಿತಕ್ಕೆ ಬಂದಿತು: ಜೀವದ ತಲ್ಲಣ ಹೋಯಿತು; ಬದುಕಿನಲ್ಲಿ ಎಂದಿನಂತೆ ರುಚಿ ಹುಟ್ಟಿತು. ಆಮೇಲೆ

ಹಲವು ವರ್ಷ ಅವನು ಗುರುವಿಗೆ ಸೇವೆಯನ್ನು ಸಲ್ಲಿಸಿದನು. ಎಲ್ಲರೂ ಪರಮಹಂಸರಾಗುವುದಿಲ್ಲ; ಎಲ್ಲರಿಗೂ ಸಮಾಧಿ ಈಪ್ಸಿತವಲ್ಲ. ಆದರೆ ಲಕ್ಷಾಂತರ ಧನದ ಅಧಿಕಾರಿಯಾಗಿದ್ದು ಪರಮಹಂಸನೊಬ್ಬನ ಸಮಾಧಿಯ ಮತ್ತು ಇತರ ಅವಸ್ಥೆಗಳಲ್ಲೆಲ್ಲ ಅವನ ದೇಹದ ಪೋಷಕನಾಗಿರುವುದು ಅಷ್ಟೇ ಅಪೂರ್ವವಾದ ಒಂದು ಪುಣ್ಯ. ಈ ಪುಣ್ಯ ಮಥುರಾನಾಥವಿಶ್ವಾಸನ ಪಾಲಿಗೆ ಬಂದಿತು; ಆದರಿಂದಲೇ ಅವನು ಸಿದ್ಧಿಹೊಂದಿದನು.

ಇದಾದ ಸ್ವಲ್ಪಕಾಲದಲ್ಲಿ ಶಾರದಾ ದೇವಿ ಗಂಡನ ಬಳಿ ಇರುವುದಕ್ಕೆ ದಕ್ಷಿಣೇಶ್ವರಕ್ಕೆ ಬಂದಳು. ಊರಿನಲ್ಲಿ ಜನರು ಅವಳನ್ನು ಹುಚ್ಚನ ಹೆಂಡತಿ ಎಂದು ಕರೆಯುವರು. ಆಕೆಯೇನೋ ಗಂಡನು ಹುಚ್ಚನೆಂದು ಯೋಚಿಸಲಿಲ್ಲ; ಆದರೂ ಜನ ಅವನನ್ನು ಹಾಗೆ ವರ್ಣಿಸಿದಾಗ ಅವಳಿಗೆ ಮನಸ್ಸು ಅಲುಗುವುದು. ಆದರಿಂದ ಅವಳು ನಾಚಿಕೆಯನ್ನು ಒತ್ತಟ್ಟಗಿಟ್ಟು ತಂದೆಯನ್ನು ಕೇಳಿ ಕಲಿಕತೆಗೆ ಬರುವ ಕೆಲವು ಜನರೊಂದಿಗೆ ಗಂಡನಿರುವಲ್ಲಿಗೆ ಬಂದಳು. ಬರುತ್ತ ದಾರಿಯಲ್ಲಿ ಜೊತೆ ತಪ್ಪಿ ಕಿರಾತ ದಂಪತಿ ಇಬ್ಬರ ಕೈಗೆ ಸಿಕ್ಕಿದಳಂತೆ. ಅವರು ಸಾಮಾನ್ಯವಾಗಿ ಕಳ್ಳತನದಿಂದ ಜೀವಿಸುವರಾದರೂ ಈ ತರುಣಿಯ ಸರಳ ಸ್ವಭಾವಕ್ಕೆ ಕರಗಿ ಅವಳನ್ನು ಸತ್ಕರಿಸಿ ದಕ್ಷಿಣೇಶ್ವರದವರೆಗೆ ಕರೆತಂದು ಬಿಟ್ಟುಹೋದರು. ಹೆಂಡತಿಯನ್ನು ಹೀಗೆ ಸಲಹಿ ಕರೆತಂದ ಅವರನ್ನು ರಾಮಕೃಷ್ಣನು, 'ಮಾವ, ಅತ್ತೆ,' ಎಂದು ಕರೆದು ಉಪಚರಿಸಿದನಂತೆ. ಶಾರದಾದೇವಿ ಆಮೇಲೆ ಸುಮಾರು ಒಂದೂವರೆ ವರುಷ ಗಂಡನ ಜೊತೆಯಲ್ಲಿದ್ದಳು. ಅವನ ಮನೋಧರ್ಮವನ್ನು ತಿಳಿದು ಅವನ ವಿರಕ್ತಿಗೆ ತನ್ನಿಂದ ಹಾನಿತಟ್ಟದಂತೆ ಅನುಕೂಲೆಯಾಗಿ ನಡೆದುಕೊಂಡಳು; ಗುರುವಿನಿಂದ ಕಲಿಯುವಂತೆ ಅವನಿಂದ ಜೀವನವನ್ನು ಸೊಗಸುಗೊಳಿಸುವ ನೂರು ವಿಷಯವನ್ನು ತಿಳಿದುಕೊಂಡಳು. ಆಮೇಲೆ ಊರಿಗೆ ಹೋಗಿದ್ದು ಕೆಲವು ವರ್ಷದ ನಂತರ ಮತ್ತೆ ಬಂದಳು. ದೇವಿಗೆ ಇರುವುದಕ್ಕೆ ಅತ್ತೆಯ ಕೋಣೆಯ ಬಳಿ ಒಂದು ಕೋಣೆಯನ್ನು ಕೊಟ್ಟರು. ಅತ್ತೆಗೂ ಗಂಡನಿಗೂ ಸೇವೆಯನ್ನು ಮಾಡುತ್ತ ಆಕೆಯೂ ವೈರಾಗ್ಯದ ದಾರಿಯನ್ನು ಹಿಡಿದಳು.

ರಾಮಕೃಷ್ಣನು ಭೈರವಿ ಬ್ರಾಹ್ಮಣಿಯ ಉಪದೇಶದಲ್ಲಿ ತಾಂತ್ರಿಕ ಸಾಧನಗಳನ್ನೆಲ್ಲಾ ಹಿಂದೆಯೇ ಪೂರ್ತಿಗೊಳಿಸಿದ್ದನು. ಹೆಣ್ಣನ್ನು ದೇವಿಯೆಂದು ಪೂಜಿಸುವುದು ಆ ಸಾಧನೆಗಳಲ್ಲಿ ಒಂದು ಮುಖ್ಯಾಂಶ. ಈ ಸಾಧನದ ಕ್ರಮದಲ್ಲಿ ತುಂಬುಪ್ರಾಯದ ಹುಡುಗಿಯನ್ನು ಕೂರಿಸಿ ಅವಳಲ್ಲಿ ರಾಜರಾಜೇಶ್ವರಿಯನ್ನು ಭಾವಿಸಿ ಸಮಸ್ತ ಸೇವೆಯನ್ನು ಸಲ್ಲಿಸುವ ಪೂಜೆಯೊಂದು. ಪೂಜೆಯನ್ನು ಷೋಡಶೀ ಪೂಜಾ ಎಂದು ಹೇಳುತ್ತಾರೆ. ತುಂಬುಜವ್ವನವ ತನ್ನ ಸತಿಯನ್ನು ಹೀಗೆ ಪೂಜಿಸಬೇಕೆಂದು ರಾಮಕೃಷ್ಣನಿಗೆ ತೋರಿತು. ಆ ಸಲ ಹುಣ್ಣಿಮೆ ಬರಲು ಸಾಧಕನು ರಾಶಿ ರಾಶಿ ಹೂವನ್ನು ತರಿಸಿ ಸ್ರಕ್ಚಂದನಗಳನ್ನು ಸಿದ್ಧಪಡಿಸಿಕೊಂಡು ಒಂದು ಗದ್ದಿಗೆಯನ್ನು ಮಾಡಿ ಅದರಮೇಲೆ ಪತ್ನಿಯನ್ನು ಕೂರಿಸಿ ತನ್ನ ಆಸೆ ತೀರುವಂತೆ ಅರ್ಚನೆ ಮಾಡಿದನು. ಶಾರದಾಮಣಿಯು ದೇವಿಯ ಪದವಿಯನ್ನು ಗಂಭೀರವಾಗಿ ನಿರ್ವಹಿಸಿದಳು. ಅವಳ ಗಂಡನಿಗೆ ಹೇಗೋ ಹಾಗೆ ಅವಳಿಗೂ ದಾಂಪತ್ಯದ ಈ ವಿಶುದ್ಧ ಸಂಬಂಧ ಸಹಜವಾಗಿ ಬಂದಿತು. ಹಿಂದೆ ಅವಳು ಗಂಡನಲ್ಲಿಗೆ ಬಂದಾಗ ಅವನು ಅವಳಿಗೆ, ನೀನು ಅಪೇಕ್ಷಿಸಿದರೆ ಎಲ್ಲರಂತೆ ನಾನೂ ಸಂಸಾರದ ಪಥದಲ್ಲಿ ನಡೆಯುವುದಕ್ಕೆ ಸಿದ್ಧನಾಗಿದೇನೆ, ಎಂದು ಹೇಳಿದನು. ಅವನಿಗೆ ವಿರಕ್ತಿಯಲ್ಲಿ ಇಷ್ಟವಿರುವಾಗ ಅವನು ತನಗಾಗಿ ಸಕ್ತಿಗೆ ಬರಬೇಕಾದದು ಇಲ್ಲವೆಂದು ಅವಳು ಅವನಿಗೆ ತಿಳಿಸಿದ್ದಳು ಮತ್ತೊಮ್ಮೆ ಇವನು ತನ್ನ ವಿಷಯದಲ್ಲಿ ನಡೆದುಕೊಳ್ಳುವ ರೀತಿ ಅರ್ಥವಾಗದೆಯೋ, ಅರ್ಥವಾದರೂ ಅದರ ಸ್ವರೂಪವನ್ನು ಅವನಿಂದ ತಿಳಿಯೋಣವೆಂತಲೋ, ದೇವಿ ರಾಮಕೃಷ್ಣನನ್ನು ಕುರಿತು, 'ನಾನು ನಿನಗೆ ಹೇಗೆ ಕಾಣುತ್ತೇನೆ,' ಎಂದಳಂತೆ. 'ದೇವಾಲಯದಲ್ಲಿರುವ ದೇವಿ ನನ್ನ ಎದುರಿಗೆ ನೀನಾಗಿ ಕಾಣುತ್ತಿದಾಳೆ,' ಎಂದು ಅವನು ಉತ್ತರಕೊಟ್ಟನು. ಹೆಂಡತಿ ದೇವಿ ಎನ್ನುವುದು ಇವನಿಗೆ ಸ್ಥಾಯಿಭಾವವಾದರೂ ಅವಳ ವಿಷಯದಲ್ಲಿ ಅವನು ಬರಿಯ ಗೌರವವನ್ನು ಮಾತ್ರ ತೋರಿಸುತ್ತಿರಲಿಲ್ಲ. ಅವಳಿಗೆ ದೇಹದಲ್ಲಿ ಆಲಸ್ಯವಾದಾಗ ತನ್ನ ಕೊಠಡಿಯಲ್ಲಿ ಒಂದು ಹಾಸಿಗೆಯನ್ನು ಹಾಕಿಸಿ ಜ್ವರ ಇಳಿಯುವವರೆಗೆ ತಾನೇ ಉಪಚಾರಮಾಡಿದನು; ಜ್ವರ ಇಳಿದ ಮೇಲೆ ಅವಳನ್ನು ಅವಳ ಕೋಣೆಗೆ ಕಳುಹಿಸಿಕೊಟ್ಟನು. ಒಂದು ಸಲ ಆಕೆ

ಎಲೆ ಅಡಕೆಯನ್ನು ಸ್ವಲ್ಪ ವಿಲಾಸದಿಂದ ತಂದಿಡಲು ಇವನು ಪರಿಹಾಸ ಮಾಡಿದನು. ತರುಣಿ ಸರಸವನ್ನು ತಿಳಿಯಲಾರದೆ ಅಸಮಾಧಾನದಿಂದ ಹಿಂದಿರುಗಿದಳು. ರಾಮಕೃಷ್ಣನು ಹತ್ತಿರಿದ್ದ ಹೃದಯನಿಗೆ ಅವಳನ್ನು ಕರೆದು ತರಹೇಳಿ, ತಾನು ಅವಳನ್ನು ಅಳುವಂತೆ ಮಾಡಬಾರದು, ಅವಳ ಕಣ್ಣಿಂದ ಚಿಮ್ಮಿದ ಒಂದು ತೊಟ್ಟು ನೀರು ನೆಲವನ್ನು ಮುಟ್ಟಿದರೆ ತನ್ನ ಸಾಧನವೆಲ್ಲ ವ್ಯರ್ಥವಾದೀತು, ಎಂದು ಹೇಳಿದನಂತೆ. ಸ್ತ್ರೀಯ ವಿಷಯ ದಲ್ಲಿ ಅವನ ದೃಷ್ಟಿ ಹೀಗೆ ಸ್ವಚ್ಛವಾಗಿತ್ತು, ಸಮಗ್ರವಾಗಿತ್ತು.

ಈ ವೇಳೆಗೆ ರಾಮಕೃಷ್ಣನು ಪರಮಹಂಸನಾಗಿದ್ದನು. ಬ್ರಹ್ಮವೇ ಸಮಸ್ತ ಚರಾಚರವಸ್ತುನಿಕರ; ಅದು ಒಂದೇ ನಿಜ, ಶಾಶ್ವತ; ಇದೆ ಎಂಬ ಸೊಲ್ಲು ಬಾಧೆಯಿಲ್ಲದೆ ಸಲ್ಲುವುದು ಅದು ಒಂದಕ್ಕೇ; ಅದರ ಹೊರತು ಇನ್ನು ಯಾವುದೂ ಇಲ್ಲ; ಇರುವುದೆಲ್ಲ ಅದರ ಪ್ರಕಾರ ಮಾತ್ರ; ಇದೆ ಎಂಬ ಉಕ್ತಿ ಪ್ರಕಾರದ ವಿಷಯವಾಗಿ ನಿರಾತಂಕ ನಿರಾಕ್ಷೇಪವಾಗುವುದು ಸಾಧ್ಯವಲ್ಲ. ವಸ್ತುನಿಚಯದ ಸೃಷ್ಟಿಗಾಗಿ ಬ್ರಹ್ಮವು ಶಕ್ತಿಯಾಗುತ್ತದೆ: ಆ ಶಕ್ತಿ ಕಾಳಿ; ಚೇತನಗಳನ್ನು ಹೆರುವುದು, ಹೊರುವುದು, ನುಂಗು ವುದು ಈ ಶಕ್ತಿ, ಈ ಮಾತೆ. ನಾನು ಎಂಬ ವಸ್ತು ಸಾಮಾನ್ಯ ಅವಸ್ಥೆ ಯಲ್ಲಿ ಅವಳಿಂದ ಬೇರೆಯಾಗಿ ಕಾಣುವುದು; ಈ ದ್ವೈತ ತೋರಿಕೆಯದು. ಇದರ ಫಲವಾಗಿ ಪ್ರಪಂಚದಲ್ಲಿ ಭೇದ ಕಾಣುತ್ತದೆ: ಮಣ್ಣು ಬೇರೆ, ಹೊನ್ನು ಬೇರೆ, ಹೆಣ್ಣು ಬೇರೆ, ಗಂಡು ಬೇರೆ, ಮೇಧ್ಯ ಅಮೇಧ್ಯಗಳು ಬೇರೆ, ಮೌಲ್ಯ ಅಮೌಲ್ಯಗಳು ಬೇರೆ. ಇವೆಲ್ಲವೂ ತೋರಿಕೆಯ ಭೇದವೇ. ನಾನು ಎಂಬುದು ಇರುವಾಗ ಈ ಭೇದ ತಪ್ಪಿದ್ದಲ್ಲ; ನಾನು ಎನ್ನುವುದನ್ನು ತೊಡೆದುಕೊಂಡರೆ ಬೇರೆ ಎಂಬ ಭೇದಬುದ್ಧಿ ಹೋಗುತ್ತದೆ. ಆಗ ಉಳಿಯು ವುದು ಅದ್ವೈತ ಒಂದೇ. ಅದ್ವೈತ ಬರಿಯ ಒಂದು ಊಹೆಯ ವಿಷಯವಲ್ಲ; ಅನುಭವಕ್ಕೆ ಸಾಧ್ಯವಾದ ಅವಸ್ಥೆ. ಅದೆಲ್ಲದರ ಫಲ ಜೀವರಾಶಿಯಲ್ಲಿ ಕನಿಕರದಿಂದ ನಡೆದುಕೊಳ್ಳುವುದು, ತಾನು ಎಂಬ ಭಾವದಿಂದ ಉದ್ಭವ ವಾಗುವ ಅಲ್ಪ ಕಾಮನೆಗಳನ್ನು ನಿರಾಕರಿಸುವುದು, ಮನಸ್ಸಿನ ವೃತ್ತಿ ಯನ್ನೆಲ್ಲ ವಿಶುದ್ಧ ಮಾರ್ಗಗಳಲ್ಲಿ ಹರಿಸಿ ವಿಶ್ವಜೀವನದಲ್ಲಿ ತಾನು ಬೆರೆದು ಹರಿಯುವುದು. ರಾಮಕೃಷ್ಣನು ನಿರ್ವಿಕಲ್ಪ ಸಮಾಧಿಯಲ್ಲಿ ಅದ್ವೈತವನ್ನು

ಸಾಧಿಸಿದನು. ಆ ಸಾಧನೆಯ ಫಲ ಸಮಾಧಿಯನ್ನು ಬಿಟ್ಟಾಗಲೂ ಅವನಿಗೆ ಉಳಿಯಿತು. ಬರಬರುತ್ತ ಅವನಿಗೆ ಬ್ರಹ್ಮದಲ್ಲಿ ಈಸುವುದು, ಸಮಾಧಿಯಲ್ಲಿ ಹೇಗೋ ಹಾಗೆ, ಪ್ರಪಂಚದಲ್ಲಿ ಅವಸ್ಥಿತವಾದಾಗಲೂ ಸಾಧ್ಯವಾಯಿತು. ಹಂಸವು ನೀರಿನಲ್ಲಿರುವಾಗ, ಇಷ್ಟಬಂದರೆ ಒಳಗೆ ಇಲ್ಲದಿದ್ದರೆ ಹೊರಗೆ ತಲೆಯಿಟ್ಟುಕೊಂಡು, ನೀರನ್ನು ಬಿಡದೆ ನೆಲವನ್ನು ಮರೆಯದೆ ಇರುವ ರೀತಿಯಲ್ಲಿ ಇವನ ಚೇತನ, ಬ್ರಹ್ಮದಲ್ಲಿ ತೇಲುತ್ತ ಬಾಳುವೆಯನ್ನು ಕಾಣುತ್ತ, ತಾಯಮಡಿಲ ಮಗುವಿನಂತೆ, ನಿಶ್ಚಿಂತವಾದ ಶಾಂತಿಯಲ್ಲಿ ನಿರಾತಂಕವಾದ ಆನಂದದಲ್ಲಿ ಸದಾ ವಿಹರಿಸುತ್ತ ನಿಂತಿದ್ದಿತು. ಹಳ್ಳಿಗರಲ್ಲಿ ಹುಟ್ಟಿ, ಬಡತನದಲ್ಲಿ ಬೆಳೆದು, ಸಿಷ್ಟರಿಂದ ಹಿಡಿದಿದ್ದ ನೇಮಗಳನ್ನೆಲ್ಲ ನರ್ಮದ ಬುದ್ಧಿಯಿಂದ ಒಂದೊಂದಾಗಿ ಬಿಟ್ಟು, ಒಳ್ಳೆಯದನ್ನು ಸಾಧಿಸ ಬೇಕೆಂಬ ಉದ್ದೇಶದಲ್ಲಿ ಕಾಯಕ್ಕೆ ಮನಸ್ಸಿಗೆ ಕೊಡಬಾರದ ಕ್ಲೇಶವನ್ನು ಕೊಟ್ಟು,ಗುರಿಯನ್ನು ಸೇರುವ ಆಸೆಯಲ್ಲಿ ತಲೆಯನ್ನಾದರೂ ಕೊಡಲು ಸಿದ್ಧ ನಾಗಿ, ಹುಚ್ಚನೆನ್ನಿಸಿಕೊಂಡು, ಭಕ್ತನೆನ್ನಿಸಿಕೊಂಡು, ದೇವರೆನ್ನಿಸಿಕೊಂಡು ಗದಾಧರನು ರಾಮಕೃಷ್ಣನಾಗಿ ಲೋಕದ ಗುರುವಾಗಲು ಸಿದ್ಧನಾದನು.

ಲೋಕಕ್ಕೆ ಆಗ್ಗೆ ಒಬ್ಬ ಗುರು ಬೇಕಾಗಿದ್ದನು. ಅದರಲ್ಲಿಯೂ ಲೋಕದ ಪರವಾಗಿ ಭರತವರ್ಷದಲ್ಲಿ ಈ ಅವಶ್ಯಕತೆ ಬಹು ಹೆಚ್ಚಾಗಿದ್ದಿತು. ಈಗಲಾದರೂ ಭರತವರ್ಷದ ಸ್ಥಿತಿ ಬಹುಮಟ್ಟಿಗೆ ಹಾಗೆಯೇ ಇದೆ; ಆದರೆ ಆಗಿನಷ್ಟು ಅನ್ಯಾಯವಾಗಿಲ್ಲ ಅಷ್ಟೆ. ಉಪನಿಷತ್ತುಗಳ ನಿರ್ಮಲವಾದ ಮೂಲದಿಂದ ಹೊರಟ ಸನಾತನಧರ್ಮ ದೇಶದ ಎಲ್ಲಾ ಭಾಗದ ಎಲ್ಲಾ ಮಟ್ಟದ ಮತಾಚಾರವನ್ನು ಒಳಗೊಳ್ಳುವ ಪ್ರಯತ್ನದಲ್ಲಿ ಶಯ್ಯೆಯಲ್ಲಿ ಹರಿಯುವುದನ್ನು ಬಿಟ್ಟು ಬಯಲಲ್ಲಿ ಹರಡುವ ನದಿಯಂತೆ ಆಗಿದ್ದಿತು. ಮನುಷ್ಯಜೀವನದ ಎಲ್ಲ ಮುಖವನ್ನು ಒಳಗೊಳ್ಳುವ. ಮತ್ತು ಸಾವಿರ ರೀತಿಯ ಜನತೆಯನ್ನು ಒಂದುಗೂಡಿಸುವ. ಪ್ರಯತ್ನದಲ್ಲಿ ವರ್ಣ ಉಪ ವರ್ಣಗಳ ವ್ಯವಸ್ಥೆಯನ್ನು ಮಾಡಿ ದೊಡ್ಡ ಸಮಸ್ಯೆಯನ್ನು ಹೂಡಿ ಕೊಂಡಿದ್ದಿತು. ಧರ್ಮದ ತತ್ತ್ವಗಳನ್ನು ಸಾಮಾನ್ಯ ಜನಕ್ಕೆ ತಿಳಿಸುವುದಕ್ಕಾಗಿ ಪುರಾಣವನ್ನು ನಿರ್ಮಿಸುವುದರಲ್ಲಿ, ಕಲ್ಪನೆಯ ಸಂಗತಿಗಳನ್ನು ಇತಿಹಾಸ ಮಾಡಿ, ಕಥೆ ಯಾವುದು ಚರಿತೆ ಯಾವುದು ಎಂದು ತಾನೇ ತಿಳಿಯದೆ

ಹೋಯಿತು. ಇದರ ಮೇಲೆ ಈ ಧರ್ಮ ಭರತವರ್ಷಕ್ಕೆ ಮುಹಮ್ಮದೀಯರು ನುತ ಬಂದ ಆರಂಭದ ಶತಮಾನಗಳಲ್ಲಿ ಅದರ ಉಗ್ರ ತಾಡನಕ್ಕೆ ಸಿಕ್ಕಿ ಕುಗ್ಗಿ ಹೋಯಿತು. ಅದಾದಮೇಲೆ ಭರತವರ್ಷದ ರಾಜರಾದ ಪಾಶ್ಚಾತ್ಯ ಜನತೆಯ ಕ್ರೈಸ್ತ ಧರ್ಮೋತ್ಸಾಹದ ರಂಧ್ರಾನ್ವೇಷಣಕ್ಕೆ ಪಕ್ಕಾಯಿತು. ರಂಧ್ರವಾದರೂ ಅನ್ವೇಷಿಸದೆ ಎದುರಿಗೆ ಕಾಣುವಂತೆಯೇ ಇದ್ದಿತು. ನಾಲ್ಕು ಜಾತಿಯೆಂದು ಹೆಸರು, ನಿಜವಾಗಿ ನಾಲ್ಕುಸಾವಿರ ಜಾತಿ; ದೇವರೊಬ್ಬನೆಂದು ವೇದಾಂತ ಹೇಳೋಣ, ಹರಿಗೆ ಹರನಿಗೆ ಭೇದವನ್ನು ಭಾವಿಸೋಣ; ಶಿವನ ಭಕ್ತರಿಗೆ ಹರಿಯ ಹೆಸರು ಕಿವಿಗೆ ಬೀಳದಂತೆ ಕಿವಿಯ ಬಳಿ ಗಂಟೆಯಿರಬೇಕು, ಹರಿಭಕ್ತನು ಅದ್ವೈತಿಯನ್ನು ನೋಡಿದರೆ ಸ್ನಾನಮಾಡಬೇಕು; ಎಲ್ಲ ಜೀವದಲ್ಲಿಯೂ ಪರಮಾತ್ಮನಿದ್ದಾನೆ ಎಂಬ ತತ್ತ್ವದ ಜೊತೆಗೆ ಇವರಿಗಿಂತ ಅವರು ಹೆಚ್ಚು ಅವರಿಗಿಂತ ಮತ್ತೊಬ್ಬರು ಹೆಚ್ಚು ಎಂಬ ಸಮಾಜದ ನಿಯಮ; ಆರೋಗ್ಯದ ದೃಷ್ಟಿಯಿಂದ, ನೈರ್ಮಲ್ಯದ ದೃಷ್ಟಿಯಿಂದ ಏರ್ಪಟ್ಟ ಎಲ್ಲ ನಿಯಮವೂ ಅವನ್ನು ತಪ್ಪಿದರೆ ಜಾತಿಯಿಂದ ಹೊರಗೆ ಹಾಕುವಂಥ ಕಠಿಣ ಸೂತ್ರಗಳಾಗೋಣ; ವಿಗ್ರಹಗಳನ್ನು ಪೂಜಿಸುವುದಲ್ಲದೆ ಅವನ್ನು ವ್ಯಕ್ತಿಗಳನ್ನಾಗಿ ಮಾಡಿ, ಅವುಗಳ ಹೆಸರಿಗೆ ಆಸ್ತಿಯನ್ನಿಟ್ಟು ಒಂದೊಂದು ದೇವಾಲಯದ ಮೂರ್ತಿಯನ್ನೂ ಒಬ್ಬೊಬ್ಬ ಬೇರೆ ದೇವರಾಗಿ ಮಾಡೋಣ; ವಿಧ್ಯುಕ್ತವಾದ ಕರ್ಮಗಳ ಉದ್ದೇಶವೇನೆಂಬುದನ್ನು ಮರೆತು ಬರಿಯ ಅವುಗಳ ಕಳೇಬರವನ್ನು ಬಿಡಲಾರದೆ ಕಟ್ಟಿಕೊಂಡು ಅವುಗಳ ಸಲುವಾಗಿ ಪುರೋಹಿತ ವರ್ಗಕ್ಕೆ ಎಲ್ಲಿಲ್ಲದ ಅಧಿಕಾರವನ್ನು ಕೊಡೋಣ; ಅದರ ಫಲವಾಗಿ ಆ ವರ್ಗದ ಅನೇಕ ಜನ ಹೆಮ್ಮೆ ಆಸೆಗಳನ್ನು ಬೆಳಸಿಕೊಂಡು ಸನ್ಮಾರ್ಗವನ್ನು ಬಿಟ್ಟು ಅಲೆಯುತ್ತಿರೋಣ: ಇಂಥ ಸಮಾಜವನ್ನೂ ಧರ್ಮವನ್ನೂ ಕಂಡೆವೆಂಬ ಪರದೇಶೀಯರು ಭಾರತ ಭೂಮಿಯನ್ನು ಅಪಹಾಸ್ಯಮಾಡಿದ್ದು ಏನು ತಪ್ಪು? ಈ ಕೊರತೆಯನ್ನೆಲ್ಲ ನೋಡಿ ಪರದೇಶೀಯರು ನಕ್ಕದ್ದಲ್ಲದೆ ಅವರಿಂದ ವಿದ್ಯೆ ಕಲಿತ ಭಾರತೀಯರೂ ಈ ದೋಷಗಳ ವಿಷಯದಲ್ಲಿ ಬೇಸರಗೊಂಡರು. ವಿಗ್ರಹಾರಾಧನೆ ಸಹಗಮನಗಳನ್ನು ಕುರಿತು ಮುಖ್ಯವಾಗಿ ಬೇಸರಗೊಂಡು ರಾಜಾ ರಾಮಮೋಹನರಾಯನು ಹತ್ತೊಂಬತ್ತನೆಯ ಶತಮಾನದ ಮೊದಮೊದಲಲ್ಲಿ ಬ್ರಾಹ್ಮಸಮಾಜವನ್ನು

ಆರಂಭಿಸಿದನು. ಹಿಂದೂ ಸಮಾಜದ ದೋಷಗಳನ್ನೇ ತೋರಿಸುತ್ತ ಕ್ರೈಸ್ತ ಮಿಷನರಿಗಳು ಜನರನ್ನು ಕ್ರೈಸ್ತಮತಕ್ಕೆ ಹೆಚ್ಚು ಹೆಚ್ಚಾಗಿ ಸೇರಿಸಿಕೊಳ್ಳುತ್ತಿರಲು ಇದನ್ನು ತಡೆಯುವುದಕ್ಕಾಗಿ ಹಿಂದೂ ಧರ್ಮದ ಸಹಜವಾದ ಸ್ವರೂಪವನ್ನು ಜನರಿಗೆ ದೊರಕಿಸಿಕೊಡಬೇಕೆಂದು ದೇವೇಂದ್ರನಾಥ ಠಾಕೂರನು ಬ್ರಾಹ್ಮಧರ್ಮವನ್ನು ಏರ್ಪಡಿಸಿದನು. ಬ್ರಾಹ್ಮಧರ್ಮವನ್ನು ಸೇರದಿದ್ದರೂ ಸಮಾಜದ ಹಲವು ಪದ್ಧತಿಗಳನ್ನು ಖಂಡಿಸಿ ವಿಧವಾ ವಿವಾಹ ಮೊದಲಾದ ಸುಧಾರಣೆಗಳನ್ನು ಕೈಕೊಂಡು ಈಶ್ವರಚಂದ್ರ ವಿದ್ಯಾಸಾಗರನು ಆಚಾರವಂತ ಜನರ ನಿಷ್ಠುರದಲ್ಲಿ ಸಿಕ್ಕಿದನು. ಭಗವದ್ಗೀತೆಯನ್ನು ಉಪದೇಶಮಾಡಿದ ಕೃಷ್ಣನು ಭಾಗವತದ ನೀತಿವಿರುದ್ಧವಾದ ವರ್ತನೆಯನ್ನು ಅವಲಂಬಿಸಿದ್ದಿರಲಾರನೆಂದು ಯೋಚನೆಮಾಡಿ ಬಂಕಿಂಚಂದ್ರನಂಥ ಸಾಹಿತ್ಯೋಪಾಸಕನು ಕೃಷ್ಣನ ಚರಿತೆಯ ಕಟ್ಟಡವನ್ನು ಬಿಚ್ಚಿ ಮತ್ತೆ ಕಟ್ಟಬೇಕಾಯಿತು. ಹೊಸ ಸಂಸ್ಕೃತಿ ಹಳೆಯ ಸಂಸ್ಕೃತಿಗಳ ಸಂಘರ್ಷಣದ ತುಮುಲದಲ್ಲಿ ಹೊರಗಿಂದ ಬಂದ ಕೆಲವು ಜನರು, ಪರದೇಶದ ಪ್ರೇತಧರ್ಮ ಸ್ವಲ್ಪವನ್ನೂ ಬುದ್ಧಧರ್ಮ ಸ್ವಲ್ಪವನ್ನೂ ಹಿಂದೂ ಧರ್ಮ ಸ್ವಲ್ಪವನ್ನೂ ಒಟ್ಟುಗೂಡಿಸಿ, ಸುಧಾರಣೆಯಲ್ಲಿ ಮನಸ್ಸುಳ್ಳ ದೇಶೀಯ ಪ್ರಮುಖರು ಕೆಲವರನ್ನು ಜೊತೆಮಾಡಿಕೊಂಡು ಥಿಯಾಸಫಿ ಎಂಬ ಒಂದು ಪಂಥವನ್ನು ಆರಂಭಿಸಿದರು. ಆರ್ಯಧರ್ಮ ಕೆಡುತ್ತಿರುವುದು ಬಹುವರ್ಣ ಬಹುಪುರಾಣಗಳ ಕಾರಣದಿಂದ, ಎಂದು ನಿರ್ಧರಿಸಿ ಸ್ವಾಮಿ ದಯಾನಂದ ಸರಸ್ವತಿ ಸನಾತನಧರ್ಮವು ವೇದಗಳನ್ನು ಮಾತ್ರ ಒಪ್ಪತಕ್ಕದ್ದು, ಎಂದು ಮೂಲಮಂತ್ರವನ್ನಾಗಿಟ್ಟುಕೊಂಡು ಆರ್ಯಸಮಾಜವನ್ನು ಸ್ಥಾಪಿಸಿದನು. ಸಮಾಜದ ನೇತೃಗಳು ಹೀಗೆ ಹತ್ತುಮುಖವಾಗಿ ನಡೆಯುತ್ತಿರಲು ದಾರಿ ಯಾವುದೆಂದು ಕಾಣದೆ ದೇಶವು ತೊಳಲುತ್ತಿದ್ದಿತು. ಆ ತೊಳಲಿಕೆ ಈಗಲೂ ಹೋಗಿಲ್ಲ; ಆದರೆ ಆಗ್ಗೆ ಅದು ಬಹಳ ಪ್ರಬಲವಾಗಿದ್ದಿತು. ಹೀಗೆ ಕ್ಷೋಭೆಯಲ್ಲಿದ್ದ ದೇಶಕ್ಕೆ ರಾಮಕೃಷ್ಣನ ಸಾಧನೆಯಿಂದ, ಉಪದೇಶದಿಂದ, ಆಗಬೇಕಾದ ಚಿಕಿತ್ಸೆ ಬಹಳವಿದ್ದಿತು.

ತಾನು ಏನಾದರೂ ಉಪದೇಶಮಾಡಿ ಈ ಚಿಕಿತ್ಸೆಯನ್ನು ಆರಂಭಿಸುವುದಕ್ಕೆ ಮೊದಲು ಅದುವರೆಗೆ ಕೆಲಸಮಾಡಿದ್ದ ಚಿಕಿತ್ಸಕರ ಪರಿಚಯ

ಮಾಡಿಕೊಳ್ಳಬೇಕೆಂದು ರಾಮಕೃಷ್ಣನಿಗೆ ಅಪೇಕ್ಷೆಯಾಯಿತು. ರಾಜಾ ರಾಮಮೋಹನರಾಯನು ಇವನು ಹುಟ್ಟುವ ಮೂರು ವರ್ಷದ ಹಿಂದೆಯೇ ತೀರಿಹೋಗಿದ್ದನು. ಆದರೆ ಅವನು ಸ್ಥಾಪಿಸಿದ ಸಮಾಜವು ಇವನ ಸಾಧನ ಮುಗಿದ ಕಾಲಕ್ಕೆ ದೇವೇಂದ್ರನಾಥ ಠಾಕೂರನ ನೇತೃತ್ವದಲ್ಲಿ ಸಾಕಾದಷ್ಟು ಪ್ರಬಲವಾಗಿದ್ದಿತು. ದೇವೇಂದ್ರನಾಥನ ಕೆಲವು ಅಭಿಪ್ರಾಯ ತನಗೆ ಸರಿಹೋಗಲಿಲ್ಲವೆಂದು ಕೇಶವಚಂದ್ರಸೇನನು ಬ್ರಾಹ್ಮಸಮಾಜದ ಹೊಸದೊಂದು ಶಾಖೆಯನ್ನು ಏರ್ಪಡಿಸಿದ್ದನು. ರಾಮಕೃಷ್ಣನು ಬರಬರುತ್ತ ಈ ಸಮಾಜದ ಸ್ವರೂಪವನ್ನು ತಕ್ಕಮಟ್ಟಿಗೆ ತಿಳಿದನು. ಕ್ರೈಸ್ತಸೇವಾ ಮಂದಿರಗಳಲ್ಲಿ 'ಧ್ಯಾನಮಾಡೋಣ' ಎಂದು ಕಣ್ಣುಮುಚ್ಚಿಕೊಂಡು ಎರಡು ನಿಮಿಷದಷ್ಟು ಹೊತ್ತು ಧ್ಯಾನಮಾಡುವ ಕ್ರಮವನ್ನು ಅನುಕರಿಸಿ ಬ್ರಾಹ್ಮಸಮಾಜಿಗಳು ಪ್ರಾರ್ಥನೆಯ ಸಭೆಯಲ್ಲಿ ಧ್ಯಾನಮಾಡುವೆವೆಂದು ಎರಡು ನಿಮಿಷ ಕಣ್ಣುಮುಚ್ಚಿ ತೆಗೆಯುವ ಪದ್ಧತಿ ಇವನಿಗೆ ಚೋದ್ಯವಾಗಿ ಕಂಡಿತು. ಇಂಥ ಒಂದು ಸಭೆಯಲ್ಲಿ ಕೇಶವಚಂದ್ರಸೇನ ಒಬ್ಬನ ಮನಸ್ಸನ್ನುಮಾತ್ರ ದೈವತತ್ತ್ವ ಮುಟ್ಟುತ್ತಿದ್ದಿತೆಂದು ಈತನು ಹೇಳಿದನು. ಬ್ರಾಹ್ಮಧರ್ಮದ ದೇವರಿಗೆ ತಲೆಯಿದೆ, ಕಾಲಿದೆ, ಮಧ್ಯದಲ್ಲಿ ದೇಹವಿಲ್ಲ, ಎಂದು ಇವನು ನಗೆಯಿಂದ ಅವರ ಭಾವನೆಯ ಕೊರತೆಯನ್ನು ಸೂಚಿಸಿದನಂತೆ. ಮಹರ್ಷಿಯೆಂದು ಹೆಸರಾದ ದೇವೇಂದ್ರನಾಥನನ್ನು ಇವನು ಒಂದು ಸಲ ಹೋಗಿ ಪರಿಚಯಮಾಡಿಕೊಂಡನು. ಅವನ ಸಿದ್ಧಿ ನಿಜವೇ ಎನ್ನುವುದನ್ನು ಪರೀಕ್ಷಿಸುವುದಕ್ಕೆ ಅವನ ಎದೆಯನ್ನು ತೆರೆಯಿಸಿ ನೋಡಿದನಂತೆ. ಠಾಕೂರರು ಸಿದ್ಧರು ನಿಜ; ಅವರ ಎದೆಯಲ್ಲಿ ಅಂತಹ ವ್ಯಕ್ತಿಗಳಲ್ಲಿ ಕಾಣುವ ವರ್ಣವೂ ವರ್ಚಸ್ಸೂ ಇದ್ದವು. ರಾಮಕೃಷ್ಣನು ಅವರನ್ನು ಒಪ್ಪಿಕೊಂಡನು; ಆದರೆ ಅವರಿಗೆ ಪ್ರಪಂಚದ ಒಳ್ಳೆಯ ವಸ್ತುಗಳು ಇನ್ನೂ ಇಷ್ಟವಾಗಿದ್ದವು ಎಂದು ಅವನಿಗೆ ತೋರಿತು. ಆ ವಯಸ್ಸಿನಲ್ಲಿ ಅವರಿಗೆ ಸಣ್ಣ ಮಕ್ಕಳಿದ್ದವು. ತೊಡುವ ದಾರಿ, ಬಿಡುವ ದಾರಿ, ಎರಡರಲ್ಲೂ ಮನಸ್ಸುಳ್ಳ ಇವರನ್ನು ಪರಮಹಂಸನು ಈಗಣ ಕಾಲದ ಜನಕನೆಂದು ವರ್ಣಿಸಿ ಹೊಗಳಿದನು. ಆದರೂ ಇವರ ಬಿಡುವಿಕೆ ತಿಳಿವಿನಿಂದ ಬಂದದಕ್ಕಿಂತ ಹೆಚ್ಚಾಗಿ ಶಕ್ತಿ ಕಡಮೆಯಾದದರಿಂದ ಬಂದದೆಂದು ಇವನಿಗೆ ಕಂಡಿತು. ನಿಮ್ಮ ಮನೆಯಲ್ಲಿ

ದುರ್ಗಾಪೂಜೆಯ ಹಬ್ಬದಲ್ಲಿ ಮೊದಲು ತುಂಬ ಮೇಕೆಗಳನ್ನು ಕೊಲ್ಲು ತ್ತಿದ್ದಿರಿ, ಈಗ ಏಕೆ ಕಡಮೆಮಾಡಿದಿರಿ, ಎಂದು ಒಬ್ಬ ಗೃಹಸ್ಥನನ್ನು ಕೇಳಲು, 'ನನಗೆ ಈಚೆಗೆ ಹಲ್ಲೆಲ್ಲ ಬಿದ್ದುಹೋಯಿತು, ಆಗಿನಷ್ಟು ಮಾಂಸ ವನ್ನು ಜೀರ್ಣಿಸಿಕೊಳ್ಳಲಾರೆ,' ಎಂದು ಅವನು ಹೇಳಿದನಂತೆ. ಠಾಕೂರರ ಭೋಗವರ್ಜನ ಇದರಂಥದು ಎಂದು ಹೇಳಿ ರಾಮಕೃಷ್ಣನು ನಕ್ಕನು. ಇವನು ತನ್ನನ್ನು ನೋಡುವುದಕ್ಕೆ ಬಂದಾಗ ದೇವೇಂದ್ರನಾಥನು ಮಾರನೆಯ ದಿನ ಮನೆಯಲ್ಲಿ ಏನೋ ಉತ್ಸವ ನೀವು ಬರಬೇಕು ಎಂದು ಇವನನ್ನು ಕರೆದನಂತೆ; ಈ ಮಾತಿನ ಜೊತೆಯಲ್ಲಿ, ಇನ್ನು ಸ್ವಲ್ಪ ಮೈ ಮುಚ್ಚಿಕೊಂಡು ಬರಬೇಕು, ಎಂದು ಸೂಚಿಸಿದನಂತೆ. ರಾಮಕೃಷ್ಣನು ಈ ಸಲಹೆಯಂತೆ ನಡೆದುಕೊಳ್ಳುವ ಭರವಸೆಯನ್ನು ಕೊಡಲಿಲ್ಲ. ಮಾರ ನೆಯ ದಿನ ಬೆಳಗಾಗ ದೇವೇಂದ್ರನಾಥನು, ನೀವು ಬರುವ ತೊಂದರೆಯನ್ನು ತೆಗೆದುಕೊಳ್ಳಬೇಕಾದದಿಲ್ಲ, ಎಂದು ಹೇಳಿಕಳುಹಿಸಿದನಂತೆ. ಈ ಕಥೆ ನಿಜವೇ ಆದ ಪಕ್ಷದಲ್ಲಿ ದೇವೇಂದ್ರನಾಥನು ಸ್ವಲ್ಪ ತಪ್ಪಾಗಿ ನಡೆದು ಕೊಂಡನು ಎಂದು ಹೇಳಬೇಕಾಗುತ್ತದೆ. ಅಂತೂ ರಾಮಕೃಷ್ಣನಿಗೆ ಬ್ರಾಹ್ಮಸಮಾಜದ ದಾರಿ ಸರಿಯಾದದೆಂದು ಕಾಣಲಿಲ್ಲ.

ಈಶ್ವರಚಂದ್ರ ವಿದ್ಯಾಸಾಗರನನ್ನೂ, ಬಂಕಿಂಚಂದ್ರ ಚಟ್ಟೋಪಾ ಧ್ಯಾಯನನ್ನೂ ಕಂಡು ರಾಮಕೃಷ್ಣನು ಬಹಳ ಸಂತೋಷಪಟ್ಟನು. ವಿದ್ಯಾಸಾಗರನನ್ನು ಕಂಡಾಗ, 'ನಾನು ಇದುವರೆಗೆ ಕೊಳವನ್ನೂ ಕೆರೆ ಯನ್ನೂ ಸರೋವರವನ್ನೂ ನೋಡಿದೆ. ಸಾಗರವನ್ನು ಇಂದು ಕಂಡೆ,' ಎಂದನಂತೆ. ವಿದ್ಯಾಸಾಗರನು, 'ಸಾಗರದಿಂದ ಒಂದಿಷ್ಟು ಉಪ್ಪು ನೀರನ್ನು ತೆಗೆದುಕೊಳ್ಳಬಹುದು, ಅದು ನಿಮಗೆ ಉಪಯೋಗವಿಲ್ಲ,' ಎಂದನು. ರಾಮಕೃಷ್ಣನು, 'ಅವಿದ್ಯೆಯ ಸಾಗರವಾಗಿದ್ದರೆ ಅದರ ನೀರು ಉಪ್ಪಾಗಿರು ತ್ತಿತ್ತು, ನಾನು ಬಂದಿರುವುದು ವಿದ್ಯೆಯ ಸಾಗರಕ್ಕೆ,' ಎಂದು ಉತ್ತರ ಕೊಟ್ಟನು. ಬಂಕಿಂಚಂದ್ರನನ್ನು ನೋಡಿದಾಗ ರಾಮಕೃಷ್ಣನು, 'ನಿನ್ನನ್ನು ಬಾಗಿಸಿದ್ದು ಏನು,' ಎಂದು ಕೇಳಿದನು. ಬಂಕಿಂ ಎಂದರೆ ಬಾಗಿರ ತಕ್ಕದ್ದು. ಬಂಕಿಮನು ನಗುತ್ತ, 'ಪರಂಗಿಯವರ ಕಾಲ ಒದೆತ,' ಎಂದು ಉತ್ತರ ಕೊಟ್ಟನು. ರಾಮಕೃಷ್ಣನು, 'ಅಲ್ಲ, ಅಲ್ಲ, ನಾನು ಆಡಿದ್ದು

ಆ ಮಾತನ್ನಲ್ಲ. ಕೃಷ್ಣನು ಪ್ರೇಮದಿಂದ ಬಾಗಿದನೆಂದು ಹೇಳುತ್ತಾರೆ. ಆದ್ದರಿಂದಲೇ ಅವನು ನಮಗೆ ತಿಳಿದಿರುವ ಭಂಗಿಯಲ್ಲಿ ನಿಂತಿರುವುದು' ಎಂದು ಹೇಳಿ, ಬಹು ವಿಶ್ವಾಸದಿಂದ ಮನುಷ್ಯನ ಕರ್ತವ್ಯದ ವಿಚಾರ, ಪ್ರಕೃತಿಪುರುಷ ವಿಚಾರ, ಮನುಷ್ಯನಿಗೆ ಗುರು ಬೇಕೆಂಬ ವಿಚಾರವಾಗಿ ಸಲುಗೆಯಾಗಿ ಮಾತನಾಡಿ ಹಿಂತಿರುಗಿದನು. ದಯಾನಂದ ಸರಸ್ವತಿಯನ್ನು ನೋಡಿ ಮಾತನಾಡಿ, ಇವನು ಬುದ್ಧಿವಂತನು, ವಿಷಯಗಳನ್ನು ತಿಳಿದುಕೊಂಡಿದ್ದಾನೆ, ಆದರೆ ವೇದದ ಮಾತುಗಳನ್ನು ನುಲಿಚಿ ತನಗೆ ಇಷ್ಟಬಂದ ಅರ್ಥವನ್ನು ಕೊಡುವುದಕ್ಕೆ ನೋಡುತ್ತಾನೆ, ಎಂದು ರಾಮಕೃಷ್ಣನು ಅಭಿಪ್ರಾಯಪಟ್ಟನು. ಒಟ್ಟಿನಲ್ಲಿ ತಾನು ಜನಕ್ಕೆ ತಿಳಿಸಬೇಕಾದ ವಿಷಯ ಇದೆಯೆಂದು ಅವನಿಗೆ ತೋರಿರಬೇಕು. ಶಿಷ್ಯರು ಬಂದಾರೇ ಎಂದು ಅವನ ಮನಸ್ಸಿನಲ್ಲಿ ಆಸೆ ತಲೆಯಿಟ್ಟಿತು.

ತನ್ನ ಉಪದೇಶದಿಂದ ಜನಕ್ಕೆ ಒಳ್ಳೆಯದಾಗಬಹುದೆನ್ನುವ ವಿಷಯದಲ್ಲಿ ಪರಮಹಂಸನಿಗೆ ಏನಾದರೂ ಸಂದೇಹವಿದ್ದಿದ್ದರೆ ಈ ಮೊದಲು ಕೇಶವಚಂದ್ರಸೇನನು ಇವನ ವಿಷಯದಲ್ಲಿ ನಡೆದುಕೊಂಡ ರೀತಿ ಅದನ್ನು ನಿವಾರಿಸಿದ್ದಿರಬೇಕು. ಕೇಶವಚಂದ್ರಸೇನನು ಆಂಗ್ಲೇಯ ವಿದ್ಯೆಯನ್ನೂ ಕ್ರೈಸ್ತ ಧರ್ಮವನ್ನೂ ಪಾಶ್ಚಾತ್ಯ ನಾಗರಿಕತೆಯನ್ನೂ ಬಲ್ಲ ತರುಣನು. ಬ್ರಾಹ್ಮಸಮಾಜದಲ್ಲಿ ಬೆಳೆದು ಅವನಿಗೆ ದೇವರನ್ನು ತಾಯಿಯೆನ್ನುವ ಮಾತು ವಿಕಾರವೆಂದು ಕಾಣುತ್ತಿದ್ದಿತು. ಕ್ರೈಸ್ತನ ಉಪದೇಶಕ್ಕೆ ಮನಸೋತು ಇವನು ರಾಮಮೋಹನ ದೇವೇಂದ್ರನಾಥರ ಬ್ರಾಹ್ಮಧರ್ಮಕ್ಕೆ ಕ್ರೈಸ್ತವರ್ಣವನ್ನು ಕೊಡಲು ಪ್ರಯತ್ನಮಾಡುತ್ತಿದ್ದನು. ಅವನ ಸ್ವಭಾವ ಭಕ್ತನದು; ಬ್ರಾಹ್ಮಸಮಾಜದಲ್ಲಿ ಅದಕ್ಕೆ ಸಾಕಾದಷ್ಟು ಅವಕಾಶವಿರಲಿಲ್ಲ. ಇವನು ಮೊದಲು ರಾಮಕೃಷ್ಣನನ್ನು ನೋಡಿದಾಗ, ತಾಯ ವಿಷಯದಲ್ಲಿ ಅವನಿಗಿದ್ದ ನಂಬಿಕೆಯನ್ನೂ ಅವಳನ್ನು ಕುರಿತ ಕೀರ್ತನದಲ್ಲಿ ಮೈಮರೆಯುವ ಭರದ ಆವೇಶವನ್ನೂ ಹಸುಳೆಯ ಮಾತಿನಂತೆ ಅಚ್ಚವಾದ ಮಾತಿನಲ್ಲಿ ಹೊರಕ್ಕೆ ಹರಿಯುತ್ತಿದ್ದ ಜೀವದ ಆಳವಾದ ಅನುಭವವನ್ನೂ ಕಂಡು, ಅವನನ್ನು ಹಿರಿಯವನೆಂದು ಸ್ವೀಕರಿಸಿದನು. ಪರಮಹಂಸನ ಅನುಯಾಯಿಗಳು ಕೇಶವಚಂದ್ರಸೇನನು ಅವನಿಗೆ ಶಿಷ್ಯನಾದ

ನೆಂದು ಹೇಳುತ್ತಾರೆ; ಕೇಶವಚಂದ್ರನ ಅನುಯಾಯಿಗಳು ಇದನ್ನು ಒಪ್ಪಿಕೊಂಡರೆ ತಮ್ಮ ನಾಯಕನಿಗೆ ಮರ್ಯಾದೆಗೆ ಕಡಮೆ ಎನ್ನುವ ದೃಷ್ಟಿಯಿಂದಲೋ ಎನ್ನುವಂತೆ ಇದು ಸುಳ್ಳು ಎನ್ನುತ್ತಾರೆ. ರಾಮಕೃಷ್ಣನು ತಾನು ಕೇಶವಚಂದ್ರನಿಗೆ ಗುರುವೆಂದು ಹೇಳಿಕೊಂಡಿರಲಾರನು. ಕೇಶವಚಂದ್ರನು ಯಾರಿಂದ ತನಗೆ ತಿಳಿವು ಬಂದಿತೋ ಅವರೆಲ್ಲ ತನ್ನ ಗುರುಗಳು ಎಂದು ಒಮ್ಮೆ ಹೇಳಿದನು; ಇಂಥ ಮನುಷ್ಯನಿಗೆ ರಾಮಕೃಷ್ಣನನ್ನು ಗುರುವೆನ್ನುವುದು ಮರ್ಯಾದೆಗೆ ಕಡಮೆಯೆಂದು ತೋರಿರಲಾರದು. ಗುರುಶಿಷ್ಯರಾಗದಿದ್ದರೂ ಇವರಿಬ್ಬರೂ ದೈವಭಕ್ತಿಯಲ್ಲಿ ಒಬ್ಬರ ಜೊತೆಗೆ ಒಬ್ಬರು ನಿಂತು ಹಲವು ವರ್ಷ ಒಂದು ದಾರಿಯಲ್ಲಿ ನಡೆದರು. ಕೇಶವಚಂದ್ರನು ಮಾತನಾಡುವನು; ರಾಮಕೃಷ್ಣನು ಕೇಳುವನು, ಒಪ್ಪುವನು, ಬಹು ಪ್ರಿಯವಾದ ಮಾತು ಏನಾದರೂ ಬಂದಾಗ ಅದರ ಆನಂದದಲ್ಲಿ ಭಾವಪರವಶನಾಗುವನು. ರಾಮಕೃಷ್ಣನು ತಾಯನ್ನು ಕುರಿತು ಮಾತನಾಡುವನು, ಕೀರ್ತನವಮಾಡುವನು; ಕೇಶವಚಂದ್ರನಿಗೆ ಸಾಧನೆಯ ಮಾರ್ಗವನ್ನು ತೋರುವನು. ಅನೇಕ ಸಲ ಇವರಿಬ್ಬರೂ ಒಂದು ದೋಣಿಯಲ್ಲಿ ಕುಳಿತು ಗಂಗೆಯ ಪ್ರವಾಹದ ಮೇಲೆ ಇತ್ತಲಿಂದತ್ತ, ಅತ್ತಲಿಂದಿತ್ತ, ಅದನ್ನು ನಡೆಯ ಬಿಟ್ಟು ಭಗವದ್ವಿಷಯವಾಗಿ ಮಾತಿನಲ್ಲಿ ಹೊತ್ತೇ ತಿಳಿಯದೆ ಮಗ್ನರಾಗಿರುವರು. ಕೇಶವಚಂದ್ರಸೇನನು ಇಂಗ್ಲೀಷಿನಲ್ಲಿ ತನ್ನ ಶಾಖೆಯ ಭಾವನೆಗಳೇನೆಂದು ಅನೇಕ ಉಜ್ವಲವಾದ ಭಾಷಣಗಳನ್ನು ಮಾಡಿ ಪ್ರಸಿದ್ಧನಾಗಿದ್ದನು. ಕ್ರೈಸ್ತ ಧರ್ಮದ ಕಡೆಗೆ ಮಾಲ್ಮೆ ಇದ್ದದರಿಂದ ಇವಕ್ಕೆ ಪಾಶ್ಚಾತ್ಯರು ವಿಶೇಷ ಗಮನವನ್ನು ಕೊಟ್ಟರು. ಆದರೆ ಅವನ ಭಾಷಣಗಳಲ್ಲಿ ಆಮೇಲೆ ಕ್ರೈಸ್ತ ಧರ್ಮಕ್ಕೂ, ವಾಡಿಕೆಯ ಹಿಂದೂ ಧರ್ಮಕ್ಕೂ ಮೀರಿದ ಒಂದು ಕಲ್ಪನೆ ತಲೆದೋರಿತು. ಅದರ ಮೂಲ ಕೇಶವಚಂದ್ರನು ಬಹು ಧರ್ಮಗಳನ್ನು ಕುರಿತು ಮಾಡಿದ್ದ ವಿಚಾರ ಬರಬರುತ್ತ ವಿಶಾಲವಾದುದರಲ್ಲಿ ಇರಬಹುದು. ಆದರೆ ಅದಕ್ಕೆ ಶಕ್ತಿಯನ್ನು ಕೊಟ್ಟದ್ದು ರಾಮಕೃಷ್ಣ ಪರಮಹಂಸನ ಸಹವಾಸ ಎನ್ನುವುದರಲ್ಲಿ ಸಂಶಯವಿಲ್ಲ. ಕೇಶವಚಂದ್ರಸೇನನ ಅನುಯಾಯಿಗಳೇ ಕೆಲವರು ಈ ಸೂಚನೆ ಬರುವ ಮಾತನ್ನು ಹೇಳಿದ್ದಾರೆ. ಕೇಶವಚಂದ್ರನು ಕೊನೆಕೊನೆಗೆ ರೋಗಕ್ಕೆ

ಸಿಕ್ಕಿದಾಗ ರಾಮಕೃಷ್ಣನು ವಿಶ್ವಾಸದಿಂದ ಅವನ ಬಳಿಗೆ ಹೋಗಿ ಸ್ವಲ್ಪ ಹೊತ್ತು ಕುಳಿತಿದ್ದು ಬರುವನು. ಕೇಶವನ ಅನುಭವ ತೀವ್ರ, ಆದರಿಂದ ಆ ದೇಹ ಜರ್ಝರಿತವಾಗಿ ಹೋಗಿದೆ, ಗಂಗೆಯಲ್ಲಿ ದೊಡ್ಡ ದೋಣಿಯೊಂದು ಪ್ರಯಾಣಮಾಡಿ ಹೋದಮೇಲೆ ನೀರು ಮೇಲೆದ್ದು ದಡಮುಟ್ಟಿ, ಒಂದಷ್ಟು ಮಣ್ಣನ್ನು ಕೊಚ್ಚುವಂತೆ ಪ್ರಚಂಡವಾದ ಭಾವ ಮನಸ್ಸಿನಲ್ಲಿ ಹೊಕ್ಕು ಹೋಗವ ವೇಳೆಗೆ ಮೈಯನ್ನು ಕರಗಿಸಿಹೋಗುತ್ತದೆ, ಎಂದು ಇವನು ಹೇಳಿದನು. ಕೇಶವಚಂದ್ರನು ನೋವಿನಿಂದ ನರಳಿದಾಗ, ತೋಟಗಾರನು ಗಿಡಕ್ಕೆ ಒಳ್ಳೆಯದಾಗಲೆಂದು ಬುಡವನ್ನು ಕೊತ್ತಿಕೊಡುತ್ತಾನೆ, ಉತ್ತಮ ಜಾತಿಯ ಗಿಡಕ್ಕೆ ಕೊತ್ತುವುದು ಹೆಚ್ಚು, ಒಳ್ಳೆಯ ಹೂ ಬಿಡುವುದಕ್ಕೆ ಅದು ಅವಶ್ಯಕವೆಂದು ಹಾಗೆ ಮಾಡುತ್ತಾನೆ, ಎಂದನು. ಕೊನೆಯ ಸಲ ಅವನನ್ನು ಕಂಡಾಗ ಕೇಶವಚಂದ್ರಸೇನನು ಬಂದು ಇವನ ಕಾಲಿಗೆ ಬಿದ್ದನಂತೆ. ಅವನು ಬರುವ ವೇಳೆಗೆ ರಾಮಕೃಷ್ಣನು ಸಮಾಧಿಯಲ್ಲಿದ್ದನು; ಆ ಅವಸ್ಥೆಯ ಅರೆಯರಿವಿನಲ್ಲಿ ಅವನಿಗೆ ಸಮಾಧಾನ ಹೇಳಿದನು. ಕೊನೆಯ ಕಾಲಕ್ಕೆ ಹೊತ್ತನ್ನೆಲ್ಲ ಹೆಂಡಿರುಮಕ್ಕಳೊಂದಿಗೆ ಕಳೆಯಬೇಡ, ಮನಸ್ಸನ್ನು ದೇವರ ನೆನವಿಗೆ ಸ್ವಲ್ಪ ಕೊಡು, ಎಂದು ಬುದ್ಧಿ ಹೇಳಿದನು. ಕೇಶವಚಂದ್ರಸೇನನು ತೀರಿಹೋದನೆಂದು ವರ್ತಮಾನ ಬಂದಾಗ ಪರಮಹಂಸನು ಖಿನ್ನನಾದನು; ನನ್ನ ಉಸಿರಿನ ಅರ್ಧ ಹೊರಟುಹೋಯಿತು ಎಂದನು.

ಈ ವೇಳೆಗೆ ಪರಮಹಂಸನ ಬಳಿಗೆ ಅನೇಕ ಶಿಷ್ಯರು ಬಂದು ಸೇರಿದ್ದರು. ತಾವರೆ ಅರಳುತ್ತದೆ; ತುಂಬಿಗಳು ಬಂದು ಅದನ್ನು ಮುತ್ತುತ್ತವೆ; ಗುರು ತನ್ನನ್ನು ಆಶ್ರಯಿಸೆಂದು ಕರೆಯಬೇಕಾದದ್ದಿಲ್ಲ, ಜನ ತಾವಾಗಿ ಅವನ ಬಳಿಗೆ ಬರುತ್ತಾರೆ: ಎಂದು ರಾಮಕೃಷ್ಣನು ಆಮೇಲೆ ಶಿಷ್ಯರಿಗೆ ಹೇಳಿದನು. ಶಿಷ್ಯರು ಬಂದಾರೇ ಎಂದು ಅವನು ಆಶಿಸುವ ಕಾಲಕ್ಕೆ ರಾಮಚಂದ್ರದತ್ತ ಮನಮೋಹನಮಿತ್ರ ಎಂಬ ಇಬ್ಬರು ತರುಣರು ಇವನ ಹತ್ತಿರ ಬರುತ್ತ ಹೋಗುತ್ತ ಇದ್ದವರು ಇವನಿಗೆ ಶಿಷ್ಯರಾದರು. ಇವರು ಆಗಾಗ ಗುರುವನ್ನು ಮನೆಗೆ ಕರೆಸಿಕೊಂಡು ಅವನು ಯಾವುದಾದರೊಂದು ವಿಷಯವನ್ನು ಕುರಿತು ಮಾತನಾಡುವುದಕ್ಕೆ ಅವಕಾಶವನ್ನು ಕಲ್ಪಿಸುವರು. ರಾಮಚಂದ್ರದತ್ತನಿಗೆ ಮೊದಲಲ್ಲಿ ದೇವ

ರಿರುವನೆಂಬ ನಂಬಿಕೆ ಇರಲಿಲ್ಲ. ಅವನಿರುವುದು ನಿಜವೇ ಎಂದು ರಾಮಚಂದ್ರನು ಗುರುವನ್ನು ಕೇಳಿದನು. ಅವನು ಉತ್ತರವಾಗಿ, 'ಅದಕ್ಕೆ ಸಂದೇಹವಿಲ್ಲ. ಹಗಲಲ್ಲಿ ನಿನಗೆ ತಾರೆಗಳು ಕಾಣುವುದಿಲ್ಲ. ಆದಮಾತ್ರಕ್ಕೆ ಅವು ಇಲ್ಲವೆನ್ನಲಾಗುತ್ತದೆಯೋ? ಹಾಲಿನಲ್ಲಿ ಬೆಣ್ಣೆಯಿದೆ, ಅದು ಕಣ್ಣಿಗೆ ಕಾಣುತ್ತದೆಯೇನು? ಕಡೆಯದೆ ಬೆಣ್ಣೆ ಕೈಗೆ ಸಿಕ್ಕುವುದಿಲ್ಲ, ಯತ್ನಮಾಡದೆ ದೇವರೂ ಕಾಣುವುದಿಲ್ಲ,' ಎಂದನು. ಕೊಂಚ ದಿವಸದಲ್ಲಿ ರಾಮಚಂದ್ರನ ಸ್ನೇಹಿತನಾದ ಸುರೇಂದ್ರನಾಥ ಮಿತ್ರನೆಂಬವನು ಗುರುವಿನ ಬಳಿಗೆ ಬಂದನು. ಆ ಮೊದಲು ಅವನು ತನ್ನ ಸ್ವಭಾವವನ್ನು ತಿದ್ದಿಕೊಳ್ಳುವುದಕ್ಕೆ ಯತ್ನಮಾಡಿದ್ದನು; ಅದು ಸಾಕಾದಷ್ಟು ಸಫಲವಾಗಿರಲಿಲ್ಲ. ಅವನು ಬಂದ ದಿನ ರಾಮಕೃಷ್ಣನು ಮತ್ತಾರನ್ನೋ ಕುರಿತು, 'ಮನುಷ್ಯನು ದೇವರಲ್ಲಿ ಬೆಕ್ಕಿನ ಮರಿಯಂತೆ ನಡೆದುಕೊಳ್ಳದೆ ಕೋತಿಯ ಮರಿಯಂತೆ ನಡೆಯುವುದೇಕೆ? ಬೆಕ್ಕಿನ ಮರಿಯನ್ನು ತಾಯಿ ಬಾಯಲ್ಲಿ ಕಚ್ಚಿಕೊಂಡು ಓಡಾಡುತ್ತದೆ; ಮರಿಗೆ ಹಿಡಿದುಕೊಳ್ಳುವ ಹೊಣೆಯಿಲ್ಲ. ಕೋತಿಯ ಮರಿ ತಾನೂ ತಾಯ ಹೊಟ್ಟೆಯನ್ನು ಹಿಡಿಯುತ್ತದೆ, ಕೈ ಬಿಟ್ಟರೆ ಬೀಳುವ ಸಂಭವವುಂಟು. ದೇವರ ಮೇಲೆ ಭಾರ ಹಾಕುವುದೇ ಸರಿಯಾದ ದಾರಿ,' ಎಂದು ಉಪದೇಶಿಸುತ್ತಿದ್ದನು. ಸುರೇಂದ್ರನಿಗೆ ತನ್ನ ಪ್ರಯತ್ನ ಕೋತಿಯ ಮರಿಯ ಪ್ರಯತ್ನದಂತೆ ಎಂದು ಕಂಡಿತು. ಕೇದಾರನಾಥ ಚಟ್ಟೋಪಾಧ್ಯಾಯನೆಂಬಾತನು ಬ್ರಾಹ್ಮಸಮಾಜದಲ್ಲಿದ್ದು ಅಲ್ಲಿ ಮನಸ್ಸಿಗೆ ಸಮಾಧಾನವಾಗದೆ ಪರಮಹಂಸನ ಬಳಿಗೆ ಬಂದು ಸೇರಿದನು. ರಾಮಚಂದ್ರದತ್ತನ ಮನೆಯ ಸೇವಕನಾದ ಲಾಟು ಎಂಬ ತರುಣನು ಪರಮಹಂಸನಿಗೆ ಆಗಾಗ ಹಣ್ಣುಹಂಪಲನ್ನು ಒಪ್ಪಿಸುವುದಕ್ಕೆ ಬರುತ್ತಿದ್ದು ಕೊನೆಗೆ ಅವನ ಸಾನ್ನಿಧ್ಯದ ಸೇವಕನಾಗಿ ನಿಂತನು, ಶಿಷ್ಯನಾದನು. ಮನಮೋಹನ ಮಿತ್ರನ ತಂಗಿಯ ಗಂಡ ರಾಖಾಲಚಂದ್ರಘೋಷ್ ಎಂಬ ತರುಣನು ಆಮೇಲೆ ಬಂದನು. ಹೀಗೆ ಒಬ್ಬೊಬ್ಬರಾಗಿ ಇಪ್ಪತ್ತೈದು ಜನ ಪರಮಹಂಸನಿಗೆ ಶಿಷ್ಯರಾದರು. ಗುರು ಒಬ್ಬೊಬ್ಬರ ಮನೋಧರ್ಮವನ್ನು ಪರೀಕ್ಷಿಸಿ ಆಮೇಲೆ ಅವರನ್ನು ಶಿಷ್ಯರನ್ನಾಗಿ ಸ್ವೀಕರಿಸಿದನು; ಒಬ್ಬೊಬ್ಬನಿಗೂ ಅವನಿಗೆ ತಕ್ಕದಾದ ದಾರಿಯನ್ನು ತೋರಿಸಿದನು. ಒಬ್ಬನು ಸ್ವಲ್ಪ ಕೋಪಿಷ್ಠನು;

ಗಂಗೆಯ ಮೇಲೆ ದೋಣಿಯಲ್ಲಿ ಬರುತ್ತ ಯಾರೋ ರಾಮಕೃಷ್ಣನನ್ನು ಹೀಯಾಳಿಸಿದ ಮಾತು ಕೇಳಿ, 'ತಪ್ಪಾಯಿತು' ಎಂದರೆ ಸರಿ, ಇಲ್ಲದಿದ್ದರೆ ದೋಣಿಯನ್ನು ಮುಳುಗಿಸಿಬಿಡುತ್ತೇನೆ, ಎಂದನಂತೆ. ಇದನ್ನು ಕೇಳಿದಾಗ ರಾಮಕೃಷ್ಣನು, 'ಇಂಥ ವರ್ತನೆ ಶುದ್ಧ ತಪ್ಪು, ಕೋಪವು ಮನುಷ್ಯನನ್ನು ಹಾಳುಮಾಡುತ್ತದೆ. ಅವರು ನನ್ನನ್ನು ಏನೆಂದರೇನು? ನೀನು ಕೋಪವನ್ನು ತಡೆಯುವುದನ್ನು ಕಲಿತುಕೊ,' ಎಂದನು. ಮತ್ತೊಬ್ಬನು ಬಹು ಸಾತ್ವಿಕನಾಗಿ ಪೇಟೆಗೆ ಹೋದಾಗ ಮೂರು ಕಾಸಿನ ಸಾಮಾನಿಗೆ ಆರು ಕಾಸು ಕೊಟ್ಟು ತರುತ್ತಿದ್ದನು. ರಾಮಕೃಷ್ಣನು ಅವನಿಗೆ, 'ಮನುಷ್ಯನು ಸಾತ್ವಿಕನಾಗಿರುವುದೇನೊ ಒಳ್ಳೆಯದು, ಆದರೆ ಮುಟ್ಠಾಳನಾಗಿರಬಾರದು,' ಎಂದು ಕಲಿಸಿದನು. ಜೀವವನ್ನು ನೋಯಿಸಬಾರದು ಎಂಬ ತತ್ವವನ್ನು ತೀರ ಅತಿಯಾಗಿ ನಡೆಸಬಹುದಾಗಿದ್ದ ಒಬ್ಬ ಶಿಷ್ಯನು ಒಂದು ದಿನ ಗುರುವಿನ ಕೋಣೆಗೆ ಬಂದಾಗ ಗುರು ತನ್ನ ಹಾಸಿಗೆಯಲ್ಲಿದ್ದ ತಗಣಿಯನ್ನು ಕೊಲ್ಲುತ್ತಿದ್ದ ದೃಶ್ಯ ಕಂಡಿತು. ಇದು ಏನು ಎಂದು ಶಿಷ್ಯನು ಕೇಳಿದಾಗ ಗುರು, 'ಧ್ಯಾನಕ್ಕೆ ಕುಳಿತಾಗ ಇವು ಕಡಿದು ಮನಸ್ಸನ್ನು ದೇಹದ ಕಡೆಗೆ ಸೆಳೆಯುತ್ತವೆ. ಆದ್ದರಿಂದ ಇವನ್ನು ಕೊಲ್ಲಬೇಕು,' ಎಂದನು. ಒಬ್ಬ ಶಿಷ್ಯನು ವಿನೋದಕ್ಕಾಗಿ ಗಾಳಹಾಕಿ ಮೀನು ಹಿಡಿಯುತ್ತಿದ್ದನು. ಗುರು, 'ಇದು ಜೀವಹಿಂಸೆಯ ಕೆಲಸ. ಇದರಲ್ಲಿ ವಿನೋದವೇನು? ಇದನ್ನು ಬಿಡು,' ಎಂದನು. ಒಬ್ಬನು ಪ್ರಪಂಚದ ಸುಖದಲ್ಲಿ ಆಸೆಯುಳ್ಳವನಾಗಿದ್ದನು. ಗುರು ಅವನಿಗೆ, 'ಕಾಡಿಗೆ ಹೋದವನಿಗೆ ಮೊದಲು ಗಂಧದ ಮರ, ಆಮೇಲೆ ಚಿನ್ನದ ಗಣಿ, ಆಮೇಲೆ ವಜ್ರದ ಗಣಿ, ಕಾಣುವಂತೆ ಜೀವನದಲ್ಲಿ ಮನುಷ್ಯನಿಗೆ ದೊರೆಯುವ ಸುಖಗಳು. ಯಾವುದೋ ಸ್ವಲ್ಪ ಸುಖ ದೊರೆಯಿತೆಂದು ಮನುಷ್ಯನು ಅವುಗಳನ್ನು ಸವಿಯುತ್ತ ನಿಲ್ಲಬಾರದು. ಮುಂದೆ ಹೋಗಬೇಕು. ಗಂಧದ ಮರವನ್ನು ಬಿಟ್ಟು ಹೋದರೆ ಚಿನ್ನ ಸಿಕ್ಕುತ್ತದೆ, ಅದನ್ನೂ ಬಿಟ್ಟು ಮುಂದೆ ಹೋದರೆ ವಜ್ರ ಸಿಕ್ಕುತ್ತದೆ,' ಎಂದನು. ಮತ್ತೊಬ್ಬನು ಸಂಸಾರವನ್ನು ಬಿಡಲು ಆಸೆ ತೋರಿದಾಗ, 'ಹೀಗೆ ಆತುರಪಡಬಾರದು, ಸಂಸಾರದಲ್ಲಿದ್ದು ಆಸೆಗಳನ್ನು ಎದುರಿಸುವವನು ಕೋಟೆಯಲ್ಲಿ ಕುಳಿತು ಹಗೆಯೊಂದಿಗೆ ಕಾದುವವನಂತೆ. ಸಂಸಾರವನ್ನು

ಬಿಟ್ಟವನು ಕೋಟೆಯನ್ನು ಬಿಟ್ಟು ಬಯಲಲ್ಲಿ ನಿಂತ ವೀರನಂತಾಗುತ್ತಾನೆ. ಈ ಕಾದಾಟ ಬಹಳ ಕಷ್ಟ,' ಎಂದನು. ಒಬ್ಬ ಶಿಷ್ಯನು ಸರ್ಕಾರದ ಕೆಲಸಕ್ಕೆ ಸೇರಿದನೆಂದು ತಿಳಿದಾಗ, 'ಈ ಸೆರೆಗೆ ಸಿಕ್ಕುವುದಕ್ಕಿಂತ ತೀರಿ ಹೋಗಿದ್ದರೆ ಚೆನ್ನಾಗಿತ್ತು,' ಎಂದು ಗುರು ಹೇಳಿದನು. 'ತಾಯಿಗೆ ಬೇರೆ ದಿಕ್ಕಿಲ್ಲ. ಅವಳಿಗಾಗಿ ಈ ಕೆಲಸವನ್ನು ತೆಗೆದುಕೊಂಡನು,' ಎಂದು ಯಾರೋ ವಿವರಿಸಲು, 'ಹಾಗಾದರೆ ಒಳ್ಳೆಯದಾಯಿತು,' ಎಂದನು. ಹೀಗೆ ಒಬ್ಬೊಬ್ಬ ಶಿಷ್ಯನಿಗೂ ಅವಶ್ಯಕವಾದ ತಿಳಿವಳಿಕೆ ಉಪದೇಶವನ್ನು ಕೊಡುತ್ತ ಈ ಗುರು ಎಲ್ಲರಿಗೂ ಅವರು ಹೇಗೆ ಮುಂದುವರಿಯಬೇಕೆನ್ನುವುದನ್ನು ತೋರಿಸಿಕೊಟ್ಟನು.

ಹೀಗೆ ಇವನ ಬಳಿಗೆ ಬಂದ ಶಿಷ್ಯರಲ್ಲಿ ಎಲ್ಲರಿಗಿಂತ ದಕ್ಷನೂ ಗುರುವಿಗೆ ಪ್ರಿಯನೂ ಆದವನು ನರೇಂದ್ರನಾಥ ದತ್ತನು. ಇವನೇ ಆಮೇಲೆ ಪ್ರಪಂಚದಲ್ಲಿ ಪ್ರಸಿದ್ಧಿಯನ್ನು ಪಡೆದ ಧರ್ಮಶೌಂಡೀರ ವಿವೇಕಾನಂದನು. ನರೇಂದ್ರನು ಕಾಯಸ್ಥ ಕುಲದವನು. ಅವನ ತಂದೆ ಕಲಿಕತೆಯಲ್ಲಿ ಆಟೋರ್ನಿ ಎಂಬ ರೀತಿಯ ವಕೀಲನಾಗಿದ್ದನು. ನರೇಂದ್ರನು ಚಿಕ್ಕಂದಿನಿಂದಲೂ ಬಹಳ ಬುದ್ಧಿವಂತನೆನಿಸಿಕೊಂಡ ತರುಣ. ಅವನು ಹಾಡಬಲ್ಲನು; ವ್ಯಾಯಾಮ ಮಂದಿರಗಳಲ್ಲಿ ಶಿಕ್ಷಣವನ್ನು ಪಡೆದು ದೃಢಕಾಯನಾಗಿದ್ದನು; ಕತ್ತಿ ತಿರುಗಿಸುವುದನ್ನು ಕಲಿತಿದ್ದನು. ಚಿಕ್ಕಂದಿನಿಂದ ಇವನ ಮನಸ್ಸು, ಒಂದು ಕಡೆ ಪ್ರಪಂಚದಲ್ಲಿರುತ್ತ ಐಶ್ವರ್ಯವನ್ನು ಸಂಪಾದಿಸಿ ಭೋಗಿಯಾಗಿರಬೇಕು ಎನ್ನುವುದು, ಮತ್ತೊಂದು ಕಡೆ ಎಲ್ಲವನ್ನೂ ಬಿಟ್ಟು ತ್ಯಾಗದಲ್ಲಿ ಶಾಂತಿಯನ್ನು ಸಾಧಿಸಬೇಕು ಎನ್ನುವುದು. ಆಂಗ್ಲವಿದ್ಯೆಯಲ್ಲಿ ಮುಂದುವರಿದಂತೆ ಇವನಿಗೆ ದೇವರಿದಾನೆಯೋ ಎಂಬ ವಿಷಯದಲ್ಲಿ ಸಂದೇಹ ಹುಟ್ಟಿತು. ಜೊತೆಯವರೊಂದಿಗೆ ಇವನು ಇಂಥ ವಿಷಯಗಳನ್ನು ಚರ್ಚಿಸುತ್ತಿದ್ದನು. ಇವರಲ್ಲಿ ವ್ರಜೇಂದ್ರನಾಥ ಶೀಲರೊಬ್ಬರು. ಶೀಲರು ಈಗಲೂ ಜೀವಂತರಾಗಿದ್ದಾರೆ; ಈಗ ಕೆಲವು ವರ್ಷಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದರು. ವ್ರಜೇಂದ್ರನಾಥರು ನರೇಂದ್ರನಿಗಿಂತ ಒಂದು ತರಗತಿ ಮೇಲೆ ಇದ್ದರಂತೆ. ಅವರೂ ಬಹು ಪ್ರತಿಭಾವಂತರೆಂದು ಹೆಸರಾಗಿದ್ದರು. ಪೌರ್ವಾತ್ಯ

ಪಾಶ್ಚಾತ್ಯ ತತ್ವಶಾಸ್ತ್ರಗಳ ಸಮ್ಮಿಲನದಿಂದ ಪರಿಶುದ್ಧ ವಿಚಾರ ಅಥವಾ ವಿಶ್ವಸಮ್ಮತ ವಿಚಾರ ಎಂಬ ಹೆಸರಿನಿಂದ ಅವರು ಒಂದು ವಿಚಾರ ಕ್ರಮವನ್ನು ಏರ್ಪಡಿಸಿಕೊಂಡಿದ್ದರು. ದೇವರ ಇರವಿನ ವಿಷಯದಲ್ಲಿ ಸಂದೇಹಗ್ರಸ್ತನಾದ ನರೇಂದ್ರನಿಗೆ ಇವರು ಈ ವಿಚಾರ ಪದ್ಧತಿಯನ್ನು ವಿವರಿಸಿ ಹೇಳಿದರಂತೆ. ದೇವರಿಂದ ಮನಸ್ಸಿಗೆ ಬರುವ ತೃಪ್ತಿ ಈ ವಿಚಾರ ಪದ್ಧತಿಯಿಂದ ಬರುವುದು ಸಾಧ್ಯವಲ್ಲ. ತರುಣನ ಮನಸ್ಸು ಎಂದಿನಂತೆ ತೊಳಲುತ್ತಲೇ ಇದ್ದಿತು. ಯೋಚನಾಪರರಾದ ಜೊತೆಯ ಅನೇಕ ತರುಣ ರಂತೆ ಇವನೂ ಬ್ರಾಹ್ಮಸಮಾಜವನ್ನು ಆಶ್ರಯಿಸಿ ನೋಡಿದನು; ಅಲ್ಲಿಯೂ ಮನಸ್ಸಿಗೆ ಸಮಾಧಾನ ದೊರೆಯಲಿಲ್ಲ. ಹೀಗಿರುತ್ತಿರಲಾಗಿ ಒಬ್ಬರ ಮನೆಯಲ್ಲಿ ಒಂದು ಪ್ರಸಂಗ ನಡೆದ ಸಂದರ್ಭದಲ್ಲಿ ನರೇಂದ್ರನು ಇದ್ದು ಕೆಲವು ಕೀರ್ತನೆಗಳನ್ನು ಹಾಡಿದ ವೇಳೆ ರಾಮಕೃಷ್ಣನು ಅಲ್ಲಿ ಬಂದಿದ್ದವನು ಅವನ ಹಾಡಿಗೆ ಸಂತೋಷಪಟ್ಟು ಅವನಿಗೆ ಎರಡು ಮಾತನ್ನು ಹೇಳಿ ದಕ್ಷಿಣೇಶ್ವರಕ್ಕೆ ಬರಹೇಳಿ ಅವನನ್ನು ಕರೆದನು. ಕೆಲವು ದಿವಸದ ಮೇಲೆ ನರೇಂದ್ರನ ನೆಂಟ ರಾಮಚಂದ್ರ ದತ್ತನು, 'ನೀನು ಮತ, ಮತ, ಎಂದು ಅಲ್ಲಿ ಇಲ್ಲಿ ಏಕೆ ಅಲೆಯುತ್ತೀದೀಯೆ, ಮತ ಬೇಕಾದರೆ ದಕ್ಷಿಣೇಶ್ವರಕ್ಕೆ ಹೋಗು, ಅದು ನಿನಗೆ ನಿಜವಾಗಿ ಸಿಕ್ಕುತ್ತದೆ,' ಎಂದನು. ಹಾಗಾದರೆ ನೋಡೋಣವೆಂದು ಒಂದು ದಿನ ನರೇಂದ್ರನು ದಕ್ಷಿಣೇಶ್ವರಕ್ಕೆ ಪರಮಹಂಸನ ದರ್ಶನಕ್ಕೆಂದು ಬಂದನು.

ಮೊದಲನೆಯ ಸಲ ನರೇಂದ್ರನು ದಕ್ಷಿಣೇಶ್ವರಕ್ಕೆ ಬಂದಾಗ ಏನು ನಡೆಯಿತೆಂದು ರಾಮಕೃಷ್ಣನೂ ನರೇಂದ್ರನೂ ಆಮೇಲೆ ವರ್ಣಿಸಿ ಹೇಳಿದರು. ಇಬ್ಬರ ಜೀವನದಲ್ಲಿಯೂ ಅದು ಕಲ್ಯಾಣಕಾರಿಯಾದ ಸಂಧಿ ಯಾಯಿತು; ಆದಕಾರಣ ಇಬ್ಬರಿಗೂ ಅದು ಬಹು ಮುಖ್ಯ ಸಂದರ್ಭ ವೆಂದು ತೋರಿತು. ನರೇಂದ್ರನು ಬರುವಾಗ್ಗೆ ರಾಮಕೃಷ್ಣನ ಕೋಣೆ ಯಲ್ಲಿ ಎಂದಿನಂತೆ ಜನ ಸುತ್ತ ಕುಳಿತು ಅವನ ಮಾತನ್ನು ಕೇಳುತ್ತಿದ್ದರು. ನರೇಂದ್ರನು ಒಳಕ್ಕೆ ಬಂದನು. ಬಟ್ಟೆಬರೆಯ ವಿಷಯದಲ್ಲಿ ಹೆಚ್ಚು ಚಿಂತಿಸದ, ಹೊರಗೆ ನಡೆಯುವುದು ಏನು ಎಂದು ಅಷ್ಟಾಗಿ ಗಮನಿಸದ, ನಿರಂತರವೂ ಸ್ವಲ್ಪವಾದರೂ ಅಂತರ್ಮುಖವಾಗಿ ಇರುವುದೆಂಬ ದೃಷ್ಟಿಯ,

ಇಂಥ ತರುಣನು ಕಲಿಕತೆಯಿಂದ ಬರುವನೇ ಎಂದು ಪರಮಹಂಸನು ಸ್ವಲ್ಪ ಸೋಜಿಗಗೊಂಡನು. ನೆಲದಮೇಲೆ ಒಂದು ಚಾಪೆ. ಗುರು ನರೇಂದ್ರನನ್ನು ಅದರ ಮೇಲೆ ಕುಳಿತುಕೊ ಎಂದನು. ಹಿಂದೆ ಅವನು ಸುರೇಂದ್ರನ ಮನೆಯಲ್ಲಿ ಹಾಡಿದ್ದನ್ನು ಗುರು ಕೇಳಿದ್ದುದರಿಂದ ಈಗ ಒಂದೆರಡು ಹಾಡನ್ನು ಹೇಳು ಎಂದನು. ನರೇಂದ್ರನ ಹಾಡಿನಲ್ಲಿ ಅವನ ಜೀವ ಹೊರಗೆ ಹರಿದು ಬರುತ್ತಿದ್ದಿತು. ದೈವಸಾಯುಜ್ಯವನ್ನು ಬೇಡುವ ಕೃತಿಯ ಮಾತುಗಳಲ್ಲಿ ಅವನು ತಂದ ಆರ್ತತೆಯ ಭರದಿಂದ ಗುರು ಭಾವಪರವಶನಾದನು. ಒಂದು ಕ್ಷಣ ಹಾಗಿದ್ದು ಅವನು ಎದ್ದುನಿಂತು ನರೇಂದ್ರನ ಬಳಿಗೆ ಬಂದು ಕೈಯನ್ನು ಹಿಡಿದು ಕೊಠಡಿಯ ಮುಂಗಡೆಯ ಕೈಸಾಲೆಗೆ ಕರೆದುಕೊಂಡು ಹೋದನು. ಇವನು ಗೋಪ್ಯವಾದ ಉಪದೇಶ ಏನನ್ನೋ ಮಾಡಬಹುದೆಂದು ನರೇಂದ್ರನ ಮನಸ್ಸಿಗೆ ತೋರಿತು. ಆದರೆ ಗುರು ಅದೇನನ್ನೂ ಮಾಡಲಿಲ್ಲ. ಅವನ ಕೈಗಳನ್ನು ಹಿಡಿದುಕೊಂಡು ಬಹುಕಾಲದ ಪರಿಚಯದ ಮನುಷ್ಯನಂತೆ ಮಾತನಾಡುತ್ತ ಅತಿಶಯವಾದ ಪ್ರೇಮದಿಂದ, 'ಎಷ್ಟು ದಿನ ತಡಮಾಡಿದೆ, ಎಷ್ಟು ಕಾಲ ನನ್ನನ್ನು ಹೀಗೆ ಕಾಯಿಸಿಬಿಟ್ಟೆ, ಕೊನೆಗಾದರೂ ಬಂದೆಯಲ್ಲ,' ಎಂದು ಬಿಕ್ಕಿಬಿಕ್ಕಿ ಅತ್ತನು; ಅವನೆದುರಿಗೆ ಕೈಮುಗಿದು ನಿಂತು, 'ನೀನು ಲೋಕದ ದುರಿತವನ್ನು ಪರಿಹಾರಮಾಡಲು ಬಂದಿರುವ ದೇವರ್ಷಿ ನರನೆಂದು ನಾನು ಬಲ್ಲೆ,' ಎಂದು ಮುಂತಾಗಿ ಆರಾಧನೆಯ ನುಡಿಗಳನ್ನು ನುಡಿದನು. ನರೇಂದ್ರನಿಗೆ ಈ ಮಾತನ್ನೆಲ್ಲ ಕೇಳಿ ಆಶ್ಚರ್ಯವಾಯಿತು; ಈ ಸಾಧುವಿಗೆ ಬುದ್ಧಿ ಸರಿಯಾಗಿಲ್ಲವೆಂದು ಅವನು ಯೋಚಿಸಿದನು. ಆದರೆ ಉಳಿದಂತೆ ರಾಮಕೃಷ್ಣನ ನಡೆ ನುಡಿ ಸರಿಯಾಗಿಯೇ ಇರುವುದೂ ಅವನಿಗೆ ಕಂಡಿತು. ಆಮೇಲೆ ನಡೆದ ಮಾತಿನಲ್ಲಿ ದೇವರಿರುವನೇ ಎಂಬ ಪ್ರಶ್ನೆಗೆ ರಾಮಕೃಷ್ಣನು ವಾಡಿಕೆಯಂತೆ, 'ಆ ವಿಚಾರದಲ್ಲಿ ಸಂದೇಹವಿಲ್ಲ,' ಎಂದು ಉತ್ತರಕೊಟ್ಟನು. ನರೇಂದ್ರನು, 'ನೀವು ಅವನನ್ನು ನೋಡಿದ್ದೀರಾ,' ಎಂದು ಕೇಳಿದನು. ರಾಮಕೃಷ್ಣನು, 'ನೋಡಿದ್ದೇನೆ. ನೀನು ಕಾಣುವಂತೆ ಅವನು ನನಗೆ ಕಂಡಿದಾನೆ. ಇಷ್ಟೇ ವ್ಯತ್ಯಾಸ: ನೀನು, ಈ ಕೊಟಡಿ, ಈ ಸಾಮಾನು, ಉಳಿದೆಲ್ಲ ಪ್ರಪಂಚ ಕಾಣುವುದಕ್ಕಿಂತ ಅವನು ಕಾಣುವುದು ಹೆಚ್ಚು ಸ್ಪಷ್ಟ,' ಎಂದನು. ನರೇಂದ್ರನು ಅಂದು ಹಿಂತಿರುಗಿದನು.

ದೇವರಿರುವನೇ ಎಂದರೆ ಇದಾನೆ ಎಂದು ಹೇಳುವವರನ್ನು ನರೇಂದ್ರನು ಆ ಮೊದಲು ನೋಡಿದ್ದನು. ಅವನನ್ನು ನೀವು ನೋಡಿದ್ದೀರಾ ಎಂದರೆ ನೋಡಿದ್ದೇನೆ ಎಂದು ಹೇಳುವವರು ಅದುವರೆಗೆ ಅವನಿಗೆ ದೊರಕಿರಲಿಲ್ಲ. ಈ ಕಾರಣದಿಂದಲೂ, ಈ ಮನುಷ್ಯನು ಪ್ರಪಂಚವನ್ನು ತ್ಯಾಗ ಮಾಡಿದ್ದ ಕಾರಣದಿಂದಲೂ, ನರೇಂದ್ರನಿಗೆ ಪರಮಹಂಸನಲ್ಲಿ ಗೌರವಬುದ್ಧಿ ಹುಟ್ಟಿತು. ಒಂದು ತಿಂಗಳು ಬಿಟ್ಟುಕೊಂಡು ಅವನು ಮತ್ತೆ ದಕ್ಷಿಣೇಶ್ವರಕ್ಕೆ ಹೋದನು. ಅಂದು ಗುರು ಕೊಟಡಿಯಲ್ಲಿ ಒಬ್ಬನೇ ಇದ್ದನು; ನರೇಂದ್ರನನ್ನು ಕಂಡೊಡನೆ ಕರೆದು ಹಾಸಿಗೆಯಮೇಲೆ ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡನು; ಒಂದೆರಡು ಕ್ಷಣದಲ್ಲಿ ತನಗೆ ತಾನೇ ಏನೋ ಮಾತನ್ನು ಉಚ್ಚರಿಸಿಕೊಂಡು ನರೇಂದ್ರನಮೇಲೆ ದೃಷ್ಟಿಯನ್ನು ನೆಟ್ಟು ಹತ್ತಿರಕ್ಕೆ ಸರಿದನು. ಇದೇನು ಮಾಡುವನೋ ಎಂದು ನರೇಂದ್ರನು ಚಿಂತಿಸುವ ವೇಳೆಗೆ ಪರಮಹಂಸನು ತನ್ನ ಬಲಗಾಲನ್ನು ಅವನ ಮೈಗೆ ಸೋಕಿಸಿದನು. ಆಕ್ಷಣದಲ್ಲಿ ಸುತ್ತಣ ಎಲ್ಲ ವಸ್ತುವೂ ಶೂನ್ಯವಾಗುವಂತೆಯೂ ತಾನೂ ಆ ಶೂನ್ಯದ ಸುಳಿಯಲ್ಲಿ ಮುಳುಗಿಹೋಗುವಂತೆಯೂ ನರೇಂದ್ರನಿಗೆ ಅನುಭವವಾಯಿತು. ತರುಣನು ಚಕಿತನಾಗಿ, 'ಅಯ್ಯಾ, ಇದೇನು ಮಾಡುತ್ತಿದೀರಿ. ನನಗೆ ಅಪ್ಪ, ಅಮ್ಮ ಇದಾರೆ,' ಎಂದು ಕೂಗಿಕೊಂಡನು. ರಾಮಕೃಷ್ಣನು ಅವನ ಎದೆಯಮೇಲೆ ತಟ್ಟುತ್ತ ಏನೂ ಆಗುವುದಿಲ್ಲ, ಭಯಪಡಬೇಡ. ಎಂದು ಹೇಳಿ, ಮುಂದಕ್ಕೆ ಎಲ್ಲ ಸರಿಹೋಗುತ್ತದೆ ಎಂದು ತನಗೆ ತಾನೇ ಹೇಳಿಕೊಂಡನು. ಇವನು ಎದೆಯನ್ನು ತಟ್ಟಿದಾಗ ನರೇಂದ್ರನಿಗೆ ಉಂಟಾಗಿದ್ದ ಮನೋವಿಕಾರ ಅಡಗಿಹೋಯಿತು. ಈ ಅನುಭವದಿಂದ ಅವನಿಗೆ ರಾಮಕೃಷ್ಣನು ಯಾವುದೋ ವಿಚಿತ್ರ ಶಕ್ತಿಯುಳ್ಳವನೆಂದು ನಂಬಿಕೆ ಹುಟ್ಟಿತು. ಮತ್ತೊಂದು ಸಲ ನರೇಂದ್ರನನ್ನು ಒಂದು ಕಡೆ ಕಂಡಾಗ ಗುರು ಅವನನ್ನು ಸಮಾಧಿಗೆ ಹೋಗುವಂತೆ ಮಾಡಿ ಅವನ ಪೂರ್ವೋತ್ತರಗಳನ್ನು ವಿಚಾರಿಸಿ ತಿಳಿದನು. ಅದನ್ನು ಆಮೇಲೆ ಶಿಷ್ಯರಿಗೆ ವಿವರಿಸಿದನು.

ರಾಮಕೃಷ್ಣನು ಸಮಾಧಿಯಲ್ಲಿ ಒಂದು ದಿನ ಮೇಲೆ ಮೇಲೆ ಮೇಲೆ ಮೇಲೆ ಏರಿಹೋದನಂತೆ. ಆತ್ತ ಭೂಮಿ ಆಕಾಶಗಳನ್ನು ದಾಟಿ ತಾರೆಗಳ ಪಥವನ್ನು ಮೀರಿ ಭಾವನೆಯ ಲೋಕದ ಸೂಕ್ಷ್ಮಸೀಮೆಯನ್ನು

ಮುಟ್ಟಿತು. ಅಲ್ಲಿ ಎರಡು ಕಡೆಯೂ ದೇವತೆಗಳ ಆಕಾರಗಳು ತುಂಬಿದ್ದವು. ಆತ್ಮ ಆ ಪ್ರದೇಶದ ಅಂಚನ್ನು ಸೇರಿ ಸಗುಣದ ಲೋಕವನ್ನು ಬಿಟ್ಟು ನಿರ್ಗುಣದ ಅಂತರವನ್ನು ಸೇರಿತು. ಅಲ್ಲಿ ಆಕೃತಿಯಿಲ್ಲ ನಾಮವಿಲ್ಲ ರೂಪವಿಲ್ಲ. ದೇವರುಗಳಾದರೂ ಅಲ್ಲಿ ಬರಲು ಧೈರ್ಯವಾಡರು; ತಮ್ಮ ತಮ್ಮ ಪದವಿಯನ್ನು ಅನುಭವಿಸುತ್ತ ಅವರು ಹೊರಗಡೆಗೇ ಇರುವರು. ಜ್ಯೋತಿರ್ಮಯವಾದ ಈ ಆತ್ಮಸಾಮ್ರಾಜ್ಯದಲ್ಲಿ ಏಳು ಜನ ಪೂಜ್ಯ ವ್ಯಕ್ತಿಗಳು ಸಮಾಧಿಯಲ್ಲಿ ಕುಳಿತಿರುವುದನ್ನು ಪರಮಹಂಸನ ಆತ್ಮ ಕಂಡಿತು. ಅವರ ದರ್ಶನವನ್ನು ಮಾಡಿಕೊಳ್ಳುತ್ತ ಪೂಜ್ಯಭಾವದಿಂದ ಆತ್ಮವನ್ನು ತುಂಬಿಕೊಳ್ಳುತ್ತಿರುವಾಗ ರಾಮಕೃಷ್ಣನಿಗೆ ಸುತ್ತಣ ಅಖಂಡ ಪ್ರಭಾರಾಶಿಯಿಂದ ಸ್ವಲ್ಪ ಬೆಳಕು ಬೇರೆಯಾದಂತೆ ಕಂಡಿತು. ಹಾಗೆಯೇ ನೋಡುತ್ತಿರುವಲ್ಲಿ ಆ ಬೆಳಕಿನ ಖಂಡ ಒಂದು ಹಸುಳೆಯ ಆಕಾರವನ್ನು ಪಡೆಯಿತು; ಉತ್ತರ ಕ್ಷಣದಲ್ಲಿ ಸಪ್ತಋಷಿಗಳು ಕುಳಿತಿದ್ದ ಸ್ಥಳಕ್ಕೆ ಬಂದು ಅವರಲ್ಲಿ ಒಬ್ಬನ ಬಳಿಯನ್ನು ಸಾರಿ ಪ್ರೇಮದಿಂದ ಅವನ ಕೊರಳಿನ ಸುತ್ತ ಕೈಹಾಕಿ ಅಪ್ಪಿಕೊಂಡು ಜಗ್ಗಿ ಅವನನ್ನು ಎಚ್ಚರಗೊಳಿಸಿತು. ಋಷಿ ಕಣ್ತೆರೆದನು, ಮಗುವನ್ನು ಭಕ್ತಿವಾತ್ಸಲ್ಯಪೂರಿತವಾದ ದೃಷ್ಟಿಯಿಂದ ನೋಡಿದನು. ಎಳೆಯನು ಅವನಿಗೆ, 'ನಾನು ಲೋಕಕ್ಕೆ ಹೋಗುತ್ತೇನೆ, ನೀನೂ ಬರಬೇಕು,' ಎಂದನು. ಆಗಲಿ ಎಂದು ಹೇಳಿ ಋಷಿ ಮತ್ತೆ ಸಮಾಧಿಯನ್ನು ಪ್ರವೇಶಿಸಿದನು. ಆ ಋಷಿಯೇ ನರೇಂದ್ರನು, ಆ ಕಾರಣದಿಂದಲೇ ಅವನಿಗೆ ತಾನು ಅಷ್ಟು ಮರ್ಯಾದೆಯನ್ನು ತೋರಿಸುವುದು, ಲೋಕರಕ್ಷಣದ ಹೊಣೆಗಾರಿಕೆಯನ್ನು ಹೊರಿಸುವುದು, ಎಂದು ರಾಮಕೃಷ್ಣನು ಆಮೇಲೆ ವಿವರಿಸಿದನು. ಅಸಾಧಾರಣವಾದ ಜ್ಞಾನದಿಂದಲೂ, ಅಸಾಮಾನ್ಯವಾದ ದಕ್ಷತೆಯಿಂದಲೂ, ವಿಶ್ವವಿಶಾಲವಾದ ಪ್ರೇಮ ಕಾರುಣ್ಯದಿಂದಲೂ ನರೇಂದ್ರನು ನಿತ್ಯಮುಕ್ತರಲ್ಲಿ ಒಬ್ಬನಿರಬೇಕೆಂದು ಆಮೇಲೆ ಪ್ರಪಂಚಕ್ಕೆ ವ್ಯಕ್ತವಾಯಿತು.

ಪರಮಹಂಸನ ಸಹಾಯದಿಂದ ನರೇಂದ್ರನಾಥನಿಗೆ ಸಾಧನೆಗಳು ಬೇಗನೆ ಮುಗಿದುವು. ಸಾಧನಗಳ ಆರಂಭದ ದೆಸೆಯಲ್ಲಿಯೇ ಸಾಧಕನಿಗೆ ಅನೇಕ ಸಿದ್ಧಿಗಳು ಕೈಸೇರಿದುವು. ಈ ಸಿದ್ಧಿಗಳಿಂದ ಹೆಮ್ಮೆಗೊಂಡು

ಅವುಗಳನ್ನು ಉಪಯೋಗಿಸುತ್ತ ಸಾಧಕರು ಮುನ್ನಡೆಯನ್ನು ಮರೆಯು ವರು. ನರೇಂದ್ರನಿಗೂ ತನ್ನ ಇತರ ಶಿಷ್ಯರಿಗೂ ಪರಮಹಂಸನು ಈ ಅಪಾ ಯದ ವಿಷಯದಲ್ಲಿ ಎಚ್ಚರ ಹೇಳಿದನು. ನರೇಂದ್ರನು ರಾಮಕೃಷ್ಣನನ್ನು ಗುರು ಎಂದು ಸ್ವೀಕರಿಸಿದರೂ ಮೊದಮೊದಲು ಅವನ ಅದ್ವೈತದ ವಾದ ವನ್ನು ಒಪ್ಪಲಿಲ್ಲ. ತನಗೆ ಅನುಭವಕ್ಕೆ ಬರದೆ ತಾನು ಯಾವುದನ್ನೂ ನಂಬಲಾರೆನೆಂದು ಅವನು ಗುರುವಿಗೆ ಹೇಳಿದನು. ಗುರು, ಅದು ಸರಿಯಾದ ಮಾತು, ಎಂದು ಉತ್ತರಕೊಟ್ಟನು; ತನ್ನನ್ನಾದರೂ ಪರೀಕ್ಷೆಮಾಡದೆ ಒಪ್ಪಿಕೊಳ್ಳಬೇಕಾಗಿಲ್ಲ ಎಂದನು. ವಿವೇಕಾನಂದನು ಈ ಪರೀಕ್ಷೆಯನ್ನೂ ಮಾಡಿಯೇಬಿಟ್ಟನು. ರಾಮಕೃಷ್ಣನು ತನ್ನ ಸಾಧನದ ಆರಂಭದ ಕಾಲ ದಲ್ಲೇ ಕಾಮಿನೀ ಕಾಂಚನಗಳ ಆಕಾಂಕ್ಷೆಯನ್ನು ಜಯಿಸಿದನೆಂದು ಮೊದಲೇ ಹೇಳಿದೆ. ಕಾಸು ಎಂದರೆ ಇವನ ಬೇಸರ ಬರಬರುತ್ತ ಎಷ್ಟು ದೂರ ಮುಟ್ಟಿದ್ದಿತೆಂದರೆ ಇವನಿಗೆ ತಿಳಿಯದೆ ಯಾರಾದರೂ ಮೈಗೆ ಒಂದು ನಾಣ್ಯವನ್ನು ಸೋಕಿಸಿದರೆ ಇವನು ಧನುರ್ವಾಯು ಬಂದವನಂತೆ ಸೆಡೆತು ಕೊಳ್ಳುವನು. ಇದು ನಿಜವೇ ಎಂದು ನೋಡುವುದಕ್ಕೆ ನರೇಂದ್ರನು ಒಂದು ಸಲ ಅವನ ಹಾಸಿಗೆಯ ಕೆಳಗೆ ಒಂದು ನಾಣ್ಯವನ್ನಿಟ್ಟನಂತೆ. ರಾಮಕೃಷ್ಣನು ಬಂದು ಅದರ ಮೇಲೆ ಕುಳಿತು ಕೈಕಾಲು ಬೆರೆತುಕೊಂಡು ಬೆಚ್ಚಿ ಎದ್ದನು. ಇದನ್ನು ನೋಡಿ ನರೇಂದ್ರನಿಗೆ ಮರುಕವಾಯಿತು. ಇನ್ನೊಂದು ಸಲ ಇವನು ಪರಮಹಂಸನೊಂದಿಗೆ ಎಲ್ಲವೂ ದೇವರೇ ಎಂಬ ಮಾತನ್ನು ಚರ್ಚೆಮಾಡಿ ಹೊರಗೆ ಬಂದು ಜೊತೆಯವರೊಂದಿಗೆ, ಈ ಕುರ್ಚಿ ದೇವರು, ಈ ಪಾತ್ರೆ ದೇವರು, ಈ ಕೋಲು ದೇವರು, ಎನ್ನುತ್ತ ಅಲ್ಲಿದ್ದ ಎಲ್ಲ ಸಾಮಾನನ್ನೂ ದೇವರು ದೇವರು ಎಂದು ತೋರಿಸುತ್ತ ಅಪಹಾಸ್ಯ ಮಾಡಿದನು. ರಾಮಕೃಷ್ಣನು ಇದನ್ನು ಕೇಳುತ್ತ ಒಂದೆರಡು ಕ್ಷಣ ಬಿಟ್ಟು ಸಮಾಧಿಸ್ಥನಾಗಿ ಹೊರಗೆ ಬಂದು ಇವನನ್ನು ಕೈಯಿಂದ ಮುಟ್ಟಿದನು. ನರೇಂದ್ರನಿಗೆ ತಲೆ ತಿರುಗಿದಂತಾಯಿತು; ಅವನು ಬೆದರಿ ಸುತ್ತ ನೋಡಲು ಕುರ್ಚಿ ಪಾತ್ರೆ ಕೋಲು ಎಲ್ಲವೂ ಒಂದು ತತ್ವದಿಂದ ಆಗಿರುವುವೆಂದು ಅವನಿಗೆ ಕಂಡಿತು; ಗೋಡೆ ನೆಲ ಕಲ್ಲು ಕಬ್ಬಿಣ ಎಲ್ಲವೂ ಶಿವನೆಂದು ಅವನಿಗೆ ಭಾವನೆ ಉಂಟಾಯಿತು. ಮನೆಗೆ ಹೋಗಿ ಊಟಕ್ಕೆ ಕುಳಿತಾಗ

ಅವನಿಗೆ ಅನ್ನ ಶಿವ ತಾನು ಶಿವ ಎಂಬ ಭಾವ. ಬೀದಿಯಲ್ಲಿ ಕಂಡದ್ದೆಲ್ಲ ಶಿವ. ಕನಸಿನಲ್ಲಿದೇನೋ ಏನೋ ಎಂದು ಇವನು ಕಂಬಕ್ಕೆ ತಲೆಯನ್ನು ಚಚ್ಚಿ ಎಚ್ಚರವಾಗಿದೇನೆಂದು ನಿರ್ಧರಮಾಡಿಕೊಂಡನು; ಆದರೂ ಶಿವ ಭಾವ ಹಾಗೆಯೇ ಇದ್ದಿತು; ಮೂರು ದಿನವಾದಮೇಲೆ ಅದು ಅಳಿಯಿತು. ಪರಮಹಂಸನ ಅದ್ವೈತ ವಾದ ಬರಿಯ ಮಾತಲ್ಲವೆಂದು ಆಗ ಅವನು ತಿಳಿದನು. ಒಂದು ಸಲ ಪರಮಹಂಸನು ಅವನನ್ನು ಪರೀಕ್ಷಿಸುವುದಕ್ಕಾಗಿ, 'ನನಗೆ ಸಾಧನದಿಂದ ಅನೇಕ ಶಕ್ತಿಗಳು ಸಿದ್ಧಿಸಿವೆ. ನಿನಗೆ ಅವನ್ನು ಕೊಡುತ್ತೇನೆ ತೆಗೆದುಕೊ,' ಎಂದು ನರೇಂದ್ರನಿಗೆ ಹೇಳಿದನಂತೆ. ನರೇಂದ್ರನು, 'ನೀವು ಸಂಪಾದಿಸಿದ ಶಕ್ತಿಗಳು ನನಗೆ ಬೇಡ. ಮೊದಲು ದೇವರನ್ನು ಕಾಣುತ್ತೇನೆ; ಆಮೇಲೆ ಶಕ್ತಿಗಳನ್ನು ಪಡೆಯುವುದನ್ನು ನೋಡೋಣ,' ಎಂದು ಹೇಳಿದನಂತೆ. ಹೀಗೆ ಪರಮಹಂಸನು ತನ್ನ ಮುಖ್ಯ ಶಿಷ್ಯನನ್ನು ಅವನ ಯೋಗ್ಯತೆಗೆ ತಕ್ಕಂತೆ ಸಾಧನದಲ್ಲಿ ಮುಂದು ವರಿಸುತ್ತ ನಿಜವಾಗಿಯೂ ಅವನ ಗುರುವಾದನು.

ಹೀಗಿರುತ್ತ ನರೇಂದ್ರನ ತಂದೆ ತೀರಿಹೋಗಲು ಅವನ ಸಂಸಾರ ದುರ್ದಶೆಗೆ ಸಿಕ್ಕಿತು. ಜೀವನವನ್ನು ಸಂಪಾದಿಸುವುದಕ್ಕೆ ನರೇಂದ್ರನು ಬಹಳ ಕಷ್ಟಪಟ್ಟನು. ಸರಿಯಾದ ಕೆಲಸ ಯಾವುದೂ ದೊರೆಯಲಿಲ್ಲ. ನೆಂಟರಿಷ್ಟರಿಂದ ಇವನು ನಿರೀಕ್ಷಿಸಬಹುದಾಗಿದ್ದ ಸಹಾಯವೂ ಇವನಿಗೆ ಲಭಿಸಲಿಲ್ಲ. ಇವನು ದೇವರೇ ದೇವರೇ ಎನ್ನುತ್ತಿರಲು ತಾಯಿ ಬೇಸರ ಪಟ್ಟು, 'ನಿನ್ನ ದೇವರು ನಿನಗೆ ಮಾಡಿರುವ ಉದ್ಧಾರ ನೋಡು,' ಎಂದು ತಮ್ಮ ಕಷ್ಟವನ್ನು ತೋರಿ ಹಳಿದಳು. ಕಷ್ಟದ ಪೆಟ್ಟಿನಿಂದ ಅವನಿಗೂ ದೇವ ರೆಂಬ ವಸ್ತುವನ್ನು ಕುರಿತು ಸಂಶಯ ತಲೆದೋರಿತು. ಕೊನೆಗೆ ಒಂದು ದಿನ ಅವನು ತ್ಯಾಗಿಯಾಗಬೇಕೆಂದೇ ಯೋಚಿಸಿದನು. ಕ್ಲೇಶ ಮುಗಿಲನ್ನು ಮುಟ್ಟಿದ ಒಂದು ರಾತ್ರಿಯನ್ನು ಹೇಗೋ ಕಳೆದು ಮಾರನೆಯ ದಿನ ಸ್ವಲ್ಪ ಶಾಂತಿಯನ್ನು ಅನುಭವಿಸಿದನು. ಆಗ ಅವನಿಗೆ ಗುರುವಿನ ಬಳಿಗೆ ಹೋಗೋಣವೆಂದು ತೋರಿತು. ಆ ವೇಳೆಗೆ ಅವನು ದಕ್ಷಿಣೇಶ್ವರಕ್ಕೆ ಹೋಗಿ ತಿಂಗಳುಗಟ್ಟಲೆ ಕಳೆದುಹೋಗಿದ್ದಿತು. ಅವನು ಕೆಟ್ಟದಾರಿಗೆ ಬಿದ್ದಿದಾನೆಂದು ಬೇರೆ ರಾಮಕೃಷ್ಣನಿಗೆ ಕೆಲವರು ದೂರು ಹೇಳಿದ್ದರು.

ಆದರೆ ಗುರು ಅದೊಂದನ್ನೂ ನಂಬಲಿಲ್ಲ; ಎಲ್ಲ ಸರಿಹೋಗುತ್ತದೆ ಎಂದು ಧೈರ್ಯವಾಗಿದ್ದನು. ನರೇಂದ್ರನು ಮರಳಿ ಬಂದಾಗ ಅವನಿಗೆ ಬಹಳ ಸಂತೋಷವಾಯಿತು. ತನ್ನ ಮನೆಯವರ ಕಷ್ಟವನ್ನು ಪರಿಹರಿಸೆಂದು ಗುರುವಿನಿಂದ ಕಾಳಿಕಾಮಾತೆಗೆ ಹೇಳಿಸೋಣವೆಂದು ನರೇಂದ್ರನಿಗೆ ತೋರಿತು; ಅವನು ಗುರುವನ್ನು ತಾಯ ಸನ್ನಿಧಿಯಲ್ಲಿ ತನಗಾಗಿ ಪ್ರಾರ್ಥಿಸ ಬೇಕೆಂದು ಬೇಡಿದನು. ರಾಮಕೃಷ್ಣನು ಇದಕ್ಕೆ ಒಪ್ಪಲಿಲ್ಲ; ನಾನೇಕೆ ಪ್ರಾರ್ಥಿಸಬೇಕು, ನೀನೇ ಪ್ರಾರ್ಥಿಸು, ಎಂದನು. ನರೇಂದ್ರನು ಆಲಯಕ್ಕೆ ಹೋದನು; ದೇವಿಯನ್ನು ಕುರಿತು ಧ್ಯಾನಮಾಡಿದನು; ಆದರೆ ಅವಳಲ್ಲಿ ಐಹಿಕ ಸಂಪತ್ತನ್ನು ಬೇಡಲು ಅವನಿಗೆ ಮನಸ್ಸು ಬರಲಿಲ್ಲ. ಒಂದು ಸಲ ಅಲ್ಲ, ಮೂರು ಸಲ, ತರುಣನು ಆ ಪ್ರಾರ್ಥನೆಯನ್ನು ಮಾಡಲಾರದೆ ಹಿಂದಿರುಗಿದನು. ಕೊನೆಗೆ ರಾಮಕೃಷ್ಣನು, ನಿನ್ನವರು ಅನ್ನವಸ್ತ್ರಕ್ಕಾಗಿ ಕಷ್ಟಪಡುವುದಿಲ್ಲ ಸುಮ್ಮನಿರು, ಎಂದನು. ನರೇಂದ್ರನು ಸಮಾಧಾನ ಹೊಂದಿ ಸುಮ್ಮನಾದನು.

ಪರಮಹಂಸನ ಶಿಷ್ಯವರ್ಗದಲ್ಲಿ ಸ್ತ್ರೀಯರೂ ಇದ್ದರು. ಸುರೇಂದ್ರ, ಬಲರಾಮ ಮುಂತಾದ ಶಿಷ್ಯರ ಮನೆಗಳಿಗೆ ಹೋಗಿ ಅಲ್ಲಿ ಉಪದೇಶ ಮಾಡುತ್ತ, ದಕ್ಷಿಣೇಶ್ವರದ ತನ್ನ ಎಂದಿನ ಉಪನ್ಯಾಸ ಸ್ಥಾನದಲ್ಲಿ ಕುಳಿತು ಬಂದವರೊಡನೆ ವಿಷಯಗಳನ್ನು ಚರ್ಚಿಸಮಾಡುತ್ತ, ಗುರು ಅನೇಕ ಮಹಿಳೆಯರ ಮನಸ್ಸಿಗೆ ಶಾಂತಿಯನ್ನು ತಂದನು. ಚಂದ್ರಾದೇವಿಯೂ ಶಾರದಾ ದೇವಿಯೂ ದಕ್ಷಿಣೇಶ್ವರದಲ್ಲಿದ್ದುದರಿಂದ ಹೆಂಗಸರು ಅಲ್ಲಿ ಬಂದು ಹೋಗು ವುದಕ್ಕೆ ತಕ್ಕ ಸೌಕರ್ಯವೂ ಇದ್ದಿತು. ರಾಮಕೃಷ್ಣನು ಈ ಶಿಷ್ಯೆಯರನ್ನು ಮಗುವಿನಂತೆ ತಮ್ಮನಂತೆ ಅಣ್ಣನಂತೆ ಮಾತನಾಡಿಸುವನು; ತನಗೆ ಏನು ತಿಂಡಿ ತಂದಿದ್ದೀಯೆ ಎಂದು ಕೇಳುವನು: ಅವರು ತಂದ ತಿಂಡಿಯನ್ನು ವಿಶ್ವಾಸದಿಂದ ತಿಂದು ಆನಂದವನ್ನು ಪ್ರಕಟಿಸುವನು. ಇವರಿಗೂ ಗುರು ಅವರವರ ಯೋಗ್ಯತೆಗೆ ತಕ್ಕಂತೆ ಸಾಧನದ ಮಾರ್ಗವನ್ನು ಹೇಳಿಕೊಟ್ಟನು. ಮಣಿಲಾಲ ಮಲ್ಲಿಕ್ ಎಂಬಾತನ ಮಗಳಿಗೆ ಇವನು ಮಾಡಿದ ಉಪದೇಶ ಇವನ ಪದ್ಧತಿಗೆ ಒಳ್ಳೆಯ ನಿದರ್ಶನ. ಆಕೆ ಭಕ್ತೆ, ಆದರೆ ದೇವರ ಧ್ಯಾನಕ್ಕೆ ಕುಳಿತರೆ ಮನಸ್ಸು ಎತ್ತೆತ್ತಲೋ ಅಲೆಯುವುದು. ಆಕೆ ಇದನ್ನು ಗುರುವಿಗೆ



ಸ್ವಾಮಿ ವಿವೇಕಾನಂದರು

ಹೇಳಿ, ಏನು ಮಾಡಿದರೆ ಮನಸ್ಸು ಒಂದು ಕಡೆ ನಿಲ್ಲುವುದೋ ಕಾಣಲಿಲ್ಲ, ಎಂದಳು. ರಾಮಕೃಷ್ಣನು ನಿನಗೆ ಯಾರನ್ನು ಕಂಡರೆ ಬಹಳ ಪ್ರೀತಿ ಎಂದು ಕೇಳಿದನು. ಅವಳಿಗೆ ತನ್ನ ತಮ್ಮನ ಮಗನನ್ನು ಕಂಡರೆ ಬಹಳ ಪ್ರೀತಿ. ಅವನನ್ನೇ ಬಾಲಕೃಷ್ಣನೆಂದು ಭಾವಿಸಿ ಧ್ಯಾನಮಾಡು ಎಂದು ಗುರು ಹೇಳಿಕೊಟ್ಟನು. ಹೀಗೆ ಮಾಡಲು ಅವಳಿಗೆ ಮನಸ್ಸು ಅಲೆಯುವುದು ನಿಂತಿತು. ಅವಳು ಮಗುವಿನ ಮಾತು ಆಟ ಚೇಷ್ಟೆಯನ್ನು ನೆನೆಯುತ್ತ ಹಸುಳೆಯಾದ ಕೃಷ್ಣನ ಆಟ ಚೇಷ್ಟೆ ಮಾತು ಎಂದು ಸಂತೋಷದಲ್ಲಿರುವಳು. ಧ್ಯಾನ ಸುಲಭವಾಯಿತು. ಇದು ನಿಜವಾದ ಮಗು ಒಂದರ ಮಾತು. ಅಘೋರಮಣಿ ಎಂಬ ಇನ್ನೊಬ್ಬ ಶಿಷ್ಯಳಿಗೆ ಮಕ್ಕಳಿರಲಿಲ್ಲ. ಆದರೆ ಬಾಲಗೋಪಾಲನು ಅವಳ ಇಷ್ಟದೈವ. ಚಿಕ್ಕಂದೇ ಗಂಡನನ್ನು ಕಳೆದುಕೊಂಡು ಇವಳು ಹಿರಿಯಳೊಬ್ಬ ವಿಧವೆಯೊಂದಿಗೆ ಒಂದು ದೇವಾಲಯದಲ್ಲಿ ವಾಸಮಾಡುತ್ತಿದ್ದಳು. ಎಲ್ಲರಂತೆ ಇವಳೂ ರಾಮಕೃಷ್ಣನ ಬಳಿಗೆ ಬಂದಳು; ಅವನಿಗೆ ತಿಂಡಿಯನ್ನು ತಂದುಕೊಟ್ಟಳು. ಕೆಲವು ದಿನದ ಮೇಲೆ ಇವಳು ಜಪವನ್ನು ಮುಗಿಸಿದ ವೇಳೆ ಹತ್ತಿರ ರಾಮಕೃಷ್ಣನು ಕುಳಿತಿದ್ದಂತೆ ಕಂಡಿತು. ಇವನೆಲ್ಲಿ ಇಲ್ಲಿ ಬಂದ ಎಂದು ಅವಳು ನೋಡುತ್ತಿರುವಲ್ಲಿ ಆ ಮೂರ್ತಿ ಮರೆಯಾಗಿ ಬಾಲಗೋಪಾಲನು ಕಂಡನು; ಅಂಬೆಗಾಲಿಡುತ್ತ ನನಗೆ ತಿಂಡಿಕೊಡು ಎಂದು ಇವಳ ಹತ್ತಿರಕ್ಕೆ ಹರಿದನು. ಅಘೋರಮಣಿ ಅವನನ್ನು ಎತ್ತಿಕೊಂಡಳು; ಅವನನ್ನು ಸಾಕಲು ಮೊದಲು ಮಾಡಿದಳು; ಅಂದು ದಕ್ಷಿಣೇಶ್ವರಕ್ಕೆ ಹೋಗುತ್ತ ಅವನನ್ನು ಕರೆದುಕೊಂಡು ಹೋದಳು. ಆಲಯದ ಬಳಿಗೆ ಬರುವ ಹೊತ್ತಿಗೆ ಮಗು ತಪ್ಪಿಸಿಕೊಂಡು ಹೋದಂತೆ ಆಗಿರಬೇಕು; ಗೋಪಾಲ ಗೋಪಾಲ ಎಂದು ಕೂಗುತ್ತ ಇವಳು ರಾಮಕೃಷ್ಣನ ಕೊಟಡಿಯೊಳಕ್ಕೆ ಬಂದಳು; ಆಗ ಅಲ್ಲಿದ್ದವರಿಗೆ ಅವಳು ಹುಚ್ಚಿಯಂತೆ ಕಂಡಳು. ಅವಳು ರಾಮಕೃಷ್ಣನ ಬಳಿಗೆ ಬರುವ ಹೊತ್ತಿಗೆ ಅವನು ಸಮಾಧಿಗೆ ಇಳಿದನು. ಅವಳು ಪಕ್ಕದಲ್ಲಿ ಕುಳಿತುಕೊಳ್ಳಲು ಅವನು ಮಗುವಿನಂತೆ ಅವಳ ಮಡಲಲ್ಲಿ ಕುಳಿತನು. ಅಘೋರಮಣಿ ತಾನು ತಂದಿದ್ದ ತಿಂಡಿಯನ್ನೆಲ್ಲ ಅವನಿಗೆ ತಿನ್ನಿಸಿದಳು. ಮಗುವನ್ನು ಪಕ್ಕದಲ್ಲಿಟ್ಟು ಎದ್ದು ಆನಂದದಿಂದ ಕುಣಿದಳು. ಹೀಗೆ

ಅವಳಿಗೆ ರಾಮಕೃಷ್ಣನು ಹತ್ತಿರ ಇರುವಾಗ ತನ್ನ ಆಕೃತಿಯಿಂದ, ಹತ್ತಿರ ಇಲ್ಲದಾಗ ಬೇರೆ ಒಂದು ವಿಗ್ರಹದ ರೂಪದಿಂದ, ಮಗುವಾದನು. ಅವಳಿಗೆ ಇಷ್ಟದೈವ ನಿಜವಾದ ತತ್ವವಾಯಿತು. ಎಲ್ಲರೂ ಅವಳಿಗೆ ಗೋಪಾಲನ ತಾಯಿ ಎಂದು ಹೆಸರಿಟ್ಟರು. ಹೀಗೆ ಎರಡು ತಿಂಗಳಾದಮೇಲೆ ಆ ಮಗು ಅವಳ ಅನುಭವದಿಂದ ಮೆಲ್ಲ ಮೆಲ್ಲನೆ ಮರೆಯಾಗಿಹೋಯಿತು. ರಾಮಕೃಷ್ಣನೇ ಬಾಲಗೋಪಾಲನು ಎಂಬ ಭಾವ ಅವಳ ಮನಸ್ಸಿನಲ್ಲಿ ನೆಲೆಯಾಯಿತು. ಒಂದುಸಲ ನರೇಂದ್ರನು ಸಾಧನಗಳನ್ನು ಕುರಿತು ಅಪನಂಬಿಕೆಯನ್ನು ಸೂಚಿಸಿದಾಗ ಪರಮಹಂಸನು ಅವನಿಗೆ ಅಘೋರಮಣಿಯಿಂದ ಅವಳ ಕತೆಯನ್ನು ಹೇಳಿಸಿದನು. ನರೇಂದ್ರನಿಗೆ ಸಂಗತಿಯನ್ನು ಕುರಿತು ಆಶ್ಚರ್ಯ, ಇವಳ ವಿಷಯದಲ್ಲಿ ಕನಿಕರ. ಆದರೆ ಅವಳು ಕೊನೆಗೆ ನರೇಂದ್ರನನ್ನು, ಇದೆಲ್ಲಾ ನಿಜವಿರಬಹುದೇ, ದೇವರು ಮಗುವಾಗಿ ನನ್ನ ಕೈಗೆ ಬಂದದ್ದು ನಿಜವೇ, ಎಂದು ಕೇಳಿದಳು. ಅವನು ಅಲ್ಲವೆಂದು ಹೇಳಲಾರದೆ ಹೋದನು. ನಿಜ ತಾಯಿ ನಿಜ ನಿಜ ಎಂದು ಉತ್ತರಕೊಟ್ಟನು. ಆ ಮಗು ಇನ್ನೊಬ್ಬರಿಗೆ ನಿಜವಲ್ಲದೆ ಇರಬಹುದು; ಕೈಯಲ್ಲಿ ಹಿಡಿದು ಆಡಿಸಿದ ಅವಳಿಗೆ ಅದು ನಿಜ; ನಿಜವಲ್ಲವೆಂದು ಇವನು ಏಕೆ ಹೇಳಬೇಕು? ಇಲ್ಲಿ ನಮ್ಮ ಸತ್ಯವೆನ್ನುವುದನ್ನು ನುಡಿಯುವುದಕ್ಕಿಂತ ಆ ಬಾಳಿನ ವಿಷಯದಲ್ಲಿ ಕನಿಕರದಿಂದ ನಡೆದುಕೊಳ್ಳುವುದು ದೊಡ್ಡದು ಎಂದು ನರೇಂದ್ರನಿಗೆ ತೋರಿತು. ರಾಮಕೃಷ್ಣನು ಗೋಪಾಲನ ತಾಯಿಗೆ ಹೀಗೆ ಕನಿಕರವನ್ನು ತೋರಿ ಸಿದ್ಧಿಯನ್ನು ದಯಪಾಲಿಸಿದರೂ ಅವಳು ಒಂದುಸಲ ಯಾರೋ ಕೊಟ್ಟ ಬಟ್ಟೆ ಬರೆಯನ್ನು ಗಂಟುಮಾಡಿ ಹತ್ತಿರ ಇಟ್ಟುಕೊಂಡಿರಲು ಅದು ತಪ್ಪೆಂದು ಅಸಮಾಧಾನವನ್ನೂ ಸೂಚಿಸಿದನು. ಒಳ್ಳೆಯದರ ವಿಷಯದಲ್ಲಿ ಸಹಾನುಭೂತಿಯಿಂದ ನಡೆಯುವಂತೆ ಅವನು ಕೆಟ್ಟುದನ್ನು ಕಂಡಾಗ ಕಠಿಣವಾಗಿಯೂ ಇರುವನು.

ರಾಮಕೃಷ್ಣನ ಮಹಿಮೆಯನ್ನು ಪ್ರಕಟಿಸುವ ಇನ್ನೊಂದು ಬದುಕು ವಂಗದೇಶದ ಸುಪ್ರಸಿದ್ಧ ನಟ ಗಿರೀಶಚಂದ್ರ ಘೋಷನದು. ಗಿರೀಶಚಂದ್ರನು ಚಿಕ್ಕವಯಸ್ಸಿನಲ್ಲಿ ತಪ್ಪುದಾರಿಗಳಲ್ಲಿ ನಡೆದನು; ವಿಷಯಸುಖದಲ್ಲಿ ಮಗ್ನನಾದನು. ಕೆಲವು ಕಾಲದಮೇಲೆ ಅವನಿಗೆ ಧರ್ಮ ಎಂದರೆ ದೇವರು ಎಂದರೆ ಸ್ವಲ್ಪ ಆಸೆ ಹುಟ್ಟಿತು; ಆದರೆ ಅವನಿಗೆ ಆ ದಾರಿಯನ್ನು

ತೋರಿಸುವವರು ಯಾರೂ ಇರಲಿಲ್ಲ. ಹೀಗಿರುತ್ತ ಒಂದು ದಿನ ಅವನು ಒಂದು ಪತ್ರಿಕೆಯಲ್ಲಿ ದಕ್ಷಿಣೇಶ್ವರದಲ್ಲಿ ಒಬ್ಬ ಪರಮಹಂಸನಿರುವನೆಂತಲೂ ಪ್ರಸಿದ್ಧನಾದ ಕೇಶವಚಂದ್ರಸೇನನು ಅವನನ್ನು ಪೂಜ್ಯಭಾವದಿಂದ ಕಾಣುತ್ತಾನೆಂತಲೂ ವೃತ್ತಾಂತವನ್ನು ಓದಿದನು. ಕೆಲವು ದಿನದಮೇಲೆ ಪರಮಹಂಸನು ಕಲಿಕತೆಯಲ್ಲಿ ಒಬ್ಬ ಗೃಹಸ್ಥನ ಮನೆಗೆ ಬರುವನೆಂಬುದನ್ನು ಕೇಳಿ ಗಿರೀಶನು ಅವನನ್ನು ನೋಡಲು ಅಲ್ಲಿಗೆ ಹೋದನು. ಪರಮಹಂಸನು ಸಮಾಧಿಯಲ್ಲಿದ್ದು ಎಚ್ಚರಗೊಳ್ಳುತ್ತ ಇರುವಾಗ ಸಂಜೆಯಾಯಿತು. ದೀಪ ಹಚ್ಚಿದರು. ಸಮಾಧಿಯ ಕಾರಣದಿಂದ ರಾಮಕೃಷ್ಣನಿಗೆ ದೀಪಗಳ ಮೇಲೆ ಗಮನವಿಲ್ಲ. ಈಗ ಸಂಜೆಯೋ ಎಂದು ಅವನು ಕೇಳಿದನು. ದೀಪ ಹಚ್ಚಿದ್ದರೂ ಸಂಜೆಯೋ ಎಂದು ಕೇಳುವ ಇವನು ಎಂಥ ಮನುಷ್ಯನು ಎಂದು ಗಿರೀಶನಿಗೆ ಬೇಸರವಾಯಿತು; ಅವನು ಅತೃಪ್ತನಾಗಿ ಹಿಂತಿರುಗಿದನು. ಇದಾದ ಕೆಲವು ವರ್ಷ ಗಿರೀಶನಿಗೂ ರಾಮಕೃಷ್ಣನಿಗೂ ಸಾಮೀಪ್ಯ ಒದಗಲಿಲ್ಲ; ಬಲರಾಮ ಬೋಸರ ಮನೆಯಲ್ಲಿ ಒಂದು ಸಲ ಒದಗಿದಾಗ ಗಿರೀಶನು ಅಲ್ಲಿ ಬಹಳ ಹೊತ್ತು ನಿಲ್ಲಲಿಲ್ಲ. ಆ ಸಮಯದಲ್ಲಿ ಗಿರೀಶನ ನಾಟಕ ಮಂದಿರದಲ್ಲಿ ಚೈತನ್ಯಲೀಲಾ ಎಂಬ ನಾಟಕ ನಡೆಯುತ್ತಿದ್ದಿತು. ರಾಮಕೃಷ್ಣನಿಗೆ ಆ ನಾಟಕವನ್ನು ನೋಡಬೇಕೆಂದು ಅಪೇಕ್ಷೆಯಾಯಿತು. ಒಂದು ದಿನ ಅವನು ನಾಟಕ ಮಂದಿರದ ಬಳಿಗೆ ಬಂದನು. ಶಿಷ್ಯನೊಬ್ಬನು ಗಿರೀಶನ ಹತ್ತಿರಕ್ಕೆ ಬಂದು, ಪರಮಹಂಸದೇವನು ಬಂದಿದಾನೆ, ಅವನನ್ನು ಸುಮ್ಮನೆ ಒಳಗೆ ಬಿಡುತ್ತೀರಾ ಇಲ್ಲವೆ ಒಂದು ಟಿಕೆಟ್ ತೆಗೆದು ಕೊಳ್ಳೋಣವೇ, ಎಂದು ಕೇಳಿದನು. ಗಿರೀಶನು ಟಿಕೆಟ್ಟಿಲ್ಲದೆ ಅವನಿಗೆ ಸ್ಥಳವನ್ನು ಕೊಟ್ಟನು. ಇದಾದ ಕೆಲವು ದಿನದಮೇಲೆ ರಾಮಕೃಷ್ಣನು ಗಿರೀಶನ ಮನೆಯ ಮುಂದುಗಡೆ ಕೆಲವು ಶಿಷ್ಯರೊಡನೆ ಹೋಗುತ್ತಿದ್ದನು. ಗಿರೀಶನು ಕಣ್ಣಿಗೆ ಬೀಳಲು ಪರಮಹಂಸನು ತಾನೇ ಅವನಿಗೆ ನಮಸ್ಕಾರ ಮಾಡಿದನು. ಗಿರೀಶನಿಗೆ ಬಹಳ ಆಶ್ಚರ್ಯ: ಗುರುಹಿರಿಯರೆನ್ನುವವರು ಇತರರ ನಮಸ್ಕಾರಕ್ಕೆ ಕಾಯುತ್ತಾರೆ, ಈ ಗುರು ಇಂಥ ಜಂಭವನ್ನೇ ಕಾಣನಲ್ಲಾ, ಎಂದು ಅವನ ಮನಸ್ಸು ರಾಮಕೃಷ್ಣನನ್ನು ಒಪ್ಪಿಕೊಂಡಿತು. ಇದಾದಮೇಲೆ ರಾಮಕೃಷ್ಣನು ಮತ್ತೊಮ್ಮೆ ನಾಟಕ ಮಂದಿರಕ್ಕೆ

ಬಂದನು. ಮೊದಲು ಗಿರೀಶನು ತಾನೇ ಬಂದು ಅವನನ್ನು ಮಾತನಾಡಿಸುವ ಯೋಚನೆಯನ್ನು ಮಾಡಲಿಲ್ಲ; ಆದರೆ ಉತ್ತರಕ್ಷಣದಲ್ಲಿ ಬಂದು ಎದುರುಗೊಂಡು ಒಂದು ಸ್ಥಳವನ್ನು ಕೊಡುವಂತೆ ಏರ್ಪಾಡುಮಾಡಿದನು; ಆಗ ಏನೋ ಮನಸ್ಸು ಕರಗಿ ಅವನ ಕಾಲನ್ನು ಮುಟ್ಟಿ ಅವನಿಗೆ ಒಂದು ಹೂವನ್ನು ಕೊಡಹೋದನು. ಗುರು ಅದನ್ನು ತೆಗೆದುಕೊಳ್ಳಲಿಲ್ಲ; ಹೂವನ್ನು ದೇವರಿಗೆ ಅರ್ಪಿಸಬಹುದು, ಸೊಗಸುಗಾರರಿಗೆ ಕೊಡಬಹುದು, ನಾನು ದೇವರೂ ಅಲ್ಲ, ಸೊಗಸುಗಾರನೂ ಅಲ್ಲ, ನನಗೇಕೆ ಎಂದನು. ನಿಜ ತಾನೆ. ರಾಮಕೃಷ್ಣನು ಗಿರೀಶನಂತೆ ಸೊಗಸುಗಾರನಲ್ಲ; ಅವನು ದೇವರು ಪರಮಹಂಸ ಎಂದು ಗಿರೀಶನಿಗೆ ನಂಬಿಕೆಯಿಲ್ಲ. ಅರ್ತಿಯಿಲ್ಲದ ಪೂಜೆ ದೇವರಿಗೂ ಒಲ್ಲದು. ಇನ್ನೊಂದು ಸಲ ಪರಮಹಂಸನು ನಾಟಕವನ್ನು ನೋಡುವುದಕ್ಕೆ ಬಂದಾಗ ಗಿರೀಶನು ಅವನ ಜೊತೆಗೆ ಪಕ್ಕದಲ್ಲಿ ಪೀಠದ ಮೇಲೆ ಕುಳಿತನು. ಪರಮಹಂಸನ ಜೊತೆಗೆ ಬಂದಿದ್ದ ಶಿಷ್ಯರು ಯಾರೂ ಅವನ ಜೊತೆಗೆ ಕೂಡಲಿಲ್ಲ. ಈತನು ಹಿರಿಯನು, ಇವನಿಗೆ ಸಮನಾಗಿ ಕೂಡಬಾರದು, ಎಂದು ನನಗೆ ಆಗ ತೋರಲಿಲ್ಲ ಎಂದು ಗಿರೀಶಚಂದ್ರನು ಆಮೇಲೆ ಪರಿತಾಪಪಟ್ಟನಂತೆ. ಗಿರೀಶಚಂದ್ರನ ದುರಭ್ಯಾಸಗಳಲ್ಲಿ ಮದ್ಯಪಾನ ಒಂದು. ಇದು ತಪ್ಪು ಎಂದು ಅವನು ಬಲ್ಲನು. ಒಂದು ಸಲ ಕುಡಿತದ ಮಾತು ಬಂದಾಗ ಪರಮಹಂಸನು ಅವನಿಗೆ ಇದಕ್ಕೇನು ಬಹಳ ಯೋಚಿಸುತ್ತೀಯೆ, ದೇವರೇ ಕುಡುಕನಿರಬೇಕು, ಎಂದು ಹೇಳಿ ನಕ್ಕನು. ಗಿರೀಶನು ಸೋಜಿಗದಿಂದ ಅದು ಹೇಗೆ ಎಂದು ಕೇಳಿದನು. 'ಯಾತರದೋ ಅಮಲಿನಲ್ಲಿರದಿದ್ದರೆ ದೇವರು ಪ್ರಪಂಚವನ್ನು ಇಷ್ಟು ಅಷ್ಟಾವಕ್ರವಾಗಿ ಸೃಷ್ಟಿಸುತ್ತಿದ್ದನೆ?' ಎಂದು ಗುರು ನಗುತ್ತ ಹೇಳಿದನು. ಗಿರೀಶನ ಕುಡುಕತನವನ್ನು ಕುರಿತು ಯಾರೋ ಗರ್ಹಣೆಯ ಮಾತನ್ನಾಡಿದಾಗ ಅವನ ಮಾತು ನಿಮಗೇಕೆ, ಸುಮ್ಮನಿರಿ, ಎಂದು ಗುರು ಅವನನ್ನು ದಂಡಿಸಿದನು. ಗಿರೀಶಚಂದ್ರನಂತಹ ಚೇತನಕ್ಕೆ ಅವನು ನಡೆಯುತ್ತಿದ್ದ ದಾರಿ ತಕ್ಕದೆಂದೂ, ಅವನು ಮೂರು ಜನ್ಮದಲ್ಲಿ ಮುಕ್ತರಾಗುವ ಧೀರರ ವರ್ಗದಲ್ಲಿ ಸೇರಿದವನೆಂದೂ ರಾಮಕೃಷ್ಣನು ಬಲ್ಲನು. ಒಂದು ಸಲ ಗಿರೀಶನು ರಾಮಕೃಷ್ಣನನ್ನು ನೋಡುವುದಕ್ಕೆ ಬಂದಾಗ ಜೊತೆಗೆ ಸ್ವಲ್ಪ

ಮದ್ಯವನ್ನು ತಂದು ಬಂದ ಗಾಡಿಯಲ್ಲಿ ಬಿಟ್ಟನಂತೆ. ರಾಮಕೃಷ್ಣನು ಅದನ್ನು ತರಿಸಿ ಇಟ್ಟಿದ್ದು ಮದ್ಯ ಬೇಕೆಂದು ಗಿರೀಶನಿಗೆ ತೋರಿದಾಗ ಅವನಿಗೆ ಅದನ್ನು ಕೊಟ್ಟನು. ಮದ್ಯಪಾಯಿ ಆತುರದಲ್ಲಿ ಎಲ್ಲರೆದುರಿಗೆ ಅದನ್ನು ಕುಡಿದು ಒಡನೆ ತನ್ನ ನಡತೆಯ ವಿಷಯದಲ್ಲಿ ತಾನೇ ಬಹಳ ಸಂಕೋಚ ಪಟ್ಟನು; ಇದಾದಮೇಲೆ ಬರಬರುತ್ತ ಕುಡಿಯುವುದನ್ನು ಕಡಮೆಮಾಡಿದನು. ದಿನ ಕಳೆಯಲು ಗಿರೀಶನು ರಾಮಕೃಷ್ಣನನ್ನು ಉದ್ಧಾರಕ ಗುರುವೆಂದು ಸ್ವೀಕರಿಸಿದನು. ಒಂದು ಸಲ ಗುರು ನೀನು ದಿನಕ್ಕೆ ಎರಡು ಸಲವಾದರೂ ದೇವರನ್ನು ನೆನೆಯಬೇಕು ಎಂದು ಅಪ್ಪಣೆಮಾಡಿದನಂತೆ. ಗಿರೀಶಚಂದ್ರನು ಹಾಗೆ ಮಾಡುವೆನೆಂದು ಮಾತುಕೊಡಲು ಒಪ್ಪಲಿಲ್ಲ. ಹೋಗಲಿ ನಿನಗೆ ಪ್ರತಿಯಾಗಿ ನಾನು ನೆನೆಯುತ್ತೇನೆ, ಅದಕ್ಕೆ ಸಮ್ಮತಿಸು, ಎಂದು ಗುರು ಹೇಳಿದನು. ಗಿರೀಶನು ಒಪ್ಪಿಕೊಂಡನು; ಈ ವಕೀಲಿಯಿಂದ ಗುರುವಿಗೆ ತನ್ನ ವಿಷಯದಲ್ಲಿ ಸ್ವಾಮ್ಯವನ್ನು ಕೊಟ್ಟನು. ತಾನು ಸ್ವತಂತ್ರನೆಂಬ ಭಾವನೆ ಅವನಿಗೆ ತಪ್ಪಿತು; ಅಹಂಭಾವದಿಂದ ಕೋಡಿ ಹರಿಯುತ್ತಿದ್ದ ಅವನ ಜೀವನ ಸರಳಜೀವಿಯಾದ ಈ ಗುರುವಿನ ಸಂಪರ್ಕದಿಂದ ತಾನೂ ಸರಳವಾಯಿತು. ಗಿರೀಶನು ಹೀಗೆ ತನ್ನ ಸ್ವಭಾವದ ದುಷ್ಪ್ರವೃತ್ತಿಗಳಿಂದ ಪಾರಾಗಿ ಬದುಕಿಕೊಂಡನು.

ಗಿರೀಶಚಂದ್ರನು ರಾಮಕೃಷ್ಣನಿಗೆ ಕಟ್ಟುಬಿದ್ದದ್ದು ಎಲ್ಲಕ್ಕಿಂತ ಹೆಚ್ಚಾಗಿ ಅವನ ವಾತ್ಸಲ್ಯಕ್ಕೆ. ಸಾಧಕನು ದೇವರನ್ನು ತಂದೆಯೆಂದೋ ತಾಯಿಯೆಂದೋ ಗುರುವೆಂದೋ ಮಗುವೆಂದೋ ಉಪಾಸಿಸಬಹುದೆಂದು ಪರಮಹಂಸನು ಹೇಳುತ್ತಲೇ ಇದ್ದನಷ್ಟೆ. ಒಂದು ದಿನ ಗಿರೀಶನು ಅವನನ್ನು ಕುರಿತು ನಿನಗೆ ನಾನು ತಂದೆಯಂತೆ ಇರುತ್ತೇನೆ ಎಂದನು. ಆಗ ಅವನು ತುಂಬ ಕುಡಿದಿದ್ದನಂತೆ. ದೇವರನ್ನು ಮಗುವೆಂದು ಉಪಾಸಿಸಬಹುದೆಂಬ ಮಾತು ಮದ್ಯದ ಮಹಿಮೆಯಿಂದ ತಲೆಕೆಳಕಾಗಿ ಇವನಿಗೆ ರಾಮಕೃಷ್ಣನು ಮಗು ಎನ್ನುವುದು ಹೋಗಿ ತಾನು ತಂದೆ ಎನ್ನುವುದು ಮುಖ್ಯವಾಗಿ ಕಂಡಿತು. ರಾಮಚಂದ್ರನನ್ನು ತಂದೆಯೆಂದು ಸಲಹಿದವನು ದಶರಥನು; ತಾಯಿಯೆಂದು ಸಲಹಿದವಳು ಕೌಸಲ್ಯೆ. ಕೃಷ್ಣನನ್ನು ಹೀಗೆ ಕಾಣುವ ಪುಣ್ಯ ವಸುದೇವ ದೇವಕಿಯರಿಗೆ ನಂದಗೋಪ ಯಶೋದೆ

ಅವರಿಗೆ ಲಭಿಸಿತು. ರಾಮಕೃಷ್ಣನನ್ನು ಹೀಗೆ ಸಲಹುವ ಪುಣ್ಯ ಖುದೀರಾಮ ಚಟ್ಟೋಪಾಧ್ಯಾಯ ಚಂದ್ರಮಣಿದೇವಿಯವರದಾಯಿತು. ಗಿರೀಶಚಂದ್ರನು ಪ್ರಪಂಚಿಯಾಗಿರದೆ ಖುದೀರಾಮನಂತೆ ದೈವನಿಷ್ಠನಾಗಿ ಇದ್ದಿದ್ದರೆ ಅವನು ತಂದೆಯಾಗಿರುವೆನೆಂದಾಗ ರಾಮಕೃಷ್ಣನು ಒಪ್ಪಬಹುದಾಗಿತ್ತೋ ಏನೋ. ಆದರೆ ಈ ಮದ್ಯಪಾಯಿಯನ್ನು ತಂದೆಯೆಂದು ಕಾಣುವುದು ರಾಮಕೃಷ್ಣನಿಗೆ ಸರಿಯೆಂದು ತೋರಲಿಲ್ಲ. ಮದ್ಯದ ಅಮಲಿನ ಈ ಸಲಹೆಯನ್ನು ಅವನು ನಿರಾಕರಿಸಿದನು. ಗಿರೀಶಚಂದ್ರನಿಗೆ ಬಹು ಕೋಪ ಬಂದಿತು. ಅವನು ಗುರುವನ್ನು ಬಾಯಿಗೆ ಬಂದಂತೆ ಬೈದು ಒದರಿದನು. ರಾಮಕೃಷ್ಣನು ಅದನ್ನು ಲಕ್ಷ್ಯಮಾಡಲಿಲ್ಲ. ಬೇಕೆಂದು ತೋರಿದಷ್ಟು ಗುರುವನ್ನು ಬೈದು ಗಿರೀಶಚಂದ್ರನು ಮನೆಗೆ ಹೊರಟುಹೋದನು. ಸ್ವಲ್ಪಹೊತ್ತಿನಲ್ಲಿ ಗುರುವಿನ ಬಳಿಗೆ ರಾಮಚಂದ್ರದತ್ತನು ಬಂದನು. ಗುರು ನಡೆದ ಸಂಗತಿಯನ್ನೆಲ್ಲ ಅವನಿಗೆ ಹೇಳಿ, 'ಗಿರೀಶನು ನೋಡು ನನ್ನನ್ನು ಹೀಗೆ ಬಯ್ಯುಬಹುದೆ?' ಎಂದನಂತೆ. ರಾಮಚಂದ್ರನು ಗುರುವಿನ ಕಾಳೀಯ ಮರ್ದನದ ಕಥೆಯ ಒಂದು ಅರ್ಥವನ್ನು ಕೇಳಿದ್ದನು. ಬಾಲಕೃಷ್ಣನು ಹೆಡೆಯಮೇಲೆ ಕುಣಿದಾಗ ಕಾಳೀಯ ಸರ್ಪನು ವಿಷರಕ್ತವನ್ನು ಗಡ್ಡೆ ಗಡ್ಡೆಯಾಗಿ ಕಾರಿದನಂತೆ; ಆ ಗಡ್ಡೆಗಳು ಕೃಷ್ಣನ ಕಾಲಮೇಲೆ ಬಿದ್ದುವು. ಆಗ ಕೆಡುಕನಾಗಿ ಬಂದರೂ ಕಾಳೀಯನು ಭಕ್ತಾಗ್ರಣಿ. ಅಯ್ಯಾ ನೀನು ದೇವರ ಕಾಲಿಗೆ ವಿಷರಕ್ತವನ್ನು ಏಕೆ ಎರಚಿವೆ ಎಂದು ಕೇಳಿದರೆ, ಕಾಳೀಯನು, 'ನನ್ನಲ್ಲಿ ಏನಿತ್ತೋ ಅದನ್ನು ನಾನು ಕೊಟ್ಟೆ. ಒಳ್ಳೆಯದಿರುವವರು ದೇವರಿಗೆ ಒಳ್ಳೆಯದನ್ನು ಅರ್ಪಿಸುತ್ತಾರೆ, ಕೆಟ್ಟದಿರುವವರು ಕೆಟ್ಟದನ್ನೇ ಅರ್ಪಿಸಬೇಕು,' ಎಂದನಂತೆ. ಗಿರೀಶನು ತನ್ನನ್ನು ಬಯ್ಯುಬಹುದೇ ಎಂದು ಗುರು ಕೇಳಿದಾಗ ರಾಮಚಂದ್ರನು ಅವನಿಗೆ ಈ ಕತೆಯನ್ನು ಜ್ಞಾಪಕ ಕೊಟ್ಟನು; 'ನಾವು ಕೆಟ್ಟಜನರು, ನಿನಗೆ ಒಳ್ಳೆಯದನ್ನು ಹೇಗೆ ಕೊಟ್ಟೇವು?' ಎಂದನು. ಗುರುವಿನ ಮನಸ್ಸು ಒಡನೆಯೇ ಕರಗಿತು. 'ಅಯ್ಯೋ ಅವನು ಎಷ್ಟು ನೊಂದುಕೊಂಡನೋ' ಎಂದು, 'ಒಂದು ಗಾಡಿಯನ್ನು ತಾ, ಅವನ ಮನೆಗೆ ಹೋಗೋಣ' ಎಂದನು. ಗುರುವೂ ಶಿಷ್ಯನೂ ಗಿರೀಶನ ಮನೆಗೆ ಹೋದರು. ಗಿರೀಶನು ಕೋಣೆಯ ಒಳಗಡೆ ಸೇರಿಕೊಂಡು

ಬಾಗಿಲಿಗೆ ಅಗಣಿ ಹಾಕಿದ್ದನು. ಈ ವೇಳೆಗೆ ಅವನಿಗೆ ಮದ್ಯದ ವೇಗ ಇಳಿದು ತಾನು ಮಾಡಿದ್ದ ಅಪಚಾರ ಅರಿವಿಗೆ ಬಂದಿದ್ದಿತು. ಅವನು ನೆಲದ ಮೇಲೆ ಬಿದ್ದು ಹೊರಳಾಡುತ್ತ ಪಶ್ಚಾತ್ತಾಪದಿಂದ ಬಿಕ್ಕಿಬಿಕ್ಕಿ ಅಳುತ್ತಿದ್ದನು. ಪರಮಹಂಸನೂ ರಾಮಚಂದ್ರನೂ ಬಾಗಿಲು ತಟ್ಟಿದರು. ಸ್ವಲ್ಪ ಹೊತ್ತು ಅದು ಗಿರೀಶನಿಗೆ ಕೇಳಲಿಲ್ಲ; ಕೇಳಿದಾಗಲೂ ಒಡನೆ ಅವನು ಬಾಗಿಲು ತೆರೆಯಲಿಲ್ಲ. ಇವರು ಮತ್ತೆ ಮತ್ತೆ ಬಾಗಿಲು ತಟ್ಟಲು ಕೊನೆಗೆ ಬಾಗಿಲನ್ನು ತೆರೆದನು; ಗುರುವನ್ನು ಕಂಡು ಹಿಮ್ಮೆಟ್ಟಿದನು. ರಾಮಕೃಷ್ಣನು ಕೋಣೆಯೊಳಕ್ಕೆ ಹೋದನು; ಕಾಲಿಗೆ ಬಿದ್ದ ಶಿಷ್ಯನನ್ನು ಹಿಡಿದು ಎತ್ತಿದನು; ಗಾಢಾಲಿಂಗನದಲ್ಲಿ ಅಪ್ಪಿಕೊಂಡನು. ಗಿರೀಶನ ಗೋಳು ಉಕ್ಕಿ ಕೋಡಿಹರಿಯಿತು. ಗುರು ಕೂಡ ತುಂಬ ಕಣ್ಣೀರು ಸುರಿಸಿದನು; ನೀನು ಹೇಳಿದ್ದು ತಪ್ಪಲ್ಲ, ಚಿಂತೆಮಾಡಬೇಡ, ಎಂದು ಅವನನ್ನು ಸಮಾಧಾನಪಡಿಸಿದನು. ಬಹಳ ಹೊತ್ತಿನಮೇಲೆ ಗಿರೀಶನಿಗೆ ಮನಸ್ಸು ಶಾಂತವಾಯಿತು. ಅಂದಿನಿಂದ ಅವನು ರಾಮಕೃಷ್ಣನಿಗೆ ದಾಸಾನುದಾಸನಾದನು. ಅಲೆಯುವ ಮನಸ್ಸನ್ನು ಅಲೆಯದಂತೆ ಮಾಡಬೇಕಾದರೆ ಅದನ್ನು ಒಂದು ದಾರದಿಂದ ದೇವರ ಕಾಲಿಗೆ ಕಟ್ಟು ಎಂದ ಪರಮಹಂಸನು ಧೀರನಾದ ಈ ಶಿಷ್ಯನು ಎಲ್ಲಿ ಅಲೆಯುವನೋ ಎಂದು ಪ್ರೇಮದ ಸೂತ್ರದಿಂದ ಅವನನ್ನು ಕಟ್ಟಿಹಾಕಿದನು. ಅಲೆಯದಿರಲಿ ಎಂದು ಕೃಷ್ಣನನ್ನು ಯಶೋದೆ ಹಗ್ಗದಿಂದ ಒರಳಿಗೆ ಕಟ್ಟಿಹಾಕಿದಳಂತೆ. ನಮ್ಮಾಳ್ವಾರು ಶಿಷ್ಯನ ಮನಸ್ಸನ್ನು ನಯವಾದ ಕಣ್ಣಿಯಿಂದ ತನಗೆ ಕಟ್ಟಿಕೊಂಡರೆಂದು ಮಧುರಕವಿ ಆಳ್ವಾರು ವರ್ಣಿಸಿದನು. ಶಿಷ್ಯನು ಗುರುವಿಗೆ ಗುರು ಶಿಷ್ಯನನ್ನು ಹೀಗೆ ಕಟ್ಟಿಕೊಳ್ಳುವುದು ಧರ್ಮದ ಇತಿಹಾಸದಲ್ಲಿ ವಾಡಿಕೆಯೇ ಸರಿ. ರಾಮಕೃಷ್ಣ ಗಿರೀಶರ ಸಂಬಂಧವಾದರೂ ಈ ವಾಡಿಕೆಗೆ ಇನ್ನೊಂದು ನಿದರ್ಶನವಾಗಿದೆ.

ಗುರು ಹೀಗೆ ಹತ್ತಿರ ಬಂದ ಜನರಿಗೆ ಅವರವರ ಸಂದರ್ಭಕ್ಕೆ ಅನುಸಾರವಾಗಿ ಅನೇಕ ವಿಷಯಗಳನ್ನು ಅನೇಕ ರೀತಿಗಳಲ್ಲಿ ಉಪದೇಶ ಮಾಡಿದನು. ಅವರಲ್ಲಿ ಹಲವರು ನಡೆದ ಮಾತು ಸಂಗತಿಯನ್ನು ತಮ್ಮ ಜ್ಞಾಪಕಕ್ಕಾಗಿ ಬರೆದಿಟ್ಟುಕೊಂಡರು. ಮಹೇಂದ್ರನಾಥ ಎಂಬ ಶಿಷ್ಯ

ರೊಬ್ಬರು ಬರೆದ ಸೂಕ್ತಿಮಾಲೆ ಗುರುವಿನ ಮಾತಿನ ರೀತಿಯನ್ನು ಚೆನ್ನಾಗಿ ಬಿಂಬಿಸಿತು. ಶಿಷ್ಯವರ್ಗವು ಆಮೇಲೆ ಗುರುವಿನ ಸೂಕ್ತಿಗಳನ್ನು ಮಾಲೆಯಾಗಿ ಸೇರಿಸಿ ಪ್ರಕಟಿಸಿತು. ಈ ಸೂಕ್ತಿಗಳು ಹತ್ತಿರ ಹತ್ತಿರ ಸಾವಿರದಷ್ಟು ಇವೆ. ದೈವವನ್ನು ಧರ್ಮವನ್ನು ಕುರಿತು ಇವುಗಳಲ್ಲಿ ಬಾರದ ಮಾತಿಲ್ಲ; ಈ ಮಾತುಗಳಲ್ಲಿ ಕಾಣದ ಸೊಗಸಿಲ್ಲ. ಇವುಗಳಲ್ಲಿ ಮುಖ್ಯವಾಗಿ ಕಾಣುವ ಗುಣ, ಈ ತತ್ವ ಕಲಿಪಿನದಲ್ಲ ಅನುಭವದು ಎಂದು ವ್ಯಕ್ತಪಡಿಸುವ ಒಂದು ಅಚ್ಚು. ಅನುಭವದ ವಿಷಯವನ್ನು ಬಹುಕಾಲ ಪರಿಶೀಲಿಸಿ ತನ್ನ ಮನಸ್ಸಿಗೆ ತಾನು ಸ್ಪಷ್ಟಮಾಡಿಕೊಂಡಿದ್ದ ಕಾರಣ ರಾಮಕೃಷ್ಣನು ಉಪದೇಶವನ್ನೆಲ್ಲ ಬಹು ಸುಲಭಮಾಡಿದನು. ಗಹನವಾದ ಭಾವವೆಲ್ಲ ಇಲ್ಲಿ ಸ್ಪಷ್ಟವಾಗಿದೆ, ವಿವರವಾಗಿದೆ. ಅದನ್ನು ಹೇಳುವ ಮಾತು ಸರಳವಾಗಿದೆ, ಪ್ರಸನ್ನವಾಗಿದೆ. ವಿಷಯಕ್ಕೆ ಮಾತು ಇಲ್ಲಿ ವಸ್ತ್ರವಾಗಿಲ್ಲ, ಪಟದ ಗಾಜಾಗಿದೆ. ಹಳ್ಳಿಯ ಬಾಳಿನ ಹತ್ತಾರು ವಿಷಯದಿಂದ ತಂದಿರುವ ಉಪಮೆ ಉದಾಹರಣೆ ಗುರುವಿನ ಉದ್ದೇಶವನ್ನು ವಿಶದಪಡಿಸುತ್ತವೆ. ಜೊತೆಗೆ ಇಲ್ಲಿ ಎಲ್ಲ ಬಾಳನ್ನೂ ಸಹಾನುಭೂತಿಯಿಂದ ತನ್ನದೆಂದು ಕಾಣುವ ವಿಶಾಲ ಹೃದಯ ಕಾಣುತ್ತದೆ. ಮಾತು ಸರಳವಾದರೂ ಚತುರವಾಗಿವೆ. ವಿಷಯ ಗಹನವಾದರೂ ಅಲ್ಲಲ್ಲಿ ಹಾಸ್ಯದಿಂದ ಸೊಗಸುತ್ತವೆ. ಒಬ್ಬ ಗುರುವಿನದೆಂದು ಪ್ರಪಂಚದಲ್ಲಿ ಹರಡಿರುವ ಉಪದೇಶ ಸೂಕ್ತಿ ಇನ್ನು ಯಾವುದೂ ಬಲದಲ್ಲಿ ಬೆಲೆಯಲ್ಲಿ ಇದಕ್ಕೆ ಹೆಚ್ಚಿನದಿರಲಾರದು. ಇದರ ಸ್ವರೂಪವನ್ನು ತಿಳಿಸುವಂತೆ ಇದರ ಕೆಲವು ಭಾಗಗಳನ್ನು ಇಲ್ಲಿ ಹೇಳುವುದು ಆವಶ್ಯಕ.

ಪರಮಹಂಸನ ಉಪದೇಶದಲ್ಲಿ ಅವನ ಶಿಷ್ಯರನೇಕರಿಗೆ ಬಹಳ ಅವಶ್ಯಕವಾದದ್ದು ದೇವರಿದಾನೆ ಎನ್ನುವ ಮಾತು. ನರೇಂದ್ರನಂಥ ಜಿಜ್ಞಾಸುಗಳಿಗೆ ಗಿರೀಶನಂಥ ಅವಿಶ್ವಾಸಿಗಳಿಗೆಮಾತ್ರ ಅಲ್ಲದೆ ಸಾಮಾನ್ಯವಾಗಿ ದೇವರ ವಿಷಯದಲ್ಲಿ ನಂಬಿಕೆ ಉಳ್ಳವರಿಗೂ ಪರಮಹಂಸನ ಧೈರ್ಯವಾದ ಆಶ್ವಾಸನದಿಂದ ಪ್ರಯೋಜನವಾಯಿತು. ದೇವರು ಇದಾನೆ ಎಂದು ರಾಮಕೃಷ್ಣನು ಹೇಳಬೇಕಾದರೆ ಅವನಿಗೆ ಆಧಾರ ಶ್ರುತಿಯಲ್ಲ, ಸ್ಮೃತಿಯಲ್ಲ, ತತ್ವಶಾಸ್ತ್ರವಲ್ಲ, ಯುಕ್ತಿಯಲ್ಲ. ದೇವರಿದಾನೆ ಎಂದು ಅವನು

ಹೇಳುತ್ತಿದ್ದುದು ತಾನು ದೇವರನ್ನು ನೋಡಿದುದರಿಂದ. ಹಗಲು ನಕ್ಷತ್ರ ಕಾಣುವುದಿಲ್ಲ; ಆದರೆ ಅದಿಲ್ಲವೆಂದು ಹೇಳಬಹುದೇ? ಮಧ್ಯೆ ತೆರೆಹಾಕಿದರೆ ನಾವು ಒಬ್ಬರಿಗೊಬ್ಬರು ಕಾಣುವುದಿಲ್ಲ; ಆದರೆ ಒಬ್ಬರಿಗೊಬ್ಬರು ಇಲ್ಲವೆನ್ನಬಹುದೆ? ದೇವರು ಹೀಗೆ ನಮ್ಮ ಅಹಂಕಾರದ ತೆರೆಯ ಮರೆಯಲ್ಲಿದ್ದಾನೆ; ಸಂದರ್ಭ ಸರಿಹೋದಾಗ ಕಾಣುತ್ತಾನೆ. ಸಂದರ್ಭ ಸರಿಹೋಗುವವರೆಗೆ ಕಾಣದ ಮಾತ್ರಕ್ಕೇ ಅವನಿಲ್ಲವೆಂದು ನಾವು ಹೇಳಲಾಗದು. ಆದರೆ ಈ ತೆರೆ ನಮಗೆ ಮಾತ್ರ ಮರೆಯಾಗಿದೆ. ದೇವರು ಅದರ ಹಿಂದೆ ಇರುತ್ತ, ತೆರೆಯ ಹಿಂದಿರುವ ರಾಣಿ ತಾನು ಯಾರಿಗೂ ಕಾಣದೆ ತಾನು ಮಾತ್ರ ಎಲ್ಲವನ್ನೂ ನೋಡುತ್ತಿರುವಂತೆ, ನಮ್ಮ ಸುಳಿವು ಎಲ್ಲವನ್ನೂ ನೋಡುತ್ತಿದ್ದಾನೆ. ಅಹಂಕಾರ ಹೋದರೆ ನಾವೂ ಅವನನ್ನು ನೋಡಬಹುದು. ಶಿಷ್ಯನು ಗುರುವನ್ನು, ದೇವರಿರುವುದೂ ನೀನು ನೋಡಿರುವುದೂ ನಿಜವಾದರೆ ಅವನು ಹೇಗಿದ್ದಾನೆ ಹೇಳು, ಎಂದು ಕೇಳಿ ಉಪಯೋಗವಿಲ್ಲ. ಗುರು, 'ಅವನು ಚಿನ್ಮಯನು, ಚಿದ್ರೂಪನು, ಚಿದ್ಧಾಮನು,' ಎಂದು ಮಾತ್ರ ಹೇಳಬಹುದು. ಆದರೆ ಈ ಮಾತಿನಿಂದಾಗಲಿ ಬೇರೆ ಯಾವ ಮಾತಿನಿಂದಾಗಲಿ ಅವನನ್ನು ವರ್ಣಿಸಿದಂತಾಗುವುದಿಲ್ಲ. ಸಮುದ್ರವನ್ನು ನೋಡದವನಿಗೆ ಅದನ್ನು ನೋಡಿದವನು ಅದರ ಸ್ವರೂಪವನ್ನು ತಿಳಿಸುವುದು ಹೇಗೆ? ತುಂಬ ನೀರು, ಎಲ್ಲಿ ನೋಡಿದರೂ ನೀರು, ಸುಮ್ಮನೆ ನೀರು ಎಂದಲ್ಲವೆ ಹೇಳಬೇಕು? ಆದರೆ ಈ ಮಾತು ಸಮುದ್ರದ ಪರಿಚಯವನ್ನು ಮಾಡಿಕೊಡಲಾರದು. ಎಷ್ಟು ಮಾತನ್ನು ಹೇಳಿದರೂ ದೇವರನ್ನು ವರ್ಣಿಸಿದಂತಲ್ಲ. ಮುಖ್ಯವಾಗಿ ದೇವರು ಮಾತಿಗೆ ನಿಲುಕುವ ವಸ್ತುವಲ್ಲ.

ದೇವರನ್ನು ಕುರಿತ ಒಂದು ದೊಡ್ಡ ಪ್ರಶ್ನೆ ಸಗುಣ ನಿರ್ಗುಣಗಳದು. ಅವನು ಸಗುಣನೇ, ನಿರ್ಗುಣನೇ? ಅನಂತನಾದ ನಿರ್ಗುಣನಾದ ದೇವರು ಒಬ್ಬ ವ್ಯಕ್ತಿಯಂತೆ ತೋರಬಹುದೇ? ಆಗ್ಗೆ ಅವನ ಅನಂತ್ಯ ಕೆಡಲಿಲ್ಲವೇ? ಗುಣವೆಂದ ಒಡನೆ ದೋಷವೂ ಸೇರಬೇಕಲ್ಲವೇ? ಇದೆಲ್ಲಾ ವೃಥಾ ವಾದವೆಂದು ರಾಮಕೃಷ್ಣನ ಉಪದೇಶ. ದೇವರು ಸಗುಣನೂ ಹೌದು, ನಿರ್ಗುಣನೂ ಹೌದು. ಅವನು ಅನಂತನೂ ಹೌದು, ವ್ಯಕ್ತಿಯೂ ಹೌದು. ತನ್ನಲ್ಲಿ ತಾನು ನಿರ್ಗುಣನಾಗಿರತಕ್ಕ ಅವನು ಸೃಷ್ಟಿಗಾಗಿ ಗುಣವನ್ನು

ಅಳವಡುತ್ತಾನೆ; ವ್ಯಕ್ತಿಯಾಗುತ್ತಾನೆ. ಭಕ್ತರಿಗಾಗಿ ಅವನು ಆಕಾರ ವನ್ನೂ ಧರಿಸುತ್ತಾನೆ. ನೀರು ದ್ರವದ ಸ್ಥಿತಿಯಲ್ಲಿ ಆಕಾರವನ್ನು ಕಾಣದು; ಯಾವ ಪಾತ್ರೆಯಲ್ಲಿ ಹಾಕಿದರೆ ಅದರ ಆಕಾರವನ್ನು ಪಡೆಯುತ್ತದೆ. ಅದೇ ನೀರು ಘನಿಸಿ ಗಡ್ಡೆಯಾದಾಗ ತನ್ನದೊಂದು ಆಕಾರವನ್ನು ಧರಿಸಿರುತ್ತದೆ. ಅಗ್ನಿ ಉರಿಯಾಗಿರುವಾಗ ಅದಕ್ಕೆ ಆಕಾರವಿಲ್ಲ; ಕೆಂಡವಾದಾಗ ಉಂಟು. ಒಂದು ಗಂಟೆಯ ಶಬ್ದ ಒಂದು ಮಟ್ಟದವರೆಗೆ ನಮ್ಮ ಕಿವಿಗೆ ಗೋಚರ ವಾಗುತ್ತದೆ; ಆ ಮಟ್ಟದಿಂದ ತಗ್ಗಿದಾಗ ನಮ್ಮ ಕಿವಿ ಅದನ್ನು ಕೇಳಲಾರದು. ಸಾಕಾರಬ್ರಹ್ಮವು ಆ ಕೆಂಡದಂತೆ, ಈ ಕರ್ಣಗೋಚರವಾದ ಶಬ್ದದಂತೆ. ನಿರಾಕಾರ ಬ್ರಹ್ಮವು ಆ ಉರಿಯಂತೆ, ಈ ಕಿವಿಗೆ ಕೇಳದ ಶಬ್ದದಂತೆ. ದೇವರೂ ಹೀಗೆಯೇ. ಅವನು ಸಾಕಾರನೂ ಹೌದು, ನಿರಾಕಾರನೂ ಹೌದು. ಇವೆರಡಕ್ಕೂ ಮೀರಿ ಒಂದು ಸ್ಥಿತಿಯೂ ಅವನಿಗೆ ಉಂಟು. ಇವಲ್ಲದೆ ಅವನಿಗೆ ಇನ್ನು ಯಾವ ಸ್ಥಿತಿ ಉಂಟೋ ಅದನ್ನು ಅವನೇ ಬಲ್ಲನು.

ಪರಮಹಂಸನು ಅದ್ವೈತವನ್ನು ಸಾಧಿಸಿದ್ದನು; ಆದರೂ ಸಾಮಾನ್ಯ ವಾಗಿ ವಿಶಿಷ್ಟಾದ್ವೈತವನ್ನು ಅನುಭವಿಸುತ್ತಿದ್ದನು. ದೇವರೇ ಎಲ್ಲವೂ ಆಗಿರುವಲ್ಲಿ ನಾನು ಎನ್ನುವುದು ಬೇರೆ ಒಂದು ವಸ್ತು ಹೇಗಾಯಿತು ಎಂದು ಯಾರಾದರೂ ಕೇಳತಕ್ಕದ್ದೇ. ಗಂಗೆಯಲ್ಲಿ ಒಂದು ತೊಲೆ ಬಿದ್ದರೆ ನೀರು ಇತ್ತ ಬೇರೆ ಅತ್ತ ಬೇರೆ ಎರಡು ಭಾಗವಾದಂತೆ ಕಾಣುವುದು. ಆದರೆ ಅದು ನಿಜವಾಗಿ ಎರಡು ಬೇರೆಯ ವಸ್ತುವಲ್ಲ. ಹೀಗೆಯೇ ಅಹಂಭಾವವು ನಮ್ಮ ಆತ್ಮವನ್ನು ಪರಮಾತ್ಮನಿಂದ ಬೇರೆ ಎಂಬಂತೆ ಕಾಣು ವಂತೆ ಮಾಡುತ್ತದೆ. ಆದರೆ ನಿಜವಾಗಿ ನಮ್ಮ ಆತ್ಮವೂ ಪರಮಾತ್ಮವೂ ಒಂದೇ ವಸ್ತು. ನೀರುಗುಳ್ಳೆಯ ನೀರು ಬೇರೆಯಲ್ಲ; ಆದರೆ ಅದು ಗುಳ್ಳೆ ಯಾಗಿರುವಾಗ ತಾನು ಬೇರೆಯಾಗಿ ಕಾಣುತ್ತದೆ. ಈ ಅಹಂಭಾವಕ್ಕೆ ಮಾಯೆ ಕಾರಣ. ಹಾಗಾದರೆ ಈ ಬೇರೆಯಾಗಿ ಕಾಣುವ ಜೀವ ಪರಮಾತ್ಮನನ್ನು ಅರಿಯುವುದು ಹೇಗೆ? ಉಪ್ಪಿನಲ್ಲಿ ಮಾಡಿದ ಒಂದು ಮೂರ್ತಿ ಸಮುದ್ರವನ್ನು ಅರಿಯುವ ಹಾಗೆ; ಅಥವಾ ಪಾದರಸದಲ್ಲಿ ಬಿದ್ದ ಸೀಸ ಅದರಲ್ಲಿ ಕರಗಿ ಮರೆಯಾಗುವಂತೆ. ಜೀವಾತ್ಮವು ಪರಮಾತ್ಮನನ್ನು ಅರಿಯುವುದು ಎಂದರೆ ಅದರಲ್ಲಿ ಬೆರೆಯುವುದು. ನಾನು ಎನ್ನುತ್ತ

ಇರುವುದೇ ಅಜ್ಞಾನ; ನಾನಲ್ಲ, ನೀನು, ಎನ್ನುವುದೇ ಜ್ಞಾನ. ಮನುಷ್ಯನು ನಿಜವಾದ ಸುಖವನ್ನು ಪಡೆಯಬೇಕಾದರೆ ನಾನು ಎನ್ನುವುದನ್ನು ಬಿಡ ಬೇಕು. ಈ ಬಿಡುವುದಾದರೂ ನಿಜವಾಗಿರಬೇಕು. ಒಳ್ಳೆಯದನ್ನು ಮಾಡಿ ದಾಗ ನಾನು ಮಾಡಿವೆನೆಂದು ಹೆಮ್ಮೆಪಡುವುದೂ, ಕೆಟ್ಟದನ್ನು ಮಾಡಿದಾಗ 'ನಾವು ಸ್ವತಂತ್ರರೇ ದೇವರು ಮಾಡಿಸಿದ' ಎನ್ನುವುದೂ ನಿಜವಾದ ನಿರಹಂಕೃತಿಯಲ್ಲ. ನಾನು ಯಾರು ಎನ್ನುವುದನ್ನು ಸರಿಯಾಗಿ ವಿವೇಚಿಸಿ ಎಲ್ಲ ವಿಷಯದಲ್ಲಿಯೂ ನಾನು ಅಸ್ವತಂತ್ರನು, ದೇವರು ನಿಯಂತೃ ಎಂದು ತಿಳಿಯುವುದು ಅವಶ್ಯಕ. ಎಷ್ಟೇ ಮಾಡಿದರೂ ಈ ಅಹಂಭಾವ ಸಂಪೂರ್ಣವಾಗಿ ಅಳಿಯುವುದಿಲ್ಲ. ಉಳ್ಳಿಯ ಚಟ್ಟಣಿಯನ್ನು ಇಟ್ಟಿದ್ದ ಪಾತ್ರೆ ಎಷ್ಟು ತೊಳೆದರೂ ಅದರ ನಾತದಿಂದ ನಾರುತ್ತದೆ. ನಾನು ಎನ್ನುವುದೂ ಹಾಗೆಯೇ. ಎಂಥ ಜೀವನ್ಮುಕ್ತಸಾಧಕನಿಗೂ ದೇಹದಲ್ಲಿರು ವವರೆಗೆ ನಾನು ಎನ್ನುವುದು ಸ್ವಲ್ಪವಾದರೂ ಅಂಟಿಕೊಂಡಿರುತ್ತದೆ. ಆದರೆ ನಾನಲ್ಲ ದೇವರು ಎಂಬ ಭಾವವನ್ನು ಸಾಧಿಸಿದವನಿಗೆ ಈ ಸ್ವಲ್ಪದ ಅಹಂಭಾವದಿಂದ ತೊಂದರೆಯಿಲ್ಲ. ಸ್ಪರ್ಶಮಣಿಯ ಸೋಂಕಿನಿಂದ ಚಿನ್ನವಾದ ಕಬ್ಬಿಣದ ಅಲಗು ಮತ್ತೆ ಕತ್ತಿಯಂತೆ ಇರಿಯಲಾರದು. ಒಂದು ಹಗ್ಗವನ್ನು ಸುಟ್ಟು ಬೂದಿಮಾಡಿದರೆ ಅದರ ಆಕಾರ ಹಾಗೆಯೇ ಇರುತ್ತದೆ; ಆದರೆ ಅದು ಏನನ್ನೂ ಕಟ್ಟಲಾರದು. ಜೀವನ್ಮುಕ್ತನ ಅಹಂಕೃತಿ ಈ ರೀತಿಯದು. ಅದು ಬರಿಯ ಒಂದು ಆಕಾರ. ತಲೆಯನ್ನು ಕಡಿದಮೇಲೂ ಮೇಕೆಯ ಮೈ ಸ್ವಲ್ಪ ಒದ್ದಾಡುವಂತೆ, ತೆಂಗಿನಮರದಲ್ಲಿ ಮಚ್ಚೆ ಬಿದ್ದವೇಳೆ ಅದು ಇದ್ದ ಸ್ಥಳದಲ್ಲಿ ಗಾಯ ನಿಲ್ಲುವಂತೆ, ಮುಕ್ತಾತ್ಮ ರಲ್ಲಿಯೂ ದೇಹವನ್ನು ನಡೆಸಿಕೊಳ್ಳುವಷ್ಟರ ಮಾತ್ರಕ್ಕೆ ಬೇಕಾದ ಅಭಿಮಾನ ಲೇಶ ಚಂದ್ರರೇಖೆಯಂತೆ ಸ್ವಲ್ಪ ಇರುತ್ತದೆ. ಆದರೆ ಸಮಾಧಿ ಯಲ್ಲಿ ಈ ಲೇಶದ ಅಹಂಭಾವವನ್ನೂ ಅವರು ಸಂಪೂರ್ಣವಾಗಿ ಕಳೆದು ಕೊಳ್ಳುವರು; ಅದ್ವೈತವನ್ನು ನಿಜವಾಗಿ ಅನುಭವಿಸುವರು.

ಅದ್ವೈತವೇ ನಿಜವಾದರೂ ಅದರ ಸಾಧನೆಯ ವಿಷಯದಲ್ಲಿ ಮನುಷ್ಯನು ವಿವೇಕದಿಂದ ನಡೆದು ಕೊಳ್ಳಬೇಕು. ಈ ಅಭಿಪ್ರಾಯವನ್ನು ವಿವರಿಸುವುದಕ್ಕೆ ಪರಮಹಂಸನು ಒಂದು ಕತೆಯನ್ನು ಹೇಳುತ್ತಿದ್ದನು.

ಗುರು ಶಿಷ್ಯನಿಗೆ 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಉಪದೇಶವಾಡಿದನು. ಶಿಷ್ಯನು ಅದರ ಮಾತನ್ನು ಮಾತ್ರ ಗ್ರಹಿಸಿಕೊಂಡವನು ದಾರಿಯಲ್ಲಿ ಹೋಗುತ್ತ ಎದುರಿಗೆ ಒಂದು ಆನೆಯನ್ನು ಕಂಡನು. ಅದರಮೇಲೆ ಕುಳಿತಿದ್ದ ಮಾವುತನು, ದಾರಿ ಬಿಡು ದಾರಿ ಬಿಡು, ಎಂದು ಇವನಿಗೆ ಕೂಗಿ ಹೇಳಿದನು. 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಕೇಳಿದ್ದ ಶಿಷ್ಯನು, ಇದು ಯಾತರದು ಇವನು ನನ್ನನ್ನು ಬೆದರಿಸುವುದು, ನಾನು ಬ್ರಹ್ಮ, ಆನೆ ಬ್ರಹ್ಮ, ಬ್ರಹ್ಮನು ತನಗೆ ತಾನೇ ಏಕೆ ಹೆದರಬೇಕು, ಎಂದುಕೊಂಡು ದಾರಿ ಬಿಡದೆ ಮುಂದುವರಿದನು. ಆನೆ ಸೊಂಡಲಿನಿಂದ ಇವನನ್ನು ಹಿಡಿದು ಒಂದು ಕಡೆಗೆ ಎಸೆಯಿತು; ಇವನಿಗೆ ಪೆಟ್ಟಾಯಿತು. ಮತ್ತೆ ಗುರುವನ್ನು ಕಂಡಾಗ ಇವನು ಆದ ಸಂಗತಿಯನ್ನು ಅರಿಕೆಮಾಡಿದನು. ಗುರು ಇವನಿಗೆ, 'ನೀನು ಬ್ರಹ್ಮವೇ ಸರಿ; ಆನೆಯೂ ಬ್ರಹ್ಮವೇ; ಆದರೆ ಆನೆಯಮೇಲೆ ಕುಳಿತಿದ್ದ ಮಾವುತನೂ ಬ್ರಹ್ಮ, ಅವನ ಮಾತನ್ನು ನೀನು ಏಕೆ ಕೇಳಲಿಲ್ಲ?' ಎಂದನು.

ಆತ್ಮಸಾಧನೆಯಲ್ಲಿ ಮನುಷ್ಯನಿಗೆ ಒಬ್ಬ ಗುರು ಬೇಕು. ತಿಳಿಯದ ಊರಿಗೆ ಹೋದಾಗ ಅಲ್ಲಿ ಗುಡಿ ಎಲ್ಲಿ, ಅಂಗಡಿ ಎಲ್ಲಿ, ಕೋಟೆ ಎಲ್ಲಿ, ಎನ್ನುವುದನ್ನು ಆ ಸ್ಥಳವನ್ನು ಬಲ್ಲವರಿಂದ ಕೇಳಿ ತಿಳಿಯುತ್ತೇವೆ. ಸಾಧನೆ ಎನ್ನುವುದೂ ಹೀಗೆಯೇ. ಅದು ಒಂದು ಕಲೆ; ಅದರ ಪರಿಶ್ರಮವುಳ್ಳವರಿಂದ ಅದರ ಕ್ರಮವನ್ನು ಕಲಿಯುವುದು ಒಳ್ಳೆಯದು. ಆದರೆ ಸಿಕ್ಕಿದವನೆಲ್ಲ ಗುರುವಾಗಲಾರನು. ನಾಲ್ಕು ಮಾತನ್ನು ತಿಳಿದುಕೊಂಡು ಸಭೆಯ ಮುಂದೆ ನಾಲ್ಕುಗಂಟೆಯ ಉಪನ್ಯಾಸಮಾಡುವುದಕ್ಕೆ ಏಳುವುದು ತಪ್ಪು. ನಾಲ್ಕು ಜನಕ್ಕೆ ಅಡಿಗೆ ಮಾಡಿ ನೂರು ಜನರನ್ನು ಊಟಕ್ಕೆ ಕರೆಯುವುದು ತಪ್ಪು. ಸಾಧನೆಯಲ್ಲಿ ಸ್ವಲ್ಪ ಮಾತ್ರ ಸಾಗಿರುವವನು ಇನ್ನೊಬ್ಬರಿಗೆ ಉಪದೇಶ ಮಾಡುವೆನೆಂದು ಹೊರಡಬಾರದು. ಸಾಧನೆಯಲ್ಲಿ ಮುಂದುವರಿಯುವುದು ಅವನ ಕೆಲಸ. ಸಾಧನೆ ಮುಗಿದು ಗುರುವಾಗುವುದಕ್ಕೆ ಅವನಿಗೆ ಯೋಗ್ಯತೆ ಬಂದಾಗ ಜನ ತಾವೇ ಅವನ ಬಳಿಗೆ ಬರುವರು. ಶಿಷ್ಯನ ಮಾತಾದರೂ ಹಾಗೆಯೇ. ಅವನಿಗೆ ಸನ್ಮಾರ್ಗದಲ್ಲಿ ನಿಜವಾಗಿ ಆಸೆ ಹುಟ್ಟಿದರೆ, ಅವನು ಸದ್ಗುರುವನ್ನು ತನ್ನ ಯತ್ನ ಇಲ್ಲದೆಯೇ ಕಾಣುವನು. ಇವನಿಗೆ ಗುರು ಬೇಕಾದಾಗ ದೇವರು ಅವನನ್ನು ಕಳುಹಿಸದೆ ಇರುವುದಿಲ್ಲ. ಹೀಗೆ ಬಂದ

ಗುರು ದೇವರ ಆದೇಶವನ್ನು ಉಳ್ಳವನಾಗಿರುತ್ತಾನೆ. ಈ ಆದೇಶವಿಲ್ಲದ ಗುರು ಗುರುವಲ್ಲ. ಆದೇಶವುಳ್ಳ ಗುರು ಗುರುಮಾತ್ರವಲ್ಲ. ಅವನು ದೇವರೇ. ಆದೇಶವಿಲ್ಲದೆ ಉಪದೇಶಿಸುವವನು ತಾನು ಉಪದೇಶಮಾಡು ತ್ತಿದ್ದೇನೆಂದು ತಿಳಿಯುತ್ತಾನೆ. ಅವನ ಉಪದೇಶ ಅಭಿಮಾನದಿಂದ ಕಲುಷಿತವಾಗುವ ಸಂಭವವಿದೆ. ಆದೇಶವಿರುವವನು ದೇವರು ಏನನ್ನು ಹೇಳೆಂದು ಪ್ರೇರಿಸುತ್ತಾನೋ ಅದನ್ನು ಹೇಳುತ್ತಾನೆ. ತಾನು ಏನನ್ನೂ ಹೇಳುತ್ತಿಲ್ಲವೆಂದೂ, ಮಾತೆಲ್ಲ ದೇವರದೆಂದೂ, ತಾನು ಅವನ ಮಾತನ್ನು ಪ್ರಕಟಿಸುವ ದಾಸನೆಂದೂ ಸದಾ ತಿಳಿದಿರುತ್ತಾನೆ. ನಿಜವಾಗಿ ನೋಡಿದರೆ ಗುರು ಎನ್ನುವ ಮಾತು ದೇವರೊಬ್ಬನಿಗೇ ಸಲ್ಲತಕ್ಕದ್ದು. ಹೀಗೆಂದು ಪರಮಹಂಸನು ಒಂದು ಸಲ, 'ನನ್ನನ್ನು ಜನರು ದೇವ ಎನ್ನುತ್ತಾರೆ, ಗುರು ಎನ್ನುತ್ತಾರೆ, ತಂದೆ ಎನ್ನುತ್ತಾರೆ. ಅವರು ಹಾಗೆ ಕರೆದಾಗ ನನಗೆ ತುಂಬ ನೋವಾಗುತ್ತದೆ. ದೇವರು, ಗುರು. ತಂದೆ ಒಬ್ಬನೇ; ಈ ಹೆಸರಿನಿಂದ ಅವನನ್ನು ಮಾತ್ರ ಕರೆಯಬೇಕು,' ಎಂದನು.

ಸಂಸಾರದಲ್ಲಿರುತ್ತ ಸಾಧನೆಯಲ್ಲಿ ಮುಂದರಿಯುವುದು ಮಂಗಳಕರ. ಆರಂಭದಲ್ಲಿಯೇ ವೈರಾಗ್ಯದಲ್ಲಿ ತೊಡಗುವುದು ಬಯಲಲ್ಲಿ ನಿಂತು ಯುದ್ಧ ಮಾಡುವಂತೆ. ಹಗೆ ಅಂಥ ಮನುಷ್ಯನನ್ನು ನಾಲ್ಕು ಕಡೆಯಿಂದಲೂ ಹೊಡೆಯಬಹುದು. ಸಂಸಾರದಲ್ಲಿದ್ದು ವೈರಾಗ್ಯವನ್ನು ಅಭ್ಯಾಸಮಾಡು ವುದು ಕೋಟೆಯ ಒಳಗಿನಿಂದ ಯುದ್ಧಮಾಡುವಂತೆ. ಹೀಗೆಂದಮಾತ್ರಕ್ಕೇ ಸಂಸಾರದಲ್ಲಿ ಇರುತ್ತ ಅದರ ಸ್ಥಿತಿಗತಿ ಎಳೆದಂತೆ ನಡೆಯಬೇಕೆಂದು ಅಭಿಪ್ರಾಯವಲ್ಲ: ದೇವರಲ್ಲಿ, ಧರ್ಮದಲ್ಲಿ, ಕರ್ಮದಲ್ಲಿ, ಮನಸ್ಸನ್ನಿಟ್ಟು ಸಂಸಾರದಲ್ಲಿ ನಡೆದರೆ ಮನುಷ್ಯನು ಅದರ ದುಷ್ಪರಿಣಾಮದಿಂದ ತಪ್ಪಿಸಿ ಕೊಳ್ಳಬಹುದು. ಆದುದರಿಂದಲೇ ಬದುಕಬಹುದು: ಕೈಗೆ ಸ್ವಲ್ಪ ಎಣ್ಣೆ ಹಚ್ಚಿಕೊಂಡು ಹಲಸಿನಕಾಯನ್ನು ಬಿಡಿಸುವವನಿಗೆ ಅದರ ಹಾಲು ಕೈಗೆ ಅಂಟುವುದಿಲ್ಲ. ಜೀವನಪಥದಲ್ಲಿ ದೇವರ ಹೆಸರನ್ನು ಜೊತೆಮಾಡಿ ಕೊಂಡವನು ಪಗಡೆಯಾಟದಲ್ಲಿ ಜೊತೆಯಾಗಿ ನಡೆಯುವ ಕಾಯಂತೆ ಆತಂಕವಿಲ್ಲದೆ ನಡೆಯಬಹುದು. ಅಥವಾ ದೇವರಿಗೆ ಮನಸ್ಸನ್ನು ಮುಟ್ಟಿಸಿ ಬಾಳ ಆಟದಲ್ಲಿ ನಡೆಯುವನು ಕಣ್ಣುಮುಚ್ಚಾಲೆಯಾಟದಲ್ಲಿ ಅಜ್ಜಿಯನ್ನು

ಮುಟ್ಟಿದ ಮಗುವಿನಂತೆ; ಅವನಿಗೆ ಆಮೇಲೆ ತೊಂದರೆಯಿಲ್ಲ. ಹೀಗೆ ಸಂಸಾರದಲ್ಲಿರುತ್ತ ಅದರ ತೊಡಕಿಗೆ ಸಿಕ್ಕದೆ ಇರುವವನು ದಿಟವಾಗಿ ಶೂರನು, ದಿಟವಾಗಿ ವೀರನು. ದೊಡ್ಡ ಹೊರೆಯನ್ನು ತಲೆಯಮೇಲಿಟ್ಟು ಕೊಂಡು ಹೋಗುತ್ತ ದಾರಿಯಲ್ಲಿ ಬರುವ ಉತ್ಸವವನ್ನು ನೋಡಿ ಸಂತೋಷಪಡಬೇಕಾದರೆ ಶಕ್ತನಿಗೆ ಮಾತ್ರ ಸಾಧ್ಯ. ಈ ಶಕ್ತಿ ಬರ ಬೇಕಾದರೆ ಮನುಷ್ಯನು ಆಗಾಗ ಸ್ವಲ್ಪ ಹೊತ್ತು ಒಂದು ಕಡೆ ಕುಳಿತು ಭಗವಂತನನ್ನು ಕುರಿತು ಧ್ಯಾನಮಾಡಬೇಕು; ಭಕ್ತಿಯನ್ನು ಕೊಡು, ಉದ್ಧಾರಮಾಡು, ಎಂದು ಬೇಡಬೇಕು. ಹೀಗೆ ಮಾಡುವ ಸಂಸಾರಿ, ಒಂದು ಕಡೆ ಅಕ್ಕಿ ಕುಟ್ಟುವಳಿಗೆ ಒರಳಿಗೆ ಅಕ್ಕಿಯನ್ನು ತಳ್ಳಿಕೊಡುತ್ತ, ಒಂದು ಕಡೆ ಅಕ್ಕಿಯನ್ನು ಕೊಳ್ಳಲು ಬಂದವನಿಗೆ ಅಕ್ಕಿಯ ಬೆಲೆಯನ್ನು ಹೇಳುತ್ತ, ಮಧ್ಯೆ ತನ್ನ ಮಗುವಿಗೆ ಮೊಲೆಯನ್ನು ಕುಡಿಸುತ್ತ ಕುಳಿತಿರುವ ಅಕ್ಕಿಯ ಅಂಗಡಿಯ ಹೆಂಗಸಿನಂತೆ, ಸಂಸಾರವನ್ನು ಸರಿಯಾಗಿ ನಡೆಸಿ ಕೊಳ್ಳುವನು, ದೇವರಲ್ಲಿಯೂ ಸರಿಯಾಗಿ ನಡೆದುಕೊಳ್ಳುವನು. ಇಂಥ ಸಂಸಾರಿ ಸಂಸಾರವನ್ನು ತನ್ನದೆನ್ನುವುದಿಲ್ಲ, ದೇವರದು ಎನ್ನುವನು. ಪುಣ್ಯವಂತರ ಮನೆಯ ದಾದಿ ಮಗುವನ್ನು ಪ್ರೀತಿಯಿಂದ ಸಾಕಿದರೂ ಅದು ಮನೆಯ ಯಜಮಾನರದೆಂದು ನೆನಪಿನಲ್ಲಿಟ್ಟುಕೊಂಡಿರುವಂತೆ, ಇವನು ಸಂಸಾರದ ಭಾರವನ್ನು ದೇವರಲ್ಲಿರಿಸಿರುವನು. ಇಂಥವನಿಗೆ ಸಂಸಾರವನ್ನು ಬಿಡುವುದೇ ಕಟ್ಟಿಕೊಳ್ಳುವುದೇ ಎಂಬ ಪ್ರಶ್ನೆಯೇ ಬರು ವುದಿಲ್ಲ. ಪ್ರಪಂಚ ದೇವರದು, ತನ್ನದಲ್ಲ. ತಾನು ದೇವರ ಅಪ್ಪಣೆಯನ್ನು ನಡೆಸತಕ್ಕವನು, ಅವನ ದಾಸ. ಇರುವುದನ್ನೂ ಬಿಡುವುದನ್ನೂ ಅವನೇ ನಿರ್ಧರಿಸುತ್ತಾನೆ. ಅಲ್ಲದೆ ಸಂಸಾರಿಯಾಗಿದ್ದ ಮಾತ್ರಕ್ಕೆ ವಿಷಯ ಸುಖವನ್ನು ಅನುಭವಿಸುತ್ತಲೇ ಇರಬೇಕಾದುದಿಲ್ಲ. ಗಂಡ ಹೆಂಡಿರು ಒಂದೆರಡು ಮಕ್ಕಳಾದಮೇಲೆ ಒಡಹುಟ್ಟಿದವರಂತೆ ನಿಸ್ಸಂಗಿಗಳಾಗಿ ನಡೆದುಕೊಳ್ಳಬೇಕು; ಹಾಗೆ ಇರುವುದಕ್ಕೆ ತಕ್ಕ ಶಕ್ತಿಯನ್ನು ಕೊಡೆಂದು ದೇವರನ್ನು ಪ್ರಾರ್ಥಿಸಬೇಕು. ಹೀಗೆ ಮಾಡದಿದ್ದರೆ ಸಂಸಾರ ಮನುಷ್ಯನಿಗೆ ಬದಿಯಂತೆ ಆಗುತ್ತದೆ; ಅವನು ಅದರಲ್ಲಿ ಸಿಕ್ಕಿ ತೊಳಲುತ್ತಾನೆ. ಅವನಿಗೆ ಸ್ವಲ್ಪ ಕಾಲದಲ್ಲೇ ದೇವರನ್ನು ಧರ್ಮವನ್ನು ಕುರಿತ ಬುದ್ಧಿ ನಷ್ಟವಾಗ

ತ್ತದೆ. ಆಮೇಲೆ ಅವನಿಗೆ ಸನ್ಮಾರ್ಗ, ಸತ್ಕಥೆ, ರುಚಿಸುವುದಿಲ್ಲ; ಅಸತ್ಕಥೆ, ಅಸನ್ಮಾರ್ಗವೇ ಬೇಕೆನಿಸುತ್ತದೆ. ಒಂದು ಕ್ಷಣ ಸಕ್ಕರೆಯಮೇಲೆ, ಮರು ಕ್ಷಣ ಹೇಸಿಗೆಯಮೇಲೆ, ಕೂಡುವ ನೊಣದಂತೆ ಇವನಿಗೆ ಒಳ್ಳೆಯದು ಕೆಟ್ಟುದರ ವಿವೇಚನೆಯಿಲ್ಲದೆ ಹೋಗುತ್ತದೆ. ಮೀನು ಮಾರುವ ಕೆಲವು ಹೆಂಗಸರು ಮಳೆ ಬಂದ ಕಾರಣದಿಂದ ಒಂದು ಹೂವಿನ ಅಂಗಡಿಯಲ್ಲಿ ರಾತ್ರಿ ಮಲಗಬೇಕಾಯಿತಂತೆ. ಹೂವಿನ ವಾಸನೆಯಿಂದ ಅವರಿಗೆ ನಿದ್ದೆ ಬರಲಿಲ್ಲ. ಏನು ಮಾಡುವುದೆಂದು ಅವರು ಯೋಚಿಸುತ್ತಿರುವಲ್ಲಿ ಒಬ್ಬಳು ಮೀನು ತುಂಬುವ ಚೀಲವನ್ನು ತಲೆದಿಂಬಾಗಿಟ್ಟುಕೊಂಡಳು; ಮೀನಿನ ಕೌಸುನಾತದಿಂದ ಹೂವಿನ ವಾಸನೆ ಮರೆಯಿತು. ಅದನ್ನು ಅವಳು ಎಲ್ಲರಿಗೂ ಹೇಳಿದಳು. ಆಮೇಲೆ ಎಲ್ಲರೂ ತಮ್ಮತಮ್ಮ ಮೀನಿನ ಚೀಲವನ್ನು ತಲೆಕೆಳಗೆ ಇಟ್ಟುಕೊಂಡು ಹಾಯಾಗಿ ನಿದ್ದೆಹೋದ ರಂತೆ. ಎಚ್ಚರಿಕೆಯಿಂದಿಲ್ಲದಿದ್ದರೆ ಸಂಸಾರಿ ಹೀಗೆ ದುರ್ವಿಷಯದ ದಾಸನಾಗುವನು.

ತನ್ನ ಭಾಗದ ಕೆಲಸವನ್ನು ತನ್ನಿಂದಾದಷ್ಟು ಚೆನ್ನಾಗಿ ಮಾಡುತ್ತ ಪ್ರಪಂಚದಲ್ಲಿ ನಡೆಯುತ್ತಿರುವ ಮನುಷ್ಯನಿಂದ ದೇವರು ಬಹು ಸ್ವಲ್ಪವನ್ನು ಅಪೇಕ್ಷಿಸುತ್ತಾನೆ. ಅಂಥವನು ದೇವರನ್ನು ದಿನಕ್ಕೆ ಎರಡು ಸಲ ನೆನೆದರೆ ಸಾಕು. ಆದರೆ ಇದು ಬಹು ಸುಲಭವೆಂದು ನಾವು ಭಾವಿಸಬಾರದು. ಒಂದು ಸಲ ಕೃಷ್ಣನು ನಾರದನಿಗೆ ಒಬ್ಬ ಬೇಸಾಯಗಾರನು ತನ್ನ ಭಕ್ತರಲ್ಲಿ ಬಹು ಉತ್ತಮನೆಂದು ಹೇಳಿದನಂತೆ. ನಾರದನಿಗೆ ತಾನು ಬಹಳ ಭಕ್ತನೆಂದು ಒಂದು ಭಾವನೆ ಇದ್ದಿತು. ಈ ಬೇಸಾಯಗಾರನು ಇನ್ನೇನು ತಾನೇ ಮಾಡಿ ತನಗಿಂತ ಒಳ್ಳೆಯ ಭಕ್ತನಾದನು, ನೋಡೋಣ, ಎಂದು ಅವನು ಅವನನ್ನು ನೋಡಹೋದನು. ಬೇಸಾಯಗಾರನು ಬೆಳಗ್ಗೆ ಎದ್ದು ಹೊಲಕ್ಕೆ ಹೊರಡುತ್ತ ದೇವರನ್ನು ನೆನೆದು ಹೊರಡುವನು; ಸಂಜೆಯಲ್ಲಿ ಕೆಲಸವನ್ನು ಮುಗಿಸಿ ಮನೆಗೆ ಬಂದಮೇಲೆ ಕೈಕಾಲು ತೊಳೆದುಕೊಂಡು ಮತ್ತೊಮ್ಮೆ ನಾರಾಯಣಾ ಎನ್ನುವನು. ಇಷ್ಟಕ್ಕೆ ಇವನು ಬಹು ದೊಡ್ಡ ಭಕ್ತನಾದನೆ ಎಂದು ನಾರದನಿಗೆ ವಿಸ್ಮಯವಾಯಿತು. ಅದನ್ನು ಅವನು ಕೃಷ್ಣನಿಗೆ ಹೇಳಿ ದನು. ಕೃಷ್ಣನು ಅವನ ಕೈಗೆ ತುಂಬ ಎಣ್ಣೆ ತುಂಬಿದ ಒಂದು ಬಟ್ಟಲನ್ನು

ಕೊಟ್ಟು, ನೀನು ಇದನ್ನು ಹಿಡಿದುಕೊಂಡು ಈ ಬೀದಿಯಲ್ಲಿ ಹೊರಟು ಆ ಬೀದಿಯಿಂದ ಹಿಂತಿರುಗಿ ಪ್ರದಕ್ಷಿಣವಾಗಿ ಬರಬೇಕು, ಎಣ್ಣೆ ಒಂದು ತೊಟ್ಟೂ ಚೆಲ್ಲಬಾರದು, ಜೋಕೆ, ಎಂದು ಹೇಳಿದನು. ನಾರದನು ಹಾಗೆಯೇ ಮಾಡಿ ಹಿಂತಿರುಗಿ ಬಂದನು. ಕೃಷ್ಣನು, ಇಲ್ಲಿಂದ ಹೊರಟು ಹಿಂದಿರುಗಿ ಬರುವವರೆಗೆ ನನ್ನ ವಿಷಯ ನೀನು ಎಷ್ಟುಸಲ ನೆನಸಿಕೊಂಡೆ, ಎಂದು ಕೇಳಿದನು. ನಾರದನು, 'ನಾನು ಸದ್ಯ ನಿನ್ನನ್ನು ಎಲ್ಲಿ ನೆನೆಯಲಿ. ಈ ಹಾಳು ಎಣ್ಣೆ ಬಟ್ಟಲು ತುಂಬ ತುಂಬಿತ್ತು. ಒಂದು ತೊಟ್ಟು ಎಣ್ಣೆಯೂ ಚೆಲ್ಲಕೂಡದೆಂದು ನೀನು ಹೇಳಿದ್ದೆ. ನಿನ್ನ ಬಟ್ಟಲನ್ನು ತಂದು ನಿನಗೆ ಸೇರಿಸುವುದರಲ್ಲಿ ನನ್ನ ಮನಸ್ಸೆಲ್ಲ ಅದರಮೇಲೆ ಇದ್ದುಹೋಯಿತು,' ಎಂದನು. ಕೃಷ್ಣನು, 'ನೋಡು ಇಂಥ ಕೆಲಸವನ್ನು ಕಟ್ಟಿಕೊಂಡು ಆ ಬೇಸಾಯಗಾರನು ನನ್ನನ್ನು ದಿನಕ್ಕೆ ಎರಡುಸಲವಾದರೂ ನೆನೆಯುತ್ತಾನೆ,' ಎಂದು ಹೇಳಿದನು. ನಾರದನು ಒಪ್ಪಿಕೊಂಡನು.

ಸಂಸಾರದಲ್ಲಿ ಬರುವ ಬಹು ಚಿಂತೆಯೆಲ್ಲ ಮನುಷ್ಯನು ತನಗೆ ಬೇಕಾದದಕ್ಕಿಂತ ಹೆಚ್ಚಿನ ಆಸ್ತಿಯನ್ನು ಕಟ್ಟಿಕೊಳ್ಳುವುದರಿಂದ. ಒಂದು ಹದ್ದು ಕೊಕ್ಕಿನಲ್ಲಿ ಒಂದು ಮೀನನ್ನಿಟ್ಟುಕೊಂಡು ಹಾರುತ್ತಿದ್ದಿತು. ಮೀನನ್ನು ನೋಡಿ ಇತರ ಕೆಲವು ಹದ್ದು ಕೆಲವು ಕಾಗೆ ಈ ಹದ್ದನ್ನು ಅಟ್ಟಿಸಿಕೊಂಡು ಬಂದವು. ಅವುಗಳ ಕೂಗಾಟ ಕಾಟವನ್ನು ಈ ಹದ್ದು ತಡೆಯಲಾರದೆ ಹೋಯಿತು. ಅವುಗಳಿಂದ ತಪ್ಪಿಸಿಕೊಳ್ಳುವುದಕ್ಕೆ ಅದು ತುಂಬ ಮೇಲಕ್ಕೆ ಹಾರಿತು, ಇದ್ದದಿದ್ದ ಹಾಗೆ ಕೆಳಕ್ಕೆ ಇಳಿಯಿತು, ಒಮ್ಮೆ ಇತ್ತ ಒಮ್ಮೆ ಅತ್ತ ವೇಗವಾಗಿ ತಿರುಗಿ ಓಡಿತು. ಏನುಮಾಡಿದರೂ ಆ ಹದ್ದುಗಳೂ ಕಾಗೆಗಳೂ ಈ ಹದ್ದನ್ನು ಬಿಡಲಿಲ್ಲ. ಕೊನೆಗೆ ಸೋತು ಬೇಸರಗೊಂಡು ಅದು ಕೊಕ್ಕಿನಿಂದ ಮೀನನ್ನು ಬಿಟ್ಟುಬಿಟ್ಟಿತು. ಆ ಬೀಳುವ ಮೀನನ್ನು ಇನ್ನೊಂದು ಹದ್ದು ಹಿಡಿದುಕೊಂಡಿತು. ಮೀನನ್ನು ಬಿಟ್ಟ ಮೊದಲ ಹದ್ದು ಒಂದು ಮರದಮೇಲೆ ಕುಳಿತು ವಿಶ್ರಾಂತಿ ತೆಗೆದು ಕೊಂಡಿತು. ಉಳಿದ ಹದ್ದುಗಳೂ ಕಾಗೆಗಳೂ ಮೀನನ್ನು ಹೊಸದಾಗಿ ಬಾಯಲ್ಲಿಟ್ಟುಕೊಂಡ ಹದ್ದನ್ನು ಹಿಂಬಾಲಿಸಿ ಅದರ ಪ್ರಾಣವನ್ನು ತೆಗೆಯುವುದಕ್ಕೆ ಆರಂಭಮಾಡಿದವು. ಸಂಸಾರದ ಪಾತೂ ಇಷ್ಟೇ.

ಉಪದೇಶದ ಅರ್ಥವನ್ನು ಹೀಗೆ ಕಥೆಗಳಿಂದ ವಿವರಿಸುವುದು ಪರಮ ಹಂಸನಿಗೆ ಬಹುಪ್ರಿಯವಾದ ಪದ್ಧತಿಯಾಗಿದ್ದಿತು. ಸಂಸಾರದಲ್ಲಿ ಅನುಸರಿಸ ಬೇಕಾದ ಇನ್ನೊಂದು ತತ್ವವನ್ನು ಅವನು ಇನ್ನೊಂದು ಕತೆಯಿಂದ ವಿವರಿಸಿದನು. ಒಂದು ಹೊಲದಲ್ಲಿ ಒಂದು ಹಾವಿತ್ತು. ಒಂದು ದಿನ ಅದು ಆ ದಾರಿಯಲ್ಲಿ ಹೋಗುತ್ತಿದ್ದ ಒಬ್ಬ ಸಾಧುವನ್ನು ಕಡಿಯಹೋಗಲು ಅವನು ಅದನ್ನು ಮಂತ್ರದಿಂದ ತಡೆದು, ನೀನು ಇನ್ನುಮೇಲೆ ಹೀಗೆ ಹಿಂಸೆಮಾಡದಿರು, ಭಗವನ್ನಾಮವನ್ನು ಜಪಿಸಿ ಉದ್ಧಾರವಾಗು, ಎಂದು ಹೇಳಿ ಭಗವನ್ನಾಮವನ್ನು ಉಪದೇಶಮಾಡಿದನು. ಹಾವು ನಾಮವನ್ನು ಜಪಿಸುತ್ತ ಯಾರು ಹತ್ತಿರ ಬಂದರೂ ಏನೂಮಾಡದೆ ಸಾಧುವಾಗಿ ಹೋಯಿತು. ದನ ಕಾಯುವ ಹುಡುಗರು ಅದನ್ನು ಕಲ್ಲಿಂದ ಹೊಡೆಯುವರು, ಬಾಲ ಹಿಡಿದು ದರದರನೆ ಎಳೆಯುವರು. ಇದು ಏನೂ ಮಾಡುವುದಿಲ್ಲವೆಂಬ ಧೈರ್ಯದಿಂದ ಮನಸ್ಸಿಗೆ ಬಂದಂತೆ ಹಿಂಸೆಪಡಿಸುವರು. ಈ ಕೋಟಲೆಯಿಂದ ಹಾವು ಬಡವಾಗಿ ಸಾಯುವ ಸ್ಥಿತಿಗೆ ಬಂದಿತು. ಆ ವೇಳೆಗೆ ಸಾಧು ಮತ್ತೆ ಆ ದಾರಿಯಲ್ಲಿ ಬಂದನು. ಹಾವು ಬಂದು ಅವನಿಗೆ ನಮಸ್ಕಾರ ಮಾಡಿತು. ಸಾಧುವಿಗೆ ಮೊದಲು ಅದರ ಗುರುತೇ ಸಿಕ್ಕಲಿಲ್ಲ. ಗುರುತು ಸಿಕ್ಕಿದಾಗ, 'ಇದು ಏನು ಇಷ್ಟು ಬಡವಾಗಿದ್ದೀಯೆ,' ಎಂದು ಅವನು ಅದನ್ನು ಕೇಳಿದನು. ಹಾವು ತನಗೆ ಬಂದ ಗತಿಯನ್ನು ಹೇಳಿತು. ಸಾಧು ಅದಕ್ಕೆ, 'ನೀನು ಜನರನ್ನು ಕಚ್ಚಬೇಡ,' ಎಂದು ಹೇಳಿದೆನೇ ಹೊರತು 'ಹೆಡೆ ಎತ್ತಬೇಡ, ಬುಸ್ ಎನ್ನಬೇಡ, ದುಷ್ಟರನ್ನು ಭಯದಲ್ಲಿರಿಸಬೇಡ ಎಂದು ಹೇಳಿದೆನೆ?' ಎಂದನು. ಪ್ರಪಂಚದಲ್ಲಿ ನಡೆಯುವವನು ತಾನು ಕೆಟ್ಟದನ್ನು ಮಾಡಲಾಗದು, ಆದರೆ ತನಗೆ ತೊಂದರೆ ಮಾಡಬರುವವರನ್ನು ಭಯದಲ್ಲಿರಿಸುವುದು ತಪ್ಪಲ್ಲ; ಹಾಗೆ ಇರಿಸಬೇಕು.

ಸಂಸಾರವನ್ನು ಮನುಷ್ಯನಿಗೆ ಒಂದು ಬಂಧನವಾಗಿ ಮಾಡುವುದು ಹೆಣ್ಣು ಹೊನ್ನಿನ ಆಸೆ. ಇದನ್ನು ಪರಮಹಂಸನು ಕಾಮಿನೀ ಕಾಂಚನ ಎಂದು ಹೇಳುತ್ತಿದ್ದನು. ಇವುಗಳಿಗೆ ಮನಸ್ಸನ್ನು ಕೊಡದೆ ಇರುವುದೇ ಉದ್ಧಾರದ ದಾರಿಯೆಂದು ಎಲ್ಲರಿಗೂ ಹೇಳುತ್ತಿದ್ದನು. ಮನುಷ್ಯನಿಗೆ ಹೆಂಡಿರು ಮಕ್ಕಳು ಬೇಕು. ಅವರಿಗಾಗಿ ಧನ ಬೇಕು. ಅದರಿಂದ ಅವನು

ಪ್ರಪಂಚದಲ್ಲಿ ಅಸ್ವತಂತ್ರನಾಗಿ ನಡೆಯಬೇಕಾಗುತ್ತದೆ. ಜಯಪುರದ ದೇವಾಲಯದ ಬ್ರಾಹ್ಮಣಸೇವಕರು ಮೊದಮೊದಲಲ್ಲಿ ಏಕಾಂಗಿಗಳಾಗಿ ಇರುತ್ತಿದ್ದರು. ಆಗ ಅವರು ಯಾರಿಗೂ ತಲೆತಗ್ಗಿಸದೆ ನಡೆದುಕೊಳ್ಳುತ್ತಿದ್ದರು. ರಾಜನು ಹೇಳಿ ಕಳುಹಿಸಿದರೆ ಹೋಗುವುದು ಅವರಿಗೆ ಕಷ್ಟವಾಗಿತ್ತು. ಅವರು ನಾವೇಕೆ ಅಲ್ಲಿಗೆ ಬರಬೇಕು, ದೊರೆಗಳಿಗೆ ಕೆಲಸವಿದ್ದರೆ ಅವರು ಇಲ್ಲಿಗೆ ಬರಲಿ, ಎನ್ನುವರು. ಕೆಲವು ಕಾಲದಮೇಲೆ ರಾಜನು ಅವರಿಗೆ ಮದುವೆ ಮಾಡಿಸಿದನಂತೆ. ಆಮೇಲೆ ಇವರು ಒಬ್ಬರಲ್ಲದಿದ್ದರೆ ಒಬ್ಬರು ಆಗಾಗ ಅವನ ಹತ್ತಿರ ಬರುವುದು ವಾಡಿಕೆಯಾಯಿತು. ಒಬ್ಬನು ದೊರೆಯನ್ನು ಆಶೀರ್ವದಿಸುವುದಕ್ಕೆ, ಒಬ್ಬನು ದೊರೆಗೆ ದೇವರ ಪ್ರಸಾದವನ್ನು ಒಪ್ಪಿಸುವುದಕ್ಕೆ, ಮತ್ತೊಬ್ಬನು ದೇವರ ಮೂರ್ತಿಯ ಮೇಲಣ ಹಾರವನ್ನು ಕೊಡುವುದಕ್ಕೆ. ಜೊತೆಗೆ ತಮ್ಮ ಮನೆಗೆ ಒಂದು ಕೈಸಾಲೆಯನ್ನು ಹಾಕಿಕೊಡಬೇಕು ಎಂದು ಕೇಳುವುದು, ಮಗುವಿಗೆ ನಾಳೆ ಅನ್ನಪ್ರಾಶನ ಮಾಡಬೇಕು ಸ್ವಲ್ಪ ಸಹಾಯಬೇಕು ಎಂದು ಬೇಡುವುದು, ಇಲ್ಲದಿದ್ದರೆ ಇನ್ನೇನೋ ಒಂದು ಬೇಕು ಎಂದು ವಿಜ್ಞಾಪಿಸುವುದು. ಸಂಸಾರದ ಪಾತೇ ಇಷ್ಟು. ಕಲಿಕತೆಯ ವಿದ್ಯಾವಂತರು ಅನೇಕ ಮಂದಿ ಪರದೇಶೀಯರಿಂದ ಎಷ್ಟೋ ಅವಮಾನವನ್ನು ಸಹಿಸಿಕೊಂಡು ಜೀವನವನ್ನು ಸಂಪಾದಿಸುವುದೇ ಇದಕ್ಕೆ ನಿದರ್ಶನ. ಕಾಮಿನಿಯನ್ನು ಕುರಿತ ಮೋಹ ನಾಶಿಯಾಗುವುದು ಹೇಗೆ? ಪ್ರಪಂಚದ ಸುಖದ ಸಾವಿರಮಡಿಯಷ್ಟು ಸೌಖ್ಯದ ಆಕರನಾದ ದೇವರನ್ನು ಆಶಿಸುವುದರಿಂದ. ಮನುಷ್ಯನಲ್ಲಿ ಧೈರ್ಯ ಬುದ್ಧಿ ಹೆಚ್ಚಿದಹಾಗೆ ಈ ಮೋಹ ಕರಗಿಹೋಗುತ್ತದೆ. ಆದರಿಂದ ಬಿಡುಗಡೆಯನ್ನು ಅಪೇಕ್ಷಿಸುವವನು ಹೆಂಗಸರನ್ನೆಲ್ಲ ಲೋಕಮಾತೆಯ ಪ್ರತೀಕಗಳೆಂದು ಕಾಣಬೇಕು. ಹಣದ ಮಾತೂ ಅಷ್ಟೇ. ಬಲ್ಲವನಿಗೆ ಕಾಸು ಎನ್ನುವುದು ಮಣ್ಣಿಗಿಂತ ಹೆಚ್ಚಿನ ವಸ್ತುವಲ್ಲ. ಆದರೆ ತ್ಯಾಗಿಯಾದರೂ ಯಾವಾಗಲೂ ಈ ರೀತಿ ತಿಳಿದು ನಡೆಯುವುದು ಕಷ್ಟ. ಗಂಡಹೆಂಡರಿಬ್ಬರು ಒಂದೇಸಲ ತ್ಯಾಗಿಗಳಾಗಿ ಯಾತ್ರೆ ಹೊರಟರಂತೆ. ದಾರಿಯಲ್ಲಿ ಒಂದು ವಜ್ರದ ತುಂಡು ಬಿದ್ದಿದ್ದಿತು. ಇದನ್ನು ನೋಡಿದರೆ ಹೆಂಡತಿ ಎಲ್ಲಿ ಆಶಿಸುವಳೋ ಎಂದು ಗಂಡನು ಕಾಲಿನಿಂದ ಅದರಮೇಲೆ ಸ್ವಲ್ಪಮಣ್ಣನ್ನು

ಮುಚ್ಚಿದನು. ಹೆಂಡತಿ ಅದು ಏನು ಎಂದು ಕೇಳಿದಳು. ಏನೂ ಇಲ್ಲ ಎಂದು ಅವನು ಮರೆಮಾಚಿದನು. ಅವಳು ಅದನ್ನು ಕಾಲಿನಿಂದ ಕೆದಕಿ ವಜ್ರವೆನ್ನುವುದನ್ನು ನೋಡಿ ಇವನು ತನ್ನ ವಿಷಯದಲ್ಲಿ ಪಟ್ಟ ಶಂಕೆಯನ್ನು ಊಹಿಸಿ, ನೀನು ತ್ಯಾಗಮಾಡುವೆಯೆನ್ನುವುದು ಹೇಗೆ, ಇದು ವಜ್ರ, ಬೆಲೆಯ ವಸ್ತು, ಇದು ಮಣ್ಣು ಬೆಲೆಯಿಲ್ಲದ್ದು ಎಂಬ ಭಾವನೆ ಇನ್ನೂ ನಿನ್ನನ್ನು ಬಿಟ್ಟಿಲ್ಲ, ಎಂದು ಅವನನ್ನು ಮೂದಲಿಸಿದಳು. ನಿಜವಾದ ತ್ಯಾಗದ ಮನೋಧರ್ಮ ಬಹು ಮೇಲಣ ಮಟ್ಟದ್ದು. ಆದರೂ ಎಲ್ಲರೂ ಇಷ್ಟನ್ನು ತಿಳಿಯಬೇಕು: ಧನ ನಮಗೆ ಅನ್ನವನ್ನು ಮಾತ್ರ ಕೊಡಬಲ್ಲದು; ಅದಕ್ಕೆ ಹೆಚ್ಚಿನದು ಯಾವುದನ್ನೂ ಅದು ಕೊಡಲಾರದು; ಯಾರು ಹಣವನ್ನು ಒಬ್ಬ ಸೇವಕನಂತೆ ಉಪಯೋಗಿಸುವರೋ ಅವರೇ ನಿಜವಾಗಿ ಮನುಷ್ಯರು; ತುಂಬ ಹಣವಂತನಾದನೆಂದು ಯಾರೂ ಹೆಮ್ಮೆಪಡಬಾರದು.

ಜ್ಞಾನಮಾರ್ಗ ಭಕ್ತಿಮಾರ್ಗಗಳನ್ನು ಕುರಿತು ಗುರು ಅಮೋಘವಾದ ವಾಕ್ಯಗಳನ್ನು ಹೇಳುತ್ತಿದ್ದನು. ಅದ್ವೈತ ಸಿದ್ಧಿಯಾದಾಗ್ಗೆ ಜ್ಞಾನವೆನ್ನುವ ಮಾತಿಗೆ ಅರ್ಥವಿಲ್ಲ. ಅಲ್ಲಿ ಜ್ಞಾನಿಯೂ ಇಲ್ಲ, ಜ್ಞೇಯವೂ ಇಲ್ಲ. ಆ ಸಿದ್ಧಿಯ ಹೊರತು ಉಳಿದ ಅವಸ್ಥೆಯಲ್ಲಿ ಜ್ಞಾನವೆನ್ನುವುದು ಅಜ್ಞಾನವನ್ನು ನಿವಾರಿಸುವ ವ್ಯಾವಹಾರಿಕ ಜ್ಞಾನ ಮಾತ್ರ. ಕಾಲಿಗೆ ಚುಚ್ಚಿದ ಒಂದು ಮುಳ್ಳನ್ನು ತೆಗೆಯುವುದಕ್ಕೆ ಉಪಯೋಗಿಸುವ ಇನ್ನೊಂದು ಮುಳ್ಳಿನಂತೆ ಈ ವ್ಯಾವಹಾರಿಕ ಜ್ಞಾನವೂ (ಪರಮಾರ್ಥ ದೃಷ್ಟಿಯಿಂದ) ಅನುಪಾದೇಯವೇ. ಆದರೆ ಅದು ಸಿದ್ಧಿಯನ್ನು ಪಡೆಯುವುದಕ್ಕೆ ಅವಶ್ಯವಾದ ಸಾಧನ. ನೇತಿ ನೇತಿ ಎಂದು ಎಲ್ಲವನ್ನೂ ಬಿಟ್ಟು ಬ್ರಹ್ಮವನ್ನು ಮುಟ್ಟುವುದಕ್ಕೆ ಅದು ಸಾಧನವಾಗುತ್ತದೆ. ಶುದ್ಧವಾದ ಈ ಸಂಪೂರ್ಣ ಜ್ಞಾನವನ್ನು ಪಡೆಯುವುದು ಬಹಳ ಕಷ್ಟ. ಭಕ್ತಿ ಇಷ್ಟು ಕಷ್ಟವಲ್ಲ. ಜ್ಞಾನದ ಪರಮಾವಸ್ಥೆಯಲ್ಲಿ ಜೀವವು ದೇವರನ್ನು ಕುರಿತು, 'ಈ ಸೃಷ್ಟಿಯಲ್ಲೆಲ್ಲ ಕರ್ತನು ನೀನೊಬ್ಬನೇ; ನಾನು ನಿನ್ನ ಕೈಯ ಒಂದು ಆಯುಧ ಮಾತ್ರ; ಎಲ್ಲವೂ ನಿನ್ನದು; ನನ್ನದೆನ್ನುವುದು ಇಲ್ಲಿ ಒಂದು ತೃಣವಿಲ್ಲ,' ಎಂದು ಹೇಳುತ್ತದೆ. ಹೀಗೆ ಹೇಳುವ ಮನೋಧರ್ಮವೇ ಭಕ್ತಿ. ಹೀಗೆ ಹೇಳುವವನೇ ಭಕ್ತನು. ಒಂದು ರೀತಿಯಿಂದ ನೋಡಿದರೆ ಜ್ಞಾನವೆನ್ನು

ವುದು ಪುರುಷನಂತೆ; ಅದು ದೇವರ ಅಂತಃಪುರವನ್ನು ಹೊಗಲಾರದು. ಭಕ್ತಿ ಸ್ತ್ರೀಯಂತೆ; ಅದು ಹೋಗಕೂಡದ ಸ್ಥಳವಿಲ್ಲ. ಜ್ಞಾನದ ಮುಖ್ಯ ಧ್ಯೇಯ ನಿರಾಕಾರ ಬ್ರಹ್ಮ. ಭಕ್ತಿಯ ಮುಖ್ಯ ಧ್ಯೇಯ ಸಾಕಾರ ಬ್ರಹ್ಮ. ಆದರೆ ಎರಡರ ಧ್ಯೇಯವೂ ಬ್ರಹ್ಮವೇ. ಒಂದು ಹೆಚ್ಚು ಒಂದು ಕಡಮೆಯಲ್ಲ. ಸಾಕಾರ ಬ್ರಹ್ಮವನ್ನು ಉಪಾಸಿಸಿದವನಿಗೆ ಭಗವಂತನು ತನ್ನ ನಿರಾಕಾರದ ಜ್ಞಾನವನ್ನು ದಯಪಾಲಿಸುವನು. ಭಕ್ತಿಗೆ ದೇವರು ಸೋಲುತ್ತಾನೆ. ಆಂತರಿಕವಾದ ಆಸೆಯಿಂದ ಬೇಡಿದ ಭಕ್ತನಿಗೆ ದೇವರು ಖಂಡಿತವಾಗಿ ಕೈಸೇರುವನು. ಎಷ್ಟು ದೂರದಿಂದಲಾದರೂ ಗಾಳಕ್ಕೆ ಬರುವ ಮೀನಿನಂತೆ ಅವನು ಭಕ್ತಿಯನ್ನು ಆಶಿಸಿ ಬರುವನು. ಭಕ್ತನಾದವನು ದೇವರನ್ನು ಇದನ್ನು ಕೊಡು ಅದನ್ನು ಕೊಡು ಎಂದು ಬೇಡುವುದಿಲ್ಲ. ಒಂದು ರೀತಿಯ ಭಕ್ತಿ ದೇವರಿಗೆ ಏಕೆ ತೊಂದರೆಯನ್ನು ಕೊಡಬೇಕು ಎನ್ನುತ್ತದೆ. ಇನ್ನೊಂದು ರೀತಿಯಲ್ಲಿ ಭಕ್ತಿ ದೇವರಿಗೆ ಸೇವೆ ಮಾಡುವುದೇ ಮುಖ್ಯವೆಂದು ಯೋಚಿಸುತ್ತದೆ. ತನ್ನಿಂದ ದೇವರಿಗೆ ಉಪಯೋಗವಾಗಲೆನ್ನುವುದು ಅದರ ದೃಷ್ಟಿ. ರಾಧೆ ಕೃಷ್ಣನ ವಿಷಯದಲ್ಲಿ ಇಂಥ ಭಕ್ತಿಯನ್ನು ಪಡೆದಿದ್ದಳು. ಭಕ್ತನಿಗೆ ದೇವರು ದೊಡ್ಡವನೆಂದು ತೋರುವುದಕ್ಕಿಂತ ಹೆಚ್ಚಾಗಿ ತನ್ನವನೆಂದು ತೋರುತ್ತಾನೆ. ಬೃಂದಾವನದ ಗೋಪಕನ್ನೆಯರಿಗೆ ಕೃಷ್ಣನು ಮುಖ್ಯವಾಗಿ ಜಗನ್ನಾಥನೆಂದು ಕಾಣಲಿಲ್ಲ; ಗೋಪೀನಾಥನಾಗಿ ಕಂಡನು. ಭಕ್ತನಾದವನು ಭಕ್ತಪದವಿಯನ್ನು ಬ್ರಹ್ಮಪದವಿಗಿಂತ ಹೆಚ್ಚಿನವೆಂದು ಭಾವಿಸುತ್ತಾನೆ.

ಏನೇ ಆದರೂ ಜ್ಞಾನ ಕಷ್ಟದ ದಾರಿ. ನಾನು ಎನ್ನುವುದು ತೀರ ಹೋಗುವವರೆಗೆ ಅದು ಸಿದ್ಧಿಸುವುದಿಲ್ಲ. ದೇಹದಲ್ಲಿರುವವನಿಗೆ ಈ ನಾನು ಎನ್ನುವುದು ತೀರ ಹೋಗುವುದು ಸಾಧ್ಯವಿಲ್ಲ. ದೇಹದ ಅರಿವನ್ನಿಟ್ಟುಕೊಂಡು ಅದ್ವೈತದಲ್ಲಿ ಜ್ಞಾನದಲ್ಲಿ ಸಿದ್ಧಿಹೊಂದಿದೇವೆನ್ನುವವರು ಮಾತಿಗೆ ಮರುಳಾಗಿರುತ್ತಾರೆ. ಇದು ಹೇಗೇ ಇರಲಿ, ಅನೇಕ ಗ್ರಂಥಗಳನ್ನು ಓದಿ ಬಹು ವಿಷಯಗಳನ್ನು ತಿಳಿದು ಅದರಿಂದ ಬಂದ ಪಾಂಡಿತ್ಯವನ್ನು ಜ್ಞಾನವೆಂದು ಹೇಳುವುದು ಶುದ್ಧ ಅಬದ್ಧ. ಜ್ಞಾನವೆನ್ನುವುದು ತಿಳುವಳಿಕೆಯ ಮೂಟೆಯಲ್ಲ. ಗ್ರಂಥ ಬಹು ವೇಳೆ ಗ್ರಂಥಿಯಲ್ಲದೆ ಬೇರೆಯಲ್ಲ. ಶಾಸ್ತ್ರ

ಗಳನ್ನು ಓದಿ, ನಾನು ಬಲ್ಲೆ, ತಾನು ಬಲ್ಲೆ, ಎಂಬ ಮಹನೀಯರು ನಿಜವಾಗಿಯೂ ಏನನ್ನೂ ಬಲ್ಲವರಲ್ಲ. ನೀರು ತುಂಬುತ್ತಿರುವ ಕೊಡ ತುಂಬ ಶಬ್ದ ಮಾಡುವಂತೆ ಇವರು ಕಲಿಯುತ್ತಿರುವ ವೇಳೆಯಲ್ಲಿಯೇ ಕೂಗಾಡುತ್ತಾರೆ. ತುಂಬಿದ ಕೊಡ ಶಬ್ದ ಮಾಡುವುದಿಲ್ಲ; ಸುಮ್ಮನಿರುತ್ತದೆ. ಬೆಣ್ಣೆ ತುಪ್ಪವಾಗುವವರೆಗೆ ಶಬ್ದಮಾಡುತ್ತದೆ; ತುಪ್ಪವಾದ ಒಡನೆ ನಿಶ್ಶಬ್ದವಾಗುತ್ತದೆ. ಇಂಥವರ ಚರ್ಚೆಯನ್ನು ಕೇಳಿದರೆ ಸಾಮಾನ್ಯಜನಕ್ಕೆ ಹಿಂದು ಮುಂದು ತೋರುವುದಿಲ್ಲ. ದೇವರಿಂದ ದೂರವಾಗಿರುವವರಿಗೆ ಈ ಚರ್ಚೆಯು ಗೊಂದಲ, ದೂರದಿಂದ ಕೇಳಿಬರುವ ಸಂತೆಯ ಗದ್ದಲದಂತೆ, ಸದ್ದಿನ ಹೊದರಾಗಿರುತ್ತದೆ. ಸಂತೆಯ ಒಳಹೊಕ್ಕವನಿಗೆ ಅವಶ್ಯಕವಾದ ಮಾತು ಕಿವಿಗೆ ಸ್ಪಷ್ಟವಾಗಿ ಬೀಳುವಂತೆ ದೇವರನ್ನು ಸಮೀಪಿಸಿದವನಿಗೆ ಅವನನ್ನು ಕುರಿತ ತತ್ತ್ವ ತಾನೇ ಸ್ಪಷ್ಟವಾಗುತ್ತದೆ. ದೇವರನ್ನು ಕಂಡವನು ಆ ವಿಷಯ ಹೇಳುತ್ತ ಕೂಗಾಡುವುದಿಲ್ಲ. ದುಂಬಿ ಹೂವಿನ ಸುತ್ತ ಸುತ್ತುವವರೆಗೂ ಕೂಗುತ್ತಿರುತ್ತದೆ; ಹೂವಿನಲ್ಲಿ ಕುಳಿತೊಡನೆ ಮಧುಪಾನದ ಸುಖದಲ್ಲಿ ನಿಲ್ಲುತ್ತದೆ, ನಿಶ್ಶಬ್ದವಾಗುತ್ತದೆ. ಔತಣದ ಪಂಕ್ತಿಯಲ್ಲಿ ಊಟ ಮೊದಲಾಗುವವರೆಗೆ ಮಾತಿನ ಗಲಭೆ ಹೆಚ್ಚು; ಊಟ ಮೊದಲಾದರೆ ಅದು ಕಡಮೆಯಾಗುತ್ತದೆ; ಲಾಡು ಬರುವ ವೇಳೆಗೆ ಯಾರಿಗೂ ಮಾತಿನಕಡೆ ಮನಸ್ಸೇ ಇರುವುದಿಲ್ಲ. ವಾದವೆನ್ನುವುದು ಶುಷ್ಕ, ವ್ಯರ್ಥ. ಅದು ಏನಾದರೂ ಸರಿಯೆ, ಜ್ಞಾನವಂತೂ ಅಲ್ಲ.

ನಿಜವಾದ ಜ್ಞಾನ ಬಿಡುಗಡೆಗೆ ಸಾಧನವಾಗಬೇಕು. ಇದನ್ನು ವಿವರಿಸುವುದಕ್ಕೆ ಗುರು ಒಂದು ಕಥೆಯನ್ನು ಹೇಳುತ್ತಿದ್ದನು. ಭಾಗವತವನ್ನು ಚೆನ್ನಾಗಿ ಪಾಠಮಾಡಿದ್ದ ಬ್ರಾಹ್ಮಣನೊಬ್ಬನು ಒಬ್ಬ ರಾಜನ ಬಳಿಗೆ ಹೋಗಿ, 'ನಾನು ಭಾಗವತವನ್ನು ಸಂಪೂರ್ಣವಾಗಿ ಪಾಠಮಾಡಿದ್ದೇನೆ. ನಿನಗೆ ಅದನ್ನು ಶ್ರವಣಮಾಡಿಸಬೇಕೆಂದು ನನಗೆ ಅಪೇಕ್ಷೆ,' ಎಂದನು. ಭಾಗವತವನ್ನು ಚೆನ್ನಾಗಿ ಓದಿದವನು ಇನ್ನೊಬ್ಬನಿಗೆ ಉಪದೇಶಮಾಡುವುದಕ್ಕೆ ಬರುವುದಕ್ಕಿಂತ ಹೆಚ್ಚಾಗಿ ತಾನು ಉದ್ಧಾರವಾಗುವ ದಾರಿಯನ್ನು ನೋಡುವನೆಂದು ರಾಜನ ನಂಬಿಕೆ. ಅವನು ಆ ಬ್ರಾಹ್ಮಣನನ್ನು ಕುರಿತು, 'ಭಾಗವತದಲ್ಲಿ ನೀನು ತಿಳಿದುಕೊಳ್ಳದ ಭಾಗ ಸ್ವಲ್ಪ ಇದೆ, ಅದನ್ನೂ ಕಲಿತು

ಕೊಂಡು ಬಾ,' ಎಂದು ಹೇಳಿದನು. ಭಾಗವತದಲ್ಲಿ ತನಗೆ ತಿಳಿಯದ ಭಾಗ ಇದೆ ಎಂದು ಬ್ರಾಹ್ಮಣನಿಗೆ ತೋರಲಿಲ್ಲ. ಆದರೂ ರಾಜನು ಹೇಳಿದನಲ್ಲಾ ಎಂದು ಅವನು ತನ್ನ ಸ್ಥಳಕ್ಕೆ ಹೋಗಿ ಮತ್ತೆ ಅದನ್ನು ಸಂಪೂರ್ಣವಾಗಿ ಪಾಠಮಾಡಿ ಮರಳಿ ರಾಜನ ಬಳಿಗೆ ಬಂದನು. ರಾಜನು ಅವನಿಗೆ ಪುನಃ ಹಿಂದಿನಂತೆಯೇ ಹೇಳಿದನು. ಬ್ರಾಹ್ಮಣನಿಗೆ ಆಶ್ಚರ್ಯವೂ ಬೇಸರವೂ ಆಯಿತು. ಬೇರೆ ಏನು ಮಾಡುವುದೆಂದು ತೋರದೆ ಅವನು ಮತ್ತೆ ಅವನ ಸ್ಥಳಕ್ಕೆ ಹೋದನು; ಗ್ರಂಥವನ್ನು ಮತ್ತೊಮ್ಮೆ ಸಾವಧಾನವಾಗಿ ನೋಡುತ್ತ ಕುಳಿತನು. ಹಿಂದೆ ಅವನಿಗೆ ಶ್ಲೋಕಗಳ ಅರ್ಥ ಅಷ್ಟೆ ತಿಳಿದಿತ್ತು: ಈಗ ಗ್ರಂಥದ ಉದ್ದೇಶವೇನೆಂದು ಹೊಳೆಯಿತು. ಇದು ಹೊಳೆದಮೇಲೆ ಅವನಿಗೆ ರಾಜನಬಳಿಗೆ ಹೋಗಬೇಕೆಂದು ಅಪೇಕ್ಷೆ ಹುಟ್ಟಲಿಲ್ಲ; ಅವನು ಆತ್ಮ ಸಾಧನೆಯಲ್ಲಿ ಕುಳಿತನು. ಬಹುದಿವಸದವರೆಗೆ ಅವನು ಮರಳಿ ಬರದೆ ಇರಲು ರಾಜನು ಅವನಿರುವ ಸ್ಥಳಕ್ಕೆ ಹೋದನು. ಅಷ್ಟು ದಿನದ ಧ್ಯಾನ ದಿಂದಲೂ ತತ್ತ್ವದ ಮನನದಿಂದಲೂ ಬ್ರಾಹ್ಮಣನು ತುಂಬ ವರ್ಚಸ್ವಿಯಾಗಿ ದ್ದನು. ದೊರೆಗೆ ಅವನಲ್ಲಿ ಭಕ್ತಿ ಹುಟ್ಟಿತು. ಅವನು ಬಂದು ಆ ಬ್ರಾಹ್ಮಣ ನಿಗೆ ಪ್ರಣಾಮಮಾಡಿ, 'ಈಗ ನೀವು ನನ್ನಂಥ ಒಬ್ಬ ಪಾಮರನನ್ನು ಒಬ್ಬ ಶಿಷ್ಯನೆಂದು ಸ್ವೀಕರಿಸಿ ಗ್ರಂಥವನ್ನು ಪಾಠ ಹೇಳುವುದಾದರೆ ಉಪದೇಶಪಡೆಯಲು ನಾನು ಸಿದ್ಧನಾಗಿದ್ದೇನೆ,' ಎಂದನು. ಎಲ್ಲ ಶ್ರುತಿ ಸ್ಮೃತಿಗಳ ಉದ್ದೇಶ ಇದು. ಅವುಗಳನ್ನು ಪಾಠಮಾಡಿದವನು ಅಲ್ಪ ಕಾಮನೆಗಳಿಂದ ಬಿಡಿಸಿಕೊಳ್ಳಬೇಕು; ಆತ್ಮಸಾಧನವೆಂಬ ದೊಡ್ಡ ಕಾರ್ಯಕ್ಕೆ ಮನಸ್ಸನ್ನು ಕೊಡಬೇಕು.

ಮನುಷ್ಯನಾಗಿ ಹುಟ್ಟಿ ದೇವರನ್ನು ಕಾಣದೆ ಇದ್ದರೆ ಜನ್ಮ ವ್ಯರ್ಥ. ದೇವರನ್ನು ಕಾಣುವುದಕ್ಕೆ ಎಲ್ಲಿಯೋ ಹೋಗಬೇಕಾದದಿಲ್ಲ. ಒಬ್ಬನು ಅರ್ಧರಾತ್ರಿಯಲ್ಲಿ ಗುಡಿಗುಡಿ ಸೇದಬೇಕೆಂದು ಆಸೆಯಾಗಿ ಲಾಂದ್ರ ಹಿಡಿದು ಕೊಂಡು ಹೋಗಿ ಪಕ್ಕದ ಮನೆಯವರನ್ನು ಎಬ್ಬಿಸಿ ಸ್ವಲ್ಪ ಕೆಂಡ ಕೊಡಿ ಎಂದು ಕೇಳಿದನಂತೆ. ಕೈಯಲ್ಲಿ ಲಾಂದ್ರ ಹಿಡಿದಿದ್ದೀಯೆ, ಕೆಂಡಮಾಡಿ ಕೊಳ್ಳಲಾಗದೆ, ಎಂದು ಅವರು ನಕ್ಕರಂತೆ. ಮನುಷ್ಯನು ದೇವರನ್ನು ಹುಡುಕುತ್ತ ಹೋಗುವುದು ಇದರಂತೆಯೇ. ಅವನು ಹತ್ತಿರವೇ ಇದ್ದಾನೆ;

ಅವನನ್ನು ಒದಗಿಸಿಕೊಳ್ಳಬೇಕು. ಮನುಷ್ಯನು ಚಿಕ್ಕಂದಿನಲ್ಲಿಯೇ ಈ ಗುರಿಯನ್ನಿಟ್ಟುಕೊಂಡು ನಡೆಯಬೇಕು. ಜೀವನವನ್ನೆಲ್ಲ ಸಂಸಾರಕ್ಕೆ ಕೊಟ್ಟು ಕೊನೆಕೊನೆಗೆ ದೇವರನ್ನು ನೆನೆಯುವೆನೆನ್ನುವುದು ವಿವೇಚನೆಯ ಮಾತಲ್ಲ. ಎಷ್ಟು ಒಳ್ಳೆಯ ಹಣ್ಣಾದರೂ ಕಾಗೆ ಕೊತ್ತಿದಮೇಲೆ ದೇವರಿಗೆ ಸಲ್ಲದು. ಮರವನ್ನು ಎಳೆಯದರಲ್ಲಿ ಬಗ್ಗಿಸಬಹುದು. ಗಿಳಿ ಮರಿಯಾಗಿರುವಾಗ ರಾಮ ಎನ್ನುವುದನ್ನು ಕಲಿಸಬಹುದು. ದಿನ ಕಳೆದರೆ ಗಿಡವೂ, ಕಂಠವೂ ಬಲಿತುಹೋಗುತ್ತವೆ. ಅದು ಬಾಗುವುದಿಲ್ಲ; ಇದು ನುಡಿಯುವುದಿಲ್ಲ. ಒಳ್ಳೆಯ ಸಂಸ್ಕಾರವನ್ನು ಸಾಧಿಸಬೇಕೆನ್ನುವವರು ಬೇಗನೆ ಆರಂಭಿಸಬೇಕು. ಸಮುದ್ರದ ಆಳದಿಂದ ಮುತ್ತನ್ನು ತೆಗೆಯುವುದಕ್ಕೆ ಮತ್ತೆ ಮತ್ತೆ ಮುಳುಗಿ ಒಳಕ್ಕೆ ಹೋಗುವಂತೆ ದೇವರನ್ನು ಕಾಣುವುದಕ್ಕೂ ಮತ್ತೆ ಮತ್ತೆ ಯತ್ನಮಾಡಬೇಕು. ತಾನು ಸುಮ್ಮನೆ ಕುಳಿತವನು ಗುರುವನ್ನು ಕುರಿತು ನನಗೆ ದೇವರನ್ನು ತೋರಿಸು ಎಂದು ಕೇಳಿದರೆ ಆಗುವುದಿಲ್ಲ. ರಾಜನನ್ನು ನೋಡುವುದಕ್ಕೆ ಹೋಗುವವನು ಅವನ ಏಳು ಬಾಗಿಲನ್ನು ದಾಟಿ ಅವನನ್ನು ಕಾಣಬೇಕು. ಹೆಬ್ಬಾಗಿಲನ್ನು ಹೊಕ್ಕ ಒಡನೆಯೇ ದೊರೆ ಎಲ್ಲಿ ಕಾಣಲಿಲ್ಲ ಎನ್ನುವುದು ಬುದ್ಧಿಯಲ್ಲ. ದೇವರು ದೇವರು ಎಂದು ಬಾಯಲ್ಲಿ ಹೇಳಿದರೂ ಸಾಲದು. ಕತ್ತಲಲ್ಲಿ ಕುಳಿತು ದೀಪ ದೀಪ ಎಂದರೆ ಬೆಳಕಾಗುವುದಿಲ್ಲ; ದೀಪವನ್ನು ಹಚ್ಚಬೇಕು. ಬರಿಯ ಕೈಯಲ್ಲಿ ಗುಡಿಗುಡಿ ಗುಡಿಗುಡಿ ಎಂದರೆ ಗುಡಿಗುಡಿಯ ಅಮಲು ಏರುವುದಿಲ್ಲ; ಭಂಗಿಯ ಸೊಪ್ಪನ್ನು ತೀಡಿ ಕೆಂಡದಲ್ಲಿ ಹಾಕಿ ಸೇದಬೇಕು. ಶಾಸ್ತ್ರವನ್ನು ತಿಳಿಯುವುದರಿಂದ ದೇವರು ಕೈಸೇರುವುದಿಲ್ಲ. ಪಂಚಾಂಗದಲ್ಲಿ ಎಲ್ಲ ಮಳೆಗಳ ಮಾತನ್ನೂ ಹಾಕಿರುತ್ತದೆ. ಆದರೆ ಅದನ್ನೆಲ್ಲ ಹಿಡಿದು ಹಿಂಡಿದರೂ ಒಂದು ತೊಟ್ಟು ನೀರೂ ಬೀಳುವುದಿಲ್ಲ. ತುಂಬ ಓದಿ ಉನ್ನತಿಯನ್ನೈದಿ ಅಲ್ಪ ವಿಷಯಗಳಲ್ಲಿ ಕಣ್ಣಿಟ್ಟಿರುವವರು ಖೇಚರದಲ್ಲಿ ಹಾರುತ್ತ ನೆಲದಮೇಲೆ ಸತ್ತ ಇಲಿ ಬಿದ್ದಿದೆಯೇ ಎಂದು ನೋಡುವ ಹದ್ದಿಗಿಂತ ಶ್ರೇಷ್ಠರಲ್ಲ. ಹಾಗಾದರೆ ದೇವರನ್ನು ಕಾಣುವುದಕ್ಕೆ ಏನುಮಾಡಬೇಕು? ದೇಹ, ಮನಸ್ಸು, ಐಶ್ವರ್ಯ, ಎಲ್ಲವನ್ನೂ ಅವನಿಗೆ ಅರ್ಪಿಸಬೇಕು. ಈ ಬಗ್ಗೆ ಕಾರ್ಯಕ್ರಮ ಏನು? ಯಾವುದನ್ನು ಮಾಡುತ್ತಿದೀಯೋ, ಅದೇ ಕಾರ್ಯ. ಅದರಮೇಲೆ

ಅವನ ಕೃಪೆ ಒದಗಬೇಕು. ನಿಜವಾಗಿ ದೇವರು ಬೇಕೆಂದು ಅಪೇಕ್ಷಿಸಿದವನಿಗೆ ಅವನು ಸಿಕ್ಕದೆ ಇರುವುದಿಲ್ಲ. ಸೇವಕನ ಮನೆಗೆ ಬರುವ ರಾಜನು ತಾನು ಬರುವ ಮೊದಲು ತನಗೆ ಬೇಕಾಗುವ ಸಾಮಗ್ರಿಯನ್ನೆಲ್ಲ ಕಳುಹಿಸಿಕೊಡುವಂತೆ, ದೇವರು ನಿನ್ನ ಹೃದಯದಲ್ಲಿ ಕಾಣುವ ಮೊದಲು ಅದರಲ್ಲಿ ವಿವೇಕವನ್ನೂ ವೈರಾಗ್ಯವನ್ನೂ ಸಮಸ್ತ ಚೇತನವನ್ನೂ ಕುರಿತು ಕನಿಕರವನ್ನೂ ಇತರ ಸದ್ಗುಣಗಳನ್ನೂ ಉಂಟುಮಾಡುತ್ತಾನೆ. ಮನುಷ್ಯನು ಉತ್ತೀರ್ಣನಾಗುವುದಕ್ಕೆ ಈ ಗುಣಗಳು ಚಿಹ್ನೆ. ಉದ್ಧಾರವಾಗಬೇಕೆಂಬ ಮನುಷ್ಯನು ಏಕಾಗ್ರಬುದ್ಧಿಯಿಂದ ಯತ್ನಮಾಡಬೇಕು. ಮನಸ್ಸು ಅತ್ತ ಇತ್ತ ಚಲಿಸುತ್ತಿದ್ದರೆ ದೇವರನ್ನು ಸಾಧಿಸುವುದು ಕಷ್ಟ. ಸೂಜಿಯ ಕಣ್ಣಿನಲ್ಲಿ ಹೊಗಬೇಕಾದರೆ ದಾರ ಒಂದು ಮೊನೆಯಾಗಿರಬೇಕು. ದಾರದ ಕೊನೆ ನಾಲ್ಕಾಗಿ ಎಳೆಬಿಟ್ಟುಕೊಂಡಿದ್ದರೆ ಅದು ಸೂಜಿಯ ಕಣ್ಣಿನಲ್ಲಿ ತೂರುವುದಿಲ್ಲ. 'ಹಾಗಾದರೆ ಈ ಅಲೆಯುವ ಮನಸ್ಸನ್ನು ದೇವರ ಪಾದದಲ್ಲಿ ನಿಲ್ಲಿಸುವುದಕ್ಕೆ ಏನುಮಾಡಬೇಕು' ಎಂದೊಬ್ಬರು ಕೇಳಲು, ಪರಮಹಂಸನು 'ನಿನ್ನ ಮನಸ್ಸನ್ನು ದೇವರ ಪಾದಕ್ಕೆ ಒಂದು ದಾರದಿಂದ ಕಟ್ಟಿಹಾಕು' ಎಂದು ಹೇಳಿ ಒಡನೆ 'ಆ ದಾರಮಾತ್ರ ಮೃದುವಾದ ರೇಶಿಮೆಯದಾಗಲಿ. ಇಲ್ಲದಿದ್ದರೆ ಅವನ ಕೋಮಲವಾದ ಪಾದಕ್ಕೆ ನೋವಾದೀತು,' ಎಂದನಂತೆ.

ವಿವೇಕವೈರಾಗ್ಯಗಳು ದೈವ ಸಾಕ್ಷಾತ್ಕಾರಕ್ಕೆ ಮೊದಲು ಅವಶ್ಯಕವೆಂದು ಹೇಳಿದೆ. ಆಸೆಗಳೂ ಚಪಲಗಳೂ ಹೋಗುವುದಕ್ಕಾಗಿ ಇವು ಅವಶ್ಯಕ. ಆಸೆ ಚಪಲಗಳನ್ನು ಬಿಡದೆ ದೇವರು ದೇವರು ಎಂದರೆ ಹಾಳು ದೇಗುಲದಲ್ಲಿ ಕಸ ಬಳಿಯದೆ ದೀಪ ಹಚ್ಚದೆ ಗಂಟೆಬಾರಿಸಿದಂತೆ. ದೇವರು ಎನ್ನುತ್ತ ಗಂಟೆ ಬಾರಿಸುವುದು ದೊಡ್ಡ ಮಾತಲ್ಲ. ದೇಹದ ದೇವಾಲಯವನ್ನು ಸರಿಪಡಿಸಬೇಕು; ಕಶ್ಮಲಭಾವಗಳನ್ನು ಮನಸ್ಸಿನಿಂದ ಗುಡಿಸಿ ಎಸೆಯಬೇಕು; ಹೃದಯದಲ್ಲಿ ಭಕ್ತಿಜ್ಞಾನಗಳ ನಂದಾದೀಪವನ್ನು ಹಚ್ಚಿಡಬೇಕು. ಆಮೇಲೆ ದೇವರನ್ನು ಪ್ರತಿಷ್ಠೆಮಾಡಬೇಕು. ಇಷ್ಟೆಲ್ಲ ಆದಮೇಲೆ ಗಂಟೆ ಬಾರಿಸಬಹುದು. ಮನುಷ್ಯನು ತನ್ನ ಆಸೆ ಚಪಲವನ್ನು ಇನ್ನೊಬ್ಬರ ಮೇಲೆ ಹಾಕುವುದುಂಟು. ತಾಯಿಗಾಗಿ ಹೆಂಡತಿಗಾಗಿ ಮಕ್ಕಳಿಗಾಗಿ

ಸಂಸಾರದಲ್ಲಿದ್ದೇವೆನ್ನುವವರು ಆ ತಾಯಿ ಹೆಂಡತಿ ಮಕ್ಕಳಿಗಾಗಿ ಏನನ್ನು ಮಾಡುವುದು ಅವಶ್ಯಕ, ಏನನ್ನು ಮಾಡುವುದು ಅನಾವಶ್ಯಕ, ಎಂದು ಯೋಚಿಸಬೇಕು. ಯಾರೊಬ್ಬರ ಸಲುವಾಗಿ ಆಗಲಿ ಮನುಷ್ಯನು ತನ್ನ ಆತ್ಮವನ್ನು ಕಳೆದುಕೊಳ್ಳಲಾಗದು. ತನ್ನ ದೇಹದ ಮೋಹಕ್ಕೆ ಸಿಕ್ಕಿದವನು ಈ ದೇಹದ ಯೋಗ್ಯತೆಯೇನು, ಇದರಿಂದ ಪಡೆಯುವ ಸುಖದ ಬೆಲೆ ಎಷ್ಟು, ಎನ್ನುವುದನ್ನು ನಿರ್ಧರಿಸಿಕೊಳ್ಳಬೇಕು. ದೇಹವು ದೇವರು ಪ್ರಕಟವಾಗಿರುವ ಒಂದು ಮಂದಿರ ಎಂಬ ಕಾರಣದಿಂದ ಗಮನಕ್ಕೆ ಅರ್ಹವಾದ ವಸ್ತು. ಆ ದೃಷ್ಟಿಯಿಂದ ನೋಡದಿದ್ದರೆ ಅದು ಬರಿಯ ಒಂದಷ್ಟು ಮೂಳೆ ಮಾಂಸ ರಕ್ತ ಚರ್ಮದಿಂದ ಮಾಡಿರುವ ತಡಿಕೆ, ಉಸಿರು ಹೋದೊಡನೆ ಎಸೆಯುವ ಕಸ. ನಿಜವಾದ ಸುಖ ಯಾವುದೆಂದು ತಿಳಿದವನಿಗೆ ದೇಹದ ಸುಖ, ಸಂಸಾರದ ಸುಖ, ಬೇಸರವನ್ನುಂಟುಮಾಡುತ್ತವೆ. ರಾಜನು ಒಲಿದ ಹೆಣ್ಣು ಭಿಕ್ಷುಕನ ಪ್ರಣಯಕ್ಕೆ ಮನಸ್ಸನ್ನು ಕೊಡುವಳೇ?

ಮುಡಿವ್ಯೈಲಿಗೆ, ಜಪಕೀರ್ತನ, ಪೂಜೆ ಪುರಸ್ಕಾರಗಳನ್ನು ಕುರಿತೂ ಪರಮಹಂಸನು ತತ್ವಗಳನ್ನು ಉಪದೇಶಿಸಿದನು. ದೇವರ ಪ್ರಾರ್ಥನೆ ಮಾಡುವುದು ಹೇಗೆ? ನಿನಗೆ ಹೇಗೆ ತೋರಿದರೆ ಹಾಗೆ ಮಾಡು. ನೀನು ಅವನ್ನು ಎಷ್ಟು ಮೆಲ್ಲನೆ ಮಾಡಿದರೂ ಖಂಡಿತವಾಗಿ ಅದು ಅವನಿಗೆ ತಿಳಿದಿರುತ್ತದೆ. ಇರುವೆಯ ಹೆಜ್ಜೆಯ ಸದ್ದು ಅವನ ಕಿವಿಗೆ ಕೇಳಿಸುತ್ತದೆ. ದೇವರಿಗೆ ಪ್ರಾರ್ಥನೆಮಾಡಿ ಪ್ರಯೋಜನವುಂಟೇ? ಮನಃಪೂರ್ವಕವಾಗಿ ಪ್ರಾರ್ಥನೆ ಮಾಡಿದರೆ ಪ್ರಯೋಜನವುಂಟು. ಬಾಯಿ ಮಾತ್ರದಿಂದ ಮಾಡಿದ ಪ್ರಾರ್ಥನೆ ಫಲಿಸುವುದಿಲ್ಲ. ಇದು ಎಲ್ಲ ನಿನ್ನದು ಎಂದು ಬಾಯಲ್ಲಿ ಹೇಳುತ್ತ ಮನಸ್ಸಿನಲ್ಲಿ ನನ್ನದು ಎಂದೇ ಭಾವಿಸಿರುವವನು ಪ್ರಾರ್ಥಿಸುವುದು ಹೇಗೆ? ಹಾಗೆಯೇ ದೇವರ ವಿಷಯದಲ್ಲಿ ಉತ್ಸಾಹದಿಂದ ನಡೆದುಕೊಂಡರೆ ಜನರಿಗೆ ಅದು ಹೇಗೆ ಕಾಣುತ್ತದೋ ಎಂದು ಸಂಕೋಚಪಡುವವನು ಉದ್ಧಾರವಾಗಲಾರನು. ದೇವರನ್ನು ಕುರಿತ ನಂಬಿಕೆಯೂ ನಿಜವಾಗಬೇಕು. ಅರ್ಚಕನೊಬ್ಬನು ಪರಸ್ಥಳಕ್ಕೆ ಹೋಗಬೇಕಾದರೆ ದೇವರಿಗೆ ನೈವೇದ್ಯವನ್ನು ಒಪ್ಪಿಸುವುದಕ್ಕೆ ಮಗನನ್ನು ನೇಮಿಸಿಹೋದನು. ಹುಡುಗನು ದೇವರು ನೈವೇದ್ಯವನ್ನು ಊಟಮಾಡುತ್ತಾನೆಂದೇ ತಿಳಿದಿದ್ದನು. ನೈವೇದ್ಯವನ್ನು

ಎದುರಿಗಿಟ್ಟಾಗ ದೇವರು ಊಟಮಾಡದೆ ಇರಲು 'ದೇವರೇ ಊಟಮಾಡು' ಎಂದು ಬೇಡಿಕೊಂಡನು. ಆಗಲೂ ಏನೂ ಆಗದಿರಲು 'ನಾನು ಏನು ತಪ್ಪು ಮಾಡಿದೆ, ಏಕೆ ನೀನು ಊಟಮಾಡಲಿಲ್ಲ' ಎಂದು ದುಃಖಿಸುತ್ತ ಬಿಕ್ಕಿಬಿಕ್ಕಿ ಅತ್ತನು. ಮೂರ್ತಿ ನೈವೇದ್ಯವನ್ನು ನಿಜವಾಗಿ ಸ್ವೀಕರಿಸಿತು. ಇವನು ಹೊರಗೆ ಬಂದಾಗ ಇತರರು ನೈವೇದ್ಯ ಏನಾಯಿತೋ ಎಂದು ಕೇಳಿದರು. ದೇವರು ಊಟಮಾಡಿದನೆಂದರೆ ನಂಬಲಿಲ್ಲ; ಮತ್ತೆ ಇವನು ನೈವೇದ್ಯವನ್ನು ಒಪ್ಪಿಸಿದಾಗ ಏನಾಗುತ್ತದೆ ಎನ್ನುವುದನ್ನು ನೋಡಿ ಆಶ್ಚರ್ಯಪಟ್ಟರು. ಮಾತಿಗೆ ಮುಂಚೆ ಜನರು ದೇವರ ಅನುಗ್ರಹ ಇದ್ದರಲ್ಲವೆ ಇದು ಅದು ಆಗುವುದು ಎಂದು ಹೇಳುತ್ತಾರೆ. ದೇವರ ಅನುಗ್ರಹ ಇಲ್ಲದ ಹೊತ್ತಿಲ್ಲ, ಇಲ್ಲದ ಸ್ಥಳವಿಲ್ಲ, ನಾವು ಅದನ್ನು ಉಪಯೋಗಿಸಿಕೊಳ್ಳಬೇಕು ಅಷ್ಟೆ. ನಾನು ಪಾಪಿ, ನನ್ನನ್ನು ದೇವರು ಹೇಗೆ ಸ್ವೀಕರಿಸುವನು, ಎಂದು ಯಾರೂ ಚಿಂತಿಸಬೇಕಾದದಿಲ್ಲ. ಮೀನುಗಳಲ್ಲಿ ಮೂಳೆಯಿಲ್ಲದ ಜಾತಿಯಿದೆ, ತುಂಬ ಮೂಳೆಯಿರುವ ಜಾತಿಯಿದೆ. ಮೀನು ತಿನ್ನುವವನು ಎರಡನ್ನೂ ತಿನ್ನುತ್ತಾನೆ. ಮೂಳೆಯಿರುವ ಮೀನನ್ನು ತಿನ್ನುವಾಗ ತನಗೆ ಬೇಕಾದದನ್ನು ತಿಂದು ಮೂಳೆಯನ್ನು ಉಗಿಯುತ್ತಾನೆ. ನಿನ್ನ ಪಾಪ ಬಹಳ ಇದ್ದರೆ ದೇವರು ಅದನ್ನು ಉಗಿಯಬಲ್ಲನು. ಪಾಪಿಯೆಂದು ಭಾವಿಸಿಕೊಂಡ ಮನುಷ್ಯನು, 'ದೇವ, ಮಾಡಬೇಕಾದುದನ್ನು ಬಿಟ್ಟಾಯಿತು; ಮಾಡಬಾರದ್ದನ್ನು ಮಾಡಿ ಆಯಿತು. ತಪ್ಪನ್ನು ಮನ್ನಿಸಿ ಉದ್ಧಾರಮಾಡು,' ಎಂದು ಒಂದುಸಲ ನಿಶ್ಚಯವಾಗಿ ಅವನಲ್ಲಿ ತಪ್ಪನ್ನು ಒಪ್ಪಿಕೊಂಡರೆ ಅವನು ಮನ್ನಿಸಿ ಕಾಯುವನು. ಎಲ್ಲ ಪಾಪಕ್ಕೆ ನಿವಾರಣೆ ದೇವರ ಹೆಸರನ್ನು ಒಂದು ಸಲ ಉಚ್ಚರಿಸುವುದರಲ್ಲಿದೆ. ಭಕ್ತಿಯಿಂದ ಒಂದು ಸಲ ಉಚ್ಚರಿಸಿದರೆ ಸಾಕು; ನೂರು ಸಲ ಮೂರು ಸಲ ಉಚ್ಚರಿಸುವುದು ಬೇಕಿಲ್ಲ. ಸಕಲ ಶಾಸ್ತ್ರ ಪುರಾಣಕ್ಕೆ ಸಮ ದೇವರ ಹೆಸರುಗಳಲ್ಲಿ ಒಂದು ಹೆಸರು. ದಕ್ಷಿಣೇಶ್ವರಕ್ಕೆ ಒಂದು ಸಲ ಒಬ್ಬ ಮಹಾತ್ಮನು ಬಂದಿದ್ದನು. ಅವನ ಹತ್ತಿರ ದೊಡ್ಡದೊಂದು ಗ್ರಂಥವಿತ್ತು. ಅವನು ಸದಾಕಾಲವೂ ಒಂದು ಕಡೆ ಕುಳಿತು ಓದುತ್ತಿರುವನು. ಸರ್ವದಾ ಇವನು ಓದುತ್ತಿರುವ ಈ ಗ್ರಂಥದಲ್ಲಿ ಏನಿದೆ ಎಂದು ಅದನ್ನು ತೆರೆದು ನೋಡುವಲ್ಲಿ, ಅದರಲ್ಲಿ ರಾಮ ರಾಮ

ರಾಮ ಎಂದು ರಾಮನಾಮ ತುಂಬಿದ್ದಿತು. ಮೊದಲೂ ರಾಮ, ಮಧ್ಯವೂ ರಾಮ, ಕೊನೆಯೂ ರಾಮ. ರಾಮನಲ್ಲದೆ ಅದರಲ್ಲಿ ಬೇರೆ ಒಂದು ಮಾತಿರಲಿಲ್ಲ.

ಮಡಿಯೇನು, ಮೈಲಿಗೆ ಏನು, ಜನಿವಾರವನ್ನು ಇಟ್ಟುಕೊಂಡು ಆಗಬೇಕಾದದೇನು, ಅನ್ನ ಆಹಾರಗಳಲ್ಲಿ ನಿಯಮವೇಕೆ ಇರಬೇಕು, ಜಾತಿ ಗೋತ್ರಗಳ ಭೇದವೇತಕ್ಕೆ, ಎಲ್ಲ ಕಡೆಯೂ ದೇವರಿರುವಲ್ಲಿ ಯಾತ್ರೆ ತೀರ್ಥಕ್ಕೆ ಹೋಗಬೇಕಾದದು ಏನು, ಎನ್ನುವುದು ಬೇಡ. ಮಡಿಯಾಗಿ ಇರಬೇಕು, ಜನಿವಾರವನ್ನು ತೊರೆಯಲಾಗದು, ಆಹಾರದಲ್ಲಿ ನಿಯಮ ಬೇಕು, ಜಾತಿಯನ್ನು ಬಿಡಕೂಡದು, ಯಾತ್ರೆ ಹೋಗುವುದು ಅವಶ್ಯಕ ಎಂದೂ ಹೇಳಬಾರದು. ಎಲ್ಲಕ್ಕೂ ಮನಸ್ಸು ಮುಖ್ಯ. ಮೈಲಿಗೆ, ಸಂಸ್ಕಾರ, ನೇಮ, ಕುಲ, ಯಾತ್ರೆ, ಎಲ್ಲವೂ ಮನಸ್ಸಿನಲ್ಲಿದೆ. ಅದು ಪರಿ ಪಾಕಕ್ಕೆ ಬಂದಾಗ್ಗೆ ನೇಮನಿಷ್ಠೆಗಳು ಹಣ್ಣಾದ ಎಲೆಯಂತೆ ತಾವಾಗಿ ಉದುರಿಹೋಗುವುವು. ಆರಂಭದದೆಸೆಯಲ್ಲಿ ಮಡಿಯಾಗಿರುವುದು ಒಳ್ಳೆಯದು. ಜನಿವಾರವನ್ನಿಟ್ಟುಕೊಳ್ಳುವುದೂ ಒಳ್ಳೆಯದು. ಸಿಕ್ಕಿದಕಡೆ ಸಿಕ್ಕಿದ ತಿಂಡಿಯನ್ನು ತಿನ್ನದೆ ಇರುವುದೂ ಒಳ್ಳೆಯದು. ಯಾತ್ರೆ ಹೋಗುವುದು ಒಳ್ಳೆಯದು. ಯಾತ್ರಾಸ್ಥಳವೆಂಬ ಕಡೆ ಸಾವಿರಾರು ಜನ ಬಂದು ನೂರು ವರ್ಷ ಸಾವಿರ ವರ್ಷ ದೇವರನ್ನು ನೆನೆದು ಅಲ್ಲಿ ದೈವಸಾನ್ನಿಧ್ಯ ಬೆಳೆದಿರುತ್ತದೆ. ಅಲ್ಲಿ ಹೋದರೆ ಮನಸ್ಸಿಗೆ ಆ ಸಾನ್ನಿಧ್ಯ ಸುಲಭವಾಗಿ ಗೋಚರವಾಗುತ್ತದೆ. ಮನಸ್ಸು ಪರಿಪಾಕವಾದಾಗ್ಗೆ ಬೇರೆಯವರಿಂದ ಆಹಾರವನ್ನು ತೆಗೆದುಕೊಂಡರೆ ತೊಂದರೆಯಿಲ್ಲ; ಜನಿವಾರವನ್ನು ಕಿತ್ತೊಗೆದರೆ ದೋಷವಿಲ್ಲ; ಇರುವ ಕಡೆಯಲ್ಲಿಯೇ ದೇವರ ಸಾನ್ನಿಧ್ಯವನ್ನು ಅನುಭವಿಸಬಹುದು. ಆದರೆ ಪರಿಪಾಕವಾಗುವುದಕ್ಕೆ ಮೊದಲು ಸಾಧನದ ಈ ಕ್ರಮಗಳನ್ನು ಬಿಟ್ಟರೆ ಬೆಳವಣಿಗೆಗೆ ಅಡ್ಡಿಯಾಗುತ್ತದೆ. ಹುಣ್ಣು ಮಾಯುವವೇಳೆ ಮೇಲೆ ಹೊಟ್ಟು ಕಟ್ಟಿಕೊಳ್ಳುತ್ತದೆ. ಮಾಯುವುದು ಮುಗಿದಾಗ ಹೊಟ್ಟು ತಾನಾಗಿ ಬಿದ್ದುಹೋಗುತ್ತದೆ. ಮಾಯುವ ಮೊದಲು ಅದನ್ನು ಕಿತ್ತರೆ ಹುಣ್ಣುಮಾಯುವುದು ಸಾವಕಾಶವಾಗುತ್ತದೆ. ನೇಮನಿಷ್ಠೆ ಎನ್ನುವುದು ಈ ಹೊಟ್ಟಿನ ಹಾಗೆ. ಸಂಧ್ಯಾದಿ ಕರ್ಮಗಳಿಗೂ

ಸಿದ್ಧಿಯ ಕಾರಣವಾಗಿ ಒಂದು ವ್ಯುತ್ಪತ್ತಿ ಇದೆ. ಬತ್ತದಲ್ಲಿ ಪೈರಾಗುವ ಮೊಳೆ ಅಕ್ಕಿಯಲ್ಲಿದೆ, ಹೊಟ್ಟಿನಲ್ಲಿಲ್ಲ; ಆದರೆ ಬತ್ತದ ಪೈರಾಗಬೇಕಾದರೆ ನೆಲ್ಲನ್ನು ಹೊಟ್ಟಿನ ಸಮೇತ ನೆಡಬೇಕು. ಹೊಟ್ಟನ್ನು ತೆಗೆದು ಅಕ್ಕಿಯನ್ನು ನೆಟ್ಟರೆ ಅದು ಮೊಳೆಯುವುದಿಲ್ಲ. ಸಾಧನದ ಬೀಜ ಮನಸ್ಸಿನಲ್ಲಿದೆ; ಆದರೆ ಅದಕ್ಕೆ ಪೋಷಕವಾಗಿ ಕರ್ಮವಿರಬೇಕು.

ವಿಗ್ರಹಾರಾಧನ ಮಾಡುವುದು ಸರಿಯೋ ತಪ್ಪೋ ಎನ್ನುವುದು ಪರಮಹಂಸನ ಜೀವನದ ದಶಮಾನಗಳಲ್ಲಿ ವಂಗದೇಶದ ಜನರಿಗೆ ಒಂದು ದೊಡ್ಡ ಪ್ರಶ್ನೆಯಾಗಿದ್ದಿತು. ವಿಗ್ರಹಾರಾಧನ ಅವಿವೇಕದ ಮಟ್ಟಗಳನ್ನು ಮುಟ್ಟಿದ್ದದರಿಂದ ರಾಮಮೋಹನರಾಯನು ಅದನ್ನು ನಿರಾಕರಿಸಿ ತಾನು ಸ್ಥಾಪಿಸಿದ ಬ್ರಾಹ್ಮಸಮಾಜದಲ್ಲಿ ಆ ನಿರಾಕರಣವನ್ನು ಒಂದು ಮುಖ್ಯ ತತ್ವವಾಗಿ ನೇಮಿಸಿದನು. ದೇವೇಂದ್ರನಾಥ ಠಾಕೂರನ ಉದ್ಯಮದಿಂದ ಈ ಸಮಾಜ ಅಭಿವೃದ್ಧಿಗೆ ಬಂದಾಗ್ಗೆ ಈ ವಿಷಯದ ಚರ್ಚೆ ದೊಡ್ಡದಾಗಿ ಬೆಳೆಯಿತು. ಕೇಶವಚಂದ್ರಸೇನನೂ ಆ ಸಂಪ್ರದಾಯದಲ್ಲಿಯೇ ಬೆಳೆದನು. ಈ ಮಹನೀಯರ ಮೇಲ್ಪಂಕ್ತಿಯನ್ನು ನೋಡಿದ ತರುಣರಿಗೆಲ್ಲ ಇದು ದೊಡ್ಡ ಪ್ರಶ್ನೆಯಾಗಿ ಕಾಣುತ್ತಿದ್ದಿತು. ರಾಮಕೃಷ್ಣನು ಇದಕ್ಕೆಲ್ಲ ಒಂದು ಸಮಾಧಾನವನ್ನು ಹೇಳುತ್ತಿದ್ದನು. ದೇವರು ಅನಂತನು, ನಿರಾಕಾರನು. ಆದರೆ ಅವನನ್ನು ನೆನೆಯುವುದಕ್ಕೆ ಕೆಲವು ವಸ್ತುಗಳಿಂದ ಸಹಾಯವಾಗಬಹುದು. ಆನೆಯ ಗೊಂಬೆಯಿಂದ ಆನೆಯ ಆಕಾರ ಸುಲಭವಾಗಿ ಮನಸ್ಸಿಗೆ ಬರುತ್ತದೆ. ಹಾಗೆಯೇ ದೇವರನ್ನು ನೆನೆಯುವುದು ಒಂದು ಮೂರ್ತಿಯಿಂದ ಸುಲಭವಾಗುತ್ತದೆ. ಮಣ್ಣಿನಿಂದ ಮಾಡಿದ ಮೂರ್ತಿಯನ್ನು ನೋಡಿ ನೀನು ಮಣ್ಣನ್ನು ಗ್ರಹಿಸಿ ಮೂರ್ತಿಯನ್ನು ಮರೆಯುವೆ ಏಕೆ? ಮಣ್ಣಿನಲ್ಲಿ ಮಾಡಿದ್ದರಿಂದ ಮಣ್ಣು ಎಂದು ನಿನಗೆ ಕಾಣುವುದಕ್ಕಿಂತ ಹೆಚ್ಚಾಗಿ ನಿನ್ನ ಮನಸ್ಸಿಗೆ ಆ ಮೂರ್ತಿ ರೂಪಿಸುವ ದೇವರ ಸ್ಮೃತಿ ಬರಬೇಕು. ಎಲ್ಲ ಕಡೆಯೂ ಇರುವ ದೇವರು ಈ ಮೂರ್ತಿಯಲ್ಲೂ ಇದ್ದಾನೆ. ಮೂರ್ತಿಯನ್ನು ನೋಡಿ ಅದು ದೇವರನ್ನು ಚಿತ್ರಿಸುವ ಸಂಕೇತವೆಂದು ಗ್ರಹಿಸಿದವನಿಗೆ ಮೂರ್ತಿಯಿಂದ ದೈವಲಾಭವಾಗುತ್ತದೆ. ಅದನ್ನು ಕಲ್ಲು ಮಣ್ಣು ಎಂದೇ ಪೂಜಿಸುವವನಿಗೆ ಒಳ್ಳೆಯದಾಗುವುದಿಲ್ಲ. ಆದರೆ

ಈ ಸಂದರ್ಭದಲ್ಲಿ ಇವೆಲ್ಲಕ್ಕಿಂತ ಮುಖ್ಯವಾದ ಮಾತು ಬೇರೊಂದಿದೆ. ವಿಗ್ರಹಾರಾಧನೆ ಮಾಡಬೇಕೆ ಬಿಡಬೇಕೆ ಎಂದು ಚರ್ಚೆಮಾಡಬೇಕಾದ ದೇನು? ದೇವರನ್ನು ಆರಾಧಿಸುವುದು ಮುಖ್ಯ. ನಿನಗೆ ನಿರಾಕಾರ ದೈವ ಇಷ್ಟವಾದರೆ ನೀನು ಅದನ್ನು ಪೂಜಿಸು. ಇನ್ನೊಬ್ಬನಿಗೆ ಸಾಕಾರ ದೈವ ಬೇಕಾದರೆ ಅವನು ಮೂರ್ತಿಯನ್ನು ಪೂಜಿಸಲಿ. ಎರಡು ಪೂಜೆ ಯನ್ನೂ ಕೊಳ್ಳುವವನು ಒಬ್ಬನೇ ದೇವರು. ನಿನಗೆ ನನಗೆ ಹೊರಗಣ ಚರ್ಯೆ ಮಾತ್ರ ಕಾಣುತ್ತದೆ. ನಾವು ಜನರ ಹೃದ್ಗತವನ್ನು ಕಾಣೆವು. ಬಹಳ ಮಾಡಿದರೆ ಅದನ್ನು ಅಷ್ಟೋ ಇಷ್ಟೋ ಊಹಿಸುವೆವು. ದೇವರು ಮನುಷ್ಯನ ಹೃದ್ಗತಾರ್ಥವನ್ನು ಬಲ್ಲನು. ಭಕ್ತಿಯಿಂದ ಮಾಡಿದ ಪೂಜೆ ತಪ್ಪುದಾರಿಯಲ್ಲಿ ನಡೆದರೂ ಅವನು ಅದನ್ನು ಒಪ್ಪಿಕೊಳ್ಳುವನು. ನಿರಾಕಾರನನ್ನು ಪೂಜಿಸುವ ನಿನ್ನನ್ನೂ ಮೂರ್ತಿಯನ್ನು ಪೂಜಿಸುವ ಇನ್ನೊಬ್ಬನನ್ನೂ ಅವನೇ ಪಾಲಿಸುವನು. ಅನ್ಯಮತಖಂಡನ ವಿವೇಕಿ ಯಾದವರಿಗೆ ಎಷ್ಟು ಮಾತ್ರವೂ ಕೆಲಸವಲ್ಲ. ಅನ್ಯಮತ ಖಂಡನದಂತೆ ಅನ್ಯದೈವ ನಿರಾಕರಣಕ್ಕೂ ವಿವೇಕವುಳ್ಳವನು ಕೈಹಾಕುವುದಿಲ್ಲ. ಒಂದು ಭಾಷೆಯಲ್ಲಿ ನೀರು ಎನ್ನುವುದನ್ನು ಇನ್ನೊಂದು ಭಾಷೆಯಲ್ಲಿ ಪಾಣಿ ಎನ್ನುತ್ತಾರೆ. ಮತ್ತೊಂದರಲ್ಲಿ ಜಲವೆನ್ನುತ್ತಾರೆ. ಹೆಸರು ಬೇರೆಯಾದರೂ ವಸ್ತು ಒಂದೇ. ಹೆಸರು ಬೇರೆಯಾದವರಿಂದ ದೇವರು ಬೇರೆ ಎಂದು ಭಾವಿಸಿ ಇತರರ ಪೂಜೆಯ ದೈವವನ್ನು ಅಸೂಯೆಯಿಂದ ಕಾಣುವುದು ಮೂರ್ಖತನ. ಈ ಅಸೂಯೆ ಹಲವು ವೇಳೆ ಮಿತಿಮೀರಿ ಹೋಗುತ್ತದೆ. ಘಂಟಾಕರ್ಣನೆಂಬ ಹರಭಕ್ತನು ಹರಿಯ ಹೆಸರು ಕಿವಿಗೆ ಬೀಳದಿರಲೆಂದು ಕಿವಿಗೆ ಗಂಟೆಯನ್ನು ಕಟ್ಟಿಕೊಂಡಿದ್ದನಂತೆ. ಒಂದು ಸಲ ಅವನಿಗೆ ಹರನೇ ಪ್ರತ್ಯಕ್ಷನಾಗಿ ನಾನೂ ಹರಿಯೂ ಬೇರೆಯಲ್ಲ ನೋಡು ಎಂದು ಅರ್ಧ ಹರಿಯಾಗಿ ಅರ್ಧ ಹರನಾಗಿ ಕಂಡನಂತೆ. ಹರಭಕ್ತನು ಹರನ ಮಾತನ್ನೇ ಕೇಳಲಿಲ್ಲ. ಅವನನ್ನು ಈಗಲೂ ವರ್ಷದಲ್ಲಿ ಒಂದು ಸಲ ಕಾಮನನ್ನು ಸುಡುವಂತೆ ವಂಗದೇಶದಲ್ಲಿ ಸುಡುತ್ತಾರೆ. ಹರಿ ದೊಡ್ಡವನೆಂದು ಹರ ದೊಡ್ಡವನೆಂದು ವಾದಮಾಡುವವರು ಹರಿಯನ್ನೂ ಕಂಡಿಲ್ಲ, ಹರನನ್ನೂ ಕಂಡಿಲ್ಲ. ಹರಿಹರರ ತಾರತಮ್ಯ ಬರ್ದ್ವಾನದ ರಾಜನ ಸಭೆಯಲ್ಲಿ ಒಂದು

ಸಲ ಚರ್ಚೆಯಾದಾಗ ಜ್ಞಾನಿಯಾದ ಪಂಡಿತನೊಬ್ಬನು ಬಾಯಿ ತೆರೆಯದೆ ಸುಮ್ಮನೆ ಕುಳಿತಿದ್ದನಂತೆ. ಏಕೆ ಸುಮ್ಮನಿದೀರಿ ಎಂದು ರಾಜನು ಕೇಳಲು, ಆ ಪಂಡಿತನು ಹರನ ಪಕ್ಷದವರನ್ನು, 'ಸ್ವಾಮಿ, ತಾವು ಹರನನ್ನು ನೋಡಿದ್ದೀರಾ,' ಎಂದು ಕೇಳಿದನಂತೆ. ಅವರು ಇಲ್ಲ ಎಂದರು. ಆಮೇಲೆ ಪಂಡಿತನು ಹರಿಯ ಪಕ್ಷದವರನ್ನು, 'ನೀವು ಹರಿಯನ್ನು ನೋಡಿದ್ದೀರಾ,' ಎಂದು ಕೇಳಿದನಂತೆ. ಅವರೂ ಇಲ್ಲ ಎಂದರು. ಪಂಡಿತನು ರಾಜನನ್ನು ಕುರಿತು, 'ಹರಿಹರರನ್ನು ಈ ವಾಗ್ಮಿದರು ನೋಡಿಲ್ಲ; ನಾನಾದರೂ ಅವರನ್ನು ಕಂಡವನಲ್ಲ. ಆದ್ದರಿಂದ ನಾವು ಯಾರೂ ಈ ವಿಷಯವನ್ನು ಚರ್ಚೆಮಾಡಿ ಉಪಯೋಗವಿಲ್ಲ ಎಂದು ಕಾಣುತ್ತದೆ,' ಎಂದನು. ನನ್ನ ದೇವರು ದೊಡ್ಡವನು, ತನ್ನ ದೇವರು ದೊಡ್ಡವನು, ಎಂದು ವಾದಮಾಡುವವರು ಪ್ರಾಯಶಃ ದೇವರೆನ್ನುವುದನ್ನು ಕಂಡವರಲ್ಲ. ದೇವರ ವಿಷಯ ಸ್ವಲ್ಪವಾದರೂ ತಿಳಿದವರಿಗೆ ಅನ್ಯದೈವದ ವಿಷಯದಲ್ಲಿ ಮರ್ಯಾದೆ ಇರುತ್ತದೆ. ಇನ್ನೊಬ್ಬರು ಪೂಜೆಮಾಡುವ ಸ್ಥಾನದಲ್ಲಿ ಇವರು ಮಂಡಿ ಊರುವುದಕ್ಕೆ ಒಪ್ಪದಿದ್ದರೂ ತಲೆಯನ್ನು ಬಾಗಿ ಮುಂದೆ ಸಾಗುತ್ತಾರೆ.

ಅನ್ಯಮತವನ್ನು ಖಂಡಿಸಬೇಡವೆನ್ನುವುದಕ್ಕೆ ಕಾರಣ, ಅದು ಮತವೇ ಆಗಿದ್ದಲ್ಲಿ ಉದ್ಧಾರಕ್ಕೆ ಅದೂ ಒಂದು ಮಾರ್ಗ ಎನ್ನುವುದು; ಅನ್ಯದೈವವನ್ನು ಕುರಿತು ಮತ್ಸರಿಸಬೇಡ ಎನ್ನುವುದಕ್ಕೆ ಕಾರಣ, ಅದೂ ದೇವರನ್ನು ಕುರಿತ ಒಂದು ಕಲ್ಪನೆ ಎನ್ನುವುದು. ಆನೆ ಹೇಗಿದೆಯೆಂದು ತಿಳಿಯಲು ಅದನ್ನು ಮುಟ್ಟಿದ ನಾಲ್ವರು ಕುರುಡರಲ್ಲಿ ಕಾಲನ್ನು ಮುಟ್ಟಿದವನು ಅದು ಕಂಬದಂತಿದೆ ಎಂದನು; ಬಾಲವನ್ನು ಮುಟ್ಟಿದವನು ಪರಕೆಯಂತಿದೆ ಎಂದನು; ಕಿವಿಯನ್ನು ಮುಟ್ಟಿದವನು ಮೊರದಂತಿದೆ ಎಂದನು; ಸೊಂಡಿಲನ್ನು ಮುಟ್ಟಿದವನು ಒನಕೆಯಂತಿದೆ ಎಂದನು. ಊಸುರವಳ್ಳಿಯನ್ನು ಹುಲ್ಲಿನ ಹತ್ತಿರ ಕಂಡವನು ಪಸುರಾಗಿದೆ ಎನ್ನುವನು; ಚಿಗುರಿನ ಹತ್ತಿರ ಕಂಡವನು ಕೆಂಪಾಗಿದೆ ಎನ್ನುವನು. ಒಬ್ಬೊಬ್ಬನೂ ಅವನ ಮತದಲ್ಲಿ ಇರುತ್ತ ಅವನ ದೈವವನ್ನು ಪೂಜಿಸಿ ಉದ್ಧಾರವಾಗಬಹುದು. ಹೀಗೆಂದ ಮಾತ್ರಕ್ಕೇ ಎಲ್ಲಮತವೂ ಒಂದೇಎಂದು ಪರಮಹಂಸನ ಉಪದೇಶಎಂದು ನಾವು ಗ್ರಹಿಸಕೂಡದು. ಒಂದು ಸ್ಥಳಕ್ಕೆ ಹೋಗುವುದಕ್ಕೆ ಹತ್ತು ದಾರಿ ಇರಬಹುದು.

ಆದರೆ ಅದರಲ್ಲಿ ಕೆಲವು ದುರ್ಮಾರ್ಗವಿರಬಹುದು. ಕಲ್ಲುಮುಳ್ಳಿನ ದಾರಿ, ಹಾವು ಹಲ್ಲಿಯ ದಾರಿ, ಕಳ್ಳಕಾಕರ ದಾರಿ ಪ್ರಯಾಣಕ್ಕೆ ಸರಿಯಲ್ಲ. ಆದದರಿಂದ ಮನುಷ್ಯನು ಸರಿಯಾದ ದಾರಿಯನ್ನು ತಿಳಿದು ಹಿಡಿಯಬೇಕು. ಶಾಕ್ತಮತದಲ್ಲಿ ವಾಮಪಂಥ ಎಂಬ ಮಾರ್ಗ ಒಂದಿದೆ. ಇಂದ್ರಿಯಗಳ ಪ್ರವೃತ್ತಿಯನ್ನು ನಿರೋಧಿಸದೆ ಸಾಧನದ ಉಪಕರಣಗಳನ್ನಾಗಿ ಮಾಡಬಹುದೆನ್ನುವುದು ಈ ಪಂಥದ ಅಸ್ತಿವಾರ. ಆದ್ದರಿಂದ ಅದರಲ್ಲಿ ದೇವರಿಗೆ ನೈವೇದ್ಯಮಾಡಿ ಮದ್ಯವನ್ನು ಕುಡಿಯುವುದು, ಮಾಂಸವನ್ನು ತಿನ್ನುವುದು, ಈ ರೀತಿಯಾಗಿ ಪಂಚಮಕಾರಗಳ ಅನುಭವಗಳನ್ನು ನಿಯಮಿಸುವರಂತೆ. ಈ ಮಾರ್ಗವನ್ನು ಮನುಷ್ಯನು ಅನುಸರಿಸಬಾರದೆಂದು ಪರಮಹಂಸನು ಒಂದು ಸಲ ಹೇಳಿದನಂತೆ. ಹತ್ತಿರಿದ್ದವನೊಬ್ಬನು, ಎಲ್ಲ ದಾರಿಯೂ ದಾರಿಯಾಗಿರುವಲ್ಲಿ ಇದನ್ನು ಬೇಡವೆಂದು ಏಕೆ ಹೇಳುವುದು, ಎಂದು ಕೇಳಿದನು. ಪರಮಹಂಸನು ಅದಕ್ಕೆ, 'ಬೀದಿಯಲ್ಲಿರುವವನು ಮನೆಯನ್ನು ಪ್ರವೇಶಿಸಬೇಕಾದರೆ ಹೆಬ್ಬಾಗಿಲಿಂದ ಹೋಗಬಹುದು, ಕಿರಿಯ ಬಾಗಿಲಿಂದ ಹೋಗಬಹುದು, ಹಿತ್ತಿಲ ಕಡೆಯ ಕಂಡಿಯಿಂದ ತೂರಿ ಒಳಗೆ ಬರಬಹುದು. ಮೊದಲ ಎರಡು ದಾರಿ ಎದುರಿಗೆ ಇರಲಾಗಿ ಹಿತ್ತಿಲ ಕಂಡಿಯಿಂದ ತೂರಿ ಏಕೆ ಹೋಗಬೇಕು?' ಎಂದನು. ಈ ಮಾತಿನ ಅರ್ಥದ ಗಾಂಭೀರ್ಯವೂ ಉಕ್ತಿಯ ಚಾತುರ್ಯವೂ ಒಂದಕ್ಕಿಂತ ಒಂದು ಹೆಚ್ಚಿಂದು ಕಾಣುತ್ತದೆ. ಇದೂ ಪರಮಹಂಸನ ಉಪದೇಶದಲ್ಲಿ ಸೇರಿದೆಯೆನ್ನುವುದನ್ನು ನಾವು ಮರೆಯಬಾರದು.

ರಾಮಕೃಷ್ಣನ ಇನ್ನು ಕೆಲವು ಮಾತು ಸಾಮಾನ್ಯ ಜೀವನಕ್ಕೆ ಅನ್ವಯಿಸುವುದಿಲ್ಲ. ಆದರೆ ಯೋಗಾಭ್ಯಾಸ ಮಾಡುವೆವೆನ್ನುವವರಿಗೆ ಅವು ಬಹಳ ಅವಶ್ಯವೆಂದು ಕಾಣುತ್ತದೆ. ಯೋಗದ ಸಾಧನೆಯಲ್ಲಿ ಸಿದ್ಧಿಗಳು ಎಂಬ ಅಪ್ರಾಕೃತ ಶಕ್ತಿಗಳು ಕೈಸೇರುವವೆಂದು ಯೋಗದ ಪರಿಶ್ರಮವುಳ್ಳವರು ಹೇಳುತ್ತಾರೆ. ಇವುಗಳಿಗೆ ಮನಸ್ಸುಕೊಡಬಾರದು ಎಂದು ರಾಮಕೃಷ್ಣನು ಸೂಚಿಸಿದನು ಎಂಬುದನ್ನು ಈ ಮೊದಲೇ ಹೇಳಿದೆ. ಗುರು ಈ ಮಾತನ್ನು ಮುಖ್ಯವಾಗಿ ತನ್ನ ಶಿಷ್ಯರಿಗಾಗಿ ಹೇಳಿದನು. ಇವನ ಪರಿಚಯದ ಒಬ್ಬ ಯೋಗಿ ಅದೃಶ್ಯನಾಗಿ ತಿರುಗುವ ಶಕ್ತಿಯನ್ನು ಪಡೆದ

ನಂತೆ. ಇದರ ವಿನಿಯೋಗದಲ್ಲಿ ಸ್ತ್ರೀಯರು ಮಲಗುವ ಕಡೆ ಅವರಿಗೆ ತಿಳಿಯ ದಂತೆ ಕೆಲವು ಸಲ ಹೋಗಿಬಂದು ಕೊನೆಗೆ ಇವನು ಆ ಶಕ್ತಿಯನ್ನು ದುರುಪ ಯೋಗಪಡಿಸಿದನಂತೆ. ಹೀಗೆ ಪತಿತನಾಗಿ ಅವನು ಯೋಗಭ್ರಷ್ಟನಾದನು. ಇವನ ಪರಿಚಯದ ಮತ್ತೊಬ್ಬ ಯೋಗಿ ಕೈಯೆತ್ತಿದರೆ, ತೋಳ ಮೊದಲಿಂದ ಒಂದು ದೀಪವಿಟ್ಟಂತೆ ಬೆಳಕು ಹೊರಡುತ್ತಿದ್ದಿತಂತೆ. ಒಂದು ಸಲ ರಾಮಕೃಷ್ಣನೂ ಅವನೂ ಕತ್ತಲಲ್ಲಿ ನಡೆಯಬೇಕಾದಾಗ ಅವನು ತೋಳನ್ನೆತ್ತಿ ದಾರಿ ಕಾಣುವಂತೆ ಮಾಡಿದನು. ರಾಮಕೃಷ್ಣನು ಅವನಿಗೆ ಹೀಗೆ ಮಾಡುವುದು ತಪ್ಪು ಎಂದು ಎಚ್ಚರಿಸಿದನಂತೆ. ಅವನು ಆಮೇಲೆ ಹಾಗೆ ಮಾಡಲಿಲ್ಲ; ಯೋಗದಲ್ಲಿ ಮುಂದುವರಿದನು. ಸಿದ್ಧಿಯಿಂದ ಯೋಗಿ ಭ್ರಷ್ಟನೂ ಪತಿತನೂ ಆಗದಿದ್ದರೂ ಅದನ್ನು ಉಪಯೋಗಿಸುವಲ್ಲಿ ಕೊಂಚ ಫಲಕ್ಕಾಗಿ ಬಹಳ ತಪಸ್ಸಿನ ವ್ರಯಮಾಡುತ್ತಾನೆ. ಅದ್ಭುತಗಳನ್ನು ಮಾಡಿ ಜನರ ಗೌರವವನ್ನು ಸಂಪಾದಿಸುವುದು ತೂಕಕ್ಕೆ ತೂಕ ಚಿನ್ನ ಕೊಟ್ಟು ಬದನೇಕಾಯನ್ನು ಕೊಂಡುಕೊಂಡಂತೆ. ಅದ್ಭುತವನ್ನು ಮಾಡಿದೆ ನೆಂದು ಯೋಗಿಗೆ ಹೆಮ್ಮೆ; ಮಾಡಿದನೆಂದು ಜನರಿಗೆ ಆಶ್ಚರ್ಯ. ಆದರೆ ಇದಕ್ಕೆ ಆಗುವ ಆತ್ಮಶಕ್ತಿಯ ವೆಚ್ಚ ಇಷ್ಟೆಂದು ಹೇಳುವಂತಿಲ್ಲ. ಪರಮಹಂಸನು ಈ ತತ್ವವನ್ನು ತಿಳಿಸುವುದಕ್ಕೆ ಒಂದು ಕಥೆಯನ್ನು ಹೇಳು ತ್ತಿದ್ದನು. ತನ್ನ ಗುರುವಿನಿಂದ ಯೋಗದ ರಹಸ್ಯವನ್ನು ತಿಳಿದ ಶಿಷ್ಯ ನೊಬ್ಬನು ಹದಿನಾಲ್ಕುವರ್ಷ ಸಾಧನಮಾಡಿ ಆ ಗುರುವಿನ ಬಳಿಗೆ ಬಂದು ತಾನು ಅಸಾಧಾರಣವಾದ ಶಕ್ತಿಯೊಂದನ್ನು ಪಡೆದಿಪೇನೆಂದು ಹೇಳಿದನು. ಗುರು ಅದು ಏನು ಎಂದು ಕೇಳಿದನು. ಶಿಷ್ಯನು ಗುರುವನ್ನು ಒಂದು ಹೊಳೆಯ ಹತ್ತಿರ ಕರೆದುಕೊಂಡು ಹೋಗಿ ತಾನು ನೀರಿನ ಮೇಲೆ ಪಡದಿಂದ ದಡಕ್ಕೆ ಹೋಗಿ ಹಿಂತಿರುಗಿ ಬಂದನು. ಗುರು ಅವನನ್ನು ಕರೆದುಕೊಂಡು ಒಬ್ಬ ಅಂಬಿಗನ ಬಳಿಗೆ ಹೋಗಿ ದೋಣಿಯಲ್ಲಿ ಕುಳಿತು ನಮ್ಮನ್ನು ಆ ಕಡೆಗೆ ಕರೆದುಕೊಂಡು ಹೋಗಿಬಾ ಎಂದನು; ಹೋಗಿ ಬಂದಮೇಲೆ ಅಂಬಿಗನಿಗೆ ಆರುಕಾಸು ಕೊಟ್ಟನು; ಶಿಷ್ಯನನ್ನು ಕುರಿತು ನಿನ್ನ ಸಿದ್ಧಿಯ ಬೆಲೆ ಇಷ್ಟು ಎಂದನು. ಈ ಕಥೆಯನ್ನು ಹೇಳಿ ರಾಮಕೃಷ್ಣನು ತನ್ನ ಶಿಷ್ಯರನ್ನು, "ಸಿದ್ಧಿಗಳಿಗೆ ಮನಸ್ಸು ಕೊಟ್ಟೀರಿ, ಜೋಕೆ,' ಎಂದು ಮತ್ತೆ ಮತ್ತೆ

ಎಚ್ಚರಿಸಿದನು. ನರೇಂದ್ರನು ಸರಸದಲ್ಲಿ ಒಂದುಸಲ ಜೊತೆಗಾರನೊಬ್ಬನಿಗೆ ಸೋಕಿನಿಂದ ಸಮಾಧಿ ಬರುವಂತೆ ಮಾಡಿದನಂತೆ. ಅದನ್ನು ಬಹು ದೊಡ್ಡ ವಿಷಯವೆಂದು ಉಳಿದವರು ಪರಮಹಂಸನಿಗೆ ಹೇಳಿದರು. ರಾಮಕೃಷ್ಣನು ನರೇಂದ್ರನನ್ನು ಕರೆದು ಬಹು ಅಸಮಾಧಾನವನ್ನು ಸೂಚಿಸಿ ತಿರುಗಿ ಇಂಥ ಆಟವನ್ನು ಆಡಬಾರದು ಎಂದು ಕಟ್ಟಾಣತಿಮಾಡಿದನು.

ಹಾಗಾದರೆ ಯೋಗದ ಪರಮಾವಧಿ ಏನು? ಪವಾಡ ಮಾಡ ಕೂಡದು, ಮಹಿಮೆ ತೋರಿಸಕೂಡದು, ಜನರನ್ನು ಬೆರಗುಗೊಳಿಸ ಕೂಡದು. ಇನ್ನು ಯೋಗದಿಂದ ಫಲವೇನು? ಪರಮಹಂಸನ ಅಳಿಯ ಹೃದಯರಾಮನಿಗೆ ಈರೀತಿ ಸ್ವಲ್ಪ ಯೋಚನೆ ಹರಿಯಿತು. ಒಂದು ಸಲ ದಕ್ಷಿಣೇಶ್ವರಕ್ಕೆ ಒಬ್ಬ ಸಾಧು ಬಂದನು. ಅವನ ನಡತೆ ನುಡಿತ ವಿಚಿತ್ರ ವಾಗಿದ್ದುವು. ಆಲಯದಲ್ಲಿ ಎಲ್ಲರೂ ಪ್ರಸಾದವನ್ನು ತೆಗೆದುಕೊಂಡರು; ಅವನು ತೆಗೆದುಕೊಳ್ಳಲಿಲ್ಲ. ಹೊರಗೆಸೆದ ಹಾಳೆಯಲ್ಲಿ ಇದ್ದ ಅನ್ನವನ್ನು ಒಂದು ನಾಯಿ ತಿನ್ನುತ್ತಿತ್ತು; ಆ ಸಾಧು ಹೋಗಿ ಅದರ ಹತ್ತಿರ ಕುಳಿತು ಅದರ ಕುತ್ತಿಗೆಗೆ ಕೈಹಾಕಿಕೊಂಡು ನೀನೊಬ್ಬನೇ ಈ ಅನ್ನವನ್ನು ತಿನ್ನುತ್ತೀಯಾ ಎಂದು ತಾನೂ ಅದರ ಜೊತೆಗೆ ಆ ಅನ್ನವನ್ನು ತೆಗೆದು ಕೊಂಡು ತಿಂದನು. ರಾಮಕೃಷ್ಣನು ಅದನ್ನು ಹೃದಯನಿಗೆ ತೋರಿಸಿ ಆ ಸಾಧು ಶ್ರೇಷ್ಠಸಾಧಕನು ಎಂದನು. ಹೃದಯನಿಗೆ ಆಶ್ಚರ್ಯವಾಯಿತು. ಆಮೇಲೆ ರಾಮಕೃಷ್ಣನು ಅವನಿಗೆ, ಇಂಥ ಮಹನೀಯನು ದೊರೆತಿರುವಾಗ ಅವಕಾಶವನ್ನು ಕಳೆದುಕೊಳ್ಳಬಾರದು, ಏನಾದರೂ ಉಪದೇಶ ಮಾಡೆಂದು ಅವನನ್ನು ಕೇಳಿಕೊ, ಎಂದನು. ಹೃದಯರಾಮನು ಆ ಸಾಧುವಿನ ಹಿಂದೆಯೇ ಹೋದನು. ಹಿಂದೆ ಬರಬೇಡವೆಂದು ಅವನು, ಉಪದೇಶ ಮಾಡೆಂದು ಇವನು. ಕೊನೆಗೆ ಏನು ಮಾಡುವುದೆಂದು ತೋರದೆ ಸಾಧು ಇವನಿಗೆ, 'ಅಲ್ಲಿ ಹರಿಯುವ ಗಂಗೆಯನೀರು, ಇಲ್ಲಿ ಹರಿಯುವ ಈಚರಂಡಿಯ ಕೊಚ್ಚೆ, ಇವೆರಡೂ ನಿನ್ನ ಮನಸ್ಸಿಗೆ ಸಮನೆಂದು ಕಾಣಬೇಕು. ಇದನ್ನು ಅಭ್ಯಾಸಮಾಡು ಹೋಗು,' ಎಂದನಂತೆ. ಹೃದಯನು ಬಂದು ಇದನ್ನು ಮಾವನಿಗೆ ಹೇಳಿದನು. ರಾಮಕೃಷ್ಣನು ಆ ಸಾಧು ಪರಮಹಂಸನು ಎಂದನು.

ಇದು ಯೋಗಿಯ ಮಾತು. ಲಕ್ಷದಲ್ಲಿ ಒಬ್ಬನು ಈ ದಾರಿಗೆ ಹೋಗುವುದಿಲ್ಲ. ಸಂಸಾರಿಯ ಧ್ಯೇಯವೇನು ? ಸಂಸಾರದಲ್ಲಿ ಹೀಗಿರುವವನು ಪುಣ್ಯಶಾಲಿ: ಬುದ್ಧಿಯ ಪ್ರವೃತ್ತಿಗಳು, ಹೃದಯದ ಪ್ರವೃತ್ತಿಗಳು ಚೆನ್ನಾಗಿ ಅರಳಿ ಹಿತವಾಗಿ ಕಲೆತಿರಬೇಕು. ಆ ಮನುಷ್ಯನು ಎಲ್ಲಿಟ್ಟರೆ ಅಲ್ಲಿ ರೀತಿ ತಪ್ಪದೆ ನಡೆದುಕೊಳ್ಳುತ್ತಾನೆ. ಅವನಿಗೆ ಭಗವಂತನಲ್ಲಿ ನಿಷ್ಕಪಟವಾದ ಪ್ರೇಮವಿರುತ್ತದೆ, ನಿಶ್ಚಲವಾದ ನಂಬಿಕೆಯಿರುತ್ತದೆ. ಆದರೆ ಜನರೊಂದಿಗೆ ನಡೆಸಬೇಕಾದ ವ್ಯವಹಾರದಲ್ಲಿಯೂ ಅವನು ಏನನ್ನೂ ಕಡಮೆ ಮಾಡುವುದಿಲ್ಲ. ಪ್ರಪಂಚದ ಕಾರ್ಯದಲ್ಲಿ ಅವನು ವ್ಯವಹಾರವನ್ನು ಬಲ್ಲವನಾಗಿ ನಡೆಯುತ್ತಾನೆ. ವಿದ್ಯಾವಂತರಲ್ಲಿ ಅವನು ವಿದ್ಯಾವಂತನೆಂದು ಮರ್ಯಾದೆಯನ್ನು ಸಂಪಾದಿಸುತ್ತಾನೆ. ಚರ್ಚೆಯಲ್ಲಿ ಬುದ್ಧಿಶಕ್ತಿಯನ್ನು ತೋರಿಸುತ್ತಾನೆ. ತಾಯಿತಂದೆಗಳಿಗೆ ಇವನು ವಿಧೇಯನಾಗಿರುತ್ತಾನೆ; ಪ್ರೀತಿಯಿಂದ ಬಾಗುತ್ತಾನೆ. ಸೋದರರಿಗೆ ಸ್ನೇಹಿತರಿಗೆ ಇವನು ಪ್ರೇಮದಿಂದ ನಡೆದುಕೊಳ್ಳುತ್ತಾನೆ; ಮೆಚ್ಚಿಗೆಯ ಮಾತನಾಡುತ್ತಾನೆ. ನೆರೆಯವರಿಗೆ ಇವನು ವಿಶ್ವಾಸದಿಂದ ಸಹಾಯದಿಂದ ನಡೆದುಕೊಳ್ಳುತ್ತಾನೆ; ಯಾವಾಗಲೂ ಅವರಿಗೆ ತನ್ನಿಂದಾದ ಒಳ್ಳೆಯದನ್ನು ಮಾಡುತ್ತಾನೆ. ಹೆಂಡತಿಗೆ ಇವನು ಪ್ರೇಮದ ಕಾಂತನಾಗಿರುತ್ತಾನೆ. ಇಂಥ ಮನುಷ್ಯನು ಸಂಪೂರ್ಣನು.

ಇದು ಗುರುವಿನ ಉಪದೇಶದ ಮುಖ್ಯ ಭಾಗಗಳ ಸಾರಾಂಶ. ಇಲ್ಲಿ ಇದು ಒಂದೊಂದು ವಿಷಯವನ್ನು ಕುರಿತ ವಾಕ್ಯಗಳ ಗುಚ್ಛವಾಗಿ ಕಾಣುತ್ತದೆ. ಆದರೆ ಆ ಮಾತುಗಳನ್ನು ಪರಮಹಂಸನು ಒಂದು ಸಂದರ್ಭದಲ್ಲಿ, ಯಾವುದಾದರೂ ಒಂದು ಅಥವಾ ಹತ್ತು ಸಭೆಗಳಿಗೆ, ಉಪನ್ಯಾಸವಾಗಿ ಹೇಳಲಿಲ್ಲ. ಶಿಷ್ಯರು ಬರುವುದಕ್ಕೆ ಆರಂಭವಾದುದು ಮೊದಲು, ಐದು ವರ್ಷದ ಕಾಲ, ತನ್ನ ಸನ್ನಿಧಿಗೆ ಬಂದ ಸಾವಿರಾರು ಜನಕ್ಕೆ ಸಾವಿರಾರು ಸಂದರ್ಭದಲ್ಲಿ ಗುರು, ದೇವರ ಸ್ವರೂಪವನ್ನು ಕುರಿತೋ ಜ್ಞಾನ ಭಕ್ತಿ ಮಾರ್ಗಗಳ ವಿವೇಚನೆಯನ್ನು ಕುರಿತೋ ದ್ವೈತಾದ್ವೈತಗಳ ಸಾಮಂಜಸ್ಯವನ್ನು ಕುರಿತೋ ಕಾಮಿನೀ ಕಾಂಚನಗಳ ತ್ಯಾಗವನ್ನು ಕುರಿತೋ ಸಾಕಾರ ನಿರಾಕಾರಗಳ ಸಮನ್ವಯವನ್ನು ಕುರಿತೋ ನೇಮ

ನಿಷ್ಠೆ ಕುಲಕರ್ಮಗಳ ವ್ಯುತ್ಪತ್ತಿಯನ್ನು ಕುರಿತೋ, ಬಂದವರ ಯೋಗ್ಯತೆಗೆ ಅವಶ್ಯಕತೆಗೆ ಅನುಸಾರವಾಗಿ ಆಗಾಗ ಅವಶ್ಯಕವಾದ ಮಾತನ್ನು ಹೇಳುವನು. ಪರಮಹಂಸನ ಮಾತು ಅನುಭವದಿಂದ ಬಂದದ್ದು, ಈತನು ಬಹಳ ಓದಿರಲಿಲ್ಲ, ಎಂದು ಕೆಲವರು ಹೇಳುತ್ತಾರೆ. ಪರಮಹಂಸನು ಶಾಲೆಯಲ್ಲಿ ಕುಳಿತು ಶಾಸ್ತ್ರಾಭ್ಯಾಸ ಮಾಡಿದವನಲ್ಲವಾದರೂ ಶಾಸ್ತ್ರವನ್ನು ಕಾಣದವನಲ್ಲ. ಇವನ ಮನೆಯವರು ಪಾಂಡಿತ್ಯದ ಸಂಪ್ರದಾಯದವರು, ಇವರ ಅಣ್ಣ ಸಂಸ್ಕೃತದ ಶಾಲೆಯೊಂದನ್ನು ನಡೆಸುತ್ತಿದ್ದನು, ಎಂಬುದನ್ನು ನಾವು ಮರೆಯಲಾಗದು. ರಾಮಕೃಷ್ಣನು ಪಂಡಿತನಾಗಿರಲಿಲ್ಲ; ಆದರೆ ಪಂಡಿತರು ಶ್ರಮದಿಂದ ಸಂಪಾದಿಸುವ ಜ್ಞಾನವನ್ನು ಇವನು ಅವರ ಸಹವಾಸದಿಂದ ಪಡೆದಿದ್ದನು. ಒಂದು ಸಲ ಅಧ್ಯಾತ್ಮ ರಾಮಾಯಣವನ್ನು ಕೇಳಬೇಕೆಂದು ಈತನು ಅಪೇಕ್ಷಿಸಿದಾಗ, ಪುರಾಣಿಕನೊಬ್ಬನು ಬಂದು ಆ ಗ್ರಂಥವನ್ನು ಇವನಿಗೆ ಓದಿ ಹೇಳಲಾರಂಭಿಸಿದನು. ಹೀಗೆ ಓದುತ್ತಿರುವಲ್ಲಿ ಯಾರೋ, 'ನೀವು ಮೊದಲು ಈ ಗ್ರಂಥವನ್ನು ಕೇಳಿರಲಿಲ್ಲವೆ,' ಎಂದು ಪ್ರಶ್ನೆ ಮಾಡಿದರು. ಗುರು, 'ಕೇಳಿದ್ದೆ. ಆದರೆ ಬಹುದಿನವಾಯಿತು,' ಎಂದು ಹೇಳಿ ಮುಂದಣ ಶ್ಲೋಕಗಳಲ್ಲಿ ಪ್ರತಿಪಾದಿಸುವುದು ಏನೆಂದು ವಿವರಿಸಿದನು. ಗುರುವಿಗೆ ಆತ್ಮ ಹರಿತವಾಗಿದ್ದಂತೆ ಬುದ್ಧಿಯೂ ಹರಿತವಾಗಿದ್ದಿತು, ಮನಸ್ಸೂ ಹರಿತವಾಗಿದ್ದಿತು. ಸಾಮಾನ್ಯ ಚೇತನಕ್ಕಿಂತ ಈ ಚೇತನಕ್ಕೆ ಇಂದ್ರಿಯಪಾಟವವೂ ಹೆಚ್ಚಾಗಿದ್ದಿತು. ಅದರಿಂದ ಅವನ ಅನುಭವ ಅವನ ಕಲಿವನ್ನು ಒಂದು ಕಡೆಗಿಟ್ಟಿತು. ರಾಮಕೃಷ್ಣನು ಬಹು ಅನುಭವಿ ಆಗದಿದ್ದರೆ ಬಹುಶ್ರುತನೆಂದು ಪ್ರಸಿದ್ಧನಾಗುತ್ತಿದ್ದನು. ಇವನ ಸೋದರತ್ತೆಯ ಮಗ ಹಲಧಾರಿ ಎಂಬವನು ದೊಡ್ಡ ಪಂಡಿತನಾಗಿದ್ದನು. ಅವನು ಪರಮಹಂಸನ ಸಾಧನದ ಕಾಲದಲ್ಲಿ ದಕ್ಷಿಣೇಶ್ವರದಲ್ಲಿರುತ್ತ, ಇವನ ಹತ್ತಿರ ಬಂದಾಗ ಇವನ ಪ್ರತಿಭೆಗೆ ಸೋತು ಮತ್ತೆ ತನ್ನ ಪುಸ್ತಕದೆದುರಿಗೆ ತಾನೇ ಕುಳಿತಾಗ, 'ಇದೇನು ಈ ರಾಮಕೃಷ್ಣನನ್ನು ನಾನು ಒಪ್ಪಿಕೊಂಡೆ. ಇದೆಲ್ಲ ಇವನಿಗೆ ಯಾವುದೂ ತಿಳಿಯದಲ್ಲ,' ಎಂದು ಚಿಂತಿಸುವನು. ಹೀಗೆ ಹತ್ತಾರು ಸಲ ಅವನಿಗೆ ರಾಮಕೃಷ್ಣನ ವಿಷಯದಲ್ಲಿ ಬುದ್ಧಿ ಮಾರ್ಪಟ್ಟು ಬಹು ದಿನದಮೇಲೆ ಇವನ ಮಾಹಾತ್ಮ್ಯದಲ್ಲಿ ನಂಬಿಕೆ ಹುಟ್ಟಿತು. ಗುರುವಿನ

ಉಪದೇಶದ ಒಂದೊಂದು ಮಾತಿನಲ್ಲೂ ಅವನ ತೀವ್ರವಾದ ಚೇತನಕ್ಕೆ ಪಂಡಿತರು, ಪಾಮರರು, ಸಾಧಕರು, ಪರಮಹಂಸರು, ಉಪದೇಶಿಗಳು, ವ್ಯವಹಾರಿಗಳು, ಇತ್ಯಾದಿ ಬಹುರೀತಿಯ ಜನರ ಸಹವಾಸದಿಂದ ಬಂದ ಪ್ರಪಂಚಜ್ಞಾನ ರೂಪುಗೊಳ್ಳುತ್ತಿದ್ದಿತು.

ವಿಷಯದಲ್ಲಿ ಒಂದು ವೈಶಾಲ್ಯವೂ ಅನುಭವದಿಂದ ಬಂದ ಒಂದು ವೈಶಿಷ್ಟ್ಯವೂ ಕಾಣುತ್ತಿದ್ದಂತೆ ಈ ಉಪದೇಶದರೀತಿಯಲ್ಲಿ ಒಂದು ಅಪೂರ್ವ ಚಾತುರ್ಯವೂ ಪ್ರಕಟವಾಗುತ್ತಿತ್ತು. ಪರಮಹಂಸನ ಬಾಯಲ್ಲಿ ಉಪದೇಶದ ಮಾರ್ಗ ಒಂದು ಕಲೆಯಾಯಿತೆಂದು ಹೇಳಬಹುದು. ರಾಮಕೃಷ್ಣನಿಗೆ ಬಾಲ್ಯದಿಂದಲೂ ಗಣಿತಕ್ಕಿಂತ ಸಾಹಿತ್ಯದಲ್ಲಿ ರುಚಿ ಹೆಚ್ಚಂತೆ. ಮುಖ್ಯವಾಗಿ ಅವನ ಚೇತನ ನಿಯಮಕ್ಕಿಂತ ರಸದಲ್ಲಿ ಹೆಚ್ಚು ಸುಖವನ್ನು ಕಾಣುತ್ತಿದ್ದಿತು. ಹುಟ್ಟನಿಂದ ಅವನು ಕವಿ. ಆದರಿಂದಲೇ ನಿರ್ಗುಣ ಬ್ರಹ್ಮವನ್ನು ಸಾಧಿಸಿದಮೇಲೆಯೂ ಅವನು ತಾಯನ್ನು ಪೂಜಿಸುತ್ತಿರುವನು. ಕವಿಯಾದದರಿಂದ ಇವನು ಉಪದೇಶದ ವಿಷಯವನ್ನು ಪ್ರತಿಪಾದಿಸುವುದರಲ್ಲಿ ಸೊಗಸನ್ನು ತರುತ್ತಿದ್ದನು. ಕಷ್ಟವಾದ ವಿಷಯವನ್ನು ಸುಲಭವಾಗಿ ವಿವರಿಸುವುದು, ಅದು ಮನಸ್ಸನ್ನು ಹೊಗುವಂತೆ ಒಂದು ಕತೆಯನ್ನು ಹೇಳುವುದು, ಅನೇಕ ಸಂದರ್ಭದಲ್ಲಿ ಅದರಲ್ಲಿ ಹಾಸ್ಯವನ್ನು ಬೆರೆಸುವುದು, ಇವನ ಉಪದೇಶದಲ್ಲಿ ಉದ್ದಕ್ಕೂ ಕಾಣುತ್ತಿರುತ್ತದೆ. ಸಾಮಾನ್ಯ ಜನದ ಅನುದಿನದ ಬಾಳುವೆಯಿಂದ ತಂದ ಅನೇಕ ಉಪಮಾನಗಳು ಈ ಉಪದೇಶಕ್ಕೆ ವಿಲಕ್ಷಣವಾದ ಕಳೆಯನ್ನು ಕೊಡುತ್ತವೆ. ಅನೇಕ ವೇಳೆ ಒಂದೇ ಭಾವವನ್ನೊಳಗೊಂಡ ಬೇರೆಬೇರೆ ಕತೆಯಿಂದ ಗುರು ಆ ಭಾವದ ಬೇರೆಬೇರೆ ಮುಖವನ್ನು ವ್ಯಕ್ತಪಡಿಸುವನು. ಜೀವನ ಒಂದು ಕನಸಿನಂತೆ, ಅದರ ಕಷ್ಟಸುಖಗಳಿಗೆ ಈ ದೃಷ್ಟಿಯಿಂದ ಸರಿಯಾದ ಬೆಲೆಯನ್ನು ಕೊಡಬೇಕು, ಎನ್ನುವ ಎರಡು ಕತೆಯಿಂದ ಈಕೌಶಲ ಸ್ಪಷ್ಟವಾಗುತ್ತದೆ. ದೇವರು ಸೌಖ್ಯದಲ್ಲಿ ಇಟ್ಟಿರುವವರಿಗೆ ಈ ಸುಖಕ್ಕೆ ಸೋಲಬಾರದೆಂದು ಉಪದೇಶಮಾಡುವುದಕ್ಕೆ ಈ ಕಥೆ. ಒಬ್ಬ ಸೌದೆ ಒಡೆಯುವವನು ನಿದ್ರಿಸುತ್ತಿದ್ದನು. ಅವನನ್ನು ಯಾರೋ ಎಬ್ಬಿಸಿದರು. 'ನಾನು ಒಂದು ರಾಜ್ಯದ ರಾಜನಾಗಿದ್ದೆ; ಚೆಲುವೆಯಾದ ಹೆಂಡತಿ ನಾಲ್ಕು ಜನ

ಮಕ್ಕಳು ಇದ್ದರು. ನನ್ನನ್ನು ಎಬ್ಬಿಸಿ ನನ್ನ ಸುಖವನ್ನು ಕೆಡಿಸಿದಿರಿ,' ಎಂದು ಅವನು ಅಂಗಲಾಚಿದನು. 'ಎಲ ನಿನ್ನ ಕನಸಿನ ರಾಜ್ಯದಿಂದ ಏನು ಪ್ರಯೋಜನ' ಎಂದರೆ ಅವನು, ಕನಸಿನ ರಾಜಪದವಿ ಈ ಸೌದೆ ಹೊಡೆಯುವ ಬಾಳಿನಂತೆಯೇ ನಿಜವಾಗಿತ್ತು, ಎಂದನು. ಸಂಸಾರದಲ್ಲಿ ಕಷ್ಟದಲ್ಲಿರುವವರು ಬಂದರೆ ಈ ಕಥೆ. ಒಬ್ಬ ಸಂಸಾರಿಯು ಒಬ್ಬನೇ ಮಗನು ತೀರಿ ಹೋದನು. ಮನೆಯವರೆಲ್ಲ ಗೋಳಾಡಿದರು. ಅವನು ಒಂದು ತೊಟ್ಟು ಕಣ್ಣೀರಿಕ್ಕಲಿಲ್ಲ. ಪಕ್ಕದಲ್ಲಿದ್ದವರು ಇದೇನಯ್ಯಾ ಎಂದರೆ ಅವನು, 'ನಿನ್ನೆ ರಾತ್ರಿ ಸ್ವಪ್ನದಲ್ಲಿ ನನಗೆ ಎಂಟು ಜನ ಗಂಡುಮಕ್ಕಳಿದ್ದಂತೆ, ಒಬ್ಬರಾದ ಮೇಲೆ ಒಬ್ಬರು ಅವರೆಲ್ಲ ತೀರಿಹೋದಂತೆ, ಕಂಡೆನು. ತೀರಿಹೋದ ಎಂಟು ಮಕ್ಕಳಿಗಾಗಿ ಅಳಲೆ, ಈ ಒಬ್ಬ ಮಗನಿಗಾಗಿ ಅಳಲೆ,' ಎಂದು ಕೇಳಿದನು. ಹೀಗೆಯೇ ಒಂದೇ ಉಪಮೆಯಿಂದ ಬೇರೆ ಬೇರೆಯ ಭಾವಗಳನ್ನು ವಿವರಿಸುವುದೂ ಇಲ್ಲಿ ಕಾಣುತ್ತದೆ. ಕಲ್ಲನ್ನು ಎಷ್ಟು ಕಾಲ ನೀರಿನಲ್ಲಿಟ್ಟರೂ ಅದು ಮೆದುವಾಗುವುದಿಲ್ಲ ಎಂಬ ಮಾತನ್ನು ಗುರು ಒಂದು ಸಲ, ಪ್ರಪಂಚಿ ಎಷ್ಟು ಉಪದೇಶ ಕೇಳಿದರೂ ಒಳ್ಳೆಯ ದಾರಿಗೆ ಬರುವುದಿಲ್ಲ ಎಂದು, ಇನ್ನೊಂದು ಸಲ, ಧೀರನು ಎಷ್ಟು ಕಾಲ ಕಷ್ಟದಲ್ಲಿ ಸಿಕ್ಕಿದರೂ ಎದೆಗೆಡುವುದಿಲ್ಲ ಎಂದು, ಹೇಳುವುದಕ್ಕೆ ಉಪಯೋಗಿಸುವನು. ಒಟ್ಟಿನಲ್ಲಿ ರಾಮಕೃಷ್ಣನ ಉಪದೇಶದ ಪದ್ಧತಿ ಪ್ರಪಂಚದಲ್ಲಿ ಪ್ರಸಿದ್ಧವಾಗಿರುವ ಬುದ್ಧ, ಕ್ರೀಸ್ತ, ಸಾಕ್ರಟೀಸರ ಪದ್ಧತಿಗಳಂತೆ ತಾನೂ ಒಂದು ವೈಯಕ್ತಿಕ ಮತ್ತು ವಿಲಕ್ಷಣ ಪದ್ಧತಿಯೆಂದು ಹೇಳಬೇಕು.

ಐದು ವರುಷ ಗುರು ನಡೆಸಿದ ಈ ಪ್ರವಚನದ ಸನ್ನಿವೇಶವನ್ನು ಚಿತ್ರಿಸಿಕೊಳ್ಳುವುದೇ ಒಂದು ಚೆನ್ನ. ದಕ್ಷಿಣೇಶ್ವರದ ದೇವಾಲಯ ನದಿಯ ದಡದಲ್ಲಿಯೇ ಇದೆ. ನದಿಯ ಕಡೆಗೆ ಹನ್ನೆರಡು ಶಿವಮಂದಿರ. ಒಂದು ಕೊನೆಗೆ ಪರಮಹಂಸನ ವಾಸದ ಕೋಣೆ. ಅದರಿಂದ ತೆರೆಯುವ ಒಂದು ಬಾಗಿಲಿಂದ ಒಂದು ಜಗಲಿಗೆ ಬರಬಹುದು. ಅಲ್ಲಿ ಕುಳಿತರೆ ಗಂಗೆಯ ವಿಶಾಲ ವಾಹಿನಿ ಎದುರಿಗೆ ಕಾಣುತ್ತದೆ. ಪರಮಹಂಸನು ಬೆಳಗಾಗ ಬೇಗನೆ ಎದ್ದು ಆಹ್ನಿಕಗಳನ್ನು ತೀರಿಸಿಕೊಂಡು ಕೋಣೆಯಲ್ಲಿ ಒಂದು ಕಡೆ ಧ್ಯಾನದಲ್ಲಿ ಕೂರುವನು. ದಿನ ಆರಂಭಿಸಿತೆಂದು ಪಂಚವಟಿಯ ವನದಲ್ಲಿ ಹಕ್ಕಿಗಳು

ಹಾಡುವುವು. ತೋಟದಲ್ಲಿ ದೇವರ ಪೂಜೆಗಾಗಿ ಬಣ್ಣ ಬಣ್ಣದ ಹೂ ಅರಳು ವುವು. ಇತ್ತ ದೇವಾಲಯದಲ್ಲಿ ಭವತಾರಿಣಿಯ ಪ್ರಾತಃಕಾಲದ ಸೇವೆಯ ಕಹಳೆ ಶಂಖದ ತೂರ್ಯನಾದ ಏಳುವುದು. ಅರ್ಚಕರು ಶಿವ, ಕಾಳಿ, ರಾಧಾಮಾಧವರ ಮಂದಿರಗಳಲ್ಲಿ ಹೇಳುತ್ತಿರುವ ಮಂತ್ರಗಳ ಸ್ವರ ಗಾಳಿ ಯಲ್ಲಿ ಹರಡುವುದು. ಗಂಗೆಯ ಪವಿತ್ರ ಸಲಿಲದಲ್ಲಿ ಸ್ನಾನಮಾಡಲು ಹೋಗುವ ಜನ, ಸ್ನಾನಮಾಡಿ ಬರುವ ಜನ, ಮಂದಿರದ ಪ್ರಾಕಾರದ ಮಂಟಪಗಳಲ್ಲಿ ಭಗವದ್ಧ್ಯಾನದಲ್ಲಿ ಕುಳಿತಿರುವ ಬಹು ಪಂಥದ ಸಾಧು ಸಂತರ ಸಮೂಹ, ದೇವಾಲಯದಿಂದ ಮೇಲಕ್ಕೆ ಏಳುವ ಧೂಪದ ಸೌರಭ ದಂತೆ ಇಷ್ಟು ಹೃದಯಗಳಿಂದ ಮೇಲೆ ಏರುವ ಭಕ್ತಿಯ ಭಾವ. ದಿನ ಸ್ವಲ್ಪ ಮುಂದರಿಯಲು, ಒಬ್ಬೊಬ್ಬರಾಗಿ, ಮೂವರು ಐವರಾಗಿ, ಗುಂಪು ಗುಂಪಾಗಿ. ಗುರುವಿನ ದರ್ಶನಕ್ಕೆ ಬರುವ ಕಲಿಕತೆಯ ಮಂದಿ. ಗುರು ಧ್ಯಾನದಲ್ಲಿ ಮಗ್ನನಾಗಿದ್ದರೆ ಬಂದವರು ಶಬ್ದಮಾಡದೆ ಸುಮ್ಮನೆ ಕುಳಿತಿರುವರು; ಎಚ್ಚತ್ತಾಗ ಪ್ರಣಾಮಮಾಡಿ ತಂದ ಹಣ್ಣನ್ನೋ ಹಂಪಲನ್ನೋ ಒಪ್ಪಿಸುವರು. ಗುರು ಅವರಿಗೆ ಆಶೀರ್ವಾದಮಾಡುವನು; ವಿಶ್ವಾಸದಿಂದ ಎರಡು ಮಾತನ್ನು ಹೇಳುವನು. ಅವರು ಏನಾದರೂ ಕೇಳಿದರೆ ಉತ್ತರ ಹೇಳುವನು. ಪ್ರಾಸಂಗಿಕವಾಗಿ ಅವಶ್ಯಕವಾದಾಗ ತನ್ನ ಬಾಲ್ಯದ ಕಥೆಯನ್ನು ಹೇಳುವನು. ತೋತಾಪುರಿ ಎಷ್ಟು ದೊಡ್ಡವನೆಂದೋ ಎಂಥ ತಪ್ಪುಮಾಡಿದನೆಂದೋ, ಭೈರವಿ ಬ್ರಾಹ್ಮಣಿ ಎಷ್ಟು ಬಲ್ಲವಳು ಎಷ್ಟು ದಕ್ಷಳು ಎಂದೋ, ಸಾಧನದ ದಿನದಲ್ಲಿ ತನ್ನ ಮೈಮೇಲೆ ಅಳಿಲು ಹಲ್ಲಿ ಓಡಿಯಾಡುತ್ತಿದ್ದವಂತೆ ಆದರೆ ಅದು ತನಗೆ ತಿಳಿಯುತ್ತಿರಲಿಲ್ಲ ಎಂದೋ, ಸಂಗತಿಯನ್ನು ವಿವರಿಸುವನು. ಶಿಷ್ಯರು ಬರುವರು. ಅವರಲ್ಲಿ ಕೆಲವರಾದರೂ ವಯಸ್ಸಿನಲ್ಲಿ ಇವನಿಗಿಂತ ಹಿರಿಯರು. ಪರಮಹಂಸನು ಮಗುವಿನಂತೆ ಅವರನ್ನು ನನಗೆ ತಿನ್ನುವುದಕ್ಕೆ ಏನು ತಂದಿದ್ದೀರಿ ಎನ್ನುವನು. ಯಾರಾದರೂ ಇವನಿಗೆ ಕೊಡುವುದಕ್ಕೆಂದು ಹಣ ಕೊಟ್ಟು ಹೆಚ್ಚಿನ ಪದಾರ್ಥವನ್ನು ತಂದಿದ್ದರೆ, ನೀವು ಇದನ್ನೆಲ್ಲ ಮಾಡ ಬೇಡಿ, ನನಗೆ ಕೊಬರಿ ಬೆಲ್ಲದ ಹೂರಣವೆಂದರೆ ಬಹಳ ಆಸೆ, ಸ್ವಲ್ಪ ಬೆಲ್ಲ ಸ್ವಲ್ಪ ಕೊಬರಿ ಜಜ್ಜಿ ತಂದರೆ ಸಾಕು, ಎನ್ನುವನು. ಅವರು ತಂದದ್ದನ್ನು

ತಾನು ಸ್ವಲ್ಪ ತೆಗೆದುಕೊಂಡು ಸುತ್ತ ಕುಳಿತವರಿಗೆಲ್ಲ ಹಂಚಿಕೊಡುವನು. ಹೀಗೆ ಎಲ್ಲರೊಂದಿಗೆ ಮಾತನಾಡುತ್ತಿರುವಲ್ಲಿ ಮಧ್ಯಾಹ್ನವಾಯಿತೆಂದರೆ ಮತ್ತೆ ಮಂದಿರಗಳ ಮಂಗಳವಾದ್ಯಗಳ ಧ್ವಾನವೂ ಪೂಜೆಯ ಮಂತ್ರಗಳ ಸ್ವರವೂ ಕೇಳಿಬರುವುವು. ಹೊತ್ತಾಯಿತೆಂದು ತಿಳಿದು, ಬಂದವರು ಎದ್ದು ಹೊರಡುವರು. ಪರಮಹಂಸನು ಸ್ವಲ್ಪ ಆಹಾರವನ್ನು ತೆಗೆದುಕೊಂಡು ಒಂದೆರಡು ಗಳಿಗೆ ವಿಶ್ರಮಿಸಿಕೊಳ್ಳುವನು. ಆ ವೇಳೆಗೆ ಮತ್ತೆ ಕಲಿಕತೆ ಯಿಂದ ಬರುವ ಜನ; ಮತ್ತೆ ಉಪದೇಶ; ಮರಳಿ ಪ್ರಸಂಗ. ಪರಮ ಹಂಸನು ತಂದೆಯೊಂದಿಗೋ ತಾಯೊಂದಿಗೋ ಅಣ್ಣನೊಂದಿಗೋ ಬಂದಿರುವ ಬಾಲಕನ ಜೊತೆಯಲ್ಲಿ ಆಟವಾಡುವನು. ಅವನಿಗೆ ತಿಂಡಿಯನ್ನು ಕೊಡುವುದಕ್ಕೆ ಹೋಗಿ ಬೆಳ್ಳಿಸಿ ಬಚ್ಚಿಟ್ಟುಕೊಳ್ಳುವನು. ಮಗು ಉತ್ಸಾಹ ದಿಂದ ಆಟದಲ್ಲಿ ಸೇರಿದರೆ ಬಾಲಕೃಷ್ಣನನ್ನೋ ರಾಮಚಂದ್ರನನ್ನೋ ಭಾವಿಸಿ ಪರಮಹಂಸನು ಭಾವಸಮಾಧಿಯಲ್ಲಿ ಮಗ್ನನಾಗುವನು; ನಿರ್ವಿಕಲ್ಪ ಸಮಾಧಿಯನ್ನು ಮುಟ್ಟುವನು. ಎಷ್ಟೋ ಹೊತ್ತಾದಮೇಲೆ ಎಚ್ಚರಗೊಳ್ಳುವನು. ಮತ್ತೆ ಉಪದೇಶ, ಮತ್ತೆ ಪ್ರಸಂಗ. ಸಂಜೆಯಾದರೆ ಆಲಯದ ನಾಲ್ಕು ಕಡೆಯೂ ದೀಪಗಳನ್ನು ಹಚ್ಚುವರು. ಸ್ವಲ್ಪ ಹೊತ್ತಿಗೆ ಮಂದಿರಗಳಲ್ಲಿ ಸಂಜೆಯ ಮಂಗಳಾರತಿಯ ಕಾರ್ಯಕಲಾಪ. ಬಂದವರು ಎದ್ದು ಹೊರಡುವರು. ಗುರು ವಿಶ್ರಮಿಸಿಕೊಳ್ಳುವನು. ಮತ್ತೆ ಉದಯ; ಮತ್ತೆ ಹಕ್ಕಿಗಳ ಗಾನ. ಮತ್ತೆ ಪುಷ್ಪ ವಿಕಾಸ; ಮತ್ತೆ ಶಿಷ್ಯಾಗಮನ. ಮತ್ತೆ ಮಂದಿರದ ಪೂಜಾಕ್ರಮ. ಹಾಗೆಯೇ ಹೂವು, ಹಾಗೆಯೇ ಹಣ್ಣು, ದೀಪಾರತಿ, ಮಂಗಳವಾದ್ಯ. ಹಾಗೆಯೇ ಪ್ರಸಂಗ, ಹಾಗೆಯೇ ಉಪದೇಶ.

ಶಿಷ್ಯರ ಮನೆಗೆ ಹೋಗುವುದಕ್ಕಾಗಿ, ಚೈತನ್ಯ ಲೀಲಾ ಮುಂತಾದ ಮತವಿಷಯಕವಾದ ನಾಟಕವನ್ನು ನೋಡುವುದಕ್ಕಾಗಿ, ಕಲಿಕತೆಗೆ ಹೋದ ಸಂದರ್ಭಗಳಲ್ಲಿ ಹೊರತು ಪರಮಹಂಸನ ದಿನಚರಿ ಐದು ವರುಷದ ದಿನ ಈ ರೀತಿ ನಡೆಯಿತು. ಉಪದೇಶ ಆರಂಭವಾಗುವ ವೇಳೆಗೇ ಇವನ ದೇಹ ತೀಕ್ಷ್ಣ ಸಾಧನದಿಂದ ಜರ್ಝರಿತವಾಗಿ ಹೋಗಿದ್ದಿತು. ಐದುವರುಷದ ಕಾಲ ಒಂದು ದಿನ ತಪ್ಪದೆ ವಿಶ್ರಾಂತಿಯೆನ್ನುವುದಿಲ್ಲದೆ ಉಪ ದೇಶ ಮಾಡುವುದರಲ್ಲಿ ಅದು ಇನ್ನಷ್ಟು ಕ್ಷೀಣಿಸಿತು. ಮಾತನಾಡಿ ಮಾತ

ನಾಡಿ ಗಂಟಲ ಒಳಭಾಗದಲ್ಲಿ ಒಂದು ರೀತಿಯ ಪ್ರಕೋಪ ಉಂಟಾಯಿತು. ಇದರ ಬೇನೆಯಿಂದ ಪರಮಹಂಸನು ಕುಗ್ಗಿಹೋದನು. ವೈದ್ಯರನ್ನು ಕರೆಯಿಸಿ ನೋಡಲು ಅದು ತುಂಬ ಮಾತನಾಡುವವರಿಗೆ ಬರುವ ಒಂದು ಕಂಠ ವ್ರಣವೆಂದು ನಿರ್ಧರವಾಯಿತು. ಉಪದೇಶದ ಕಾರ್ಯದಿಂದ ಸ್ವಲ್ಪ ವಿರಾಮ ತೆಗೆದುಕೊಳ್ಳಬೇಕೆಂದು ವೈದ್ಯರು ಹೇಳಿದರು. ಪರಮಹಂಸನು, 'ಜನ ಬರುವುದು ಹೆಚ್ಚಿ, ನಾನು ಹೇಳುವುದು ಹೆಚ್ಚಿ, ದೇಹದ ಮಾತು ತಾಯ ಇಷ್ಟದಂತೆ ಆಗಲಿ, ಮಾಡುವ ಉಪದೇಶವನ್ನು ನಾನು ಮಾಡು ತ್ತೇನೆ,' ಎಂದು ಹಾಸಿಗೆಯಲ್ಲಿ ಮಲಗಿಯೇ ಬಂದವರೊಂದಿಗೆ ಮಾತ ನಾಡುವನು. ಕೊನೆಕೊನೆಗೆ ಅವನಿಗೆ ಈ ಉಪದೇಶದ ಕೆಲಸ ಸಾಕೆಂದೂ ಎನ್ನಿಸಿತು. ಅವನು ಕಾಳಿಕಾಮಾತೆಯನ್ನು ಕುರಿತು, 'ಈ ಜನ ಏನು ಹೀಗೆ ಬರುತ್ತಿದ್ದಾರೆ? ಯಾರು ಇವರಿಗೆ ಹೇಳಿದ್ದನ್ನೇ ಹೇಳುವವರು? ನೀನೇ ಹೇಳು ಇನ್ನುಮೇಲೆ. ನಾನು ಸಿಡಿದುಹೋದ ಮದಳೆಯಂತಾಗಿದೇನೆ,' ಎಂದನಂತೆ.

ಈ ವೇಳೆಗೆ ನರೇಂದ್ರ ರಾಖಾಲ ಕಾಳೀಪಾದ ನಿರಂಜನ ಶರಚ್ಚಂದ್ರ ಬಾಬೂರಾಮ ಪ್ರಮುಖರಾದ ಶಿಷ್ಯರು ಗುರುವಿನ ಸಮೀಪದ ಅನುವರ್ತಿ ಗಳಾಗಿದ್ದರು. ಇವರಲ್ಲಿ ನರೇಂದ್ರನು ಗುರುವಿಗೆ ಬಹು ಪ್ರಿಯನಾಗಿ ಶಿಷ್ಯ ವರ್ಗದ ನಾಯಕನಾಗಿದ್ದನು. ಕಂಠದಲ್ಲಿ ವ್ರಣ ತಲೆದೋರಿದಾಗ ಗುರುವಿನ ಜೀವವನ್ನು ಕುರಿತು ಶಿಷ್ಯರಿಗೆ ಭಯ ತಟ್ಟಿತು. ವೈದ್ಯರು ಬಂದು ಹೋಗು ವುದಕ್ಕೆ, ಚಿಕಿತ್ಸೆ ಅನುಪಾನ ಸೇವೆಗಳಿಗೆ, ದಕ್ಷಿಣೇಶ್ವರ ದೂರವೆಂದು ಕಂಡು ಬಂದದರಿಂದ ಶಿಷ್ಯರೆಲ್ಲ ಸೇರಿ ಶ್ಯಾಮಪುಷ್ಕರದಲ್ಲಿ ಒಂದು ಮನೆಯನ್ನು ಗೊತ್ತುಮಾಡಿದರು. ಅದ್ರರಲ್ಲಿಯೇ ಸಣ್ಣ ಒಂದು ಕೋಣೆಯಲ್ಲಿ ಶಾರದಾ ಮಣಿದೇವಿ ಇರುತ್ತ ಪರಮಹಂಸನಿಗೆ ಪಥ್ಯದ ಆಹಾರವನ್ನು ಮಾಡಿ ಕೊಡುತ್ತಿದ್ದಳು. ಶಿಷ್ಯರು ಇಬ್ಬರು ಮೂವರು ಸರತಿಮಾಡಿಕೊಂಡು ಗುರುವಿನ ಪಕ್ಕದಲ್ಲಿ ಕುಳಿತು ಅವನ ಸೇವೆ ಮಾಡುತ್ತಿದ್ದರು. ಹತ್ತಿರ ಹತ್ತಿರ ಒಂದು ವರುಷ ಹೀಗೆ ನಡೆಯಿತು. ರೋಗ ಗುಣಮುಖವಾಗಲಿಲ್ಲ. ಶ್ಯಾಮಪುಷ್ಕರದ ಆ ಮನೆ ಸಣ್ಣದು. ರೋಗವಂತೂ ಗುಣವಾಗಲಿಲ್ಲ, ಒಳ್ಳೆಯ ಗಾಳಿಯಿಲ್ಲದೆ ಇಲ್ಲಿದ್ದು ಏನು ಪ್ರಯೋಜನ, ಸ್ವಲ್ಪ ದೊಡ್ಡದಾಗಿ

ಶುವ ಮನೆಯೊಂದನ್ನು ಬೇರೆ ಎಲ್ಲಾದರೂ ನೋಡಿ, ಎಂದು ವೈದ್ಯರು ಹೇಳಿದರು. ಶಿಷ್ಯರು ಕಾಶೀಪುರದ ಉದ್ಯಾನ ಎಂಬ ಒಂದು ಮನೆಯನ್ನು ಹುಡುಕಿ ಗುರುವನ್ನು ಅಲ್ಲಿಗೆ ಕರೆದುಕೊಂಡುಹೋದರು. ರೋಗ ವಾಸಿ ಯಾಗಲೇ ಇಲ್ಲ. ಗುರುವಿಗೆ ಬರಬರುತ್ತ ಶಕ್ತಿ ಕುಗ್ಗಿತು. ಗಂಟಲೊಳಗೆ ಆಹಾರ ಇಳಿಯಲಿಲ್ಲ; ಔಷಧಿ ಇಳಿಯಲಿಲ್ಲ. ಗುರು ಇಷ್ಟರಲ್ಲೇ ದೇಹ ವನ್ನು ನೀಗುವನೆಂದೇ ಶಿಷ್ಯರಿಗೆ ತೋರಿತು. ಇದರಿಂದ ಅವರು ಭೀತ ರಾದರು. ಆದರೆ ಒಂದು ರೀತಿಯಿಂದ ಆ ಭಯ ಅವರನ್ನು ಒಟ್ಟುಗೂಡಿ ಸಿತು, ಸೋದರರಂತೆ ಮಾಡಿತು. ತಂದೆ ಕಾಯಿಲೆ ಮಲಗಿದಾನೆ, ತಾಯಿ ಒಂದು ಕಡೆ ಕುಳಿತು ಅವನ ದೇಹಕ್ಕೆ ತನ್ನಿಂದಾಗಬಹುದಾದ ಸೇವೆಯನ್ನು ಮಾಡುತ್ತಿದಾಳೆ, ನಾವು ಸೋದರರು, ನಮ್ಮ ಕುಲ ಒಂದು, ಎಂಬ ಭಾವನೆ ಇವರೆಲ್ಲರ ಮನಸ್ಸಿನಲ್ಲಿ ಮೂಡಿತು. ಗುರು ಕೂಡ ಇವರೆಲ್ಲ ತನಗೆ ಸೇರಿದವ ರೆಂಬ ತನ್ನ ಭಾವನೆಯನ್ನು ಬಹು ರೀತಿಯಲ್ಲಿ ಸ್ಪಷ್ಟಪಡಿಸಿದನು; ನರೇಂದ್ರನನ್ನು ತನ್ನ ಈ ಧರ್ಮಕುಮಾರರ ನಾಯಕನಾಗಿ ಗಣಿಸುತ್ತಿರು ವುದನ್ನು ಪ್ರಕಟಮಾಡಿದನು.

ಒಂದು ದಿನ ಶಿಷ್ಯರಲ್ಲಿ ಹಲವರು ತೋಟದಲ್ಲಿ ಕುಳಿತಿರುವ ವೇಳೆ ಗುರು ಹಾಸಿಗೆಯನ್ನು ಬಿಟ್ಟು ಅರ್ಧ ಸಮಾಧಿಯ ಅವಸ್ಥೆಯಲ್ಲಿ ಅವರಿರುವ ಸ್ಥಳಕ್ಕೆ ಬಂದನು. ಅಲ್ಲಿದ್ದ ಶಿಷ್ಯರೆಲ್ಲ ಚಕಿತರಾಗಿ ಎದ್ದು ಅವನ ಸ್ಥಿತಿಯನ್ನು ನೋಡಿ ಒಬ್ಬೊಬ್ಬರಾಗಿ ಅವನ ಕಾಲಿಗೆ ಬಿದ್ದರು. ಗುರು ಎಲ್ಲರಿಗೂ ಆಶೀರ್ವಾದಮಾಡಿದನು; ಒಬ್ಬನ ತಲೆಯನ್ನು ಒಬ್ಬನ ಎದೆಯನ್ನು ಒಬ್ಬನ ಮುಖವನ್ನು ಮುಟ್ಟಿ, ಅವನವನ ಸಂಸ್ಕಾರ ಚೆನ್ನಾಗುವಂತೆ ಅನುಗ್ರಹಿಸಿ ದನು. ಇಷ್ಟು ಶ್ರಮದಿಂದ ಅವನ ದೇಹ ಮತ್ತಷ್ಟು ಸೋತಿತು. ಶಿಷ್ಯರು ಅವನನ್ನು ಕರೆದುಕೊಂಡುಹೋಗಿ ಹಾಸಿಗೆಯಲ್ಲಿ ಬಿಟ್ಟರು. ಪರಮಹಂಸನು ಆ ವೇಳೆಗೆ ಬಹು ದಿವಸ ಸ್ವಲ್ಪ ಹಾಲು ನೀರನ್ನಾದರೂ ತೆಗೆದುಕೊಂಡಿರ ಲಿಲ್ಲ. ಆಗ ಸ್ವಲ್ಪ ಹಾಲನ್ನು ತರಿಸಿಕೊಂಡು ಕುಡಿದನು. ಅದು ಒಳಕ್ಕೆ ಇಳಿ ಯಲಿಲ್ಲ, ಶ್ರಮವಾಯಿತು. ಪರಮಹಂಸನು ಕಾಳೀ ಕಾಳೀ ಕಾಳೀ ಎನ್ನುತ್ತ ಒಂದು ಕ್ಷಣ ಬಿಟ್ಟು ಸಮಾಧಿಯನ್ನು ಹೊಕ್ಕನು. ಶಿಷ್ಯರು ಮೊದಲಲ್ಲಿ ಅದು ಎಂದಿನಂತಿನ ಸಮಾಧಿ ಎಂದು ಭಾವಿಸಿದರು. ಆದರೆ ಸಂಜೆಯ ವೇಳೆಗೆ ಗುರು ಜೀವನ ಯಾತ್ರೆಯನ್ನು ಮುಗಿಸುತ್ತಿರುವನೆಂದು ಅವರಿಗೆ

ಕಂಡಿತು. ಆ ಸ್ಥಿತಿಯಿಂದಲೇ ಗುರು ಮಹಾಸಮಾಧಿಯನ್ನೈದಿದನು. ರಾಮಕೃಷ್ಣನ ಆತ್ಮ ಬ್ರಹ್ಮದೊಂದಿಗೆ ಬೆರೆಯಿತು.

ವೈದ್ಯರು ಬಂದು ನೋಡಿದರು; ಜೀವ ದೇಹವನ್ನು ಬಿಟ್ಟಿದೆ ಎಂದು ಹೇಳಿದರು. ವರ್ತಮಾನ ತಿಳಿದು ಭಕ್ತಮಂಡಲಿ ಸಾವಿರ ಸಾವಿರದಲ್ಲಿ ಬಂದು ಕಳೇಬರವನ್ನು ದರ್ಶನಮಾಡಿತು. ಭಕ್ತರೂ ಶಿಷ್ಯರೂ ಸೇರಿ ರಾಮಕೃಷ್ಣನ ದಾಗಿದ್ದ ಆ ದೇಹಕ್ಕೆ ಸಂಸ್ಕಾರಮಾಡಿದರು; ದಹನದ ಸ್ಥಳದಲ್ಲಿ ಒಂದು ಮಂಟಪವನ್ನು ಕಟ್ಟಿದರು. ಕಾಮಾರ್‌ಪುಕ್ಕರದಲ್ಲಿ ಐವತ್ತು ವರುಷದ ಹಿಂದೆ ಹುಟ್ಟಿದ ಬ್ರಾಹ್ಮಣ ಶಿಶು ತನ್ನ ಗದಾಧರನಾಮಕ ದೇಹದ ಚರಿತ್ರೆಯನ್ನು ಅಲ್ಲಿ ಮುಗಿಸಿತು.

ಆದರೆ ಅಂದು ಅಲ್ಲಿ ಮುಗಿದದ್ದು ಗದಾಧರನ ದೇಹದ ಚರಿತ್ರೆ ಮಾತ್ರ. ಯಾವುದೋ ಒಂದು ಹಳ್ಳಿಯಲ್ಲಿ ಒಂದು ಬಡ ಸಂಸಾರದಲ್ಲಿ ಜನ್ಮವೆತ್ತಿದ ಆ ಜೀವ ಆ ಐವತ್ತು ವರುಷ ನಡೆಯಿಸಿದ ಬಾಳುವೆಯಿಂದ ಮಾನವ ಕುಲ ನಿರ್ಮಿಸುತ್ತಿರುವ ಧರ್ಮದೇವಾಲಯದ ಒಂದು ನಂದಾದೀಪವಾಯಿತು. ಬುದ್ಧ ಕ್ರಿಸ್ತ ಮಹಮ್ಮದ, ರಾಮ ಕೃಷ್ಣ ಮಾರ್ಕಸ್ ಆರೀಲಿಯಸ್, ವಸಿಷ್ಠ ಝೂರತೂಷ್ಟ್ರ ಸಾಕ್ರಟೀಸ್ ಎಪಿಕ್ಟಿಟಸ್, ನಮ್ಮಾಳ್ವಾರ್ ನಂದನಾರ್, ಶಂಕರ ರಾಮಾನುಜ ಮಧ್ವ ಬಸವ, ನಾನಕ ಚೈತನ್ಯ, ಇವರ ದೈವೀಸಂಸಾರದ ಒಬ್ಬ ಶ್ರೇಷ್ಠಪುರುಷನೆನ್ನಿಸಿಕೊಂಡಿತು. ತಾನು ಇಂಥ ಮಹಾತ್ಮನೆಂದೂ ತನ್ನಿಂದ ಪ್ರಪಂಚಕ್ಕೆ ಆಗಬೇಕಾದ ಮಂಗಳ ಇದೆಯೆಂದೂ ರಾಮಕೃಷ್ಣನು ಬಾಯಿಬಿಟ್ಟು ಹೇಳದಿದ್ದರೂ ಶಿಷ್ಯರಿಗೆ ಸ್ಪಷ್ಟಪಡಿಸಿದ್ದನು; ಬಾಯಿಬಿಟ್ಟು ಹೇಳಿದನೆಂದರೂ ತಪ್ಪಿಲ್ಲ. ಕಾಶೀಪುರದ ಮನೆಯಲ್ಲಿ ಇವನು ರುಗ್ಣಶಯ್ಯೆಯಲ್ಲಿ ಇರುವಾಗ ಒಂದು ದಿನ ನರೇಂದ್ರನು ಹತ್ತಿರ ಕುಳಿತು, ಈತನೇನು ರಾಮನಂತೆ ಕೃಷ್ಣನಂತೆ ಅವತಾರವೊ. ಇಲ್ಲವೆ ನಮ್ಮವರು ಹೇಳುವ ಈ ಮಾತು ಅಭಿಮಾನದ ಮಾತೋ, ಎಂದುಕೊಂಡನಂತೆ. ಉತ್ತರ ಕ್ಷಣದಲ್ಲಿ ಪರಮಹಂಸನು ಅರ್ಧ ಸಮಾಧಿ ಸ್ಥಿತಿಯಲ್ಲಿಯೇ ಇರುತ್ತ, ಅಂದು ರಾಮನಾಗಿ ಕೃಷ್ಣನಾಗಿ ಇದ್ದವನೇ ಇಂದು ಇಲ್ಲಿ ರಾಮಕೃಷ್ಣನಾಗಿದಾನೆ ಎಂದನಂತೆ. ತನ್ನ ಅಂತರ್ಯದಲ್ಲಿ ತೋರಿದ ಪ್ರಶ್ನೆಗೆ ಹೀಗೆ ಬಂದ ಉತ್ತರವನ್ನು ಕೇಳಿ ನರೇಂದ್ರನಿಗೆ ಆಶ್ಚರ್ಯವಾಯಿತು;

ಸಂದೇಹ ಹರಿಯಿತು. ಹಾಗೆಯೇ ಕೊನೆ ಕೊನೆಗೆ ಒಂದು ದಿನ ಪರಮ ಹಂಸನು, 'ಈ ಜೀವ ಈ ದೇಹದಲ್ಲಿ ಇನ್ನಷ್ಟು ದಿವಸ ಇದ್ದಿದ್ದರೆ ಇನ್ನೂ ಬಹು ಜನದ ಕ್ಷೇಮವನ್ನು ಸಾಧಿಸುತ್ತಿತ್ತು; ಆದರೆ ತಾಯಿಗೆ ಅದು ಮನಸ್ಸಿಗೆ ಬರಲಿಲ್ಲ,' ಎಂದನಂತೆ. ದೇವರು ಒಬ್ಬನೇ ಗುರು ಎಂದು ಉಪ ದೇಶಿಸುತ್ತಿದ್ದರೂ, ದೇವರಿಂದ ಆದಿಷ್ಟನಾದವನು ಗುರು ಎಂದೂ ಉಪ ಗುರುಗಳು ಅನೇಕರಿರಬಹುದು ಎಂದೂ ಪರಮಹಂಸನು ಹೇಳುತ್ತಿದ್ದನು; ತಾನು ಅಂಥ ಆದಿಷ್ಟಪುರುಷನೆಂದು ತನ್ನ ನಡತೆಯಿಂದ ತೋರಿಸುತ್ತಿದ್ದನು. ತನ್ನಲ್ಲಿ ನಂಬಿಕೆಯನ್ನಿಟ್ಟು ಮನೆ ಮಠವನ್ನು ಬಿಟ್ಟು ಬಳಿಸಾರಿದ ತರುಣರ ವಿಷಯದಲ್ಲಿ ಇವನು ಪುತ್ರವಾತ್ಸಲ್ಯದಿಂದ ನಡೆದುಕೊಂಡನು; ಅವರಲ್ಲಿ ಪ್ರಮುಖನಾದ ನರೇಂದ್ರನಿಗೆ ಒಂದು ಸಲ, 'ನಾನು ಹೊರಟುಹೋದ ಮೇಲೆ ಈ ಹುಡುಗರನ್ನು ನೋಡಿಕೊ,' ಎಂದನು; ತಾನು ಹೋಗುತ್ತ ಅವರ ಮನಸ್ಸಿನಲ್ಲಿ ತನ್ನ ಉಪದೇಶವನ್ನು ಜನರಲ್ಲಿ ಹರಡಬೇಕೆಂಬ ಪ್ರಬಲವಾದ ಆಸೆಯನ್ನು ಬಿತ್ತಿ ಮರೆಯಾದನು.

ಪರಮಹಂಸನ ಕೊನೆಕೊನೆಯ ದಿನಗಳ ಕತೆಯನ್ನು ನೋಡಿದರೆ ತಾನು ಆ ದೇಹದಲ್ಲಿದ್ದು ಮಾಡಬೇಕೆಂದು ನಿಯಮಿತವಾಗಿದ್ದ ಕೆಲಸ ಮುಗಿಯಿ ತೆಂದೂ ಅವನು ಯೋಚಿಸಿದಂತೆ ಕಾಣುತ್ತದೆ. ವ್ಯಾಧಿಯಲ್ಲಿ ದುಗುಡ ಎಷ್ಟು ಹೆಚ್ಚಿದರೂ ತಾನು ಮಾತ್ರ ಹರ್ಷದಿಂದಿದ್ದುಬಿಟ್ಟು, 'ದೇಹವೂ ರೋಗವೂ ಒಂದನ್ನೊಂದು ವಿಚಾರಿಸಿಕೊಳ್ಳಲಿ, ನೀನು ಮಾತ್ರ ಆನಂದ ವನ್ನು ಬಿಡಬೇಡ, ಓ ನನ್ನ ಮನಸ್ಸೇ,' ಎಂದು ಹಾಡುತ್ತ ಅವನು ಬೇನೆ ಯನ್ನು ಸಹಿಸಿದನು. ಒಂದು ಸಲ ನೋವು ಬಹಳ ಹೆಚ್ಚಾದ ವೇಳೆ ತರ್ಕ ಚೂಡಾಮಣಿ ಶಶಧರನು, 'ನಿಮ್ಮಂಥ ಯೋಗಿಗೆ ಈ ಬೇನೆ ಏನು ವಿಷಯ, ವಾಸಿಯಾಗಲೆಂದು ನೀವು ಅಲ್ಲಿಗೆ ಮನಸ್ಸನ್ನು ತಿರುಗಿಸಿದರೆ ವಾಸಿಯಾಗು ತ್ತದೆ, ಹಾಗೆ ಮಾಡಿ,' ಎಂದನು. ರಾಮಕೃಷ್ಣನು, 'ನಿನ್ನ ಮಾತು ನಿಜ, ಆದರೆ ನಾನು ಮನಸ್ಸನ್ನು ದೇವರಿಗೆ ಕೊಟ್ಟು ಬಹು ದಿನವಾಯಿತು, ಹುಣ್ಣನ್ನು ವಾಸಿಮಾಡಿಕೊಳ್ಳುವುದಕ್ಕೋಸ್ಕರ ಅದನ್ನು ಹಿಂದಕ್ಕೆ ತೆಗೆದು ಕೊಳ್ಳಲಾರೆನು,' ಎಂದನು. ಬೇನೆ ಹೆಚ್ಚಾಯಿತು; ಗಂಟಲಲ್ಲಿ ಹಾಲು ಇಳಿಯುವುದು ಕಷ್ಟವಾಯಿತು. ಮನಸ್ಸನ್ನು ಹಿಂದಕ್ಕೆ ಸೆಳೆದು ಹುಣ್ಣನ್ನು

ವಾಸಿಮಾಡಿಕೊಳ್ಳದಿದ್ದರೆ ಹೋಗಲಿ, ವಾಸಿಮಾಡೆಂದು ಮಾತೆಯನ್ನು ಬೇಡಿಕೊಳ್ಳಿ, ಎಂದು ಶಿಷ್ಯರು ಹೇಳಿದರು. ಪರಮಹಂಸನು, 'ವಾಸಿ ಮಾಡೆಂದು ಬೇಡಿದರೆ ತಾಯಿ ವಾಸಿಮಾಡುವಳು. ಆದರೆ ಸಮಾಧಿಯಿಂದ ಅವಳ ಸನ್ನಿಧಿಯನ್ನು ಮುಟ್ಟಿದ ವೇಳೆ ಈ ಅಲ್ಪ ವಿಷಯ ನನಗೆ ತೋರುವು ದಿಲ್ಲ,' ಎಂದನು. 'ಸ್ವಲ್ಪ ಹಾಲು ಕುಡಿಯುವಂತೆ ಶಕ್ತಿಯನ್ನು ಪಡೆದು ಕೊಳ್ಳಿ,' ಎಂದು ಶಿಷ್ಯರು ಹೇಳಿದರು. ಗುರು, 'ಇಂಥ ಅಲ್ಪ ವಿಷಯವನ್ನು ನಾನು ಕೇಳಲಾರೆ,' ಎಂದನು. ಇವರು ಒತ್ತಾಯಪಡಿಸಲು ಒಂದು ದಿನ 'ಆದರೆ ಕೇಳುತ್ತೇನೆ' ಎಂದನು. ಮಾರನೆಯ ದಿನ ಕೇಳಿದಿರಾ ಎನ್ನಲು, 'ಕೇಳಿದೆ. ಈ ಒಂದು ಗಂಟಲಲ್ಲಿ ಹಾಲು ಕುಡಿಯಲಾಗಲಿಲ್ಲ ಹೊರತಾಗಿ ಎಷ್ಟು ಸಾವಿರ ಗಂಟಲಲ್ಲಿ ಕುಡಿಯುತ್ತಿದೀಯೆ ನೋಡು ಎಂದು ತಾಯಿ ಹೇಳಿದಳು,' ಎಂದನು. ಪರಮಹಂಸನಿಗೆ ಈ ವೇಳೆಗೆ ಸಮಾಧಿಗೆ ಹೋಗ ದೆಯೇ ಅದ್ವೈತವು ಪೂರ್ಣ ಅನುಭವವಾಗಿ ಸಿದ್ಧಿಸಿದ್ದಿತು. ಪ್ರಪಂಚವೆಲ್ಲ ತನಗೆ ಒಂದು ತತ್ವವಾಗಿ ಕಾಣುತ್ತಿದೆಯೆಂದೂ ಮನೆ ಮಠ ಜನ ಜೀವ ಎಲ್ಲ ಮೇಣದಲ್ಲಿ ಮಾಡಿದ ಗೊಂಬೆಗಳಂತೆ ಆ ಒಂದು ತತ್ವದಿಂದ ರಚಿಸಿದ ವಸ್ತು ಗಳಾಗಿ ಕಾಣುತ್ತಿದ್ದವೆಂದೂ ಅವನು ಶಿಷ್ಯರಿಗೆ ಹೇಳುತ್ತಿದ್ದನು. ಯಾರೋ ಇಬ್ಬರು ಜಗಳಮಾಡಿ ಒಬ್ಬನನ್ನೊಬ್ಬನು ಹೊಡೆದಾಗ ಇವನ ಮೈಮೇಲೆ ಬಾಸುಂಡೆ ಎದ್ದಿತು. ಪೆಟ್ಟು ತಿಂದ ಆ ಬೇರೆಯದೆಂಬ ಜೀವದ ಕಷ್ಟ ಪೆಟ್ಟನ್ನು ತಾನು ತಿಂದಂತೆ ಈ ಜೀವಕ್ಕೆ ನಿಜವಾಗಿ ಹೋಯಿತು. ಹಸು ರಾದ ಎಳಹುಲ್ಲನ್ನು ನೋಡುತ್ತ ಇವನು ಇದು ಕಾಳಿಕಾಮಾತೆಯ ದೇಹದ ವರ್ಣವೆಂದು ನೆನೆಯುವ ವೇಳೆ ಅದರಮೇಲೆ ಯಾರೋ ನಡೆದರೆ ತಾಯ ಎದೆಯಮೇಲೆ ಅಡಿಯಿಟ್ಟನೆಂದು ಇವನಿಗೆ ಭಾಸವಾಗಿ ಉಸಿರಾಡುವುದು ಕಷ್ಟವಾಯಿತು. ಜೀವ ಒಡಲ ಮೇರೆಯನ್ನು ಮೀರಿ ಸುತ್ತಣ ಚರಾಚರ ಪ್ರಪಂಚವನ್ನು ವ್ಯಾಪಿಸಿ ಅಲ್ಲಿರುವ ವಿಶ್ವಜೀವದೊಂದಿಗೆ ತಾನು ಒಂದಾಗಿ ಬೆರೆದುಹೋಗಿದ್ದಿತು. ಅದು ಮುಕ್ತವಾಗಿದ್ದರೂ ಅದನ್ನು ಬಿಡದೆ ಅದಕ್ಕೆ ಒಂದು ತೊಡರಾಗಿ ಮೈ ಇನ್ನೂ ಅಂಟಿಕೊಂಡಿದ್ದಿತು.

ಈ ಅವಸ್ಥೆಯಲ್ಲಿರುತ್ತ ಇವನು ನರೇಂದ್ರನಿಗೆ ಈ ಸಮಯದಲ್ಲಿ ವಿಶೇಷ ರೀತಿಯ ಕೆಲವು ಅನುಭವಗಳನ್ನು ಮಾಡಿಕೊಟ್ಟನು. ಗುರುವಿನ

ಹಾಸಿಗೆಯ ಪಕ್ಕದಲ್ಲಿ ಕಾದಿದ್ದ ನರೇಂದ್ರನು ಒಂದು ಸಲ ಸ್ವಲ್ಪ ನಿದ್ದೆ ಹೋದನು. ಆ ಸ್ಥಿತಿಯಲ್ಲಿ ಅವನಿಗೆ ಏನೋ ಜ್ಞಾನವಿಕಾಸ ಏನೋ ಶಕ್ತಿ ಬಂದಂತೆ ಕಂಡಿತು. ಅವನಿಗೆ ಎಚ್ಚರವಾದಾಗ ರಾಮಕೃಷ್ಣನು ಎದ್ದು ಕುಳಿತಿದ್ದನು; ಸುಮ್ಮನೆ ಕಣ್ಣೀರು ಸುರಿಸಿ ಅತ್ತನು; ನಾನು ಇಂದು ದರಿದ್ರನಾದೆ, ನನ್ನ ತಪಸ್ಸನ್ನೆಲ್ಲ ತಾಯ ಅಪ್ಪಣೆ ಕೇಳಿ ನಿನಗೆ ಕೊಟ್ಟೆ ದೇನೆ, ಎಂದು ಹೇಳಿದನು. ವಿವೇಕಾನಂದನಿಗೆ ಆಗಲೇ ಆ ಮಾತು ತೀರ ಅರ್ಥವಾಗಲಿಲ್ಲ. ಇಷ್ಟು ದಿನ ಈ ಗುರುವನ್ನು ನೋಡಿದ್ದರೂ ಅವನಿಗೆ ಇಂಥ ಮಾತಿನಲ್ಲಿ ಅಪನಂಬಿಕೆಯೇ ವಾಡಿಕೆ. ಗುರು ಕೂಡ, ಏನಾದರೂ ಸರಿಯೆ, ನಿನ್ನ ಅನುಭವಕ್ಕೆ ಬರದ, ನಿನ್ನ ಬುದ್ಧಿಗೆ ಒಪ್ಪದ, ವಿಷಯವನ್ನು ನೀನು ಪರೀಕ್ಷೆಮಾಡದೆ ನಂಬಬೇಡ ಎಂದೇ ಹೇಳುವನು. ಆದರೆ ಇದಾದ ಬಹು ಶೀಘ್ರದಲ್ಲಿ ನರೇಂದ್ರನಾಥನು ಉದ್ಯಾನದ ಒಂದು ಕೊಟಡಿ ಯಲ್ಲಿ ಕುಳಿತು ಧ್ಯಾನಮಾಡುತ್ತ ನಿರ್ವಿಕಲ್ಪ ಸಮಾಧಿಯನ್ನು ಮುಟ್ಟಿ ದನು. ಇತರ ಶಿಷ್ಯರು ಇದನ್ನು ನೋಡಿ ಸ್ವಲ್ಪ ಭಯಪಟ್ಟರು; ಓಡಿ ಬಂದು ರಾಮಕೃಷ್ಣನಿಗೆ ಹೇಳಿದರು. ಅವನು, 'ಹೌದು, ನಾನು ಬಲ್ಲೆ, ಭಯವಿಲ್ಲ, ಸುಮ್ಮನಿರಿ,' ಎಂದನು. ಹೊತ್ತು ಕಳೆದು ಸಮಾಧಿಯಿಂದ ಎಚ್ಚತ್ತು ನರೇಂದ್ರನ ಗುರುವಿನ ಬಳಿಗೆ ಬಂದನು. 'ನಿರ್ವಿಕಲ್ಪದ ಅನುಭವವಾಯಿತಲ್ಲ, ಇನ್ನುಮುಂದೆ ಏನು ಮಾಡುವೆ?' ಎಂದು ಗುರು ಕೇಳಿದನು. ನರೇಂದ್ರನು, 'ಅದರ ಸುಖವನ್ನನುಭವಿಸಿದ ಮೇಲೆ ಎಚ್ಚರದಲ್ಲಿ ರುಚಿಯೇ ಕಾಣಲಿಲ್ಲ, ಸದಾ ಆ ಸ್ಥಿತಿಯಲ್ಲಿರೋಣವೆನ್ನಿಸುತ್ತದೆ,' ಎಂದನು. ಗುರು, 'ಛೇ ಎತರ ಮಾತನ್ನು ಹೇಳಿದೆ? ನೀನೊಬ್ಬನು ಸುಖದಲ್ಲಿ ಮುಳು ಗಿದರೆ ಮುಗಿಯಿತೆ? ಈ ಪ್ರಪಂಚದ ಬೇನೆಗೆ ದಾರಿ ಏನು? ನೀನು ಬಹಳ ವಾಗಿ ಅಪೇಕ್ಷಿಸುತ್ತಿದ್ದೆಯಾದುದರಿಂದ ನಿನಗೆ ಅದರ ಅನುಭವ ದೊರೆ ಯಿತು ನೋಡು. ಇನ್ನು ಅದನ್ನು ನಾನು ನನ್ನ ಪೆಟ್ಟಿಗೆಯಲ್ಲಿ ಇಟ್ಟು ಬೀಗ ಹಾಕಿದೇನೆ. ನೀನು ನಿರ್ವಿಕಲ್ಪದ ಸುಖದಲ್ಲಿ ಜನರ ಕಷ್ಟವನ್ನು ಮರೆಯು ವುದಿಲ್ಲವೆಂದು ಮಾತುಕೊಡು,' ಎಂದನು. ನರೇಂದ್ರನು ಭಾಷೆಮಾಡಿ ದನು. ಪ್ರಪಂಚದ ಕಷ್ಟವನ್ನು ನೋಡಿ ಗುರುವಿನ ಹೃದಯ ಕರಗಿ ಹೋಗಿದ್ದಿತು. ಜೀವವೇ ಶಿವ ಜೀವವೇ ಶಿವ ಎಂದು ಅವನು ಮತ್ತೆ

ಮತ್ತೆ ಹೇಳುವನು. ದೇವರು ಸೃಷ್ಟಿಯಲ್ಲೆಲ್ಲ ಪ್ರಕಟವಾಗಿದ್ದಾನೆ, ಆದರೂ ಅವನು ತುಂಬ ಪ್ರಕಟವಾಗಿರುವುದು ಮನುಷ್ಯನಲ್ಲಿ, ಎನ್ನುವನು. ನೀನು ದೇವರನ್ನು ಪೂಜಿಸಬೇಕೆಂದರೆ ಮನುಷ್ಯನಲ್ಲಿ ಪೂಜಿಸು, ಎನ್ನುವನು. ಮನುಷ್ಯರಿಗೆ ಸಹಾಯಮಾಡುವುದು ಉಪಕಾರಮಾಡುವುದು ಎಂಬ ಮಾತು ಬಂದಾಗ, 'ಅಯ್ಯೋ, ಇದೆಂಥ ದುರಹಂಕಾರದ ಮಾತು? ಮನುಷ್ಯನು ಮನುಷ್ಯನಿಗೆ ಉಪಕಾರಮಾಡುವುದೆಂದರೇನು? ಇರುವ ಜೀವವೆಲ್ಲ ದೇವರು. ಅವನಿಗೆ ಸೇವೆ ಮಾಡುವೆನೆಂದು ಎಣಿಸಿ ಒಳ್ಳೆಯುದನ್ನು ಮಾಡಿ,' ಎಂದು ಹೇಳುವನು. ನಿರ್ವಿಕಲ್ಪ ಸಮಾಧಿಯ ಸುಖ ದೊಡ್ಡದಲ್ಲ, ಗುರುವಿನ ಉಪದೇಶದ ಮಹಿಮೆಯಿಂದ ತಾನೊಬ್ಬನು ಮುಕ್ತನಾಗುವುದು ದೊಡ್ಡದಲ್ಲ, ಉದ್ಧಾರದ ಮಾರ್ಗವನ್ನು ಲೋಕಕ್ಕೆ ಸಾರುವುದು ಪ್ರಪಂಚದ ಜೀವರಾಶಿಯ ಕಷ್ಟವನ್ನು ನಿವಾರಿಸುವುದು ಇದು ಎಲ್ಲಕ್ಕಿಂತ ದೊಡ್ಡದು, ಎಂದು ನರೇಂದ್ರನಿಗೆ ಮನತಟ್ಟಿತು. ಈ ವಿಷಯವನ್ನು ಅವನು ತನ್ನ ಜೊತೆಯ ಶಿಷ್ಯರಿಗೂ ವಿವರಿಸಿದನು.

ರಾಮಕೃಷ್ಣನು ವಿವೇಕಾನಂದನನ್ನು ನರಮಹರ್ಷಿ ಎಂದು ಗುರುತಿಸಿದನೆಂದು ಈ ಮೊದಲೇ ಹೇಳಿದೆ. ತನ್ನ ಕಡೆಯ ದಿನಗಳ ಈ ಎಲ್ಲ ವರ್ತನದಿಂದ ಅವನು ಈ ಪ್ರಿಯ ಶಿಷ್ಯನನ್ನು ತನ್ನ ಪ್ರಚಾರಕನಾಗಿ ನಿಯಮಿಸಿದನು. ರಾಮಕೃಷ್ಣನು ಒಂದು ಮತವನ್ನು ಸ್ಥಾಪಿಸಲಿಲ್ಲ; ಮತಸ್ಥಾಪಕನಾಗಬೇಕೆಂದು ಅವನಿಗೆ ಅಪೇಕ್ಷೆ ಇರಲಿಲ್ಲ. ತಾನು ಸ್ಥಾಪಿಸುವುದು ಒಂದು ಮತವಾಗಕೂಡದೆಂದೇ ಅವನ ಆಶಯ; ಹೀಗೆಂದು ಅವನು ಮಾತೆಗೆ ಪ್ರಾರ್ಥನೆಮಾಡಿದನಂತೆ. ಅವನ ಗುರಿ ಮತವಲ್ಲ, ಧರ್ಮ. ಎಲ್ಲ ಮತಗಳೂ ಧರ್ಮವನ್ನು ಸಾಧಿಸುವುದಕ್ಕೆ ತಮ್ಮ ತಮ್ಮ ದಾರಿಯನ್ನು ಹೇಳುತ್ತವೆ. ಮತಗಳ ಪ್ರಚಾರಕ್ಕೆ ಕಾಲದ ಮಿತಿ ಉಂಟು. ಧರ್ಮವು ಸನಾತನ. ಧರ್ಮವನ್ನು ನಿಲ್ಲಿಸುವುದಕ್ಕಾಗಿಯೇ ತಾನು ಆಗಾಗ ಅವತರಿಸುವೆನೆಂದು ಭಗವಂತನು ಹೇಳಿದಂತೆ ಗೀತೆಯಲ್ಲಿ ಉಕ್ತವಾಗಿರುವುದು. ಧರ್ಮವನ್ನು ನಿಲ್ಲಿಸಬೇಕೆನ್ನುವುದೇ ಪರಮಹಂಸನ ಉದ್ದೇಶ. ಅವನು ಆ ಕೆಲಸವನ್ನು ವಿವೇಕಾನಂದನ ಭುಜದ ಮೇಲೆ ಹೇರಿದನು. ಸನಾತನ ಧರ್ಮದಲ್ಲಿ ನರನಾರಾಯಣರು

ಜೊತೆಯಾಗಿ ಲೋಕಕಲ್ಯಾಣವನ್ನು ಸಾಧಿಸುವರೆಂದು ಒಂದು ನಂಬಿಕೆ; ಕೃಷ್ಣಾವತಾರದಲ್ಲಿ ಅವರೇ ಅರ್ಜುನ ಕೃಷ್ಣರಾದರು. ಇತರ ಮತಗಳಲ್ಲಿಯೂ ಮೂಲ ಪುರುಷನೊಬ್ಬನು ಪ್ರಚಾರಕನೊಬ್ಬನು ಇರುವುದು ನಮಗೆ ಅನೇಕ ವೇಳೆ ಕಾಣುತ್ತದೆ. ಕ್ರೀಸ್ತನ ಧರ್ಮಕ್ಕೆ ಸೆಯಿಂಟ್ ಪಾಲ್ ಪ್ರಚಾರಕನಾದನು. ಈ ಸಖ್ಯದಲ್ಲಿ ನರನು ನಂಬಿಕೆ ಸಾಲದವನಾಗಿ ಅಥವಾ ಇಲ್ಲದವನಾಗಿ ಇರುತ್ತಾನೆ; ಗುರುವಿನ ಮಹಿಮೆಯಿಂದ ಸತ್ಯವನ್ನು ಕಂಡು ವಿಶ್ವಾಸಿಯಾಗುತ್ತಾನೆ. ಇದರಲ್ಲಿಯೂ ಎರಡು ಮೂರು ರೀತಿ ಉಂಟು. ಅರ್ಜುನನು ಅವಿಶ್ವಾಸಿಯಲ್ಲ; ಆದರೂ ಅವನಿಗೆ ನಂಬಿಕೆ ಸಾಲದು. ವಿವೇಕಾನಂದನು ಅವಿಶ್ವಾಸಿಯೆಂದೇ ಹೇಳಬೇಕು, ವಿಶ್ವಾಸಿಯಾದನು. ಪಾಲನು ಅವಿಶ್ವಾಸಿ ಮಾತ್ರವಲ್ಲ, ಹಗೆಯೇ ಆಗಿದ್ದನು; ಆಮೇಲೆ ಸೇವಕನಾದನು. ನರನ ಮನೋಧರ್ಮವನ್ನು ಅನುಸರಿಸಿ ನಾರಾಯಣನು ಚಿಕಿತ್ಸೆಯ ಮಾರ್ಗವನ್ನು ಆರಿಸುತ್ತಾನೆ. ಕೃಷ್ಣನೇ ಎಲ್ಲವೂ ಎಂದು ಅರ್ಜುನನು ತಿಳಿದಿದ್ದನು; ಆದರೆ ಇದು ಹೇಗೆ ಎಂದು ಅವನಿಗೆ ತೋರಲಿಲ್ಲ. ಅವನು, 'ಕೃಷ್ಣಾ, ಎಲ್ಲವೂ ನೀನು ಎನ್ನುವುದರ ಭಾವವೇನು?' ಎಂದು ಕೇಳಿದನಂತೆ. ಕೃಷ್ಣನು ಅವನಿಗೆ ತುಂಬ ಹಣ್ಣಿದ್ದ ಒಂದು ನೇರಿಲೆಯ ಮರವನ್ನು ತೋರಿದನು. 'ಆ ಮರದಲ್ಲಿ ಕಪ್ಪಗೆ ಕಾಣುವುದು ಏನು ಹೇಳು,' ಎಂದನು. ಅರ್ಜುನನು, 'ನೇರಿಳೆಯ ಹಣ್ಣು,' ಎಂದನು. ಕೃಷ್ಣನು, 'ದೃಷ್ಟಿಸಿ ನೋಡಿ ಹೇಳು,' ಎಂದನು. ನಿಟ್ಟಿಸಿದ ನೋಟಕ್ಕೆ ಮರದ ಹಣ್ಣೆಲ್ಲ ಸಣ್ಣ ಸಣ್ಣ ಕೃಷ್ಣನಾಗಿ ಕಂಡಿತು. ಅರ್ಜುನನು ಅರ್ಥವಾಯಿತೆಂದನು. ನಂಬದ ವಿವೇಕಾನಂದನಿಗೆ ಎಲ್ಲವೂ ಶಿವ ಎಂಬುದನ್ನು ತಿಳಿಸುವುದಕ್ಕೆ ಗುರು ಮಾಡಿದ ಪ್ರಯತ್ನ ಮೊದಲೇ ವರ್ಣಿತವಾಗಿದೆ. ಎಲ್ಲವೂ ಬ್ರಹ್ಮ ಎಂಬ ವಿಷಯದಲ್ಲಿ ನಂಬಿಕೆಯಿಲ್ಲದ ಭೌತಶಾಸ್ತ್ರಪ್ರವೀಣರು, ತಮ್ಮ ಪ್ರಯೋಗದಲ್ಲಿ ಮುಂದುವರಿದಂತೆ, ಅಚ್ಛೇದ್ಯವಾದ ಪರಮಾಣುವೆಲ್ಲ ಒಂದೊಂದೂ ಒಂದು ಸೌರವ್ಯೂಹದಂತೆ ಮಿಂಚಿನ ಕಣದ ವ್ಯೂಹವಾಗಿದೆಯೆಂದು ಕಾಣುತ್ತಿದ್ದಾರೆ. ಈ ಕಣಗಳ ಸಂಖ್ಯೆ ಬೇರೆಯಾದಂತೆ ಪ್ರಪಂಚದ ವಸ್ತು ಬೇರೆ ಬೇರೆಯಾಗಿದೆ, ಮೂಲದಲ್ಲಿ ಎಲ್ಲ ಒಂದೇ, ಎನ್ನುತ್ತಾರೆ. ಸೂಜಿಯು ಕಲ್ಲಿನಲ್ಲಿ ಉತ್ತರದ ಮುಖ

ವೊಂದು ದಕ್ಷಿಣದ ಮುಖವೊಂದು ಇರುತ್ತವೆ; ಅದನ್ನು ತುಂಡು ತುಂಡಾಗಿ ಮಾಡಿದರೆ ಒಂದೊಂದು ತುಂಡಿನಲ್ಲಿ ಉತ್ತರ ಮುಖವೊಂದು ದಕ್ಷಿಣ ಮುಖವೊಂದು ಇರುತ್ತವೆ; ಅದೂ ಪೂರ್ಣ ಇದೂ ಪೂರ್ಣ. ಬ್ರಹ್ಮವನ್ನು ನಂಬದವರಿಂದ ಉಪನಿಷತ್ತು ಋಜುವಾಯಿತು. ಸೃಷ್ಟಿಯ ಸತ್ಯವನ್ನು ಶೋಧಿಸಹೊರಟವರು ಬ್ರಹ್ಮವನ್ನು ಸಾಧಿಸುವರು. ದಾರಿ ಬೇರೆ; ಫಲ ಒಂದು. ರಾಮಕೃಷ್ಣನಿಗೆ ದೊರೆತ ಸಿದ್ಧಿ ವಿವೇಕಾನಂದನಿಗೆ ಅವನ ಸಹಾಯದಿಂದ ಬೇರೊಂದು ರೀತಿಯಲ್ಲಿ ಬರಬೇಕಾಯಿತು. ಇವರಿವರ ಮನೋಧರ್ಮ ವ್ಯತ್ಯಾಸವಾಗಿದ್ದಂತೆ ಅವರು ನಡೆದ ದಾರಿ ಬೇರೆಯಾಗ ಬೇಕಾಯಿತು. ರಾಮಕೃಷ್ಣನು ಈ ವ್ಯತ್ಯಾಸವನ್ನು, ನನ್ನದು ಹೊರಗೆಲ್ಲ ಭಕ್ತಿ ಒಳಗೆಲ್ಲ ಜ್ಞಾನ, ನರೇಂದ್ರನದು ಹೊರಗೆಲ್ಲ ಜ್ಞಾನ ಒಳಗೆಲ್ಲ ಭಕ್ತಿ, ಎಂಬ ಮಾತಿನಿಂದ ವಿವರಿಸುತ್ತಿದ್ದನು. ಮಾತೆ ಇದಾಳೆಂದು ಹೊರಟು ಗುರು ಅವಳು ಇಲ್ಲವೆನ್ನುವುದು ತಪ್ಪು ಎಂದು ಸಾಧಿಸಿದನು. ದೇವರು ಇಲ್ಲವೆಂಬ ಅಥವಾ ಇದಾನೆಯೇ ಎಂಬ ಮೆಟ್ಟಿಲಿಂದ ಹೊರಟು ಶಿಷ್ಯನು ಅವನು ಇದಾನೆ ಎನ್ನುವುದು ನಿಜ ಎಂದು ಸಾಧಿಸಿದನು. ಗುರುವಿನ ನಿಲುವು ಕೋಟಿಯಲ್ಲಿ ಒಬ್ಬರಿಗೆ ಸಾಧ್ಯ. ಅವನ ಚೇತನದಂಥ ಚೇತನಕ್ಕೆ ಗಾಳಿಯನ್ನು ಕಾಣುವ ಕಣ್ಣಿರುತ್ತದೆ; ಆತ್ಮವನ್ನು ತುಡುಕುವ ಕೈಯಿರುತ್ತದೆ. ಉಳಿದೆಲ್ಲರ ಕರಣಗಳೊಂದಿಗೆ ಈ ಕರಣಗಳು ಇರುವುದರಿಂದ ಅಂಥ ಚೇತನ ಇತರರು ಕಾಣದುದನ್ನು ಕಂಡು ಅದು ಇದೆ ಎಂದು ಧೈರ್ಯದಿಂದ ಉಸುರುತ್ತದೆ. ಇದೆ ಎಂಬುದನ್ನು ಹೇಳಬಲ್ಲುದಾದರೂ ಸಾಮಾನ್ಯರ ನಿಲುವಿನಿಂದ ಅದನ್ನು ಅಂಥ ಚೇತನ ತೋರಿಸಿಕೊಡಲಾರದು. ಕುರುಡರ ಊರಿನಲ್ಲಿ ಹುಟ್ಟಿದ ಕಣ್ಣುಳ್ಳ ಒಬ್ಬ ಮನುಷ್ಯನಂತೆ ಇಂಥವನು ಒಂದು ಪ್ರಪಂಚವನ್ನು ಕಾಣುತ್ತಾನೆ, ವರ್ಣಿಸುತ್ತಾನೆ; ಏನುಮಾಡಿದರೆ ಉಳಿದವರಿಗೆ ಅದರ ಅರಿವನ್ನು ಒದಗಿಸಬಹುದೆಂದು ಅನೇಕವೇಳೆ ಕಾಣದೆ ಹೋಗುತ್ತಾನೆ. ಇವನ ಸಹಾಯದಿಂದ ಆ ಪ್ರಪಂಚದ ಅರಿವನ್ನು ಪಡೆದ ಅರೆಕುರುಡನು ಕುರುಡಿನ ಸ್ಥಿತಿಯನ್ನೂ ಬಲ್ಲನು, ಅರಿವಿನ ಸ್ಥಿತಿಯನ್ನೂ ಬಲ್ಲನು; ಕುರುಡನಿಗೆ ಅರ್ಥವಾಗುವ ರೀತಿಯಲ್ಲಿ ಅವನು ಸತ್ಯವನ್ನು ವರ್ಣಿಸ ಬಲ್ಲನು. ವಿವೇಕಾನಂದನು ಸಭೆಗಳ ಮುಂದೆ ನಿಂತು ಮಾತನಾಡುವಾಗ

ಸಾಮಾನ್ಯ ಜನರ ಭಾವನೆಗಳು ಹೇಗಿರುವುವೆಂಬುದನ್ನು ಒಂದೊಂದಾಗಿ ಊಹಿಸಿಕೊಂಡು ಪೂರ್ವಪಕ್ಷವಾಗಿ ಹೇಳಿ, ಗುರುವಿನ ಸಹಾಯದಿಂದ ತಾನು ಪಡೆದಿದ್ದ ತಿಳುವಳಿಕೆಯನ್ನು ವಿವರಿಸಿ, ಪರಮಹಂಸನ ಅನುಭವವನ್ನು ಎಲ್ಲರಿಗೂ ದೊರಕಿಸಿಕೊಟ್ಟನು. ಪ್ರಪಂಚದಲ್ಲೆಲ್ಲ ಓಡಿಯಾಡಿ ನೂರಾರು ಸಭೆಗಳ ಮುಂದೆ ಉಪನ್ಯಾಸಮಾಡಿ ಲಕ್ಷಾಂತರ ಜನದ ಮನಸ್ಸನ್ನು ಮುಟ್ಟಿದ ಸ್ವಾಮಿಯ ಪಕ್ಕದಲ್ಲಿ, ದಕ್ಷಿಣೇಶ್ವರವನ್ನು ಬಿಟ್ಟು ಎಲ್ಲಿಯೂ ಹೋಗದ, ಹತ್ತಿರಕ್ಕೆ ಬಂದ ನೂರು ಜನಕ್ಕೆ ನಾಲ್ಕು ಮಾತನ್ನು ಮಾತ್ರ ಹೇಳಿದ, ಆ ಶಿಷ್ಯನ ಪ್ರಭಾವದಿಂದ ಹೊರತು ಬಹು ಜನರ ಮನಸ್ಸಿನ ಮುಟ್ಟದ, ರಾಮಕೃಷ್ಣನನ್ನು ನಿಲ್ಲಿಸಿ, ನಾವು ಒಂದೊಂದು ಸಲ ಈ ಗುರುವಿಗಿಂತ ಈ ಶಿಷ್ಯನು ದೊಡ್ಡವನೆಂದು ತಿಳಿಯುವ ಸಂಭವವಿದೆ. ರಾಮಕೃಷ್ಣನೂ ತನ್ನ ಶಿಷ್ಯನು ಬಹಳ ದೊಡ್ಡವನೆಂದು ಹೇಳುತ್ತಿದ್ದನು; ತಾನು ಎಷ್ಟು ದೊಡ್ಡವನೆಂದು ಹೇಳುತ್ತಿರಲಿಲ್ಲ. ಆದರೆ ವಿವೇಕಾನಂದನು ತನ್ನ ಮತ್ತು ಗುರುವಿನ ಪರಸ್ಪರ ಶಕ್ತಿ ಸಂಬಂಧಗಳ ವಿಷಯದಲ್ಲಿ ಯಾರಿಗೂ ಸಂದೇಹವಿಲ್ಲದಂತೆ ತನ್ನ ನಂಬಿಕೆಯನ್ನು ಸಾರಿದನು. 'ನಾನು ನೂರಾರು ಸಭೆಗಳ ಮುಂದೆ ಹೇಳಿರುವ ಮಾತಿನಲ್ಲಿ ಒಳ್ಳೆಯದೆನ್ನುವುದೇನಿದೆಯೋ ಅದೆಲ್ಲವೂ ನನಗೆ ಆ ಗುರುವಿನಿಂದ ಬಂದದ್ದು, ಅವನಿಂದ ಸಿದ್ಧಿಸಿದ್ದು; ಕೆಟ್ಟದು ಯಾವುದಿದೆಯೋ ಅದು ನನ್ನ ಸ್ವಭಾವದಿಂದ ಬಂದದ್ದು. ಇತರರ ಭಾವಗಳನ್ನು ಕುರಿತು ನಾನು ಒಮ್ಮೊಮ್ಮೆ ಕಠಿಣವಾದ ಮಾತುಗಳನ್ನಾಡಿದ್ದೇನೆ. ನನ್ನ ಗುರು ಯಾವ ಪ್ರಾಣಿಯನ್ನು ಕುರಿತಾದರೂ ಕಾಠಿಣ್ಯವನ್ನು ತೋರಿದವನಲ್ಲ,' ಎಂದನು. ರಾಮಕೃಷ್ಣನೇ ಸಭೆಗಳ ಮುಂದೆ ನಿಂತಿದ್ದರೆ ತಾನು ಇಷ್ಟು ದೊಡ್ಡವನೆಂದು ಹೇಳಿಕೊಳ್ಳುವುದಕ್ಕೆ ಆಗುತ್ತಿರಲಿಲ್ಲ. ಅವನು ಕೈಕೊಳ್ಳಲಾಗದ ಕೆಲಸವನ್ನು, ಅವನು ಅನುಸರಿಸಲಾಗದಿದ್ದ ದಾರಿಯಲ್ಲಿ, ಅವನು ನಿರೀಕ್ಷಿಸಿದ್ದ ರೀತಿಯಲ್ಲಿ, ವಿವೇಕಾನಂದನು ಸಾಧಿಸಿದನು.

ಪರಮಹಂಸನ ದೇಹದ ಯಾತ್ರೆ ಮುಗಿದರೂ ಅವನ ಶಿಷ್ಯರು ಅವನನ್ನು ಮೃತನೆಂದು ಭಾವಿಸಲಿಲ್ಲ. ಗುರುವಿನ ದೇಹ ಮರೆಯಾದ ವೇಳೆ ಅವರು ದುಃಖಿತರಾಗಿ ಕಣ್ಣೀರು ಸುರಿಸಿದರು. ಆದರೆ ಅವರಿಗೆ ಬಹು

ಬೇಗ ಧೈರ್ಯವೂ ಬಂದಿತು. ಅವನ ಉಪದೇಶವನ್ನು ಕೇಳಿ ಅವನ ಬಾಳುವೆಯನ್ನು ನೋಡಿದ್ದ ಇವರಿಗೆ ದೇಹವನ್ನು ಬಿಟ್ಟರೂ ಆ ಜೀವ ಇದೆಯೆನ್ನುವ ಭಾವನೆ ಸುಲಭವಾಯಿತು. ಗುರುಪತ್ನಿಯ ಧೀರ ವರ್ತನವೂ ಇವರ ನಂಬಿಕೆಗೆ ನೆರವಾಯಿತು. ಗಂಡನು ದೇಹವನ್ನು ತೊರೆದ ಮೇಲೆ ಶಾರದಾಮಣಿದೇವಿ ವೇಷಭೂಷಣದಲ್ಲಿ ಮೊದಲಿನಂತೆಯೇ ಇದ್ದು ಬಿಟ್ಟಳು. ವಿಧವೆಯರ ಜೀವನದ ವಾಡಿಕೆಯಂತೆ ಬಳೆಯನ್ನು ತೆಗೆಯ ಲಿಲ್ಲ, ಅಂಚಿನ ಸೀರೆಯನ್ನು ಬಿಡಲಿಲ್ಲ. ಹತ್ತಿರವಿದ್ದವರು ಇದರ ಅಭಿಪ್ರಾಯವೇನೆಂದು ಕೇಳಿದರು. ಶಾರದಾಮಣಿದೇವಿ ತನ್ನ ಪಾಲಿಗೆ ಪರಮಹಂಸನು ಇನ್ನೂ ಜೀವಂತನೇ ಎಂದೂ ತಾನು ಸಧವೆ ಎಂದೂ ಹೇಳಿದಳು. ಶಾರದಾಮಣಿದೇವಿಗೆ ಪತಿಯೊಡನೆ ದೇಹಸಂಬಂಧ ಆಗಿಯೇ ಇರಲಿಲ್ಲ. ದೇಹದ ಸುಖವನ್ನು ಕೊಡುವ ಗಂಡನು ಇರುವಾಗಲೇ ಅನೇಕ ಸಂಸಾರಗಳಲ್ಲಿ ಹೆಂಡಿರು ವಿಧವೆಯರಂತೆ ದಾಂಪತ್ಯದ ಉನ್ನತ ಸೌಖ್ಯ ವನ್ನು ಕಾಣದೆ ಇರುತ್ತಾರೆ. ರಾಮಕೃಷ್ಣನೂ ಅವನ ಹೆಂಡತಿಯೂ ದೇಹದ ದಾಂಪತ್ಯವನ್ನು ಬೆಳಸಲಿಲ್ಲ; ಆತ್ಮ ದಾಂಪತ್ಯವನ್ನು ಬೆಳಸಿದರು. ಆದರಿಂದ ಗಂಡನ ದೇಹ ಇಲ್ಲದಾಗಲೂ ಶಾರದಾಮಣಿದೇವಿಗೆ ಸಾಧವ್ಯ ಉಳಿಯಿತು. ಹಳ್ಳಿಯಲ್ಲಿ ಹುಟ್ಟಿ ಓದುಬರಹವನ್ನು ಕಾಣದೆ ಕೇವಲ ಪತಿಭಕ್ತಿಯಿಂದ ಮಾತ್ರ ಆತ್ಮೋದ್ಧಾರವನ್ನು ಪಡೆದ ಈ ಸಾಧ್ವಿ ಎಂಥ ಜ್ಞಾನಿಗೂ ದುಃಸಾಧ್ಯವಾದ ಆತ್ಮನಿಷ್ಠೆಯನ್ನು ಈ ಸಂದರ್ಭದಲ್ಲಿ ಬಾಳಲ್ಲಿ ತೋರಿದಳು; ಪರಮಹಂಸನ ದೇಹದ ಸಂಸ್ಕಾರಗಳು ಮುಗಿದಮೇಲೆ ಬೃಂದಾವನಕ್ಕೆ ಹೋಗಿ ತನ್ನ ನಿರ್ಮಲ ಜೀವನವನ್ನು ಮುಂದೆ ಸಾಗಿಸಿ ದಳು. ಈಕೆ ಬೃಂದಾವನದಲ್ಲಿದ್ದಾಗ ಅನುಚರರಲ್ಲಿ ಒಬ್ಬರು ಪರಮಹಂಸನ ಕೃಪೆಯಿಂದ ನಿಮಗೆ ಎಲ್ಲವೂ ಸಿದ್ಧಿಸಿರಲಾಗಿ ಬೃಂದಾವನದಲ್ಲಿ ಇದ್ದು ನಿಮಗೆ ಆಗಬೇಕಾದದೇನು ಎಂದರು. ಶಾರದಾಮಣಿದೇವಿ, 'ಗುರುವಿನ ಕಾರ್ಯ ನಡೆಯಬೇಕಾದದಿದೆ. ಅದಕ್ಕಾಗಿ ಅವನ ಶಿಷ್ಯರು ದುಡಿಯು ತ್ತಿದಾರೆ. ನಾನೂ ಧ್ಯಾನದಲ್ಲಿ ಕುಳಿತು ಅವರಿಗೆ ನೆರವಾಗುವಂತೆ ಭಾವನೆಯ ಲಹರಿಯನ್ನು ಕಳುಹಿಸುತ್ತಿದೇನೆ,' ಎಂದಳು. ಇದು ಏನು ಎಂದು ಅನೇಕರಿಗೆ ಅರ್ಥವಾಗದೆ ಹೋಗಬಹುದು. ವಿವೇಕಾನಂದನು



ಶ್ರೀ ಶಾರದಾಮಣಿ ದೇವಿಯವರು

ಅಮೆರಿಕಾದಲ್ಲಿರುವಾಗ ಶಾರದಾಮಣಿದೇವಿ ಬೃಂದಾವನದಲ್ಲಿರುತ್ತ, ಪರದೇಶಕ್ಕೆ ಹೋಗಿರುವ ನನ್ನ ಬಾಲಕನಿಗೆ ಆರೋಗ್ಯ ಸರಿಯಾಗಿರಲಿ, ಜನರು ನೆರವಾಗಲಿ, ಅವನು ಸಭೆಯ ಮುಂದೆ ನಿಂತು ಮಾತನಾಡುವಾಗ ವಿಷಯ ಸುಸೂತ್ರವಾಗಿ ಮನಸ್ಸಿಗೆ ಬರಲಿ, ಮಾತು ಚೆನ್ನಾಗಲಿ, ಎಂದು ದೇವರಿಗೆ ಪ್ರಾರ್ಥಿಸುತ್ತಿದ್ದರೆ ಎಷ್ಟು ಒಳ್ಳೆಯದಾಯಿತೆಂದು ಹೇಳುವವರು ಯಾರು? ರಾಮಕೃಷ್ಣನ ಜೀವನವನ್ನು ನೋಡಿದವರಿಗೆ ಇಂಥ ವಿಷಯದಲ್ಲಿ ಸಂದೇಹವಿರುವುದು ಸಾಧ್ಯವಲ್ಲ. ಕೈಹಿಡಿದು ನಡೆಯಿಸುವುದು ಎಷ್ಟು ನಿಜವೋ, ಮನಸ್ಸನ್ನು ಹಿಡಿದು ನಿಲ್ಲಿಸುವುದೂ ಅಷ್ಟು ನಿಜವಾದ ಕರ್ಮ. ಏಕೆಂದರೆ, ದೇಹ ಎಷ್ಟು ನಿಜವೋ ಆತ್ಮವೂ ಅಷ್ಟು ನಿಜ, ಮನಸ್ಸೂ ಅಷ್ಟು ನಿಜ. ಗೋಡೆ ಎಷ್ಟು ನಿಜವೋ ಗಾಳಿಯೂ ಅಷ್ಟೇ ನಿಜ. ಬಿಸಿಲಿನ ಹೊತ್ತಿನಲ್ಲಿ ನೀರು ಕೊಟ್ಟು ಆಯಾಸವನ್ನು ಹರಿಸುವಂತೆ, ಗಾಳಿಯನ್ನು ಹಾಕಿಯೂ ಹರಿಸಬಹುದು. ಶಿಷ್ಯವರ್ಗವು ಆಮೇಲೆ ರಾಮಕೃಷ್ಣನ ಹೆಸರಿನಲ್ಲಿ ಮಠ ಒಂದನ್ನು ಕಟ್ಟಿದಾಗ ಶಾರದಾಮಣಿದೇವಿ ಅವರ ಬಳಿ ಬಂದು ನಿಂತಳು. ಅನೇಕ ವರ್ಷ ಗುರುವಿನ ಪ್ರತಿನಿಧಿಯಾಗಿ ಶಿಷ್ಯರಿಗೆ ಆಶೀರ್ವಾದಮಾಡುತ್ತಿದ್ದು ಈಗ ಸುಮಾರು ಹದಿನಾಲ್ಕು ವರುಷದ ಹಿಂದೆ ದೇಹವನ್ನು ಬಿಟ್ಟು ಪರಂಧಾಮವನ್ನೈದಿದಳು. ರಾಮಕೃಷ್ಣನ ಬದುಕಿನಿಂದ ಪ್ರಪಂಚಕ್ಕೆ ಬಹಳ ಪ್ರಯೋಜನವಾಯಿತು; ಅದರ ಮಾತನ್ನು ಮುಂದೆ ಸ್ವಲ್ಪ ವಿವರಿಸಲಾಗುತ್ತದೆ. ಆದರೆ, ಆ ಪ್ರಯೋಜನದ ಸ್ವರೂಪ ಚೆನ್ನಾಗಿ ತಿಳಿಯಬೇಕಾದರೆ, ಅವನ ಪತ್ನಿಯ ಜೀವನದಲ್ಲಿ ಫಲಿಸಿದ ಸಿದ್ಧಿ ಎಂಥದೆನ್ನುವುದನ್ನು ನಾವು ಗ್ರಹಿಸಬೇಕು.

ಶಿಷ್ಯರು ಅವಲಂಬಿಸಿದ ಕಾರ್ಯಕ್ರಮವನ್ನು ವಿವರಿಸುವ ಮೊದಲು ರಾಮಕೃಷ್ಣನ ಬಳಿಗೆ ಬಂದ ಇನ್ನೊಂದು ಚೇತನ ಎಂಥ ಸಂಸ್ಕಾರವನ್ನು ಪಡೆಯಿತೆಂದು ಹೇಳುವುದು ಅವಶ್ಯಕವೆಂದು ತೋರುತ್ತದೆ. ದಕ್ಷಿಣೇಶ್ವರದ ದೇವಾಲಯದ ಹೊರಗಡೆ, ಪಂಚವಟಿಗೆ ಹೋಗಿಬರುವ ದಾರಿಯ ಕೊನೆಗೆ ಹಿತ್ತಲಲ್ಲಿ, ಕಸಬಳಿಯುತ್ತ ರಸಿಕನೆಂಬೊಬ್ಬ ಅಂತ್ಯಜನಿದ್ದನು. ಅವನು ರಾಮಕೃಷ್ಣನನ್ನು ಅರ್ಚಕನಾಗಿ ಬಂದದ್ದು ಮೊದಲು, ಸಾಧನದ ಕಾಲದಲ್ಲಿ, ಸೀಮೆಗೆ ಇವನು ಪ್ರಸಿದ್ಧನಾದ ಕಾಲದಲ್ಲಿ, ನೋಡುತ್ತಲೇ

ಇದ್ದನು; ಇವನು ಬಹು ಮಹಾತ್ಮನೆಂದು ಜನ ಹೇಳುವುದನ್ನು ಬಹು ವರ್ಷ ಕೇಳಿದನು. ರಾಮಕೃಷ್ಣನಿಗೂ ಅಷ್ಟು ವರ್ಷ ಇವನ ಪರಿಚಯ ವಿದ್ದಿತು. ಅವನು ಒಳ್ಳೆಯ ಮನುಷ್ಯನೆಂದೂ ದೇವರನ್ನು ಯಥಾಶಕ್ತಿ ತನಗೆ ತಿಳಿದಂತೆ ಪೂಜಿಸುವನೆಂದೂ ಅವನು ಕಂಡಿದ್ದನು. ಯಾವಾಗ ಲಾದರೂ ಒಮ್ಮೊಮ್ಮೆ ರಸಿಕನು ಗಂಗೆಯಲ್ಲಿ ಮಿಂದು ಮಡಿಮಾಡಿ ಕೊಂಡು ಬರುವಾಗ ರಾಮಕೃಷ್ಣನು ಅದನ್ನು ತನ್ನ ಶಿಷ್ಯರಿಗೆ ತೋರಿಸು ವನು; ಅಂತ್ಯಜನು ನಿಜ, ಆದರೆ ಎಷ್ಟು ಒಳ್ಳೆಯವನು ನೋಡಿ, ಎನ್ನುವನು. ಕಲಿಕತೆಯಿಂದ ಜನ ತಂಡ ತಂಡವಾಗಿ ಬರುತ್ತ ಗುರುವಿನಿಂದ ಉಪದೇಶ ಪಡೆದು ಉದ್ಧಾರವಾದೆವೆಂದು ಸಂತೋಷಚಿತ್ತದಿಂದ ಹೋಗುತ್ತ ಇರು ವಾಗ ರಸಿಕನಿಗೆ, ನಮ್ಮ ದೇವಸ್ಥಾನದ ಅರ್ಚಕನು ಇಂಥ ಮಹಾತ್ಮ ನಾಗಿರುವಾಗ ನಾನೂ ಏಕೆ ಉದ್ಧಾರವಾಗಬಾರದು, ಇವನನ್ನು ಕೇಳಿ ಕೊಳ್ಳೋಣ, ಎಂದು ತೋರಿತು. ಅವನು ಕೆಲವು ದಿನ ಸಮಯ ಕಾದು ಒಂದು ದಿನ ರಾಮಕೃಷ್ಣನು ಕೈಕಾಲು ತೊಳೆದುಕೊಂಡು ಪಂಚವಟಿಯ ವನದಿಂದ ಕೋಣೆಗೆ ಹಿಂತಿರುಗಿ ಬರುವಾಗ ದಾರಿಯಲ್ಲಿ ಕಾಣಿಸಿಕೊಂಡನು. ರಾಮಕೃಷ್ಣನು ಇವನನ್ನು ನೋಡಿ ನಿಂತನು; ಏನು ಎಂದು ಕೇಳುವಂತೆ ಇವನನ್ನು ದೃಷ್ಟಿಸಿದನು. ರಸಿಕನು ಏನನ್ನೂ ಬೇಡಲಿಲ್ಲ. ನನಗೆ ಏನಾಗುತ್ತದೆ ಎಂದು ಕೇಳಿದನು. 'ಎಲ್ಲ ಆಗುತ್ತದೆ, ಚಿಂತಿಸಬೇಡ,' ಎಂದು ರಾಮಕೃಷ್ಣನು ಉತ್ತರಕೊಟ್ಟನು. ರಸಿಕನು ಹೋಗಿ ಕಾಲನ್ನು ಮುಟ್ಟಿದ ನೆಂದೂ ರಾಮಕೃಷ್ಣನು ಅವನನ್ನು ಕೈಹಿಡಿದು ಎಬ್ಬಿಸಿ ಅಪ್ಪಿಕೊಂಡು ಧೈರ್ಯ ಹೇಳಿದನೆಂದೂ ಕೆಲವರು ಹೇಳುತ್ತಾರೆ. ಇದು ಹೇಗೇ ಆದರೂ ರಸಿಕನು ಅಂದಿನಿಂದ ತಾನೂ ಉದ್ಧಾರವಾದೆನೆಂದು ಧೈರ್ಯಗೊಂಡನು. ಆಮೇಲೆ ಏನು ನಡೆಯಿತೆಂದು ವಿವರವಾಗಿ ಗೊತ್ತಿಲ್ಲ. ಪರಮಹಂಸನು ಮಹಾಸಮಾಧಿಯನ್ನು ಐದಿದ ಕೆಲವು ಕಾಲದವರೆಗೆ ರಸಿಕನು ಜೀವಂತ ನಾಗಿದ್ದನು; ಆಮೇಲೆ ಒಂದು ಸಲ ಐದಾರು ದಿವಸ ಕಾಯಿಲೆ ಬಿದ್ದು ತೀರಿಕೊಂಡನು. ಕಸ ಬಳಿಯುವವನು ಬರದೇ ಇರಲು ಆಲಯದ ಜನ ಏನಾಗಿದೆಯೆಂದು ವಿಚಾರಿಸಿದರು. ಮೊದಲು ಅವನು ಕಾಯಿಲೆಯಿಂದ ಮಲಗಿರುವನೆನ್ನುವುದೂ ಆಮೇಲೆ ತೀರಿಹೋದನೆನ್ನುವುದೂ ತಿಳಿಯಿತು.

ಅವನ ಕೊನೆಯ ಅನುಭವದ ಕತೆಯನ್ನು ಕೇಳಿ ಎಲ್ಲರೂ ಆಶ್ಚರ್ಯಪಟ್ಟರು. ರಸಿಕನ ಮನೆಯ ಮುಂದೆ ಒಂದು ಬೃಂದಾವನ. ಜೀವ ಹೋಗುತ್ತದೆನ್ನುವ ಹೊತ್ತಿನಲ್ಲಿ ಅವನು ತನ್ನನ್ನು ಅದರ ಬಳಿ ಮಲಗಿಸಿ ಎಂದನು. ಮನೆಯವರು ಅಲ್ಲಿ ಬಟ್ಟೆಯನ್ನು ಹಾಸಿ ಅವನನ್ನು ಅಲ್ಲಿಗೆ ತಂದುಬಿಟ್ಟರು. ಹಾಗೆಯೇ ಮಲಗಿರುತ್ತ ರಸಿಕನು, 'ಅಕೋ ಆತ ಬಂದರು, ಚಾಪೆ ಹಾಕಿ,' ಎಂದನು; ಅವನ ಮುಖ ಸಂತೋಷದಿಂದ ಅರಳಿತು; ಬರುವವನಿಗೆ ಪ್ರತ್ಯುತ್ಥಾನ ಮಾಡುವಂತೆ ಅವನು ಎದ್ದು ಕುಳಿತನು; ಜೀವ ಹೋಗಿ ಹಾಸಿಗೆಯಲ್ಲಿ ಮತ್ತೆ ಮಲಗಿದನು. ಮನೆಯವರಿಗೆ ಯಾರೂ ಬಂದದ್ದು ಕಾಣಲಿಲ್ಲ. ಆದರೆ ರಸಿಕನು ಹಿಂದೆ ಆಡಿದ ಮಾತುಗಳಿಂದ ಅವನಿಗೆ ಕೊನೆಯ ಕ್ಷಣದಲ್ಲಿ ಬಂದಂತೆ ಕಂಡದ್ದು ರಾಮಕೃಷ್ಣನ ಮೂರ್ತಿಯೆಂದು ಅವರು ಊಹಿಸಿದರು. ಹೀಗೆ ಗುರುವಿನ ಸಂಪರ್ಕವನ್ನು ಎಷ್ಟು ಕೊಂಚವಾದರೂ ಪಡೆದ ಅಂತ್ಯಜ ರಸಿಕನಿಗೆ ಅದರ ಫಲವಾಗಿ ಸಾವನ್ನು ಹೊಗುವುದು ಸುಲಭವಾಯಿತು. ಅಂತ್ಯಕಾಲದಲ್ಲಿ ಅವನು ಗುರುವನ್ನು ದೇವರಂತೆ ಸಾಕ್ಷಾತ್ಕಾರಮಾಡಿಕೊಂಡನು. ಉಸಿರು ಹೋಗುವುದು ಅವನಿಗೆ ಹಗುರವಾಯಿತು. ಜೀವನ ಮರಣಗಳ ಮಧ್ಯ ಭೂಮಿಯನ್ನು ಅವನು ಉಲ್ಲಾಸದಿಂದ ದಾಟಿ ಮುಂದೆ ಸಾಗಿದನು.

ಶಾರದಾಮಣಿದೇವಿಯ ಮತ್ತು ರಸಿಕನ ಬೇರೆ ಬೇರೆ ಜೀವನಗಳಲ್ಲಿ ರಾಮಕೃಷ್ಣನ ಸಾಮೀಪ್ಯದಿಂದ ಎಂಥ ಪರಿಣಾಮ ಉಂಟಾಯಿತೆನ್ನುವುದನ್ನು ಗ್ರಹಿಸುವುದರಿಂದ ಅವನ ಶಿಷ್ಯರಾಗಿದ್ದ ಸುಮಾರು ಇಪ್ಪತ್ತುಮಂದಿ ಆಮೇಲೆ ಕೈಕೊಂಡ ಉದ್ಯಮ ನಮಗೆ ಅರ್ಥವಾಗುತ್ತದೆ. ಪರಮಹಂಸನು ಜೀವಂತನಾಗಿರುವವರೆಗೆ ಇವರು ಅವರವರ ಓದಿನಲ್ಲಿ ಕೆಲಸದಲ್ಲಿ ಇರುತ್ತ ಸಾಧ್ಯವಾದಾಗಲೆಲ್ಲ ಗುರುಸನ್ನಿಧಿಗೆ ಬಂದು ಹೋಗುತ್ತಿದ್ದರು. ಅವನ ಮಹಾಸಮಾಧಿಯ ನಂತರ ಅವರಿಗೆ ಹೀಗೆ ಮಾಡಿದರೆ ಸಾಲದೆಂದು ಕಂಡಿತು. ಗುರು ಇವರಿಗೆ ಯಾರಿಗೂ ಸಂನ್ಯಾಸವೆಂದು ಸಂನ್ಯಾಸವನ್ನು ಕೊಟ್ಟಿರಲಿಲ್ಲ. ಆದರೆ ಇವರು ಸಂನ್ಯಾಸಿಗಳಾಗಬೇಕೆಂದು ಅವನ ಇಷ್ಟವೆಂದು ಎಲ್ಲರೂ ಮನಗಂಡಿದ್ದರು. ತಾವು ಒಂದು ಕುಟುಂಬದಂತೆ ಇರುತ್ತ ಗುರುವಿನ ಉಪದೇಶವನ್ನು ಜನರಲ್ಲಿ ಹರಡಬೇಕೆಂದು ಅವರಿಗೆಲ್ಲ ಮನಸ್ಸಿ

ನಲ್ಲಿ ಒಂದು ಭಾವ ಮೂಡಿತು. ನರೇಂದ್ರನು ಇವರನ್ನೆಲ್ಲ ಒಟ್ಟುಗೂಡಿಸಿ ಕೊಂಡು ಮಾತನಾಡಿ ಆ ವರ್ಷದ ಮಾರ್ಗಶಿರ ಮಾಸದಲ್ಲಿ ವಿರಜಾಹೋಮ ವನ್ನು ನಡೆಯಿಸಿ ತಾನು ಸಂನ್ಯಾಸವನ್ನು ತೆಗೆದುಕೊಂಡು ಅವರೆಲ್ಲ ಸಂನ್ಯಾಸ ತೆಗೆದುಕೊಳ್ಳುವಂತೆ ಏರ್ಪಡಿಸಿದನು. ಕಲಿಕತೆಯ ಒಂದು ಭಾಗವಾದ ಬಾರಾನಗರದಲ್ಲಿ ಭಕ್ತಮಂಡಲಿ ಒಂದು ಮನೆಯನ್ನು ಬಾಡಿಗೆಗೆ ತೆಗೆದು ಕೊಂಡು ಅದನ್ನು ರಾಮಕೃಷ್ಣನ ಸಂಪ್ರದಾಯದ ಸಂನ್ಯಾಸಿಗಳ ಮಠ ಎಂದು ಗೊತ್ತುಮಾಡಿದರು. ಸಂನ್ಯಾಸದಲ್ಲಿ ನರೇಂದ್ರನು ವಿವೇಕಾನಂದ ಎಂಬ ಹೆಸರನ್ನು ತೆಗೆದುಕೊಂಡನು; ರಾಖಾಲನು ಬ್ರಹ್ಮಾನಂದನಾದನು; ಕಾಳೀಪ್ರಸಾದನು ಅಭೇದಾನಂದನಾದನು; ಉಳಿದ ಶಿಷ್ಯರೂ ಆನಂದ ಎಂಬ ಅಂಕಿತದ ಬೇರೆ ಬೇರೆ ಹೆಸರುಗಳನ್ನು ಸ್ವೀಕರಿಸಿದರು. ಇವರಲ್ಲಿ ರಾಮಕೃಷ್ಣಾನಂದ ಎಂಬ ಹೆಸರಿನ ಶಿಷ್ಯನು ಗುರುವಿನ ಹತ್ತಿರವೇ ಕುಳಿತು ಶುಶ್ರೂಷೆಮಾಡಿದ್ದವನು. ಅವನು ಮಠದಲ್ಲಿ ಗುರುವನ್ನು ಪ್ರತಿಷ್ಠೆಮಾಡಿ ಕೊಂಡು ಅವನನ್ನು ಭಕ್ತಿಯಿಂದ ಪೂಜಿಸುವುದರಲ್ಲಿ ತೊಡಗಿದನು. ಅವನ ಸಹಜವಾದ ಮನೋಧರ್ಮ ಭಕ್ತಿ. ಉಳಿದ ಶಿಷ್ಯರು ಗುರು ತಮಗೆ ಮಾಡಿದ್ದ ಉಪದೇಶವನ್ನು ನೆನೆಯುತ್ತ ತಮ್ಮ ತಮ್ಮ ಸಾಧನೆಗಳಲ್ಲಿ ತೊಡ ಗಿದರು. ಸಂನ್ಯಾಸದ ನಿಯಮನ್ನು ಅನುಸರಿಸಿ ಎಲ್ಲರೂ ಸ್ವಲ್ಪಕಾಲ ಪರಿವ್ರಾಜಕರಾಗಿ ದೇಶಪರ್ಯಟನವನ್ನು ಮಾಡಿಕೊಂಡು ಬಂದರು. ಎಲ್ಲರ ಮಾತನ್ನೂ ಇಲ್ಲಿ ಹೇಳುವುದು ಅವಶ್ಯಕವಲ್ಲ. ಇವರೆಲ್ಲರ ಮುಖಂಡನಾದ ವಿವೇಕಾನಂದನ ವಿಷಯವನ್ನು ಉದಾಹರಣೆಗಾಗಿ ಹೇಳಿದರೆ ಸಾಕು. ಭರತವರ್ಷದ ಸಮಗ್ರ ಯಾತ್ರೆಯಲ್ಲಿ ವಿವೇಕಾನಂದನಿಗೆ ಪೂರ್ವದಲ್ಲಿ ಅಷ್ಟು ಚೆನ್ನಾಗಿ ಬಾಳಿದ ಆರ್ಯಾವರ್ತದ ಪುಣ್ಯಭೂಮಿ ಯಾವ ದುರ್ಗತಿಗೆ ಇಳಿದಿದೆ ಎನ್ನುವುದು ಕಂಡಿತು. ತನ್ನ ಪರ್ಯಟನದ ದಾರಿಯುದ್ದಕ್ಕೂ ರಾಮಕೃಷ್ಣನ ಕರುಣೆ ತನ್ನನ್ನು ಕಾಯುತ್ತಿದೆ ಎನ್ನುವುದು ಅವನಿಗೆ ತೋರಿತು. ಊರು ಊರಿನಲ್ಲಿ ದೊರೆತ ಆತಿಥ್ಯದಿಂದ ದೇಹಯಾತ್ರೆಯನ್ನು ನಡೆಸುತ್ತ ಇವನು ಹೋಗುತ್ತಿದ್ದನು. ಒಂದು ಸ್ಥಳದಲ್ಲಿ ಇವನು ರೈಲಿ ನಿಂದ ಇಳಿದಾಗ ಸ್ಟೇಷನ್ನಿನಲ್ಲಿ ಒಬ್ಬನು ಇವನ ಬಳಿಗೆ ಬಂದು, 'ತಾವು ಇಲ್ಲಿಗೆ ಬರುವಿರೆಂದು ನನಗೆ ಸ್ವಪ್ನವಾಯಿತು. ನಿಮ್ಮನ್ನು ಸತ್ಕರಿಸ

ಬೇಕೆಂದು ಅಪ್ಪಣೆಯಾಗಿದೆ, ನಾನು ತಂದಿರುವ ಉಪಹಾರವನ್ನು ಸ್ವೀಕರಿಸಿ ಅನುಗ್ರಹಿಸಬೇಕು,' ಎಂದು ಕರೆದನು. ವಿವೇಕಾನಂದನು ಸಹಜವಾಗಿ ವರ್ಚಸ್ವಿ. ನೋಡಿದೊಡನೆ ಪರಿಚಯವಿಲ್ಲದವರಿಗೂ ಇವನು ಯಾರೋ ಮಹಾತ್ಮನೆಂದು ತೋರುವಂತೆ ಗಂಭೀರವಾದ ಆಕಾರವ ಮತ್ತು ನಡೆ ನುಡಿಯ ಧೀರವ್ಯಕ್ತಿ. ಆದರೂ ಸ್ವಪ್ನದಲ್ಲಿ ತನ್ನನ್ನು ಇವನಿಗೆ ತೋರಿಸಿದ ನೆಂದರೆ ಇದು ರಾಮಕೃಷ್ಣನ ಕೆಲಸವೆಂದು ಅವನಿಗೆ ಕಂಡಿತು. ವಿವೇಕಾನಂದನನ್ನು ಹೋದ ಸ್ಥಳಗಳಲ್ಲೆಲ್ಲ ಜನರ ಪ್ರಮುಖರೂ ರಾಜರೂ ಮನ್ನಣೆಯಿಂದ ಕಂಡರು. ಅವನು ಕರ್ಣಾಟಕಕ್ಕೆ ಬಂದನು; ಬೆಳಗಾಂವೆಯಲ್ಲಿ, ಮೈಸೂರಿನಲ್ಲಿ ತಂಗಿದ್ದನು; ಮೈಸೂರ ಮಹಾರಾಜರು ದಿವಂಗತ ಶ್ರೀ ಚಾಮರಾಜ ಒಡೆಯರವರ ಆತಿಥ್ಯವನ್ನು ಪಡೆದನು. ಕನ್ಯಾಕುಮಾರಿಯವರೆಗೆ ಹೋಗಿ ಮತ್ತೆ ಹಿಂತಿರುಗಿದನು. ರಾಮಕೃಷ್ಣ ಪರಮಹಂಸನ ಶಿಷ್ಯಮಂಡಲಿಯೊಂದು ಅವನ ಜೀವನದ ಕಾರ್ಯವನ್ನು ಮುಂದುವರಿಸುತ್ತಿದೆಯೆಂದು ಇವನಿಂದ ಭರತವರ್ಷದಲ್ಲಿ ಅನೇಕರಿಗೆ ತಿಳಿಯಿತು.

ಈ ಕಾಲದಲ್ಲಿ ಅಮೆರಿಕಾ ದೇಶದ ಚಿಕಾಗೋ ನಗರದಲ್ಲಿ ಲೋಕದ ಮತಗಳ ಪರಿಷತ್ತು ಎಂಬ ಒಂದು ಸಭೆ ನೆರೆಯುವುದೆಂದು ಸುದ್ದಿ ಹುಟ್ಟಿತು; ಎಲ್ಲ ಮತಗಳ ವಿಷಯವನ್ನೂ ಹೇಳುವ ಪ್ರತಿನಿಧಿಗಳು ಅಲ್ಲಿಗೆ ಬರಬಹುದೆಂದು ಆಹ್ವಾನ ಪ್ರಕಟವಾಯಿತು. ಭರತವರ್ಷದ ಪರವಾಗಿ ಯಾರು ಹೋಗಬೇಕು? ಆಗ್ಗೆ ನಮ್ಮ ಸೀಮೆಯಲ್ಲಿ, ಮೇಡಮ್ ಬ್ಲವಾಟ್ಸ್ಕಿ ಕರ್ನಲ್ ಆಲ್ಕಾಟರವರ ಪ್ರಭಾವದಿಂದ ಏರ್ಪಟ್ಟಿದ್ದ ಥಿಯಸಾಫಿಕಲ್ ಸೊಸೈಟಿ, ಇದಕ್ಕೆ ಹಿಂದೆಯೇ ಏರ್ಪಟ್ಟಿದ್ದ ಬ್ರಾಹ್ಮಸಮಾಜ, ಇವು ಇಂಥ ವಿಷಯವನ್ನು ಯೋಚಿಸುವ ಸ್ಥಿತಿಯಲ್ಲಿದ್ದ ಸಂಸ್ಥೆಗಳು. ಇವರಿಗಲ್ಲದೆ ಇನ್ನು ಯಾರಿಗೂ ಪರದೇಶಕ್ಕೆ ಹೋಗುವ ಪ್ರವೃತ್ತಿಯಿಲ್ಲ; ಹೋದರೆ ಅಲ್ಲಿ ನಡೆಸಿಕೊಂಡು ಬರಬಹುದೆಂಬ ದಾರ್ಢ್ಯವಿಲ್ಲ. ಆದರೆ ಬ್ರಾಹ್ಮಸಮಾಜವು ಸನಾತನ ಧರ್ಮದ ಪರಿಷ್ಕೃತ ರೂಪ; ಥಿಯಸಾಫಿಕಲ್ ಸೊಸೈಟಿ ಎಲ್ಲ ಮತಗಳಿಂದ ಅಷ್ಟಷ್ಟು ಒಳ್ಳೆಯದನ್ನು ಎತ್ತಿ ಕಲಸಿದ ಬೆರಕೆಯ ಧರ್ಮ. ಇವರು ಯಾರು ಹೋದರೂ ಸನಾತನ ಧರ್ಮದ ಪ್ರತಿನಿಧಿಗಳಾಗಿ ಹೋದರು ಎನ್ನುವಂತಿಲ್ಲ. ಆಗ ವಿವೇಕಾನಂದನು

ಪ್ರಾತಿನಿಧ್ಯಕ್ಕೆ ತಕ್ಕವನೆಂದು ಅನೇಕರಿಗೆ ತೋರಿತು; ವಿವೇಕಾನಂದನೂ ಹೋಗಲು ಒಪ್ಪಿದನು. ಪ್ರಮುಖರು ಸೇರಿ ಅವನಿಗೆ ಧನವನ್ನು ಒದಗಿಸಿ ಕೊಟ್ಟರು. ಈ ಸಂದರ್ಭದಲ್ಲಿ ಮೈಸೂರ ಮಹಾರಾಜರು ಸ್ವಾಮಿ ವಿವೇಕಾನಂದರಿಗೆ ನೆರವಾದರೆನ್ನುವುದು ಕರ್ಣಾಟಕದ ಮುಂದಿಗೆ ಹೆಮ್ಮೆಯ ವಿಷಯ. ಎಲ್ಲರ ಆಸೆ ಆಶ್ವಾಸನದ ಹೊರೆಯಿಂದ ಗೌರವಿತನಾಗಿ ರಾಮಕೃಷ್ಣನ ಪ್ರಿಯಶಿಷ್ಯನು ಸ್ವಲ್ಪದರಲ್ಲೆ ಸನಾತನ ಧರ್ಮದ ಪ್ರತಿನಿಧಿಯಾಗಿ ಅಮೆರಿಕಾದೇಶಕ್ಕೆ ತೆರಳಿದನು.

ಇದಾಗಿ ಈಗ ನಲವತ್ತು ವರ್ಷದ ಮೇಲಾಗಿದೆ; ಈ ನಲವತ್ತು ವರ್ಷದಲ್ಲಿ ಪ್ರಪಂಚ ಬಹಳ ಮಾರ್ಪಟ್ಟಿದೆ. ಆಗಿನ ಕಾಲಕ್ಕೆ ಪ್ರಪಂಚದಲ್ಲಿ ಭರತವರ್ಷದ ಸ್ಥಾನ ಹೇಗಿತ್ತೆನ್ನುವುದು ಈಗಣ ನಮಗೆ ಊಹಿಸುವುದಕ್ಕೂ ಕಷ್ಟ. ಇಂಡಿಯಾ ದೇಶದಲ್ಲಿ ಮತಗಳುಂಟೆಂದು ಪಶ್ಚಿಮ ದೇಶದ ಜನರು ಬಲ್ಲರು. ಆದರೆ ಈ ಮತಗಳು ಅನಾಗರಿಕ ಮತ್ತು ವಿಲಕ್ಷಣವಾದ ಮತಗಳೆಂದು ಅವರು ತಿಳಿದಿದ್ದರು. ಭರತವರ್ಷದ ಉಪಾಸಕರು ಬರಿಯ ಮೈಯಲ್ಲಿ ಓಡಾಡುವವರು, ಬಿಸಿಲಲ್ಲಿ ತಲೆಕೆಳಗಾಗಿ ನಿಲ್ಲುವವರು, ಮುಳ್ಳಿನಮೇಲೆ ಮಲಗುವವರು, ಕೆಂಡದಲ್ಲಿ ನಡೆಯುವವರು, ಎಂದು ಒಂದು ಪ್ರತೀತಿ. ಜಗನ್ನಾಥಪುರಿಯನ್ನು ಕುರಿತು ಮುಖ್ಯ ಭಾವನೆ ಅಲ್ಲಿ ಯಾತ್ರಿಕರು ಚಕ್ರಕ್ಕೆ ಮಕ್ಕಳನ್ನು ಬಲಿ ಕೊಡುವರು ಎನ್ನುವುದು. ಇಲ್ಲಿಯ ಮೂವತ್ತು ಕೋಟಿಯ ಪ್ರಜೆಯನ್ನು ಇಂಥ ಅವಗಡದ ಮತದಿಂದ ಉದ್ಧರಿಸಬೇಕೆಂದು ಕ್ರೈಸ್ತ ಧರ್ಮದ ಪ್ರಚಾರಕ ಮಂಡಲಿಗಳು ಉತ್ಸಾಹದ ಕೋಲಾಹಲದಲ್ಲಿ ಇರುತ್ತಿದ್ದುವು. ಕ್ರೈಸ್ತ ಸಮಿತಿಗಳ ಅಭಿಪ್ರಾಯದಲ್ಲಿ ಹಿಂದೂ ಧರ್ಮ ತಾನೇ ಉದ್ಧಾರವಾಗುವುದಕ್ಕೆ ಮಾಡಿದ ಪ್ರಯತ್ನವೆಂದರೆ ಬ್ರಾಹ್ಮಸಮಾಜ; ಆದರೆ ಕ್ರೈಸ್ತಧರ್ಮದ ಕಡೆಗೆ ಮಾಲ್ಕೆಯನ್ನು ತೋರಿದ ಈ ಸಮಾಜ ಅರ್ಧದಲ್ಲಿ ನಿಂತಿದೆಯೆಂದು ಅವರಿಗೆ ಅತೃಪ್ತಿ. ಕೇಶವಚಂದ್ರನು ಮೂರು ಪಾಲು ಕ್ರೈಸ್ತನ ಕಡೆಗೆ ಬಂದನೆಂದು ಅವರು ಸ್ವಲ್ಪ ಸಂತೋಷಪಟ್ಟಿದ್ದರು. ಆದರೆ ಅವನೂ ಕೊನೆಕೊನೆಗೆ ಹಿಂದಕ್ಕೆ ಸರಿದಿದ್ದನು; ಏನಾದರೂ ಒಂದು ಮುಖವಾಗಿ ನಿಲ್ಲುವ ಮೊದಲು ತೀರಿಹೋಗಿದ್ದನು. ಸಾಲದುದಕ್ಕೆ ಇವರೆಲ್ಲರ ಕಣ್ಣಿಗೆ ಭರತವರ್ಷ

ಅಸ್ವತಂತ್ರವಾದ ಒಂದು ದೇಶ; ನೂರಾರು ವರ್ಷದಕಾಲ ಹೆರವರ ಅಧೀನದಲ್ಲಿ ಬಾಳನ್ನು ಹೊರೆದಿತ್ತು. ಈ ಕಾರಣದಿಂದ ಭರತವರ್ಷದ ಜನರು, ಸಂಸ್ಕೃತಿಯಲ್ಲಿ ನೀತಿಯಲ್ಲಿಧರ್ಮದಲ್ಲಿ ವ್ಯವಹಾರದಲ್ಲಿ, ಸೋತವರು, ಹಿಂದೆ ಬಿದ್ದವರು, ಎನ್ನುವುದೇ ಪಾಶ್ಚಾತ್ಯ ಜನಾಂಗಗಳ ದೃಢವಾದ ನಂಬಿಕೆಯಾಗಿದ್ದಿತು. ಮ್ಯಾಕ್ಸ್‌ಮುಲ್ಲರಂತೆ ಸಾವಿರದಲ್ಲಿ ಹತ್ತು ಸಾವಿರದಲ್ಲಿ ಒಬ್ಬರು ಇಬ್ಬರು ಭರತವರ್ಷದ ಸಂಸ್ಕೃತಿಯನ್ನು ಕುರಿತು ಗೌರವವಾದ ಭಾವವನ್ನಿಟ್ಟುಕೊಂಡಿದ್ದರೂ ಮಿಕ್ಕ ವಿಷಯದಲ್ಲಿ ಈ ಜನಾಂಗ ಈಗಣ ಸ್ಥಿತಿಯಲ್ಲಂತೂ ಕೀಳುತರದ್ದು ಎಂದು ಎಣಿಸುತ್ತಿದ್ದರು. ಚಿಕಾಗೋ ನಗರದಲ್ಲಿ ನಡೆದದ್ದು ಸರ್ವಮತಗಳ ಪರಿಷತ್ತಾದಕಾರಣ ವಿವೇಕಾನಂದನಿಗೂ ಅಲ್ಲಿ ಅವಕಾಶದೊರೆಯಿತು. ಹಾಗಲ್ಲದೆ ಗಣ್ಯವಾದ ಮತಗಳ ಪರಿಷತ್ತು ಎಂದಿದ್ದರೆ ಹಿಂದೂಮತದ ಪ್ರತಿನಿಧಿಗೆ ಅಲ್ಲಿ ಅವಕಾಶ ದೊರೆಯುತ್ತಿದ್ದಿತೊ ಎಂದೇ ನಾವು ಸಂದೇಹಪಡಬೇಕು.

ಚಿಕಾಗೋನಗರದ ಈ ಸರ್ವಮತಗಳ ಪರಿಷತ್ತಿನಲ್ಲಿ ವಿವೇಕಾನಂದನು ಸಾಧಿಸಿದ ಜಯ ಎಂಥದೆಂಬುದನ್ನು ಈಗ ಯಾರೂ ಹೊಸದಾಗಿ ಹೇಳಬೇಕಾಗಿಲ್ಲ. ಅದು ಜಗತ್ತಿನ ಇತಿಹಾಸದಲ್ಲಿ ಒಂದು ಗುರುತಾಗಿ ನಿಂತಿದೆ. ಅದಕ್ಕೆ ಹಿಂದೆ ಸುಮಾರು ಅರವತ್ತು ವರುಷದಲ್ಲಿ ರಾಜಾ ರಾಮಮೋಹನರಾಯನೂ, ಸುಮಾರು ಹತ್ತು ವರುಷದಲ್ಲಿ ಕೇಶವಚಂದ್ರಸೇನನೂ, ಪಾಶ್ಚಾತ್ಯ ಜನರಿಗೆ ಅರ್ಹರೆಂದು ಕಂಡಿದ್ದರು; ಅವರು ಕ್ರೈಸ್ತಧರ್ಮದ ಪ್ರಭಾವದಿಂದ ಸಂಸ್ಕೃತರಾಗಿದ್ದವರು. ವಿವೇಕಾನಂದನು ಕ್ರೈಸ್ತಧರ್ಮದ ತತ್ವಗಳನ್ನು ಪ್ರತಿಧ್ವನಿಮಾಡಿದಂತೆ ಮಾತನಾಡಲಿಲ್ಲ; ಹಿಂದೂಧರ್ಮದ ಸಾರವೆಂದು ಅವರಿಗೆ ಅಪರಿಚಿತವಾದ ವಿಷಯವನ್ನು ಅಮೋಘವಾದ ರೀತಿಯಲ್ಲಿ ತನ್ನದೇ ಆದ ಒಂದು ದಾರಿಯಿಂದ ಪ್ರತಿಪಾದಿಸಿದನು. ವಿಷಯ, ರೀತಿ, ಎರಡರಿಂದಲೂ ಸಭೆ ಚಮತ್ಕೃತವಾಯಿತು. ಉಳಿದ ಮತಗಳ ಪ್ರತಿನಿಧಿಗಳು, ಮಹಿಳೆಯರೇ ಮಹನೀಯರೇ, ಮಹಿಳೆಯರೇ ಮಿತ್ರರೇ, ಎಂದು ಮೊದಲಾಗಿ ಸಭೆಯನ್ನು ಸಂಬೋಧಿಸುತ್ತಿರುವಲ್ಲಿ ಈ ತರುಣ ಸಂನ್ಯಾಸಿ ಎದ್ದು, 'ಅಮೆರಿಕಾದೇಶದ ನನ್ನ ಸಹೋದರ ಸಹೋದರಿಯರೇ,' ಎಂದು ಭಾಷಣವನ್ನು ಆರಂಭಿಸಿದನು. ಸಂಬೋಧನೆಯ ಈ ಅಪೂರ್ವ

ಪದ್ಧತಿಯಿಂದಲೇ ಸಭೆ ಆನಂದದಿಂದ ಕರತಾಡನಮಾಡಿ ಉದ್ಘೋಷಿಸಿತು. ಅಂದಿನ ಅರ್ಧ ತಾಸಿನ ಭಾಷಣದಿಂದ ಅಲ್ಲಿ ನೆರೆದಿದ್ದ ಜನವೆಲ್ಲ ಹಿಂದೂ ಧರ್ಮದ ಉದಾತ್ತ ಕಲ್ಪನೆಗಳಿಗೆ ಮನಸ್ಸನ್ನು ಮಾರುಕೊಟ್ಟಿತು. ಆಮೇಲೆ ಕೆಲವು ದಿನ ನಡೆದ ಸಭೆಯುಲ್ಲೆಲ್ಲ ಕಾರ್ಯಕ್ರಮದಲ್ಲಿ ಹಿಂದೂ ಧರ್ಮಕ್ಕೆ ಸರತಿ ಇಲ್ಲದಿದ್ದರೂ ವಿವೇಕಾನಂದನ ಉಪನ್ಯಾಸವನ್ನು ಕೇಳಬೇಕೆಂದು ಜನರು ಅಪೇಕ್ಷಿಸಿದ್ದರಿಂದ ಈತನು ಮಾತನಾಡುವಂತೆ ಏರ್ಪಾಡಾಯಿತು. ಉಳಿದ ಜನರು ಮಾತನಾಡುವಾಗ ಜನರು ಎದ್ದು ಅತ್ತ ಇತ್ತ ಹೋಗು ವರು; ವಿವೇಕಾನಂದನು ಮಾತನಾಡುತ್ತಾನೆಂದರೆ, ಬೇಗನೆ ಬಂದು ಸಭಾಮಂದಿರವನ್ನು ತುಂಬುವರು. ಪರಿಷತ್ತಿನ ವ್ಯವಸ್ಥಾಪಕರು ಜನರನ್ನು ಸಭೆಯಲ್ಲಿ ನಿಲ್ಲಿಸಿಕೊಳ್ಳುವುದಕ್ಕಾಗಿ, ಕೊನೆಗೆ ಸ್ವಾಮಿ ವಿವೇಕಾನಂದರು ಮಾತನಾಡುತ್ತಾರೆ, ಎಂದು ಪ್ರಕಟಿಸುವುದಕ್ಕೆ ಮೊದಲುಮಾಡಿದರು. ಸ್ವಾಮಿ ವಿವೇಕಾನಂದನು ಧರ್ಮವನ್ನು ಸಾರಿದನು, ಸಭೆಯ ಮನಸ್ಸನ್ನು ಸೂರೆಗೊಂಡನು; ವಾಗ್ಮಿತೆಯಿಂದ ಮಂದಿಯನ್ನು ಮರುಳುಮಾಡಿದನು, ಪ್ರತಿಭೆಯಿಂದ ಅವರ ಮನಸ್ಸಿನ ಕಣ್ಣನ್ನು ತೆರೆದನು; ಇವನನ್ನು ಪಡೆದ ಧರ್ಮ, ಇವನನ್ನು ಪಡೆದ ದೇಶ, ವಿಲಕ್ಷಣವಲ್ಲ ವಿಚಿತ್ರವಲ್ಲ ಕ್ಷುದ್ರವಲ್ಲ ಅಸಂಸ್ಕೃತವಲ್ಲ, ನಾವು ಕಂಡಿರುವ ಧರ್ಮಕ್ಕೆ ಸಂಸ್ಕೃತಿಗೆ ಮಿಗಿಲಾದ ಧರ್ಮ ಸಂಸ್ಕೃತಿಗಳನ್ನು ಇವನ ಜನ ಕಂಡಿದೆ, ಎಂದು ಅವರಿಗೆ ಮನಗಾಣಿಸಿದನು. ಇದರಿಂದ ಅವನು ಲೋಕ ಪ್ರಸಿದ್ಧನಾದನು. ಹಾಗೆಯೇ ತನ್ನ ಜನಾಂಗಕ್ಕೆ ಪ್ರಪಂಚದ ಜನಾಂಗಗಳ ಮಧ್ಯೆ ಉನ್ನತ ವಾದ ಒಂದು ಸ್ಥಾನವನ್ನು ಸಂಪಾದಿಸಿದನು. ಬಹುಕಾಲ ತಲೆ ತಗ್ಗಿಸಿ ಕುಳಿತಿದ್ದ ಭರತಮಾತೆ ಮಗನ ವಿಜಯವನ್ನು ನೋಡಿ ಹಿಗ್ಗಿ ತಲೆ ಎತ್ತಿ ದಳು; ಅವಳ ಪುನರುಜ್ಜೀವನದ ಇತಿಹಾಸ ಅಂದು ಮೊದಲಾಯಿತು; ಇವಳು ರಾಣಿ ಎಂದು ಲೋಕ ಅವಳಿಗೆ ಮತ್ತೆ ಕಿರೀಟವನ್ನು ಇಟ್ಟಿತು.

ಇದಾದಮೇಲೆ ಸ್ವಾಮಿ ಅಮೆರಿಕಾದೇಶದಲ್ಲಿ ಹಲವು ಸ್ಥಳಗಳಿಂದ ಆಹ್ವಾನವನ್ನು ಪಡೆದು ಹೋಗಿ ನೂರಾರು ಸಭೆಗಳಲ್ಲಿ ಉಪನ್ಯಾಸಮಾಡಿ ಚಿಕಾಗೋ ನಗರದಲ್ಲಿ ಆರಂಭಿಸಿದ ಸನಾತನ ಧರ್ಮದ ವಿಜಯಯಾತ್ರೆ ಯನ್ನು ಪೂರ್ತಿಮಾಡಿದನು. ಆಮೇಲೆ ಭರತಭೂಮಿಗೆ ಹಿಂದಿರುಗಿದನು.




ಬೇಲೂರು ಮಠ

ಸಿಂಹಳದ್ವೀಪದ ಕೊಲಂಬೋ ನಗರದಲ್ಲಿ ಹಡಗಿನಿಂದ ಇಳಿದು, ಸ್ಥಳದಿಂದ ಸ್ಥಳಕ್ಕೆ ಪ್ರಯಾಣ ಮಾಡುತ್ತ, ನಮ್ಮ ದೇಶದ ಊರು ಊರಿನಲ್ಲೂ ಸಾವಿರಾರು ಜನರು ನೆರೆದ ಸಭೆಗಳಲ್ಲಿ ಉಪನ್ಯಾಸಮಾಡುತ್ತ, ಅಮೆರಿಕಾ ದೇಶದ ತನ್ನ ಅನುಭವವನ್ನು ತಿಳಿಸಿ ಪಾಶ್ಚಾತ್ಯ ಜನಾಂಗಕ್ಕೆ ನಮ್ಮಿಂದ ಏನು ಪ್ರಯೋಜನವಾಗಬಹುದು, ಅವರಿಂದ ಭರತವರ್ಷಕ್ಕೆ ಆಗಬೇಕಾದ ಸಹಾಯವೇನು, ಹಿಂದೂ ಧರ್ಮದ ಮಹಿಮೆ ಎಂಥದು, ಹಿಂದೂ ಸಮಾಜದ ಕೊರತೆಗಳೇನು, ಈ ಜನಾಂಗ ಬದುಕುವ ದಾರಿ ಯಾವುದು, ಎಂದು ಮುಂತಾಗಿ ಉಪದೇಶಮಾಡಿ ಜನತೆಯನ್ನು ಎಚ್ಚರಗೊಳಿಸಿದನು. ಮಾತೆಯ ಕೀರ್ತಿಯನ್ನು ಪರದೇಶದಲ್ಲಿ ಹರಡಿ ವಿಜಯಿಯಾಗಿ ಬಂದ ಪ್ರತಿನಿಧಿಯನ್ನು ದೇಶ ಕೊಂಡಾಡಿ ಪೂಜಿಸಿತು. ವಿವೇಕಾನಂದನು ಆಮೇಲೆ ಇಂಗ್ಲೆಂಡಿಗೆ ಹೋದನು, ಮತ್ತೆ ಅಮೆರಿಕಾಕ್ಕೆ ಹೋದನು: ಅಲ್ಲಿ ಶಿಷ್ಯರನ್ನು ಸಂಪಾದಿಸಿದನು, ಮಠಗಳನ್ನು ಏರ್ಪಡಿಸಿದನು; ಅಭಿಮಾನಿ ಧನಿಕರಿಂದ ಸಹಾಯವನ್ನು ಸ್ವೀಕರಿಸಿ ಭರತವರ್ಷದಲ್ಲಿ ಜನತೆಯ ಸೇವೆಯ ಸಂಸ್ಥೆಗಳನ್ನು ಮೊದಲುಮಾಡಿದನು. ಪೌರ್ವಾತ್ಯ ಪಾಶ್ಚಾತ್ಯ ಎಂಬ ಭೇದವನ್ನು ಕಿತ್ತೊಗೆದು, ಪ್ರಪಂಚದ ಬಾಳುವೆಯೆಲ್ಲ ಒಂದು, ಇನ್ನು ಮೇಲಣ ಇತಿಹಾಸದಲ್ಲಿ ಜನಾಂಗಗಳೆಲ್ಲ ಪರಸ್ಪರ ವಿಶ್ವಾಸದಿಂದ ನಡೆದರೆ ಮಾತ್ರ ಬದುಕಬಹುದು, ವಿಶ್ವ ಒಂದು ಕುಟುಂಬ ಎಂಬ ಭಾವವನ್ನು ಪ್ರಾಜ್ಞರಲ್ಲಿ ಬಿತ್ತಿದನು; ರಾಮಕೃಷ್ಣನ ಉಪದೇಶವನ್ನು ಲೋಕಕ್ಕೆ ಹರಡಿದನು. ರಾಮಕೃಷ್ಣನ ಸಂಘದ ಕೇಂದ್ರ ಕಾರ್ಯಸ್ಥಾನವಾಗಿ ಕಲಿಕತೆಯ ಬಳಿ ಬೇಲೂರಿನಲ್ಲಿ ಒಂದು ಮಠವನ್ನು ಕಟ್ಟಿದನು. ಅಲ್ಲಿಂದಲೇ ಈ ಸಂದೇಶ ಈಗಲೂ ಪ್ರಪಂಚಕ್ಕೆಲ್ಲ ಹರಿಯುತ್ತಿರುವುದು.

ಸನಾತನ ಧರ್ಮದಲ್ಲಿ ಯಾವ ಗುಣವನ್ನು ಕಂಡು ಪಾಶ್ಚಾತ್ಯ ಜನತೆ ಅದಕ್ಕೆ ಮರ್ಯಾದೆ ತೋರಿತು ಎನ್ನುವುದು ಈ ಸಂದರ್ಭದಲ್ಲಿ ತಾನಾಗಿ ತಲೆದೋರುವ ಪ್ರಶ್ನೆ. ಇದಕ್ಕೆ ಸಂಪೂರ್ಣವಾದ ಉತ್ತರವನ್ನು ಕೆಲವು ಮಾತಿನಿಂದ ಹೇಳುವುದು ಸಾಧ್ಯವಲ್ಲ; ಆದರೆ ಆ ಗುಣದ ಸ್ವರೂಪ ತಿಳಿಯುವಂತೆ ಒಂದು ಸಂಗತಿಯನ್ನು ಹೇಳಬಹುದು. ಕ್ರೈಸ್ತ ಧರ್ಮದಲ್ಲಿ ಮನುಷ್ಯನು ದೇವರೆದುರಿಗೆ, 'ನಾನು ಪಾಪಿ, ನನ್ನ ತಪ್ಪನ್ನು ಮನ್ನಿಸು,'

ಎಂದು ಪ್ರಾರ್ಥಿಸುವುದು ಒಂದು ಮುಖ್ಯ ತತ್ತ್ವ. ಮನುಷ್ಯನು ದೇವರ ಮುಂದೆ ಹೀಗೆ ಹೇಳುವುದು ಅವಶ್ಯಕ; ಅವನ ಜೀವನದಲ್ಲಿ ತಪ್ಪು ಎನ್ನುವುದು ಇದ್ದೇ ಇರುತ್ತದೆ; ಆದ್ದರಿಂದ ಎಲ್ಲ ಮತಸ್ಥಾಪಕರೂ ತಪ್ಪನ್ನು ಒಪ್ಪಿಕೊ ಎಂದು ಉಪದೇಶಮಾಡಿದ್ದಾರೆ. ಕ್ರೈಸ್ತ ಧರ್ಮದಲ್ಲಿರುವಂತೆ ಇತರ ಧರ್ಮಗಳಲ್ಲಿಯೂ ಭಕ್ತನಿಗೆ ಈ ನಿಲುವು ಉಕ್ತವಾಗಿದೆ. ಆದರೆ ಕ್ರೈಸ್ತಧರ್ಮದಲ್ಲಿ ಇದು ಹೊರತು ಬೇರೆ ಏನೂ ಉಕ್ತವಾಗಿಲ್ಲ. ಆದಕಾರಣ ತಪ್ಪನ್ನು ಎಷ್ಟು ಹೆಚ್ಚಾಗಿ ಒಪ್ಪಿಕೊಂಡರೆ ಅಷ್ಟು ಒಳ್ಳೆಯದೆಂಬ ಭಾವ ಒಂದು ಬೆಳೆದಿದೆ. ವಿವೇಕಾನಂದನು ಈ ಭಾವನೆಯಲ್ಲಿ ಬೆಳೆದಿದ್ದ ಮತ್ತು ಇದರ ಅತಿಯನ್ನು ನೋಡಿ ಬೇಸರಪಟ್ಟಿದ್ದ ಜನಕ್ಕೆ, 'ಮನುಷ್ಯನ ಆತ್ಮ ಪರಮಾತ್ಮದ ಒಂದು ಅಂಶ, ಜೀವವು ಸ್ವರೂಪತಃ ಸಚ್ಚಿದಾನಂದ ವಸ್ತು, ಅದು ಪಾಪದಲ್ಲಿ ಕಾರಣಾಂತರದಿಂದ ನಡೆಯಬಹುದು, ಅಷ್ಟರಿಂದ ಅದು ಪಾಪಿಯಾಗುವುದಿಲ್ಲ, ಅದಕ್ಕೆ ಪಾಪ ಅಂಟುವುದಿಲ್ಲ,' ಎಂದು ಉಪದೇಶಿಸಿದನು. ನೀವು ಪಾಪಿಗಳಲ್ಲ, ಅಮೃತದ ಪುತ್ರರು, ಆನಂದರೂಪನ ಪ್ರತಿಮೂರ್ತಿಗಳು, ಎಂದು ಉದ್ಘೋಷಿಸಿದನು. ನನಗೆ ಹುಚ್ಚೋ ಎಂದು ಕುಳಿತಿದ್ದವನಿಗೆ ನೀನು ಭಕ್ತನು ಎಂದು ಹೇಳಿದಂತೆ, ಬಾತುಗಳ ಮಧ್ಯದಲ್ಲಿ ಸೇರಿ ತಾನು ಯಾರೆಂದು ತಿಳಿಯದೆ ಖಿನ್ನವಾಗಿದ್ದ ಪಕ್ಷಿಗೆ ನೀನು ಹಂಸವೆಂದು ತಿಳಿಸಿದಂತೆ, ವಿವೇಕಾನಂದನು ಆಶಾಜನಕವಾದ ಈ ಸಂದೇಶವನ್ನು ಸಾರಿ ಪಶ್ಚಿಮ ದೇಶದ ಆತ್ಮವನ್ನು ಕವಿದಿದ್ದ ಅಂಧಕಾರವನ್ನು ತೊಲಗಿಸಿದನು. ಮನುಷ್ಯನು ತನ್ನ ಸ್ವರೂಪವನ್ನು ತಿಳಿಯುವುದೇ ಬಿಡುಗಡೆಗೆ ಮೂಲ ಎಂದು ಗುರು ಹೇಳುತ್ತಿದ್ದ ಒಂದು ಕತೆಯನ್ನು ಸ್ವಾಮಿ ಆ ಜನರಿಗೆ ಹೇಳಿದನು. ಒಂದು ತಾಯಿ ಹುಲಿ ಗರ್ಭಿಣಿಯಾಗಿದ್ದಾಗ ಒಂದು ಕುರಿಹಿಂಡಿನ ಮೇಲೆ ಬಿದ್ದು ಅದನ್ನು ಕಾಯುವವರ ಕೈಗೆ ಸಿಕ್ಕಿ ಪೆಟ್ಟು ತಿಂದು ಜೀವ ಬಿಟ್ಟಿತು. ಜೀವವನ್ನು ಬಿಡುವ ಮೊದಲು ಆ ಹಿಂಡಿನ ಮಧ್ಯೆ ಅದು ಮರಿ ಹಾಕಿತು. ಕುರಿ ಕಾಯುವವರು ಆ ಮರಿಯನ್ನು ಎತ್ತಿಕೊಂಡು ಕುರಿಗಳ ಜೊತೆಗೆ ಕುರಿಯಂತೆ ಸಾಕಿದರು. ಆ ಹುಲಿಯ ಮರಿ ಕೂಡ ಕುರಿಗಳಂತೆ ಹುಲ್ಲನ್ನು ತಿನ್ನುತ್ತ ಕುರಿಗಳೊಡನೆ ಓಡಾಡುತ್ತ ತಾನು ಒಂದು ಕುರಿಯೆಂದೇ ತಿಳಿದು

ಬೆಳೆಯಿತು. ಒಂದು ಸಲ ಇನ್ನೊಂದು ಹುಲಿ ಕುರಿಹಿಂಡಿನ ಮೇಲೆ ಬಿದ್ದಿತು. ಕುರಿಗಳೆಲ್ಲ ಚದರಿಹೋದವು. ಈ ಹುಲಿಯ ಮರಿ ಅವುಗಳ ಮಧ್ಯೆ ಇರಲು ದೊಡ್ಡ ಹುಲಿ ಇದನ್ನು ಕರೆದು, 'ಅಯ್ಯಾ, ನೀನು ಇಲ್ಲಿ ಹೇಗೆ ಬಂದೆ,' ಎಂದು ಕೇಳಿತು. ಮರಿಗೆ ಅದು ತಿಳಿಯದು. 'ನೀನು ಕುರಿಯಲ್ಲ ವೆನ್ನುವುದನ್ನು ನೀನು ಬಲ್ಲೆಯಾ?' 'ನಾನು ಮತ್ತೇನು?' ಹುಲಿ ಅದನ್ನು ಕರೆದುಕೊಂಡು ಒಂದು ಹೊಳೆಯ ಬಳಿಗೆ ಹೋಗಿ ಮರಿಯನ್ನು ತನ್ನ ಪಕ್ಕದಲ್ಲಿ ನಿಲ್ಲಿಸಿಕೊಂಡು, 'ಇಣಿಕಿ ನೋಡು, ನೀನು ಯಾರು ಎಂದು ತಿಳಿ,' ಎಂದಿತು. ಮರಿ ಇಣಿಕಿನೋಡಿತು. ತಾನು ಹುಲಿಯಂತೆ ಇರುವುದನ್ನು ಕಂಡಿತು. ಹುಲಿ ಅದಕ್ಕೆ ಆಗ, 'ನೀನು ಕುರಿಯಲ್ಲ, ನನ್ನಂತೆ ಒಂದು ಹುಲಿ, ಹುಲಿಯಂತೆ ಬಾಳು,' ಎಂದು ಹೇಳಿತು. ನಾನು ಪಾಪಿ ಎಂದು ಕೊಳ್ಳುವ ಮನುಷ್ಯನೂ, ನಾನು ದುರ್ಬಲನು ಎಂದುಕೊಳ್ಳುವ ಮನುಷ್ಯನೂ, ಕುರಿಗಳ ಮಧ್ಯೆ ಬೆಳೆದ ಹುಲಿಯಂತೆ; ಸ್ವರೂಪ ಜ್ಞಾನ ವಿಲ್ಲದ ಕಾರಣ ಹಾಗೆಂದುಕೊಳ್ಳುತ್ತಾರೆ. ನಿಜವಾಗಿ ಅವರು ಪಾಪಿಗಳೂ ಅಲ್ಲ, ದುರ್ಬಲರೂ ಅಲ್ಲ; ಅಮೃತದ ಪುತ್ರರು, ಆನಂದಮೂರ್ತಿಗಳು.

ವಿವೇಕಾನಂದನ ಈ ಸಂದೇಶ ಒಬ್ಬೊಬ್ಬ ಮನುಷ್ಯನ ಆತ್ಮವನ್ನು ಮಾತ್ರವಲ್ಲ, ಮನುಜಕುಲದ ಆತ್ಮವನ್ನೇ ಒಂದು ಸೆರೆಯಿಂದ ಬಿಡಿಸಿತು. ಅವನು ಹೇಳಿದ ವಿಷಯ ಅಲ್ಲಿಯ ಜನಕ್ಕಾದರೂ ತೀರ ಹೊಸವಲ್ಲ. ಅಲ್ಲಿಯ ಕವಿಗಳ ತತ್ತ್ವಜ್ಞಾನಿಗಳ ವಿಚಾರವಂತರ ಉಪದೇಶದಲ್ಲಿಯೂ ಈ ಸೂತ್ರ ಆಗಾಗ ತಲೆದೋರುತ್ತಿದ್ದಿತು. ಅದರಲ್ಲಿ ಕೆಲವು ಭಾಗ ಆ ಮೊದಲೇ ಅವರ ಸೀಮೆಯನ್ನು ಮುಟ್ಟಿದ್ದ ಗೀತೆ ಉಪನಿಷತ್ತುಗಳ ಪಾಠದಿಂದ ಆ ಜನಕ್ಕೆ ತಿಳಿದುಬಂದಿದ್ದಿತು. ಆದರೆ ಅದು ಬರಿಯ ಪುಸ್ತಕದ ಮಾತಾಗದೆ ಜೀವನದ ಸೂತ್ರವಾಗಿ ಒಂದು ಜೀವಂತ ಸಂದೇಶವಾಗಿ ಕಂಡದ್ದು ಸ್ವಾಮಿ ವಿವೇಕಾನಂದನಲ್ಲಿ. ಈ ಸಂದರ್ಭದಲ್ಲಿ ಕ್ರೈಸ್ತಧರ್ಮವನ್ನು ಕುರಿತು ನಾವು ಒಂದು ವಿಷಯವನ್ನು ತಿಳಿಯುವುದು ಅವಶ್ಯಕ. ಕ್ರೀಸ್ತನು ದೇವ ರನ್ನು ತಂದೆಯೆಂದನು; ತಾನು ದೇವರ ಮಗನೆಂದು ಕರೆದುಕೊಂಡನು; ಎಲ್ಲರೂ ದೇವರನ್ನು ತಂದೆಯನ್ನು ಎಣಿಸಿ ಎಂದು ಹೇಳಿದನು; ಎಲ್ಲ ಜೀವವನ್ನೂ ತನ್ನಂತೆ ಕಾಣುವುದು ಸರಿಯಾದ ಬಾಳು ಎಂದು ಸಾರಿದನು.

ಈ ಉಪದೇಶದ ತಳಹದಿಯಾದ ತತ್ತ್ವಶಾಸ್ತ್ರವನ್ನು ಅವನು ಹೇಳಲಿಲ್ಲ; ಅವನು ಹೇಳಿದ್ದರೆ ಅದನ್ನು ಯಾರೂ ಬರೆದಿಡಲಿಲ್ಲ. ಅವನು ಉಪದೇಶ ಮಾಡುವ ಕಾಲಕ್ಕೆ ಜನವಮನಸ್ಸು ಕೆಲವು ತತ್ತ್ವಗಳನ್ನು ಅಂಗೀಕರಿಸಿದ್ದಿತು; ಅವನು ತನ್ನ ಧರ್ಮವನ್ನು ಅವುಗಳ ಪಟದಲ್ಲಿ ಉಲ್ಲೇಖಿಸಿದನು. ಕ್ರೀಸ್ತನ ಮತವನ್ನು ಉಪದೇಶಿಸುವೆವೆನ್ನುವವರಿಗೆ ಆ ಪಟ ಈಗ ದೊರೆಯುವುದಿಲ್ಲ. ಅದನ್ನು ಬಿಟ್ಟು ಉಪದೇಶವನ್ನು ಎತ್ತಿದರೆ ಅದು ಸಮಗ್ರವಾದ ಒಂದು ಧರ್ಮವಾಗುವುದಿಲ್ಲ. ದೇವರು ತಂದೆ; ಕ್ರೀಸ್ತನು ಮಗನು; ತಾಯಿ ಯೆಲ್ಲಿ? ಕ್ರೀಸ್ತನು ದೇವರನ್ನು ತಂದೆ ಎಂದು ಕರೆದನು; ತಾನು ದೇವರ ಮಗನೆಂದನು; ಉಳಿದ ಜನಕ್ಕೂ ದೇವರನ್ನು ತಂದೆಯೆನ್ನಿ ಎಂದನು; ನೀವೂ ದೇವರ ಮಕ್ಕಳು ಎಂದೇಕೆ ಹೇಳಲಿಲ್ಲ? ತಾನು ಮಾತ್ರ ದೇವರ ಮಗನು, ಉಳಿದವರು ಅಲ್ಲ, ಎಂದು ಅವನ ಅಭಿಪ್ರಾಯವೆ? ಇದು ಕ್ರೀಸ್ತ ಧರ್ಮದಲ್ಲಿ ಲೋಪವಲ್ಲ. ಅವನ ಉಪದೇಶದ ಬರೆದಿರುವಷ್ಟರ ಭಾಗದಲ್ಲಿ ನಮ್ಮ ಕೈಗೆ ಸಿಕ್ಕಿರುವಷ್ಟನ್ನು ಅವನು ಸ್ಥಾಪಿಸಿದ ವಿವಿಕ್ತವಾದ ಸಮಗ್ರವಾದ ಒಂದು ಧರ್ಮ ಎಂದು ಹೇಳುವವರ ಒಂದು ಲೋಪ. ಸಂಗೀತದಲ್ಲಿ ಒಂದು ರಾಗದ ದಾರಿಯನ್ನು ಅದರ ಮುಖ್ಯ ಸ್ವರಗಳಿಂದ ಗುರುತಿಸಿ ತೋರಿಸುತ್ತಾರೆ; ಆದರೆ ಆ ರಾಗ ಆ ಏಳು ಸ್ವರ ಮಾತ್ರದ ಸಮುಚ್ಚಯವಲ್ಲ; ಆ ಸ್ವರಗಳಲ್ಲಿ ಎರಡೆರಡರ ಮಧ್ಯೆ ಇರುವ ಅಂತರ ಶೂನ್ಯವಾಗಿರುವುದಿಲ್ಲ. ಕ್ರೀಸ್ತನ ಉಪದೇಶದಲ್ಲಿ ನಮಗೆ ತಿಳಿದುಬಂದಿರುವ ನಾಲ್ಕು ಮಾತಿನೊಂದಿಗೆ ಅದರ ಧ್ವನಿಯನ್ನು ನಾವು ಗ್ರಹಿಸಬೇಕು. ನೀನೊಬ್ಬನೇ ದೇವರ ಮಗನೇ, ಇಲ್ಲವೆ ನಾವೂ ಅವನ ಮಕ್ಕಳೇ ಎಂದು ಕೇಳಿದ್ದರೆ ಆ ಜ್ಞಾನವರೇಣ್ಯನು ಅಲ್ಲ ಎನ್ನುತ್ತಿದ್ದನೇನು? ಯಾರಾದರೊಬ್ಬರು ನೀನು ದೇವರ ಪಕ್ಕದಲ್ಲಿ ಕುಳಿತುಕೊಳ್ಳುತ್ತೀಯಲ್ಲಾ ಅಲ್ಲಿ ಕುಳ್ಳಿರಬೇಕೆಂದು ನನಗೆ ಆಸೆಯಾಗುತ್ತದೆ ಎಂದಿದ್ದರೆ ಆ ಕಾರುಣ್ಯಮೂರ್ತಿ ಬೇಡವೆನ್ನುತ್ತಿದ್ದನೇನು? ನೀನೂ ದೇವರ ಮಗು, ಅವನ ಪಕ್ಕದಲ್ಲಿ ಕುಳ್ಳಿರುವುದು ಅಣ್ಣನಾದ ನನಗಿರಲಿ, ಹಸುಳೆಯಾದ ನೀನು ಅವನ ತೊಡೆಯಮೇಲೆ ಕುಳಿತುಕೊ, ಎನ್ನುತ್ತಿದ್ದನು. ದೇವರು ತಂದೆಯಾಗಿ ನಾವು ಮಕ್ಕಳಾದರೆ ತಾಯಿ ಯೆಲ್ಲಿ ಎಂದು ಕೇಳಿದ್ದರೆ, ತಂದೆಯೂ ಅವನೆ, ತಾಯಿಯೂ ಅವನೆ ಎಂದು

ಹೇಳುತ್ತಿದ್ದನು. ಈ ಭಾವನೆ ಮಾನವ ವರ್ಗದ ಒಟ್ಟು ಹೃದಯದಲ್ಲಿ ಉದ್ಭವವಾಗುವ ಧರ್ಮದಲ್ಲಿ ಸೇರಿದೆ. ಕ್ರೈಸ್ತಧರ್ಮಕ್ಕಾದರೂ ಅದೇ ತಳಹದಿ. ಕ್ರೈಸ್ತಮತಗ್ರಂಥ ಒಬ್ಬನ ಚರಿತೆ, ನಾಲ್ವರು ಬರೆದದ್ದು; ಅದರಲ್ಲಿ ಇದನ್ನು ಬರೆದಿಡಲಿಲ್ಲ. ವೇದಾಂತ ಮತಗ್ರಂಥ ಸಾವಿರ ಜನದ ಚರಿತೆ, ಅದನ್ನು ಸಾವಿರ ಜನ ಬರೆದಿದ್ದಾರೆ; ಅವರಲ್ಲಿ ಇದನ್ನು ಬರೆದಿಟ್ಟದೆ. ಆದರಿಂದ ವೇದಾಂತ ಕ್ರೀಸ್ತ ಧರ್ಮವನ್ನು ಸಂಪೂರ್ಣಗೊಳಿಸುತ್ತದೆ. ಕ್ರೀಸ್ತನ ಸಾಂಪ್ರದಾಯಿಕವಾದ ಉಪದೇಶದಲ್ಲಿ ಬಿಟ್ಟುಹೋಗಿದ್ದು, ಅದರ ಸಹಜವಾದ ಭಾಗವಾಗಿ ಅದನ್ನು ಸಂಪೂರ್ಣಗೊಳಿಸಿದ್ದರಿಂದಲೇ ವಿವೇಕಾನಂದನ ಸಂದೇಶ ಪಶ್ಚಿಮ ದೇಶದ ಜನರಿಗೆ ಅವಿರೋಧವಾಗಿ ಆಪ್ಯಾಯಮಾನವಾಗಿ ಉಪಾದೇಯವಾಗಿ ಕಂಡುಬಂದಿತು. ವೇದಾಂತದ ಬೆಳಕಿನಲ್ಲಿ ಕ್ರೈಸ್ತನ ಮೂರುತಿ ಅವರಿಗೆ ಆ ಮೊದಲು ಇದ್ದುದಕ್ಕಿಂತ ಸ್ಪಷ್ಟವಾದ ಆಕಾರವನ್ನು ತಳೆಯಿತು.

ವಿವೇಕಾನಂದನ ಸಂದೇಶದಲ್ಲಿ ಪಾಶ್ಚಾತ್ಯರಿಗೆ ಕಂಡ ಇನ್ನೊಂದು ದೊಡ್ಡ ಗುಣ ಇದು. ಉಳಿದ ಮತಗಳ ಪ್ರತಿನಿಧಿಗಳು, ನಮ್ಮ ದೇವರು ಹೀಗೆ, ನಮ್ಮಮತ ಹೀಗೆ, ಎಂದು ಒಬ್ಬೊಬ್ಬನೂ ಸಂಕುಚಿತವಾದ ಭಾವನೆಯನ್ನು ಹೊರಸೂಸುತ್ತಿರಲು, ವಿವೇಕಾನಂದನು ನಾನು ಹೇಳುವುದು ಎಲ್ಲ ಮತಗಳ ದೇವರನ್ನು ಕುರಿತು, ನಾನು ಸಾರುವ ಧರ್ಮ ಎಲ್ಲ ಧರ್ಮಗಳ ಸಮನ್ವಯ, ನಮ್ಮ ಮತ ಮಾನವಕುಲವೆಲ್ಲದರ ಮತ, ಎಂದು ಉದ್ಘೋಷಿಸಿದನು. ಧರ್ಮದ ಇತಿಹಾಸದಲ್ಲಿ ಹೀಗೆ ಒಂದು ಹೊಸ ಯುಗವೇ ಆರಂಭವಾಯಿತು. ಈ ಮೊದಲೇ ರಾಮಕೃಷ್ಣನ ಹೆಸರನ್ನು ಕೇಳಿ ತಿಳಿದಿದ್ದ ಪಾಶ್ಚಾತ್ಯ ವಿದ್ವನ್ಮಣಿಗಳಿಗೆ ರಾಮಕೃಷ್ಣನನ್ನು ಕುರಿತು ಉಪನ್ಯಾಸಗಳನ್ನು ರಚಿಸುವುದು ಅವಶ್ಯಕವಾಯಿತು. ಇಂಗ್ಲೆಂಡಿನಲ್ಲಿ ಕೆಲವು ವರ್ಷಗಳ ಹಿಂದೆ ಗೀರ್ವಾಣಭಾಷಾಪ್ರೇಮಿ ಮ್ಯಾಕ್ಸ್‌ಮುಲ್ಲರ್ ಮಹಾಶಯನು ಪರಮಹಂಸನನ್ನು ಕುರಿತು ಒಂದು ಲೇಖನವನ್ನು ಪ್ರಕಟಿಸಿದ್ದನು. ವಿವೇಕಾನಂದನ ಸಂದೇಶದಿಂದ ಆ ಹೆಸರು ಮತ್ತಷ್ಟು ಪ್ರಸಿದ್ಧವಾಗಲು ಮ್ಯಾಕ್ಸ್ ಮುಲ್ಲರು ಸ್ವಾಮಿಯನ್ನು ಕೇಳಿ ರಾಮಕೃಷ್ಣನ ಜೀವನದ ಸಂಗತಿಗಳನ್ನು ತಿಳಿದು ಅವನ ಸೂಕ್ತಿಗಳ ಒಂದು ಗುಚ್ಛವನ್ನು ತೆಗೆದುಕೊಂಡು

ಪರಮಹಂಸನ ಸಂಕ್ಷಿಪ್ತ ಚರಿತ್ರೆಯೊಂದನ್ನು ಸೂಕ್ತಿಮಾಲೆಯೊಂದಿಗೆ ಪ್ರಕಟಿಸಿದನು. ಆ ಗ್ರಂಥವು ಈಗಲೂ ಓದುವುದಕ್ಕೆ ಅರ್ಹವಾಗಿದೆ. ನಲವತ್ತು ವರುಷ ಆದಮೇಲೆ ಈಚೀಚೆಗೆ ಫ್ರಾನ್ಸ್‌ದೇಶದ ಮಹಾಕವಿ ರೋಮೇನ್ ರೋಲಾನ್ ಎಂಬ ಮಹನೀಯನು ರಾಮಕೃಷ್ಣ ಸಂಪ್ರದಾಯದ ಶಿಷ್ಯರಲ್ಲಿ ಒಬ್ಬನಿಂದ ಪರಮಹಂಸನ ವಿಷಯವನ್ನು ಕೇಳಿ ಅವನ ಚರಿತೆಯ ವಿಷಯದಲ್ಲಿ ಕುತೂಹಲಪಟ್ಟು ಈ ಸಂಪ್ರದಾಯದ ಶಿಷ್ಯರ ಮತ್ತು ಭಕ್ತರ ಸಹಾಯದಿಂದ ವಿಷಯವನ್ನು ಸಂಗ್ರಹಿಸಿ ರಾಮಕೃಷ್ಣ ಮತ್ತು ವಿವೇಕಾನಂದರ ಚರಿತ್ರೆಯನ್ನೂ ಇವರು ಸಾರಿದ ವಿಶ್ವಧರ್ಮದ ಮುಖ್ಯ ತತ್ತ್ವವನ್ನೂ ಫ್ರೆಂಚ್ ಭಾಷೆಯಲ್ಲಿ ಬರೆದು ಪ್ರಕಟಿಸಿದನು. ಈ ಪುಸ್ತಕ ಇಂಗ್ಲೀಷಿಗೆ ಭಾಷಾಂತರವಾಗಿದೆ. ರೋಮೇನ್ ರೋಲಾನ್ ಕವಿ ರಾಮಕೃಷ್ಣನನ್ನು ವಿಶ್ವಧರ್ಮವನ್ನನುಭವಿಸಿ ರಕ್ಷಿಸಿ ಪ್ರಕಟಿಸಿದ ಅಂಶಪುರುಷನೆಂದು ಹೊಗಳಿದ್ದಾನೆ; ವಿವೇಕಾನಂದನನ್ನು ಆ ಗುರುವಿನ ಉಪದೇಶವನ್ನು ಯೋಗ್ಯ ರೀತಿಯಲ್ಲಿ ಲೋಕಕ್ಕೆ ಸಾರಿ ತನ್ನ ಜನರಲ್ಲಿ ವ್ಯವಹಾರಕ್ಕೆ ತಂದ ವೀರ ಶಿಷ್ಯನೆಂದು ಪ್ರಶಂಸಿಸಿದ್ದಾನೆ; ಆ ಗುರು ಪ್ರಕಟಿಸಿ ಈ ಶಿಷ್ಯನು ಬಳಕೆಗೆ ತಂದ ಧರ್ಮವೂ ತತ್ತ್ವವೂ ಸೃಷ್ಟಿಗೆ ಇಂದು ಬೇಕಾಗಿರುವ ಮತ್ತು ಮನುಜಕುಲವನ್ನು ಮುಂದಕ್ಕೆ ನಡೆಯಿಸುವ ವಿಶ್ವಸಮ್ಮತವಾದ ಧರ್ಮತತ್ತ್ವಗಳೆಂದು ಮುಕ್ತಕಂಠದಿಂದ ಹೇಳಿದಾನೆ. ರಾಮಕೃಷ್ಣನ ಸಂಪ್ರದಾಯದ ಮಠಗಳು ಈಗ ನೂರಾರು ಆಗಿವೆ. ಅವುಗಳಲ್ಲಿ ಲಕ್ಷಾಂತರ ಜನ ಸನಾತನವಾದ ಧರ್ಮದಲ್ಲಿ ನವಯುಗದ ಬಾಳುವೆಗೆ ಬೇಕಾದ ತತ್ತ್ವಗಳನ್ನು ತಿಳಿಯುತ್ತಿದಾರೆ. ಈ ಸಂಪ್ರದಾಯವನ್ನು ಕುರಿತು ನಲವತ್ತು ವರುಷದ ಹಿಂದೆ ಮ್ಯಾಕ್ಸ್‌ಮುಲ್ಲರ್ ಅಂಥ ಧೀಮಂತನು ಕೊಟ್ಟ ಅಭಿಪ್ರಾಯವನ್ನೂ ಈಗ ರೋಮೇನ್ ರೋಲಾನನಂಥ ವಿಶ್ವಪ್ರೇಮಿಯಾದ ಕವಿಪುಂಗವನು ಅನುಮೋದಿಸಿ ನುಡಿದಿರುವುದನ್ನೂ ನೋಡಿದರೆ ರಾಮಕೃಷ್ಣನ ಜೀವನ ಉಪದೇಶಗಳಿಂದ ಲೋಕಕ್ಕೆ ಆಗಬೇಕಾಗಿರುವ ಉಪಕಾರ ಬಹಳವಿದೆಯೆಂದು ತೋರುತ್ತದೆ; ಭಾರತವರ್ಷ ತನ್ನ ಮೂರು ಸಾವಿರ ವರ್ಷದ ಸಾಧನದಲ್ಲಿ ತನಗಾಗಿಯೂ ಲೋಕಕ್ಕಾಗಿಯೂ ಸಿದ್ಧಿಯನ್ನು ಪಡೆಯುವುದರಲ್ಲಿದೆ ಎಂದು ಆಸೆ ಕಾಣುತ್ತದೆ.

ಈ ಸಿದ್ಧಿಯಲ್ಲಿ ಭರತವರ್ಷವನ್ನು ಕುರಿತ ಭಾಗ ಬಹು ಹಿರಿಯದು. ನಮ್ಮ ಜನ ಸಹಜವಾಗಿ ಮತಕ್ಕೆ ಬಹು ಬೆಲೆಯನ್ನು ಕೊಡುವವರು. ಹೀಗೆ ಬೆಲೆ ಕೊಡುವುದರಲ್ಲಿ ಪ್ರಾಸಂಗಿಕವಾಗಿ ಬಂದ ಅತಿಯಿಂದ ದೇಶದ ಮನಸ್ಸು ಛಿದ್ರಛಿದ್ರವಾಗಿ ಹೋಗಿದೆ. ಅದ್ವೈತ ವಿಶಿಷ್ಟಾದ್ವೈತ ದ್ವೈತಗಳ ವಾದ; ಹರಿ ಹರರ ಭೇದದ ಮತ್ತು ಉನ್ನತಿಗಳ ವಾದ; ಆಸ್ತಿಕ ನಾಸ್ತಿಕ ದರ್ಶನಗಳ ವಾದ: ಹೀಗೆ ಮತದಲ್ಲಿ ಸಮ್ಮತಿಗಿಂತಲೂ ವಾದ ಹೆಚ್ಚಾಗಿದೆ. 'ಏಕಂ ಸದ್ವಿಪ್ರಾ ಬಹುಧಾ ವದಂತಿ' ಎಂಬ ಮಾತಿನ ಉಪನಿಷತ್ತು ನಮಗೆ ಅರ್ಥವೇ ಆಗಿಲ್ಲ ಎಂಬಂತೆ ಜನ ಕಾದಾಡುತ್ತಿದೆ. ರಾಮಕೃಷ್ಣನ ಉಪದೇಶದ ಫಲವಾಗಿ ಇದು ಕೊನೆಗಾಣಬೇಕು. ಅನುಭವದಲ್ಲಿ ಅದ್ವೈತ, ಅರಿವಿನಲ್ಲಿ ವಿಶಿಷ್ಟ, ಬಳಕೆಯಲ್ಲಿ ದ್ವೈತ: ಇದು ನಮಗೆ ತಿಳಿಯಬೇಕು. ಸನಾತನ ಧರ್ಮವಲ್ಲದೆ ಇತರ ಮತಗಳೂ ದೇಶದಲ್ಲಿ ಹರಡಿ ಒಂದು ದೇಶದ ಮಕ್ಕಳು ಒಬ್ಬರನ್ನೊಬ್ಬರು ಹಗೆಗಳಂತೆ ಕಾಣುತ್ತಿದ್ದೇವೆ. ಮತ ಬೇರೆಯಾಗುವುದು ಸ್ನೇಹಕ್ಕೆ ಅಡ್ಡಿಯಲ್ಲವೆಂದು ಭಾರತವರ್ಷದ ಮಕ್ಕಳು ಕಲಿಯುವುದು ಆವಶ್ಯಕ. ಇದೂ ನಮಗೆ ರಾಮಕೃಷ್ಣನ ಬಾಳಿನಿಂದ ಸಿದ್ಧಿಸಬೇಕಾಗಿದೆ. ನಾನು ಪಡೆಯಬೇಕಾದದು ಏನೂ ಇಲ್ಲದಿದ್ದರೂ ಲೋಕಸಂಗ್ರಹಕ್ಕಾಗಿ ಕೆಲಸಮಾಡುತ್ತಿದ್ದೇನೆ ಎಂದು ಕೃಷ್ಣನು ಹೇಳಿದ ಮಾತು ರಾಮಕೃಷ್ಣನ ಬದುಕಿನಲ್ಲಿ ಉದಾಹೃತವಾಯಿತು. ಸಂನ್ಯಾಸವನ್ನು ತೆಗೆದುಕೊಳ್ಳುವವನು ತನ್ನ ಸುಖಕ್ಕಾಗಿ ತನ್ನ ಮುಕ್ತಿಗಾಗಿ ಮಾತ್ರ ಯತ್ನಿಸಿದರೆ ಸಾಲದು; ತಾನು ಉದ್ಧಾರದ ದಾರಿಯನ್ನು ಹಿಡಿದು ಜನದ ಸೇವೆಗೆ ಸೊಂಟ ಕಟ್ಟಬೇಕೆನ್ನುವುದು ಈ ಉದಾಹರಣೆಯಿಂದ ವಾಡಿಕೆಗೆ ಬರಬೇಕಾಗಿದೆ. ಮದುವೆಯೆಂದು ಸಮಾಜ ಗುರುತಿಸುವ ಸ್ತ್ರೀಪುರುಷ ಸಂಬಂಧ ಬ್ರಹ್ಮಚರ್ಯದಲ್ಲಿ ಸೇರಿದ್ದೆ ಎನ್ನುವುದನ್ನು ನಮ್ಮ ಸಂಪ್ರದಾಯ ಮರೆತಿದ್ದಿತು. ಮದುವೆಯಾದ ಮಾತ್ರಕ್ಕೆ ವಾರ್ಧಿಕ್ಯದವರೆಗೆ ಭೋಗವೂ ಮಿತಿಯಿಲ್ಲದ ಸಂತಾನವೂ ಕರ್ತವ್ಯವಲ್ಲವೆಂದು ರಾಮಕೃಷ್ಣನು ತನ್ನ ಬಾಳಿನಿಂದ ತೋರಿಸಿದ್ದಾನೆ. ಈ ಧ್ಯೇಯ ಜನತೆಯ ಮನಸ್ಸಿನ ಮುಂದೆ ನಿಲ್ಲಬೇಕಾಗಿದೆ. ಜಾತಿಭೇದ ಕುಲಭೇದಗಳನ್ನು ಪರಸ್ಪರ ವಿಶ್ವಾಸದೊಂದಿಗೆ ಸಮನ್ವಯಮಾಡಿ ನಡೆದು

ಕೊಳ್ಳುವುದನ್ನು ನಮ್ಮ ಜನ ಮರೆತಿದೆ. ನೇಮ ನಿಷ್ಠೆಗಳು ಕೆಲವು ಫಲಕ್ಕಾಗಿ ಅವಶ್ಯಕ, ಅವುಗಳನ್ನು ಬಿಡಬೇಕಾದ ಸಂದರ್ಭ ಇರಬಹುದು, ಎಂದು ಈತನ ಉಪದೇಶದಿಂದ ನಾವು ಕಲಿಯಬೇಕಾಗಿದೆ. ಸನಾತನ ಧರ್ಮದ ಮೂಲಸೂತ್ರ ವಿಶ್ವ ಸೌಹಾರ್ದ. ಈ ಮೂಲಸೂತ್ರಕ್ಕೆ ಗೌಣವಾದ ಇತರ ಸೂತ್ರಗಳು ಅಡ್ಡಬಂದು ಸನಾತನ ಧರ್ಮವು ನಿಸ್ತೇಜವಾದ ದುರ್ಬಲವಾದ ಒಂದೂ ಮತವಾಗಿದೆ. ಮತ್ತೆ ಅದು ಮೂಲಸೂತ್ರಗಳನ್ನು ಹಿಡಿದು ಅವನ್ನು ಸಾಧಿಸಬೇಕಾಗಿದೆ; ಗೌಣವಾದ ಸೂತ್ರಗಳನ್ನು ಬಿಡಬೇಕಾದಲ್ಲಿ ಬಿಟ್ಟು ತನ್ನ ಪೂರ್ವದ ಸ್ವರೂಪವನ್ನು ಪಡೆಯಬೇಕಾಗಿದೆ. ಭರತವರ್ಷ ಮತ್ತೆ ಪ್ರಪಂಚದ ದೇಶಗಳ ಮುಂದೆ ಮಾರ್ಗದರ್ಶಿಯಾಗಿ ನಡೆಯಬೇಕಾಗಿದೆ.

ಪ್ರಪಂಚದ ದೃಷ್ಟಿಯಿಂದ ಕೂಡ ರಾಮಕೃಷ್ಣನ ಜೀವನ ಮತ್ತು ಉಪದೇಶಗಳಿಂದ ಇಂಥದೇ ಒಂದು ಹಿರಿಯ ಕಾರ್ಯ ಆಗಬೇಕಾಗಿದೆ. ಸನಾತನ ಧರ್ಮವು ಕ್ರೈಸ್ತಮತ ಮಹಮ್ಮದೀಯ ಮತಗಳನ್ನು ಒಳಗೊಂಡು ವಿಶ್ವಕ್ಕೆ ಸಮ್ಮತವಾಗುವ ಒಂದು ಧರ್ಮವನ್ನು ಮಾಡಬೇಕಾಗಿದೆ. ಕ್ರೈಸ್ತ ಧರ್ಮವನ್ನು ಅನುಸರಿಸುತ್ತಿದ್ದ ದೇಶಗಳಿಗೆ ಅದರಲ್ಲಿ ವಿಶ್ವಾಸ ಕಡಮೆಯಾಗುತ್ತಿದೆ. ಸಾಮಾನ್ಯ ಜನರ ಕ್ಷೇಮವನ್ನು ಗುರಿಯಾಗಿಟ್ಟುಕೊಂಡ ರಷ್ಯದಂಥ ರಾಷ್ಟ್ರಗಳು ಅತಿಯಾದ ಮತದಿಂದ ಒದಗಿದ ದುರ್ದಶೆಯನ್ನು ಸಹಿಸಲಾರದೆ ನಮಗೆ ಮತ ಬೇಡವೆಂದು ಅದನ್ನು ತೊರೆದಿವೆ. ಗಂಡನ ಕೆಟ್ಟತನದಿಂದ ಹುಚ್ಚು ಹಿಡಿದ ಹೆಂಗಸು ಮಗುವನ್ನು ಕೊಲ್ಲುವುದಕ್ಕೆ ಹೊರಟಂತೆ ಈ ಜನರು ದೇವರನ್ನು ಒಲ್ಲೆವೆನ್ನುತ್ತಿದ್ದಾರೆ. ಯಾವುದರಿಂದ ಕಷ್ಟ ಒದಗುವುದೋ ಅದು ಧರ್ಮವಲ್ಲ; ನಿಜವಾದ ಧರ್ಮ ಲೋಕಕಲ್ಯಾಣದ ಸಾಧನ. ಜೀವ ಬೇಡವೆಂದು ಹೇಳುವ ದೇವರು ದೇವರಲ್ಲ; ಅವನನ್ನು ಬೇಡವೆನ್ನುವುದು ತಪ್ಪೂ ಅಲ್ಲ. ಕೆಟ್ಟ ವಸ್ತುವೆಂದು ದೇವರನ್ನು ತೊರೆದ ಜನತೆಯು ಮಂಗಳಕ್ಕೆಂದು ರಾಷ್ಟ್ರ ಯಾವುದನ್ನು ಹಿಡಿಯುತ್ತದೆಯೋ ಅದೇ ಧರ್ಮ, ಅದೇ ದೇವರು. ಇದನ್ನು ಪ್ರಪಂಚ ಈಗ ತಿಳಿಯಬೇಕಾಗಿದೆ. ಮಂಗಳಕಾರಕವಾದ ವ್ಯವಸ್ಥೆಯೇ ಧರ್ಮ, ಆ ವ್ಯವಸ್ಥೆಗೆ ಪ್ರೇರಕವಾದ ತತ್ವವೇ ದೈವ, ಎನ್ನು

ವುದು ರಾಮಕೃಷ್ಣನ ಉಪದೇಶದ ಸಾರ. ಧರ್ಮ ಬೇಕು ದೇವರು ಬೇಕು ಎನ್ನುವುದಾದರೂ, ಧರ್ಮವೆನ್ನುವುದು ಯಾವುದು, ದೇವರು ಎಂದರೆ ಏನು, ಎಂಬ ವಿಷಯಗಳಲ್ಲಿ ಒಬ್ಬರ ಅಭಿಪ್ರಾಯವನ್ನೊಬ್ಬರು ಸಮಾಧಾನ ದಿಂದ ವಿಮರ್ಶಿಸಬೇಕು ಎನ್ನುವುದೂ ಈ ಉಪದೇಶದ ಸಾರಾಂಶ. ಪರಮಹಂಸನ ಉದಾರವಾದ ನಿಲುವಿನಿಂದ ಸಮಾಜದ ಜೀವನವನ್ನು ನೋಡಿದ್ದಾದರೆ ಪ್ರಪಂಚವೇ ಒಂದು ರಾಮರಾಜ್ಯವಾಗುವುದು. ವಿಚಾರದ ಶಕ್ತಿಯುಳ್ಳ ಮನುಷ್ಯರಿಗೆ ಜಗಳವೆನ್ನುವುದು ಸಲ್ಲದು. ಈ ತತ್ತ್ವವನ್ನು ಗ್ರಹಿಸಿದ ಮನುಷ್ಯರು ಜನರ ಮನಸ್ಸನ್ನು ತಿದ್ದಿ ನಡೆಸುವುದಾದರೆ ಒಂದು ದೇಶದಲ್ಲಿ ಜಾತಿಗಳ ಜಗಳ ಬೇಡ, ಮತ್ತೊಂದು ದೇಶದಲ್ಲಿ ಆಸ್ತಿವಂತರ ಆಸ್ತಿಯಿಲ್ಲದವರ ಜಗಳ ಬೇಡ, ಇನ್ನೊಂದು ದೇಶದಲ್ಲಿ ಕರಿಯ ಜನ ಬಿಳಿಯ ಜನದ ಜಗಳ ಬೇಡ, ಒಟ್ಟಿನಲ್ಲಿ ರಾಷ್ಟ್ರರಾಷ್ಟ್ರಗಳ ಪರಸ್ಪರ ಕಲಹವೂ ಬೇಡ. ಈಗ ಪ್ರಪಂಚದಲ್ಲಿ ಮಾನವ ಜೀವನವನ್ನು ಅಲ್ಲೋಲಕಲ್ಲೋಲ ಮಾಡುತ್ತಿರುವ ಅವಾಂತರಪರಂಪರೆ ಯಾವುದೂ ಬೇಡ. ರಾಷ್ಟ್ರಗಳ ನಾಯಕರು ಹಿಟ್ಲರ್ ಮುಸಲೀನಿಗಳಾಗುವುದಿಲ್ಲ, ಮಹಾತ್ಮರಾಗುತ್ತಾರೆ. ರಾಮಕೃಷ್ಣನ ಉಪದೇಶವನ್ನು ಸ್ವಲ್ಪವಾದರೂ ಗ್ರಹಿಸಿದವನಿಗೆ ಪರಸ್ಪರ ವಿರೋಧವೆಂದು ಕಾಣುವ ದ್ವಂದ್ವಗಳ ಗೊಂದಲವನ್ನು ಸಮನ್ವಯಮಾಡು ವುದು ಸುಲಭವೆಂದು ತೋರುತ್ತದೆ; ವಿಶ್ವ ಸೌಹಾರ್ದ ಸಾಧ್ಯವೆಂದು ಕಾಣುತ್ತದೆ; ಮಾನವ ಜೀವನ, ದೇವರನ್ನು ತಂದೆಯೆಂದು ಕಂಡ ಒಂದು ಕುಟುಂಬದ ವ್ಯಕ್ತಿಗಳ ಜೀವನದಂತೆ, ಪರಸ್ಪರ ಪ್ರೇಮದಿಂದ ಪರಸ್ಪರ ಗೌರವದಿಂದ ಪರಸ್ಪರ ಮೈತ್ರಿಯಿಂದ ಬೆಳಗುವುದು ಕಷ್ಟವಲ್ಲವೆಂದು ಕಾಣುತ್ತದೆ. ಒಬ್ಬೊಬ್ಬನೂ ಸ್ವಾರ್ಥವನ್ನು ಸ್ವಲ್ಪ ಬಿಡಬೇಕು; ಮತ್ತೊಬ್ಬರಿಗಾಗಿ ಸ್ವಲ್ಪ ಸರಿದುಕೊಳ್ಳಬೇಕು. ಇದನ್ನು ಬಿಟ್ಟು ಬೇರೆ ಸೂತ್ರವಿಲ್ಲ; ಇದನ್ನು ಅನುಷ್ಠಾನಮಾಡುವುದಾದರೆ ವಿಶ್ವವೆಲ್ಲ ಕ್ಷೇಮ ವನ್ನು ಕಾಣುವುದರಲ್ಲಿ ಸಂದೇಹವಿಲ್ಲ.

ಅದ್ವೈತವನ್ನು ಬಾಳಿನಲ್ಲಿ ಸಾಧಿಸಿ ಅನುಭವಿಸಿ ಪರರ ಕಲ್ಯಾಣ ಕ್ಕಾಗಿ ದ್ವೈತದಲ್ಲಿರಲು ಮನಸ್ಸುಮಾಡಿದ ಪರಮಹಂಸನನ್ನು ಅವನ ಶಿಷ್ಯ ಮಂಡಲಿ ದೇವರೆಂದು ಭಾವಿಸಿತು; ದೇವರ ಒಂದು ಅವತಾರವೆಂದು

ಗಣಿಸಿತು. ಹಿಂದೂ ಮತದಲ್ಲಿ ಈ ಭಾವವೇನೂ ಹೊಸತಲ್ಲ. ದೇವರು ಲೋಕೋದ್ಧಾರಕ್ಕಾಗಿ ಮನುಷ್ಯನಾಗಬಹುದು ಎನ್ನುವುದನ್ನು ಕ್ರೈಸ್ತ ಧರ್ಮ ಒಪ್ಪಿಕೊಂಡಿದೆ. ಆದರೆ ಆ ಮತ ಆ ತತ್ವವನ್ನು ಕ್ರೀಸ್ತನಿಗೆ ಹೊರತು ಉಳಿದವರಿಗೆ ಅನ್ವಯಿಸುವುದಿಲ್ಲ. ದೇವರಿರುವನೇ ಇಲ್ಲವೇ ಎಂಬ ವಿಷಯದಲ್ಲಿ ಚರ್ಚೆ ಬೇಡವೆಂದ ಬುದ್ಧಗುರುವನ್ನೇ ಅವನ ಶಿಷ್ಯಕೋಟಿ ದೇವರ ಪಟ್ಟಕ್ಕೆ ಏರಿಸಿತು. ಉಳಿದ ಮತಗಳು ದೇವರು ಮನುಷ್ಯನಾಗುವ ನೆಂದು ಒಪ್ಪುವುದಿಲ್ಲ. ಈ ಕಾರಣದಿಂದ ರಾಮಕೃಷ್ಣನು ದೇವರಾಗುವು ದೆಂದರೆ ಬಹು ಮಂದಿಗೆ ಸಮ್ಮತವಾಗುವುದಿಲ್ಲ. ರೋಮೇನ್ ರೋಲಾನರು ಈ ವಿಷಯವನ್ನು ಸ್ವಲ್ಪ ವಿವರವಾಗಿ ಚರ್ಚೆಮಾಡಿ, ರಾಮಕೃಷ್ಣನು ದೇವರ ಅವತಾರವೆಂದು ತಾವು ಒಪ್ಪುವುದಿಲ್ಲವೆಂದೂ, ಆದರೆ ಆತನು ಅಪೂರ್ವವೂ ಅಸಾಧಾರಣವೂ ಆದ ರೀತಿಯಲ್ಲಿ ಆತ್ಮತತ್ವವನ್ನು ಸಾಧಿಸಿದ ಮಹಾ ಪುರುಷನೆಂದು ಒಪ್ಪಿಕೊಳ್ಳಬೇಕೆಂದೂ, ಕಾಲ ದೇಶಗಳ ವ್ಯತ್ಯಾಸಕ್ಕೆ ಅವಶ್ಯಕವಾದ ಸೋಡಿಯನ್ನು ಬಿಟ್ಟುಕೊಟ್ಟರೆ ರಾಮಕೃಷ್ಣನು ತಮ್ಮ ಕ್ರೀಸ್ತನ ಅನುಜ ಎಂದೂ, ಹೇಳುತ್ತಾರೆ. ಪರಮಹಂಸನ ಅನುಯಾಯಿ ಗಳಿಗೂ ಇತರರಿಗೂ ಇದು ಚರ್ಚೆಯ ವಿಷಯವಾಗುವ ಸಂಭವವಿದೆ. ಅವನ ಅನುಯಾಯಿಗಳಲ್ಲೇ ಅವನನ್ನು ಪೂಜಿಸುವ ವಿಷಯದಲ್ಲಿ ಚರ್ಚೆ ಹುಟ್ಟುತ್ತದೆ. ಅದ್ವೈತಾಶ್ರಮದಲ್ಲಿ ರಾಮಕೃಷ್ಣಾನಂದನು ಗುರುವಿನ ಪಟವನ್ನು ಇಟ್ಟು ಪೂಜಿಸುತ್ತಿರಲು ವಿವೇಕಾನಂದನು ಕೋಪಮಾಡಿ ಇದು ಗುರುವಿನ ಉಪದೇಶಕ್ಕೆ ವಿರೋಧ ಎಂದು ಅದನ್ನು ಕಿತ್ತು ಎಸೆದನಂತೆ. ಆಮೇಲೆ ಪಶ್ಚಾತ್ತಾಪದಿಂದ ಅತ್ತು ಪಟವನ್ನು ಮತ್ತೆ ಪೂಜೆಗೆ ತಂದಿರಿಸಿ ದನು. ಇಂಥ ಸಂದರ್ಭದಲ್ಲಿ ನಾವು ದೇವರು ಎಂದು ಹೇಳುವುದು ಯಾವುದನ್ನು, ಅವತಾರ ಎಂದು ಹೇಳುವಲ್ಲಿ ನಮ್ಮ ಭಾವವೇನು, ಎಂದು ಸ್ಪಷ್ಟಪಡಿಸಿಕೊಳ್ಳುವುದು ಒಳ್ಳೆಯದು. ರಾಮನಾಗಲಿ ಕೃಷ್ಣನಾಗಲಿ ದೇವರ ಅವತಾರ ಎಂದಾಗ ವಿಶ್ವವ್ಯಾಪಿಯಾದ ಅಖಂಡ ಚಿದ್ವಸ್ತು ಒಂದು ವ್ಯೈ ಆಯಿತೆಂದು ಯಾರದೂ ಅರ್ಥವಲ್ಲ. ಸನಾತನ ಧರ್ಮದ ಅವತಾರ ಗಳಲ್ಲೂ, ಜನ್ಮವೆಲ್ಲ ಅವತಾರವಾದ ರಾಮ ಅಥವಾ ಕೃಷ್ಣನಂತೆ, ಒಂದು ಕಾರ್ಯಕ್ಕೆ ಮಾತ್ರ ಅವತಾರವೆನಿಸಿದ ಪರಶುರಾಮನೂ ಇದಾನೆ. ಪ್ರಪಂಚ

ವನ್ನು ಆಳುವ ದೈವೀಶಕ್ತಿ ಯಾವ ಮಹಾಪುರುಷನಲ್ಲಿ ಅಸಾಧಾರಣವಾಗಿ ಪ್ರಕಟವಾದರೂ ಅದು ಆ ಸಂದರ್ಭಕ್ಕೆ ಅವತಾರವೆಂದು ಈ ಧರ್ಮದಲ್ಲಿ ಭಾವನೆ. ಎಲ್ಲರೂ ದೇವರ ಮಕ್ಕಳಾದರೂ ಕ್ರೀಸ್ತನು ಹೇಗೆ ವಿಶೇಷ ವಾಗಿ ದೇವರ ಮಗನೋ ಹಾಗೆಯೇ, ಎಲ್ಲರೂ ದೇವರ ಅಂಶವಾದರೂ ಇಂಥ ಮಹಾಪುರುಷನು ವಿಶೇಷವಾಗಿ ದೇವರ ಅಂಶ. ಕಾವೇರಿಯು ಶಯ್ಯೆಯಲ್ಲಿ ಎಲ್ಲಕಡೆಯೂ ನೀರಿರಬಹುದು, ಆದರೆ ಅದು ಎಲ್ಲಕಡೆಯೂ ಒಂದೇ ಆಳವಾಗಿರುವುದಿಲ್ಲ; ಒಂದೊಂದು ಕಡೆ ಹೊಳೆ ಮಡುವಾಗಿರು ತ್ತದೆ; ಅಲ್ಲಿ ನೀರ. ಉಳಿದ ಕಡೆಗಿಂತ ಆಳವಾಗಿರುತ್ತದೆ, ತಂಪಾಗಿರುತ್ತದೆ, ಶಾಂತವಾಗಿರುತ್ತದೆ, ಹೆಚ್ಚು ಜೀವಗಳನ್ನು ಸಾಕುತ್ತದೆ. ಹೊಳೆಯನ್ನೆಲ್ಲ ಕಾವೇರಿ ಎನ್ನುವ ಜನ ಇದನ್ನು ಮಡು ಎನ್ನುತ್ತಾರೆ. ಸೃಷ್ಟಿಯ ಮಧ್ಯೆ ಅವತಾರ ಪುರುಷನು ನದಿಯ ಮಧ್ಯೆ ಇರುವ ಈ ಮಡುವಿನಂತೆ. ಅವತಾರವೆಂದರೆ ಏನು ಎಂದು ಮಾತು ಬಂದಾಗ ರಾಮಕೃಷ್ಣನು ತನ್ನ ಅಭಿಪ್ರಾಯವೇನೆಂದು ಬಹು ರೀತಿಯಿಂದ ವಿವರಿಸಿದನು. ಅನಂತನಾದ ದೇವರು ಮನುಷ್ಯನಾಗುವುದುಂಟೆ ಎಂದರೆ ದೇವರಿಗೆ ಅಸಾಧ್ಯವಾದದು ಯಾವುದೂ ಇಲ್ಲ ಎಂದನು. ಒಬ್ಬ ಮನುಷ್ಯನನ್ನು ದೇವರೆನ್ನುವುದು ಹೇಗೆ ಎಂದರೆ, ಗಂಗೆಯನ್ನು ನೋಡಿದೆನೆನ್ನುವನು ಅದರ ಮೂಲದಿಂದ ಗಂಗಾ ಸಾಗರದವರೆಗೆ ಅದನ್ನು ನೋಡಬೇಕಾದದಿಲ್ಲ, ಅದರ ಯಾವ ಭಾಗವನ್ನು ನೋಡಿದರೂ ಗಂಗೆಯನ್ನು ನೋಡಿದನೆಂದೇ ಹೇಳುವರು, ಎಂದನು. ಪರಮಹಂಸನನ್ನ ಅವನ ಅನುಯಾಯಿಗಳು ಅವತಾರ ಎನ್ನುವುದು ಈ ಅರ್ಥದಲ್ಲಿ. ರೋಮೇನ್ ರೋಲಾನರಾದರೂ ಇದನ್ನು ಅಲ್ಲವೆಂದು ಹೇಳಲಾರರೆಂದು ಕಾಣುತ್ತದೆ. ದೇವರಿಗೆ ಅವತಾರ ಎನ್ನು ವುದು ರಾಗಕ್ಕೆ ಅವರೋಹಣದಂತೆ. ರಾಗ ಆರೋಹಣದಲ್ಲಿ ಹೆಚ್ಚಲ್ಲ, ಅವರೋಹಣದಲ್ಲಿ ಕಡಮೆಯಲ್ಲ. ದೈವೀಶಕ್ತಿ ವಿಶೇಷವಾಗಿ ಪ್ರಕಟವಾದ ಚೇತನವನ್ನು ಒಬ್ಬರು ಅವತಾರವೆನ್ನಬಹುದು, ಒಬ್ಬರು ಕಾರಣಪುರುಷ ನೆನ್ನಬಹುದು, ಒಬ್ಬರು ಮಹಾಪುರುಷನೆನ್ನಬಹುದು, ಒಬ್ಬರು ಮಹನೀಯ ನೆನ್ನಬಹುದು. ಇಲ್ಲಿ ಮಾತು ಬೇರೆಯಾಯಿತು ಹೊರತು ಅಭಿಪ್ರಾಯ ದಲ್ಲಿ ಭೇದವಿಲ್ಲ.

ಪರಮಹಂಸನು ತೀರಿಹೋದ ಹೊಸದರಲ್ಲಿ, ವಿವೇಕಾನಂದನು ಅವನನ್ನು ಹೊಗಳಿದ ಕಾಲದಲ್ಲಿ, ಇತರ ಪಂಥಗಳ ಹಲಕೆಲವು ಜನರು ರಾಮಕೃಷ್ಣನ ವಿಷಯದಲ್ಲಿ ಕೆಲವು ದೋಷಗಳನ್ನು ಹೇಳಿದರಂತೆ. ಅವನು ಓದುಬರಹವನ್ನು ಬಲ್ಲವನಲ್ಲ ಎನ್ನುವುದು ಇವರು ನಿರ್ದೇಶಿಸಿದ ಕೊರತೆಗಳಲ್ಲಿ ಒಂದು. ಓದಿಗೆ ಅವನು ಋಣಿಯಾಗಿರಲಿಲ್ಲ ಎನ್ನುವುದು ನಿಜ; ಆದರೆ ಓದಿನಿಂದ ಬರಬೇಕಾದ ಯಾವ ಸಂಸ್ಕಾರವೂ ಇವನ ಬಾಳಿನಲ್ಲಿ ಕಾಣದೆ ಇರಲಿಲ್ಲ. ಇವನ ಮಾತು ಅನೇಕ ವೇಳೆ ಕೊಚ್ಚೆಯಾಗಿರುತ್ತಿದ್ದಿತು ಎನ್ನುವುದು ಪರಪಂಥಿಗಳು ಸೂಚಿಸಿದ ಇನ್ನೊಂದು ಕೊರತೆ. ಪಾಶ್ಚಾತ್ಯ ಜನರ ನಯವಂತ ನಾಗರಿಕರು ಕೊಚ್ಚೆ ಎಂದದನ್ನೆಲ್ಲ ಕೊಚ್ಚೆ ಎನ್ನುವ ಮಂದಿ ಹೀಗೆ ಅಭಿಪ್ರಾಯಪಟ್ಟಿರಬಹುದೆಂದು ಕಾಣುತ್ತದೆ. ನಮ್ಮಲ್ಲಿಯೂ ನಯವಂತರು ರಾಮಕೃಷ್ಣನು ಹೇಳಿದ ಒಂದು ಮಾತು ಅರ್ಧಮಾತನ್ನು ಹೇಳುವುದಕ್ಕೆ ಹಿಂತೆಗೆಯಬಹುದು; ಆದರೆ ಇದನ್ನು ನಿಜವಾಗಿಯೂ ಕೊಚ್ಚೆ ಎನ್ನುವವರಿಗೆ ತಿಳಿವಳಿಕೆ ಸಾಲದೆಂದು ಹೇಳಬೇಕಾಗುತ್ತದೆ ರಾಮಕೃಷ್ಣನು ಸಂನ್ಯಾಸಿ; ನಗ್ನನಾಗಿ ಕುಳಿತು ನಾಚಿಕೊಳ್ಳದೆ ಇರುವುದನ್ನು ಅವನು ಸಾಧಿಸಿದ್ದನು; ವ್ಯಯ ವಿಷಯ ಹೀಗೆ ಮನಸ್ಸನ್ನು ತಿದ್ದಿಕೊಂಡಿರುವವನು ಒಂದರ್ಧ ಮಾತನ್ನು ಹೆಚ್ಚಾಗಿ ಹೇಳಿದನೆಂದರೆ ಆಶ್ಚರ್ಯವಲ್ಲ. ಅವನು ಮಾತನಾಡುತ್ತಿರುವುದು ಅವನ ನಿಲುವಿನಿಂದ; ನಮ್ಮ ನಿಲುವಿಗೆ ಮಾತು ಸ್ವಲ್ಪ ಹೆಚ್ಚು ಕಡಮೆಯಾಗಿ ಕಾಣಬಹುದು. ಆಗದವರು ಇವನನ್ನು ಕುರಿತು ಹೇಳಿದ ಮೂರನೆಯ ಕುಂದು, ಅವನು ಮದುವೆಯಾದ ಸ್ತ್ರೀಯನ್ನು ಬಾಳಿಸಲಿಲ್ಲ, ಎಲ್ಲರಂತೆ ಅವಳೊಂದಿಗೆ ಸಂಸಾರ ಮಾಡಲಿಲ್ಲ, ಎನ್ನುವುದು. ರಾಮಕೃಷ್ಣನ ಶಿಷ್ಯರು ಅವನು ದಿವ್ಯ ಪುರುಷನೆಂದೂ ಹೆಂಡತಿಯ ಸ್ವಭಾವವನ್ನು ದಿವ್ಯದೃಷ್ಟಿಯಿಂದ ಅರಿತಿದ್ದನೆಂದೂ ನಿತ್ಯಬ್ರಹ್ಮಚಾರಿಣಿಯಾಗಿರಲು ಶಕ್ತಿಯೂ ಮನಸ್ಸೂ ಉಳ್ಳವಳಾದದರಿಂದಲೇ ಅವನು ಅವಳನ್ನು ಆರಿಸಿ ಮದುವೆಯಾದನೆಂದೂ ಹೇಳುತ್ತಾರೆ. ಇದು ಹೇಗಾದರೂ, ಅವಳಿಗೆ ಅಪೇಕ್ಷೆಯಿದ್ದರೆ ಸಂಸಾರಮಾಡಲು ತಾನು ಒಪ್ಪುತ್ತೇನೆಂದು ಅವನು ಪತ್ನಿಗೆ ತಿಳಿಸಿದ್ದುಂಟು. ನೀನು ವೈರಾಗ್ಯವನ್ನು ಬಿಡುವುದು ಬೇಡ ಎಂದು ಆಕೆ ಉತ್ತರಕೊಟ್ಟಳು. ಹೆಂಡತಿಯನ್ನು

ಬಾಳಿಸಲಿಲ್ಲವೆನ್ನುವುದಾದರೆ ಅದಕ್ಕೆ ಅವಳ ಸಮ್ಮತಿಯಿದ್ದಿತು ಎನ್ನು ವುದನ್ನು ನಾವು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಈ ರೀತಿಯ ನಿರುಪಾಧಿಕ ಬ್ರಹ್ಮಚರ್ಯವನ್ನು ಸನಾತನ ಧರ್ಮ ದಾಂಪತ್ಯವೆಂದೇ ಗಣಿಸುತ್ತದೆ. ಹೆಂಡತಿ ಎಣಿಸದ ಕುಂದನ್ನು ಹೆರವರೇಕೆ ಎಣಿಸಬೇಕು ಎಂದು ಮ್ಯಾಕ್ಸ್ ಮುಲ್ಲರ್ ಅವರು ಹೇಳಿದಾರೆ. ಇದು ಸರಿಯಾದ ಮಾತೆಂದು ಯಾರಾದರೂ ಒಪ್ಪಬೇಕು. ದಾಂಪತ್ಯವೆನ್ನುವುದು ದೇಹಗಳ ಸಂಬಂಧ ಮಾತ್ರ ಅಲ್ಲ: ಆತ್ಮಗಳ ಸಂಬಂಧವೂ ಹೌದು. ಸರಿಯಾಗಿ ನೋಡಿದರೆ ಅದು ಮುಖ್ಯ ವಾಗಿ ಆತ್ಮಗಳ ಸಂಬಂಧ. ಜೊತೆಯಲ್ಲಿ ದೇಹಗಳ ಸಂಬಂಧವೂ ಹೌದೆನ್ನ ಬಹುದು. ಕಾರಣಾಂತರದಿಂದ ದೇಹಗಳ ಸಂಬಂಧ ಆಗದಿದ್ದರೆ ದಾಂಪತ್ಯಕ್ಕೆ ಕೊರತೆಯಿಲ್ಲ. ಆ ಕಾರಣ ದಂಪತಿಗಳ ವೈರಾಗ್ಯ ಆದರೆ ಕೊರತೆಯೇನು? ಆದರೆ ಈ ದೋಷಗಳನ್ನು ಆರೋಪಿಸುವ ಮಹಸೀಯರು, ದಾಂಪತ್ಯದ ತತ್ವದ ವಿಚಾರವಾಗಿ ಅಲ್ಲ, ಗಂಡನ ವೈರಾಗ್ಯದಿಂದ ಸಂಸಾರ ಸುಖವನ್ನು ಕಳೆದುಕೊಂಡು ಹೆಣ್ಣಿನ ವಿಷಯದಲ್ಲಿ ಕನಿಕರದಿಂದ, ಎಂಬಂತೆ ಮಾತನಾಡಿದರು. ಇದು ಒಂದು ರೀತಿಯ ಆಷಾಢಭೂತಿತನವೆಂದು ಕಾಣುತ್ತದೆ. ದುಷ್ಯಂತನು ತಾಪಸೀ ವೇಷದಲ್ಲಿದ್ದ ಶಕುಂತಲೆಯನ್ನು ನೋಡಿ ಇಂಥ ಅವ್ಯಾಜ ಮನೋಹರವಾದ ದೇಹವನ್ನು ತಪಸ್ಸಿಗೆ ಬಾಗಿಸು ತ್ತಿರುವ ಋಷಿ ಔಚಿತ್ಯ ಜ್ಞಾನವಿಲ್ಲದವನು ಎಂದು ಹೇಳಿದನು. ಔಚಿತ್ಯ ಜ್ಞಾನವನ್ನುಳ್ಳ ಈ ರಾಜನು ಆ ದೇಹವನ್ನು ಏನುಮಾಡಬೇಕೆಂದು ನಡತೆ ಯಿಂದ ತೋರಿಸಿದನು. ಇಂಥ ಸಂದರ್ಭದಲ್ಲಿ ಹೆಣ್ಣನ್ನು ಕುರಿತ ಕನಿಕರ ನಿಜವಾಗಿ ನಮ್ಮ ಚಪಲದ ಪ್ರತಿಬಿಂಬ ಎಂದು ಕಾಮುಕರು ಕಾಣೆವು. ಈ ಮೋಹದ ಮಂಜಿನಲ್ಲಿ ಸೌಜನ್ಯ ವಿಪರೀತವಾಗಿ ರಾಮಕೃಷ್ಣನು ನಮ್ಮಂತೆ ನಡೆಯಲಿಲ್ಲವೆನ್ನುವುದು ಒಂದು ಗುಣವೆಂದು ಕಾಣುವುದಕ್ಕೆ ಪ್ರತಿಯಾಗಿ ದೋಷವಾಗಿ ಕಾಣುತ್ತದೆ. ಇಲ್ಲಿ ಕೊರತೆ ಕುಂದು ಪರಮ ಹಂಸನ ಜೀವನದಲ್ಲಿಲ್ಲ ; ನಮ್ಮ ದೃಷ್ಟಿಯಲ್ಲಿದೆ.

ಮಾಡುವ ಚರ್ಚೆಯನ್ನೆಲ್ಲ ಮಾಡಿ ಹುಡುಕುವ ತಪ್ಪನ್ನೆಲ್ಲ ಹುಡುಕಿ ಎಲ್ಲ ಆದಮೇಲೆ ಪ್ರಪಂಚವು ರಾಮಕೃಷ್ಣನು ಪೂಜನೀಯನೆಂದು ಒಪ್ಪ ಬೇಕೆಂದು ಕಾಣುತ್ತದೆ. ಅವನು ಕೆಲವು ತಪ್ಪು ಮಾಡಿದವನೆಂದರೂ

ಸರಿಯೆ ಮಾಡಲಿಲ್ಲವೆಂದರೂ ಸರಿಯೆ, ಅವನು ದೇವರ ಅವತಾರವಾದರೂ ಸರಿಯೆ ಅಲ್ಲದಿದ್ದರೂ ಸರಿಯೆ, ಅವತರಿಸಬಹುದಾದ ದೇವರಿದ್ದರೂ ಸರಿಯೆ ಇಲ್ಲದಿದ್ದರೂ ಸರಿಯೆ: ರಾಮಕೃಷ್ಣನು ಇದ್ದುದು ನಿಜ, ಪೂಜನೀಯ ವಾದ ದೇಹಯಾತ್ರೆಯನ್ನು ನಡೆಸಿದುದು ನಿಜ, ಆಪ್ಯಾಯಮಾನವಾದ ಸತ್ಯವನ್ನು ನುಡಿದುದು ನಿಜ. ಅವನ ಬಾಳುವೆಯ ಫಲವಾಗಿ ಪ್ರಪಂಚಕ್ಕೆ ಇನ್ನುಮುಂದೆ ಒಳ್ಳೆಯದೇನೂ ಆಗದಿದ್ದರೂ ಇದುವರೆಗೆ ಆಗಿರುವಷ್ಟು ಮಂಗಳದಿಂದಲೇ ಅವನ ಜೀವನ ಮಹನೀಯ ಜೀವನಗಳಲ್ಲಿ ಒಂದು ಎನ್ನಿಸಬೇಕು. ಆದರೆ ಅವನ ಜೀವನದಿಂದ ಇದುವರೆಗೆ ಆಗಿರುವ ಒಳ್ಳೆಯದು ಮುಂದೆ ಆಗಬಹುದಾದ ಒಳ್ಳೆಯದರಲ್ಲಿ ಅತ್ಯಲ್ಪ ಭಾಗ ವೆಂದು ಹೇಳುವುದು ತಪ್ಪಾಗಲಾರದು. ರಾಮಕೃಷ್ಣನು ಬಾಳಿದ್ದೆಲ್ಲ ಐವತ್ತು ವರುಷ: ಉಪದೇಶಮಾಡಿದ್ದೆನ್ನುವುದು ಕೊನೆಯ ಐದು ವರುಷ. ಅವನ ಉಪದೇಶವನ್ನು ಲೋಕಕ್ಕೆ ಪ್ರಕಟಿಸಿದ ಅವನ ಶಿಷ್ಯನು ಕೆಲಸ ಮಾಡಿದ್ದು ಆಮೇಲೆ ಹತ್ತು ವರುಷ. ಗುರು ತೀರಿ ಈಗ ಐವತ್ತು ವರುಷ ವಾಯಿತು; ಅವನ ಪ್ರಿಯ ಶಿಷ್ಯನು ತೀರಿ ಮೂವತ್ತೈದು ವರುಷ ಆಗಿದೆ. ಗುರು ಬುದ್ಧನಂತೆ ಐವತ್ತು ವರುಷ ಉಪದೇಶ ಮಾಡಲಿಲ್ಲ; ಅವನ ಉಪದೇಶ ಹರಡುವುದಕ್ಕೆ ಅವಶ್ಯಕವೆನ್ನಬಹುದಾದ ಕಾಲಮಾನವೂ ಅಷ್ಟಾಗಿ ಹರಿದುಹೋಗಿಲ್ಲ. ಆದರೆ ಜ್ಞಾನ ಹರಡುವುದಕ್ಕೆ ಈಗ ಸೌಕರ್ಯಗಳು ಹೆಚ್ಚಾಗಿವೆ. ಆದ್ದರಿಂದ, ಹರಡಲಪೇಕ್ಷಿಸುವ ಅನೇಕ ಜ್ಞಾನಗಳ ತಂಡವಿದ್ದರೂ, ಇಂಥ ಒಂದು ಉಪದೇಶಕ್ಕೆ ಪ್ರಪಂಚದ ಗಮನ ಸಾಕಾದಷ್ಟು ದೊರೆಯುವುದು ಕಷ್ಟವಾಗಿದ್ದರೂ, ಗುರುವಿನ ಉಪದೇಶ ಈ ಅಲ್ಪಕಾಲದಲ್ಲಿಯೇ ಪ್ರಪಂಚದ ಎಲ್ಲ ಮೂಲೆಯನ್ನೂ ಮುಟ್ಟಿದೆ. ಇಂಥ ಗುರುವಿನ ಪ್ರಭಾವ ಮಾನವ ಜೀವನದಲ್ಲಿ ಇನ್ನೂ ಎಷ್ಟು ಪರಿಣಾಮಕಾರಿಯಾಗುವುದೋ ಹೇಳುವುದು ಹೇಗೆ? ಅವನು ಜನ್ಮವೆತ್ತಿ ಈಗ ಒಂದು ಶತಮಾನವಾಗಿದೆ; ಪ್ರಪಂಚವೆಲ್ಲ ಈಗ ಅವನ ಜನ್ಮೋತ್ಸವವನ್ನು ನಡೆಸುತ್ತಿದೆ. ಪ್ರಪಂಚದ ನಾನಾ ಭಾಗದ ಜನರಿಗೆ ದಕ್ಷಿಣೇಶ್ವರ ಒಂದು ಯಾತ್ರಾಸ್ಥಾನವಾಗಿದೆ; ಅವನು ಪೂಜಿಸಿದ ಭವತಾರಿಣೀ ಮಾತೆ ಅಲ್ಲಿ ಈಗಲೂ ನಿಂತು ಭಕ್ತರನ್ನು ಅನುಗ್ರಹಿಸು

ತ್ತಿದ್ದಾಳೆ. ಅವಳನ್ನು ಅರ್ಚಿಸಿ ಪೂಜಿಸಿ ಸಿದ್ಧಿಯನ್ನು ಪಡೆದ ಅರ್ಚಕನ ಬಾಳು ಆ ಸ್ಥಳವನ್ನು ಒಂದು ಪುಣ್ಯಸ್ಥಳವನ್ನಾಗಿ ಮಾಡಿದೆ. ಅವನ ವಾಸದ ಕೋಣೆ, ಅವನ ಸಿದ್ಧಿಯ ವೃಕ್ಷ, ಅವನು ನಡೆದ ದಾರಿ, ಅಂದಿನಂತೆ ಇಂದೂ ಇವೆ. ಅದನ್ನು ನೋಡುವವರಿಗೆ ಅವನು ಆ ಸ್ಥಳವನ್ನು ಬಿಟ್ಟಿಲ್ಲವೆಂದು ಎಣಿಸುವುದು ಕೂಡ ಸಾಧ್ಯ: ಸ್ಥಳ ಅಷ್ಟು ಶಾಂತವಾಗಿದೆ; ಸುಂದರವಾಗಿದೆ. ಲೋಕವು ಇಂಥ ಜೀವನವನ್ನು ಮರೆಯಲು ಒಪ್ಪುವುದಿಲ್ಲ; ಅದರ ಉಪದೇಶವನ್ನು ನಿರಾಕರಿಸುವುದು ಸಾಧ್ಯವಲ್ಲ. ದಿನ ಕಳೆದ ಹಾಗೆ ಪರಮಹಂಸನ ಕೀರ್ತಿ ಎಲ್ಲ ಕಡೆಗೂ ಹರಡುವುದು. ಅವನ ಉಪದೇಶ ಹೆಚ್ಚು ಹೃದಯಗಳನ್ನು ಮುಟ್ಟುವುದು. ಮನುಜಕುಲದ ಮಂಗಳವನ್ನು ಸಾಧಿಸುವುದಕ್ಕೆ ಅವನು ಪ್ರೇರಕನಾಗಿ ಎಂದೆಂದಿಗೂ ಅದರ ಗುರುವರ್ಗದಲ್ಲಿ ಸೇರಿರುವನು. ಶತಮಾನಗಳು ಕಳೆದು ಇತರರು ಗುರುಗಳೆನ್ನಿಸಿಕೊಂಡಾಗ್ಗೆ ಪರಂಪರೆಯನ್ನು ಹೇಳುತ್ತ ಮನುಜಕುಲದ ಭಾವೀಸಂತತಿ ರಾಮನನ್ನು ಕೃಷ್ಣನನ್ನು ಬುದ್ಧನನ್ನು ಕ್ರೀಸ್ತನನ್ನು ಮಹಮದನನ್ನು ಝೂರತೂಷ್ಟ್ರನನ್ನು ನೆನೆದು ರಾಮಕೃಷ್ಣನನ್ನು ನೆನೆಯುವುದು; ಈ ಹೆಸರು ಉಳಿದ ಹೆಸರುಗಳಿಗೆ ಸಮನೆಂದು ಅದನ್ನು ಪೂಜಿಸುವುದು.

# ಶ್ರೀ ಪರಮಹಂಸನ ಜೀವನಕ್ಕೆ ಸಂಬಂಧಪಟ್ಟ ಕೆಲವು ಮುಖ್ಯ ಸಂಗತಿಗಳ ಕಾಲ

| ಕ್ರೀಸ್ತ ಶಕ | |
|---|---|
| ೧೮೧೪ | ಖುದೀರಾಮನು ಕಾಮಾರ್‌ಪುಕ್ಕರಕ್ಕೆ ಬಂದದ್ದು. |
| ೧೮೩೬ | ಶ್ರೀ ರಾಮಕೃಷ್ಣನ ಜನನ. |
| ೧೮೪೩ | ಖುದೀರಾಮನ ಮರಣ. |
| ೧೮೪೫ | ಶ್ರೀ ರಾಮಕೃಷ್ಣನ ಉಪನಯನ. |
| ೧೮೫೨ | ಶ್ರೀ ರಾಮಕೃಷ್ಣನು ಕಲಿಕತೆಗೆ ಬಂದದ್ದು. |
| ೧೮೫೫ | ದಕ್ಷಿಣೇಶ್ವರದ ದೇವಾಲಯದ ಪ್ರತಿಷ್ಠೆ. |
| ೧೮೫೯ | ಶ್ರೀ ರಾಮಕೃಷ್ಣನ ಮದುವೆ. |
| ೧೮೬೧ | ರಾಣಿ ರಾಸಮಣಿಯ ಮರಣ, ಭೈರವಿ ಬ್ರಾಹ್ಮಣಿಯ ಆಗಮನ. |
| ೧೮೬೨ | ವಿವೇಕಾನಂದನ ಜನನ. |
| ೧೮೬೩ | ಚಂದ್ರಮಣಿದೇವಿ ದಕ್ಷಿಣೇಶ್ವರಕ್ಕೆ ಬಂದದ್ದು. |
| ೧೮೬೪ | ತೋತಾಪುರಿ ದಕ್ಷಿಣೇಶ್ವರಕ್ಕೆ ಬಂದದ್ದು. |
| ೧೮೬೮ | ಶ್ರೀ ರಾಮಕೃಷ್ಣನು ವಾರಣಾಸಿಗೆ ಯಾತ್ರೆ ಹೋದದ್ದು. |
| ೧೮೭೧ | ಮಥುರಾನಾಥನ ಮರಣ. |
| ೧೮೭೨ | ಶಾರದಾಮಣಿದೇವಿ ದಕ್ಷಿಣೇಶ್ವರಕ್ಕೆ ಬಂದದ್ದು. |
| ೧೮೭೫ | ಶ್ರೀ ರಾಮಕೃಷ್ಣನು ಕೇಶವಚಂದ್ರಸೇನನನ್ನು ನೋಡಲು ಹೋದದ್ದು. |
| ೧೮೭೬ | ಚಂದ್ರಮಣಿದೇವಿಯ ಮರಣ. |
| ೧೮೮೦ | ನರೇಂದ್ರನು ನೋಡಲು ಬಂದದ್ದು. |
| ೧೮೮೪ | ಕೇಶವಚಂದ್ರಸೇನನ ಮರಣ. |
| ೧೮೮೫ | ಶ್ಯಾಮಪುಕ್ಕರಕ್ಕೆ ಹೋದದ್ದು. |
| ೧೮೮೬ | ಕಾಶೀಪುರದಲ್ಲಿ ಮಹಾಸಮಾಧಿ. |
| ೧೮೮೭ | ಶಿಷ್ಯರ ಸಂನ್ಯಾಸ ಗ್ರಹಣ. |
| ೧೮೯೩ | ಚಿಕಾಗೊ ನಗರದ ಪರಿಷತ್ತು. |
| ೧೮೯೯ | ಬೇಲೂರು ಮಠದ ಸ್ಥಾಪನೆ. |
| ೧೯೦೨ | ವಿವೇಕಾನಂದನ ಮರಣ. |

1309_47. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

# ಆದಿಕವಿ ವಾಲ್ಮೀಕಿ

ಮಾಸ್ತಿ ವೆಂಕಟೇಶ ಅಯ್ಯಂಗಾರ್

**ರೂ. ೨–೧೨–೦**

# ಮೊದಲ ಮುದ್ರಣದ ಮುನ್ನುಡಿ

ಹೊಸಕಾಲದ ಕಲಿವು ಬಾಳುವೆಗಳಲ್ಲಿ ಪುರಾಣ ಹೇಳುವ ಕೇಳುವ ವಾಡಿಕೆ ತಪ್ಪಿ ಜನರಿಗೆ ಮಹಾಕಾವ್ಯಗಳ ಪರಿಚಯವು ಉಪನ್ಯಾಸಗಳನ್ನು ಕೇಳಿ, ಲೇಖನಗಳನ್ನು ಓದಿ, ಆಗಬೇಕಾಗಿದೆ. ಆದಕಾರಣ ವಾಲ್ಮೀಕಿ ರಾಮಾಯಣವನ್ನು ಕುರಿತ ಈ ಪ್ರಶಂಸೆಯನ್ನು ಬರೆದಿದೇನೆ.

ಈ ಗ್ರಂಥದ ಸಾರಾಂಶವನ್ನು ಸುಮಾರು ನಾಲ್ಕು ವರುಷದ ಹಿಂದೆ ಮದರಾಸಿನ ಗೀರ್ವಾಣ ಭಾಷಾ ಪರಿಷತ್ತಿನಲ್ಲಿ ಇಂಗ್ಲೀಷಿನಲ್ಲಿಯೂ ಎರಡು ವರುಷದ ಹಿಂದೆ ಬೆಂಗಳೂರಿನಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತಿನಲ್ಲಿ ಕನ್ನಡದಲ್ಲಿಯೂ ಉಪನ್ಯಾಸವಾಗಿ ಹೇಳಿದೆನು. ಬೆಂಗಳೂರಿನ ತರುಣ ಜನರ ಕ್ರೈಸ್ತ ಕೂಟದ ಉಪನ್ಯಾಸ ಮಾಲೆಯಲ್ಲಿ ಇದೇ ವಿಷಯವನ್ನು ಕುರಿತು ಒಂದು ತಿಂಗಳ ಹಿಂದೆ ಮಾತನಾಡಿದೆನು. ಈ ಎಲ್ಲ ಸಂದರ್ಭದಲ್ಲಿಯೂ ಇಂಥ ಒಂದು ಗ್ರಂಥ ಆವಶ್ಯಕವೆಂದು ಕಂಡುಬಂದಿತು.

ನಮ್ಮ ಜನರು ಇದನ್ನು ಆದರದಿಂದ ಕಾಣಲೆಂದು ನಾನು ಆಶಿಸುತ್ತಿದೇನೆ.

ಬೆಂಗಳೂರು, ಬಹುಧಾನ್ಯ ಸಂ॥<br>ಮಾರ್ಗಶಿರ ಶುದ್ಧ ಪಾಡ್ಯಮಿ

**ಮಾಸ್ತಿ ವೆಂಕಟೇಶ ಅಯ್ಯಂಗಾರ್**

# ವಿಷಯ ಸೂಚಿಕೆ

ಶ್ರೀ

# ಆದಿಕವಿ ವಾಲ್ಮೀಕಿ

## ೧

## ಮೊದಲ ಮಾತು

### ಆದಿಕಾವ್ಯ

ವಾಲ್ಮೀಕಿ ರಚಿಸಿದ ರಾಮಾಯಣ ಭರತವರ್ಷದ ಆದಿಕಾವ್ಯ. ರಾಮಚಂದ್ರನ ಚರಿತ್ರೆ ಅದರಲ್ಲಿ ಕಾವ್ಯರೂಪವನ್ನು ಪಡೆದಂದಿನಿಂದ ಭರತವರ್ಷದ ಎಲ್ಲಾ ತಲೆಮಾರಿನ ಜನಕ್ಕೂ ಪ್ರಿಯವಾದ ಕಥೆಯಾಗಿದ್ದಿದೆ. ವಾಲ್ಮೀಕಿ ಆ ಕಥೆಯನ್ನು ಕಾವ್ಯವಾಗಿ ಹೇಳಿದಂದಿನಿಂದ ಮೊದಲು ಇದುವರೆಗೆ ಅದನ್ನು ಸಂಸ್ಕೃತದಲ್ಲಿಯೂ ಅನೇಕ ದೇಶಭಾಷೆಗಳಲ್ಲಿಯೂ ನೂರಾರು, ಪ್ರಾಯಶಃ ಸಾವಿರಾರು, ಕವಿಗಳು ತಮ್ಮ ಮಾತಿನಲ್ಲಿ ಹೇಳಿದ್ದಾರೆ. ಇಷ್ಟು ಜನ ಕವಿಗಳು ಇಷ್ಟು ಕಾಲ ಪುನರಾವರ್ತಿ ಮಾಡಿದ್ದರೂ ರಾಮಾಯಣದ ಕಥೆ ವಾಲ್ಮೀಕಿಯ ಬಾಯಲ್ಲಿ ಬಂದದಕ್ಕಿಂತ ಚೆನ್ನಾಗಿ ಬೇರೆ ಎಲ್ಲಿಯಾದರೂ ಬಂದಿತೆಂದು ಯಾರೂ ಹೇಳುವಂತಿಲ್ಲ. ವಾಲ್ಮೀಕಿಯ ರಾಮಾಯಣವನ್ನು ಆದಿಕಾವ್ಯವೆಂದವರು ಅದು ಸಂಸ್ಕೃತದ ಕಾವ್ಯಜಾತಿಯಲ್ಲಿ ಆರಂಭದಲ್ಲಿ ಬಂದದು ಎಂಬ ಅರ್ಥದಿಂದ ಮೊದಲು ಅದಕ್ಕೆ ಆ ಹೆಸರನ್ನು ಕೊಟ್ಟಿರಬೇಕು. ಆದರೆ ಗ್ರಂಥ, ಬರಿಯ ಕಾಲದ ದೃಷ್ಟಿಯಿಂದ ಮಾತ್ರವಲ್ಲ, ಯೋಗ್ಯತೆಯ ದೃಷ್ಟಿಯಿಂದಲೂ ಭರತವರ್ಷಕ್ಕೆ ಆದಿಕಾವ್ಯವೆನ್ನಬಹುದು. ಅದು ಪ್ರಚಾರಕ್ಕೆ ಬಂದ ಕೊಂಚ ಕಾಲದಲ್ಲೀ ಅದರ ಶ್ರೋತೃಗಳು ಕವಿಯ ಮತ್ತು ಕಾವ್ಯದ ಮಹತ್ವವನ್ನು ಮನಗಂಡರು. ಕವಿತೆಯ ಶಾಖೆಯನ್ನೇರಿ ರಾಮ ರಾಮ ಎಂದು ಮಧುರವಾಗಿ ಮಧುರಾಕ್ಷರವಾಗಿ ನುಡಿಯುತ್ತಿರುವ ವಾಲ್ಮೀಕಿಯೆಂಬ ಕೋಕಿಲಕ್ಕೆ ವಂದನೆ ಎಂದು ಪೂರ್ವದ ಕಾವ್ಯಪ್ರೇಮಿಯೊಬ್ಬನು ಕವಿಯನ್ನು ಪೂಜಿಸಿದನು. ಗಿರಿಗಳು ನದಿಗಳು ಭೂಮಿಯಲ್ಲಿ ಎಷ್ಟುಕಾಲವಿರುವುವೋ

ಅಷ್ಟು ಕಾಲ ರಾಮಾಯಣ ಲೋಕಗಳಲ್ಲಿ ಪ್ರಚಾರದಲ್ಲಿರುತ್ತದೆ ಎಂದು ಅದರ ವಿಷಯದಲ್ಲಿ ಭಾವನೆ ಹುಟ್ಟಿತು. ಕಾವ್ಯವು ಕವಿಗಳಿಗೆ ಅತ್ಯುತ್ತಮವಾದ ಆಧಾರವೆಂದು ಹೆಸರುಗೊಂಡಿತು. ವಾಲ್ಮೀಕಿ ಕವಿಕುಲದ ಹಿರಿಯನೂ ದೊರೆಯೂ ಗುರುವೂ ಆದನು. ಅವನ ಕೃತಿ ಕಾವ್ಯ ಶೈಲದ ಶಿರವೆನಿಸಿತು.

### ಮೊದಲು ಕಾವ್ಯ, ಆಮೇಲೆ ಮತಗ್ರಂಥ

ವಾಲ್ಮೀಕಿ ತನ್ನ ಕಾವ್ಯವನ್ನು ರಚಿಸಿದ ಕಾಲಕ್ಕೆ ಕಾವ್ಯವೆನ್ನುವುದೂ ಮತವೆನ್ನುವುದೂ ಬೇರೆ ಎಂಬ ಭಾವನೆ ಬಹಳವಾಗಿ ಬೆಳೆದಿರಲಿಲ್ಲವೆಂದು ಕಾಣುತ್ತದೆ. ಇದು ಜನಾಂಗಗಳ ಚರಿತ್ರೆಯ ಆರಂಭದ ದೆಸೆಯಲ್ಲಿ ಒದಗುವ ಒಂದು ಸ್ಥಿತಿ. ಆದರೆ ಈ ಕಾವ್ಯ ಜನದಲ್ಲಿ ಪ್ರಚಾರಕ್ಕೆ ಬಂದು, ಅದರ ಉನ್ನತಭಾವಗಳು ಜನದ ಮನಸ್ಸನ್ನು ಒಲಿಸಿಕೊಂಡು, ಅದು ಧರ್ಮವನ್ನು ರುಚಿಯಾದ ರೀತಿಯಲ್ಲಿ ತಿಳಿಸುವ ಕೃತಿಯೆನ್ನುವುದನ್ನು ಸಮಾಜದ ಮುಂದಾಳುಗಳು ಗ್ರಹಿಸಿದ ಹಾಗೆ ಅದು ಬರಿಯ ಒಂದು ಕಾವ್ಯವಾಗಿರದೆ ಧರ್ಮಬೋಧೆಯ ಗ್ರಂಥವಾಯಿತು. ಅನನ್ಯ ಸಾಧಾರಣವಾದ ಕಲ್ಯಾಣಗುಣಗಳಿಂದ ಲೋಕಪ್ರಿಯನೆನಿಸಿಕೊಂಡು ಬಾಳಿ ಕಣ್ಮರೆಯಾದ ರಾಮಚಂದ್ರನು ಕೇವಲ ಅರಸನೂ ಕಾವ್ಯದ ಉದಾತ್ತ ನಾಯಕನೂ ಮಾತ್ರ ಆಗಿ ಇರದೆ ದೈವದ ಅವತಾರವಾದನು. ಹೀಗಾಗಿ ವಾಲ್ಮೀಕಿಯ ಶ್ರೀಮದ್ರಾಮಾಯಣವು ಒಂದು ಅವತಾರದ ಚರಿತ್ರೆಯನ್ನು ಹೇಳುವ ಮತಗ್ರಂಥವೆನಿಸಿಕೊಂಡಿತು. ಇದು ಆಗಿ ಈಗ ಹಲವು ಶತಮಾನ ಕಳೆದುಹೋಗಿವೆ; ಶ್ರೀಮದ್ರಾಮಾಯಣ ಸುಂದರವಾದ ಕಾವ್ಯದ ರೂಪದಲ್ಲಿ ಸನಾತನ ಧರ್ಮವನ್ನು ಬೋಧಿಸುವ ಗ್ರಂಥವೊಂದು ಎಂಬ ಭಾವನೆ ಲೋಕದಲ್ಲಿ ವಾಡಿಕೆಯಾಗಿದೆ.

### ಈ ಸ್ಥಿತಿಯ ಲಾಭ ನಷ್ಟ

ಇಂಥ ಭಾವನೆಯಿಂದ ಕವಿಗೂ ಕಾವ್ಯಕ್ಕೂ ಒದಗುವ ಗೌರವ ದೊಡ್ಡದು. ಬರಿಯ ಕಾವ್ಯವೆಂದು ಓದುವ ಯಾವ ಗ್ರಂಥಕ್ಕೂ ಮನುಷ್ಯರು ಈ ಗೌರವವನ್ನು ತೋರಿಸುವುದಿಲ್ಲ. ಇದರಿಂದ ರಾಮಾಯಣ ನಮ್ಮಲ್ಲಿ ಪಾರಾಯಣದ ಗ್ರಂಥವಾಯಿತು; ದೇವರ ಅವತಾರದ ಚರಿತ್ರೆಯೆಂದು

ಪೂಜೆಯ ವಸ್ತುವಾಯಿತು. ಅದರಲ್ಲಿ ಯಾವ ವಿಧವಾದ ಕುಂದನ್ನಾಗಲಿ ಕೊರತೆಯನ್ನಾಗಲಿ ಎಣಿಸುವುದು ದೈವದ್ರೋಹ ಎಂದು ನಮ್ಮವರ ಮನಸ್ಸಿಗೆ ತೋರಿತು. ಆದರೆ ಒಂದು ಗುಂಪಿನಲ್ಲಿ ದೊರೆಯುವ ಈ ಹೆಚ್ಚಿನ ಗೌರವಕ್ಕೆ ಸೋಡಿಯಾಗಿ ಕಾವ್ಯದ ವಿಷಯದಲ್ಲಿ ಅನ್ಯಮತೀಯರಿಗೆ ಅನಾದರಣೆ ಹುಟ್ಟುವುದು ಸಹಜವಾಗಿ ಸಿದ್ಧವಾಯಿತು. ಈ ಕಾರಣ ದಿಂದ ಲೋಕಗಳಲ್ಲಿ ಪ್ರಚಾರದಲ್ಲಿರಬೇಕಾದ ಕಾವ್ಯ ಒಂದು ದೇಶದಷ್ಟಕ್ಕೆ, ಅದರಲ್ಲಿಯೂ ದೇಶದ ಜನದ ಮಧ್ಯೆ ಒಂದು ಭಾಗದಷ್ಟಕ್ಕೆ, ಬೇಕಾದ ವಸ್ತುವಾಯಿತು. ಇದು ಕಾವ್ಯದ ದೃಷ್ಟಿಯಿಂದಲೂ ಕವಿಯ ದೃಷ್ಟಿ ಯಿಂದಲೂ ಒಂದು ಕೊರತೆಯೆನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. ಸಾರ್ವಭೌಮನಾಗಬೇಕಾದ ಮನುಷ್ಯನು ಒಂದು ನಾಡ ದೊರೆಯಾದನು; ನಾಡ ದೊರೆಯಾಗಬೇಕಾದವನು ಒಂದು ಹಳ್ಳಿಗೆ ಗೌಡನಾದನು. ಕಾವ್ಯದ ಪ್ರಚಾರದ ಸಂಕೋಚನದಿಂದ ಬಹು ಜನಕ್ಕೆ ಉಪಯೋಗ ವಾಗುವ ವಸ್ತು ಕೊಂಚ ಜನದ ಆಸ್ತಿಯಾಗಿ ಅದರ ಯೋಗ್ಯತೆಗೆ ಅನುಗುಣವಾದಷ್ಟು ಉಪಯುಕ್ತವಾಗದೆಹೋಯಿತು. ಇದು ಕವಿಯ ಮತ್ತು ಕಾವ್ಯದ ದೃಷ್ಟಿಯಿಂದ ಹೇಗೆ ನಷ್ಟವೋ ಹಾಗೆ ಲೋಕದ ದೃಷ್ಟಿ ಯಿಂದಲೂ ನಷ್ಟವೇ. ಯಾವ ಗ್ರಂಥವನ್ನು ಓದಿ ಸಾವಿರ ಜನದ ಮನಸ್ಸು ಸುಖಪಡಬಹುದಾಗಿತ್ತೋ, ತಿದ್ದಬಹುದಾಗಿತ್ತೋ, ಆ ಗ್ರಂಥ ವನ್ನು ನೂರೇ ಜನ ಓದುವುದಾದರೆ ಉಳಿದ ಜನಕ್ಕೆ ಅದರ ಪ್ರಯೋಜನ ಇಲ್ಲದಂತಾಯಿತು. ಧರ್ಮಕ್ಕಾದರೂ ಇದರಿಂದ ನಷ್ಟವೇ. ಹತ್ತು ಮತಗಳ ಹೆಸರನ್ನಿಟ್ಟುಕೊಂಡು ನೂರು ಪಂಗಡಗಳ ಉಪದೇಶಕರು ಸಾಧಿಸುತ್ತಿರುವುದು ಒಂದು ಧರ್ಮವನ್ನು. ಮತದ ಹೆಸರಿನಿಂದ ಪಂಗ ಡದ ಹೆಸರಿನಿಂದ ಇವರು ಸಾಧಿಸುವ ಧರ್ಮವನ್ನು ಇವುಗಳ ಮಾತನ್ನೆ ತ್ತದೆ ಕಾವ್ಯ ಸಾಧಿಸುತ್ತದೆ. ಹಾಗೆ ಸಾಧಿಸುವ ಕಾವ್ಯ ಕಾವ್ಯವಾಗಿ ನಿಂತರೆ ಎಲ್ಲರ ಮನಸ್ಸಿನಲ್ಲಿಯೂ ಧರ್ಮವನ್ನು ನಿಲ್ಲಿಸಬಹುದು. ಅದು ಎಷ್ಟುಮಟ್ಟಿಗೆ ಮತಗ್ರಂಥವಾಗುತ್ತದೋ ಅಷ್ಟು ದೂರ ಧರ್ಮದ ಪ್ರಚಾರಕ್ಕೆ ಅಡ್ಡಿ ಒದಗುವುದು. ಈ ಕಾರಣದಿಂದ ಭರತವರ್ಷದ ಆದಿ ಕಾವ್ಯ ಎಷ್ಟು ಜನರನ್ನು ಉದ್ಧರಿಸಬಹುದಾಗಿತ್ತೋ ಅವರನ್ನೆಲ್ಲ

ಮುಚ್ಚಿದೆಹೋಗಿದೆ. ಇದರಿಂದ ಕಾವ್ಯಕ್ಕೆ ಕವಿಗೆ ಧರ್ಮಕ್ಕೆ ಜನಕ್ಕೆ ಅಪಾರವಾದ ನಷ್ಟವುಂಟಾಗಿದೆ.

### ಕಾವ್ಯದ ಧರ್ಮ

ಈ ಉಪನ್ಯಾಸದಲ್ಲಿ ರಾಮಾಯಣವನ್ನು ಮುಖ್ಯವಾಗಿ ಕಾವ್ಯದ ದೃಷ್ಟಿಯಿಂದ ನಿರೀಕ್ಷಿಸಲು ಯತ್ನಮಾಡಿದೆ. ಈ ಯತ್ನ ಅಧರ್ಮದಿಂದಲಾಗಲಿ ವಿಧರ್ಮದಿಂದಲಾಗಲಿ ಉಂಟಾಗಿರತಕ್ಕದಲ್ಲ. ನ್ಯಾಯವಾಗಿ ನೋಡಿದರೆ ಕಾವ್ಯದ ಧರ್ಮವೆನ್ನುವುದೇ ಒಂದಿದೆ. ಅದನ್ನು ಅರಿತ ಮನಸ್ಸಿಗೆ ಕಾವ್ಯವನ್ನು ಕಾವ್ಯವೆಂದಲ್ಲದೆ ಬೇರೆ ಏನಾಗಿಯಾಗಲಿ ಎಣಿಸುವುದು ಅಧರ್ಮವೆಂದೂ ವಿಧರ್ಮವೆಂದೂ ಕಂಡೀತು. ವಾಲ್ಮೀಕಿಯೆತ್ತ, ಒಂದು ಮತ ಎತ್ತ? ರಾಮಾಯಣವೆತ್ತ, ಒಂದು ಪಂಗಡವೆತ್ತ? ಕಾವ್ಯವೆತ್ತ, ಬರಿಯ ನೀತಿಯೆತ್ತ? ಕವಿಯೂ ಕಾವ್ಯವೂ ಇವನ್ನು ಒಳಗೊಂಡಿವೆ ನಿಜ; ಆದರೆ ಇವುಗಳಲ್ಲಿ ಮುಗಿದಿಲ್ಲ. ಅಷ್ಟೇ ಅಲ್ಲ: ಕಾವ್ಯವು ಧರ್ಮ ಗ್ರಂಥಗಳಲ್ಲಿ ಮೊದಲನೆಯದೆನ್ನಿಸಿಕೊಳ್ಳುವುದಕ್ಕಿಂತ ಕಾವ್ಯಗಳ ಪಂಕ್ತಿಯಲ್ಲಿ ನಾಲ್ಕನೆಯದಾದರೂ ಸಂತೋಷವೇ. "ಸ್ವಧರ್ಮೇ ನಿಧನಂ ಶ್ರೇಯಃ, ಪರಧರ್ಮೋ ಭಯಾವಹಃ" ಎಂಬ ಮಾತು ಇಲ್ಲಿ ಅನ್ವಯಿಸುತ್ತದೆ. ರಾಮಾಯಣವು ಕಾವ್ಯವಾಗಿ ಜನದಲ್ಲಿ ಪ್ರಚಾರವಾಯಿತು. ಜನದಲ್ಲಿ ಪ್ರಚಾರಕ್ಕೆ ಬಂದ ಕಾರಣದಿಂದ ಮತ ಅದನ್ನು ತನ್ನದೆಂದಿತು. ಉತ್ತಮ ವಸ್ತುಗಳನ್ನು ಪ್ರಬಲರಾದ ಜನರು ತಮ್ಮದೆಂದು ಆಕ್ರಮಿಸುವುದಕ್ಕೆ ಯತ್ನಮಾಡುವುದೊಂದು ವಾಡಿಕೆ. ಇಂಥದೊಂದು ಲೋಭಕ್ಕೆ ಸೆರೆ ಸಿಕ್ಕಿ ಧರ್ಮ ಗ್ರಂಥವೆನಿಸಿಕೊಂಡಿರುವ ರಾಮಾಯಣವನ್ನು ಈ ಬಂಧನದಿಂದ ಬಿಡಿಸಿ ಒಂದು ಕಾವ್ಯವೆಂದು ಗಣಿಸುವುದು ನಿಜವಾಗಿ ಅದಕ್ಕೆ ಒಂದು ಸೇವೆಯೆನ್ನಬೇಕು. ಇತಿಹಾಸದ ಪ್ರಸಾರದಲ್ಲಿ ಮತಗಳು ಮೂರು ದಿನಕ್ಕೆ ಕಟ್ಟಿದ ಅರಗಿನ ಮನೆಗಳು; ಅವು ಇಂದಲ್ಲದಿದ್ದರೆ ನಾಳೆ ಉರಿದು ಬೂದಿಯಾಗುವುವು. ಧರ್ಮ ಅವುಗಳಲ್ಲಿ ಮಲಗಿದ್ದರೆ ಸುಟ್ಟು ಹೋಗುವುದೇ ನಿಜ. ಅದನ್ನು ಉಳಿಸಬೇಕಾದರೆ ಕಾವ್ಯಕ್ಕೆ ಮಾತ್ರ ಸಾಧ್ಯ. ನಾವು ಕಾವ್ಯವನ್ನು ಕಾವ್ಯವೆಂದರೆ ಧರ್ಮವನ್ನು ಉಳಿಸಬಹುದು.

ಈ ನಿರೀಕ್ಷೆಯ ದೃಷ್ಟಿ

ಇದೇ ದೃಷ್ಟಿಯಿಂದ ರಾಮುನನ್ನು ಕಾವ್ಯದ ನಾಯಕನೆಂದು ಎಣಿಸುವುದೂ ಅವನು ದೇವರ ಅವತಾರವೆಂಬ ಭಾವವನ್ನು ಬದಿಗಿಡುವುದೂ ಆವಶ್ಯಕ. ವಾಲ್ಮೀಕಿ ತನ್ನ ಕಾವ್ಯವನ್ನು ರಚಿಸಿದಾಗ ರಾಮುನನ್ನು ವಿಷ್ಣುವಿನ ಅವತಾರವೆಂದು ಗಣಿಸಿದನೆಂಬಂತೆ, ರಾಮಾಯಣ ಈಗ ಇರುವ ರೀತಿಯಲ್ಲಿ ಶ್ಲೋಕಗಳಿವೆ. ಆದರೆ ಅದೇ ಶ್ಲೋಕಗಳಲ್ಲಿ ರಾಮುಚಂದ್ರನು ತನ್ನನ್ನು ತಾನು ಬರಿಯ ಮನುಷ್ಯನೆಂದು ತಿಳಿದಿದ್ದೇನೆಂದು ಹೇಳಿದ ಮಾತೂ ಇದೆ. ರಾಮುನ ನಡೆನುಡಿಗಳನ್ನು ತೀವ್ರದೃಷ್ಟಿಯಿಂದ ವಿಮರ್ಶೆಮಾಡಿ ಇದು ಕುಂದು ಇದು ಕೊರತೆ ಎಂದು ಹೇಳುವ ಜನರುಂಟು. ಅವರು ರಾಮುನನ್ನು ದೇವರೆಂದು ಒಪ್ಪದಿದ್ದರೂ ಅವನಲ್ಲಿ ದೇವರ ಸಾಮುಗ್ರ್ಯವನ್ನು ನಿರೀಕ್ಷಿಸುತ್ತಾರೆ. ಮತದ ದೃಷ್ಟಿಯಿಂದ ಅವನನ್ನು ಸ್ವೀಕರಿಸಿ ಅವನ ನಡೆಯೆಲ್ಲ ದೈವದ ಅವತಾರಕ್ಕೆ ಅನುಗುಣವಾಗಿ ಇದೆಯೆಂದು ಹೇಳುವವರು ಆ ಕುಂದುಕೊರತೆಯನ್ನೆಲ್ಲಾ ಒಳ್ಳೆಯದೆಂದು ಸಮರ್ಥಿಸಲು ಯತ್ನಮಾಡಿ ಆ ದಿವ್ಯ ಜೀವನದ ನೋವು ನಗೆಯನ್ನೆಲ್ಲ ಮನುಷ್ಯರಿಗಾಗಿ ಅಳವಟ್ಟ ಸೋಗು ಎಂಬಂತೆ ಹೊಗಳುತ್ತಾರೆ. ರಾಮುನನ್ನು ಒಂದು ಕಾವ್ಯದ ಕೇವಲ ಒಬ್ಬ ನಾಯಕನೆಂದು ಭಾವಿಸುವುದು ವಾಡಿಕೆಯಾದರೆ ನಾವು ಅವನು ಎಷ್ಟು ಹಿರಿಯ ಚೇತನವೆನ್ನುವುದನ್ನು ಮನಗಂಡೇವು; ಅವನ ಚರಿತ್ರೆಯಲ್ಲಿ ಒಂದೆರಡು ಕಡೆ ಕುಂದು ಕಂಡುಬಂದರೆ ಅವನ ನೂರು ಗುಣವನ್ನು ನೆನೆದು ಒಂದು ತಪ್ಪನ್ನು ದೊಡ್ಡದು ಮಾಡಬಾರದೆಂದು ಹಿಂದೆಗೆದೇವು; ರಾಮುಚಂದ್ರನು ಮನುಷ್ಯನಾಗಿ ಬಂದ ದೇವರು ಎಂದು ತಿಳಿಯುವುದಕ್ಕೆ ಪ್ರತಿಯಾಗಿ ನಡತೆಯಿಂದ ದೇವರಾದ ಮನುಷ್ಯನು ಎಂದು ಅರಿತೇವು. ಇದು ಕವಿಯ ಉದ್ದೇಶ. ದೇವರು ಮನುಷ್ಯನಾಗಿ ನಡೆದನೆಂದರೂ ಮನುಷ್ಯನು ನಡತೆಯಿಂದ ದೇವರಾದನೆಂದರೂ ನಡೆದ ಆ ದಿವ್ಯ ಪುರುಷನಿಗೆ ಒಂದೇ ರೀತಿಯ ಮರ್ಯಾದೆಯನ್ನು ತೋರಿಸಿದಂತೆಯೇ. ಆದರೆ ಗ್ರಂಥವನ್ನು ಓದುವ ಮತ್ತು ಅದರ ನಾಯಕನನ್ನು ಪ್ರೀತಿಸುವ ಜನಕ್ಕೆ ತಮ್ಮ ಪ್ರೀತಿಯವಸ್ತು ಒಂದು ಸಂದರ್ಭದಲ್ಲಿ ಪರಕೀಯವೆಂದು ತೋರುವುದು, ಇನ್ನೊಂದು ಸಂದರ್ಭದಲ್ಲಿ ತಮ್ಮದೆಂದು ಕಾಣುವುದು.

೨

## ರಾಮಾಯಣದ ಉಪೋದ್ಘಾತ

### ಕಾವ್ಯದ ಉದಯದ ಕಥೆ

ರಾಮಾಯಣವು ಕಾವ್ಯವಾಗಿ ಆರಂಭವಾಯಿತೆನ್ನುವುದು ಅದರ ಉದಯವನ್ನು ಕುರಿತ ಕಥೆಯಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ತಪಸ್ವಿಯಾದ ವಾಲ್ಮೀಕಿ ಒಂದು ಸಲ ನಾರದನನ್ನು ಕುರಿತು, ಈಗ ಲೋಕದಲ್ಲಿ ಗುಣವಂತನೂ, ವೀರನೂ, ಧರ್ಮಜ್ಞನೂ, ಕೃತಜ್ಞನೂ, ಸತ್ಯವಾಕ್ಯನೂ, ದೃಢವ್ರತನೂ, ಚಾರಿತ್ರ್ಯಯುಕ್ತನೂ, ಸರ್ವಭೂತಹಿತನೂ, ವಿದ್ವಾಂಸನೂ, ಸಮರ್ಥನೂ, ಏಕಪ್ರಿಯದರ್ಶನನೂ, ಆತ್ಮವಂತನೂ, ಜಿತಕ್ರೋಧನೂ, ದ್ಯುತಿಮಂತನೂ, ವಶಿಯೂ, ಅನಸೂಯಕನೂ, ಹೀಗೆಯೇ ಇನ್ನೆಲ್ಲ ಸದ್ಗುಣಗಳನ್ನೂ ಉಳ್ಳವನೂ ಯಾರು ಎಂದು ಪ್ರಶ್ನೆಮಾಡಿದನಂತೆ. ತ್ರಿಲೋಕಜ್ಞನಾದ ನಾರದನು ಅವನಿಗೆ ಇಕ್ಷ್ವಾಕುವಂಶ ಪ್ರಭವನಾದ ಶ್ರೀ ರಾಮನ ಕಥೆಯನ್ನು ಹೇಳಿದನು. ನಾರದನ ಮಾತನ್ನೆಲ್ಲಾ ಕೇಳಿ ವಾಲ್ಮೀಕಿ ಅವನಿಗೆ ಮರ್ಯಾದೆಮಾಡಿ ಅವನನ್ನು ಕಳುಹಿಸಿಕೊಟ್ಟು ಸ್ವಲ್ಪ ಹೊತ್ತು ಬಿಟ್ಟುಕೊಂಡು ಜಾಹ್ನವಿಯಿಂದ ಸ್ವಲ್ಪ ದೂರದಲ್ಲಿರುವ ತಮಸಾ ನದಿಯ ತೀರಕ್ಕೆ ಹೋದನಂತೆ. ಆ ನದಿಯ ಅಕರ್ದಮವಾದ ತೀರ್ಥವನ್ನು ನೋಡಿ ಮಹಾಮುನಿ ಶಿಷ್ಯನಾದ ಭರದ್ವಾಜನನ್ನು ಕುರಿತು "ಅಣ್ಣ, ನನ್ನ ಕಲಶವನ್ನಿಲ್ಲಿಡು. ನನ್ನ ವಲ್ಕಲವನ್ನು ಕೊಡು. ಈ ತೀರ್ಥದಲ್ಲಿ ಸ್ನಾನಮಾಡುತ್ತೇನೆ" ಎಂದನು. ವಲ್ಕಲವನ್ನು ಕೈಗೆ ತೆಗೆದುಕೊಂಡು ಸುತ್ತಣ ವಿಪುಲವಾದ ವನವನ್ನು ನೋಡಿದನು. ಅಲ್ಲಿ ಇಂಪಾದ ಸ್ವರದಿಂದ ಕೂಗುತ್ತ ಒಂದು ಕ್ರೌಂಚ ಮಿಥುನ ವಿಹರಿಸುತ್ತಿತ್ತು. ಆ ಸಮಯದಲ್ಲಿ ಅಲ್ಲಿ ಬಂದ ವ್ಯಾಧನೊಬ್ಬನು ಆ ಮಿಥುನದಲ್ಲಿ ಗಂಡನ್ನು ಹೊಡೆದು ಕೆಡವಿದನು. ರಕ್ತಮಯವಾಗಿ ನೆಲದಮೇಲೆ ಬಿದ್ದ ಗಂಡನ್ನು ನೋಡಿ ಹೆಣ್ಣು ಶೋಕದಿಂದ ಅರಚಿಕೊಂಡಿತು. ನಿಷಾದನಿಂದ ಕೆಳಗೆ ಬಿದ್ದ ಹಕ್ಕಿಯನ್ನು ನೋಡಿ ಧರ್ಮಾತ್ಮನಾದ ವಾಲ್ಮೀಕಿಯ ಕಾರುಣ್ಯ ಉಕ್ಕಿತು. ಆತನು ವ್ಯಾಧನನ್ನು ಕುರಿತು "ಮಾನಿಷಾದ ಪ್ರತಿಷ್ಠಾಂತ್ವಮಗಮಃ ಶಾಶ್ವತೀಸ್ಸಮಾಃ, ಯತ್ಕ್ರೌಂಚಮಿಥುನಾದೇಕಂ

ಅವಧೀಃ ಕಾಮಮೋಹಿತಂ.'' ''ಎಲೈ ವ್ಯಾಧನೆ ಕಾಮಮೋಹಿತವಾದ ಕ್ರೌಂಚ ಮಿಥುನದಲ್ಲಿ ಒಂದನ್ನು ನೀನು ಕೊಂದೆಯಾದ ಕಾರಣ ಬಹು ಕಾಲ ನಿನಗೆ ಉನ್ನತಿ ದೊರೆಯದೆಹೋಗಲಿ'' ಎಂದು ಶಪಿಸಿದನಂತೆ. ಒಡನೆ ಅವನಿಗೆ ತನ್ನ ಮಾತನ್ನು ಕುರಿತು ಅಯ್ಯೋ ನಾನು ಬಯ್ದೆನೆ ಎಂದು ಯೋಚನೆ ತೋರಿತು. ಆ ಮಾತು ಪಾದಬದ್ಧವಾಗಿ ಅಕ್ಷರ ಸಮವಾಗಿ ತಂತ್ರೀಲಯಸಮನ್ವಿತವಾಗಿ ಇತ್ತು. ಮುನಿಗೆ, ತಾನು ಶೋಕಾರ್ತನಾಗಿ ಆಡಿದ ಮಾತು ಶ್ಲೋಕವಾಗಲಿ, ಅನ್ಯಥಾ ಆಗುವುದು ಬೇಡ, ಎನಿಸಿತು. ಅವನು ತನ್ನ ಹಾರೈಕೆಯನ್ನು ಭರಧ್ವಾಜನಿಗೆ ಹೇಳುತ್ತ ಸ್ನಾನವನ್ನು ಮುಗಿಸಿಕೊಂಡು ಆಶ್ರಮಕ್ಕೆ ಮರಳಿ ಬಂದನು. ಆಮೇಲೆ ಅವನು ಧ್ಯಾನದಲ್ಲಿ ಕುಳಿತಾಗ ಅವನನ್ನು ನೋಡುವುದಕ್ಕೆ ಲೋಕಕರ್ತನಾದ ಬ್ರಹ್ಮನು ಬಿಜಮಾಡಿದನಂತೆ. ವಾಲ್ಮೀಕಿ ಅವನಿಗೆ ಮರ್ಯಾದೆಮಾಡಿ ಕುಳ್ಳಿರಿಸಲು ಬ್ರಹ್ಮನು ಅವನನ್ನು ಕುಳ್ಳಿರಹೇಳಿ, ಅವನು ಕರುಣೆಯಿಂದ ಆಡಿದ್ದ ಮಾತು ಶ್ಲೋಕವೇ ಸರಿ ಎಂದೂ ಆ ವಿಚಾರವಾಗಿ ಚಿಂತೆ ಬೇಡವೆಂದೂ ಅವನಿಗೆ ಧೈರ್ಯ ಹೇಳಿದನು. ''ನಿನ್ನ ಈ ಮಾತು ನನ್ನ ಛಂದದಿಂದ ಪ್ರವೃತ್ತವಾದದು. ನೀನು ನಾರದನಿಂದ ಕೇಳಿದ ರಾಮನ ಚರಿತ್ರೆಯನ್ನು ರಚಿಸು. ರಾಮ ಲಕ್ಷ್ಮಣ, ರಾಕ್ಷಸರು, ವೈದೇಹಿ ಎಲ್ಲರ ವೃತ್ತವನ್ನೂ ಪ್ರಕಾಶ ಮತ್ತು ರಹಸ್ಯವಾದ ವಿವರಗಳೊಡನೆ ಹೇಳು. ಅವಿದಿತವಾದದೂ ನಿನಗೆ ವಿದಿತವಾಗುತ್ತದೆ. ನಿನ್ನ ಕಾವ್ಯದ ಒಂದು ಮಾತೂ ಅನೃತವಾಗುವುದಿಲ್ಲ. ಮಹೀತಲದಲ್ಲಿ ಗಿರಿಗಳೂ ಸರಿತ ಗಳೂ ಎಷ್ಟು ಕಾಲ ನೆಲಸಿರುವುವೋ ಅಷ್ಟು ಕಾಲ ರಾಮಾಯಣ ಕಥೆ ಪ್ರಚಾರದಲ್ಲಿರುತ್ತದೆ'' ಎಂದು ಹೇಳಿ ಅಂತರ್ಧಾನನಾದನು. ವಾಲ್ಮೀಕಿ ವಿಸ್ಮಿತನಾದನು; ಮತ್ತು ರಾಮಾಯಣದ ಚರಿತೆಯನ್ನು ರಚಿಸುವ ಬಗ್ಗೆ ಧ್ಯಾನದಲ್ಲಿ ಕುಳಿತು ಎಲ್ಲವನ್ನೂ ನೆನೆದನು; ಶ್ರೀ ರಾಮನ ಚರಿತೆಯ ಹಸಿತಭಾಷಿತ ಗತಿಚೇಷ್ಟಿತ ಎಲ್ಲ ವಿಷಯವನ್ನೂ ಹೇಗೆ ನಡೆಯಿತೋ ಹಾಗೆ ಕೈಯಲ್ಲಿ ಇಟ್ಟುಕೊಂಡ ನೆಲ್ಲಿಯಕಾಯಂತೆ ಸ್ಪಷ್ಟವಾಗಿ ಕಂಡನು. ಹೀಗೆ ಎಲ್ಲವನ್ನೂ ನೋಡಿ ಅವನು ರಾಮಾಯಣದ ಕಥೆಯನ್ನು ರಚಿಸಿದನು. ಅದು ಇಪ್ಪತ್ತುನಾಲ್ಕು ಸಾವಿರ ಶ್ಲೋಕವಾಯಿತು.

ಸೀತೆಯ ಮಹಚ್ಚರಿತ್ರವನ್ನೊಳಗೊಂಡ ಈ ಗ್ರಂಥ ಓದುವುದಕ್ಕೂ ಹಾಡುವುದಕ್ಕೂ ಮಧುರವಾಗಿ, ಕಾವ್ಯಗೀತಗಳ ನಿಯಮವನ್ನು ಅನುಸರಿಸಿ, ಸರ್ವರಸಗಳಿಂದಲೂ ಸುಂದರವಾಗಿತ್ತು. ಇದನ್ನು ಆಶ್ರಮವಾಸಿಗಳಾದ ಇಬ್ಬರು ಗಾನಶಾಸ್ತ್ರ ವಿಶಾರದರಾದ ಕುಶೀಲವರು ಕಲಿತು ವಾಚೋ ವಿಧೇಯವಾಗಿ ಮಾಡಿಕೊಂಡು ಒಂದು ಸಲ ಮುನಿಗಳ ಎದುರು ಹಾಡಿ ಹೇಳಿದರು. ಬಾಷ್ಪಪರ್ಯಾಕುಲೇಕ್ಷಣರಾದ ಮುನಿಗಳು ಸಾಧು ಸಾಧು ಎಂದು ಹೇಳಿ ವಿಸ್ಮಿತರೂ ಪ್ರೀತಿಮಾನಸರೂ ಆಗಿ ಕಾವ್ಯವನ್ನೂ ಗಾಯಕರನ್ನೂ ಪ್ರಶಂಸಿಸಿದರು. ಅವರಲ್ಲಿ ಹಲವರು ಆ ಗಾಯಕರಿಗೆ ತಮ್ಮ ಕಲಶವನ್ನೂ, ವಲ್ಕಲವನ್ನೂ, ಕೃಷ್ಣಾಜಿನವನ್ನೂ ಕೊಟ್ಟು ತಮ್ಮ ಸಂತೋಷವನ್ನು ಸೂಚಿಸಿದರು. ಮುನಿಯಿಂದ ಸಂಪ್ರಕೀರ್ತಿತವಾದ, ಕವಿಗಳ ಪರಮಾಧಾರವಾದ, ಯಥಾಕ್ರಮವಾಗಿ ಸಮಾಪ್ತವಾದ ಈ ಆಶ್ಚರ್ಯಕರವಾದ ಆಖ್ಯಾನವನ್ನು ಆ ಗಾಯಕರು ಎಲ್ಲೆಡೆಯೂ ಹಾಡುತ್ತ ಎಲ್ಲರ ಪ್ರಶಂಸೆಯನ್ನೂ ಪಡೆಯುತ್ತ ಒಂದು ಸಲ ಅಯೋಧ್ಯೆಯ ರಾಜಮಾರ್ಗದಲ್ಲಿ ಗಾಯನ ಮಾಡುತ್ತ ಬಂದರು. ಇವರನ್ನು ರಾಮಚಂದ್ರನು ನೋಡಿ ಕರೆಯಿಸಿ ಮರ್ಯಾದೆಮಾಡಿ ಸೋದರರೊಡನೆ ಸಭೆಯಲ್ಲಿ ಕುಳಿತು ಅವರಿಂದ ಕಾವ್ಯವನ್ನು ಹಾಡಿಸಿದನು. ಸಭೆಯೆಲ್ಲ ಈ ಕೃತಿಯನ್ನು ಕೇಳಿ ಆನಂದಪಟ್ಟಿತು. ರಾಮಚಂದ್ರನಿಗೂ ಅದು ಚೆನ್ನಾಗಿ ಕಂಡಿತು.

### ಇದರ ಲೇಖಕರು, ಇದರ ಭಾವ

ಈ ಕಥೆ ಈಗಿನ ಬಾಲಕಾಂಡದ ಮೊದಲ ನಾಲ್ಕು ಸರ್ಗ. ಐದನೆಯ ಸರ್ಗ "ವಸುಂಧರೆ ಎಲ್ಲರಿಗೂ ಮೊದಲು ಯಾರ ಸ್ವತ್ತಾಗಿತ್ತೋ, ಯಾರಲ್ಲಿ ಸಾಗರವನ್ನು ಅಗೆಯಿಸಿದ ಸಹಸ್ರಪುತ್ರಪರಿವಾರಿತನಾದ ಸಗರನೆಂಬವನು ಒಬ್ಬನೋ, ಆ ಇಕ್ಷ್ವಾಕುಗಳ ವಂಶವನ್ನು ಕುರಿತದು ರಾಮಾಯಣವೆಂದು ಹೆಸರುಳ್ಳ ಈ ಮಹದಾಖ್ಯಾನ. ಅದನ್ನು ನಾನು ಹೇಳುತ್ತೇನೆ" ಎಂಬ ಮಾತಿನಿಂದ ಆರಂಭವಾಗುತ್ತದೆ. ವಾಲ್ಮೀಕಿ ಕಾವ್ಯವನ್ನು ಈ ಸರ್ಗದಿಂದ ಪ್ರಾರಂಭಮಾಡಿದನೆಂದು ಕಾಣುತ್ತದೆ. ಮೊದಲ ನಾಲ್ಕು ಸರ್ಗವನ್ನು ಯಾರೋ ಬೇರೆಯವರು ಬರೆದಿರಬೇಕು. ಅಲ್ಲದೆ ಇದರಲ್ಲಿ ಇಬ್ಬರ ಕೈವಾಡ ಕಾಣುತ್ತದೆ. ಒಬ್ಬನು ಮೊದಲನೆಯ ಮತ್ತು ಮೂರು ನಾಲ್ಕನೆಯ

ಸರ್ಗವನ್ನು ಬರೆದನು. ಮೊದಲನೆಯ ಸರ್ಗದಲ್ಲಿ ನಾರದನು ವಾಲ್ಮೀಕಿಗೆ ವಿಷಯವನ್ನು ಹೇಳಿದನೆಂದೂ, ಮೂರನೆಯದರಲ್ಲಿ ವಾಲ್ಮೀಕಿ ಧ್ಯಾನದಿಂದ ಕತೆಯನ್ನು ವಿವರ ವಿವರವಾಗಿ ಕಂಡು ರಚಿಸಿದನೆಂದೂ ನಾಲ್ಕನೆಯದರಲ್ಲಿ ಅದನ್ನು ಕುಶೀಲವರು ಕಲಿತು ರಾಮನೆದುರು ಹಾಡಿದರೆಂದೂ ಹೇಳಿದೆ. ಇದು ಒಂದು ಸಾಮಾನ್ಯ ಉಪೋದ್ಘಾತ. ಎರಡನೆಯ ಸರ್ಗವನ್ನು ಕವಿಯ ಶಿಷ್ಯನಾದ ಭರದ್ವಾಜನೋ ಅವನ ಇಷ್ಟರೋ ಬರೆದಿರಬೇಕು. ಕ್ರೌಂಚಮಿಥುನದ ಸಂಗತಿಯನ್ನು ಹೇಳುವುದು ಈ ಸರ್ಗ. ಆ ಸಂಗತಿ ಪ್ರತ್ಯಕ್ಷವಾಗಿ ತಿಳಿದಿದ್ದದು ಭಾರದ್ವಾಜನಿಗೆ. ಕವಿಯ ವಿಷಯದಲ್ಲಿ ಎರಡನೆಯ ಸರ್ಗದ ಮುಖ್ಯಭಾವ ಅತಿಶಯವಾದ ಭಕ್ತಿ; ಅದರ ಜೊತೆಗೆ ಅತುಲವಾದ ಪ್ರೇಮ. ಈ ಸರ್ಗವನ್ನು ಬರೆದಾತನು ವಾಲ್ಮೀಕಿಯ ಜೊತೆಯ ಋಷಿಯಲ್ಲ, ಅವನಿಗೆ ದೂರದ ಮನುಷ್ಯನಲ್ಲ; ಅವನನ್ನು ಹಿರಿಯನೆಂದು ಭಾವಿಸಿ ಹತ್ತಿರದಲ್ಲಿದ್ದ ಒಬ್ಬನು ಎಂದು ಅದರ ರೀತಿಯಿಂದ ಕಾಣುತ್ತದೆ. ಇದನ್ನು ಭರದ್ವಾಜನು ಬರೆದಿರಬೇಕೆಂಬ ಊಹೆಗೆ ಈ ಎರಡು ಸಂದರ್ಭವೂ ಸಾರ್ಥಕವಾಗುತ್ತವೆ. ಆದರೆ ಈ ಸಂದರ್ಭವನ್ನು ಹೇಳುವುದರಲ್ಲಿ ಬ್ರಹ್ಮನುಬಂದದು ಮಾತನಾಡಿದ್ದು ಮುಂತಾದ ಒಂದೆರಡು ಅಸಂಭವವಾದ ಮಾತು ಬರುತ್ತದೆ. ಆದಕಾರಣ ಇದನ್ನು ಭರದ್ವಾಜನಿಂದ ಕತೆ ಕೇಳಿದ ಇಷ್ಟರು ಯಾರೋ ಬರೆದಿರಬೇಕೆಂಬ ಊಹೆಗೆ ಕಾರಣ ಇದೆ. ಕ್ರೌಂಚಮಿಥುನದ ಈ ಸಂಗತಿಯಲ್ಲಿ ಕಾಣಬರುವ ಒಂದೆರಡು ಭಾವಗಳನ್ನು ನಾವು ಅಕ್ಷರಶಃ ವಾಸ್ತವವೆಂದು ಗ್ರಹಿಸಬೇಕಾದದಿಲ್ಲ. ವಾಲ್ಮೀಕಿ ಮಾನಿಷಾದ ಎಂದು ಮೊದಲಾಗುವ ಶ್ಲೋಕವನ್ನು ಉದ್ಗರಿಸುವ ಹಿಂದೆ ಗೀರ್ವಾಣಭಾಷೆಯಲ್ಲಿ ಶ್ಲೋಕವೆನ್ನುವುದಿರಲಿಲ್ಲವೆಂದು ಈ ಉಪೋದ್ಘಾತದಲ್ಲಿ ಹೇಳಿದಹಾಗೆ ಕಾಣುತ್ತದೆ. ಇದು ಉಪೋದ್ಘಾತಕಾರನ ಉದ್ದೇಶವಿರಲಾರದು. ಈ ಮಾತು ಪಾದಬದ್ಧವೆಂದೂ, ಅಕ್ಷರಸಮವೆಂದೂ ತಂತ್ರೀಲಯಸಮನ್ವಿತವೆಂದೂ ವಾಲ್ಮೀಕಿಯೂ ಅವನ ಶಿಷ್ಯನೂ ಆಗಲೇ ಗುರುತಿಸಿದರು. ಎಂದರೆ ಇವರಿಗೆ ಶ್ಲೋಕದ ಲಕ್ಷಣಗಳು ಆ ಮೊದಲೇ ತಿಳಿದಿದ್ದುವು. ಇದರಿಂದ ಆ ಮೊದಲೇ ಶ್ಲೋಕಗಳು ವಾಡಿಕೆಯಲ್ಲಿದ್ದುವೆಂದು ಊಹಿಸಬಹುದು. ನಾರದನು ಹೇಳುವ ಮೊದಲು ವಾಲ್ಮೀಕಿಗೆ

ರಾಮನ ವಿಷಯ ಗೊತ್ತಿರಲಿಲ್ಲವೆನ್ನುವ ಮಾತನ್ನೂ ಮತ್ತು ಬ್ರಹ್ಮನು ಬಂದು ಕವಿಗೆ ರಾಮನ ಚರಿತೆಯನ್ನು ಬರೆ ಎಂದು ಹೇಳಿದ ಮಾತನ್ನೂ ನಾವು ಹೀಗೆಯೇ ತಿಳಿಯಬೇಕು. ಆದರೆ ಒಟ್ಟಿನಲ್ಲಿ ಈ ಸಂಗತಿಯಲ್ಲಿ ಕಾಣಬರುವ ಕವಿತಾ ವಿಷಯವಾದ ಭಾವನೆ ಬಹು ಸುಂದರವಾದದು, ಆನತಂತ್ರವಾದದು. ಕಾವ್ಯದ ಕಾರಣ ಭಾವದಿಂದ ಉಬ್ಬಿದ ಮನಸ್ಸು. ಇಲ್ಲಿ ಅದು ನೋವಿನಿಂದ ಬಂದಿತು; ನೋವಿಗೆ ರೂಪನ್ನು ಕೊಡುವ ಮಾತೇ ಕಾವ್ಯವಾಯಿತು. ಆ ಮಾತು ಸಾವಧಾನವಾಗಿ ಯೋಚಿಸಿ ಕಟ್ಟಿ ಹೇಳಿದ ಮಾತಲ್ಲ; ಭಾವ ಉಕ್ಕಿ ಮಾತಾಗಿ ಹೊರಹೊಮ್ಮಿತು. ಬಲ್ಲವನ ಬಾಯಲ್ಲಿ ಬಂದ ಅಂಥ ಮಾತಿನಲ್ಲಿ ಸಾವಧಾನವಾಗಿ ಕಟ್ಟಿದರೆ ಮಾತ್ರ ಬರಬಹುದೆನ್ನಿಸುವಂತಹ ನಿಯಮವಿಧೇಯತೆ ಕಾಣುತ್ತದೆ. ಈ ಕವಿತೆಯನ್ನು ಹೇಳಿದ ಕವಿ ಮುಖ್ಯವಾಗಿ ಕವಿಯಲ್ಲ; ಅವನು ಮುಖ್ಯವಾಗಿ ಒಬ್ಬ ಋಷಿ. ಅವನ ಸ್ವಭಾವದ ದೆಸೆಯಿಂದ ಅವನು ಆಡಿದ ಮಾತು ಕವಿತೆಯಾಯಿತು. ಇಂಥ ಸಂದರ್ಭ ಹಿಂದೆ ನೂರಾರುಸಲ ಆಗಿದ್ದಿರಬಹುದು; ನೂರಾರು ಜನ ಅದನ್ನು ನೋಡಿದ್ದಿರಬಹುದು. ಆ ನೂರಾರು ಸಂದರ್ಭದಲ್ಲಿ ಆ ನೂರಾರು ಜನ ಕವಿತೆಯನ್ನು ನುಡಿಯಲಿಲ್ಲ; ವಾಲ್ಮೀಕಿ ಕವಿತೆಯನ್ನು ನುಡಿದನು. ನಡೆದ ಸಂಗತಿಯಾದರೂ ಒಂದು ದೃಷ್ಟಿಯಿಂದ ಬಹು ಸಣ್ಣದು. ಎರಡು ಕ್ರೌಂಚಪಕ್ಷಿ ಜೊತೆಯಾಗಿರಬೇಕಾದರೆ ವ್ಯಾಧನೊಬ್ಬನು ಒಂದನ್ನು ಕೊಂದನೆನ್ನುವುದು ಪ್ರಪಂಚದ ಚರಿತ್ರೆಯಲ್ಲಿ ಬಹು ಸಣ್ಣ ವಿಷಯ. ಆದರೆ ವಾಲ್ಮೀಕಿಯ ಸಂಸ್ಕೃತವಾದ ಜೀವಕ್ಕೆ ಆ ಹಕ್ಕಿಯ ನೋವು ಪ್ರಪಂಚದ ಎಲ್ಲ ಯಾತನೆಯ ಪ್ರತಿನಿಧಿಯಾಗಿ ಕಂಡಿತು. ನೊಂದದು ಹಕ್ಕಿಯಾದರೆ ಏನು? ಮನುಷ್ಯನಾದರೆ ಏನು? ಜೀವ ಜೀವ; ಅದರಲ್ಲಿ ಸಣ್ಣದು ದೊಡ್ಡದಿಲ್ಲ. ನಾವು ಸಣ್ಣದೆಂಬ ಯಾವ ಜೀವದ ನೋವಾದರೂ ವಿಶ್ವದ ಜೀವನ ಅನುಭವಿಸುವ ಒಂದು ನೋವು. ಅದನ್ನು ಕುರಿತು ಕವಿ ಆಡಿದ ಮಾತು ಆಗ್ರಹವನ್ನು ಸೂಚಿಸುವ ಉದ್ದೇಶದಿಂದ ಹೊರಟದ್ದಾದರೂ ಬ್ರಹ್ಮನು ಅದನ್ನು ಸುಂದರವಾದ ಕಾವ್ಯದ ಮೊದಲ ಮಾತಾಗುವಂತೆ ಮಾಡಿದನು. ಕವಿಯ ಕೃತಿ ಅವನ ಉದ್ದೇಶ ಎಷ್ಟೋ ಅಷ್ಟು ಫಲವನ್ನು ಸಾಧಿಸಿ ಮುಗಿಯುವುದಿಲ್ಲ.

ಅದು ಸರಿಯಾದ ಭಾವನೆಯಿಂದ ಹೊರಟದ್ದೇ ಒಂದಾದರೆ ಅವನು ಎಣಿಸದ ಅತ್ಯುನ್ನತ ಫಲಗಳನ್ನು ಅವನಿಗೆ ತಿಳಿಯದಂತೆ ಸಾಧಿಸಬಹುದು. ವಿಶ್ವನಿಯಾಮಕಶಕ್ತಿ ಅದನ್ನು ಆ ರೀತಿ ಉಪಯೋಗಿಸಿಕೊಳ್ಳುತ್ತದೆ. ಈ ಸಂಗತಿಯ ರಂಗವಾದರೂ ರಮ್ಯವಾದ ವಿಪುಲವನ; ಅದರ ಸೌಂದರ್ಯ ಚೇತೋಹಾರಿಯಾದದು. ಮಧ್ಯದಲ್ಲಿ ತಮಸಾ ನದಿಯಿಂದ ಅದು ಋಷಿಗಳ ವಾಸಕ್ಕೆ ಯೋಗ್ಯವಾಗಿತ್ತು. ಆ ಸ್ಥಳದಲ್ಲಿ ತಮಸಾ ನದಿಯ ತೀರ್ಥ ಬದಿಯಿಲ್ಲದೆ ಸನ್ಮನುಷ್ಯರ ಮನಸ್ಸಿನಂತೆ ಪ್ರಸನ್ನವಾಗಿತ್ತು. ಪ್ರಕೃತಿಯ ಸೌಂದರ್ಯಕ್ಕೆ ಮನಸ್ಸನ್ನು ಕೊಡುವುದು ಈ ಆದಿಕವಿಯ ಒಂದು ಮುಖ್ಯಗುಣ. ಎಲ್ಲ ಕವಿತೆಯಲ್ಲೂ ಈ ರೀತಿಯ ಮನಸ್ಸು ಅವಶ್ಯ. ಹೀಗೆ ಕವಿತೆಯನ್ನು ಕುರಿತ ಹಲವು ಮುಖ್ಯ ತತ್ವಗಳು ಈ ಸಂಗತಿಯಿಂದ ಕಾಣುತ್ತವೆ. ಪ್ರಕೃತಿಸೌಂದರ್ಯವನ್ನೂ ಮಾನವ ಜೀವನದ ಉಚ್ಛ್ವಾಸ ಉದ್ವೇಗಗಳನ್ನೂ ಅನುಭವಿಸುವುದಕ್ಕೂ ವರ್ಣಿಸುವುದಕ್ಕೂ ವಾಲ್ಮೀಕಿ ಎಷ್ಟು ಸಮರ್ಥನಾಗಿದ್ದನೆಂದು ರಾಮಾಯಣದ ಕಥೆಯಿಂದ ಸ್ಫುಟವಾಗಿ ಕಾಣುತ್ತದೆ. ಅವನ ಊಹೆಯಾದರೂ ತಪಸ್ಸಮಾಧಿಯಿಂದ ಶಕ್ತಿಯನ್ನು ಪಡೆದದು. ಅವನು ಕುಳಿತು ಧ್ಯಾನಮಾಡಿದಾಗ ರಾಮಾಯಣದ ಕಥೆ ಅವನೆದುರಿಗೆ ಪುನಃ ನಡೆಯಿತು. ಅನುಭವಿಸಿದವರಿಗೇ ಅದೆಲ್ಲ ನೆನವಿದ್ದಿರ ಲಾರದು; ಕವಿಗೆ ಅದು ಯಾವುದೂ ಕಾಣದೆಹೋಗಲಿಲ್ಲ. ತಾನು ಕಾಣ ಲಿಲ್ಲವೆಂಬ ಕಾರಣದಿಂದ ಅವನು ಯಾವುದನ್ನಾಗಲಿ ಹೇಳದೆಬಿಡಲಿಲ್ಲ. ಇವನ ವಿವರಣೆಯನ್ನು ನೋಡಿದಾಗ ಕಷ್ಟಸುಖವನ್ನು ಅನುಭವಿಸಿದ ಜನರೇ ಇವನು ಇದನ್ನು ಹೇಗೆ ತಿಳಿದನು ಎಂದು ಆಶ್ಚರ್ಯಪಟ್ಟಿರಬೇಕು; ಹೌದು ನನಗೆ ಹೀಗೆ ಆಯಿತು ಎಂದು ಅವನ ವರ್ಣನೆಯಿಂದ ನೆನೆದಿರ ಬೇಕು. ಕವಿಯಾದವನ ಊಹೆ ಅಮೋಘವಾದದು. ಎಲ್ಲ ಸ್ಥಾನಮಾನ ಎಲ್ಲ ಹೃದಯಗಳಿಗೂ ಅದಕ್ಕೆ ಹೊಗಲುಂಟು. ರವಿ ಕಾಣದ್ದನ್ನು ಕವಿ ಕಂಡನೆನ್ನುವುದು ಸಾರ್ಥಕವಾಗುವುದು ಇಂಥ ಕವಿತೆಯನ್ನು ಕುರಿತು. ರವಿ ಕಾಣದಿರುವುದು ವಿಷಯ ಮಿಥ್ಯವಾದದರಿಂದಲ್ಲ, ಅವನು ಕಾಣ ಲಾರದಂತೆ ಸೂಕ್ಷ್ಮವಾಗಿರುವುದರಿಂದ. ಪೀಠಿಕಾಕಾರನು ಹೇಳಿರುವಂತೆ ಈ ಕವಿತೆಯಲ್ಲಿ ಪಾತ್ರಗಳ ನಗೆ ನುಡಿ ನಡೆ ಆಟ ಎಲ್ಲ ಚಾಚೂತಪ್ಪದೆ ಸಂಪೂರ್ಣವಾಗಿ ಬಂದಿದೆ.

೩

## ಪ್ರಕ್ಷಿಪ್ತ ಭಾಗಗಳು

ಉಪೋದ್ಘಾತದ ನಾಲ್ಕು ಸರ್ಗವನ್ನು ವಾಲ್ಮೀಕಿ ಬರೆಯಲಿಲ್ಲ ಎಂದು ಹೇಳಿದೆ. ನಮಗೆ ಈಗ ವಾಡಿಕೆಯಾಗಿರುವ ರಾಮಾಯಣದಲ್ಲಿ ಇದರಂತೆ ಪ್ರಕ್ಷಿಪ್ತಭಾಗ ಹಲವು ಇವೆ. ಈ ಮಹಾಕಾವ್ಯದಲ್ಲಿ ಪ್ರಕ್ಷಿಪ್ತ ಭಾಗಗಳಿವೆಯೆಂಬುದನ್ನು ಸಂಪ್ರದಾಯದ ಅನುಯಾಯಿಗಳೂ ಹೇಳುತ್ತಾರೆ. ಆದರೆ ಯಾವುದು ಪ್ರಕ್ಷಿಪ್ತ ಎಂಬ ವಿಷಯದಲ್ಲಿ ಮತಭೇದ ಕಾಣುತ್ತದೆ. ಆಧುನಿಕ ವಿಚಾರದ ದೃಷ್ಟಿಯಿಂದ ಪ್ರಕ್ಷೇಪವೆನ್ನುವ ಭಾಗದಲ್ಲಿ ಉತ್ತರಕಾಂಡವನ್ನು ನಾವು ಮೊದಲಲ್ಲಿ ಹೇಳಬೇಕು. ದಶಶಿರನ ವಧೆ ಆಗಿ ರಾಮನು ಪಟ್ಟಾಭಿಷಿಕ್ತನಾದ ಸಂದರ್ಭಕ್ಕೆ ವಾಲ್ಮೀಕಿ ತನ್ನ ಕಾವ್ಯವನ್ನು ಮುಗಿಸಿದನೆಂದು ಕಾಣುತ್ತದೆ. "ದಶಶಿರಸಸ್ಯವಧಂ ನಿಶಾಮಯಧ್ವಂ" ಎನ್ನುವ ಉಪೋದ್ಘಾತದ ಮಾತು ಮುಖ್ಯವಾಗಿ ಇದಕ್ಕೆ ಆಧಾರ. ವಾಲ್ಮೀಕಿ ಕಾವ್ಯವನ್ನು ರಚಿಸಿದಾಗ ರಾಮನು ರಾಜ್ಯವನ್ನು ಆಳುತ್ತಿದ್ದನು. ವಾಲ್ಮೀಕಿ ನಾರದನನ್ನು ಕುರಿತು ಪ್ರಶ್ನೆ ಮಾಡುವಾಗ್ಗೆ "ಕೋನ್ವಸ್ಮಿನ್ ಸಾಂಪ್ರತಂ ಲೋಕೇ ಗುಣವಾನ್" ಈಗ ಲೋಕದಲ್ಲಿ ಗುಣವಂತನು ಯಾರು ಎಂದು ಕೇಳಿದನು, ನಾರದನು ರಾಮನ ಚರಿತೆಯನ್ನು ವಾಲ್ಮೀಕಿಗೆ ಹೇಳಬೇಕಾದರೆ ಅನೇಕ ಯಜ್ಞಯಾಗಗಳನ್ನು ಮಾಡಿ ರಾಮನು ಬ್ರಹ್ಮಲೋಕವನ್ನು ಸೇರುತ್ತಾನೆ ಎಂದನು. "ಬ್ರಹ್ಮಲೋಕಂ ಗಮಿಷ್ಯತಿ." ಉತ್ತರಕಾಂಡದ ಕಥೆ ಆಗ ನಡೆದಿರಲಿಲ್ಲ; ಅದನ್ನು ನಾರದನು ಹೇಳಲಿಲ್ಲ. ವಾಲ್ಮೀಕಿಯ ಕೃತಿಯನ್ನು ಹಾಡಿಕೊಂಡು ಬಂದ ಕುಶೀಲವರು ರಾಮನ ಎದುರಿಗೆ ಹಾಡಿದ್ದು ಆರು ಕಾಂಡವನ್ನು ಮಾತ್ರ ಇರಬೇಕು. ಆಗ್ಯೆ ಇವರು ಕುಶೀಲವರು. ಈ ಮಾತು ಕುಶಲವ ಆಗಿ - ಸೀತೆಯ ಮಕ್ಕಳ ಹೆಸರಾದದು ಉತ್ತರಕಾಂಡದ ರಚನೆಯ ಕಾಲಕ್ಕೆ. ಉಪೋದ್ಘಾತದಲ್ಲಿ "ಅನಾಗತಂ ಚ ಯತ್ಕಿಂಚಿತ್ ಚಕಾರ ಭಗವಾನ್ ಋಷಿಃ ಉತ್ತರೇಕಾವ್ಯೇ" ಎಂದೂ ಕೆಲ ಪಾಠಾಂತರದಲ್ಲಿ "ಸ್ವರಾಜ್ಯರಂಜನಂಚೈವ ವೈದೇಹ್ಯಾಶ್ಚ ವಿಸರ್ಜನಂ" ಎಂದೂ ಹೇಳಿದೆ. ಇದು ಆಮೇಲೆ ಸೇರಿಸಿದ ಮಾತು ಎಂದು ಕಾಣುತ್ತದೆ.

ಉತ್ತರಕಾಂಡವನ್ನು ಬರೆದು ವಾಲ್ಮೀಕಿಯ ಕಾವ್ಯಕ್ಕೆ ಸೇರಿಸಿದವರೋ ಅವರ ನಂತರ ಬಂದ ಯಾರೋ ಅದಕ್ಕೆ ವಾಲ್ಮೀಕಿಯ ಬರಹದ ಗೌರವ ದೊರೆಯಲೆಂಬ ಅಪೇಕ್ಷೆಯಿಂದ ಇದನ್ನು ಸೇರಿಸಿರಬೇಕು. ಸಾಲದ್ದಕ್ಕೆ ಉತ್ತರಕಾಂಡದಲ್ಲಿ ಯಾದವ ಕುಲದ ವಾಸುದೇವನ ಮಾತು ಬಂದಿದೆ. ಅನಾಗತವಾದ ಯತ್ಕಿಂಚಿತ್ತನ್ನು ಬರೆಯುತ್ತ ವಾಲ್ಮೀಕಿ ಎರಡು ಯುಗದ ಆಮೇಲಣ ಮಾತನ್ನು ಹೇಳಿದನೆನ್ನುವುದು ಸರಿಯಾಗಲಾರದು. ಉತ್ತರಕಾಂಡ ವಾಲ್ಮೀಕಿಯ ಕೃತಿಯಲ್ಲವೆಂಬ ಮಾತನ್ನು ನಮ್ಮ ಜನ ಶಾಸ್ತ್ರದೃಷ್ಟಿಯಿಂದ ಒಪ್ಪುವುದಿಲ್ಲವಾದರೂ ನಡತೆಯಿಂದ ಸರಿಯೆಂದು ಒಪ್ಪಿದ್ದಾರೆ. ರಾಮಾಯಣದ ಪಾರಾಯಣ ವೆಂದರೆ ಆರುಕಾಂಡದ ಪಾರಾಯಣ; ಏಳನೆಯ ಕಾಂಡವನ್ನು ಯಾರೂ ಪಾರಾಯಣ ಮಾಡುವುದಿಲ್ಲ. ತನ್ನ ಕಾವ್ಯಕ್ಕೆ ಫಲವನ್ನು ಹೇಳುತ್ತ ಮಂಗಳವಾಚನವನ್ನು ಮಾಡಿದ ಕವಿ ಆರನೆಯ ಕಾಂಡದ ಕೊನೆಯಲ್ಲಿ ಅದನ್ನು ತಂದನು. ಎಂದರೆ ಅವನು ಆಗ ಬರೆದದು ಆರು ಕಾಂಡವನ್ನು. ಅದಕ್ಕೆ ಮೊದಲಿನ ಕಾಂಡಗಳಿಗೆ ಬೇರೆ ಮಂಗಳವಾಚನವಿಲ್ಲ: ಆರು ಕಾಂಡಗಳ ಒಟ್ಟು ಕಥೆಗೆ ಅದು ಒಂದೇ ಮಂಗಳವಾಚನ. ಅನಾಗತ ವಾದದನ್ನೂ ಕವಿ ಬರೆದಿದ್ದನಾದರೆ ಆರನೆಯ ಕಾಂಡದ ಕೊನೆಗೆ ಅವನು ಮಂಗಳವಾಚನವನ್ನು ಮಾಡುತ್ತಿರಲಿಲ್ಲ. ರಾಮನ ಚರಿತ್ರೆ ಯನ್ನು ಮುಗಿಸಿಯೇ ಅದನ್ನು ನುಡಿಯುತ್ತಿದ್ದನು. ಮುಗಿಸಿದ್ದರೂ ಅದನ್ನು ಹೊರಗೆಡಹಲು ಇಷ್ಟವಿಲ್ಲದಿದ್ದರೆ ಆ ಹೊರಗೆಡಹುವ ಕಾಲಕ್ಕೆ ಎಷ್ಟು ನಡೆದಿತ್ತೋ ಅಷ್ಟರ ಚರಿತ್ರೆಯನ್ನು ಕೊಟ್ಟು ಮಂಗಳವನ್ನು ಹಾಡುತ್ತಿದ್ದನು. ಹೀಗೆಯೇ ಪ್ರಕ್ಷಿಪ್ತವಾಗಿರತಕ್ಕದು ಬಾಲಕಾಂಡದ ಆರಂಭದ ಋಷ್ಯಶೃಂಗವೃತ್ತಾಂತ. ಈ ಮಾತು ಇಲ್ಲಿ ಸೇರಿರುವುದರಲ್ಲಿ ಶ್ಲೋಕಗಳು ಸರಿಯಾಗಿ ಅಚ್ಚುಗೂಡಿಲ್ಲ. ಇದರಿಂದ ಇಲ್ಲಿ ಬರೆದಿರುವ ಕಥೆ ಪ್ರಕ್ಷಿಪ್ತವೆನ್ನುವುದು ಕಾಣುತ್ತದೆ. ಭರದ್ವಾಜನ ಆಶ್ರಮಕ್ಕೆ ರಾಮನೂ ಭರತನೂ ಹೋಗಿ ಬಂದ ಸಂದರ್ಭವನ್ನು ಕುರಿತ ಒಂದೆರಡು ಸರ್ಗ ಹೀಗೆಯೇ ಪ್ರಕ್ಷಿಪ್ತವೆಂದು ಕಾಣುತ್ತದೆ. ರಾಮನು ಮರಳಿ ಬಂದಾಗ ಅಯೋಧ್ಯೆಯನ್ನು ಕಂಡು ಅದಕ್ಕೆ ವಂದಿಸು ಎಂದು ಪತ್ನಿಗೆ

ಹೇಳಿದನಂತೆ. ಇದಾದಮೇಲೆ ಇವರು ಭರದ್ವಾಜಾಶ್ರಮದಲ್ಲಿ ನಿಂತರೆಂದು ಕತೆ ನಡೆಯುತ್ತದೆ. ಲಂಕೆಯಿಂದ ಹಿಂದಿರುಗುತ್ತ ರಾಮನು ಅಯೋಧ್ಯೆಯನ್ನು ನೋಡಿದಮೇಲೆ ಭರದ್ವಾಜಾಶ್ರಮದಲ್ಲಿ ನಿಂತನೆನ್ನುವುದು ಆ ಸಂದರ್ಭಕ್ಕೆ ಅನುಗುಣವಾಗಿಲ್ಲ. ತಮ್ಮನನ್ನು ನೋಡುವ ಆತುರದಲ್ಲಿ ಬರುತ್ತ ರಾಮನು ಅಯೋಧ್ಯೆಗೆ ಅಷ್ಟು ಹತ್ತಿರ ಬಂದು ಭರದ್ವಾಜನಲ್ಲಿ ನಿಲ್ಲಬೇಕಾದ ಕಾರಣವಿರಲಿಲ್ಲ. ಭರದ್ವಾಜನ ಮಹಿಮೆಯನ್ನು ಸೂಚಿಸುವುದಕ್ಕಾಗಿ ಇದು ಸೇರಿರಬಹುದೆಂದು ನಾವು ಊಹಿಸಬಹುದಾಗಿದೆ. ಸಂದರ್ಭವೇನಿರಬಹುದೆಂದು ಕಲ್ಪಿಸುವುದಾದರೆ ನಾವು ಹೀಗೆ ಹೇಳಬಹುದು. ಹಿರಿಯ ಭರದ್ವಾಜ ಮಹಿಮಾವಂತ ಋಷಿ. ಅವನ ಮಗ ವಾಲ್ಮೀಕಿಯಲ್ಲಿ ಶಿಷ್ಯವೃತ್ತಿಯಿಂದ ಬೆಳೆದನು. ಇವನೋ ಇವನ ತಮ್ಮನೋ ಮಕ್ಕಳೋ ಉಪೋದ್ಘಾತದ ಎರಡನೆಯ ಸರ್ಗವನ್ನು ಬರೆದರು. ಪ್ರಾಯಶಃ ಭರದ್ವಾಜನ ಮಹಿಮೆಯ ವಿಷಯದಲ್ಲಿ ಆಸಕ್ತರಾಗಿದ್ದವರೊಬ್ಬರು ಇಲ್ಲಿ ಕೈಯಾಡಿಸಿರಬೇಕೆಂದು ಊಹಿಸಬಹುದು. ಮುಖ್ಯವಾಗಿ ಇದು ಕಲ್ಪನಾ ರಾಜ್ಯ. ಸಂಗತಿ ಹೀಗೆಯೇ ನಡೆಯಿತೆಂದು ನಾವು ಹೇಳುವಂತಿಲ್ಲ. ಆದರೆ ಏನೋ ನಡೆದಿರಬೇಕೆನ್ನುವುದು ನಿಸ್ಸಂದೇಹ. ಇದೇ ಪ್ರಕಾರವಾಗಿ ರಾಮನು ವಿಷ್ಣುವಿನ ಅವತಾರವೆಂದು ಹೇಳುವುದಕ್ಕೆ ಪ್ರವೃತ್ತವಾಗಿರುವ ಸರ್ಗ ಮತ್ತು ವಾಕ್ಯಗಳು, ವಿಷ್ಣು ಶಿವನಿಗಿಂತ ಹೆಚ್ಚು, ಶಿವ ವಿಷ್ಣುವಿಗಿಂತ ಹೆಚ್ಚು ಎಂದು ಅಥವಾ ಇವರ ಮಹಿಮೆಯನ್ನು ತೋರಿಸುವುದಕ್ಕಾಗಿ ಪ್ರವೃತ್ತವಾಗಿರುವ ವಾಕ್ಯಗಳು, ಇವೆಲ್ಲ ಬೇರೆಯ ಜನರು ಸೇರಿಸಿದುವೇ. ರಾಮನು ವಿಷ್ಣುವಿನ ಅವತಾರವೆಂದು ಸಾಧಿಸುವುದಕ್ಕಾಗಿ ಹೇಳಿರುವ ಕಥಾಭಾಗ ಋಷ್ಯಶೃಂಗನ ವೃತ್ತಾಂತದಂತೆ ಆ ಸ್ಥಳದಲ್ಲಿ ಬಿರುಕುಬಿಟ್ಟು ಕಾಣುತ್ತದೆ. ಉಪೋದ್ಘಾತಕಾರನ ಕಾಲಕ್ಕಂತೂ ರಾಮನು ಬ್ರಹ್ಮಲೋಕಕ್ಕೆ ಹೋಗತಕ್ಕವನೆಂಬ ನಂಬಿಕೆ ಇದ್ದಿತು. ಅವನು ವಿಷ್ಣು ಎಂದು ಅಥವಾ ವಿಷ್ಣುಲೋಕ ಬೇರೆ ಒಂದು ಇದೆ ಎಂದು ಉಪೋದ್ಘಾತಕಾರನು ತಿಳಿದಿದ್ದರೆ ಬ್ರಹ್ಮಲೋಕದ ಮಾತನ್ನು ಅವನು ಎತ್ತುತ್ತಿರಲಾರನು. ಶಿವನೂ ವಿಷ್ಣುವೂ ಎರಡು ದೇವರಾದಂದಿನಿಂದ ತಮ್ಮ ಭಕ್ತರ ಪ್ರತಿಷ್ಠೆಯ ಸಲುವಾಗಿ ಕಾಳಗದ ಕಣದಲ್ಲಿ ಕಾದುತ್ತಲೇ

ಇದ್ದಿದಾರೆ. ಇದು ಅವರ ಹಣೆಯ ಬರಹ. ನಮ್ಮ ದೇಶದ ಕಾವ್ಯಗಳಲ್ಲಿ, ಪುರಾಣಗಳಲ್ಲಿ, ಕಲೆಯಲ್ಲಿ, ಶಾಸ್ತ್ರದಲ್ಲಿ, ಶಿವಭಕ್ತರು ವಿಷ್ಣುವಿನಿಂದಲೂ, ವಿಷ್ಣುಭಕ್ತರು ಶಿವನಿಂದಲೂ ತಮ್ಮ ದೇವರ ಮಹಿಮೆಯನ್ನು ಹೊಗಳಿಸಿ ತಮ್ಮ ದೇವರಿಗೆ ಸೇವೆ ಮಾಡಿಸಿ ತಮ್ಮ ದೊಡ್ಡಸ್ತಿಕೆಯನ್ನು ಸಿದ್ಧಾಂತ ಮಾಡುತ್ತ ಬಂದಿರುವುದು ಕಾಣುತ್ತದೆ. ರಾಮಾಯಣ ಇಂಥವರ ಕೈಯಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಸಗರನ ಕಥೆ, ವಸಿಷ್ಠ ವಿಶ್ವಾಮಿತ್ರರ ಕಲಹದ ಕಥೆ, ಪರಶುರಾಮನ ಕಥೆ, ಕಾಕಾಸುರನ ಕಥೆ, ಇವೂ ಪ್ರಕ್ಷಿಪ್ತ ವೆಂದೇ ಕಾಣುತ್ತದೆ. ಹೀಗೆಯೇ ಅಲ್ಲಲ್ಲಿ ಅಧಿಕಪಾಠ ಸರ್ಗಗಳಿವೆ; ಗಯೆ ಮೊದಲಾದ ಸ್ಥಲಗಳ ಮಹಿಮೆಯ ವರ್ಣನೆಯಿದೆ. ರಾಮನು ಭರತನನ್ನು ಪ್ರಶ್ನೆಮಾಡುವ ನೆಪದಿಂದ ಇಲ್ಲಿ ಸೇರಿಕೊಂಡಿರುವ ರಾಜನೀತಿಯ ಸರ್ಗವೊಂದು ಮಹಾಭಾರತದ ಸಭಾಪರ್ವದಲ್ಲಿ ದೊರೆಯುತ್ತದೆ. ಅಲ್ಲಿ ಅದರ ಮಾತು ನಾರದನು ಯುಧಿಷ್ಠಿರನನ್ನು ಕೇಳುವ ಮಾತು; ಪ್ರಕೃತ ವಾಗಿ ಕಾಣುತ್ತದೆ. ರಾಮಾಯಣದಲ್ಲಿ ಅದು ದೊರೆಯುವಲ್ಲಿ ಬಹು ಅಪ್ರಸ್ತುತವಾಗಿದೆ. ಅಯೋಧ್ಯಾಕಾಂಡದಲ್ಲಿ ಬರುವ ಗಯಾ ಕ್ಷೇತ್ರ ಮಹಿಮಾ ವರ್ಣನೆಯ ನಾಲ್ಕು ಶ್ಲೋಕಗಳು ಓದುತ್ತಿದ್ದಹಾಗೆ ಚಕ್ಕೆ ಯಾಗಿ ಹೊರಕ್ಕೆ ಬರುತ್ತವೆ. ಇಂಥ ಭಾಗ ಪ್ರಕ್ಷಿಪ್ತವೆಂದು ಹೇಳುವುದಕ್ಕೆ ಸ್ವಲ್ಪವೂ ಸಂದೇಹ ಅವಶ್ಯಕವಿಲ್ಲ. ಗಂಗಾವತರಣದ ಕಥೆಯ ಕೊನೆಗೆ ಪ್ರತ್ಯೇಕವಾಗಿ ಒಂದು ಮಂಗಲಾಚರಣವಿದೆ. ಈ ಕಾರಣದಿಂದ ಈ ಕಥೆಯೂ ಪ್ರಕ್ಷಿಪ್ತವೋ ಎಂದು ಸಂದೇಹ ಹುಟ್ಟುತ್ತದೆ. ಸೀತಾಪಹರಣವಾದ ಒಡನೆ ಬರುವ ಸರ್ಗಗಳು ಹಲವು ಪ್ರಕ್ಷಿಪ್ತವೆಂದು ಕಾಣುತ್ತದೆ. ರಾಮನು ಆಶ್ರಮಕ್ಕೆ ಬಂದನೆಂಬಂತೆ ಲಕ್ಷ್ಮಣನನ್ನು ಹೀಗೆ ಹಾಗೆ ಪ್ರಶ್ನೆಮಾಡಿದ ನೆಂಬಂತೆ ಹಿಂದು ಮುಂದಾಗಿ ಕೆಲವುಸಲ ಮಾತು ಬರುತ್ತದೆ. ಕವಿ ಬರೆದ ಸರ್ಗದ ಜೊತೆಗೆ ಆಮೇಲೆ ಯಾರೋ ವರ್ಣನೆ ಸಾಲದು ಎಂತಲೋ ಏನೋ ಈ ಸರ್ಗಗಳನ್ನು ಸೇರಿಸಿರಬಹುದು. ಹೀಗೆಯೇ ಲಂಕಾದಹನದ ಕತೆಯೆಲ್ಲ ಪ್ರಕ್ಷಿಪ್ತವಾಗಿ ಕಾಣುತ್ತದೆ. ಅದರ ಹಿಂದಣ ಭಾಗವನ್ನು ನೋಡಿದರೆ ಇಂಥ ಸಂದರ್ಭ ಬರತಕ್ಕದಿಲ್ಲ. ಹನುಮಂತನು ಸೀತೆಯನ್ನು ನೋಡಿಕೊಂಡು ರಹಸ್ಯವಾಗಿ ಹೊರಟುಹೋಗತಕ್ಕದೇ ಇಲ್ಲಿ ಅವಶ್ಯಕ.

ಇಂಥದರಲ್ಲಿ ಇವನು ಊರನ್ನು ಸುಟ್ಟು ಗಲಭೆಮಾಡಿ ಎರಡು ತಿಂಗಳ ಕಾಲ ಇನ್ನೂ ಅಲ್ಲಿಯೇ ಇರಬೇಕಾದ ಸೀತಾದೇವಿಯನ್ನು ಸಂದಿಗ್ಧ ಸ್ಥಿತಿಯಲ್ಲಿ ಬಿಟ್ಟು ಹೋದನೆನ್ನುವುದು ಅವಿವೇಕವಾಗಿ ಕಾಣುತ್ತದೆ. ಇಂಥ ಮಾತನ್ನು ಕವಿ ಹೇಳುವುದು ಸಾಧ್ಯವಲ್ಲ. ಹನುಮಂತನು ಲಂಕೆಗೆ ಹೋಗಿ ಸುಮ್ಮನೆ ಬರುವುದುಂಟೇ ಎಂದು ಯಾರೋ ಅದನ್ನು ಅವನಿಂದ ಸುಡಿಸಿ ತಮ್ಮ ಚಪಲವನ್ನು ಪರಿಸಿಕೊಂಡಿರಬೇಕು. ಯುದ್ಧಕಾಂಡದ ಆದಿತ್ಯಹೃದಯದ ಸರ್ಗವೂ ಪ್ರಕ್ಷಿಪ್ತವೆನ್ನುವುದು ಅದರ ಹಿಂದಿನ ಸರ್ಗವನ್ನೂ ಅದರ ಮುಂದಿನ ಸರ್ಗವನ್ನೂ ನಿಟ್ಟಿಸಿ ನೋಡಿದರೆ ಕಾಣುತ್ತದೆ. ಆ ಹಿಂದಿನ ಸರ್ಗವು ರಾವಣನ ಸಾರಥಿ ತಿರುಗಿಸಿದ "ಮಹಾರಥಃಕ್ಷಣೇನ ರಾಮಸ್ಯ ರಣಾಗ್ರತಃ ಅಭವತ್" ಎಂದು ಕೊನೆಯಾಗುತ್ತದೆ. ರಾವಣನ ಸಾರಥಿ ತನ್ನ ಅರಸನನ್ನು ಉಳಿಸುವುದಕ್ಕಾಗಿ ಯುದ್ಧದಿಂದ ಹಿಂತಿರುಗಿ ಓಡಿದನು. ತನ್ನನ್ನು ಹೇಡಿಯಂತೆ ನಡೆಯಿಸಿದ್ದಕ್ಕಾಗಿ ರಾವಣನು ಕೋಪಿಸಿಕೊಂಡು ಅವನನ್ನು ಬೈದು ರಥವನ್ನು ಹಿಂದಿರುಗಿಸೆಂದನು. ಮತ್ತು ಸಾರಥಿ ಕೊಟ್ಟ ಉದಾಹರಣೆಯನ್ನು ಒಪ್ಪಿಕೊಂಡು ಅವನಿಗೆ ಮರ್ಯಾದೆ ಮಾಡಿದನು. ಸಾರಥಿ ಮತ್ತೆ ರಥವನ್ನು ರಾಮನ ಮುಂಭಾಗಕ್ಕೆ ತಂದು ನಿಲ್ಲಿಸಿದನು. ಮುಂದಿನ ಸರ್ಗ "ಸರಥಂ ಸಾರಥಿರ್ಹೃಷ್ಟಃ ಕ್ಷಿಪ್ರಂ ಚೋದಯಾಮಾಸ" ಎಂದು ಮೊದಲಾಗುತ್ತದೆ. ಎಂದರೆ ಆ ರಥವನ್ನು ಸಾರಥಿ ಮುಂದಕ್ಕೆ ಬಿಟ್ಟನು ಎಂದು. ನೂರ ಆರನೆಯ ಸರ್ಗ ರಥದ ವಿಷಯವನ್ನು ಹೇಳಿ ಮುಗಿಯುತ್ತದೆ. ನೂರ ಎಂಟನೆಯ ಸರ್ಗ ರಥದ ವಿಷಯವನ್ನೆತ್ತಿ "ಸರಥಂ ಸಾರಥಿಃ ಚೋದಯಾಮಾಸ" ಎಂದು ಮೊದಲಾಗುತ್ತದೆ. ಇವುಗಳ ಮಧ್ಯೆ ಆದಿತ್ಯಹೃದಯದ ಸರ್ಗ "ತತೋ ಯುದ್ಧಪರಿಶ್ರಾಂತಂ ರಾಮಂ ಅಬ್ರವೀತ್ ಅಗಸ್ತ್ಯೋ ಭಗವಾನ್ ಋಷಿಃ" ಎಂದು ಆರಂಭವಾಗುತ್ತದೆ. ಯುದ್ಧದಿಂದ ಆಯಾಸಗೊಂಡು ಚಿಂತೆಯಿಂದ ಕೂಡಿ ಎದುರಿಗೆ ರಾವಣನನ್ನು ಕಂಡು ಯುದ್ಧಕ್ಕೆ ಮುಂಬರಿದಿದ್ದ ರಾಮನನ್ನು ನೋಡಿ ಋಷಿ ಅಗಸ್ತ್ಯನು ರಾಮನಿಗೆ ವಿಜಯಾರ್ಥವಾಗಿ ಆದಿತ್ಯಹೃದಯವನ್ನು ಉಪದೇಶಿಸಿದನು ಎಂದು ಹೇಳುತ್ತದೆ. ನೂರ ಆರನೆಯ ಸರ್ಗದ ಕೊನೆಯಲ್ಲಿ ರಾಮನು

ಪರಿಶ್ರಾಂತನಾಗಿದ್ದನೆಂದಾಗಲಿ ರಾವಣನ ವೀರ್ಯದಿಂದ ಚಿಂತೆಗೆ ಒಳಗಾಗಿದ್ದನೆಂದಾಗಲಿ ಸೂಚನೆಯಿಲ್ಲ; ಜಯದಿಂದ ಸಂತುಷ್ಟನಾಗಿದ್ದನೆಂದು ಹೇಳಲು ಕಾರಣವಿದೆ. ಆದರೆ ನೂರ ಏಳನೆಯ ಸರ್ಗ ಅವನು ಹೀಗಿದ್ದನೆಂದು ವರ್ಣಿಸುತ್ತದೆ. ಇದು ಹಿಂದಣ ಮತ್ತು ಮುಂದಣ ಸರ್ಗಗಳ ಕಥೆಯನ್ನು ನಿಷ್ಕಾರಣವಾಗಿ ಛೇದಿಸುವುದಲ್ಲದೆ ಆ ಕಥೆಯ ಪರಿಸ್ಥಿತಿಗೆ ಹೊಂದಿಕೆಯಾಗಿಯೂ ಇಲ್ಲ. ಆದಿತ್ಯಹೃದಯ ಎಷ್ಟು ದೊಡ್ಡದೆಂದು ತೋರಿಸುವುದಕ್ಕಾಗಿ ಇಲ್ಲಿ ರಾಮನಿಗೆ ಇಲ್ಲದ ಶ್ರಾಂತಿಯನ್ನೂ ಚಿಂತೆಯನ್ನೂ ಆರೋಪಿಸಿರುವಂತೆ ಕಾಣುತ್ತದೆ. ಶ್ರಾಂತಿ ಚಿಂತೆಗಳಿಂದ ಕೂಡಿದ್ದ ರಾಮನು ಅಗಸ್ತ್ಯನಿಂದ ಆದಿತ್ಯಹೃದಯವನ್ನು ಉಪದೇಶಮಾಡಿಸಿಕೊಂಡು ಸಮರೋನ್ಮುಖನಾದನು ಎಂದು ತೋರಿಸುವುದಕ್ಕಾಗಿ ಸೌರಮತದ ಮಹನೀಯರು ಯಾರೋ ಆ ಮತ ಪ್ರಚಾರಕ್ಕೆ ಬಂದ ಕಾಲದಲ್ಲಿ ಅದಕ್ಕೆ ಪ್ರಶಸ್ತಿಯನ್ನು ಸಂಪಾದಿಸುವ ಉದ್ದೇಶದಿಂದ ಈ ಸರ್ಗವನ್ನು ಇಲ್ಲಿ ಸೇರಿಸಿರಬೇಕು. ರಾಮಾಯಣವನ್ನು ಕುರಿತ ಪೂರ್ವದ ವ್ಯಾಖ್ಯಾನವೊಂದರಲ್ಲಿ ಯುದ್ಧಕಾಂಡವನ್ನು ಕುರಿತು ಹೇಳಿರುವ ಮಾತಿನಿಂದ ಈ ಸರ್ಗ ಆಗ ಇರಲಿಲ್ಲವೆಂದು ನಾವು ಊಹಿಸಬಹುದಾಗಿದೆ. ಹೀಗೆ ರಾಮಾಯಣದಲ್ಲಿ ಬರಬರುತ್ತ ಅಲ್ಲೆರಡು ಮಾತು ಇಲ್ಲೊಂದು ಸರ್ಗ ಇನ್ನೊಂದು ಕಡೆ ಒಂದು ಕಥಾಸಂದರ್ಭವನ್ನು ಇತರರು ಸೇರಿಸಿ ವಾಲ್ಮೀಕಿ ಬರೆದ ಕಾವ್ಯವನ್ನು ಹಿಗ್ಗಿಸಿದಾರೆ. ಆದರೆ ಮೊತ್ತದಲ್ಲಿ ಇಂಥ ಪ್ರಕ್ಷೇಪಣ ಹೊರಕ್ಕೆ ಕಾಣುತ್ತದೆ, ಒಳಗೆ ಬೆರೆತಿಲ್ಲ; ವಾಲ್ಮೀಕಿಯ ಕವಿತೆಯ ಯೋಗ್ಯತೆಯನ್ನು ಕಡಿಮೆಮಾಡಿಲ್ಲ. ಅಲ್ಲದೆ ಋಷ್ಯಶೃಂಗನ ಆಖ್ಯಾನ, ಭರದ್ವಾಜಾಶ್ರಮದಲ್ಲಿ ನಡೆದ ಸಂಗತಿ, ಆದಿತ್ಯಹೃದಯದ ಸಂದರ್ಭ, ರಾಮನು ವಿಷ್ಣುವೆಂದು ಸೂಚಿಸುವ ವಾಕ್ಯಗಳು, ಶಿವವಿಷ್ಣುಗಳ ಪರಸ್ಪರ ಆಧಿಕ್ಯವನ್ನು ಸಿದ್ಧಾಂತಮಾಡುವ ಶ್ಲೋಕಗಳು, ವಾಲ್ಮೀಕಿಯ ಕೃತಿಯೋ ಅಲ್ಲವೇ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿರಬಹುದಾದರೂ ಕಾವ್ಯದ ಜೀವಭೂತವಾದ ಭಾಗ ವಾಲ್ಮೀಕಿಯದೇ ಎಂದು ಹೇಳುವುದಕ್ಕೆ ಎಲ್ಲರೂ ಒಪ್ಪುತ್ತಾರೆ ಮತ್ತು ಯಾವ ಅಡ್ಡಿಯೂ ಇಲ್ಲ. ರಾಮಾಯಣದ ಮಹಿಮೆಯಿರುವುದು ಈ ಭಾಗದಲ್ಲಿ; ವಾಲ್ಮೀಕಿಯ ಕವಿತೆಯ ಶಿಖರ

ವಿರುವುದೂ, ರಾಮಾಯಣವು ಪ್ರಪಂಚದ ಕಾವ್ಯಗಳಲ್ಲೆಲ್ಲ ಹಿರಿದಾಗಿ ಕಾಣುವುದೂ ಈ ಭಾಗದಲ್ಲಿ. ಸತ್ಯದ ದೃಷ್ಟಿಯಿಂದ ಈಗ ಪ್ರಾಚುರ್ಯ ದಲ್ಲಿರುವ ಕಾವ್ಯದ ಕೆಲವು ಭಾಗ ಅಲ್ಲಿ ಇಲ್ಲಿ ವಾಲ್ಮೀಕಿಯದಲ್ಲವೆಂದು ಜ್ಞಾಪಕದಲ್ಲಿಟ್ಟುಕೊಳ್ಳುವುದು ಆವಶ್ಯಕ. ಇದಾದಮೇಲೆ ನಾವು ನಮ್ಮ ಗಮನವನ್ನು ಸಂಪೂರ್ಣವಾಗಿ ವಾಲ್ಮೀಕಿಯ ಕವಿತೆಗೆ ಕೊಡಬಹುದು.

೪

## ಆರು ಕಾಂಡಗಳ ವಿಷಯ

ವಾಲ್ಮೀಕಿ ತನ್ನ ಕಾವ್ಯವನ್ನು "ಸರ್ವಾಪೂರ್ವಮಿಯಂ ಯೇಷಾಂ ಆಸೀತ್ ಕೃತ್ಸ್ನಾ ವಸುಂಧರಾ" ಎಂಬ ಶ್ಲೋಕದಿಂದ ಆರಂಭಿಸಿದನೆಂದು ಸೂಚಿಸಿದ್ದಾಗಿದೆ. ಅವನು ಬರೆಯ ಹೊರಟದ್ದು ರಾಮನ ಚರಿತ್ರೆ. ರಾಮನ ಜನ್ಮವೃತ್ತಾಂತವನ್ನೂ ಬಾಲ್ಯದ ವಿಷಯವನ್ನೂ ಹೇಳುವುದಕ್ಕಾಗಿ ಬಾಲಕಾಂಡವನ್ನು ಬರೆದನು. ರಾಮನು ತರುಣನಾಗಿ ಸೀತೆಯ ಪಾಣಿ ಗ್ರಹಣಮಾಡಿ ಅಯೋಧ್ಯೆಗೆ ಬಂದು ಸುಖವಾಗಿದ್ದನೆಂಬಲ್ಲಿಗೆ ಈ ಕಾಂಡ ಮುಗಿಯುತ್ತದೆ. ಇದು ಕಾವ್ಯಸೌಧದ ತಳಹದಿಯ ಕಾಂಡ. ಅಯೋಧ್ಯಾ ಕಾಂಡದಲ್ಲಿ ರಾಮನ ಪಟ್ಟಾಭಿಷೇಕಕ್ಕಾಗಿ ಆದ ಏರ್ಪಾಡು, ಕೈಕಯಿದೇವಿ ಅವನ ಪ್ರವಾಸವನ್ನೂ ಭರತನ ರಾಜ್ಯಾಭಿಷೇಚನವನ್ನೂ ಬೇಡಿದ ವಿಷಯ, ಇದರಿಂದ ರಾಜಮಂದಿರದಲ್ಲಿ ಉಂಟಾದ ಅಲ್ಲೋಲ ಕಲ್ಲೋಲ, ರಾಮನು ಅರಣ್ಯಕ್ಕೆ ಹೋಗುವುದು, ದಶರಥನ ಮರಣ, ಭರತನು ರಾಮನನ್ನು ಹಿಂಬಾಲಿಸಿ ಅರಣ್ಯಕ್ಕೆ ಹೋಗಿ ಅವನು ರಾಜ್ಯವನ್ನಾಳಬೇಕೆಂದು ಬೇಡು ವುದು, ಅವನು ಇದು ಸರಿಯಲ್ಲವೆಂದು ತಿಳುಹಿಸಿ ಭರತನನ್ನು ಹಿಂದಕ್ಕೆ ಕಳುಹಿಸುವುದು, ಇಷ್ಟು ವಿವರ ಉಕ್ತವಾಗಿದೆ. ಅರಣ್ಯಕಾಂಡದಲ್ಲಿ ಸೀತಾರಾಮಲಕ್ಷ್ಮಣರು ಅರಣ್ಯದಲ್ಲಿ ವಾಸಮಾಡಿದ ರೀತಿ, ಶೂರ್ಪನಖಾ ವೃತ್ತಾಂತ, ಸೀತಾಪಹರಣದ ಕಥೆ, ಸತಿಯನ್ನರಸುತ್ತ ರಾಮಚಂದ್ರನು ಪಂಪಾ ಪ್ರಾಂತಕ್ಕೆ ಬಂದ ವಿಷಯ ಉಕ್ತವಾಗಿವೆ. ಕಿಷ್ಕಿಂಧಾಕಾಂಡದಲ್ಲಿ ಸುಗ್ರೀವ ಸಖ್ಯ, ವಾಲೀ ವಧ ವೃತ್ತಾಂತ, ವಾನರದೂತಪ್ರೇಷಣ, ಇವು ಉಕ್ತವಾಗಿವೆ. ಸುಂದರಕಾಂಡದಲ್ಲಿ ಹನುಮಂತನು ಸೀತಾದೇವಿಯನ್ನು

ಕಂಡು ಮರಳಿ ಬಂದ ವೃತ್ತಾಂತ ಅಡಕವಾಗಿದೆ. ಯುದ್ಧಕಾಂಡದಲ್ಲಿ ಸೇತುಬಂಧನ, ಲಂಕಾಗಮನ, ರಾವಣ ನಿಧನ, ಸೀತಾದೇವಿಯ ಬಂಧ ವಿಮೋಚನ, ಶ್ರೀ ರಾಮನ ಅಯೋಧ್ಯಾಗಮನ ಮತ್ತು ರಾಜ್ಯಾಭಿಷೇಚನ ಉಕ್ತವಾಗಿವೆ. ಬಾಲಕಾಂಡ ಒಟ್ಟು ಕಾವ್ಯದಲ್ಲಿ ಸುಮಾರು ಒಂಭತ್ತರಲ್ಲಿ ಒಂದು ಭಾಗ, ಅಯೋಧ್ಯಾಕಾಂಡ ಒಂಭತ್ತರಲ್ಲಿ ಎರಡು ಭಾಗ, ಅರಣ್ಯ ಕಾಂಡ ಒಂಭತ್ತರಲ್ಲಿ ಒಂದು ಭಾಗ, ಕಿಷ್ಕಿಂಧಾಕಾಂಡ ಒಂದು ಭಾಗ, ಸುಂದರಕಾಂಡ ಒಂದು ಭಾಗ, ಯುದ್ಧಕಾಂಡ ಸುಮಾರು ಮೂರು ಭಾಗ ಆಗುತ್ತವೆ. ವಿಸ್ತಾರದ ದೃಷ್ಟಿಯಿಂದ ಯುದ್ಧಕಾಂಡ ಎಲ್ಲಕ್ಕಿಂತ ದೊಡ್ಡದು. ಅಯೋಧ್ಯಾಕಾಂಡ ಅದಕ್ಕೆ ಸ್ವಲ್ಪ ಕಿರಿದು. ಆದರೆ ವಿಷಯದ ದೃಷ್ಟಿಯಿಂದ ಯುದ್ಧಕಾಂಡ ಅಯೋಧ್ಯಾಕಾಂಡಕ್ಕೆ ಕಿರಿದಾಗುತ್ತದೆ. ಬಹು ಜನ ಬಂದು ಬಹಳವಾಗಿ ಮಾಡುವ ಯುದ್ಧದ ವರ್ಣನೆ ಅನೇಕ ಸರ್ಗಗಳನ್ನು ಆಕ್ರಮಿಸಿರುವುದು ಯುದ್ಧಕಾಂಡದ ವಿಸ್ತಾರಕ್ಕೆ ಕಾರಣ. ಅಯೋಧ್ಯಾಕಾಂಡವಾದರೆ ಎಲ್ಲ ಸರ್ಗದಲ್ಲಿಯೂ ಭಾವುಕವಾಗಿದೆ; ಸಂಗತಿಗಳಿಂದ ತುಂಬಿದೆ. ವಾಲ್ಮೀಕಿ ಎಷ್ಟು ಹಿರಿಯ ಕವಿ ಎಂದು ತಿಳಿಯ ಬೇಕಾದರೆ ಈ ಒಂದು ಕಾಂಡ ಸಾಕು. ಇದು ರಾಮಾಯಣವೆಂಬ ಕಾವ್ಯ ಸೌಧದ ಮಧ್ಯಭಾಗ ಎನ್ನಬೇಕು. ಪ್ರಪಂಚದ ಸಾಹಿತ್ಯದಲ್ಲಿ ರಾಮಾಯಣದ ಜೊತೆಯವೆನ್ನುವ ಕಾವ್ಯಗಳಲ್ಲಿ ಕಥೆಯನ್ನು ಮೂಲದಿಂದ ಆರಂಭಿಸಿಲ್ಲ. ಹೋಮರ್ ಕವಿಯ ಇಲಿಯಡ್ ಕಾವ್ಯದಲ್ಲಿ ಟ್ರಾಯ್ ನಗರದ ರಾಜಕುಮಾರ ಪ್ಯಾರಿಸನು ಗ್ರೀಸಿನ ಮೆನಿಲೇಯಸ್ ರಾಜನ ಪತ್ನಿ ಹೆಲೆನ್ ರಮಣಿಯನ್ನು ಕದ್ದುಕೊಂಡು ಹೋದ ಸಂದರ್ಭ ಉಕ್ತವಾಗುವುದಿಲ್ಲ. ಗ್ರೀಸ್ ದೇಶದ ನಾಯಕರು ಅವಳನ್ನು ಬಿಡಿಸಿಕೊಳ್ಳುವುದಕ್ಕಾಗಿ ಟ್ರಾಯ್ ನಗರದ ಬಳಿಗೆ ಬಂದು ಪಾಳೆಯ ಹಾಕಿರುವ ಸಂದರ್ಭದಿಂದ ಕಾವ್ಯ ಮೊದಲಾಗುತ್ತದೆ. ವಾಲ್ಮೀಕಿ ತನ್ನ ಕಾವ್ಯವನ್ನು ಈ ರೀತಿ ಆರಂಭಿಸಿದ್ದರೆ ಅಯೋಧ್ಯಾಕಾಂಡದಿಂದ ಕಥೆಯನ್ನು ಎತ್ತಬಹುದಾಗಿತ್ತು. ಬಾಲಕಾಂಡವನ್ನು ಬಿಟ್ಟಿದ್ದರೆ ಆಗ್ಯೆ ದಶರಥನೆಂಬ ರಾಜನಿದ್ದನೆಂದೂ ಅವನಿಗೆ ರಾಮನು ಮೊದಲಾಗಿ ನಾಲ್ವರು ಮಕ್ಕಳಿದ್ದರೆಂದೂ ಮೊದಲಾಗಿ ಕಥೆಯ ಸಂದರ್ಭವನ್ನು ಓದುವವರು ಗ್ರಹಿಸಬೇಕಾಗುತ್ತಿತ್ತು. ಇದು

ಒಂದು ರೀತಿ. ಆದರೆ ವಾಲ್ಮೀಕಿಗೆ ಎಲ್ಲ ವಿಷಯವನ್ನೂ ಸಾಂಕ್ತವಾಗಿ ಹೇಳುವುದರಲ್ಲಿ ಮನಸ್ಸು. ಆದುದರಿಂದ ಅವನು ಕಥೆಯನ್ನು ಬಾಲಕಾಂಡ ದಿಂದ ಆರಂಭಿಸಿದಾನೆ. ಈ ಕಾಂಡದಲ್ಲಿಯಾದರೂ ಭಾವದ ಕಣ್ಣು ಇದೆ; ಅದರಿಂದ ಕಾವ್ಯಕ್ಕೆ ರಸದ ಊಟೆ ಉಕ್ಕುತ್ತದೆ. ಆದರೆ ರಸ ಉರುಬಿ ಉಕ್ಕಿ ಕಾವ್ಯಸರಸ್ಸನ್ನು ತುಂಬುವುದು ಇನ್ನೆಲ್ಲ ಕಾಂಡಕ್ಕಿಂತ ಅಯೋಧ್ಯಾ ಕಾಂಡದಲ್ಲಿ ಹೆಚ್ಚು.

೫

## ಅಯೋಧ್ಯಾಕಾಂಡದ ಕಥೆ

### ದಶರಥನ ಸಂಸಾರ

ದಶರಥನು ಕೈಕಯಿಯನ್ನು ಮದುವೆಯಾದಾಗ ಬಹು ದೊಡ್ಡ ತಪ್ಪನ್ನು ಮಾಡಿದನು. ಆಕೆ ಚೆಲುವೆ; ಆದರೆ ಬಹು ದುರಭಿಮಾನಿನಿ. ಅವಳ ಪೀಳಿಗೆಯೂ ಅಷ್ಟೇನೂ ಒಳ್ಳೆಯದಲ್ಲ. ಅವಳ ತಾಯಿ ತನ್ನ ಗಂಡನಿಂದ ಒಂದು ರಹಸ್ಯವನ್ನು ತಿಳಿಯಬೇಕೆಂದು ಅಪೇಕ್ಷಿಸಿದ ಸಂದರ್ಭದಲ್ಲಿ "ನೀನು ಇದ್ದರೂ ಸರಿಯೆ ಸತ್ತರೂ ಸರಿಯೆ, ಅದನ್ನು ನನಗೆ ಹೇಳಬೇಕು" ಎಂದು ಒತ್ತಾಯಮಾಡಿದಳಂತೆ. ರಾಜನಿಗೆ ಕೈಕಯಿಯ ವಿಷಯದಲ್ಲಿ ಅತಿ ಮೋಹ. ಹಿರಿಯ ರಾಣಿ ಕೌಸಲ್ಯೆಗೆ ಅವನು ಬಹು ಗೌರವವನ್ನು ತೋರಿಸುತ್ತಿದ್ದನೆಂದು ಕಾಣುತ್ತದೆ. ಆದರೆ ಅವಳು ಪ್ರೀತಿಗೆ ವಿಷಯಳಾಗಿದ್ದದು ಬಹು ಹಿಂದೆ ಇದ್ದಿರಬೇಕು. ಕೈಕಯಿಯನ್ನು ಮದುವೆಯಾಗುವ ಮೊದಲು ರಾಜನು ಸುಮಿತ್ರೆಯನ್ನು ರಾಣಿಯನ್ನಾಗಿ ಮಾಡಿಕೊಂಡಿದ್ದನು. ದಶರಥನಿಗೆ ಈ ಮೂವರು ರಾಣಿಯರಲ್ಲದೆ ಮುನ್ನೂರೈವತ್ತು ಜನ ಹೆಂಡಿರಿದ್ದರೆಂದು ತಿಳಿಯುತ್ತದೆ. ದೊರೆತನಕ್ಕೆ ಅನೇಕ ಮಹಿಷಿಯರು ಆವಶ್ಯಕವೆಂಬ ಕಾರಣದಿಂದಲೇ ಇವನು ಹೀಗೆ ರಾಣಿವಾಸವನ್ನು ಬೆಳೆಸಿಕೊಂಡಿರಬಹುದು. ರಾಣಿಯರಲ್ಲದ ಮಹಿಷಿಯರ ಬಾಹುಳ್ಯದಿಂದ ಯಾವ ತೊಂದರೆಯಾಯಿತೋ ಇಲ್ಲವೋ ನಮಗೆ ರಾಮಾಯಣದ ಕಾವ್ಯದಿಂದ ತಿಳಿಯುವುದಿಲ್ಲ. ಮೂವರು ರಾಣಿಯರಲ್ಲಿ ಸುಮಿತ್ರೆಯ ದೆಸೆಯಿಂದಲೂ ಏನೂ ತೊಂದರೆಯಾಗಲಿಲ್ಲ. ಆಕೆ ಸರಳ ಹೃದಯಳು; ಅವಳ ಚೇತನ ಪ್ರೇಮಮಯವಾದದು.

ಒಂದು ಕಡೆ ಪಟ್ಟದ ರಾಣಿ ಒಂದು ಕಡೆ ಪ್ರೇಮದ ರಾಣಿ ಇರುವಲ್ಲಿ ತನಗೆ ಗೌರವ ಪ್ರೇಮ ಇಲ್ಲದೆ ಹೋಯಿತೆಂದು ಅಸಮಾಧಾನ ಪಡುವುದಕ್ಕೆ ಅವಳು ಕಾರಣವನ್ನು ಕಾಣಲಿಲ್ಲ. ಆದರೆ ಕೌಸಲ್ಯೆ ಕೈಕಯಿ ಇವರ ಮಧ್ಯೆ ಮನಸ್ತಾಪ ಬೆಳೆಯಿತೆಂದು ತೋರುತ್ತದೆ. ತಾನು ಹಿರಿಯ ರಾಣಿ, ಈ ಕಿರಿಯವಳಿಂದ ತನ್ನ ಪದವಿಗೆ ಕುಂದಕ ಬಂದಿತು, ಎಂದು ಕೌಸಲ್ಯೆಗೆ ವ್ಯಥೆ. ತಾನು ಅರಸನ ಪ್ರೇಮದ ರಾಣಿ, ಮೊದಲಲ್ಲಿ ಬಂದ ಮಾತ್ರಕ್ಕೆ ಇವಳದೇನು ಹೆಚ್ಚು, ಎಂದು ಕೈಕಯಿಗೆ ಹೆಮ್ಮೆ. ಇಂಥ ಸಂದರ್ಭದಲ್ಲಿ ಒಬ್ಬೊಬ್ಬ ರಾಣಿಯ ಸೇವಕರೂ ಒಂದೊಂದು ಪಕ್ಷದಂತೆ ನಡೆದುಕೊಳ್ಳುವುದು ಸಹಜ. ಒಂದು ಪಕ್ಷದ ಸೇವಕರು ಇನ್ನೊಬ್ಬ ರಾಣಿಯನ್ನು ಅಶ್ರದ್ಧೆಯಿಂದ ಕಾಣುವುದು, ಸಮಯ ಸಿಕ್ಕಿದಾಗ ಹೀನಾಯವಾಗಿ ನುಡಿಯುವುದು, ಕೊಂಕುಮಾತಿನಿಂದ ಅಪಹಾಸ್ಯ ಮಾಡುವುದು, ಇದೆಲ್ಲ ದಶರಥನ ಅರಮನೆಯಲ್ಲಿ ತಕ್ಕಷ್ಟು ಆಗಿರಬೇಕು. ವಾಲ್ಮೀಕಿ ಇದನ್ನು ಕಾವ್ಯದಲ್ಲಿ ವಿಸ್ತಾರವಾಗಿ ಹೇಳಿಲ್ಲ. ಮುಖ್ಯ ಅವನ ಕಥೆಗೆ ಇದು ಆವಶ್ಯಕ ಭಾಗವಲ್ಲ. ಸಾಲದ್ದಕ್ಕೆ ಆತನು ಕಾವ್ಯವನ್ನು ರಚಿಸಿದಾಗ ಕಥೆಯ ರಾಣಿಯರು ಇನ್ನೂ ಜೀವಂತರಾಗಿದ್ದರೆಂದು ಕಾಣುತ್ತದೆ. ಹಾಗಲ್ಲದಿದ್ದರೂ ಅವರ ಮಕ್ಕಳು ಜೀವಂತರಾಗಿದ್ದರು. ರಾಣಿಯರ ಪರಸ್ಪರ ಈ ವೈಮನಸ್ಯವನ್ನು ಹರಹಿ ವರ್ಣಿಸುವುದು ಅವರ ಮನಸ್ಸಿಗೆ ನೋವನ್ನು ಉಂಟುಮಾಡುತ್ತಿತ್ತು. ಸಾಲದ್ದಕ್ಕೆ ಇಂಥ ಮಾತು ರಾಮಚಂದ್ರನಿಗೆ ರುಚಿಸುವುದಿಲ್ಲವೆಂದು ಎಲ್ಲರಿಗೂ ಗೊತ್ತು. ಅವನು ಅರಣ್ಯದಲ್ಲಿರುವಾಗಲೇ ಯಾರಾದರೂ ಕೈಕಯಿದೇವಿಯನ್ನು ದೂಷಿಸಿದರೆ ತಡೆಯುತ್ತಿರಲಿಲ್ಲ ; ಅವಳನ್ನು ನೀವು ದೂಷಿಸಬೇಡಿ ಎಂದು ಕೋಪ ಮಾಡುವನು, ಬೇಡಿಕೊಳ್ಳುವನು. ಭರತನಿಗೆ ಲಕ್ಷ್ಮಣನಿಗೆ ಇದರ ಅನುಭವವಾಗಿತ್ತು. ಹೀಗಿರುವಲ್ಲಿ, ವನವಾಸವೆಲ್ಲ ಮುಗಿದು ಕಷ್ಟದ ದಿನವೆಲ್ಲ ಕಳೆದು ರಾಷ್ಟ್ರದಲ್ಲಿ ತಾವೆಲ್ಲ ಸುಖವಾಗಿರುವಾಗ ಮಾಯುತ್ತಿರುವ ಹುಣ್ಣನ್ನು ಮತ್ತೆ ಕೆದಕುವುದೆಂದರೆ ಸ್ನೇಹಪರನಾದ ಆತನಿಗೆ ಒಪ್ಪುತ್ತಿರಲಿಲ್ಲ. ಈ ಎಲ್ಲ ಕಾರಣದಿಂದ ವಾಲ್ಮೀಕಿ ದಶರಥನ ಪೆಂಡವಾಸದ ವಿಷಾದ ವೈಮನಸ್ಯಗಳನ್ನು ಲಂಬವಾಗಿ ವರ್ಣಿಸಲಿಲ್ಲ. ಆದರೆ ಪರಿಸ್ಥಿತಿ

ಯನ್ನು ಸ್ವಲ್ಪಮಟ್ಟಿಗಾದರೂ ಸೂಚಿಸುವುದು ಕಥೆಗೆ ಅವಶ್ಯಕವಾಗಿತ್ತು. ಅದಷ್ಟನ್ನು ಅವನು ಅಯೋಧ್ಯಾಕಾಂಡದಲ್ಲಿ ಸೂಚಿಸಿದ್ದಾನೆ. ಹೀಗೆ ಮನಸ್ತಾಪವಿರುವ ಅರಮನೆಯಲ್ಲಿ ದಶರಥನ ಪಾಡಾದರೂ ಬಹಳ ಸುಖವಾಗಿತ್ತೆಂದು ಹೇಳುವಂತಿಲ್ಲ. ಒಬ್ಬ ಹೆಂಡತಿಯಲ್ಲಿ ಗೌರವ; ಮತ್ತೊಬ್ಬಳಲ್ಲಿ ಪ್ರೇಮ, ಇನ್ನೊಬ್ಬಳಲ್ಲಿ ಯಾವುದೂ ಇಲ್ಲ, ಅಥವಾ ಯಾವುದೂ ಹೆಚ್ಚಾಗಿಲ್ಲ. ಆದರೆ ರಾಣಿವಾಸದ ಮನಸ್ತಾಪ ರಾಣಿವಾಸದಲ್ಲೇ ಇತ್ತು, ಅದರ ಕಾವು ಹೊರಗೆ ಮುಟ್ಟಲಿಲ್ಲ. ಈ ಮೂವರು ರಾಣಿಯರಿಗೆ ನಾಲ್ವರು ಮಕ್ಕಳು. ರಾಜನಿಗೆ ನಾಲ್ವರಲ್ಲಿಯೂ ಬಹಳ ಪ್ರೇಮ; ಅವರಲ್ಲಿ ಹಿರಿಯವನಾದ ರಾಮಚಂದ್ರನೆಂದರೆ ಪಂಚಪ್ರಾಣ. ಮಕ್ಕಳು ಬೆಳೆದರು. ಅವರಿಗೆ ಮದುವೆಗಳೂ ಆದುವು. ಅವರು ಸುಖವಾಗಿರುವುದನ್ನು ನೋಡುತ್ತ ರಾಜನು ಕೆಲವು ವರ್ಷ ಸುಖವಾಗಿದ್ದನು.

### ರಾಮಾಭಿಷೇಚನ ಸನ್ನಾಹ

ತನ್ನ ನಂತರ ಯಾರಿಗೆ ರಾಜ್ಯವನ್ನು ಕೊಡುವುದು ಎಂಬ ವಿಷಯದಲ್ಲಿ ದಶರಥನಿಗೆ ಸಂದೇಹವಿರಲಿಲ್ಲ. ಇಕ್ಷ್ವಾಕುವಂಶದ ಪದ್ಧತಿಯ ಪ್ರಕಾರ ಅದು ಹಿರಿಯ ಮಗನಿಗೆ ಹೋಗತಕ್ಕದು. ಆದರೆ ಅದು ಒಂದು ರೀತಿಯಾಗಿ ನಿರ್ಧರವಾಗುವವರೆಗೂ ಜನರು ಆ ವಿಷಯ ಯೋಚನೆ ಮಾಡುವುದು ಸಹಜವಾಗಿತ್ತು. ರಾಣಿಯರು ಈ ವಿಷಯವನ್ನು ಬಾಯಿಬಿಟ್ಟು ಚರ್ಚೆಮಾಡದಿದ್ದರೂ ಮನಸ್ಸಿನಲ್ಲಿ ಆಗಾಗ ತಿರುವಿ ಹಾಕುತ್ತಿದ್ದರೆಂದು ತೋರುತ್ತದೆ. ಹೀಗಿರುತ್ತಿರಲಾಗಿ ಒಂದು ಸಲ ಭರತನ ಸೋದರಮಾವನು ಅವನನ್ನು ತನ್ನೊಂದಿಗೆ ಸ್ವಲ್ಪ ದಿನ ಇರಲೆಂದು ತನ್ನ ದೇಶಕ್ಕೆ ಕರೆದುಕೊಂಡುಹೋದನು. ಭರತನಿಗೂ ಶತ್ರುಘ್ನನಿಗೂ ಬಹು ಋಣಾನುಬಂಧ; ಶತ್ರುಘ್ನನೂ ಅವನ ಜೊತೆಯಲ್ಲಿ ಹೋದನು. ರಾಮನೂ ಲಕ್ಷ್ಮಣನೂ ಊರಿನಲ್ಲಿ ತಂದೆಯೊಂದಿಗೆ ಇದ್ದರು. ಆಗ ಒಂದು ದಿನ ದಶರಥನು ರಾಮನಿಗೆ ಯೌವರಾಜ್ಯಾಭಿಷೇಚನ ಮಾಡುವುದೆಂದು ನಿರ್ಧರಿಸಿಕೊಂಡನು. ಅವನು ಇದನ್ನು ರಾಣಿಯರಿಗೆ ತಿಳಿಸಲಿಲ್ಲ; ತಿಳಿಸಿದರೆ ಅರಮನೆಯಲ್ಲಿ ಕಲಹ ಹುಟ್ಟುವುದೆಂದು ಹೆದರಿದನೋ? ದೇಶದ ಮುಖಂಡರನ್ನು ಕರೆಯಿಸಿ ತನ್ನ ಉದ್ದೇಶಕ್ಕೆ ಅವರ ಒಪ್ಪಿಗೆಯನು

ಪಡೆದನು; ವಸಿಷ್ಠನನ್ನು ಕೇಳಿ ಅಭಿಷೇಚನಕ್ಕೆ ಒಂದು ದಿನವನ್ನು ಗೊತ್ತುಮಾಡಿದನು; ಇದೆಲ್ಲ ಆದಮೇಲೆ ರಾಮನಿಗೆ ಈ ವಿಷಯವನ್ನು ತಿಳಿಸಿದನು. ರಾಮನು ಈ ಸಂತೋಷದ ಸುದ್ದಿಯನ್ನು ತಾಯಿಗೆ ಅರಿಕೆ ಮಾಡಿದನು. ಕೌಸಲ್ಯೆಗೆ ಆನಂದವಾಯಿತು. ಅವಳು ಮಗನನ್ನು ಕುರಿತು "ರಾಮಾ, ಬಹುಕಾಲ ಬಾಳು. ನಿನ್ನ ಪರಿಪಂಥಿಗಳು ಹತರಾದರು. ಐಶ್ವರ್ಯಯುಕ್ತನಾಗಿ ನೀನು ನನ್ನ ಮತ್ತು ಸುಮಿತ್ರೆಯ ಬಂಧುಗಳನ್ನು ಸಂತೋಷಗೊಳಿಸು" ಎಂದು ಹೇಳಿದಳು. ಇಲ್ಲಿ ಹಗೆಗಳು ಯಾರು ಎಂದು ಉಕ್ತವಾಗಿಲ್ಲ; ಕೈಕಯಿಯ ಬಂಧುಗಳನ್ನು ಸಂತೋಷಗೊಳಿಸುವ ಮಾತಿಲ್ಲ. ರಾಮನ ಹಗೆಯಾಗಿ ಕೌಸಲ್ಯೆಗೆ ಕಾಣುತ್ತಿದ್ದದು ಪ್ರಾಯಶಃ ಕೈಕಯಿಯ ಬಾಂಧವ್ಯವೇ ಎಂದು ನಾವು ಊಹಿಸಬಹುದು. ಇದಾದ ಮೇಲೆ ಕೌಸಲ್ಯೆಯ ಅರಮನೆಯಲ್ಲಿ ಬಹು ಸಂಭ್ರಮ. ರಾಣಿ ಧನವನ್ನು ದಾನ ಮಾಡುವುದಕ್ಕೆ ತೊಡಗಿದಳು. ಈ ಸಂಭ್ರಮವನ್ನೂ ದಾನೋದ್ಯೋಗವನ್ನೂ ಕೈಕಯಿಯ ದಾದಿ ಮಂಥರೆ ನೋಡಿದಳು; ಇದಕ್ಕೆ ಕಾರಣವನ್ನು ಕಾಣದೆ ಕೌಸಲ್ಯೆಯ ದಾಸಿಯನ್ನು ಕುರಿತು "ಇದೇನು ರಾಮನ ತಾಯಿ ಅರ್ಥಪರಳಾದ ಕೌಸಲ್ಯಾದೇವಿ ಬಹು ಸಂತುಷ್ಟಳಾಗಿ ಹೀಗೆ ಹಣವನ್ನು ಕೊಡುತ್ತಿದಾಳೆ" ಎಂದು ಕೇಳಿದಳು. ಕೌಸಲ್ಯೆಯನ್ನು ರಾಮನ ತಾಯಿ ಎಂದು ಹೇಳುವುದರಲ್ಲಿಯೂ ಅವಳನ್ನು ಅರ್ಥಪರೆಯೆಂದು ವರ್ಣಿಸುವುದರಲ್ಲಿಯೂ ಕೌಸಲ್ಯೆಯ ವಿಷಯದಲ್ಲಿ ಕೈಕಯಿಯ ಪಕ್ಷದವರ ಅವಿಶ್ವಾಸ ವ್ಯಕ್ತವಾಗುತ್ತದೆ. ಕೌಸಲ್ಯೆಯ ದಾದಿ ಕೈಕಯಿಯ ಈ ದಾದಿಗೆ ತಮ್ಮ ಸಂಭ್ರಮದ ಕಾರಣವನ್ನು ತಿಳಿಸಿದಳು. ಮಂಥರೆ ತನ್ನ ಯಜಮಾನಿತಿಯ ಬಳಿಗೆ ಓಡಿಬಂದು "ಏಳು, ಮೂಢೆ, ನಿನಗೆ ಕೇಡುಗಾಲ ಬಂದಿದೆ. ನಿನ್ನ ಸೌಭಾಗ್ಯ ತಾರಿಹೋಗುತ್ತಿದೆ" ಎಂದು ಹೇಳಿದಳು. ಕೈಕಯಿ ಏನಾಗಿದೆ ಎಂದು ವಿಚಾರಿಸಲಾಗಿ ಮಂಥರೆ ಅವಳಿಗೆ ರಾಮಚಂದ್ರನ ಯೌವರಾಜ್ಯಾಭಿಷೇಚನದ ಉದ್ಯಮದ ವೃತ್ತಾಂತವನ್ನು ಹೇಳಿದಳು. ಈ ಮಾತಿನಿಂದ ಕೈಕಯಿ ಮಂಥರೆ ನಿರೀಕ್ಷಿಸಿದಂತೆ ದುಃಖಿತಳಾಗಲಿಲ್ಲ. ಅದಕ್ಕೆ ಪ್ರತಿಯಾಗಿ ಅವಳು ಶರತ್ಕಾಲದ ರಾತ್ರಿಯ ಚಂದ್ರಲೇಖೆಯಂತೆ ಹರ್ಷಸಂಪೂರ್ಣಳಾಗಿ

ಹಾಸಿಗೆಯಿಂದೆದ್ದಳು; ಶುಭವಾರ್ತೆಯನ್ನು ತಂದುದಕ್ಕಾಗಿ ಮಂಥರೆಗೆ ತನ್ನ ಮೈಮೇಲಿದ್ದ ಒಂದು ಆಭರಣವನ್ನು ಉಚಿತವಾಗಿತ್ತಳು. "ಮಂಥರೆ, ನೀನು ನನಗೆ ಬಹು ಪ್ರಿಯವಾದ ವಾರ್ತೆಯನ್ನು ಹೇಳಿದೆ. ನನಗೆ ರಾಮನಲ್ಲಿ ಭರತನಲ್ಲಿ ಭೇದ ಇಲ್ಲ. ರಾಮನಿಗೆ ರಾಜ್ಯಾಭಿಷೇಚನ ವಾಗುವುದು ನನಗೆ ಬಹಳ ಸಂತೋಷ" ಎಂದಳು. ಒಡತಿ ತನಗೆ ಕೊಟ್ಟ ಉಚಿತವನ್ನು ಮಂಥರೆ ಕೆಳಗೆಸೆದಳು; ಎಸೆದು ಕೈಕಯಿಯನ್ನು ಒದರಿ "ಅಯ್ಯೋ ಹುಚ್ಚಿ, ಇದೇನು ಅಸ್ಥಾನದಲ್ಲಿ ನಿನ್ನ ಈ ಹರ್ಷ. ನೀನು ಶೋಕಸಾಗರಮಧ್ಯದಲ್ಲಿದೀಯೆ; ಅದನ್ನು ಕಾಣೆ. ಮಹದ್ದುಃಖ ಸಂಭವಿಸಿರುವಾಗ ಸಂತುಷ್ಟಳಾಗಿರುವ ನಿನ್ನನ್ನು ನೋಡಿ ನನಗೆ ನಗೆ ಬರುತ್ತಿದೆ. ನಿನ್ನ ಶತ್ರು ನಿನ್ನ ಸಪತ್ನಿ ಆದ ಕೌಸಲ್ಯೆಯ ಮಗನ ವೃದ್ಧಿಯನ್ನು ಕುರಿತು ನಲಿಯುವ ನಿನ್ನ ಬುದ್ಧಿ ಎಂಥದು! ಕೌಸಲ್ಯೆ ಸೌಭಾಗ್ಯಶಾಲಿನಿ: ಅವಳ ಮಗನು ಯುವರಾಜನಾಗುತ್ತಾನೆ. ನೀನು ಅವಳ ಬಳಿ ದಾಸಿಯಂತೆ ಕೃತಾಂಜಲಿಯಾಗಿ ನಿಲ್ಲುತ್ತೀಯೆ" ಎಂದು ಹೇಳಿದಳು. ಮಂಥರೆಯ ಈ ಮಾತಿಗೆ ಪ್ರತಿಯಾಗಿ ಕೈಕಯೀದೇವಿ ರಾಮನನ್ನು ಪ್ರಶಂಸೆಮಾಡಿದಳು. "ರಾಮನು ಧರ್ಮಜ್ಞನು, ಕೃತಜ್ಞನು, ಸತ್ಯವಾಕ್ಯನು, ಶುದ್ಧಚೇತನನು; ಅವನು ರಾಜನ ಜ್ಯೇಷ್ಠಸುತನು, ಯೌವರಾಜ್ಯಕ್ಕೆ ಅರ್ಹನು; ಅವನು ಭ್ರಾತೃಗಳನ್ನೂ ಭೃತ್ಯರನ್ನೂ ತಂದೆಯಂತೆ ಪಾಲಿಸುವನು; ಅವನ ಅಭಿಷೇಚನದ ವೃತ್ತಾಂತವನ್ನು ಕೇಳಿ ನೀನು ತಪಿಸುವಿಯೇಕೆ ಕುಬ್ಜೆ? ರಾಮನು ನನಗೆ ಭರತನು ಹೇಗೊ ಹಾಗೆ ಅಥವಾ ಅದಕ್ಕೂ ಹೆಚ್ಚಾಗಿ ಮಾನ್ಯನು. ಅವನು ಕೌಸಲ್ಯೆಗಿಂತ ಹೆಚ್ಚಾಗಿ ನನಗೆ ಶುಶ್ರೂಷೆಮಾಡುವನು" ಎಂದು ಹೇಳಿದಳು. ಮಂಥರೆ ಇದನ್ನು ಒಪ್ಪಲಿಲ್ಲ: "ನಿನಗೆ ತಿಳಿಯದು, ನಿನಗೆ ಬಂದಿರುವ ದುರವಸ್ಥೆಯನ್ನು ನೀನು ಕಾಣೆ. ರಾಮನು ರಾಜನಾದರೆ ಭರತನು ದೇಶಾಂತರವನ್ನೋ ಲೋಕಾಂತರವನ್ನೋ ಸೇರುವುದಾದೀತು. ನಿನ್ನಿಂದ ದರ್ಪಪೂರ್ವಕ ನಿರಾಕೃತಳಾದ ರಾಮಮಾತೆ ತನ್ನ ಹಗೆಯನ್ನು ತೀರಿಸಿಕೊಳ್ಳದೆ ಬಿಡು ವಳೆ? ರಾಮನು ಅರಸನೇ ಆದರೆ ನೀನು ಭರತನೊಂದಿಗೆ ಅಶುಭವನ್ನೂ ಪರಾಭವವನ್ನೂ ಪಡೆಯುವುದು ನಿಜ. ಮಗನಿಗೆ ದೊರೆತನವನ್ನೂ

ಹಗೆಗೆ ವಿವಾಸವನ್ನೂ ಈಗಲೇ ಉದ್ದೇಶಿಸು'' ಎಂದಳು. ಕೈಕಯಿಾ ದೇವಿಗೆ ರಾಮನು ತನ್ನ ವಿಷಯದಲ್ಲಿ ಹೇಗೆ ನಡೆದುಕೊಳ್ಳುವನೆಂಬ ವಿಷಯದಲ್ಲಿ ಸಂಶಯವಿರಲಿಲ್ಲ. ಆದರೆ ಸವತಿಯಾದ ಕೌಸಲ್ಯೆಯನ್ನು ಕುರಿತು ಅವಳಿಗೆ ಶಂಕೆಯುಂಟು. ಅದರಲ್ಲಿಯೂ ತಾನು ಪೂರ್ವದಲ್ಲಿ ಕೌಸಲ್ಯೆಯನ್ನು ದರ್ಪದಿಂದ ನಿರಾಕರಿಸಿದ ವಿಷಯವನ್ನು ಮಂಥರೆ ನೆನಪಿಗೆ ತಂದಮೇಲೆ ಈ ಶಂಕೆಯಿಲ್ಲದೆ ಇರುವುದು ಅಸಾಧ್ಯವಾಯಿತು. ಕೌಸಲ್ಯೆಯಿಂದ ಧಿಕ್ಕೃತಳಾಗಬಾರದು ಎಂಬ ಭಾವ ಅವಳ ಮನಸ್ಸಿನಲ್ಲಿ ಉದಯಿಸಿ ರಾಮನ ವಿಷಯದಲ್ಲಿ ಅವಳಿಗಿದ್ದ ಪ್ರೇಮವನ್ನು ಕಲಕಿತು. ರಾಮನು ಅಭಿಷಿಕ್ತನಾದರಲ್ಲವೆ ಕೌಸಲ್ಯೆಗೆ ಈ ಹಿರಿಮೆ? ಅವನು ಅಭಿಷಿಕ್ತನಾಗದಂತೆ ನಾನು ಮಾಡುತ್ತೇನೆ ಎಂದು ಅವಳು ನಿರ್ಧರಿಸಿ ಕೊಂಡಳು. ಇದನ್ನು ಹೇಗೆ ಮಾಡುವುದು ಎಂದು ಮಂಥರೆಯನ್ನು ಕೇಳಿದಳು. ಹಿಂದೆ ದೇವಾಸುರ ಯುದ್ಧದಲ್ಲಿ ಕೈಕಯಿ ದಶರಥನನ್ನು ರಕ್ಷಿಸಿದ ಒಂದು ಸಂದರ್ಭದಲ್ಲಿ ದಶರಥನು ಅವಳಿಗೆ ಎರಡು ವರವನ್ನು ಕೊಟ್ಟಿದ್ದನು. ಈ ವಿಷಯವನ್ನು ಮಂಥರೆ ಕೈಕಯಿಗೆ ಜ್ಞಾಪಕ ಕೊಟ್ಟಳು. ಕೈಕಯಿ ಇದಕ್ಕಾಗಿ ಮಂಥರೆಯನ್ನು ಬಹಳವಾಗಿ ಹೊಗಳಿ ರಾಜನನ್ನು ಈ ಎರಡು ವರಕ್ಕಾಗಿ ಬೇಡುವುದೆಂತಲೂ ಒಂದು ವರ ರಾಮನು ಅರಣ್ಯಕ್ಕೆ ಹೋಗತಕ್ಕದು ಇನ್ನೊಂದು ಭರತನಿಗೆ ಯೌವ ರಾಜ್ಯಾಭಿಷೇಚನ ಮಾಡತಕ್ಕದು ಎಂದು ಕೇಳಬೇಕೆಂತಲೂ ನಿಶ್ಚಯಿಸಿ ಕೊಂಡು ಕ್ರೋಧಾಗಾರವನ್ನು ಹೊಕ್ಕಳು. ತನ್ನ ಒಡವೆ ವಸ್ತುಗಳನ್ನು ಕಳಚಿ ಕೆಳಗೆಸೆದು ದುಃಖಸೂಚಕ ವೇಷದಲ್ಲಿ ನೆಲದ ಮೇಲೆ ಮಲಗಿದಳು.

### ಕೈಕಯಿ ವರ ಬೇಡಿದ ಕಥೆ

ದಶರಥನಿಗೆ ಇದು ಯಾವುದೂ ತಿಳಿಯದು. ಅವನು ಎಂದಿನಂತೆ ಕಿರಿಯ ರಾಣಿಯೊಂದಿಗೆ ಕಾಲ ಕಳೆಯಲು ಅವಳ ಅರಮನೆಗೆ ಬಂದನು. ಅವಳು ಕ್ರೋಧಾಗಾರದಲ್ಲಿದಾಳೆಂದು ತಿಳಿಯಿತು. ಏನಾಯಿತೋ ಏನೋ ಎಂದು ರಾಜನು ವ್ಯಾಕುಲಿತೇಂದ್ರಿಯನಾಗಿ ರಾಣಿ ನೆಲದಲ್ಲಿ ಬಿದ್ದಿದ್ದ ಸ್ಥಳಕ್ಕೆ ಬಂದನು. ಕೈಕಯಿ ಅವನಿಗೆ ಪ್ರಾಣಕ್ಕಿಂತ ಹೆಚ್ಚಾದ ಎಳೆಯ ಹೆಂಡತಿ. ಅವನು ಅವಳನ್ನು ''ಕೋಪಕ್ಕೆ ಕಾರಣವೇನು? ಯಾರು ಏನು

ಮಾಡಿದರು ? ತಪ್ಪು ಏನು ನಡೆಯಿತು ? ನಿನಗೇನು ಕಡಮೆಯಾಯಿತು ? ನಿನ್ನಿಷ್ಟವನ್ನು ಹೇಳು, ಅದರಂತೆ ನಡೆಯುತ್ತೇನೆ'' ಎಂದು ಕೇಳಿದನು. ಕೈಕಯಿದೇವಿ "ನನಗೆ ಏನೂ ಆಗಿಲ್ಲ. ನನಗೆ ಯಾರೂ ಅವಮಾನ ಮಾಡಲಿಲ್ಲ. ನನಗೆ ಒಂದು ಅಭಿಪ್ರಾಯವಿದೆ. ನೀನು ಅದನ್ನು ನಡೆಸಿ ಕೊಡಬೇಕು. ನೀನು ಅದನ್ನು ಮಾಡುವೆನೆಂದು ಪ್ರತಿಜ್ಞೆಮಾಡಿದರೆ ಆ ಅಭಿಪ್ರಾಯವೇನೆಂದು ನಿನಗೆ ತಿಳಿಸುತ್ತೇನೆ'' ಎಂದಳು. ದಶರಥನು ಅವಳನ್ನು ಕುರಿತು "ನನಗೆ ನಿನಗಿಂತ ಪ್ರಿಯಳಾದ ಹೆಂಗಸಿಲ್ಲ. ರಾಮನಿ ಗಿಂತ ಪ್ರಿಯನಾದ ಮನುಜನಿಲ್ಲ. ಇದನ್ನು ನೀನು ಬಲ್ಲೆ. ಅಜಯ್ಯ ನಾದ ಮುಖ್ಯನಾದ ಜೀವನಾರ್ಹನಾದ ಮಹಾತ್ಮ ರಾಮನಿಂದ ಆಣೆ ಮಾಡುತ್ತೇನೆ. ನಿನ್ನ ಇಷ್ಟವನ್ನು ಹೇಳು. ನಡೆಸುತ್ತೇನೆ. ಸಂದೇಹ ಬೇಡ'' ಎಂದನು. ದಶರಥನಿಗೆ ತಾನು ಮಾಡುತ್ತಿದ್ದ ಶಪಥದ ಸ್ವಭಾವ ಸ್ವಲ್ಪವೂ ತಿಳಿದಿರಲಿಲ್ಲ. ಕೈಕಯಿಯ ಇಷ್ಟವನ್ನು ರಾಮನ ಆಣೆ ನಡೆಸುವೆನೆಂದನು. ಆ ಆಣೆಗೆ ಬಲ ಇದ್ದದು ಅವನಿಗೆ ರಾಮನಲ್ಲಿದ್ದ ಬಹು ಪ್ರೇಮದಿಂದ. ಆ ಪ್ರೇಮದಷ್ಟು ಬಲದಿಂದ ಅ ಪ್ರೇಮದ ವಸ್ತು ವನ್ನು ಕಾಡಿಗೆ ಅಟ್ಟುವುದಾಗಿ ಅವನು ಆಣೆಮಾಡುತ್ತಿದ್ದನು. ಇದು ಮನುಷ್ಯನ ಜೀವನದಲ್ಲಿ ಒಮ್ಮೊಮ್ಮೆ ಬರುವ ವಿಚಿತ್ರ ಸನ್ನಿವೇಶ. ಚೇಳನ್ನು ಚೇಳೆಂದು ತಿಳಿಯದೆ ಆಟಕ್ಕಾಗಿ ಹಿಡಿಯಹೋಗುವ ಮಗುವಿ ನಂತೆ ಇಂಥ ಸಂದರ್ಭದಲ್ಲಿ ಮನುಷ್ಯನು ತನ್ನ ಕೇಡನ್ನು ತಾನೇ ಭದ್ರ ಪಡಿಸಿಕೊಳ್ಳುತ್ತಾನೆ. ಹೀಗೆ ಶಪಥಮಾಡಿದ ರಾಜನಿಗೆ ಕೈಕಯಿ ತನ್ನ ಇಷ್ಟವನ್ನು ಹೇಳಿದಳು. "ನೀನು ನನ್ನ ಇಷ್ಟವನ್ನು ನಡೆಸದಿದ್ದರೆ ನಿನ್ನಿಂದ ವಿಮಾನಿತಳಾದ ನಾನು ಪ್ರಾಣವನ್ನು ಬಿಡುತ್ತೇನೆ'' ಎಂದಳು. ರಾಣಿಯ ಮಾತನ್ನು ಕೇಳಿ ಮಹಾರಾಜನು ಪರಿತಪಿಸಿದನು; ಚಿಂತೆಯಲ್ಲಿ ಮುಳುಗಿದನು; ಇದೇನು ಸ್ವಪ್ನವೋ ಚಿತ್ತಮೋಹವೋ ಅಪಸರ್ಗಾನು ಭವವೋ ಹೇಗೆ ಎಂದು ಯೋಚಿಸಿದನು. ವ್ಯಾಘ್ರವನ್ನು ನೋಡಿದ ಮೃಗದಂತೆ ವ್ಯಥಿತನಾಗಿ ವಿಕ್ಲವನಾಗಿ ಬಹು ಹೊತ್ತಿನಮೇಲೆ ಎಚ್ಚೆತ್ತು ಕೊಂಡನು. ಆಮೇಲೆ "ರಾಮನು ನಿನಗೆ ಏನು ಮಾಡಿದನು ? ಅವನು ನಿನ್ನನ್ನು ತಾಯಂತೆ ಕಾಣುವನಲ್ಲಾ ! ಅವನಿಗೇಕೆ ಕೇಡನ್ನು

ಬಯಸುವೆ? ನಾನು ನಿನ್ನನ್ನು ನನ್ನ ವಿನಾಶಕ್ಕಾಗಿ ಅರಮನೆಗೆ ಹೊಗಿಸಿದೆನೇ! ಲೋಕವೆಲ್ಲ ರಾಮನ ಗುಣವನ್ನು ಹೊಗಳುತ್ತದೆ. ಇಂಥದರಲ್ಲಿ ಯಾವ ಅಪರಾಧಕ್ಕಾಗಿ ಈ ಮಗನನ್ನು ನಾನು ತ್ಯಜಿಸಲಿ? ಏನನ್ನಾದರೂ ಬಿಟ್ಟೇನು, ರಾಮನನ್ನು ಬಿಡಲಾರೆನು. ಹಿರಿಯ ಮಗನಾದ ರಾಮನನ್ನು ನೋಡಿದಾಗ ನನಗೆ ಪ್ರೀತಿ ಉಕ್ಕಿಬರುತ್ತದೆ. ರಾಮನಿಲ್ಲದೆ ನನ್ನ ಜೀವ ದೇಹದಲ್ಲಿ ನಿಲ್ಲಲಾರದಲ್ಲ! ಆದ್ದರಿಂದ ನಿನ್ನ ಈ ನಿರ್ಧಾರವನ್ನು ಬಿಟ್ಟುಬಿಡು. ನಿನ್ನ ಪಾದಗಳನ್ನು ತಲೆಯಿಂದ ಮುಟ್ಟುತ್ತೇನೆ. ಅನುಗ್ರಹಮಾಡು. ಅತ್ಯಂತ ಸುಕುಮಾರನಾದ ಧರ್ಮಧೃತಾತ್ಮನಾದ ರಾಮಚಂದ್ರನು ದಾರುಣವಾದ ಅರಣ್ಯದಲ್ಲಿ ಒಂಭತ್ತು ವರ್ಷದಮೇಲೆ ಐದು ವರ್ಷ ವಾಸಮಾಡಬೇಕೆನ್ನುವುದು ರುಚಿಸುವುದು ಹೇಗೆ? ವೃದ್ಧನಾಗಿ ಸಾಯಲಿರುವ ನನ್ನ ವಿಷಯದಲ್ಲಿ ಕರುಣ ತೋರುವುದು ನಿನಗೆ ತಕ್ಕದು. ಸಾಗರಾಂತವಾದ ಪೃಥಿವೀ ಸರ್ವಸ್ವವನ್ನೂ ನಿನಗೆ ಕೊಟ್ಟುಬಿಡುತ್ತೇನೆ. ನಿನಗೆ ಕೈಜೋಡಿಸುತ್ತೇನೆ. ನಿನ್ನ ಕಾಲನ್ನು ಮುಟ್ಟುತ್ತೇನೆ. ರಾಮನನ್ನು ರಕ್ಷಿಸು. ನನ್ನನ್ನು ಅಧರ್ಮ ಮುಟ್ಟದಿರಲಿ'' ಎಂದು ಬೇಡಿದನು. ಕೈಕಯಿಾದೇವಿ ಅವನಿಗೆ ''ನೀನು ವರವನ್ನು ಕೊಟ್ಟು ಅನುತಾಪಪಡುವೆಯೇಕೆ? ಹೀಗಾದರೆ ನೀನು ಧಾರ್ಮಿಕನು ಹೇಗೆ? ನೀನು ಧರ್ಮವನ್ನು ಬಿಟ್ಟು ರಾಮನಿಗೆ ಅಭಿಷೇಕ ಮಾಡಿ ಕೌಸಲ್ಯೆಯೊಂದಿಗೆ ಸುಖವಾಗಿರಲು ಅಪೇಕ್ಷಿಸುತ್ತಿದೀಯೆ. ಹೀಗಾದರೆ ನಾನು ನಿನ್ನೆದುರಿಗೆ ಈಗಲೇ ವಿಷ ಕುಡಿದು ಜೀವವನ್ನು ಬಿಡುತ್ತೇನೆ. ನನ್ನಾಣೆ, ಭರತನಾಣೆ'' ಎಂದಳು. ಕೈಕಯಿಯ ಮಾತನ್ನು ಕೇಳಿ ತನ್ನ ಗತಿಯನ್ನು ನೆನೆದು ರಾಜನು ರಾಮಾ ಎಂದು ನಿಟ್ಟುಸಿರು ಬಿಟ್ಟು ಬುಡ ಕಡಿದ ಮರದಂತೆ ಕೆಳಗೆಬಿದ್ದನು; ಮತ್ತೆ ಕೈಕಯಿಯನ್ನು ಕುರಿತು ಬಹು ಮಾತನಾಡಿದನು. ''ಅರ್ಥದಂತೆ ಕಾಣುವ ಈ ಅನರ್ಥವನ್ನು ನೀನು ಯಾರಿಂದ ಕಲಿತೆ? ಕಾಡಿಗೆ ಹೋಗು ಎಂದು ಹೇಳಿದವೇಳೆ ಗ್ರಹಣ ಹಿಡಿದ ಚಂದ್ರನಂತೆ ವಿವರ್ಣವಾಗುವ ರಾಮನ ಮುಖವರ್ಣವನ್ನು ನಾನು ಹೇಗೆ ನೋಡಲಿ? ರಾಮನು ಅರಣ್ಯಕ್ಕೆ ಹೋದರೆ ಕೌಸಲ್ಯೆ ನನಗೇನು ಹೇಳುವಳು? ಅವಳಿಗೆ ಇಂಥ ವಿಪ್ರಿಯವನ್ನು ಮಾಡಿ ನಾನು ಏನೆಂದು

ಪ್ರತಿಹೇಳಲಿ? ಕೌಸಲ್ಯೆ ನನಗೆ ದಾಸಿಯಂತೆ ಸಖಿಯಂತೆ ಭಾರ್ಯೆ ಭಗಿನಿ ಮಾತೆಯಂತೆ ಸೇವೆಮಾಡಿರುವವಳು. ಸತತವೂ ನನಗೆ ಪ್ರಿಯವನ್ನು ಬಯಸುವವಳು. ಇದಕ್ಕಾಗಿ ನಾನು ಅವಳಿಗೆ ಸತ್ಕಾರ ಮಾಡಬೇಕು; ನಿನ್ನ ಕಾರಣದಿಂದ ಅದನ್ನು ಮಾಡಲಿಲ್ಲ. ರಾಮನು ಅರಣ್ಯಕ್ಕೆ ಹೋಗುವುದನ್ನು ನೋಡಿ ನಾನು ಸಾಯುತ್ತೇನೆ. ವಿಧವೆಯಾದ ನೀನು ಪುತ್ರನೊಡನೆ ರಾಜ್ಯವನ್ನಾಳುತ್ತೀಯೆ. ಕಾಡಿಗೆ ಹೋಗೆಂದರೆ ರಾಮನು ಒಲ್ಲೆನೆನ್ನುವುದಿಲ್ಲ; ಒಳ್ಳೆಯದು, ಎಂದ ಹೇಳುತ್ತಾನೆ. ಅವನು ಕಾಡಿಗೆ ಹೋಗಿ ನಾನು ಸತ್ತು ಕೌಸಲ್ಯೆ ಸತ್ತು ಸುಮಿತ್ರೆ ಸತ್ತು ನಮ್ಮನ್ನು ನರಕದಲ್ಲಿಟ್ಟು ನೀನು ಸುಖಿಯಾಗು. ಅಯ್ಯೋ ಅರಮನೆಯ ಊಟ ಉಪಚಾರಗಳನ್ನು ಇದುವರೆಗೆ ಅನುಭವಿಸಿ ರಾಮನು ಇನ್ನು ವನವಾಸದ ಕಷ್ಟಗಳನ್ನು ಹೇಗೆ ಸಹಿಸುವನು? ನೀನು ಏನಾದರೂ ಆಗಿಹೋಗು, ನಾನು ನಿನ್ನ ಮಾತನ್ನು ನಡೆಯಿಸುವುದಿಲ್ಲ. ನನಗೆ ನೀನು ಕೆಟ್ಟುದನ್ನು ಮಾಡಬೇಡ. ನಿನ್ನ ಕಾಲನ್ನು ಮುಟ್ಟುತ್ತೇನೆ, ಪ್ರಸನ್ನಳಾಗು.'' ಹೀಗೆ ದಶರಥನು ಆಡಿದ ಮಾತಿಗೆ ಮೊದಲಿಲ್ಲ ಕೊನೆಯಿಲ್ಲ. ಬೇಡಿಕೆ ಒಮ್ಮೆ; ಬೆದರಿಕೆ ಒಮ್ಮೆ; ಹಂಬಲು ಒಮ್ಮೆ; ಅಂಗಲಾಚು ಒಮ್ಮೆ. ಇದರಲ್ಲೆಲ್ಲ ವಾಲ್ಮೀಕಿಯ ಸ್ವಭಾವಜ್ಞತೆ ಸ್ಪಷ್ಟವಾಗುತ್ತದೆ. ಕೈಕಯಿ ರಾಜನಿಗೆ ''ನೀನು ಸತ್ಯವಾದಿಯಾಗಿ ದೃಢವ್ರತನಾಗಿ ಸುಮ್ಮನೆ ಇಂಥ ಮಾತನಾಡುತ್ತಿದೀಯೆ,'' ಎಂದು ಉತ್ತರ ಹೇಳಲು ತೊಡಗುವಳು. ಅವಳ ಮಾತು ಮುಗಿಯುವ ಮೊದಲೇ ದಶರಥನು ಮತ್ತೆ ರೇಗಿ ಮಾತಿನ ಮಳೆಯನ್ನು ಸುರಿಸುವನು: ''ಇಂದೀವರಶ್ಯಾಮನೂ ದೀರ್ಘಬಾಹುವೂ ಮಹಾಬಲನೂ ಅಭಿರಾಮನೂ ಆದ ರಾಮನನ್ನು ನಾನು ಹೇಗೆ ಕಾಡಿಗೆ ಅಟ್ಟಲಿ? ನನಗೆ ಲೋಕದಲ್ಲಿ ಅತುಲವಾದ ಅಕೀರ್ತಿ ಧ್ರುವವಾದ ಪರಿಭವ'' ಎಂದು ಮೊದಲಾಗಿ ತೊಳಲುವನು. ವೃದ್ಧನಾದ ರಾಜನಿಗೆ ರಾಮನು ಕಷ್ಟಪಡುವನೇ ಎಂದು ಮರುಕ. ಆದರೂ ಅವನು ಕಷ್ಟವನ್ನು ತಡೆದುಕೊಳ್ಳುವನೆಂಬ ಧೈರ್ಯವುಂಟು. ಅವನು ಕಷ್ಟಪಡುವನೆನ್ನುವುದಕ್ಕಿಂತ ಹೆಚ್ಚಾಗಿ ರಾಜನಿಗೆ ತನಗೆ ಅಕೀರ್ತಿ ಬರುವುದೇ ಎಂಬ ಕಾರಣದಿಂದ, ಇಂಥ ಮಗನನ್ನು ಕಾಡಿಗೆ ಅಟ್ಟಿದನೆಂದು ಎಂದೆಂದಿಗೂ ಜನರು

ಆಡಿಕೊಳ್ಳುವುದರ ಅವಮಾನದಿಂದ, ವ್ಯಥೆ. ಅವನು ಹೀಗೆ ಮಾತನಾಡು ತ್ತಿರಲು ಸಂಜೆಯಾಯಿತು; ರಾತ್ರಿ ಬಂದಿತು. ಚಂದ್ರಮಂಡಲ ಮಂಡಿತವಾದ ಆ ರಾತ್ರಿ ಗೋಳಿಡುತ್ತಿರುವ ರಾಜನಿಗೆ ಚೆಲುವಾಗಿ ಕಾಣಲಿಲ್ಲ. ಯಾವ ಅರಮನೆಯಲ್ಲಿ ಎಂಥ ರಾತ್ರಿಯಲ್ಲಿ ಯಾವ ರಾಣಿ ಯೊಂದಿಗೆ ಅವನು ಪೂರ್ವದಲ್ಲಿ ಆನಂದದಲ್ಲಿ ಮುಳುಗಿದ್ದನೋ ಅದೇ ಅರಮನೆಯಲ್ಲಿ ಅಂಥದೇ ರಾತ್ರಿಯಲ್ಲಿ ಅದೇ ರಾಣಿಯೊಂದಿಗೆ ಇರುತ್ತ ಅವನು ವರ್ಣಿಸಲಾಗದ ದುಃಖವನ್ನು ಅನುಭವಿಸಿದನು. ಸುಖದ ಆ ಹಿಂದಣ ರಾತ್ರಿಗಳಲ್ಲಿ ಬೆಳಕು ಹರಿಯದಿರಲೆಂದು ಅವನು ಅಪೇಕ್ಷಿಸಿದ್ದಿರ ಬಹುದು; ಆ ಸುಖ ಮುಗಿಯದೆ ಇರಲೆಂದು. ದುಃಖದ ಈ ರಾತ್ರಿಯೂ ಅವನು ಹಾಗೆಯೇ ಎಂದುಕೊಂಡನು. "ನಕ್ಷತ್ರ ಭೂಷಣೆಯಾದ ಓ ನಿಶಿಯೇ ನನ್ನಲ್ಲಿ ದಯೆ ತೋರು. ನಿನಗೆ ಕೈಮುಗಿಯುತ್ತೇನೆ. ನೀನು ಕಳೆಯಬೇಡ. ಹಗಲಾಗಬೇಡ" ಎಂದು ಬೇಡಿದನು. ಹಗಲಾಗಿ ರಾಮನು ಅರಣ್ಯಕ್ಕೆ ಹೋಗೋಣ ಬೇಡ: ಕಾಲಚಕ್ರ ನಿಂತುಹೋಗಲಿ. ಆದರೆ ಉತ್ತರಕ್ಷಣದಲ್ಲಿ, "ಈ ಹೆಂಗಸಿನೊಂದಿಗೆ ಈ ಗೃಹದಲ್ಲಿ ಎಷ್ಟು ಹೊತ್ತನ್ನು ಕಳೆಯುವುದು, ಸದ್ಯ ಇವಳನ್ನು ನೋಡಿದ್ದು ಸಾಕು" ಎಂದು ಜಿಹಾಸೆ ಬೇರೆ. ಆದ್ದರಿಂದ "ಓ ರಾತ್ರಿಯೇ ಬೇಗನೆ ಕಳೆದುಹೋಗು" ಎಂದೂ ಅವನು ಬೇಡಿದನು. ಇನ್ನೊಂದುಸಲ ಬೇಡಿದರೆ ಕರಗುವಳೋ ಏನೋ ಎಂದು ಕೈಕಯಿಯಲ್ಲಿ ಮತ್ತೆ ಪ್ರಾರ್ಥಿಸಿದನು. "ಸಾಧುವೃತ್ತನೂ ದೀನನೂ ದಿನ ಕಳೆದವನೂ ಆದ ನನಗೆ ದಯೆ ತೋರು ದೇವಿ. ನಾನು ರಾಜನು ಬೇರೆ. ನಾನು ರಾಮನ ಅಭಿಷೇಚನದ ಮಾತನ್ನು ಯಾರೂ ಇಲ್ಲದೆಡೆ ಹೇಳಲಿಲ್ಲ. ಇದನ್ನೆಲ್ಲರೂ ಕೇಳಿರುವರಲ್ಲಾ! ನನ್ನ ಮಾತನ್ನು ನಡೆಯಿಸು, ಬಾಲೆ. ನೀನು ಸಹೃದಯೆ, ದೇವಿ. ರಾಮನು ರಾಜ್ಯ ವನ್ನು ನಿನ್ನಿಂದ ಪಡೆಯಲಿ. ನೀನು ಯಶಸ್ಸನ್ನು ಸಂಪಾದಿಸು. ಗುರು ಶ್ರೋಣಿ, ಚಾರುಮುಖೇಕ್ಷಣೆ, ನನಗೆ, ರಾಮನಿಗೆ, ಲೋಕಕ್ಕೆ, ಹಿರಿಯರಿಗೆ, ಇಷ್ಟೇ ಅಲ್ಲ ಭರತನಿಗೆ ಕೂಡ ಪ್ರಿಯವಾದದು ಯಾವುದೋ ಅದನ್ನು ಮಾಡು" ಎಂದು ಪ್ರಾರ್ಥಿಸಿದನು. ಕೈಕಯೀದೇವಿ ಇದಕ್ಕೆ ಉತ್ತರ ಹೇಳಲಿಲ್ಲ. ದಶರಥನು ಮೂರ್ಛೆಹೋದನು; ಪ್ರಜ್ಞೆ ತಪ್ಪಿ ನೆಲದಲ್ಲಿ

ಬಿದ್ದನು. ಹೀಗೆ ರಾತ್ರಿ ಕಳೆಯಿತು. ಬೆಳಗಾಗ ವಾಡಿಕೆಯಂತೆ ಮಂಗಳವಾದ್ಯಗಳು ಅವನನ್ನು ನೋವಿನಿಂದ ಎಚ್ಚರಿಸಲು ರಾಜನು ಎಚ್ಚತ್ತವನೆ ಆ ವಾದ್ಯಗಳನ್ನು ನಿಲ್ಲಿಸುವಂತೆ ಆಜ್ಞೆಮಾಡಿದನು.

### ರಾಮನ ಗೆಲವು

ಇರುಳು ಕಳೆದಿತ್ತು; ಬೆಳಕು ಹರಿದಿತ್ತು; ಆದರೆ ದಶರಥನ ಸಮಸ್ಯೆ ಹಾಗೆಯೇ ಉಳಿದಿತ್ತು. ಕೈಕಯಿದೇವಿ ರಾಜನನ್ನು ಕುರಿತು "ಮಾತು ಕೊಟ್ಟು ತಪ್ಪಿ ಏನು ನೆಲದಲ್ಲಿ ಮಲಗಿದೀಯೆ? ಧರ್ಮವನ್ನು ಬಲ್ಲ ಜನರು ಧರ್ಮದಲ್ಲೆಲ್ಲ ಸತ್ಯ ಶ್ರೇಷ್ಠವೆಂದು ಹೇಳುವರು. ನಾನು ಸತ್ಯವನ್ನೂ ಧರ್ಮವನ್ನೂ ಆಶ್ರಯಿಸಿಯೇ ನಿನಗೆ ಹೇಳುತ್ತೇನೆ. ಹಿಂದೆ ಶೈಬ್ಯನೂ ಅಲರ್ಕನೂ ಸತ್ಯಕ್ಕಾಗಿ ದೇಹವನ್ನು ಕೊಟ್ಟರು; ಕಣ್ಣನ್ನು ಕಿತ್ತರು. ಸಮುದ್ರವೂ ಸತ್ಯದ ದೆಸೆಯಿಂದ ಮೇರೆಯನ್ನು ದಾಟದೆ ನಿಂತಿದೆ. ಸತ್ಯವು ಏಕಪದ ಬ್ರಹ್ಮ. ಸತ್ಯದಲ್ಲಿ ಧರ್ಮ ನಿಂತಿದೆ. ಸತ್ಯವೇ ಅಕ್ಷಯ ವೇದಗಳು. ಸತ್ಯದಿಂದಲೇ ಪರವು ದೊರೆಯುವುದು. ಸತ್ಯವನ್ನು ಅನುಸರಿಸು. ನನ್ನ ವರವನ್ನು ನಡೆಸು. ಹೀಗಾಗುವುದಿಲ್ಲವೆಂದರೆ ಪರಿತ್ಯಕ್ತಳಾದ ನಾನು ನಿನ್ನೆದುರಲ್ಲಿ ಪ್ರಾಣವನ್ನು ಪರಿತ್ಯಜಿಸುವೆನು," ಎಂದಳು. ಸ್ವಾರ್ಥವನ್ನು ಸಾಧಿಸುವುದಕ್ಕೆ ಇತರರಿಗೆ ಅಸ್ವಾರ್ಥ ಸತ್ಯವನ್ನು ಉಪದೇಶಿಸುವ ಕೈಕಯಿಯ ಈ ಮಾತಾದರೂ ಜೀವನದಲ್ಲಿ ಬಹು ವೇಳೆ ಬಹು ಜನರು ಆಡುವಂಥದು. ಮೋಸಮಾಡಬೇಡ, ಇರುವುದನ್ನೆಲ್ಲಾ ಕೊಡು, ಎನ್ನುವ ಕಳ್ಳನಂತೆ; ಸುಳ್ಳು ಹೇಳಬೇಡ ಹಣವನ್ನು ಎಲ್ಲಿಟ್ಟಿದ್ದೀಯೆ ಹೇಳು ಎನ್ನುವ ದರೋಡೆಗಾರನಂತೆ; ಅಧರ್ಮದಲ್ಲಿ ಪ್ರವೃತ್ತವಾದ ಚೇತನ ತನ್ನ ನಡತೆಗೆ ಧರ್ಮವನ್ನು ಸಹಾಯವಾಗಿ ಎಳೆತರುವುದು. ತನ್ನ ಮೋಹದ ಕಿರಿಯ ರಾಣಿಯ ಸತ್ಯೋಪದೇಶವನ್ನು ಕೇಳಿ ರಾಜನು ಈ ತೊಡಕಿನಿಂದ ಬಿಡಿಸಿಕೊಳ್ಳುವುದು ಹೇಗೆಂದು ತಿಳಿಯದೆಹೋದನು. ಮತ್ತೆ ಅವಳನ್ನು ಕುರಿತು "ನಾನು ನಿನ್ನನ್ನು ತ್ಯಜಿಸುತ್ತೇನೆ. ನಿನ್ನೊಂದಿಗೆ ಆ ನನ್ನ ನಿನ್ನ ಮಗನನ್ನೂ ತೊರೆಯುತ್ತೇನೆ. ರಾತ್ರಿ ಕಳೆಯಿತು. ರಾಮಾಭಿಷೇಕಕ್ಕಾಗಿ ಸೇರಿಸಿದ ಸಂಭಾರದಿಂದ ರಾಮನು ನನ್ನ ಸಲಿಲ ಕ್ರಿಯೆಗಳನ್ನು ಮಾಡಲಿ. ನೀನಾಗಲಿ ನಿನ್ನ ಪುತ್ರನಾಗಲಿ ಆ ಸಲಿಲ

ಕ್ರಿಯೆಗಳನ್ನು ಮಾಡಬೇಡಿ" ಎಂದನು. ಕೈಕಯಿ "ಏಕೆ ವ್ಯರ್ಥವಾಗಿ ಮಾತನಾಡುತ್ತೀಯೆ? ನನ್ನ ಮಗನನ್ನು ರಾಜ್ಯಕ್ಕೆ ನಿಲ್ಲಿಸು. ರಾಮನನ್ನು ಅರಣ್ಯಕ್ಕೆ ಕಳುಹಿಸು. ನನಗೆ ಹಗೆಯಿಲ್ಲದಂತೆ ಮಾಡು. ಕೃತಕೃತ್ಯನಾಗು" ಎಂದಳು. ದಶರಥನು ಇಲ್ಲಿಗೆ ಸೋತನು. ಅಟ್ಟಿಬರುವ ನಾಯಿಯಿಂದ ತಪ್ಪಿಸಿಕೊಂಡು ಓಡುವ ಮೃಗ ಓಡುವಷ್ಟು ಓಡಿ ಕೊನೆಗೆ ಒಂದು ಹೆಜ್ಜೆಯನ್ನಿಟ್ಟು ಕೆಳಗೆ ಬೀಳುವಂತೆ ಇವನು ಒಂದು ಮಾತನ್ನು ಹೇಳಿ ಮುಗಿಸಿದನು. "ನಾನು ಧರ್ಮದ ಕಟ್ಟಿನಿಂದ ಕಟ್ಟುಬಿದ್ದಿದ್ದೇನೆ. ನನ್ನ ಚೇತನ ಹೋಯಿತು. ಜ್ಯೇಷ್ಠನೂ ಪ್ರಿಯನೂ ಆದ ನನ್ನ ಧರ್ಮಿಷ್ಠ ಪುತ್ರ ರಾಮನನ್ನು ನಾನು ನೋಡಬೇಕು" ಎಂದನು. ಬೆಳಗಾಯಿತೆಂದು ವಸಿಷ್ಠನು ಅಭಿಷೇಚನ ಸಾಮಗ್ರಿ ಸಹಿತವಾಗಿ ಬಂದು ತಾನು ಬಂದಿರುವ ಮಾತನ್ನು ರಾಜನಿಗೆ ತಿಳಿಸುವಂತೆ ಸಾರಥಿ ಸುಮಂತ್ರನಿಗೆ ಹೇಳಿದನು. ಸುಮಂತ್ರನು ರಾಜನಿರುವ ಬಳಿಗೆ ಬಂದು ಸುಂದರವಾದ ನಾನಾ ವಾಕ್ಯಗಳಿಂದ ಮಹಾರಾಜನನ್ನು ಉದ್ಬೋಧಿಸಿ "ಉದಯವಾಯಿತು, ರಾಮನ ಅಭಿಷೇಚನಕ್ಕೆ ತೊಡಗಬೇಕು. ವಸಿಷ್ಠ ಮಹರ್ಷಿ ಎಲ್ಲರೊಡನೆ ಸಿದ್ಧವಾಗಿದ್ದಾರೆ" ಎಂದು ಅರಿಕೆಮಾಡಿದನು. ರಾಜನು ಶೋಕದಿಂದ ಕೆಂಪೇರಿದ ದೃಷ್ಟಿಯಿಂದ ಅವನನ್ನು ನೋಡುತ್ತ ಅವನಿಗೆ "ನಿನ್ನ ಮಾತಿನಿಂದ ನನ್ನ ಮನಸ್ಸನ್ನು ಮತ್ತೆ ನೋಯಿಸುತ್ತಿದ್ದೀಯೆ" ಎಂದನು. ರಾಜನ ಈ ದುಃಖದ ಮಾತನ್ನು ಕೇಳಿ ಅವನ ದುರವಸ್ಥೆಯನ್ನು ನೋಡಿ ಸುಮಂತ್ರನು ಸ್ವಲ್ಪ ಹಿಂದಕ್ಕೆ ಸರಿದನು. ಏನು ಹೇಳಲೂ ರಾಜನಿಗೆ ಬಾಯಿ ಬರಲಿಲ್ಲ. ಆದ್ದರಿಂದ ಕೈಕಯಿ ಸುಮಂತ್ರನಿಗೆ "ಸುಮಂತ್ರಾ, ರಾಜರು ರಾಮಹರ್ಷಸಮುತ್ಸುಕರಾಗಿ ರಾತ್ರಿ ಎಚ್ಚರದಿಂದಿದ್ದು ಸೋತು ನಿದ್ರಾವಶರಾಗಿದಾರೆ. ನೀನು ಬೇಗನೆ ಹೋಗಿ ಯಶಸ್ವಿಯಾದ ಆ ರಾಜಪುತ್ರನನ್ನು ಕರೆದು ತಾ. ಉಳಿದ ಮಾತು ಬೇಡ" ಎಂದಳು. ಸುಮಂತ್ರನು ಬೇಗನೆ ಹೋಗಿ ರಾಮನಿಗೆ ಈ ಮಾತನ್ನು ಅರಿಕೆ ಮಾಡಿದನು. ರಾಮನು ಸೀತೆಗೆ ಈ ವಿಷಯವನ್ನು ತಿಳಿಸಿ ಅರಸನನ್ನು ನೋಡಲು ಹೊರಟನು. ಸೀತೆ ಬಾಗಿಲವರೆಗೆ ಅವನೊಡನೆ ಬಂದು ಅವನಿಗೆ ಮಂಗಳವನ್ನು ಬಯಸಿ ಮುಂದಕ್ಕೆ ಕಳುಹಿಸಿದಳು. ಅಭಿಷೇಚನ ಕಾರಣದಿಂದ ಉತ್ಸಾಹಗೊಂಡು

ಬೀದಿಯಲ್ಲಿ ತುಂಬಿರುವ ಜನರ ಮಧ್ಯೆ ಹೊರಟು ರಾಮನು ಚಿಕ್ಕತಾಯಿ ಅರಮನೆಗೆ ಬಂದನು. ದುಃಖದಿಂದ ಸೊರಗಿ ನಿಟ್ಟುಸಿರುಬಿಡುತ್ತಿರುವ ತಂದೆಯನ್ನು ನೋಡಿದನು; ಅವನಿಗೂ ರಾಣಿಗೂ ವಂದಿಸಿದನು. ಅರಸು ರಾಮ ಎಂದು ಉಸುರಿ ಇನ್ನು ಮಾತನಾಡಲಾರದೆಹೋದನು. ಮಗನನ್ನು ಕಣ್ಣೆತ್ತಿ ನೋಡುವುದೂ ಅವನಿಗೆ ಸಾಧ್ಯವಾಗಲಿಲ್ಲ. ಏನಾಯಿತು ಎಂದು ರಾಮನು ಭೀತನಾದನು. ಕೈಕಯಿಯನ್ನು ಕುರಿತು "ನನಗೆ ತಿಳಿಯದೆ ನಾನೇನಾದರೂ ತಪ್ಪು ಮಾಡಿದೆನೋ ? ತಂದೆ ನನ್ನೊಂದಿಗೆ ಮಾತ ನಾಡಲಿಲ್ಲ. ಇಲ್ಲವೇ ಇವನಿಗೆ ಮೈಯಲ್ಲಿ ಸರಿಯಾಗಿಲ್ಲವೋ ? ಮತ್ತೇ ನಾದರೂ ಅಶುಭವಾಯಿತೊ ? ಇಲ್ಲವೇ ನೀನು ಇವನನ್ನೇನಾದರೂ ಕಠಿಣ ವಾಗಿ ಆಡಿದೆಯೋ? ಯಾವ ಕಾರಣದಿಂದ ತಂದೆ ಹೀಗೆ ವಿಕೃತನಾಗಿದ್ದಾನೆ ತಿಳಿಸಬೇಕು" ಎಂದು ಕೇಳಿದನು. ಕೈಕಯಿ ಲಜ್ಜೆಯಿಲ್ಲದೆ ಅದಕ್ಕೆ "ರಾಜನಿಗೆ ಕೋಪವೂ ಇಲ್ಲ, ವ್ಯಸನವೂ ಇಲ್ಲ. ಅವನಿಗೆ ಒಂದು ಅಪೇಕ್ಷೆ ಇದೆ.. ನಿನಗೆ ಹೆದರಿ ಅದನ್ನು ಹೇಳದೆ ಇದಾನೆ. ಪ್ರಿಯನಾದ ನಿನಗೆ ಅಪ್ರಿಯವನ್ನು ಹೇಳಲು ಆತನಿಗೆ ಬಾಯಿಬರಲಿಲ್ಲ. ರಾಜನು ನನಗೆ ಒಂದು ಮಾತನ್ನು ಕೊಟ್ಟು ಅದರಿಂದ ಬಿಡಿಸಿಕೊಳ್ಳಲು ಅಪೇಕ್ಷಿಸು ತ್ತಿದಾನೆ. ಆ ಮಾತನ್ನು ನಡೆಸುತ್ತೇನೆಂದು ನೀನು ಭಾಷೆಯಿತ್ತರೆ ಅದು ಏನೆಂದು ನಾನು ನಿನಗೆ ಹೇಳುತ್ತೇನೆ" ಎಂದಳು. ರಾಮನು "ದೇವಿ, ನೀನು ನನಗೆ ಇಂಥ ಮಾತನ್ನು ಹೇಳಬಾರದು. ರಾಜನು ಅಪೇಕ್ಷಿಸುವ ಅದು ಏನೆಂದು ನನಗೆ ಹೇಳು. ನಾನು ಅದನ್ನು ಅಗತ್ಯವಾಗಿ ಮಾಡು ತ್ತೇನೆ. ಇದು ನನ್ನ ಪ್ರತಿಜ್ಞೆ. ರಾಮನು ಎರಡು ಮಾತಾಡುವುದಿಲ್ಲ" ಎಂದು ಉತ್ತರವಿತ್ತನು. ಕೈಕಯಿ ನಡೆದ ಸಂಗತಿಯನ್ನು ಅವನಿಗೆ ಹೇಳಿ "ರಘುನಂದನ, ನರೇಂದ್ರನ ಈ ವಚನವನ್ನು ನಡೆಸು. ಮಹತ್ಸತ್ಯದಿಂದ ನಿನ್ನ ತಂದೆಯನ್ನು ಉದ್ಧರಿಸು" ಎಂದು ಹೇಳಿದಳು. ದಾರುಣವೂ, ಮರಣೋಪಮವೂ ಆದ ಅಪ್ರಿಯ ವಚನವನ್ನು ಕೇಳಿಯೂ ರಾಮನು ವ್ಯಥೆಪಡಲಿಲ್ಲ. ಕೈಕಯಿಯನ್ನು ಕುರಿತು ಅವನು "ಹಾಗೆಯೇ ಆಗಲಿ. ನಾನು ರಾಜನ ಪ್ರತಿಜ್ಞೆಯನ್ನು ನಡೆಯಿಸಲೋಸುಗ ಜಟಾಜಿನಧರನಾಗಿ ವನದಲ್ಲಿ ವಾಸಮಾಡಲು ಹೋಗುತ್ತೇನೆ. ಅದಕ್ಕೆ ನಾನು ಚಿಂತಿಸು

ವುದಿಲ್ಲ. ಆದರೆ ನನ್ನ ತಂದೆ ನನ್ನೊಂದಿಗೆ ಮೊದಲಿನಂತೆ ಸಂತೋಷದಿಂದ ಮಾತನಾಡದೆ ಇರುವನು; ಇದಕ್ಕಾಗಿ ಚಿಂತಿಸುತ್ತೇನೆ" ಎಂದನು. ಕೈಕಯಿ "ಹಾಗಾದರೆ ತ್ವರೆಮಾಡು. ನಿಮ್ಮ ತಂದೆ ನಾಚಿಕೆಯಿಂದ ನಿನ್ನೊಡನೆ ಮಾತನಾಡದೆ ಇದ್ದಾನೆ. ಆತನಿಗೆ ಕೋಪವೇನೂ ಇಲ್ಲ. ನೀನು ಅರಣ್ಯಕ್ಕೆ ಹೊರಡುವವರೆಗೂ ರಾಜನು ಸ್ನಾನ ಭೋಜನಗಳನ್ನು ಮಾಡುವುದಿಲ್ಲ" ಎಂದಳು. ತನ್ನ ಮೂಕಾವಸ್ಥೆಗೆ ಈ ಅರ್ಥವನ್ನು ಕೊಟ್ಟ ಕೈಕಯಿಯ ಮಾತನ್ನು ಕೇಳಿ ರಾಜನು "ಛೆ, ಅನ್ಯಾಯ" ಎಂದು ಧಿಕ್ಕರಿಸಿ ನಿಟ್ಟುಸಿರುಬಿಟ್ಟು ಮೂರ್ಛಿತನಾಗಿ ಬಿದ್ದನು. ರಾಮನು ತಂದೆಯನ್ನು ಎತ್ತಿ ಕುಳ್ಳಿರಿಸಿ, ವನಕ್ಕೆ ಹೊರಡಬೇಕೆಂದು ತ್ವರೆಪಡಿಸುವ ಕೈಕಯಿಗೆ ಹೀಗೆಂದನು. "ದೇವಿ, ನಾನು ಅರ್ಥಪರನಾಗಿ ಜೀವಿಸಲು ಆಶಿಸುವವನಲ್ಲ. ನನ್ನನ್ನು ಕೇವಲ ಧರ್ಮವನ್ನು ಆಶ್ರಯಿಸಿರುವ ಋಷಿ ಸಮಾನನೆಂದು ತಿಳಿ. ಪ್ರಾಣವನ್ನಾದರೂ ಬಿಟ್ಟು ನಿನಗೆ ಪ್ರಿಯವಾದದನ್ನು ಮಾಡಿಕೊಟ್ಟೇನು. ಪಿತೃಶುಶ್ರೂಷೆ ಪಿತೃವಚನಕ್ಕಿಂತ ಹಿರಿದಾದ ಧರ್ಮವಿಲ್ಲ. ತಾಯ ಅಪ್ಪಣೆಯನ್ನು ಪಡೆದು ಸೀತೆಯನ್ನು ಒಪ್ಪಿಸಿ ಹೊರಡುವಷ್ಟು ಹೊತ್ತು ಮಾತ್ರ ಇಲ್ಲಿದ್ದೇನು. ಅದಾದ ಒಡನೆ ವನವನ್ನು ಕುರಿತು ತೆರಳುವೆನು. ಭರತನು ರಾಜ್ಯವನ್ನು ಆಳಲಿ, ತಂದೆಗೆ ಶುಶ್ರೂಷೆಯನ್ನು ಮಾಡಲಿ. ನಿನಗೆ ಕೂಡ ಇದೇ ಕರ್ತವ್ಯ, ಇದು ಸನಾತನವಾದ ಧರ್ಮ." ಹೀಗೆ ಹೇಳಿ ಪ್ರಜ್ಞೆಯಿಲ್ಲದೆ ಬಿದ್ದಿದ್ದ ತಂದೆಯ ಪಾದಗಳಿಗೆ ವಂದಿಸಿ ಕೈಕಯಿಾದೇವಿಗೆ ಪ್ರಣಾಮಮಾಡಿ ಅಂತಃಪುರದಿಂದ ಹೊರಟನು.

### ಕೌಸಲ್ಯೆಯ ವಿಲಾಪ

ಈ ಮೊದಲೇ ಲಕ್ಷ್ಮಣನು ಬಂದು ಇದೆಲ್ಲವನ್ನೂ ನೋಡಿ ಕೇಳಿದ್ದನು. ಅವನು ಕಣ್ಣೀರು ಸುರಿಸುತ್ತ ಬಹು ಕೋಪದಲ್ಲಿ ಕುದಿಯುತ್ತ ರಾಮನ ಹಿಂದೆಯೇ ನಡೆದನು. ರಾಮನು ಅಭಿಷೇಚನದ ಭಾಂಡಕ್ಕೆ ಒಂದು ಪ್ರದಕ್ಷಿಣೆಮಾಡಿ ಮೆಲ್ಲನೆ ಮುಂದೆ ಹೊಕ್ಕನು. ಅಭಿಷೇಚನ ತಪ್ಪಿತೆಂಬ ಕಾರಣದಿಂದ ಅವನ ಮನಸ್ಸಿನಲ್ಲಿ ವಿಕಾರ ತೋರಲಿಲ್ಲ. ಅವನು ಛತ್ರಚಾಮರಗಳನ್ನೂ ಪರಿವಾರದ ಜನವನ್ನೂ ಬೇಡವೆಂದು ಹೇಳಿ ತಾನು ಮಾತ್ರ ತಾಯ ಮಂದಿರವನ್ನು ಕುರಿತು

ಹೊರಟನು. ಮಗನ ಅಭಿಷೇಚನದ ದಿನವೆಂದು ಅವನ ಅಭಿವೃದ್ಧಿಗಾಗಿ ದಾನಧರ್ಮಗಳನ್ನು ನಡೆಸುತ್ತ ವ್ರತದಲ್ಲಿದ್ದ ಕೌಸಲ್ಯಾದೇವಿ ಕುಮಾರನು ಬರುವುದನ್ನು ಕಂಡು ಹರ್ಷದಿಂದ ಎದುರಿಗೆ ಬಂದಳು. "ಮಹಾತ್ಮರಾದ ವೃದ್ಧ ಧರ್ಮಶೀಲ ರಾಜರ್ಷಿಗಳ ಆಯುಸ್ಸೂ ಕೀರ್ತಿಯೂ ಧರ್ಮವೂ ನಿನ್ನಲ್ಲಿ ಬೆರೆಯಲಿ" ಎಂದು ಹರಸಿ "ನಿಮ್ಮ ತಂದೆ ಸತ್ಯಪ್ರತಿಜ್ಞನು. ಇಂದು ನಿನಗೆ ಯೌವರಾಜ್ಯಾಭಿಷೇಚನವನ್ನು ಮಾಡುತ್ತಾನೆ" ಎಂದು ಅರಸನನ್ನು ಪ್ರಶಂಸಿಸಿದಳು. "ಕುಳಿತುಕೋ ಊಟಮಾಡು" ಎಂದು ಮಗನನ್ನು ಆದರಿಸಿದಳು. ವಾಲ್ಮೀಕಿಯ ಜೀವನ ವಿಜ್ಞಾನ ಇಂಥ ಸಂದರ್ಭದಲ್ಲಿ, ಇಂಥ ಸಣ್ಣ ವಿಷಯದಲ್ಲಿ, ಪರಿಪೂರ್ಣವಾಗಿ ಬೆಳಗುತ್ತದೆ. ರಾಜ್ಯ ಬಂದು ರಾಜ್ಯ ಹೋಗುವ ಸಂದರ್ಭದಲ್ಲಿ ದೊಡ್ಡ ರಾಣಿ ಯುವರಾಜನಾಗುವ ಮಗನನ್ನು ಮಣೆಯಮೇಲೆ ಕೂರಿಸಿ ಊಟಮಾಡು ಎಂದಳೆಂದು ಕವಿ ಹೇಳಿದಾನೆ. ತಾಯಾದವಳಿಗೆ ಯಾವ ಹೊತ್ತಿನಲ್ಲಾಗಲಿ ಮಗನು ಊಟಮಾಡುವುದು ದೊಡ್ಡ ವಿಷಯ. ವಾಲ್ಮೀಕಿ ಈ ಮಾತನ್ನು ಸಣ್ಣದೆಂದು ಬಿಡಲಾರದೆಹೋದನು. ಕೌಸಲ್ಯೆ ಮಗನನ್ನು ಸಂಭ್ರಮದಿಂದ ಮಣೆಯಮೇಲೆ ಕೂರಿಸಿ ಊಟಮಾಡೆಂದು ಹೇಳಿ "ನೀನು ತಂದೆಯಿಂದ ಯೌವರಾಜ್ಯಾಭಿಷೇಚನ ಹೊಂದುತ್ತೀಯೆ" ಎಂದು ನುಡಿಯಲು ರಾಮನು ತಾಯಿಗೆ ಕೈಮುಗಿದು ತಲೆಬಾಗಿ ಉತ್ತರ ಹೇಳಿದನು. ಈ ಸಂದರ್ಭ ಬಹು ಭಾವಭರಿತವಾದದು. ಇಲ್ಲಿ ಎರಡು ಜೀವ ಒಂದನ್ನೊಂದು ಎದುರಿಸಿದೆ. ಒಂದು ತಾಯ ಜೀವ. ಕೌಸಲ್ಯೆ ರಾಮನ ಬಳಿಗೆ ಬಂದದ್ದನ್ನು ವಾಲ್ಮೀಕಿ ತಾಯಿಕುದುರೆ ಮರಿಯ ಬಳಿಗೆ ಬಂದಂತೆ ಎಂದು ವರ್ಣಿಸಿದ್ದಾನೆ. ಮರಿ ಬೆಳೆದಿದೆ. ಆದರೂ ತಾಯಿಗೆ ಅದು ಎಂದೆಂದಿಗೂ ಮರಿಯೆ. ಮರಿಗಾದರೆ ತಾನು ಬೆಳೆದಿರುವ ಕಾರಣದಿಂದ ಸ್ವಲ್ಪ ಸಂಕೋಚ, ನಾಚಿಕೆ. ತಾಯಿ ಜೀವಕ್ಕೆ ಇನ್ನೂ ಮಗನು ಯುವರಾಜನಾಗುವನೆಂದೇ ಭ್ರಮೆ. ಮಗನ ಜೀವಕ್ಕೆ ಆ ಭ್ರಮೆ ಹರಿದು ಹೋಗಿತ್ತು. ಒಂದು ಜೀವ ಬಾಳಿನ ಪರಮಾವಧಿಯ ಸುಖವನ್ನು ಪಡೆದೆನೆಂದು ಸಂತೋಷದಲ್ಲಿದೆ. ಇನ್ನೊಂದು ಜೀವ, ತನಗಾಗಿಯಲ್ಲ, ಆ ಜೀವಕ್ಕಾಗಿ, ಆ ಸುಖ ತಪ್ಪಿತೆಂದು ಚಿಂತೆಯಲ್ಲಿದೆ. ಕುತೂಹಲವು

ನಿರಾಶೆಯನ್ನೂ ಸಂತೋಷವು ವ್ಯಥೆಯನ್ನೂ ಬೆಳದಿಂಗಳು ಕತ್ತಲನ್ನೂ ಎದುರಿಸಿ ನಿಂತಿರುವ ಒಂದು ಸಂದರ್ಭವನ್ನು ಕವಿ ಇಲ್ಲಿ ತೋರಿಸಿದ್ದಾನೆ. ತಾಯಿ ತನ್ನಿಂದ ನಿರೀಕ್ಷಿಸುವ ಸಂತೋಷವನ್ನು ತಾನು ಅವಳಿಗೆ ಕೊಡುವುದಕ್ಕೆ ಇಲ್ಲವೆಂಬ ಕಾರಣದಿಂದ ರಾಮನಿಗೆ ನಾಚಿಕೆ. ಅವನು ಕೈಕಯಿಯ ಮಂದಿರದಲ್ಲಿ ನಡೆದ ಮಾತನ್ನು ತಾಯಿಗೆ ಹೇಳಿ, ತಾನು ಅರಣ್ಯಕ್ಕೆ ಹೋಗಬೇಕಾಗಿದೆಯೆಂದೂ ಭರತನು ರಾಜ್ಯವನ್ನಾಳುವನೆಂದೂ ತಿಳಿಸಿದನು. ಕೌಸಲ್ಯಾದೇವಿ ಕೊಡಲಿಯಿಂದ ಕಡಿದ ಸಾಲ ಯಷ್ಟಿಯಂತೆ ನೆಲಕ್ಕೆ ಬಿದ್ದಳು. ರಾಮನು ತಾಯನ್ನು ಮೇಲಕ್ಕೆ ಎತ್ತಿದನು. ಧೂಳಾದ ಆಕೆಯ ಮೈಯಿಂದ ಧೂಳನ್ನು ಕೊಡಹಿದನು. ಕೌಸಲ್ಯೆ ಎಚ್ಚೆತ್ತು "ಅಪ್ಪಾ, ನೀನು ಹುಟ್ಟದೆ ಇದ್ದಿದ್ದರೆ ನಾನು ಈ ದುಃಖವನ್ನು ಕಾಣುತ್ತಿರಲಿಲ್ಲ. ಮಕ್ಕಳಿಲ್ಲದವರಿಗೆ ಮಕ್ಕಳಿಲ್ಲವೇ ಎಂಬುದು ಒಂದೇ ದುಃಖ. ಅವರು ಬೇರೆಯ ದುಃಖವನ್ನು ಕಾಣರು. ನಾನು ಗಂಡನೊಂದಿಗೆ ಸಂಸಾರಮಾಡಿ ಸುಖ ಸೌಭಾಗ್ಯಗಳನ್ನು ಕಂಡವಳಲ್ಲ. ಹಿರಿಯ ಹೆಂಡತಿಯಾದರೂ ಬೇರೆಯ ಹೆಂಡಿರಿಂದ ಅನೇಕ ಸಣ್ಣ ಮಾತನ್ನು ಕೇಳಿ ಅನುಭವಿಸಿದೆನು. ನೀನು ಇಲ್ಲಿರುವಾಗಲೇ ಹೀಗಾದಮೇಲೆ ಕಾಡಿಗೆ ಹೋದ ಮೇಲೆ ಇನ್ನೇನು ? ನನಗೆ ಸಾವೇ ನಿಜ ; ಇನ್ನು ನನ್ನನ್ನು ಸೇವಿಸುವರು ಯಾರು, ಅನುಸರಿಸುವರು ಯಾರು ? ಇನ್ನು ನಾನು ಕೈಕಯಿಯ ಪರಿವಾರದ ಜನಕ್ಕೆ ಸಮ ; ಅಥವಾ ಅದಕ್ಕೂ ಕೀಳು. ನಿನ್ನ ಮುಖವನ್ನು ನೋಡದೆ ನಾನು ದಿನಗಳನ್ನು ಹೇಗೆ ಕಳೆಯಲಿ ? ಉಪವಾಸ ಯೋಗಗಳನ್ನು ಮಾಡಿ ಬಹು ವಿಧವಾದ ಶ್ರಮವನ್ನು ಅನುಭವಿಸಿ ನಾನು ನಿನ್ನನ್ನು ಬೆಳೆಸಿದೆನು. ಎಲ್ಲ ವ್ಯರ್ಥವಾಯಿತು. ಈ ಮಾತನ್ನು ಕೇಳಿಯೂ ನನ್ನ ಹೃದಯ ಒಡೆಯದಿದೆಯಲ್ಲ. ಅದು ನಿಜವಾಗಿಯೂ ಸ್ಥಿರವಾದದು. ಮೃತ್ಯು ನನ್ನನ್ನು ಅರಿಯದೆಂದೇ ಕಾಣುತ್ತದೆ. ಅಥವಾ ಯಮನ ಮಂದಿರದಲ್ಲಿ ನನಗೆ ಸ್ಥಳವಿಲ್ಲದೆ ಹೋಗಿರಬೇಕು. ಅಂತಕನು ಅದರಿಂದಲೇ ನನ್ನನ್ನು ಇನ್ನೂ ಕೊಂಡು ಹೋಗಲಿಲ್ಲ. ನೀನಿಲ್ಲದೆ ನಾನು ಬದುಕಿ ಆಗತಕ್ಕದೇನು ? ನಾನು ನಿನ್ನ ಹಿಂದೆಯೇ ಬರುತ್ತೇನೆ" ಎಂದಳು. ಹೀಗೆ ದುಃಖಿಸುತ್ತಿರುವ ಕೌಸಲ್ಯೆಯನ್ನು ನೋಡಿ ಲಕ್ಷ್ಮಣನು "ತಾಯಿ,

ಹೆಂಗಸೊಬ್ಬಳ ಮಾತಿಗಾಗಿ ರಾಮನು ರಾಜ್ಯವನ್ನು ಬಿಟ್ಟು ವನಕ್ಕೆ ಹೋಗುವುದೆನ್ನುವುದು ನನಗಾದರೂ ಒಪ್ಪಲಿಲ್ಲ. ವಿಪರೀತನೂ, ವೃದ್ಧನೂ, ವಿಷಯದಿಂದ ಪ್ರಧರ್ಷಿತನೂ ಆದ ನೃಪನು ಹೆಣ್ಣಿನ ಮೋಹಕ್ಕಾಗಿ ಯಾವುದನ್ನು ಹೇಳದೆ ಬಿಡುವನು ? ರಾಮನನ್ನು ರಾಷ್ಟ್ರದಿಂದ ಹೊರಡಿಸಿ ವನಕ್ಕೆ ಅಟ್ಟಬೇಕಾದಂಥ ದೋಷ ಅಥವಾ ಅಪರಾಧ ಅವನಲ್ಲಿ ಯಾವುದಿದೆಯೋ ನಾನು ಅದನ್ನು ಕಾಣೆ. ಅವನ ಹಗೆಯಾಗಲಿ ಅವನಿಂದ ಶಿಕ್ಷಿಸಲ್ಪಟ್ಟವನಾಗಲಿ ಅವನ ವಿಷಯದಲ್ಲಿ ದೋಷವನ್ನೆಣಿಸುವವರನ್ನು ನಾನು ಅರಿಯೆನು. ದೇವಕಲ್ಪನೂ, ಋಜುಮಾರ್ಗ ಪ್ರವರ್ತಕನೂ, ದಾಂತನೂ, ಹಗೆಗಳಿಗಾದರೂ ವಾತ್ಸಲ್ಯವನ್ನು ತೋರಿಸುವವನೂ ಆದ ಧರ್ಮಿಷ್ಠನಾದ ಪುತ್ರನನ್ನು ನಿಷ್ಕಾರಣವಾಗಿ ಯಾರು ತಾನೇ ತೊರೆಯುವರು" ಎಂದು ಹೇಳಿ, ಅಣ್ಣನನ್ನು ಕುರಿತು "ಅಣ್ಣ, ನಾನೂ ನೀನೂ ಜೊತೆಯಾಗಿ ನಿಂತರೆ ನಮ್ಮನ್ನು ಮೀರುವವರು ಯಾರು ? ಯಾರಾದರೂ ಎದುರಿಸಿದರೆ ಅವರನ್ನು ಕೊಂದುಹಾಕುವೆನು. ತಂದೆ ಕೈಕಯಿಂದ ಪ್ರೋತ್ಸಾಹಿತನಾಗಿ ವಿರೋಧಿಸುವುದಾದರೆ ಅವನನ್ನು ಕೊಲ್ಲುವುದು ಅಥವಾ ಕಟ್ಟಿಹಾಕುವುದು. ಕಾರ್ಯಾಕಾರ್ಯವನ್ನು ಕಾಣದ ಮನುಷ್ಯನು ಹಿರಿಯನಾದರೂ ಶಿಕ್ಷಾರ್ಹನು" ಎಂದು, ಮತ್ತೆ ಕೌಸಲ್ಯೆಯನ್ನು ಕುರಿತು "ತಾಯಿ, ನಾನು ರಾಮನಲ್ಲಿ ಅನುರಕ್ತನಾಗಿದೇನೆ. ಸತ್ಯದಿಂದ ಧನುಸ್ಸಿನಿಂದ ದಾನದಿಂದ ಯಜ್ಞದಿಂದ ಆಣೆಮಾಡಿ ಹೇಳುತ್ತೇನೆ. ಹೊತ್ತಿದ ಅಗ್ನಿಯನ್ನಾಗಲಿ ಅರಣ್ಯವನ್ನಾಗಲಿ ರಾಮನು ಯಾವಾಗ ಪ್ರವೇಶಿಸುವನೋ ಆ ಅಗ್ನಿ ಆ ಅರಣ್ಯವನ್ನು ಅವನಿಗೂ ಮೊದಲು ನಾನು ಪ್ರವೇಶಿಸುತ್ತೇನೆ. ನೀನು ನೋಡು, ನನ್ನ ಶೌರ್ಯದಿಂದ ನಿನ್ನ ಈ ದುಃಖವನ್ನು ಹರಿಸುತ್ತೇನೆ. ನೀನು ನೋಡು, ರಾಮನೂ ನೋಡಲಿ" ಎಂದು ಕೂಗಾಡಿದನು. ಲಕ್ಷ್ಮಣನ ಈ ಮಾತನ್ನು ಕೇಳಿ ಕೌಸಲ್ಯೆಗೆ ಸ್ವಲ್ಪ ಆಸೆ ತಲೆದೋರಿತು. ಈ ಹುಡುಗನ ಆರ್ಭಟದಿಂದ ಜನರು ಹೆದರಿ ರಾಮನ ವನವಾಸದ ಮಾತು ನಿಲ್ಲುವುದೇನೋ ಎಂದು, ಅಥವಾ ರಾಮನೂ ಲಕ್ಷ್ಮಣನೂ ಒಂದಾಗಿ ಶತ್ರುಪಕ್ಷವನ್ನು ಅಡಗಿಸಿದರೂ ಅಡಗಿಸಬಹುದು ಎಂದು, ಅವಳಿಗೆ ಚಪಲ. ರಾಮನು ಶಕ್ತಿಯಿಲ್ಲದ

ಕಾರಣದಿಂದ ಅಥವಾ ಯಾರೊಬ್ಬರ ಭಯದಿಂದ ಅಥವಾ ಬಲವಂತದಿಂದ ಅರಣ್ಯಕ್ಕೆ ಹೋಗುತ್ತಿಲ್ಲ ಎನ್ನುವುದು ಆಕೆಗೆ ತಿಳಿಯಲಿಲ್ಲ. ಊರಿನಲ್ಲಿರುವುದಕ್ಕೆ ಅಧಿಕಾರವುಳ್ಳವನು, ಊರಿನಲ್ಲಿ ನಿಲ್ಲುವುದಕ್ಕೆ ಶಕ್ತಿಯುಳ್ಳವನು, ಕಾಡಿಗೆ ತಾನಾಗಿ ಏಕೆ ಹೋಗುವನು ? ಇದು ಪ್ರಾಯಶಃ ಯಾರಿಗಾದರೂ ಹುಟ್ಟುವ ಸಂದೇಹವೇ. ರಾಮನನ್ನು ಕಾಡಿಗೆ ಅಟ್ಟುತ್ತಿದ್ದದು ಕೈಕಯಿಯೂ ಅಲ್ಲ, ದಶರಥನೂ ಅಲ್ಲ; ರಾಮನಲ್ಲಿಯೇ ಇದ್ದ ಧರ್ಮ ವಿವೇಚನೆ. ಕತ್ತಿಯ ಅಲಗಿನಂತೆ ಸೂಕ್ಷ್ಮವಾದ ಧರ್ಮದ ಪಥದಲ್ಲಿ ರಾಮನು ಎಡೆತಪ್ಪದೆ ನಡೆಯಲಪೇಕ್ಷಿಸಿದನು. ಆ ಪಥ ಕತ್ತಿಯ ಅಲಗಿನಂತೆ ಹರಿತವಾದುದೂ ಹೌದು. ಉಳಿದವರಿಗೆ ಆ ಪಥ ಇಷ್ಟು ಹರಿತವೆಂದು ಕಂಡಿತು ; ಇಷ್ಟು ಸೂಕ್ಷ್ಮವೆಂದು ಕಾಣದೆಹೋಯಿತು. ರಾಣಿ ಮಗನನ್ನು ಕುರಿತು "ಮಗು, ನಿನ್ನ ತಮ್ಮನ ಮಾತನ್ನು ಕೇಳಿದೆಯಲ್ಲವೆ ? ಇನ್ನು ಮಾಡಬೇಕಾದ ಕೆಲಸವನ್ನು ಮಾಡು. ನನ್ನ ಸವತಿಯ ಅಧರ್ಮ ವಾಕ್ಯವನ್ನು ಕೇಳಿ ನನ್ನನ್ನು ಇಲ್ಲಿ ಬಿಟ್ಟು ಹೊರಟುಹೋಗುವುದು ನಿನಗೆ ತಕ್ಕದಲ್ಲ. ಧರ್ಮ ಧರ್ಮ ಎಂದು ಧರ್ಮವನ್ನು ನಡೆಸಲೆಳಸುವ ನೀನು ಇಲ್ಲಿಯೇ ಇದ್ದು ನನ್ನ ಶುಶ್ರೂಷೆಯನ್ನು ಮಾಡು. ಇದು ಎಲ್ಲಕ್ಕೂ ಹೆಚ್ಚಿನ ಧರ್ಮ. ನಿನಗೆ ರಾಜನು ಹೇಗೆ ಪೂಜ್ಯನೋ ಹಾಗೆಯೇ ನಾನೂ ಪೂಜ್ಯಳು. ನೀನು ನನ್ನನ್ನು ಬಿಟ್ಟು ಹೊರಟುಹೋದರೆ ನಾನು ಜೀವಿಸಲಾರೆನು ; ಪ್ರಾಣಗಳನ್ನು ಕಳೆದುಕೊಳ್ಳುವೆನು. ನಿನಗೆ ನಿರಯ ಉಂಟಾಗುವುದು" ಎಂದಳು. ರಾಮನು ಅವಳಿಗೆ "ತಂದೆಯ ಮಾತನ್ನು ಮೀರುವುದಕ್ಕೆ ನನಗೆ ಶಕ್ತಿಯಿಲ್ಲ. ನನಗೆ ಅಪ್ಪಣೆ ಕೊಡು. ನಾನು ಧರ್ಮವೆಂದು ಮಾಡುತ್ತಿರುವುದು ಇದುವರೆಗೆ ಹಿರಿಯರು ಮಾಡಿರತಕ್ಕದೇ. ತಂದೆ ಕೊಟ್ಟ ಮಾತನ್ನು ನಡೆಸುವುದರಲ್ಲಿ ನಾನು ಹೊಸದೇನನ್ನೂ ಮಾಡುತ್ತಿಲ್ಲ. ಇದನ್ನು ಮಾಡುವುದರಿಂದ ನನಗೆ ಕೆಟ್ಟದಾಗುವುದಿಲ್ಲ" ಎಂದು ಹೇಳಿ, ಲಕ್ಷ್ಮಣನನ್ನು ಕುರಿತು "ತಮ್ಮ ಲಕ್ಷ್ಮಣ, ನಿನಗೆ ನನ್ನಲ್ಲಿ ಎಷ್ಟು ಸ್ನೇಹವಿದೆಯೆಂದು ನಾನು ಬಲ್ಲೆನು. ನಿನ್ನ ಪರಾಕ್ರಮವೂ ಸತ್ಯವೂ ತೇಜಸ್ಸೂ ದುಸ್ಸಹವಾದುವೆಂದು ನನಗೆ ತಿಳಿದಿದೆ. ನಮ್ಮ ತಾಯಿಯ ಈ ದುಃಖ ಅತುಲವಾದದೆಂದು ಕೂಡ ನಾನು ಬಲ್ಲೆನು. ಆದರೆ ಅಣ್ಣ, ಎಲ್ಲಕ್ಕಿಂತ

ಧರ್ಮ ಹಿರಿದು. ಧರ್ಮದಲ್ಲಿ ಸತ್ಯ ಮುಖ್ಯ. ನಮ್ಮ ತಂದೆಯ ಮಾತು ನಡೆಯುವುದೆನ್ನುವುದು ಈ ಕಾರಣದಿಂದ ನಮಗೆ ಧರ್ಮ ಸಂಶ್ರಿತವಾಗಿದೆ. ಆದುದರಿಂದ ನೀನು ಈ ನಿನ್ನ ಕ್ಷಾತ್ರಮತಿಯನ್ನು ಬಿಡಬೇಕು, ಧರ್ಮ ವನ್ನು ಹಿಡಿಯಬೇಕು'' ಎಂದು ಹೇಳಿ, ಪುನಃ ಕೌಸಲ್ಯೆಗೆ ''ನನಗೆ ಅಪ್ಪಣೆ ಕೊಡು ತಾಯಿ. ನನ್ನಾಣೆ, ನನಗೆ ಆಶೀರ್ವಾದಮಾಡಿ ನನ್ನನ್ನು ಕಳುಹಿಸಿಕೊಡು. ಪ್ರತಿಜ್ಞೆಯನ್ನು ನಡೆಸಿ ನಾನು ಪುನಃ ನಗರಕ್ಕೆ ಬರು ತ್ತೇನೆ. ನೀನೂ ನಾನೂ ಲಕ್ಷ್ಮಣನೂ ಸುಮಿತ್ರಾದೇವಿಯೂ ತಂದೆಯ ಅಪ್ಪಣೆಯಂತೆ ನಡೆಯಬೇಕು. ಇದು ಸನಾತನವಾದ ಧರ್ಮ'' ಎಂದು ಬೇಡಿದನು. ಕೌಸಲ್ಯೆಗೆ ಈ ಸನಾತನವಾದ ಧರ್ಮದ ರಹಸ್ಯ ಮನ ಹೊಗಲಿಲ್ಲ. ''ನಿನಗೆ ತಂದೆ ಹೇಗೋ ಹಾಗೆ ನಾನೂ ಹಿರಿಯಳೇ. ನನ್ನನ್ನು ಬಿಟ್ಟು ನೀನು ವನಕ್ಕೆ ಹೋಗುವುದು ತಕ್ಕದಲ್ಲ. ನಾನು ಅನುಜ್ಞೆ ಯನ್ನು ಕೊಡಲಾರೆನು. ನೀನಿಲ್ಲದೆ ನನಗೆ ಬದುಕಿನಿಂದ ಆಗಬೇಕಾ ದದೇನು? ನನಗೆ ಎಲ್ಲಕ್ಕಿಂತ ನೀನು ಹೆಚ್ಚು,'' ಎಂದು ಅವಳು ಮಗ ನನ್ನು ಮತ್ತೆ ತಡೆದಳು. ಪ್ರಾಯಶಃ ಹೆಂಡತಿ ಗಂಡನಿಗೆ ಹೇಳಬಹುದಾ ದಂಥ ಮಾತುಗಳನ್ನು ತಾಯಿ ಮಗನಿಗೆ ಹೇಳುತ್ತಿದ್ದಳೆಂದು ಇಲ್ಲಿ ನಮಗೆ ತಿಳಿಯಬೇಕು. ರಾಮನು ಲಕ್ಷ್ಮಣನಿಗೆ ಮತ್ತೆ ಹೇಳಿದನು: ''ಧರ್ಮವೂ, ಅರ್ಥವೂ, ಕಾಮವೂ ಧರ್ಮದಿಂದಲೇ ದೊರೆಯಬೇಕು. ಮನುಷ್ಯನು ಇವು ಮೂರೂ ಸೇರಿರುವ ಕರ್ಮವನ್ನು ಮಾಡಬೇಕು. ಮೂರೂ ಸೇರ ದಿರುವಲ್ಲಿ ಧರ್ಮ ಯಾವುದರಲ್ಲಿದೆಯೋ ಅದನ್ನು ಮಾಡಬೇಕು. ಧರ್ಮ ಇಲ್ಲದೆ ಅರ್ಥ ಇರುವುದನ್ನು ಮಾಡಿದರೆ ಮನುಷ್ಯನು ದ್ವೇಷ್ಯನಾಗುತ್ತಾನೆ. ಧರ್ಮವಿಲ್ಲದೆ ಕಾಮವಿರುವುನ್ನು ಮಾಡಿದರೆ ಅಯೋಗ್ಯನಾಗುತ್ತಾನೆ. ನಾವೆಲ್ಲ ತಂದೆಯ ಮಾತನ್ನು ನಡೆಸಬೇಕು. ನಮ್ಮ ತಾಯಿಗಾದರೂ ಅವನು ಭರ್ತಾ, ಗತಿ, ಧರ್ಮ. ನಮ್ಮ ತಂದೆ ಅರಸಾಗಿ ಆಳುತ್ತ ಜೀವಂತನಾಗಿರುವ ನಮ್ಮ ತಾಯಿ ವಿಧವೆಯಾದ ಹೆಂಗಸಂತೆ ನನ್ನೊಡನೆ ಬರಬಹುದು ಹೇಗೆ?'' ಹೀಗೆಂದು ಅವನು ತಾಯನ್ನು ಕುರಿತು ''ತಾಯಿ, ಅಪ್ಪಣೆ ಕೊಡು. ಬರಿಯ ದೊರೆತನದಷ್ಟಕ್ಕಾಗಿ ಯಶಸ್ಸನ್ನು ತೊರೆಯ ಬಾರದು. ಜೀವಿತ ದೀರ್ಘವಲ್ಲ. ಅಲ್ಪಮಾನದ ಜೀವನದಲ್ಲಿ ಧರ್ಮವನ್ನು

ಬಿಟ್ಟು ಅಲ್ಪವಾದ ದೊರೆತನವನ್ನು ನಾನು ವರಿಸಲಾರೆನು'' ಎಂದನು. ಇರುವ ಕೊಂಚ ದಿನದಲ್ಲಿ ಉತ್ತಮವಾದ ಫಲ ಯಾವುದೋ ಅದನ್ನು ಸಾಧಿಸಬೇಕು. ರಾಜ್ಯ, ಧರ್ಮ ಇವುಗಳಲ್ಲಿ ಧರ್ಮ ಹೆಚ್ಚಿನ ಫಲ; ರಾಜ್ಯ ಕಡಮೆಯದು. ಇದು ರಾಮನ ಮನಸ್ಸಿನ ನಿಶ್ಚಯ. ಸೌಮಿತ್ರಿಗೆ ಇನ್ನೂ ಕೋಪ ಇಳಿದಿರಲಿಲ್ಲ; ರಾಮನು ಅವನಿಗೆ ಇನ್ನೂ ಸಮಾಧಾನ ಹೇಳಬೇಕಾಯಿತು. ಅವನು ''ಇದೆಲ್ಲ ದೈವದ ಕರ್ಮ. ಕೈಕಯಿಯ ವಿಷಯದಲ್ಲಿ ದ್ವೇಷವನ್ನೆಣಿಸಬೇಡ'' ಎಂದನು. ಲಕ್ಷ್ಮಣನು ''ವಿಕ್ಲಬನೂ ವೀರ್ಯಹೀನನೂ ಆದವನು ದೈವವನ್ನು ಅನುವರ್ತಿಸಬೇಕು. ಸಂಭಾವಿತಾತ್ಮರಾದ ವೀರರು ದೈವವನ್ನು ಉಪಾಸನೆಮಾಡುವುದಿಲ್ಲ. ಅವರು ತಮ್ಮ ಯತ್ನದಿಂದ ದೈವವನ್ನು ಪ್ರಬಾಧಿಸಬಲ್ಲರು. ಅವರು ದೈವದಿಂದ ಅನರ್ಥ ಒದಗಿದಾಗ ಅದರಿಂದ ಕ್ಲೇಶಪಡುವುದಿಲ್ಲ. ದೈವದಿಂದ ಇದು ಯಾವುದೂ ಆಗಬೇಕಾದದಿಲ್ಲವೆಂದು ನಾನು ಈಗ ತೋರಿಸಿಯೇನು. ಈ ನನ್ನ ತೋಳುಗಳು ಬರಿಯ ಸೊಗಸಿಗಾಗಿ ಇಲ್ಲ. ಈ ಬಿಲ್ಲನ್ನು ನಾನು ಭೂಷಣಕ್ಕಾಗಿ ಹಿಡಿದಿಲ್ಲ. ಈ ರಾಜ್ಯ ನಿನಗೆ ವಶವಾಗುವ ದಾರಿ ಯಾವುದೋ ಅದನ್ನು ನನಗೆ ಹೇಳು. ಅದನ್ನು ಸಾಧಿಸುವುದರಲ್ಲಿ ನಾನು ನಿನ್ನ ಕಿಂಕರನು'' ಎಂದನು. ರಾಮನು ಇಷ್ಟೆಲ್ಲ ಮಾತಿಗೆ ಒಂದೇ ಮಾತನ್ನು ಹೇಳಿದನು. ''ತಮ್ಮ, ನಾನು ತಂದೆಯ ಮಾತಿನ ಅಂಕೆಯಲ್ಲಿ ಇದೇನೆ. ಇದನ್ನು ತಿಳಿ. ಇದೇ ಒಳ್ಳೆಯ ದಾರಿ'' ಎಂದನು. ಪಿತೃವಾಕ್ಯಪರಿಪಾಲನದಲ್ಲಿ ನಿಶ್ಚಲನಾಗಿದ್ದ ರಾಮನನ್ನು ನೋಡಿ ಕೌಸಲ್ಯೆ ''ಇದುವರೆಗೆ ಕಷ್ಟವನ್ನು ನೋಡದ ನನ್ನ ಮತ್ತು ದಶರಥನ ಕುಮಾರನು ಭಿಕ್ಷದಲ್ಲಿ ಹೇಗೆ ಜೀವಿಸುವುದು? ಯಾವನ ಭೃತ್ಯರೂ ದಾಸರೂ ಮೃಷ್ಟಾನ್ನವನ್ನು ಭುಜಿಸುವರೋ ಅಂಥವನು ವನದಲ್ಲಿ ಫಲ ಮೂಲಗಳನ್ನು ತಿಂದು ಹೇಗೆ ಜೀವಿಸುವನು? ಮುಖ್ಯ, ಅದೃಷ್ಟದ ಬಲವೇ ಬಲ. ಇಂಥದನ್ನು ಅದು ನಡೆಯಿಸಿಬಿಡುತ್ತದೆ. ಮಗನೇ, ನಾನು ನೀನು ಹೋದಲ್ಲಿಗೆ ಬರುತ್ತೇನೆ'' ಎಂದಳು. ರಾಮನು ಅವಳಿಗೆ ''ರಾಜನು ಕೈಕಯಿಯಿಂದ ವಂಚಿತನಾಗಿದಾನೆ. ನೀನೂ ಅವನನ್ನು ಪರಿತ್ಯಜಿಸಿದರೆ ಅವನು ಬದುಕಿರಲಾರನು. ಭರ್ತೃಪರಿತ್ಯಾಗ ಸ್ತ್ರೀಯರಿಗೆ ತಕ್ಕದಲ್ಲ. ನಮ್ಮ ತಂದೆ ಜೀವಂತನಾಗಿರುವಷ್ಟು ದಿನವೂ

ನೀನು ಅವನ ಸೇವೆಯನ್ನು ಮಾಡತಕ್ಕದು. ಇದು ಸನಾತನಧರ್ಮ'' ಎಂದು ಅರಿಕೆಮಾಡಿದನು. ಇಷ್ಟು ಮಾತಾದಮೇಲೆ ಕೌಸಲ್ಯಾದೇವಿ ಹಾಗೆಯೇ ಆಗಲೆಂದಳು. ರಾಮನು ತಾಯಿಗೆ '' ಹದಿನಾಲ್ಕು ವರ್ಷದ ದಿನ ವನದಲ್ಲಿ ವಿಹರಿಸಿ ನಾನು ನಿನ್ನ ಆಜ್ಞೆಯನ್ನು ನಡೆಸುವುದಕ್ಕೆ ಸುಖದಿಂದ ಹಿಂತಿರುಗುತ್ತೇನೆ'' ಎಂದನು. ತಾಯಿ ಅವನಿಗೆ ಸ್ವಸ್ತ್ಯಯನವನ್ನು ಆಚರಿಸಿದಳು. '' ಅರಣ್ಯಕ್ಕೆ ಹೋಗದೆ ಇರಲು ಆಗುವುದಿಲ್ಲ: ಆಗುವುದಿಲ್ಲ ವಾದರೆ ಹೋಗಿಬಾ. ಆದರೆ ಶೀಘ್ರದಲ್ಲಿ ಹಿಂತಿರುಗು. ಧೃತಿಯಿಂದಲೂ ನಿಯಮದಿಂದಲೂ ನೀನು ಯಾವ ಧರ್ಮವನ್ನು ಪಾಲಿಸುತ್ತೀಯೋ ಅದೇ ಧರ್ಮ ನಿನ್ನನ್ನು ರಕ್ಷಿಸಲಿ. ನೀನು ಚೈತ್ಯ ಆಯತನಗಳಲ್ಲಿ ಯಾವುದಕ್ಕೆ ಪ್ರಣಾಮಮಾಡುತ್ತೀಯೋ ಅದು ನಿನ್ನನ್ನು ವನದಲ್ಲಿ ಮಹರ್ಷಿಗಳ ಜೊತೆಗೆ ರಕ್ಷಿಸಲಿ. ಪತಂಗಗಳು ಪನ್ನಗಗಳು ಸಿಂಹಗಳು ನಿನ್ನನ್ನು ರಕ್ಷಿಸಲಿ. ಋತುಗಳು ಪಕ್ಷಗಳು, ಮಾಸ ಸಂವತ್ಸರಗಳು, ಹಗಲು ಇರುಳುಗಳು, ಘಳಿಗೆ ಮುಹೂರ್ತಗಳು, ನಿನಗೆ ಒಳ್ಳೆಯದನ್ನು ಮಾಡಲಿ. ಆಕಾಶ ಅಂತರಿಕ್ಷ, ಪೃಥಿವಿ ಸಮಸ್ತ ನದಿಗಳು, ನಕ್ಷತ್ರಗಳು ಸರ್ವಗ್ರಹ ಗಳು ಎಲ್ಲ ದೇವತೆಗಳು, ಎಲ್ಲ ವೇಳೆಯಲ್ಲಿ ನಿನ್ನನ್ನು ಪಾಲಿಸಲಿ. ರೌದ್ರರೂ ಕ್ರೂರಕರ್ಮಿಗಳೂ ಕ್ರವ್ಯಾದರೂ ಆದ ರಾಕ್ಷಸರಿಂದ ಪಿಶಾಚರಿಂದ ನಿನಗೆ ತೊಂದರೆಯಾಗದಿರಲಿ. ಕೋಡಗ ಚೇಳಿನಿಂದ ಹುಳು ಹುಟ್ಟರೆಯಿಂದ ಹಾವು ಹಕ್ಕಿಗಳಿಂದ ನಿನಗೆ ತೊಂದರೆಯಾಗದಿರಲಿ.'' ಹೀಗೆ ಕೌಸಲ್ಯಾ ದೇವಿ ಮಗನಿಗೆ ರಕ್ಷೆಹಾಕಿ, '' ಸರ್ವದೇವನಮಸ್ಕೃತನಾದ ಸಹಸ್ರಾಕ್ಷನಿಗೆ ವೃತ್ರನಾಶಕ್ಕೆ ಹೊರಟವೇಳೆ ಯಾವ ಮಂಗಳವೋ ಅದು ನಿನಗಾಗಲಿ. ಗರುತ್ಮಂತನಿಗೆ ಅವನು ಅಮೃತ ತರಲು ಹೊರಟವೇಳೆ ವಿನತೆ ಯಾವ ಮಂಗಳವನ್ನು ಮಾಡಿದಳೋ ನಿನಗೆ ಅದೇ ಮಂಗಳವಾಗಲಿ. ಅಮೃತೋ ತ್ಪಾದನ ಕಾಲದಲ್ಲಿ ದೈತ್ಯಘ್ನ ವಜ್ರಧರನಿಗೆ ಅದಿತಿ ಯಾವ ಮಂಗಳವನ್ನು ಮಾಡಿದಳೋ ಅದು ನಿನಗಾಗಲಿ. ಅಮಿತತೇಜಸನಾದ ವಿಷ್ಣುವಿಗೆ ತ್ರಿವಿಕ್ರಮ ಪ್ರಕ್ರಮದ ವೇಳೆ ಯಾವ ಮಂಗಳವಾಯಿತೋ ಅದು ನಿನಗಾಗಲಿ,'' ಎಂದು ಮಂಗಳವನ್ನು ಬಯಸಿ ಅವನ ಮಂಡೆಯನ್ನು ಆಘ್ರಾಣಿಸಿ ಅವನನ್ನು ಅಪ್ಪಿಕೊಂಡು '' ಮಗನೆ, ಸುಖವಾಗಿ ಹೋಗಿಬಾ.

ನಿನ್ನ ಸಂಕಲ್ಪವನ್ನು ನೆರವೇರಿಸಿ ನೀನು ಅಯೋಧ್ಯೆಗೆ ಹಿಂತಿರುಗಿ ಬರುವುದನ್ನು ನೋಡುತ್ತೇನೆ," ಎಂದಳು. ರಾಮನು ತಾಯಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಸೀತೆಯ ಅನುಮತಿಯನ್ನು ಪಡೆಯುವುದಕ್ಕಾಗಿ ತನ್ನ ಮಂದಿರಕ್ಕೆ ಹೊರಟನು.

### ಸೀತೆಯ ಹಟ

ವಾಡಿಕೆಯ ಮರ್ಯಾದೆ ಪರಿವಾರಗಳಿಲ್ಲದೆ ಒಬ್ಬನೇ ಬಂದ ರಾಮನನ್ನು ನೋಡಿ ಸೀತೆಯ ಮನಸ್ಸಿಗೆ ಶಂಕೆಯುಂಟಾಯಿತು. ಅವಳು ಪತಿಯನ್ನು ಒಡನೆಯೇ ಇದೇನು ಹೀಗೆ ಬಂದಿದೀಯೆ ಎಂದು ಕೇಳಿದಳು. ರಾಮನು ಅವಳಿಗೆ ವಿಷಯವನ್ನು ತಿಳಿಸಿದನು. "ನಾನು ಹದಿನಾಲ್ಕು ವರ್ಷ ವನವಾಸ ಹೋಗುತ್ತೇನೆ. ಭರತನು ಯುವರಾಜನಾಗಿರುತ್ತಾನೆ. ವನಕ್ಕೆ ಹೋಗುವ ಮೊದಲು ನಿನ್ನನ್ನು ನೋಡಿ ಹೋಗಲು ಬಂದಿದೇನೆ. ಭರತನ ಸಮೀಪದಲ್ಲಿ ನನ್ನನ್ನು ಯಾವಾಗಲೇ ಆಗಲಿ ಹೊಗಳಬಾರದು. ಋದ್ಧಿಯುಕ್ತರಾದ ಜನರು ಪರಸ್ತವವನ್ನು ಸಹಿಸುವುದಿಲ್ಲ. ನೀನು ಅರಮನೆಯಲ್ಲಿ ವಿಶೇಷ ಸುಖಗಳನ್ನಪೇಕ್ಷಿಸದೆ ಅವನಿಗೆ ವಿರೋಧ ಕಾಣದಂತೆ ನಡೆದುಕೊಳ್ಳಬೇಕು. ನಾನು ಅರಣ್ಯಕ್ಕೆ ಹೋಗಲಾಗಿ ನೀನು ವ್ರತೋಪವಾಸಗಳಲ್ಲಿ ಮನಸ್ಸನ್ನಿಟ್ಟು ಹೊತ್ತು ಹೊತ್ತಿಗೆ ಯಥಾ ವಿಧಿಯಾಗಿ ದೇವರ ಪೂಜೆಗಳನ್ನು ಮಾಡುತ್ತಾ ನಮ್ಮ ತಂದೆ ದಶರಥನಿಗೂ ವೃದ್ಧಳೂ ಸಂತಾಪಕರ್ಶಿತಳೂ ಆದ ನಮ್ಮ ತಾಯಿ ಕೌಸಲ್ಯಾದೇವಿಗೂ ಗೌರವ ತೋರಿಸುತ್ತ ಇರಬೇಕು. ಉಳಿದ ನಮ್ಮ ತಾಯಂದಿರು ಅವಳಂತೆಯೇ ವಂದಿತವ್ಯರು. ಭರತ ಶತ್ರುಘ್ನರು ನನಗೆ ಪ್ರಾಣಕ್ಕಿಂತ ಪ್ರಿಯರಾದವರು. ನೀನು ಅವರನ್ನು ಭ್ರಾತೃಗಳಂತೆ ಪುತ್ರರಂತೆ ಕಾಣಬೇಕು. ನೀನು ಭರತನಿಗೆ ಯಾವಾಗಲಾಗಲಿ ವಿಪ್ರಿಯವನ್ನು ಮಾಡಲಾಗದು. ಅವನು ರಾಜನು. ದೇಶಕ್ಕೂ ಕುಲಕ್ಕೂ ಪ್ರಭು. ನಾನು ಅರಣ್ಯಕ್ಕೆ ಹೋಗಿ ಬರುತ್ತೇನೆ" ಎಂದನು. ರಾಮನ ಮಾತನ್ನು ಕೇಳಿ ಸಿತಾದೇವಿಗೆ ಕೋಪಬಂದಿತು. ಅವಳು ಅವನಿಗೆ "ರಾಮ, ಇದು ಏನು ನೀನು ಹೇಳುತ್ತಿರುವುದು ? ನಿನ್ನ ನಿಶ್ಚಯವೆಂದು ಇಷ್ಟು ಹಗುರವಾಗಿ ನೀನು ಹೇಳುವ ಈ ಮಾತನ್ನು ಕೇಳಿ ನನಗೆ ನಗೆ ಬರುತ್ತಿದೆ.

ತಂದೆ ತಾಯಿ ಸೋದರರು ಮಕ್ಕಳು ಸೊಸೆ ಇವರೆಲ್ಲ ಅವರವರ ಪುಣ್ಯವನ್ನು ಅನುಭವಿಸುತ್ತಾರೆ, ಅವರವರ ಭಾಗ್ಯವನ್ನು ಸಾಧಿಸುತ್ತಾರೆ. ಹೆಂಡತಿ ಒಬ್ಬಳಿಗೆ ಪುಣ್ಯವೂ ಭಾಗ್ಯವೂ ಬೇರೆ ಇಲ್ಲ ; ಅವಳು ಪತಿಯ ಭಾಗ್ಯವನ್ನು ಪಡೆಯುತ್ತಾಳೆ. ಆದಕಾರಣ ನಿನ್ನನ್ನು ವನಕ್ಕೆ ಹೋಗೆಂದು ಹೇಳಿದವರು ನನಗೂ ಅದನ್ನು ಹೇಳಿದಂತೆಯೇ. ನೀನು ವನಕ್ಕೆ ಹೋಗುವುದಾದರೆ ನಾನು ನಿನ್ನ ಮುಂದೆ ನಡೆಯತಕ್ಕವಳು ; ದಾರಿಯ ಕುಶಕಂಟಕಗಳನ್ನು ತೆಗೆದು ಹಾಕುವವಳು. ನನ್ನಿಂದ ನಿನಗೆ ಯಾವ ತೊಂದರೆಯೂ ಇಲ್ಲ. ನನ್ನನ್ನು ಧೈರ್ಯದಿಂದ ಕರೆದುಕೊಂಡುಹೋಗು. ತಂದೆಯ ಮನೆಯಲ್ಲಿ ಹೇಗೋ ಹಾಗೆ ವನದಲ್ಲಿ ಸುಖವಾಗಿರುತ್ತೇನೆ. ನಿತ್ಯವೂ ನಿನಗೆ ಸೇವೆ ಮಾಡುತ್ತ ನಿಯತಳಾಗಿ ಬ್ರಹ್ಮಚಾರಿಣಿಯಾಗಿ, ಮಧುಗಂಧ ವನಗಳಲ್ಲಿ ನಿನ್ನೊಡನೆ ವಿಹರಿಸುತ್ತೇನೆ. ನೀನೂ ವನದಲ್ಲಿ ನನ್ನನ್ನು ಪರಿಪಾಲಿಸಬಲ್ಲೆ. ನಾನು ನಿನಗೆ ತೊಂದರೆಕೊಡುವುದಿಲ್ಲ. ಧೀಮಂತನಾದ ನಿನ್ನೊಡನೆ ಇರುತ್ತ ನದಿಗಳನ್ನೂ, ಶೈಲಗಳನ್ನೂ, ಪಲ್ವಲಗಳನ್ನೂ ನೋಡಬೇಕೆಂದು ನನಗೆ ಆಸೆ. ಹಂಸ ಕಾರಂಡವಗಳಿಂದ ಹರಹಿ ತುಂಬ ತಾವರೆ ಹೂಗಳಿಂದ ಸೊಗಯಿಸುವ ಸರೋವರಗಳನ್ನು ನೋಡಲು ನಾನು ಅಪೇಕ್ಷಿಸುತ್ತೇನೆ. ಅವುಗಳಲ್ಲಿ ನಿನ್ನೊಂದಿಗೆ ಯತವ್ರತಳಾಗಿ ಸ್ನಾನಮಾಡುತ್ತೇನೆ. ಹೀಗೆ ನೂರು ಸಾವಿರ ವರ್ಷವಾದರೂ ನಾನು ನಿನ್ನೊಂದಿಗೆ ಇರುವೆನು ; ಇದರಲ್ಲಿ ವಿರೋಧವನ್ನು ಕಾಣುವುದಿಲ್ಲ. ಸ್ವರ್ಗವಾದರೂ ನನಗೆ ಇದಕ್ಕಿಂತ ಚೆನ್ನವೆಂದು ಕಾಣದು. ಅನನ್ಯಭಾವಳೂ, ಅನುರಕ್ತಚೇತಸಳೂ ಆದ ನನ್ನನ್ನು ಕರೆದುಕೊಂಡುಹೋಗು. ನೀನು ತೊರೆದುಹೋದರೆ ನಾನು ಮರಣವನ್ನು ನಿಶ್ಚಯಿಸುವೆನು. ನನ್ನ ಯಾಚನೆಯನ್ನು ನಡೆಯಿಸು. ನಾನು ನಿನಗೆ ಬಹಳ ಭಾರವಾಗುವುದಿಲ್ಲ" ಎಂದಳು. ರಾಮನು "ದೇವಿ, ನೀನು ಉತ್ತಮ ಕುಲದ ಸ್ತ್ರೀ. ಸದಾ ಧರ್ಮದಲ್ಲಿ ನಿರತಳು. ನೀನು ಇಲ್ಲಿದ್ದು ಧರ್ಮವನ್ನು ನಡೆಯಿಸು. ವನದಲ್ಲಿ ತೊಂದರೆಗಳು ಬಹಳ. ನನ್ನ ಮಾತನ್ನು ಕೇಳು. ಕಾಂತಾರ ನಿನದಗಳು ಭಯಂಕರವಾದುವು. ವನದ ಮಹಾಮೃಗಗಳು ನೋಡಲು ಭೀಕರವಾದುವು. ನದಿಗಳು ಬದಿ. ನೀರಿನಲ್ಲಿ ಮೊಸಳೆಗಳು. ದಾರಿಗಳಲ್ಲಿ ಮುಳ್ಳು, ಬಳ್ಳಿಗಳು. ಮರದಿಂದ

ಬಿದ್ದ ಹಣ್ಣನ್ನು ತಿನ್ನಬೇಕು. ಅದು ಸಿಕ್ಕದಿದ್ದರೆ ಉಪವಾಸಮಾಡಬೇಕು. ಜಟೆಯನ್ನು ಬೆಳೆಯಿಸಬೇಕು. ವಲ್ಕಲವನ್ನು ಧರಿಸಬೇಕು. ಅಲ್ಲಿ ಬಹು ರೀತಿಯ ಬಹು ರೂಪದ ಹಾವುಗಳು ಹರಿಯುತ್ತಿರುತ್ತವೆ. ಪತಂಗಗಳು, ವೃಶ್ಚಿಕಗಳು, ಕೀಟಗಳು, ದಂಶಗಳು, ಮಶಕಗಳು, ನಿತ್ಯವೂ ಬಾಧಿಸು ವವು. ನೀನು ವನಕ್ಕೆ ಬರುವ ಮಾತನ್ನು ಬಿಡು'' ಎಂದನು. ಇದಕ್ಕೆ ಸೀತೆ '' ನೀನು ಯಾವುದನ್ನು ವನವಾಸದ ತೊಂದರೆಗಳೆಂದು ಹೇಳುವೆಯೋ ಅವೇ ನನಗೆ ನಿನ್ನ ಸಲುವಾಗಿ ಗುಣಗಳೆಂದು ತಿಳಿ. ಹುಲಿ ಸಿಂಹಗಳು ನಮಗೆ ತೊಂದರೆಮಾಡಲಾರವು. ಜನರನ್ನು ಎಂದೂ ನೋಡದಕಾರಣ ಅವು ನಿನ್ನನ್ನು ಕಂಡು ದೂರ ಹೋಗುವುವು. ನಾನು ನಿನ್ನ ಆಶ್ರಯದಲ್ಲಿ ಇರಬೇಕಾದರೆ ಸುರೇಶ್ವರನಾದ ಶಕ್ರನು ನನ್ನ ಗೋಜಿಗೆ ಬರುವುದು ಸಾಧ್ಯವೆ ? ನಾನು ತಂದೆಯ ಮನೆಯಲ್ಲಿ ಇದ್ದ ಕಾಲದಲ್ಲಿ ನನಗೆ ವನದಲ್ಲಿ ವಾಸಮಾಡುವ ಪ್ರಾಪ್ತಿ ಇದೆಯೆಂದು ಬ್ರಾಹ್ಮಣರಿಂದ ಕೇಳಿದ್ದೆನು. ಅಂದಿನಿಂದ ವನದಲ್ಲಿ ವಾಸಮಾಡಬೇಕೆಂದು ನನಗೆ ಅಪೇಕ್ಷೆ. ಬ್ರಾಹ್ಮಣರ ಆ ಮಾತು ಈಗ ನಿಜವಾಯಿತು. ಹೀಗೆಯೇ ಒಬ್ಬ ಭಿಕ್ಷುಣಿಯೂ ಹೇಳಿದ್ದಳು. ನೀನು ನನ್ನನ್ನು ಯಾವ ಕಾರಣದಿಂದ ಜತೆಗೆ ಕರೆದುಕೊಂಡು ಹೋಗಲು ಅಪೇಕ್ಷಿಸದೆ ಇದೀಯೆ ? ನಾನು ಭಕ್ತಳಲ್ಲವೆ ? ಪತಿವ್ರತೆ ಯಲ್ಲವೆ ? ಸುಖದುಃಖದಲ್ಲಿ ಭಾಗಿಯಾಗಿಲ್ಲವೆ ? ದೀನಳಾದ ನನ್ನನ್ನು ನೀನು ಬಿಟ್ಟು ಹೋಗಬಾರದು. ಹಾಗೆ ಮಾಡಿದೆಯಾದರೆ ನಾನು ಜೀವವನ್ನು ಬಿಡುತ್ತೇನೆ'' ಎಂದಳು. ರಾಮನು ದೇವಿಗೆ ಮತ್ತೆ ಬಹು ವಿಧವಾದ ಸಮಾಧಾನ ಹೇಳಿದನು. ಆಕೆ ಅದೊಂದನ್ನೂ ಕೇಳಲಿಲ್ಲ. ಕೊನೆಗೂ ಅವನು ಸಮ್ಮತಿಸದಿರಲು ಬಹು ಕೋಪದಿಂದ '' ರಾಮ, ನಮ್ಮ ತಂದೆ ಜನಕನು ಪುರುಷವಿಗ್ರಹವುಳ್ಳ ಸ್ತ್ರೀಯನ್ನು ಸಂಪಾದಿಸಿ ಅಳಿಯ ನೆಂದೇನಾದರೂ ತಿಳಿದುಕೊಂಡನೋ ? ರಾಮನಿಗೆ ಮೀರಿದ ಪರಾಕ್ರಮ ಶಾಲಿಯಿಲ್ಲವೆಂದು ಜನರು ಹೇಳುತ್ತಾರೆ ಇದು ಅನೃತ ಇರಬೇಕಲ್ಲವೇ ? ಏನುತಾನೇ ಮಾಡಿದ್ದಕ್ಕಾಗಿ ನೀನು ವಿಷಣ್ಣನಾಗಿದೀಯೆ, ನಿನಗೆ ಯಾವುದರಿಂದ ಭಯವಾಗುತ್ತದೆ, ನೀನು ಯಾವ ಕಾರಣದಿಂದ ನನ್ನನ್ನು ಬಿಡಲಪೇಕ್ಷಿಸುತ್ತೀಯೆ ? ಇನ್ನೂ ಚಿಕ್ಕ ವಯಸ್ಸಿನ ಹೆಂಡತಿಯನ್ನು

ಶೈಲೂಷನಂತೆ ಪರರಿಗೆ ಕೊಟ್ಟು ಹೋಗಲಪೇಕ್ಷಿಸುವೆ. ನಿನ್ನಂಥವರು ಇನ್ನೊಬ್ಬರಿರಬಹುದೆಂದು ನನ್ನ ಮನಸ್ಸಿಗೂ ತೋರುವುದಿಲ್ಲ. ನಿನ್ನೊಡನೆ ಇದ್ದಲ್ಲಿ ನನಗೆ ದಾರಿಯ ಮುಳ್ಳು ಕಲ್ಲು ಹತ್ತಿಯಂತೆ ತೊಗಲಿನಂತೆ ಮೆದುವಾಗಿ ಕಾಣುತ್ತದೆ. ಗಾಳಿಯಿಂದ ಎದ್ದು ಮೇಲೆ ಬೀಳುವ ದೂಳನ್ನು ನಾನು ಅತ್ಯುತ್ತಮವಾದ ಚಂದನವೆಂದು ಭಾವಿಸುತ್ತೇನೆ. ಅರಣ್ಯದಲ್ಲಿ ಹುಲ್ಲಿನಮೇಲೆ ದರ್ಭೆಯ ಚಾಪೆಯನ್ನು ಹಾಸಿ ಮಲಗುವುದಿದೆಯಲ್ಲ, ಅದಕ್ಕೆ ಹೆಚ್ಚಿನ ಸುಖ ಯಾವುದಿದೆ? ಹಣ್ಣುಹಂಪಲು ನಾರು ಬೇರು ಯಾವುದನ್ನು ನೀನು ಕೊಂಚವೋ ಹೆಚ್ಚಾಗಿಯೋ ತಂದು ಕೊಡುತ್ತಿಯೋ ಅದು ನನಗೆ ಅಮೃತರಸೋಪಮ. ನನ್ನಿಂದ ನಿನಗೆ ತೊಂದರೆಯಾಗುವುದಿಲ್ಲ. ನಾನು ನಿನಗೆ ಬಹು ಭಾರವಾಗುವುದಿಲ್ಲ. ನನ್ನನ್ನು ಇಲ್ಲಿ ಬಿಡಬೇಡ. ಕರೆದುಕೊಂಡು ಹೋಗು. ಹಾಗೆ ಕರೆದುಕೊಂಡು ಹೋಗದೆ ಇದ್ದರೆ ನಾನು ವಿಷವನ್ನು ತೆಗೆದುಕೊಳ್ಳುತ್ತೇನೆ. ನಿನ್ನನ್ನು ಅಗಲಿದ ಶೋಕವನ್ನು ನಾನು ಒಂದು ಮುಹೂರ್ತವಾದರೂ ತಡೆಯಲಾರೆನು. ಅಂತದರಲ್ಲಿ ಹತ್ತು ವರುಷ ಮತ್ತೆ ಮೂರು ವರುಷ ಮತ್ತೆ ಒಂದು ವರುಷ ಇಷ್ಟು ದಿನ ಜೀವಿಸುವ ಮಾತೇನು,'' ಎಂದು ಅವನನ್ನು ಗಟ್ಟಿಯಾಗಿ ಕಟ್ಟಿಕೊಂಡು ಕೊರಳೆತ್ತಿ ಅತ್ತಳು. ಹೀಗೆ ಮಾಡಿದ ಪತ್ನಿಯನ್ನು ಸಮಾಧಾನಪಡಿಸಿ ರಾಮನು ಅವಳಿಗೆ "ದೇವಿ, ನಿನ್ನನ್ನು ದುಃಖಗೊಳಿಸಿ ನಾನು ಸ್ವರ್ಗವನ್ನಾದರೂ ಅಪೇಕ್ಷಿಸೆನು. ನನಗೆ ಎಲ್ಲಿಯಾಗಲಿ ಯಾವುದಾಗಲಿ ಭಯ ಕೂಡ ಇಲ್ಲ. ನಿನ್ನನ್ನು ನೋಡಿಕೊಳ್ಳಲು ಶಕ್ತನಾದರೂ ನಿನ್ನ ಅಭಿಪ್ರಾಯ ಹೇಗೆಂದು ತಿಳಿಯದೆ ನೀನು ಅರಣ್ಯಕ್ಕೆ ಬರುವುದನ್ನು ನಾನು ಅಪೇಕ್ಷಿಸಲಾಗಲಿಲ್ಲ. ನೀನು ನನ್ನೊಂದಿಗೆ ವನವಾಸಮಾಡಲು ಹುಟ್ಟಿದೀಯೆ ಎಂದು ಕಾಣುತ್ತದೆ. ಧೀರನಿಗೆ ಕೀರ್ತಿ ಹೇಗೋ ಹಾಗೆ ನನಗೆ ನೀನು ಬಿಡಲಾಗದ ವಸ್ತು. ಅಗತ್ಯವಾಗಿ ಜೊತೆಗೆ ಬಾ. ಸಹಧರ್ಮಚರಿಯಾಗು. ಈ ನಿನ್ನ ಯೋಚನೆ ನನ್ನ ನಿನ್ನ ಕುಲಗಳಿಗೆ ಅನುಗುಣವಾದದು. ಕಾಡಿಗೆಹೊರಡಲು ತಕ್ಕ ಏರ್ಪಾಡನ್ನು ಮಾಡು. ಬ್ರಾಹ್ಮಣರಿಗೆ ಭಿಕ್ಷುಕರಿಗೆ ಭೃತ್ಯರಿಗೆ ಒಡವೆ ವಸ್ತುಗಳನ್ನು ದಾನಮಾಡು,'' ಎಂದನು. ಪತಿಯ ಮಾತನ್ನು ಕೇಳಿ ಆನಂದಪಟ್ಟು ಸೀತಾದೇವಿ ತನ್ನ ಒಡವೆ ವಸ್ತುಗಳನ್ನು ಎಲ್ಲರಿಗೂ ಹಂಚುವುದಕ್ಕೆ ಮೊದಲುಮಾಡಿದಳು.

## ಲಕ್ಷ್ಮಣನ ಪಟ್ಟು

ರಾಮಚಂದ್ರನು ಈ ವೇಳೆಗೆ ಇಬ್ಬರನ್ನು ಸಮಾಧಾನಪಡಿಸಿ ಆಗಿತ್ತು. ಮೂರನೆಯ ಒಬ್ಬ ವ್ಯಕ್ತಿಯನ್ನು ಸಮಾಧಾನಪಡಿಸುವ ಕಾರ್ಯ ಅವನಿಗೆ ಈಗ ಒದಗಿತು. ಲಕ್ಷ್ಮಣನು ಇದುವರೆಗೆ ಅಣ್ಣನ ಮತ್ತು ಅತ್ತಿಗೆಯ ಈ ಸಂವಾದವನ್ನು ಕೇಳುತ್ತಿದ್ದು ಅವನು ಸೀತೆಯನ್ನು ಜೊತೆಗೆ ಕರೆದು ಕೊಂಡುಹೋಗುವನೆಂದು ತಿಳಿದೊಡನೆ ಅವನ ಕಾಲಿಗೆ ಬಿದ್ದು ಅವನನ್ನೂ ಸೀತೆಯನ್ನೂ ಕುರಿತು "ನೀವು ಮೃಗಗಜಾಯುತವಾದ ಅರಣ್ಯಕ್ಕೆ ಹೋಗುವುದೇ ಆದರೆ ನಾನೂ ಜೊತೆಗೆ ಬರುತ್ತೇನೆ; ಧನುಸ್ಸನ್ನು ಹಿಡಿದು ಮುಂದೆ ನಡೆಯುತ್ತೇನೆ. ಅಣ್ಣ, ನಿನ್ನನ್ನು ಬಿಟ್ಟು ನಾನು ದೇವಲೋಕಾ ಕ್ರಮಣವನ್ನಾಗಲಿ ಅಮರತ್ವವನ್ನಾಗಲಿ ಬಯಸುವುದಿಲ್ಲ. ಲೋಕಗಳ ದೊರೆತನವನ್ನು ಬೇಡುವುದಿಲ್ಲ" ಎಂದನು. ಈ ಮಾತು ಬೇಡವೆಂದು ರಾಮನು ಹೇಳಲಾಗಿ ಲಕ್ಷ್ಮಣನು "ನೀನು ಆಗಲೇ ಇದಕ್ಕೆ ಒಪ್ಪಿ ಕೊಂಡೆಯಲ್ಲವೆ? ತಡೆಯುವುದೇಕೆ? ಈಗ ಜೊತೆಗೆ ಬರಬೇಕೆನ್ನುವ ನನಗೆ ಅಡ್ಡಿಮಾಡುವ ಅಭಿಪ್ರಾಯವೇನು? ಅದನ್ನು ನಾನು ತಿಳಿಯಲ ಪೇಕ್ಷಿಸುತ್ತೇನೆ. ನನಗೆ ಸಂಶಯವಾಗುತ್ತಿದೆ" ಎಂದನು. ರಾಮನು ತಮ್ಮನನ್ನು ಕುರಿತು "ನಿನಗೆ ನನ್ನಲ್ಲಿ ಸ್ನೇಹವಿರುವುದನ್ನೂ ನೀನು ಧರ್ಮಿಷ್ಠನೆನ್ನುವುದನ್ನೂ ಸತ್ಪಥಸ್ಥಿತನೆನ್ನುವುದನ್ನೂ ನಾನು ಬಲ್ಲೆನು. ನೀನು ನನಗೆ ಅನುಕೂಲನು; ಪ್ರಾಣದಂತೆ ಪ್ರಿಯನು. ನೀನು ನನಗೆ ಸೋದರನಷ್ಟೇ ಅಲ್ಲ; ಸಖನೂ ಆಗಿದೇಯೆ. ಆದರೆ ತಮ್ಮ, ಲಕ್ಷ್ಮಣ, ನಾನು ನೀನು ಇಬ್ಬರೂ ಕಾಡಿಗೆ ಹೋದರೆ ಕೌಸಲ್ಯೆಯನ್ನೂ ಸುಮಿತ್ರೆ ಯನ್ನೂ ರಕ್ಷಿಸುವರಾರು? ತಂದೆ ಮೋಹದಲ್ಲಿರುವರು. ಕೈಕಯೀ ದೇವಿ ಸವತಿಯರಿಗೆ ಒಳ್ಳೆಯದನ್ನು ಮಾಡುವುದಿಲ್ಲ. ಭರತನು ರಾಜ್ಯ ವನ್ನು ಹೊಂದಿ ಇವರಿಗೆ ಗಮನಕೊಡದೆ ಹೋಗುವನು. ನೀನು ಇಲ್ಲೇ ಇದ್ದು ನನ್ನ ನಿನ್ನ ತಾಯಂದಿರನ್ನು ಕಾಪಾಡು. ನಿನಗೆ ನನ್ನಲ್ಲಿರುವ ಭಕ್ತಿ ಚೆನ್ನಾಗಿ ಕಾಣುವುದು ಹೀಗೆ; ನನಗೆ ಮಾಡಬೇಕಾದ ಗುರುಪೂಜೆಯನ್ನು ಹೀಗೆ ಮಾಡು" ಎಂದನು. ಲಕ್ಷ್ಮಣನು "ಅಣ್ಣ, ಭರತನು ಕೌಸಲ್ಯೆ ಯನ್ನೂ ಸುಮಿತ್ರೆಯನ್ನೂ ನಿನ್ನ ಪರಾಕ್ರಮದ ಸಲುವಾಗಿ ತಪ್ಪದೆ

ಪೂಜಿಸುವನು. ಕೌಸಲ್ಯೆಯಾದರೂ ನನ್ನಂಥವರು ಸಾವಿರ ಜನರನ್ನು ರಕ್ಷಿಸಬಲ್ಲಳು. ನನ್ನ ತಾಯಿಯೂ ಹಾಗೆಯೇ. ನನ್ನನ್ನು ಜೊತೆಗೆ ಕರೆದುಕೊಂಡುಹೋಗು. ಇದರಲ್ಲಿ ಧರ್ಮಕ್ಕೆ ಬಾಧೆಯಿಲ್ಲ. ಇದರಿಂದ ನಾನೂ ಕೃತಾರ್ಥನಾಗುತ್ತೇನೆ; ನಿನಗೂ ಸ್ವಲ್ಪ ಪ್ರಯೋಜನ ಉಂಟು. ಬಾಣವೇರಿಸಿದ ಬಿಲ್ಲನ್ನು ಹಿಡಿದು ಖನಿತ್ರ ಪಿಟಕಗಳನ್ನು ಧರಿಸಿ ನಾನು ನಿನ್ನ ಮುಂದೆ ನಡೆಯುತ್ತೇನೆ, ದಾರಿಯನ್ನು ತೋರಿಸುತ್ತೇನೆ. ದಿನವೂ ನಿನಗೆ ಫಲಮೂಲಗಳನ್ನು ತರುತ್ತೇನೆ. ನೀನು ವೈದೇಹಿಯೊಂದಿಗೆ ಗಿರಿ ಸಾನುಗಳಲ್ಲಿ ವಿಹರಿಸುತ್ತಿರಲಾಗಿ ಎಚ್ಚರದಲ್ಲಿ ನಿದ್ರೆಯಲ್ಲಿ ನಾನು ನಿಮ್ಮ ಎಲ್ಲ ಕೆಲಸವನ್ನೂ ನೋಡಿಕೊಳ್ಳುತ್ತೇನೆ,'' ಎಂದನು. ರಾಮಚಂದ್ರನು ತಮ್ಮನ ಮಾತಿನಿಂದ ಸಂತುಷ್ಟನಾಗಿ ''ಆಗಲಣ್ಣ, ಹೋಗು, ಬೇಕಾದವರಿಗೆ ಈ ಮಾತನ್ನು ತಿಳಿಸು. ನಿನ್ನ ನನ್ನ ಆಯುಧಗಳನ್ನು ತೆಗೆದುಕೊಂಡುಬಾ'' ಎಂದನು. ಹೀಗೆ ಇವರು ಮೂವರು ವನಕ್ಕೆ ಹೊರಡುವುದೆಂದು ನಿಶ್ಚಿತವಾಯಿತು.

### ಸೀತಾರಾಮ ಲಕ್ಷ್ಮಣರ ಪ್ರಯಾಣ

ಇದು ಅಯೋಧ್ಯಾಕಾಂಡದ ಕಥೆಯಲ್ಲಿ ಒಂದು ಘಟ್ಟ. ರಾಮನು ಸೀತಾ ಲಕ್ಷ್ಮಣಸಮೇತನಾಗಿ ಅಯೋಧ್ಯೆಯನ್ನು ಬಿಡುವವರೆಗೆ ಬರುವ ಕಥೆ ಎರಡನೆಯ ಘಟ್ಟ. ಮೂವರೂ ತಮ್ಮ ವಸ್ತುಭೂಷಣಗಳನ್ನು ಬೇಕಾದ ಜನಕ್ಕೆ ಹಂಚಿಕೊಟ್ಟಮೇಲೆ ರಾಮನು ಸೀತಾ ಲಕ್ಷ್ಮಣರೊಡನೆ ಮತ್ತೆ ರಾಜನ ಬಳಿಗೆ ಬಂದನು. ದಶರಥನು ಸುಮಂತ್ರನನ್ನು ಕುರಿತು ''ನನ್ನ ಮಹಿಷಿಯರನ್ನೆಲ್ಲ ಕರೆದುತಾ, ಅವರಿಂದ ಪರಿವೃತನಾಗಿ ಧಾರ್ಮಿಕನಾದ ಪುತ್ರನನ್ನು ನೋಡಲಪೇಕ್ಷಿಸುತ್ತೇನೆ'' ಎಂದನು. ಅವರೆಲ್ಲ ಕೌಸಲ್ಯೆಯ ಜೊತೆಗೂಡಿ ರಾಜನ ಬಳಿಗೆ ಬಂದು ಸೇರಿದರು. ಆಮೇಲೆ ರಾಜನು ಸುಮಂತ್ರನಿಗೆ ರಾಮನನ್ನು ಬಳಿಗೆ ಕರೆದುತಾ ಎಂದನು. ಬರುತ್ತಿರುವ ಮಗನನ್ನು ದೂರದಿಂದಲೇ ನೋಡಿ ರಾಜನು ಆಸನದಿಂದ ಕೆಳಗೆ ಬಿದ್ದನು. ಅವನ ಪತ್ನಿಯರು ಅಳುತ್ತ ಅವನ ಸುತ್ತ ನಿಂತಿದ್ದರು. ರಾಮನೂ ಲಕ್ಷ್ಮಣನೂ ತಂದೆಯ ಬಳಿಗೆ ಓಡಿಬಂದರು; ಇಬ್ಬರೂ ತಂದೆಯನ್ನು ಅಪ್ಪಿಹಿಡಿದು ಎತ್ತಿದರು. ಸ್ವಲ್ಪ ಹೊತ್ತಿನಮೇಲೆ ರಾಜನಿಗೆ

ಪ್ರತಿಜ್ಞೆ ಬಂದಿತು. ರಾಮನು ಅವನಿಗೆ ಕೈಮುಗಿದು "ನಾನು ಅರಣ್ಯಕ್ಕೆ ಹೋಗುವ ಮೊದಲು ಅಪ್ಪಣೆ ಕೇಳಲು ಬಂದಿದೇನೆ. ಲಕ್ಷ್ಮಣನೂ ಸೀತೆಯೂ ನನ್ನ ಜೊತೆಗೆ ಬರುವರಂತೆ, ಅವರಿಗೂ ಅಪ್ಪಣೆ ಕೊಡಬೇಕು. ದುಃಖಪಡಬಾರದು" ಎಂದನು. ರಾಜನು ಅವನಿಗೆ "ಮಗನೆ, ನಾನು ಕೈಕಯಿಗೆ ವರವನ್ನು ಕೊಟ್ಟು ಮಂಕನಾದೆನು. ನೀನು ನನ್ನನ್ನು ನಿಗ್ರಹಿಸಿ ಅಯೋಧ್ಯೆಗೆ ರಾಜನಾಗು" ಎಂದನು. ರಾಮನು ತಂದೆಗೆ "ಸಾವಿರ ವರ್ಷಕ್ಕೂ ನೀವು ಪೃಥ್ವಿಗೆ ಪತಿ, ನಿಮ್ಮ ಮಾತನ್ನು ಅನೃತ ಮಾಡಿ ನಾನು ಸಾಧಿಸಬೇಕಾದುದು ಏನೂ ಇಲ್ಲ. ನಾನು ಅರಣ್ಯದಲ್ಲಿ ವಾಸ ಮಾಡುತ್ತೇನೆ. ಹದಿನಾಲ್ಕು ವರ್ಷಗಳನ್ನೂ ವನವಾಸದಲ್ಲಿ ವಿಹರಿಸಿ ಪ್ರತಿಜ್ಞೆ ಮುಗಿದಮೇಲೆ ಪುನಃ ನಿಮ್ಮ ಪಾದವನ್ನು ಮುಟ್ಟುತ್ತೇನೆ" ಎಂದನು. ದಶರಥನು ಮಗನಿಗೆ "ಅಪ್ಪಾ, ನಿನಗೆ ಶ್ರೇಯಸ್ಸಾಗಲಿ; ವೃದ್ಧಿಯಾಗಲಿ; ಪುನರಾಗಮನವಾಗಲಿ; ಹೋಗಿಬಾ. ನಿನ್ನ ಪ್ರಯಾಣದಲ್ಲಿ ಸಮಸ್ತ ಮಂಗಳವಾಗಲಿ; ತೊಂದರೆ ಏನೂ ಆಗದಿರಲಿ. ಸತ್ಯಾತ್ಮನೂ ಧರ್ಮಾಭಿಮಾನಸನೂ ಆದ ನಿನ್ನನ್ನು ನಿನ್ನ ನಿರ್ಧಾರದಿಂದ ತಪ್ಪಿಸಲು ನನ್ನ ಬುದ್ಧಿಗೆ ಸಾಧ್ಯವಲ್ಲ. ಆದರೆ ಮಗನೆ ಈ ದಿನ ರಾತ್ರಿ ಇದ್ದುಹೋಗು. ಈ ಒಂದು ದಿನ ನಿನ್ನನ್ನು ನೋಡಿ ಸಂತೋಷದಿಂದಿರುತ್ತೇನೆ. ನನ್ನನ್ನೂ ನಿನ್ನ ತಾಯನ್ನೂ ನೋಡುತ್ತ ಈ ದಿನ ರಾತ್ರಿ ಇರು, ನಾಳೆ ನೀನು ಪ್ರಯಾಣ ಮಾಡಬಹುದು" ಎಂದನು. ರಾಮನು ಆರ್ತನಾದ ತಂದೆಯ ಈ ಮಾತನ್ನು ಕೇಳಿ "ನಾಳೆ ನನಗೆ ಇದೇ ಬುದ್ಧಿ ಇರುತ್ತದೆಂದು ಹೇಗೆ ಹೇಳುವುದು ? ಈಗಲೇ ನಾನು ಹೊರಡುತ್ತೇನೆ. ನೀವು ಚಿಂತೆಮಾಡಬೇಡಿ" ಎಂದು ಹೇಳಿದನು. ರಾಜನು ಬಹು ದುಃಖಿತನಾಗಿ ಮಗನನ್ನು ಕಟ್ಟಿಕೊಂಡು ಪ್ರಜ್ಞೆತಪ್ಪಿ ಕದಲದಂತೆ ಇದ್ದನು. ಅವನ ರಾಣಿಯರು ಅಳುತ್ತಿದ್ದರು. ಸುಮಂತ್ರನೂ ಮೂರ್ಛೆಹೋದನು. ಅಲ್ಲಿ ಎಲ್ಲರೂ ಹಾಹಾಕಾರ ಮಾಡಿದರು. ಇದಾದಮೇಲೆ ಸುಮಂತ್ರನು ಕೈಕಯೀದೇವಿಯನ್ನು ಬಹು ನಿಷ್ಠುರವಾಗಿ ಬೈದನು. ಅವಳ ತಾಯ ಚರಿತ್ರೆಯನ್ನು ಜ್ಞಾಪಕ ಹೇಳಿ ಆ ತಾಯಿಗೆ ನೀನು ಮಗಳು ಎಂದನು. ಕೈಕಯೀದೇವಿ ಇದಕ್ಕೆ ಏನೂ ಪ್ರತಿ ಹೇಳಲಿಲ್ಲ. ದಶರಥನು ಸುಮಂತ್ರನನ್ನು

ಕುರಿತು "ರತ್ನಸಂಪೂರ್ಣವಾದ ಚತುರ್ವಿಧ ಬಲವು ರಾಮನ ಜೊತೆಗೆ ಹೊರಡಲಿ. ಜೊತೆಗೆ ತಕ್ಕ ಪರಿವಾರ ಹೊರಡಲಿ. ರಥ, ತುರುಗ, ಇತರ ವಾಹನ, ಆಯುಧಗಳು, ಎಲ್ಲ ಜೊತೆಯಲ್ಲಿ ಹೋಗಲಿ. ವನದಲ್ಲಿ ಸಂಚರಿಸುತ್ತ ಅಲ್ಲಿಯ ಸುಖಗಳನ್ನು ಅನುಭವಿಸುತ್ತ ಇರಲಾಗಿ ರಾಮನು ರಾಜ್ಯವನ್ನು ನೆನೆಯುವುದು ಕೂಡ ಇಲ್ಲ. ಭರತನು ಅಯೋಧ್ಯೆಯನ್ನು ಆಳಲಿ; ರಾಮನು ಸಂಪದ್ಯುಕ್ತನಾಗಿ ಪ್ರಯಾಣಮಾಡಲಿ" ಎಂದನು. ರಾಜನ ಮಾತನ್ನು ಕೇಳಿ ಕೈಕಯಿಗೆ ಭಯವಾಯಿತು. ಅವಳು ರಾಜನನ್ನು ಕುರಿತು "ರಾಜನೆ, ರಸವನ್ನು ಕಳೆದುಕೊಂಡ ಸುರೆಯಂತೆ ಜನವಿಲ್ಲದೆ ಶೂನ್ಯವಾದ ರಾಜ್ಯವನ್ನು ಭರತನಿಗೆ ಕೊಡಕೂಡದು" ಎಂದಳು. ರಾಜನು "ಹೊರಲಾರದ ಹೊರೆಯನ್ನು ನನ್ನಮೇಲೆ ಹೊರಿಸಿ ನನ್ನನ್ನು ಏಕೆ ಚುಚ್ಚುತ್ತೀಯೆ? ಈ ಮಾತನ್ನು ನೀನು ಮೊದಲೇ ಏಕೆ ಹೇಳಲಿಲ್ಲ?" ಎಂದನು. ಕೋಪದಿಂದ ಹೀಗೆ ಕೇಳಿದ ದಶರಥನಿಗೆ ಕೈಕಯಿ ಅದಕ್ಕೂ ಹೆಚ್ಚಿನ ಕೋಪದಿಂದ "ನಿನ್ನ ವಂಶದಲ್ಲಿಯೇ ಹಿಂದೆ ಸಗರನು ಅಸಮಂಜಸನನ್ನು ಕಾಡಿಗೆ ಅಟ್ಟಿದನು. ಆಗ ಅವನು ಹೇಗೆ ಹೋದನೋ ಹಾಗೆ ಈಗ ರಾಮನು ಹೋಗಲಿ" ಎಂದಳು. ಈ ಮಾತಿನಿಂದ ಎಲ್ಲರಿಗೂ ಬಹು ಬೇಸರವಾಯಿತು. ದಶರಥನು ಛೆ, ಛೆ, ಎಂದನು. ಜನರೆಲ್ಲ ಹೇಸಿಕೆಪಟ್ಟರು. ಆದರೆ ಅದು ಕೈಕಯಿಗೆ ತಿಳಿಯಲಿಲ್ಲ. ಆಗ ಸಿದ್ಧಾರ್ಥನೆಂಬ ಮಹಾಮಾತ್ರನು "ಅಸಮಂಜಸನು ಊರ ಮಕ್ಕಳನ್ನು ಹೊಳೆಯಲ್ಲಿ ಮುಳುಗಿಸುತ್ತಿದ್ದನೆಂಬ ಕಾರಣದಿಂದ ಸಗರನು ಆ ಮಗನನ್ನು ಕಾಡಿಗೆ ಅಟ್ಟಿದನು. ರಾಮನಲ್ಲಿ ಇಂಥ ಅವಗುಣ ಯಾವುದನ್ನೂ ನಾವು ಕಾಣೆವು. ನೀನು ಏನನ್ನಾದರೂ ಕಂಡಿದೀಯಾ, ದೇವಿ. ಕಂಡಿದ್ದರೆ ನಿಜವಾಗಿ ಹೇಳು. ಆ ಕಾರಣದಿಂದ ಅವನನ್ನು ಕಾಡಿಗೆ ಅಟ್ಟೋಣ" ಎಂದನು. ದಶರಥನು "ಇದು ನಿನಗೆ ತಿಳಿಯುವುದಿಲ್ಲವೆ? ನಿನ್ನ ನಡತೆ ಬಹು ಕುತ್ಸಿತವಾಯಿತು. ನಾನೂ ರಾಮನೊಂದಿಗೆ ಹೋಗುತ್ತೇನೆ. ಭರತನನ್ನು ರಾಜನಾಗಿ ಮಾಡಿ ನೀನು ರಾಜ್ಯವನ್ನು ಅನುಭವಿಸುತ್ತ ಸುಖವಾಗಿರು" ಎಂದನು. ಇವರಿವರ ಮಾತಿನ ಸುಳಿಯಲ್ಲಿ ಕೆಲಸ ಮುಂದಕ್ಕೆ ಸಾಗಲಿಲ್ಲ. ಈ ತೊಡಕನ್ನಾದರೂ

ರಾಮಚಂದ್ರನೇ ಬಿಡಿಸಬೇಕಾಯಿತು. ಇದು ಈ ಸಂದರ್ಭದ ಮುಖ್ಯ ಕೌತುಕ. ಕಾಡಿಗೆ ಹೋಗುವವನು ರಾಮ. ಕ್ಲೇಶಪಡುವವರು ಇತರರು. ಅವರ ಕ್ಲೇಶವನ್ನು ಬಿಡಿಸುವುದೂ ಆ ಸೌಮ್ಯಚೇತನದ ಕರ್ತವ್ಯವಾಯಿತು. ಆತನು ತಂದೆಯನ್ನು ಕುರಿತು ವಿನಯದಿಂದ "ಅಪ್ಪಾ, ವನದಲ್ಲಿ ವಾಸ ಮಾಡುವ ನನಗೆ ಪರಿವಾರದಿಂದ ಪ್ರಯೋಜನವೇನು? ಆನೆಯನ್ನು ಕೊಟ್ಟಮೇಲೆ ಹಗ್ಗಕ್ಕಾಗಿ ಏಕೆ ಚಿಂತೆ? ನನಗೆ ಬಿಲ್ಲು ಬಾಣ ಬತ್ತಳಿಕೆ ಇಷ್ಟು ಸಾಕು. ನಮಗೆ ವಲ್ಕಲಗಳನ್ನು ತಂದುಕೊಡಿ. ಅವನ್ನು ಧರಿಸಿ ಹೊರಡುತ್ತೇವೆ" ಎಂದನು. ಕೈಕಯಿದೇವಿ ತಾನೇ ಚೀರಗಳನ್ನು ತಂದು, ಉಟ್ಟುಕೊಳ್ಳಿ, ಎಂದು ಆ ಸಮೂಹದ ಮಧ್ಯೆ ಕೊಟ್ಟಳು. ರಾಮನು ಅವುಗಳಲ್ಲಿ ಒಂದನ್ನು ಧರಿಸಿಕೊಂಡನು; ಲಕ್ಷ್ಮಣನೂ ಒಂದನ್ನು ಧರಿಸಿದನು. ಸೀತಾದೇವಿ ಒಂದನ್ನು ತೆಗೆದುಕೊಂಡು ಅದನ್ನು ಉಡಲು ತಿಳಿಯದೆ ಗಂಧರ್ವ ರಾಜನಂತೆ ನಿಂತಿದ್ದ ಪತಿಯನ್ನು ಕುರಿತು "ವನವಾಸಿಗಳಾದ ಮುನಿಸ್ತ್ರೀಯರು ಈ ವಸ್ತ್ರವನ್ನು ಹೇಗೆ ಉಟ್ಟುಕೊಳ್ಳುತ್ತಾರೆ" ಎಂದಳು; ತನಗೆ ಅದನ್ನು ಧರಿಸಲು ಬಾರದ್ದರಿಂದ ನಾಚಿಕೊಂಡಳು. ಆಗ ರಾಮನು ತಾನೇ ಬೇಗನೆ ಬಂದು ಅವಳ ಕೌಶೇಯದ ಮೇಲೆ ವಲ್ಕಲವನ್ನು ಉಡಿಸಿದನು. ಅದನ್ನು ನೋಡಿ ಅತಃಪುರದ ಸ್ತ್ರೀಯರು ಸುಮ್ಮನೆ ಕಣ್ಣೀರು ಸುರಿದರು; ರಾಮನನ್ನು ಕುರಿತು "ಸೀತಾದೇವಿ ವನಕ್ಕೆ ಹೋಗಬೇಕೆಂದು ನಿಯುಕ್ತಳಾಗಿಲ್ಲ. ನೀನು ಬರುವವರೆಗೆ ನಾವು ಇವಳನ್ನಾದರೂ ನೋಡುತ್ತಿರುತ್ತೇವೆ. ಇವಳನ್ನು ಬಿಟ್ಟುಹೋಗು. ಲಕ್ಷ್ಮಣನು ನಿನ್ನೊಡನೆ ಅರಣ್ಯಕ್ಕೆ ಬರಲಿ" ಎಂದರು. ಅವರು ಹೀಗೆ ಮಾತನಾಡುತ್ತಿರುವಾಗಲೇ ರಾಮನು ಸೀತಾದೇವಿಗೆ ಆ ವಲ್ಕಲವನ್ನು ಉಡಿಸಿ ಮುಗಿಸಿದನು. ಸೀತಾದೇವಿ ವಲ್ಕಲಧಾರಣ ಮಾಡಿದ್ದನ್ನು ನೋಡಿ ವಸಿಷ್ಠನಿಗೂ ಕೋಪಬಂದಿತು. ಅವನು ಕೈಕಯಿದೇವಿಯನ್ನು ಗದರಿಕೊಂಡು "ಸೀತೆ ಅರಣ್ಯಕ್ಕೆ ಹೋಗಬೇಕಾದದಿಲ್ಲ. ಹೀಗೆ ವೈದೇಹಿ ರಾಮನೊಂದಿಗೆ ವನಕ್ಕೆ ಹೋಗತಕ್ಕದಾದರೆ ನಾವೂ ಅವನ ಜೊತೆಗೆ ಹೋಗುತ್ತೇವೆ. ಊರೆಲ್ಲ ಅವನ ಜೊತೆಗೆ ಹೊರಡುತ್ತದೆ. ಶತ್ರುಘ್ನ ಸಮೇತನಾಗಿ ಭರತನಾದರೂ ರಾಮನೊಡನೆ ವನಕ್ಕೆ ಹೋಗಿ ವಲ್ಕಲ

ವನ್ನುಟ್ಟು ಅಲ್ಲಿಯೇ ನಿಲ್ಲುವನು. ಆಗ ನೀನು ಜನಗಳಿಂದ ಶೂನ್ಯವಾಗಿ ಬರಿಯಮರಗಳುಳ್ಳ ಈ ರಾಷ್ಟ್ರವನ್ನು ನೀನೇ ನೀನಾಗಿ ಆಳು. ರಾಮನಿಲ್ಲದ ನಾಡು ರಾಷ್ಟ್ರವಾಗುವುದಿಲ್ಲ. ರಾಮನಿರುವ ಕಾಡೇ ರಾಷ್ಟ್ರವಾಗುತ್ತದೆ. ದಶರಥನ ಮಗನೆನ್ನುವುದಾದರೆ ತಂದೆಕೊಡದ ಈ ರಾಜ್ಯವನ್ನು ಆಳಲು ಭರತನು ಒಪ್ಪುವುದಿಲ್ಲ. ನೀನು ಭೂಮಿಯಿಂದ ಹಾರಿದರೂ ತನ್ನ ವಂಶದ ಚರಿತ್ರೆಯನ್ನು ಬಲ್ಲ ಆತನು ಅದಕ್ಕೆ ವಿರೋಧವಾಗಿ ನಡೆಯನು. ದನ ಕರು ಹಾವು ಹಕ್ಕಿ ಮೃಗ ಮರ ಎಲ್ಲವೂ ರಾಮನೊಂದಿಗೆ ಹೊರಡುವುದನ್ನು ನೀನು ಈಗಲೇ ನೋಡುವೆ'' ಎಂದನು. ಕೈಕಯಿಾದೇವಿ ವನವಾಸವನ್ನು ಬೇಡಿದ್ದು ರಾಮನಿಗಾಗಿ ಮಾತ್ರ ಆದ್ದರಿಂದ ಸೀತಾದೇವಿ ವಲ್ಕಲವನ್ನು ಉಡಬೇಕಾದದಿಲ್ಲವೆಂದು ವಸಿಷ್ಠನು ನಿರ್ಧರಮಾಡಿದನು. ರಾಮನು ತಂದೆಯನ್ನು ಕುರಿತು ''ನನ್ನ ತಾಯಿ ಕೌಸಲ್ಯಾದೇವಿ ವೃದ್ಧಳಾಗಿದಾಳೆ; ನಿನಗೆ ವಿಧೇಯಳಾಗಿದಾಳೆ; ನಿನ್ನನ್ನು ನಿಂದಿಸುವವಳಲ್ಲ. ನಾನು ಹೊರಟು ಹೋಗುವುದರಿಂದ ಬಹು ದುಃಖಿತಳಾಗುತ್ತಾಳೆ. ಈಕೆಯನ್ನು ಸಮಾಧಾನ ವಾಗಿರುವಂತೆ ಜೀವದೊಂದಿಗೆ ಇರುವಂತೆ ನೀನು ನೋಡಿಕೊಳ್ಳಬೇಕು'' ಎಂದು ಬೇಡಿದನು. ರಾಮನ ಈ ಮಾತನ್ನು ಕೇಳಿ ಅರಸು ಮತ್ತೆ ಮೂರ್ಛಿತನಾದಂತಾದನು; ರಾಮಾ ಎಂದು ಒಂದುಸಲ ಹೇಳಿ ಮತ್ತೆ ಮಾತನಾಡಲಾರದೆಹೋದನು. ಕ್ಷಣಬಿಟ್ಟು ಎಚ್ಚೆತ್ತು ಸುಮಂತ್ರನನ್ನು ಕುರಿತು ''ರಥವನ್ನು ತಂದು ಇವರನ್ನು ಕೂರಿಸಿಕೊಂಡು ಜನಪದದ ಎಲ್ಲೆಗೆ ಸೇರಿಸು. ಸೀತಾದೇವಿಗೆ ಬೇಕಾದ ಒಡವೆ ವಸ್ತುಗಳನ್ನು ಕೊಡು'' ಎಂದನು. ಕೌಸಲ್ಯೆ ಸೊಸೆಯನ್ನು ಅಪ್ಪಿಕೊಂಡು ''ಸತ್ಯವಂತೆಯರಲ್ಲದ ಸ್ತ್ರೀಯರು ಮಾತ್ರ ದುರ್ದೆಸೆಯನ್ನೈದಿದ ಪತಿಯ ವಿಷಯದಲ್ಲಿ ಸರಿಯಾಗಿ ನಡೆದುಕೊಳ್ಳುವುದಿಲ್ಲ. ಸಾಧ್ವಿಯರು ಪತಿಯನ್ನು ಎಲ್ಲಕ್ಕೆ ಹೆಚ್ಚಾಗಿ ಎಣಿಸುತ್ತಾರೆ. ನನ್ನ ಮಗನು ರಾಜ್ಯಭ್ರಷ್ಟನಾದರೂ ನೀನು ಅವನನ್ನು ಮರ್ಯಾದೆಯಿಂದ ಕಾಣುವುದನ್ನು ಬಿಡಬೇಡ; ನಿರ್ಧನನಾದರೂ ಸಧನ ನಾದರೂ ಅವನು ನಿನಗೆ ದೈವ'' ಎಂದು ಹೇಳಿದಳು. ಸೀತಾದೇವಿ ಅತ್ತೆಯ ಮಾತಿಗೆ ''ತಾವು ಹೇಳುವ ಎಲ್ಲವನ್ನೂ ಮಾಡುತ್ತೇನೆ. ಪತಿಯ ವಿಷಯದಲ್ಲಿ ಹೇಗೆ ನಡೆಯಬೇಕೆಂಬುದನ್ನು ಬಲ್ಲೆನು, ಕೇಳಿಯೂ ಇದ್ದೇನೆ.

ನನ್ನನ್ನು ಅಸತ್ಯವಂತಳೆಂದು ಎಣಿಸಬಾರದು" ಎಂದು ಉತ್ತರಕೊಟ್ಟಳು. ರಾಮನು ತಾಯನ್ನು ಕುರಿತು ಈ ವನವಾಸದ ಕಾಲವೆನ್ನುವುದು ಬಹು ಬೇಗ ಕಳೆಯುತ್ತದೆ. ನೀನು ಮಲಗಿ ಏಳುವ ವೇಳೆಗೆ ಹದಿನಾಲ್ಕು ವರ್ಷ ಕಳೆಯುತ್ತದೆ. ನಾನು ಪುನಃ ಬರುತ್ತೇನೆ. ನೀನು ನನ್ನನ್ನು ನೋಡು ತ್ತೀಯೆ" ಎಂದು ಹೇಳಿ ಉಳಿದ ತಾಯಿಯರ ಕಡೆ ತಿರುಗಿ "ತಿಳಿಯದೆ ನಾನು ಯಾವಾಗಲಾದರೂ ಕಠಿಣವಾದ ಮಾತನ್ನಾಡಿದ್ದರೆ, ಅಪ್ರಿಯವನ್ನು ಮಾಡಿದ್ದರೆ, ತಾವೆಲ್ಲ ಅದನ್ನು ಮನ್ನಿಸಿ ನಮಗೆ ಈಗ ಅಪ್ಪಣೆ ಕೊಡಬೇಕು" ಎಂದನು. ಅವರೆಲ್ಲ ಸುಮ್ಮನೆ ಅತ್ತರು. ರಾಮಲಕ್ಷ್ಮಣ ಸೀತಾ ದೇವಿಯರು ಅರಸನಿಗೆ ಪ್ರದಕ್ಷಿಣೆಮಾಡಿ ಕೌಸಲ್ಯಾದೇವಿಗೆ ನಮಸ್ಕರಿಸಿ ಹೊರಟರು. ಲಕ್ಷ್ಮಣನು ತಾಯಿ ಸುಮಿತ್ರೆಗೆ ಮತ್ತೊಮ್ಮೆ ನಮಸ್ಕರಿಸಿದನು. ಆಕೆ ಮಗನ ಮಂಡೆಯನ್ನಾಘ್ರಾಣಿಸಿ "ರಾಮನಲ್ಲಿ ಅನುರಕ್ತನಾದ ನೀನು ವನವಾಸಕ್ಕಾಗಿಯೇ ಹುಟ್ಟಿದವನು. ಅರಣ್ಯಕ್ಕೆ ಹೋಗುತ್ತಿರುವ ರಾಮನಿಗೆ ತಪ್ಪಿ ನಡೆಯಬೇಡ. ವ್ಯಸನಿಯಾಗಿರಲಿ, ಸಮೃದ್ಧನಾಗಿರಲಿ, ಅವನೇ ನಿನಗೆ ಗತಿ. ಹಿರಿಯನಿಗೆ ವಶರಾಗಿ ನಡೆಯುವುದು ಒಳ್ಳೆಯವರ ದಾರಿ. ಇದು ಈ ಕುಲದ ಸನಾತನವಾದ ಪದ್ಧತಿಗೆ ತಕ್ಕ ನಡತೆ. ಹೋಗಿಬಾ, ಹೋಗಿಬಾ, ರಾಮನನ್ನು ದಶರಥನೆಂದು ತಿಳಿ; ಸೀತೆಯನ್ನು ನಾನೆಂದು ತಿಳಿ; ಅಡವಿಯೇ ಅಯೋಧ್ಯೆಯೆಂದು ತಿಳಿ. ಸುಖವಾಗಿರು. ಹೋಗಿ ಬಾ" ಎಂದು ಕಳುಹಿಸಿಕೊಟ್ಟಳು. ಸುಮಂತ್ರನು ಇವರನ್ನು ರಥದಲ್ಲಿ ಕೂರಿಸಿಕೊಂಡು ಹೊರಟನು. ಊರ ಜನವೆಲ್ಲ ಹಿಂದೆ ಓಡಿದರು. ರಾಜನು ರಾಣಿಯರ ಸಮೇತನಾಗಿ ರಾಮನನ್ನು ನೋಡೋಣವೆಂದು ಅರಮನೆ ಯಿಂದ ಹೊರಗೆ ಬಂದನು. ರಾಮನು ರಥವನ್ನು ಬೇಗ ಬಿಡೆಂದು ಸೂತನಿಗೆ ಅಪ್ಪಣೆಮಾಡಿದನು; ಜನರು ಸ್ವಲ್ಪ ತಡೆ ಎಂದರು; ಏನು ಮಾಡುವು ದೆಂದು ಸಾರಥಿಗೆ ತಿಳಿಯಲಿಲ್ಲ. ಹಿಂದೆ ನಿಂತ ತಂದೆತಾಯಿಯರನ್ನು ರಾಮನು ನೋಡಿಯೂ ನೋಡದಂತಿದ್ದನು. ಕೌಸಲ್ಯಾದೇವಿ, ಕರುವಿನ ಹಿಂದೆ ಓಡುವ ತಾಯಂತೆ, ರಾಮ, ರಾಮ ಎಂದೂ ಸೀತೇ ಲಕ್ಷ್ಮಣಾ ಎಂದೂ ಕರೆಯುತ್ತ ರಥದ ಹಿಂದೆ ಓಡಿಬಂದಳು. ಯಾರು ಹಿಂದಕ್ಕೆ ಬರಬೇಕೆಂದು ಬಯಸುವೆವೋ ಅವರನ್ನು ದಾರಿಬಿಡಲು ಬಹುದೂರ ಹೋಗ

ಬಾರದು, ಎಂದು ಅಮಾತ್ಯರು ರಾಜನಿಗೆ ಸಮಾಧಾನ ಹೇಳಿ ನಿಲ್ಲಿಸಿದರು. ರಥ ಮುಂದೆ ಹೋಯಿತು.

### ದಶರಥನ ಮರಣ

ರಾಮನು ಹೊರಟುಹೋದ ಕ್ಷಣದಿಂದ ಅಯೋಧ್ಯೆಯ ಮೇಲೆ ಒಂದು ಕತ್ತಲು ಕವಿಯಿತು. ಜನರು ದುಃಖಿಸಿದ್ದು ಹಾಗಿರಲಿ. ಆನೆ ಕಬಳವನ್ನು ತಿನ್ನದೆ ಬಿಟ್ಟಿತು. ಆಕಳು ಕರುವಿಗೆ ಹಾಲು ಕುಡಿಸಲಿಲ್ಲ. ಅರಸನು ರಾಮನ ರಥದ ಧೂಳು ಕಾಣುವವರೆಗೂ ನಿಂತಲ್ಲಿಯೇ ನಿಂತು ಅವನು ಹೋದ ಕಡೆ ನೋಡುತ್ತಿದ್ದನು. ಅದು ಕಾಣುತ್ತಿರುವವರೆಗೆ ಅವನು ರಾಮನನ್ನು ಕಂಡಂತೆ ಅಭಿಲಾಷೆಯಿಂದ ದೃಷ್ಟಿಸುತ್ತಿದ್ದನು. ಅದು ಕಾಣದೇಹೋದ ಒಡನೆ ದುಃಖಿತನಾಗಿ ನೆಲದಲ್ಲಿ ಬಿದ್ದನು. ಹಿಂದೆ ಅವನು ಕೆಳಗೆ ಬಿದ್ದಾಗ ರಾಮ ಲಕ್ಷ್ಮಣರು ಬಂದು ಹಿಡಿದೆತ್ತಿದರು. ಈಗ ಬಲಗಡೆಗೆ ಕೌಸಲ್ಯೆ ಬಂದಳು, ಎಡಗಡೆಗೆ ಕೈಕಯಿ ಬಂದಳು. ಅರಸನು ಕೈಕಯಿಯನ್ನು ಕುರಿತು "ಓ ದುಷ್ಟಚಾರಿಣಿ, ನೀನು ನನ್ನ ಶರೀರವನ್ನು ಮುಟ್ಟಬೇಡ. ನನಗೆ ನಿನ್ನನ್ನು ನೋಡುವುದಕ್ಕೆ ಮನಸ್ಸಿಲ್ಲ. ನೀನು ನನಗೆ ಹೆಂಡತಿಯಲ್ಲ. ನನಗೆ ನಿನಗೆ ಸಂಬಂಧವಿಲ್ಲ. ನಿನ್ನವರು ನನ್ನವರಲ್ಲ, ನಾನು ಅವರಿಗೆ ಸೇರಿದವನಲ್ಲ. ಅರ್ಥಪರಳಾಗಿ ನೀನು ಧರ್ಮವನ್ನು ತ್ಯಜಿಸಿದೆ; ನಿನ್ನನ್ನು ನಾನು ತ್ಯಜಿಸುತ್ತೇನೆ. ನಿನ್ನ ಪಾಣಿಗ್ರಹಣವನ್ನು ಮಾಡಿ ಅಗ್ನಿ ಪ್ರದಕ್ಷಿಣೆಯನ್ನು ಮಾಡಿದ್ದು ಯಾವುದೋ ಅದನ್ನು ಇಹಲೋಕ ಪರ ಲೋಕವೆರಡರ ಬಗೆಗೂ ಈಗ ನೀಗಿದ್ದೇನೆ. ಭರತನು ಈ ರಾಜ್ಯವನ್ನು ಹೊಂದಿ ಸಂತುಷ್ಟನಾಗುವುದಾದರೆ ಅವನು ನನಗಾಗಿ ಕೊಡುವ ಪಿತೃ ದತ್ತವು ನನ್ನನ್ನು ಸೇರದಿರಲಿ" ಎಂದನು. ಹೀಗೆಂದು ಅವನು ಮತ್ತೆ ದಾರಿಯನ್ನು ನೋಡಿ ಮಗನನ್ನು ನೆನೆದು "ನನ್ನ ಮಗನನ್ನು ಕರೆದು ಕೊಂಡುಹೋದ ಕುದುರೆಗಳ ಹೆಜ್ಜೆಯ ಗುರುತು ದಾರಿಯಲ್ಲಿ ಕಾಣುತ್ತದೆ. ಅವನು ಕಾಣಲಿಲ್ಲ. ನನ್ನ ಮಕ್ಕಳಲ್ಲಿ ಉತ್ತಮನಾದ ಮಗನು ಸುಖವಾದ ಹಾಸಿಗೆಯಲ್ಲಿ ಚಂದನರೂಷಿತನಾಗಿ ಪವ್ವಡಿಸುತ್ತಿದ್ದವನು; ಮಹಾರ್ಹರಾದ ಸ್ತ್ರೀಯರು ಗಾಳಿ ಬೀಸುತ್ತ ಇರಲು ನಿದ್ರೆಹೋಗುತ್ತಿದ್ದವನು. ಅವನು ಈಗ ಮರದ ಬುಡವನ್ನು ಆಶ್ರಯಿಸಿ ಕೊರಡನ್ನೋ ಕಲ್ಲನ್ನೋ ತಲೆಗಿಟ್ಟುಕೊಂಡು

ಮಲಗುವನಲ್ಲವೆ! ಮಲಗಿದ್ದು ಎದ್ದು ನಡೆಯುವ ದೀರ್ಘಬಾಹುವಾದ ಇವನನ್ನು ಕಾಡಿನ ಜನರು ಲೋಕನಾಥನಾದರೂ ಅನಾಥನೆಂದು ಬಗೆಯುವರು. ಜನಕನ ಇಷ್ಟಸುತೆ, ಸುಖದಲ್ಲಿ ಬೆಳೆದವಳು, ಈಗ ವನವನ್ನು ಹೊಕ್ಕಳು. ಕಾಡಿನ ವಿವರವನ್ನು ತಿಳಿಯದ ಅವಳು ಭಯಪಡುವುದೇ ನಿಜ. ಕೈಕಯಿ, ನಿನ್ನ ಇಷ್ಟ ನೆರವೇರಲಿ. ನೀನು ವಿಧವೆಯಾಗಿ ರಾಜ್ಯವನ್ನಾಳು. ರಾಮನನ್ನು ಬಿಟ್ಟು ನಾನು ಜೀವಿಸಿರಲಾರೆನು" ಎಂದನು. ಹೀಗೆಂದು ಹೇಳುತ್ತ ಅರಸನು ನಗರಕ್ಕೆ ಹಿಂತಿರುಗಿದನು. ಅರಮನೆಯಲ್ಲಿ ರಾಮನೂ ಸೀತಾ ಲಕ್ಷ್ಮಣರೂ ಇಲ್ಲದಿರಲಾಗಿ "ನನ್ನನ್ನು ಕೌಸಲ್ಯೆಯ ಗೃಹಕ್ಕೆ ಕರೆದುಕೊಂಡು ಹೋಗಿ. ಇನ್ನೆಲ್ಲಿಯೂ ಮನಸ್ಸಿಗೆ ಸಮಾಧಾನವಾಗುವುದಿಲ್ಲ" ಎಂದನು. ಪರಿಜನರು ಅವನನ್ನು ಅಲ್ಲಿಗೆ ಕರೆದುಕೊಂಡುಹೋದರು. ಅಲ್ಲಿಯೂ ಅವನಿಗೆ ರಾಮ ಲಕ್ಷ್ಮಣ ಸೀತೆಯರಿಲ್ಲವೆಂದು ಮನಸ್ಸಿಗೆ ನೋವು. ಅವನು ದುಃಖದಿಂದ "ರಾಮಾ, ನನ್ನನ್ನು ಬಿಟ್ಟುಹೋದೆಯಾ? ನೀನು ಪುನಃ ಬರುವವರೆಗೆ ಜೀವಿಸಿದ್ದು ನಿನ್ನನ್ನು ಅಪ್ಪುವವರು ಪುಣ್ಯವಂತರು" ಎಂದು ರೋದಿಸಿದನು. ರಾತ್ರಿಯಾಯಿತು. ಕತ್ತಲು ಆತ್ಮದ ಕಾಳ ರಾತ್ರಿಯಂತೆ ಬೆಳೆಯಿತು. ದಶರಥನು ಕೌಸಲ್ಯೆಯನ್ನು ಕುರಿತು "ರಾಮನ ಹಿಂದೆ ಹೋದ ನನ್ನ ದೃಷ್ಟಿ ಇನ್ನೂ ಹಿಂದಿರುಗಿ ಬಂದಿಲ್ಲ. ನೀನು ನನಗೆ ಕಾಣಿಸುತ್ತಿಲ್ಲ, ಕೌಸಲ್ಯೆ. ನನ್ನನ್ನು ನಿನ್ನ ಕೈಯಿಂದ ಮುಟ್ಟು" ಎಂದನು. ಕೌಸಲ್ಯಾದೇವಿ ದುಃಖಿತನಾದ ರಾಜನ ಬಳಿ ಕುಳಿತು ತಾನೂ ತನ್ನ ದುಃಖವನ್ನು ತೋಡಿಕೊಂಡಳು.

ವಾಲ್ಮೀಕಿಯ ಮಾನವಸ್ವಭಾವ ಪರಿಜ್ಞಾನ ಎಷ್ಟು ಪೂರ್ಣ ಎನ್ನುವುದು ಈ ಸಂದರ್ಭದಲ್ಲಿಯೂ ಕಾಣುತ್ತದೆ. ಮಗನು ಹೊರಟುಹೋದನೆಂದು ದಶರಥನು ಕೌಸಲ್ಯೆಯಿಂದ ಮರುಕವನ್ನು ನಿರೀಕ್ಷಿಸುತ್ತಾನೆ. ಕೌಸಲ್ಯೆಗಾದರೂ ಅವನ ವಿಷಯದಲ್ಲಿ ಮರುಕವಿಲ್ಲದೆ ಇಲ್ಲ. ಆದರೆ ಮಗನು ಹೋದ ದುಃಖ ಅವಳಿಗೂ ಇದೆ. ಗಂಡನ ದುಃಖಕ್ಕಿಂತ ಅವಳಿಗೆ ತನ್ನ ದುಃಖ ದೊಡ್ಡದು. ಸಾಲದ್ದಕ್ಕೆ ಆ ಮಗನು ಹೋಗುವಂತೆ ಮಾಡಿದವನು ಇವನು ಎಂಬ ಕ್ರೋಧ ಬೇರೆ. ಜೊತೆಗೆ, ಅವನಿಂದ ಹಾಗೆ ಮಾಡಿಸಿದವಳು ಕೈಕಯಿ, ಅವಳು ಈಗ ಸಂತೋಷದಲ್ಲಿದ್ದಾಳೆ, ಎಂಬ ಅಸೂಯೆ. ಅವಳು

"ರಾಮನು ಕಾಡು ಸೇರಿದನು. ಕೈಕಯಿ ಹರಿ ಬಿಟ್ಟ ಹಾವಂತೆ ನನ್ನನ್ನು ಭಯಪಡಿಸುತ್ತಿದಾಳೆ. ನೀನು ಅವಳಿಗಾಗಿ ರಾಮನನ್ನು ಕಾಡಿಗೆ ಕೊಟ್ಟು ನನಗೆ ಈ ಸ್ಥಿತಿಯನ್ನು ತಂದೆ. ಕಾಡಿಗೆ ಹೋದ ಆ ಮೂವರ ಗತಿ ಏನು? ಅವರನ್ನು ನಾನು ಪುನಃ ಎಂದಿಗೆ ನೋಡುತ್ತೇನೆ? ರಥದಲ್ಲಿ ಮುಂದೆ ಸೀತೆಯನ್ನು ಕೂರಿಸಿಕೊಂಡು ರಾಮಚಂದ್ರನು ಪುನಃ ಅಯೋಧ್ಯೆಯನ್ನು ಪ್ರವೇಶಿಸುವುದು ಎಂದಿಗೆ? ಹಿಂದೆ ನಾನು ತಾಯಹಾಲನ್ನು ಕುಡಿಯಲು ಬಂದ ಕರುವನ್ನು ತಡೆದಿರಬೇಕು. ಅದರಿಂದಲೇ ಈಗ ಕೈಕಯಿಯಿಂದ ನನಗೆ ಮಗನಿದ್ದರೂ ಇಲ್ಲದಂತಾಗಿದೆ. ಹೆತ್ತ ಒಬ್ಬ ಮಗನನ್ನು ಬಿಟ್ಟು ನಾನು ಬಾಳಲಾರೆನು. ಬೇಸಗೆಯ ಬಿಸಿಲಂತೆ ಈ ಶೋಕ ನನ್ನನ್ನು ಸುಡುತ್ತಿದೆ" ಎಂದಳು. ಹೀಗೆ ದುಃಖಿಸುವ ಕೌಸಲ್ಯೆಯನ್ನು ಕುರಿತು ಸುಮಿತ್ರೆ ಸಮಾಧಾನದ ಮಾತನ್ನು ಹೇಳಿದಳು. ಸುಮಿತ್ರೆಯ ದುಃಖ ಕೌಸಲ್ಯೆಯ ದುಃಖಕ್ಕಿಂತ ಕಡಮೆಯಲ್ಲ. ಆದರೂ ಅವಳು ತನ್ನ ದುಃಖವನ್ನು ಆಡಿತೋರಿಸದೆ ಇನ್ನೊಬ್ಬರಿಗೆ ಸಮಾಧಾನವನ್ನು ಹೇಳುವಂಥವಳು. ಇಂಥವರೂ ಬಹು ಜನ. "ಅಕ್ಕ ಕೌಸಲ್ಯೆ, ನಿನ್ನ ಮಗನು ಗುಣವಂತನು. ಅವನನ್ನು ಕುರಿತು ದುಃಖಿಸಬೇಕಾದದೇನು? ತಂದೆಯ ಮಾತನ್ನು ನಡೆಸಿ ಸತ್ಯವಂತನೆನಿಸಿಕೊಂಡಿರುವ ಧರ್ಮಸ್ಥಿತನಾದ ಆ ಮಹಾತ್ಮನು ಶೋಕಕ್ಕೆ ವಿಷಯನಲ್ಲ. ಅವನ ಜೊತೆಗೆ ಲಕ್ಷ್ಮಣನಿದಾನೆ, ಸೀತೆಯಿದಾಳೆ. ಧರ್ಮಾತ್ಮನೂ ಸತ್ಯವಂತನೂ ಆದ ನಿನ್ನ ಮಗನಿಗೆ ಯಾವುದಿಲ್ಲದೆ ಹೋಗುತ್ತದೆ? ಅವನ ಸತ್ಯಸಂಧತೆಯನ್ನು ಬಲ್ಲ ಸೂರ್ಯನು ತನ್ನ ಕಿರಣಗಳಿಂದ ಅವನ ಮೈಯನ್ನು ಸಂತಾಪಗೊಳಿಸದೆ ಇರುವನು. ಕಾನನದಲ್ಲಿ ಊದಿ ಬರುವ ಗಾಳಿ ಅವನಿಗೆ ಸುಖವಾಗಿರುವಂತೆ ಸೇವೆಮಾಡುತ್ತದೆ. ರಾತ್ರಿ ಮಲಗಿರುವ ವೇಳೆ ಚಂದ್ರನು ಅವನನ್ನು ತನ್ನ ರಶ್ಮಿಯಿಂದ ಅಪ್ಪಿ ತಂದೆ ಮಗನನ್ನು ಸಂತೋಷ ಪಡಿಸುವಂತೆ ಸಂತೋಷಪಡಿಸುತ್ತಾನೆ. ತನ್ನ ಬಾಹುವಿನ ಶಕ್ತಿಯಿಂದ ರಾಮಚಂದ್ರನು ಅರಣ್ಯದಲ್ಲಾದರೂ ಮನೆಯಲ್ಲಿರುವಂತೆ ಕ್ಷೇಮವಾಗಿರುತ್ತಾನೆ. ರಾಮಚಂದ್ರನಿಗೆ ರಾಷ್ಟ್ರದಲ್ಲಾಗಲಿ ಪಟ್ಟಣದಲ್ಲಾಗಲಿ ತೊಂದರೆ ಎಲ್ಲಿಯದು? ಕುಶಚೀರಧರನಾದರೂ ರಾಮಚಂದ್ರನು ಅಪರಾಜಿತನು. ಸೀತೆ ಅವನ ಲಕ್ಷ್ಮಿ

ಜೊತೆಯಲ್ಲಿದಾಳೆ. ಅವನಿಗೇನು ಕಡಮೆ? ಬಿಲ್ಲು ಬಾಣವನ್ನು ಹಿಡಿದು ಶಕ್ತನಾದ ಲಕ್ಷ್ಮಣನು ಅವನ ಮುಂದೆ ಹೋಗಿದಾನೆ. ಇಂಥ ರಾಮನಿಗೇನು ಕಡಮೆ? ವನವಾಸವನ್ನು ಮುಗಿಸಿ ಹಿಂದಕ್ಕೆ ಬಂದ ಮಗನನ್ನು ನೋಡಿದೆಯೆಂದು ತಿಳಿ. ಈ ಶೋಕವನ್ನು ಈ ಮೋಹವನ್ನು ಬಿಡು. ನಿನ್ನ ಮಗನು ಕ್ಷಿಪ್ರದಲ್ಲಿ ಅಯೋಧ್ಯೆಗೆ ಮರಳಿ ಬಂದು ತನ್ನ ಮೃದುವಾದ ತುಂಬಿದ ಕೈಗಳಿಂದ ನಿನ್ನ ಪಾದಗಳನ್ನು ಅವುಕುತ್ತಾನೆ. ಹಾಗೆ ನಮಸ್ಕರಿಸುವ ಅವನನ್ನು ನೀನು ಸಂತೋಷಾಶ್ರುವಿನಿಂದ ಮೇಘರಾಜಿ ಪರ್ವತವನ್ನು ಪ್ರೋಕ್ಷಿಸುವಂತೆ ಪ್ರೋಕ್ಷಿಸುತ್ತೀಯೆ'' ಎಂದಳು.

ಹೀಗೆ ಇವರು ಮೂರುದಿನ ಕಳೆದರು. ಸೀತಾರಾಮಲಕ್ಷ್ಮಣರನ್ನು ಜನಪದದ ಕೊನೆಯಲ್ಲಿ ಬಿಟ್ಟು ಸುಮಂತ್ರನು ಹಿಂದಿರುಗಿದನು. ಜನರು ರಾಮನೆಲ್ಲಿ ಎಂದು ಕೇಳಿ ಅವನ ಹಿಂದೆ ಓಡಿಬಂದರು; ರಾಮನನ್ನು ಗಂಗೆಯ ತಡಿಯಲ್ಲಿ ಬಿಟ್ಟು ಬಂದೆನೆಂದು ಅವನು ಹೇಳಲು ಅಯ್ಯೋ ಎಂದು ದುಃಖಪಡುತ್ತ ಹಿಂದಿರುಗಿದರು. ''ಸೂತನು ರಾಮನೊಡನೆ ಹೋದವನು ರಾಮನಿಲ್ಲದೆ ಬರುತ್ತಿದಾನೆ. ಇವನು ಕೌಸಲ್ಯೆಗೆ ಏನು ತಾನೇ ಹೇಳಿಯಾನು'' ಎಂದು ದಶರಥನ ಮಹಿಷಿಯರು ತಮ್ಮ ತಮ್ಮಲ್ಲಿ ಆಡಿಕೊಂಡರು. ಸುಮಂತ್ರನಿಗಾಗಲಿ ರಾಮನನ್ನು ಬಿಟ್ಟು ಊರಿಗೆ ಹಿಂತಿರುಗುವುದು ಸುಲಭವಾಗಿರಲಿಲ್ಲ. ಗಂಗೆಯ ತಡಿಯಲ್ಲಿ ರಾಮನನ್ನೂ ಸೀತಾಲಕ್ಷ್ಮಣರನ್ನೂ ಬೀಳ್ಕೊಡುವಾಗ ಅದುವರೆಗೆ ಮನಸ್ಸನ್ನು ಬಿಗಿಹಿಡಿದು ನಡೆದುಕೊಂಡಿದ್ದ ಈ ವೃದ್ಧ ಸೂತನು ದುಃಖಕ್ಕೆ ತಗ್ಗಿದನು. ನಾವೆಯನ್ನು ಏರಲು ಸಿದ್ಧನಾದ ರಾಮನನ್ನು ನೋಡಿ ಇವನು ನನಗೇನಪ್ಪಣೆ ಎಂದನು. ರಾಮನು ''ನೀನು ಪುರಿಗೆ ಹೋಗು. ರಾಜನ ಬಳಿಯಲ್ಲಿ ಎಂದಿನಂತೆ ಎಚ್ಚರಿಕೆಯಿಂದ ಸೇವೆಯಲ್ಲಿರು'' ಎಂದನು. ಸುಮಂತ್ರನು ''ಲೋಕದಲ್ಲಿ ಜೀವನದ ಪಥವು ಮನುಷ್ಯನಿಗೆ ಅತಿಕ್ರಮಿಸಲಸಾಧ್ಯವಾದದು ಎನ್ನುವುದು ನಿನ್ನಂಥವನು ವನವಾಸ ಮಾಡಬೇಕಾದ ಈ ಸಂದರ್ಭದಿಂದ ಸ್ಪಷ್ಟವಾಗುತ್ತದೆ. ನಿನಗೆ ಈ ಕಷ್ಟ ಬಂದಿರುವುದನ್ನು ನೋಡಿದರೆ ಬ್ರಹ್ಮಚರ್ಯ ಮಾರ್ದವ ಆರ್ಜವಾದಿ ಸದ್ಗುಣಗಳಿಗೆ ಫಲವೆನ್ನುವುದು ಇಲ್ಲವೆಂದು

ಎಣಿಸುತ್ತೇನೆ. ಸೀತಾ ಲಕ್ಷ್ಮಣ ಸಮೇತನಾಗಿ ವನಕ್ಕೆ ಹೊರಟು ನೀನು ಒಳ್ಳೆಯದನ್ನೇ ಪಡೆದೆ. ಕೆಟ್ಟುಹೋದವರು ನಾವು, ರಾಮ, ನಿನ್ನ ಸಹ ವಾಸ ತಪ್ಪಿ ಕೈಕಯಿಯ ವಶವಾಗತಕ್ಕವರು'' ಎಂದನು. ರಾಮನು ಅವನನ್ನು ಕುರಿತು ''ಇಕ್ಷ್ವಾಕುವಂಶದ ಅರಸರಿಗೆ ನಿನ್ನಂಥ ಸ್ನೇಹಿತನು ಇನ್ನೊಬ್ಬನಿಲ್ಲ. ದಶರಥ ಮಹಾರಾಜನು ದುಃಖಿಸದೆ ಇರಬೇಕಾದರೆ ಏನೇನು ಬೇಕೋ ಅದೆಲ್ಲವನ್ನೂ ಮಾಡು. ಆತನು ವೃದ್ಧನಾಗಿದಾನೆ. ದುಃಖದಿಂದ ಪೆಟ್ಟುತಿಂದಿದಾನೆ. ಕಾಮಭಾರದಿಂದ ಕೆಟ್ಟಿದಾನೆ. ಅದರಿಂದ ನಿನಗೆ ಹೇಳುತ್ತೇನೆ. ಆತನು ಹೀನಾಯಪಡದಂತೆ ಕುಗ್ಗಿಹೋಗದಂತೆ ಸಾಧ್ಯವಾದದನ್ನೆಲ್ಲ ಮಾಡು. ನಾನು ನಮಸ್ಕಾರಮಾಡಿ ಹೀಗೆಂದೆನೆಂದು ಹೇಳು. 'ಅಯೋಧ್ಯೆಯನ್ನು ಬಿಟ್ಟು ಕಾಡಿಗೆ ಹೋಗುತ್ತೇನೆಂದು ನನಗೆ ಏನೂ ದುಃಖವಿಲ್ಲ. ಲಕ್ಷ್ಮಣನಿಗೂ ದುಃಖವಿಲ್ಲ. ಸೀತೆಗಾದರೂ ದುಃಖವಿಲ್ಲ. ಹದಿನಾಲ್ಕು ವರ್ಷವನ್ನು ಕಳೆದು ನಾವು ಮೂವರೂ ಮರಳಿ ಬರುತ್ತೇವೆ. ನಮ್ಮನ್ನು ನೀನು ನೋಡುತ್ತೀಯೆ.' ಹೀಗೆ ತಂದೆಗೆ ಹೇಳಿ ತಾಯಂದಿರಿಗೂ ಈ ಮಾತನ್ನು ತಿಳಿಸು. ಎಲ್ಲ ದೇವಿಯರಿಗೂ ಕೈಕಯಿದೇವಿಗೂ ನಾವು ಕ್ಷೇಮವಾಗಿರುವುದನ್ನು ತಿಳಿಸು. ಕೌಸಲ್ಯಾ ದೇವಿಗೆ ನಮ್ಮ ಮೂವರ ನಮಸ್ಕಾರವನ್ನು ಹೇಳಿ ಸುಖವಾಗಿದೇವೆಂದು ಹೇಳು. ಭರತನನ್ನು ಬೇಗನೆ ಕರೆತಂದು ಯುವರಾಜನಾಗಿ ಮಾಡಹೇಳು. ಆತನು ಯುವರಾಜನಾದದನ್ನು ನೋಡಿ ಅಪ್ಪಿಕೊಂಡು ನಿನಗೆ ನಮ್ಮನ್ನಗಲಿರುವ ನೋವು ಸ್ವಲ್ಪ ಕಡಿಮೆಯಾಗುತ್ತದೆ ಎಂದೆನೆಂದು ತಿಳಿಸು. ಭರತನಿಗೂ ಈ ಮಾತನ್ನು ಹೇಳಬೇಕು. ಅವನು ರಾಜನ ವಿಷಯದಲ್ಲಿ ನಡೆದುಕೊಳ್ಳುವಂತೆ ರಾಣಿಯರು ಎಲ್ಲರ ವಿಷಯದಲ್ಲಿಯೂ ನಡೆದುಕೊಳ್ಳಬೇಕು. ಅದರಲ್ಲಿ ಒಬ್ಬರು ಹೆಚ್ಚು ಒಬ್ಬರು ಕಡಮೆ ಎಂದು ನೋಡಬಾರದು. 'ನಿನಗೆ ಕೈಕಯಿದೇವಿ ಹೇಗೋ ಹಾಗೆ ಅಥವಾ ಅದಕ್ಕಿಂತ ಹೆಚ್ಚು ಸುಮಿತ್ರಾದೇವಿ; ಹಾಗೆಯೇ ನನ್ನ ತಾಯಿ ಕೌಸಲ್ಯಾ ದೇವಿ. ಯೌವರಾಜ್ಯವನ್ನು ಪಡೆದ ನೀನು ತಂದೆಗೆ ಇಷ್ಟವಾದದನ್ನು ಮಾಡಿ ಇಹಪರವೆರಡರ ನಿತ್ಯಸುಖವನ್ನು ಸಾಧಿಸಬಹುದು.' ಎಂದು ತಿಳಿಸು'' ಎಂದನು. ಈ ಮಾತುಗಳನ್ನು ಹೇಳಿ ರಾಮನು ತನಗೆ ಹೋಗಿ

ಬಾರೆಂದು ಅಪ್ಪಣೆಮಾಡಲು ಸುಮಂತ್ರನು ಅವನಿಗೆ ಪ್ರತಿಯಾಗಿ "ನಾನು ಸ್ನೇಹದಿಂದ ಧೈರ್ಯವಾಗಿ ಹೇಳುವ ಮಾತನ್ನು ನನಗೆ ನಿನ್ನಲ್ಲಿರುವ ಭಕ್ತಿಯನ್ನೆಣಿಸಿ ನೀನು ಮನ್ನಿಸಬೇಕು. ನಿನ್ನನ್ನು ಬಿಟ್ಟು ನಾನು ನಗರಿಗೆ ಹೇಗೆ ಹೋಗಲಿ? ನಿನಗಾಗಿ ಚಿಂತಾಕುಲರಾದ ಪ್ರಜೆಗಳನ್ನು ಹೇಗೆ ನೋಡಲಿ? ಅಯೋಧ್ಯಾನಗರಿಯ ಆರ್ತನಾದವನ್ನು ಹೇಗೆ ಕೇಳಲಿ? ಕೌಸಲ್ಯಾದೇವಿಗೆ ಯಾವ ಮಾತನ್ನಾಡಲಿ? ನಾನು ನಿನ್ನನ್ನು ಬಿಟ್ಟು ಅಯೋಧ್ಯೆಗೆ ಹೋಗಲಾರೆನು. ನನ್ನನ್ನು ಜೊತೆಗೆ ಅರಣ್ಯಕ್ಕೆ ಕರೆದು ಕೊಂಡುಹೋಗು. ಹೀಗಿಲ್ಲದೆ ನೀನು ನನ್ನನ್ನು ಬಿಟ್ಟು ಹೋಗುವುದಾದರೆ ನಾನು ರಥದೊಡನೆ ಅಗ್ನಿಪ್ರವೇಶಮಾಡುವೆನು. ಹದಿನಾಲ್ಕು ವರ್ಷವನ್ನು ನಿನ್ನೊಡನೆ ವನದಲ್ಲಿ ಒಂದು ಕ್ಷಣದಂತೆ ಕಳೆಯುತ್ತೇನೆ. ನೀನು ಭಕ್ತನೂ ಭೃತ್ಯನೂ ಆದ ನನ್ನನ್ನು ಬಿಟ್ಟು ಹೋಗುವುದು ತಕ್ಕದಲ್ಲ" ಎಂದನು. ರಾಮನು ಸುಮಂತ್ರನಿಗೆ "ನಿನಗೆ ನನ್ನಲ್ಲಿ ಎಷ್ಟು ಭಕ್ತಿಯಿದೆಯೆಂಬುದನ್ನು ನಾನು ಬಲ್ಲೆನು. ಆದರೂ ನೀನು ನಗರಿಗೆ ಹೋಗಬೇಕು. ನೀನು ಹಿಂದಿರುಗಿ ಹೋದರೆ ಕೈಕಯಿದೇವಿಗೆ ನಾವು ವನವಾಸಕ್ಕೆ ತೆರಳಿದ್ದು ನಿಶ್ಚಯವಾಗುತ್ತದೆ. ಅದಿಲ್ಲದಿದ್ದರೆ ರಾಜನು ಕೊಟ್ಟ ಮಾತನ್ನು ನಾವು ನಡೆಸಲಿಲ್ಲವೆಂದೇ ಅವಳು ತಿಳಿಯಬಹುದು. ಆದ್ದರಿಂದ ನೀನು ಹಿಂದಕ್ಕೇ ಹೋಗಬೇಕು" ಎಂದನು. ಈ ಮಾತನ್ನೆಲ್ಲ ಆಡಿ ಕೇಳಿ ಹಿಂದಕ್ಕೆ ಬಂದ ಸುಮಂತ್ರನಿಗೆ ರಾಜನ ಬಳಿ ಬಂದು ನಿಲ್ಲುವುದೇ ಕಷ್ಟವಾಯಿತು. ಅವನು ದೊರೆಯ ಬಳಿಗೆ ಬಂದು ರಾಮನು ಹೇಳಿದ ಮಾತನ್ನು ತಿಳಿಸಿದನು. ಈ ಮಾತನ್ನು ಕೇಳಿ ರಾಜನು ಪುನಃ ಮೂರ್ಛಿತನಾದನು. ಸುಮಿತ್ರೆಯೂ ಕೌಸಲ್ಯೆಯೂ ಅವನನ್ನು ಎತ್ತಿ ಕೂರಿಸಿದರು. ಕೌಸಲ್ಯಾದೇವಿ ರಾಜನನ್ನು ಕುರಿತು "ನಿನ್ನಾಜ್ಞೆಯನ್ನು ನಡೆಸಿ ಹಿಂದಕ್ಕೆ ಬಂದಿರುವ ಸೂತನನ್ನು ಏಕೆ ಮಾತನಾಡಿಸದೆ ಇರುವೆ? ಯಾರ ಭಯದಿಂದ ರಾಮನ ವಿಷಯವಾಗಿ ಸಾರಥಿಯನ್ನು ಪ್ರಶ್ನೆಮಾಡದೆ ಇದ್ದೀಯೆ? ಕೈಕಯಿ ಇಲ್ಲಿ ಇಲ್ಲ. ಧೈರ್ಯವಾಗಿ ಮಾತನಾಡು" ಎಂದು ಹೇಳಿದಳು. ಹೀಗೆ ರಾಜನನ್ನು ನಿಷ್ಠುರವಾಗಿ ನುಡಿದು ಶೋಕಲಾಲಸೆಯಾದ ಕೌಸಲ್ಯಾದೇವಿ ಅಳುವಿನಿಂದ ಮಾತು ತೊದಲುತ್ತಿರಲು ನೆಲದಲ್ಲಿ ಬಿದ್ದಳು. ದಶರಥನು ಸುಮಂತ್ರನನ್ನು

ಸೀತಾರಾಮ ಲಕ್ಷ್ಮಣರ ವಿಷಯವಾಗಿ ಪ್ರಶ್ನೆಮಾಡಿದನು. ಕೊನೆಗೆ "ರಾಮನು ಏನು ಹೇಳಿದನು, ಲಕ್ಷ್ಮಣನು ಏನು ಹೇಳಿದನು, ಸೀತಾ ದೇವಿ ಏನು ಹೇಳಿದಳು ? ರಾಮನು ಕುಳಿತದ್ದು ಮಲಗಿದ್ದು ಊಟ ಮಾಡಿದ್ದು ಎಲ್ಲವನ್ನೂ ವಿವರವಾಗಿ ಹೇಳು" ಎಂದನು. ತಾನು ಹಿಂದಿರುಗಿ ಹೊರಡುವಾಗಲೂ ಅದಕ್ಕೆ ಮೊದಲೂ ರಾಮಲಕ್ಷ್ಮಣರು ಹೇಳಿದ ಮಾತು ಗಳನ್ನು ಸುಮಂತ್ರನು ದೊರೆಗೆ ಅರಿಕೆ ಮಾಡಿದನು. "ಜಾನಕಿ ನಿಟ್ಟುಸಿರನ್ನು ಬಿಡುತ್ತ ಮಂಕುಬಡಿದಂತೆ ವಿಸ್ಮೃತಳಾಗಿ ನಿಂತಿದ್ದಳು. ಎಂದೂ ಕಾಣದ ಕಷ್ಟದಿಂದ ದುಃಖಿತಳಾಗಿ ಸೀತಾದೇವಿ ಅಳುತ್ತಿದ್ದಳು. ನನಗೆ ಯಾವ ಒಂದು ಮಾತನ್ನೂ ಹೇಳಲಿಲ್ಲ" ಎಂದನು. ರಾಜನು "ನಾನು ಸ್ತ್ರೀಗಾಗಿ ಬಹು ತಪ್ಪುಮಾಡಿದೆನು. ನಾನು ಮಾಡಿರುವ ಪುಣ್ಯದಲ್ಲಿ ಏನಾದರೂ ಸ್ವಲ್ಪ ಉಳಿದಿದ್ದರೆ ರಾಮನನ್ನು ಇಲ್ಲಿಗೆ ಕರೆದುಕೊಂಡುಬಾ ಅಥವಾ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗು. ಅವನನ್ನು ಕಾಣದಿದ್ದರೆ ನಾನು ಯಮನ ನಗರವನ್ನು ಸೇರುವೆನು. ನಾನು ಈ ಗತಿಗೆ ಬಂದರೂ ರಾಮನನ್ನು ನೋಡದೆ ಇರುವುದಕ್ಕಿಂತ ಇನ್ನು ದುಃಖವಾವುದು ? ಹಾ ರಾಮ ಹಾ ಲಕ್ಷ್ಮಣ ಹಾ ವೈದೇಹಿ. ದುಃಖದಿಂದ ಅನಾಥನಂತೆ ನಾನು ಸಾಯುತ್ತಿರುವುದನ್ನು ನೀವು ಕಾಣಿರಿ" ಎಂದು ಹೇಳಿ ಮತ್ತೆ ಮೂರ್ಛಿತ ನಾದನು. ಕೌಸಲ್ಯಾದೇವಿಗೆ ಇವನ ಸ್ಥಿತಿಯನ್ನು ನೋಡಿ ಭಯವಾಯಿತು. ರಾಜನು ಎಚ್ಚತ್ತು ಸೂತನನ್ನು ಕುರಿತು "ನಾನು ರಾಮನನ್ನು ಬಿಟ್ಟಿರ ಲಾರೆನು. ಅವರು ಮೂವರೂ ಎಲ್ಲಿರುವರೋ ಅಲ್ಲಿಗೆ ನನ್ನನ್ನು ಕರೆದು ಕೊಂಡುಹೋಗು" ಎಂದನು. ರಾಜನಂತೆ ಕೌಸಲ್ಯಾದೇವಿಯೂ ಅವರಿ ರುವ ಕಡೆಗೆ ನನ್ನನ್ನು ಕರೆದುಕೊಂಡುಹೋಗು ಎಂದು ಸುಮಂತ್ರನನ್ನು ಕಾಡಿದಳು. ಸುಮಂತ್ರನು ಕೈಮುಗಿದು ಅವರಿಗೆ ಹೇಳಿದನು. "ನೀವು ಈ ಶೋಕವನ್ನೂ ಮೋಹವನ್ನೂ ಬಿಡಿ. ದುಃಖದಿಂದ ಉಂಟಾದ ಈ ಸಂಭ್ರಮ ಸಾಕು. ರಾಮನು ವನದಲ್ಲಿ ಸಂತಾಪವಿಲ್ಲದೆ ಇದಾನೆ. ಲಕ್ಷ್ಮಣ ನಾದರೂ ರಾಮನ ಪಾದಸೇವೆಯನ್ನು ಮಾಡುತ್ತ ಉತ್ತಮಪದವಿಯನ್ನು ಸಾಧಿಸುತ್ತಿದಾನೆ. ಜನವಿಲ್ಲದ ವನದಲ್ಲಿದ್ದರೂ ಸೀತಾದೇವಿ ರಾಮನಲ್ಲಿ ಮನಸ್ಸನ್ನಿಟ್ಟು ಅಭೀತಳಾಗಿ ಸಮಾಧಾನದಿಂದಿದಾಳೆ. ಆಕೆಯಲ್ಲಿ

ಎಳ್ಳಷ್ಟಾದರೂ ದೈನ್ಯ ನನಗೆ ಕಾಣಲಿಲ್ಲ. ಆಕೆ ಪ್ರವಾಸಕ್ಕೆ ಉಚಿತಳೆಂದೇ ನನಗೆ ಕಂಡಳು. ನಗರದ ಉಪವನಕ್ಕೆಹೋದಾಗ ಹೇಗೆ ವಿಹರಿಸುತ್ತಿದ್ದಳೋ ಹಾಗೆ ನಿರ್ಜನವಾದ ವನದಲ್ಲಿ ಸೀತೆ ವಿಹರಿಸುವಳು. ದಾರಿಯಲ್ಲಿ ಹೋಗುತ್ತ ಸೀತಾದೇವಿ ಈ ಊರು ಯಾವುದು, ಆ ನಗರ ಯಾವುದು, ಈ ನದಿ ಯಾವುದು, ಆ ಮರ ಎಂಥದು, ಎಂದು ಕೇಳುತ್ತ ರಾಮನಿಂದಲೋ ಲಕ್ಷ್ಮಣನಿಂದಲೋ ತಿಳಿಯುತ್ತ ಅಯೋಧ್ಯೆಯಿಂದ ಒಂದು ಗಾವುದ ಮಾತ್ರದಲ್ಲಿ ವಿಹರಿಸುತ್ತಿದ್ದರೆ ಹೇಗೋ ಹಾಗೆ ಇರುತ್ತಾಳೆ. ಸೀತಾದೇವಿ ಕೈಕಯಿಾದೇವಿಯ ವಿಷಯವಾಗಿ ಹೇಳಿದ ಮಾತು ನನಗೆ ಜ್ಞಾಪಕಕ್ಕೆ ಬರುತ್ತದೆ'' ಎಂದು ಹೇಳಿ ಸುಮಂತ್ರನು ಅದು ಅಷ್ಟು ಒಳ್ಳೆಯ ಮಾತಲ್ಲವೆಂಬುದನ್ನು ನೆನೆದುಕೊಂಡು ''ಏನು ಹೇಳಿದಳೋ ಮರೆತುಹೋಯಿತು'' ಎಂದು ಮತ್ತೆ ರಾಣಿಗೆ ಹಿತವಾದ ಮಾತನ್ನು ಹೇಳಿದನು. ''ದಾರಿಯ ಆಯಾಸದಿಂದ ಗಾಳಿಯಿಂದ ಬಿಸಿಲಿನಿಂದ ಆಕೆಯ ಮುಖ ಕಂದಿಲ್ಲ. ಅಲತಿಗೆಯ ರಸವನ್ನು ಹಚ್ಚಿಕೊಳ್ಳುತ್ತಿದ್ದ ಅವಳ ಪಾದಗಳು ಅದನ್ನು ಹಚ್ಚಿಕೊಳ್ಳದಿದ್ದರೂ ಎಂದಿನಂತೆಯೇ ಇವೆ. ಅವುಗಳ ಬಣ್ಣವೇ ಅಲತಿಗೆಯ ರಸದಬಣ್ಣ; ಹೊಳಪು ತಾವರೆಯ ಮೊಗ್ಗಿನ ಹೊಳಪು. ಪತಿಪ್ರೇಮದಿಂದ ಒಡವೆಗಳನ್ನು ತೆಗೆದಿಟ್ಟು ಜೊತೆಗೆ ನಡೆಯುತ್ತಿದ್ದರೂ ಸೀತಾದೇವಿ ನೂಪುರರವದಿಂದ ನಡೆಯುತ್ತಿದ್ದಂತೆ ವಿಲಾಸದಿಂದ ನಡೆಯುತ್ತಿದಾಳೆ. ನಾವು ಯಾರಿಗಾಗಿಯೂ ಶೋಕಪಡಬೇಕಾದದಿಲ್ಲ. ಅವರಿಗಾಗಿ ನಮಗಾಗಿ ರಾಜನಿಗಾಗಿ ಯಾವ ದೃಷ್ಟಿಯಿಂದಾದರೂ ಈ ನಡತೆ ಲೋಕದಲ್ಲಿ ಶಾಶ್ವತವಾದ ಉತ್ತಮ ಚರಿತೆಯಾಯಿತು. ಆದುದರಿಂದ ಸಂತೋಷವೇ ಪಡೋಣ'' ಎಂದು ಹೇಳಿದನು. ಸೂತನು ಹೀಗೆ ಒಳ್ಳೆಯ ಮಾತುಗಳನ್ನು ಹೇಳಿದರೂ ಕೌಸಲ್ಯಾದೇವಿ ರಾಮ, ರಾಘವ, ಪ್ರಿಯಪುತ್ರ ಎಂದು ಕೂಗುವುದನ್ನು ನಿಲ್ಲಿಸಲಿಲ್ಲ. ತನ್ನ ದುಃಖದ ವೇಗದಲ್ಲಿ ಪತಿಯನ್ನು ಹೀನಾಯವಾಗಿ ಬಯ್ದಳು. ''ನಿನ್ನಿಂದ ನನ್ನ ಮಗನು ಕಾಡಿಗೆ ಹೋದನು. ನೀನೂ ನನಗೆ ಇಲ್ಲವಾದೆ; ನನ್ನ ಮಗನನ್ನೂ ಕಾಡಿಗೆ ಅಟ್ಟಿದೆ. ಇನ್ನು ನಾನು ಇಲ್ಲಿ ಏಕೆ ಇರಲಿ? ಕಾಡಿಗೆ ಹೋಗುತ್ತೇನೆ. ನಿನ್ನಿಂದ ನಾನು ಮಾತ್ರವಲ್ಲ, ಈ ರಾಜ್ಯ ಹತವಾಯಿತು.

ರಾಷ್ಟ್ರ ಹತವಾಯಿತು. ನೀನೂ ಹತನಾದೆ. ಮಂತ್ರಿಗಳು ಹತರಾದರು. ಪುತ್ರಸಮೇತನಾಗಿ ನಾನು ಹತಳಾದೆ. ಊರ ಜನರು ಹತರಾದರು. ನಿನ್ನ ಹೆಂಡತಿಯೊಬ್ಬಳು ಅವಳ ಮಗನೊಬ್ಬನು, ಇಬ್ಬರಿಗೆ ಸುಖವಾಯಿತು" ಎಂದಳು. ಕೌಸಲ್ಯೆಯ ಈ ನಿಷ್ಠುರ ವಾಕ್ಯಗಳನ್ನು ಕೇಳಿ ದಶರಥನು ವ್ಯಾಕುಲನಾದನು ; ಮೈಮರೆತನು ; ಸ್ವಲ್ಪ ಹೊತ್ತು ಬಿಟ್ಟು ಎಚ್ಚತ್ತನು. ದೀರ್ಘ ನಿಶ್ವಾಸವನ್ನು ಬಿಟ್ಟು ಪಕ್ಕದಲ್ಲಿ ಕುಳಿತಿರುವ ಕೌಸಲ್ಯೆಯನ್ನು ನೋಡಿ ಚಿಂತಾಕುಲನಾದನು. "ರಾಣಿ, ನನ್ನದು ತಪ್ಪಾಯಿತು. ನೀನು ನನ್ನ ವಿಷಯದಲ್ಲಿ ಪ್ರಸನ್ನಳಾಗು. ನಾನು ಕೈಮುಗಿಯುತ್ತೇನೆ. ನೀನು ವಾತ್ಸಲ್ಯಶೀಲಳು. ಕ್ರೂರಳಲ್ಲ. ಉಳಿದವರ ವಿಷಯದಲ್ಲಿ ಹಾಗಿರತಕ್ಕವಳು ನನ್ನ ವಿಷಯದಲ್ಲಿ ಬೇರೆಯ ರೀತಿ ನಡೆಯದಿರು. ಗುಣಶಾಲಿಯಾಗಲಿ ನಿರ್ಗುಣನಾಗಲಿ ಧರ್ಮಿಷ್ಠಳಾದ ಪತ್ನಿಗೆ ಪತಿ ಪ್ರತ್ಯಕ್ಷ ದೈವ. ಧರ್ಮಪರಳಾದ ನೀನು ಎಷ್ಟೇ ದುಃಖಿತಳಾದರೂ ದುಃಖಿತ ನಾಗಿರುವ ನನಗೆ ವಿಪ್ರಿಯವನ್ನು ಹೇಳಬೇಡ" ಎಂದು ಬೇಡಿದನು. ರಾಣಿಗೆ ಪಶ್ಚಾತ್ತಾಪಹುಟ್ಟಿತು ; ತನ್ನ ಮಾತು ಹೆಚ್ಚಾಯಿತೆಂದು ತೋರಿತು. ಅವಳು ಮಾತು ತೊದಲುವಂತೆ ಆತುರದಿಂದ ಅವನಿಗೆ "ನಾನು ತಲೆಬಾಗಿ ಬೇಡುತ್ತೇನೆ. ನಿನಗೆ ನೆಲದಮೇಲೆ ಬಿದ್ದು ಪ್ರಣಾಮ ಮಾಡುತ್ತೇನೆ. ನೀನು ನನ್ನನ್ನು ಬೇಡುವುದೆಂಬ ಮಾತಿನಿಂದ ನನ್ನನ್ನು ಪ್ರಹರಿಸಬೇಡ. ಈ ಶಿಕ್ಷೆಗೆ ನನ್ನನ್ನು ಗುರಿಮಾಡದಿರು. ನಾನು ಧರ್ಮ ವನ್ನು ಬಲ್ಲೆನು. ನೀನು ಸತ್ಯವಾದಿ, ಆದಕಾರಣ ಇದೆಲ್ಲ ಆಯಿತೆಂದು ಬಲ್ಲೆನು. ಆದರೂ ಮಗನು ಹೊರಟುಹೋದನೆಂಬ ದುಃಖದಿಂದ ಖಿನ್ನಳಾಗಿ ಏನೋ ಮಾತನಾಡಿದೆನು. ಶೋಕವು ಧೈರ್ಯವನ್ನು ನಾಶ ಮಾಡುತ್ತದೆ, ಜ್ಞಾನವನ್ನು ನಾಶಮಾಡುತ್ತದೆ. ಅದರಂಥ ಹಗೆಯಿಲ್ಲ. ರಾಮನು ವನವಾಸಕ್ಕೆ ಹೋಗಿ ಐದು ದಿನವಾಯಿತು. ಇದು ನನಗೆ ಐದು ವರ್ಷದಂತೆ ಕಂಡಿದೆ" ಎಂದಳು. ಈ ವೇಳೆಗೆ ಸಂಜೆಯಾಗುತ್ತ ಬಂದಿತು. ರಾಜನು ಸ್ವಲ್ಪ ನಿದ್ದೆಹೋದಂತೆ ತೋರಿದನು. ಅರ್ಧರಾತ್ರಿಯಲ್ಲಿ ಎದ್ದು ಕೌಸಲ್ಯೆಯನ್ನು ಕರೆದು, ಮನುಷ್ಯನು ತಾನು ಮಾಡಿದ ಕರ್ಮದ ಫಲವನ್ನು ಅನುಭವಿಸುತ್ತಾನೆ ಎಂದು ತಾನು ಬಾಲ್ಯದಲ್ಲಿ ಶಬ್ದದಿಂದ ಗುರಿಯಿಟ್ಟು

ಆನೆಯನ್ನು ಹೊಡೆಯಲೆಂದು ಬಾಣವನ್ನು ಬಿಟ್ಟು ಹೊಳೆಗೆ ನೀರಿಗಾಗಿ ಬಂದಿದ್ದ ಋಷಿಕುಮಾರನೊಬ್ಬನನ್ನು ಕೊಂದ ಕಥೆಯನ್ನು ಹೇಳಿ, ಅವನ ತಾಯಿ ತಂದೆಗಳ ಶಾಪದ ಫಲವಾಗಿ ಈಗ ತಾನು ಮಕ್ಕಳು ಹತ್ತಿರ ಇಲ್ಲದೆ ಜೀವ ಬಿಡುತ್ತಿರುವೆನೆಂದು ಹೇಳಿದನು. ಹೇಳುತ್ತ ಹೇಳುತ್ತ "ರಾಮನನ್ನು ಕಾಣದ ದುಃಖವು ಬಿಸಿಲು ನೀರನ್ನು ಎಳೆಯುವಂತೆ ನನ್ನ ಪ್ರಾಣವನ್ನು ಬತ್ತಿಸುತ್ತಿದೆ. ಹದಿನಾಲ್ಕು ವರ್ಷ ಕಳೆದು ರಾಮನು ಹಿಂದಿರುಗಿ ಬರುವಾಗ್ಗೆ, ಆ ಕೆನ್ನೆ ಆ ಮೂಗು ಆ ಕಣ್ಣು ಆ ಬಾಯಿ, ಚಂದ್ರನಂತೆ ಸುಂದರವಾದ, ಆ ಮುಖವನ್ನು, ಅರಳಿದ ಕಮಲದಂಥ ನನ್ನ ರಾಮನ ಮುಖವನ್ನು, ನೋಡುವವರು ಪುಣ್ಯಶಾಲಿಗಳು. ಅವರು ಮನುಷ್ಯರೇ ಅಲ್ಲ; ದೇವತೆಗಳು. ಕೌಸಲ್ಯೆ ನನ್ನ ಬುದ್ಧಿ ಮಂಕಾಗುತ್ತಿದೆ. ಶಬ್ದ ಸ್ಪರ್ಶರಸಗಳು ನನಗೆ ತಿಳಿಯುತ್ತಿಲ್ಲ. ನದಿಯ ಪ್ರವಾಹ ದಡವನ್ನು ಕೊಚ್ಚಿಕೊಂಡುಹೋಗುವಂತೆ ನನ್ನ ಶೋಕ ನನ್ನ ಪ್ರಾಣವನ್ನು ಕೊಚ್ಚಿಕೊಂಡುಹೋಗುತ್ತಿದೆ. ಹಾ ರಾಘವ, ಮಹಾಬಾಹು, ಹಾ ಮಮಾಯಾಸನಾಶನಾ, ಹಾ ಪಿತೃಪ್ರಿಯ, ಮೇನಾಥ, ಎಲ್ಲಿ ಹೋದೆ, ಹಾ ಕೌಸಲ್ಯೆ, ನಾನು ಹೋಗುತ್ತೇನೆ. ಹಾ ಸುಮಿತ್ರೆ ತಪಸ್ವಿನಿ, ಹಾ ನೃಶಂಸೆ ಮಮಾಮಿತ್ರೆ ಕೈಕಯಿ ಕುಲಪಾಂಸನಿ," ಎಂದು ಕೂಗುತ್ತ ಕೌಸಲ್ಯಾ ಸುಮಿತ್ರೆಯರ ಬಳಿಯಲ್ಲಿ ಉಸಿರನ್ನು ಮುಗಿಸಿದನು. ಇಲ್ಲಿಗೆ ದಶರಥನ ಕಥೆ ಮುಗಿಯಿತು.

## ಭರತನ ಕೋಪ

ಅಯೋಧ್ಯಾಕಾಂಡದಲ್ಲಿ ಇಲ್ಲಿಗೆ ಎರಡನೆಯ ಘಟ್ಟ ಮುಗಿಯಿತೆನ್ನಬಹುದು. ಊರಿನ ಜನರೆಲ್ಲ ಸೇರಿ ವಸಿಷ್ಠಾದಿಗಳೊಡನೆ ಯೋಚನೆಮಾಡಿ ಮಾವನ ಮನೆಗೆ ಹೋಗಿದ್ದ ಭರತನಿಗೆ ಕರೆಕಳುಹಿಸುವರು. ದೂತರು ಬಂದು ಸೇರುವ ಮೊದಲ ರಾತ್ರಿ ಭರತನಿಗೆ ಕೆಟ್ಟಸ್ವಪ್ನಗಳಾಗಿವೆ. ದೂತರು ಬರುವ ದಿನ ಅವನು ಹರ್ಷವಾಗಿಲ್ಲದಿರಲು ಹತ್ತಿರದವರು ಕಾರಣ ಏನು ಎಂದು ಕೇಳುವರು. ಅವನು ತನ್ನ ಸ್ವಪ್ನದ ಮಾತನ್ನು ಹೇಳುತ್ತಿರುತ್ತಾನೆ. ಆ ವೇಳೆಗೆ ದೂತರು ಬರುವರು. ಬಂದು ಅಲ್ಲಿಯ ರಾಜರಿಗೆ

ನಮಸ್ಕರಿಸಿ ಭರತನನ್ನು ಕುರಿತು "ಪುರೋಹಿತರೂ ಎಲ್ಲ ಮಂತ್ರಿಗಳೂ, ನಿಮ್ಮಿಂದಾಗಬೇಕಾದ ಕೆಲಸ ಇದೆ, ತ್ವರೆಯಿಂದ ಬರಬೇಕೆಂದು ಕೇಳಿದರು," ಎನ್ನುವರು. ಭರತನು ತಂದೆ ರಾಮ ಲಕ್ಷ್ಮಣ ಕೌಸಲ್ಯಾದೇವಿ ಸುಮಿತ್ರಾದೇವಿ ಕೈಕಯಿದೇವಿ ಇವರೆಲ್ಲ ಸುಖವಾಗಿದ್ದಾರೆಯೆ ಎಂದು ಕೇಳುವನು. ದೂತರು "ನೀನು ಯಾರ ಕುಶಲವನ್ನು ಅಪೇಕ್ಷಿಸುತ್ತೀಯೋ ಅವರೆಲ್ಲ ಸೌಖ್ಯವಾಗಿದಾರೆ. ನಿನಗೆ ಲಕ್ಷ್ಮಿ ಪ್ರಸನ್ನಳಾಗಿದಾಳೆ, ಬೇಗನೆ ಹೊರಡು" ಎನ್ನುವರು. ಭರತನು ಮಾವನ ಅಪ್ಪಣೆಯನ್ನು ಪಡೆದು ಬಹು ದೂರದ ದಾರಿಯನ್ನು ಬೇಗದಿಂದ ಕಳೆದು ಅಯೋಧ್ಯೆಗೆ ಬರುವನು. ಅಯೋಧ್ಯೆ ದೂರದಿಂದ ಬೆಳ್ಳಗೆ ಕಂಡಿತು; ಸುತ್ತ ಹೂವಿನ ತೋಟ. ಆದರೆ ಅದರಲ್ಲಿ ಎಂದಿನಂತೆ ಜನದ ಕೋಲಾಹಲ ಕೇಳಲಿಲ್ಲ; ಉದ್ಯಾನಗಳಲ್ಲಿ ವಿಹರಿಸುವ ಜನರಿರಲಿಲ್ಲ. ನಗರ ಅರಣ್ಯದಂತೆ ತೋರಿತು. ಬೀದಿಯಲ್ಲಿ ಆನೆಯಿಲ್ಲ ಕುದುರೆಯಿಲ್ಲ ರಥವಿಲ್ಲ. ಉದ್ಯಾನದಲ್ಲಿ ಉದುರಿದ ಎಲೆ ಹಾಗೆಯೇ ಇದೆ. ಅದರಲ್ಲಿ ಮೃಗ ಪಕ್ಷಿಗಳ ಶಬ್ದ ಕೇಳಲಿಲ್ಲ. ಮನೆ ಮನೆಯ ಪೂಜೆ ಪುರಸ್ಕಾರದ ಸುಗಂಧ ದ್ರವ್ಯಗಳ ಗಂಧದಿಂದ ಪೂರ್ವದಲ್ಲಿ ಸುವಾಸಿತವಾಗಿರುತ್ತಿದ್ದ ನಗರದ ಗಾಳಿ ಈಗ ನಿರ್ಗಂಧವಾಗಿದೆ. ಪೂರ್ವದಲ್ಲಿ ಭೇರೀ ಮೃದಂಗ ವೀಣೆಗಳ ಧ್ವನಿಗಳು ಇಂಪಾಗಿ ಗಾಳಿಯನ್ನು ತುಂಬಿರುತ್ತಿದ್ದುವು; ಈಗ ಇದಾವುದೂ ಕೇಳಲಿಲ್ಲ. ಭರತನ ಮನಸ್ಸಿಗೆ ಶಂಕೆ ಆಯಿತು. ಅವನು ಸಾರಥಿಯನ್ನು ಕುರಿತು "ಊರಿನ ಸ್ಥಿತಿಯನ್ನು ನೋಡಿದರೆ ನನಗೆ ಅಶುಭದ ಭಯ ಹುಟ್ಟುತ್ತಿದೆ. ಈ ಮನೆಗಳಿರುವ ರೀತಿ ಈ ದೇವಾಗಾರಗಳಿರುವ ರೀತಿ ಈ ವ್ಯಾಪಾರಸ್ಥಳಗಳಿರುವ ರೀತಿ ಈ ಜನ ಇರುವ ರೀತಿ ಕೆಟ್ಟುದಾಗಿದೆ" ಎಂದು ಹೇಳುತ್ತ ನಗರವನ್ನು ಪ್ರವೇಶಿಸಿ ಪಿತೃ ಗೃಹಕ್ಕೆ ಬಂದನು. ಅಲ್ಲಿ ತಂದೆ ಇರಲಿಲ್ಲವಾಗಿ ತಾಯಿ ಗೃಹಕ್ಕೆ ಬಂದನು. ಭರತನಿಗೆ ತಾಯಿ ವಿಷಯದಲ್ಲಿ ಮನಸ್ಸು ಅಷ್ಟೇನೂ ಸಮಾಧಾನವಾಗಿರಲಿಲ್ಲ. ಅವಳು ಸುಖವಾಗಿದಾಳೆಯೇ ಎಂದು ದೂತರನ್ನು ಕೇಳಬೇಕಾದರೆ ಅವನು ಅವಳನ್ನು ಆತ್ಮಕಾಮಾ ಸದಾಚಂಡೀ ಕ್ರೋಧನಾ ಪ್ರಾಜ್ಞಮಾನಿನೀ ಎಂದು ವರ್ಣಿಸಿದ್ದನು. ಭರತನನ್ನು ಕಂಡು ಕೈಕಯಿದೇವಿ ಪೀಠವನ್ನು ಬಿಟ್ಟು ಎದ್ದಳು;

ಸಂತೋಷದಿಂದ ಎದುರಿಗೆ ಬಂದಳು. ರಾಮನು ಬಂದಾಗ ಕೌಸಲ್ಯೆಯಿದ್ದ ಸಂದರ್ಭವನ್ನು ಇದರೊಂದಿಗೆ ಹೋಲಿಸಿದರೆ ಕವಿಯ ಭಾವವನ್ನು ಸಂಪೂರ್ಣವಾಗಿ ಗ್ರಹಿಸುವುದಕ್ಕೆ ಸೌಕರ್ಯವಾಗುತ್ತದೆ. ಕೈಕಯಿಯ ತಪ್ಪು ಏನೇ ಇದ್ದರೂ ಅವಳಿಗೆ ತನ್ನ ಮಗನಲ್ಲಿ ಬಹಳ ಪ್ರೀತಿ ಇತ್ತೆನ್ನು ವುದು ನಿಜವಾದ ಮಾತು. ಆದರೆ ಈ ಸಂದರ್ಭದಲ್ಲಿ ಅವಳು ಅವನ ಮೇಲಣ ಪ್ರೀತಿಯಿಂದಲ್ಲ ಅವನಿಗೆ ರಾಜ್ಯವನ್ನು ಕೊಡಿಸುವ ಸನ್ನಾಹ ಮಾಡಿದ್ದದು. ಕೌಸಲ್ಯೆಯ ಕೈ ಮೇಲಾಗಬಾರದು, ತನ್ನ ಕೈ ಮೇಲಾಗಿರ ಬೇಕು. ಇದಕ್ಕಾಗಿ ರಾಮನು ರಾಜನಾಗಬಾರದು, ಭರತನು ರಾಜನಾಗ ಬೇಕು. ಈ ದೃಷ್ಟಿಯಿಂದ ಅವಳು ರಾಜನಿಂದ ವರವನ್ನು ಬೇಡಿದ್ದಳು. ನಾನು ಎಂಬ ಭಾವ ಮುಖ್ಯವಾಗಿದ್ದುದರಿಂದಲೇ ಅವಳ ಮನಸ್ಸು ಭರತನಿಗೆ ಯಾವುದು ಇಷ್ಟ ಎಂದು ಯೋಚಿಸಲು ತೊಡಗಲಿಲ್ಲ. ತನ್ನ ಮೇಲ್ಮೆಗಾಗಿ ತನ್ನ ಮೇಲ್ಮೆಯನ್ನು ಸಾಧಿಸುವುದಕ್ಕಾಗಿ ಅವಳಿಗೆ ಭರತನು ಒಂದು ಸಾಧನ ಎಷ್ಟೋ ಅಷ್ಟೆ. ಸಂತೋಷದಿಂದ ಮೇಲೆದ್ದು ಬಂದ ತಾಯನ್ನು ಕಂಡು ಭರತನು ಅವಳ ಕಾಲಿಗೆ ಬಿದ್ದು ನಮಸ್ಕಾರ ಮಾಡಿದನು. ದೇವಿ ಮಗನನ್ನು ಹಿಡಿದು ಅಪ್ಪಿಕೊಂಡು ತೊಡೆಯಮೇಲೆ ಕುಳ್ಳಿರಿಸಿಕೊಂಡು ತನ್ನ ತಂದೆ ಅಣ್ಣ ಮುಂತಾದವರ ಕ್ಷೇಮದ ವಿಚಾರವನ್ನು ಕೇಳಿದಳು. ಭರತನು ಅವರೆಲ್ಲ ಕ್ಷೇಮವಾಗಿರುವರೆಂದು ಆ ಮಾತನ್ನು ಬೇಗನೆ ಮುಗಿಸಿ "ನಾನು ದೂತರ ವಾಕ್ಯದಿಂದ ತ್ವರೆಪಟ್ಟು ಬಂದೆನು. ನಾನು ನಿನ್ನನ್ನು ಕೇಳುವ ಮಾತನ್ನು ನನಗೆ ಬೇಗನೆ ಹೇಳಬೇಕು. ಈ ನಿನ್ನ ಹಾಸಿಗೆ ಬರಿದಾಗಿದೆ. ಇಕ್ಷ್ವಾಕು ಜನರು ದುಃಖಿತರಾಗಿ ಕಾಣುತ್ತಾರೆ. ರಾಜನು ಯಾವಾಗಲೂ ಇಲ್ಲಿರುತ್ತಿದ್ದನು. ನೋಡಲು ಬಂದರೆ ಇಲ್ಲಿ ಇಲ್ಲ. ಜ್ಯೇಷ್ಠಳಾದ ಕೌಸಲ್ಯೆಯ ಮಂದಿರದಲ್ಲಿರುವನೇನು?" ಎಂದು ಕೇಳಿದನು. ಅವನಿಗೆ ಕೈಕಯೀದೇವಿ ರಾಜನ ಮರಣ ವೃತ್ತಾಂತವನ್ನು ಪ್ರಿಯವಾದ ಮಾತಿನಂತೆ ಹೇಳಿದಳು. "ಎಲ್ಲ ಭೂತಗಳ ಗತಿ ಯಾವುದೋ ಅದನ್ನು ನಿಮ್ಮ ತಂದೆ ಹೊಂದಿದನು. ಮಹಾತ್ಮನೂ ತೇಜಸ್ವಿಯೂ ಆದ ರಾಜನು ಸತ್ಯವಂತರ ಲೋಕವನ್ನು ಸೇರಿದನು" ಎಂದಳು. ತಾಯ ಈ ಮಾತನ್ನು ಕೇಳಿ ಭರತನು ನೆಲದಮೇಲೆ ಬಿದ್ದನು. ತಂದೆಗಾಗಿ ಪ್ರಲಾಪ

ಮಾಡಿದನು. ಕೈಕೆಯಿದೇವಿ ಅವನನ್ನು ಕುರಿತು "ಕುಮಾರನೇ ಏಕೆ ನೆಲದಮೇಲೆ ಬೀಳುವೆ? ನಿನ್ನಂಥವರು ಅಳಬಾರದು. ಏಳು ಏಳು" ಎಂದಳು. ಭರತನು ಬಹು ಹೊತ್ತು ಅಳುತ್ತಿದ್ದು ತಾಯನ್ನು ಕುರಿತು "ನಾನಿಲ್ಲದಿರುವಾಗ ತಂದೆಯ ಬಳಿ ಇದ್ದು ಅವನಿಗೆ ಶುಶ್ರೂಷೆ ಮಾಡಿದ ರಾಮಲಕ್ಷ್ಮಣರು ಧನ್ಯರು. ತಂದೆ ಜೀವಿಸಿದ್ದಿದ್ದರೆ ನಾನು ಬಂದಾಗ ನನ್ನನ್ನು ಕರೆದು ಮುದ್ದಿಸುತ್ತಿದ್ದನು. ನಮ್ಮ ತಂದೆ ಸಾಯುವ ವೇಳೆ ಏನು ಹೇಳಿದನು? ಅವನ ಕೊನೆಯ ಮಾತನ್ನು ಕೇಳುವುದಕ್ಕೆ ಅಪೇಕ್ಷಿಸುತ್ತೇನೆ" ಎಂದನು. ಕೈಕಯಿ "ರಾಜನು ಹಾ ರಾಮಾ ಹಾ ಸೀತಾ ಹಾ ಲಕ್ಷ್ಮಣಾ ಎಂದು ಕೂಗುತ್ತ ಮೃತಿಹೊಂದಿದನು. ಇದೇ ಅವನ ಕೊನೆಯ ಮಾತು" ಎಂದಳು; "ಸೀತಾ ಲಕ್ಷ್ಮಣರೊಡನೆ ಹಿಂದಕ್ಕೆ ಬರುವ ರಾಮನನ್ನು ಯಾರು ನೋಡುತ್ತಾರೋ ಅವರು ಪುಣ್ಯವಂತರು ಎಂದನು" ಎಂದು ಹೇಳಿದಳು. ಭರತನಿಗೆ ಈ ಮಾತು ಅರ್ಥವಾಗಲಿಲ್ಲ. ಇದು ಏನು ಬಂದಿತೆಂದು ಭಯವಾಯಿತು. "ಧರ್ಮಾತ್ಮನಾದ ರಾಮನು ಸೀತಾ ಲಕ್ಷ್ಮಣರೊಡನೆ ಎಲ್ಲಿಹೋದನು" ಎಂದು ಅವನು ಕೇಳಿದನು. "ರಾಮನು ಸೀತಾ ಲಕ್ಷ್ಮಣರೊಡನೆ ಚೀರಗಳನ್ನು ಧರಿಸಿ ದಂಡಕಾರಣ್ಯಕ್ಕೆ ತೆರಳಿದನು" ಎಂದಳು ಕೈಕಯಿ. ಭರತನಿಗೆ ಅಣ್ಣನ ನಡತೆಯ ವಿಷಯದಲ್ಲಿ ಶಂಕೆ ಉಂಟಾಯಿತು. ಇಕ್ಷ್ವಾಕುವಂಶದಲ್ಲಿ ರಾಜಕುಮಾರನಿಗೆ ವನವಾಸದ ದಂಡನೆ ಪ್ರಾಪ್ತವಾಗಬೇಕಾದರೆ ಅವನಲ್ಲಿ ಪ್ರಬಲವಾದ ದೋಷ ಏನಾದರೂ ಇರಬೇಕು. ಆದಕಾರಣ ಭರತನು ತಾಯನ್ನು ಕುರಿತು "ರಾಮನು ಬ್ರಾಹ್ಮಣ ಧನವನ್ನು ಏನಾದರೂ ಅಪಹರಿಸಿದನೆ? ತಪ್ಪು ಮಾಡದ ಯಾವನಿಗಾದರೂ ಹಿಂಸೆಮಾಡಿದನೆ? ಪರಸ್ತ್ರೀ ಯಾರಲ್ಲಾದರೂ ಅಪೇಕ್ಷೆಯನ್ನು ತೋರಿದನೆ? ಯಾತಕ್ಕಾಗಿ ಅವನನ್ನು ಕಾಡಿಗೆ ಅಟ್ಟಿದರು?" ಎಂದನು. ಕೈಕಯಿ "ರಾಮನು ಬ್ರಾಹ್ಮಣ ಧನ ಯಾವುದನ್ನೂ ಅಪಹರಿಸಲಿಲ್ಲ, ತಪ್ಪುಮಾಡದ ಯಾವನನ್ನಾದರೂ ಹಿಂಸಿಸಲಿಲ್ಲ, ಪರಸ್ತ್ರೀಯಾದವಳನ್ನು ರಾಮನು ಕಣ್ಣೆತ್ತಿ ನೋಡಲಿಲ್ಲ. ರಾಮನಿಗೆ ಅಭಿಷೇಕವಾಗುತ್ತದೆಂಬ ಮಾತನ್ನು ಕೇಳಿ ನಾನು ನಿನಗೆ ಅಭಿಷೇಕವನ್ನೂ ರಾಮನಿಗೆ ವನವಾಸವನ್ನೂ ನಿಮ್ಮ ತಂದೆಯಿಂದ ಬೇಡಿದೆನು.

ಧರ್ಮಕ್ಕೆ ಒಳಪಟ್ಟು ನಿಮ್ಮ ತಂದೆ ಹಾಗೆಯೇ ಮಾಡಿದರು. ಸೀತಾ ಲಕ್ಷ್ಮಣರೊಡನೆ ರಾಮನು ಅರಣ್ಯಕ್ಕೆ ಹೋದನು. ಪ್ರಿಯನಾದ ಪುತ್ರನನ್ನು ಕಾಣದೆ ಶೋಕದಿಂದ ಮಹೀಪಾಲನು ಪಂಚತ್ವವನ್ನೈದಿದನು. ನೀನು ರಾಜತ್ವವನ್ನು ಅವಲಂಬಿಸು. ನಿನಗಾಗಿ ನಾನು ಇಷ್ಟೆಲ್ಲವನ್ನೂ ಮಾಡಿದೆನು. ಶೋಕ ಸಂತಾಪ ಬೇಡ. ಧೈರ್ಯವನ್ನು ತಂದುಕೊ. ಈ ನಗರಿ ಈ ರಾಜ್ಯ ನಿರುಪಾಧಿಕವಾಗಿ ನಿನ್ನವು. ತಂದೆಗೆ ಕರ್ಮಗಳನ್ನು ಮುಗಿಸಿ ರಾಜ್ಯಾಭಿಷಿಕ್ತನಾಗು" ಎಂದಳು. ವಾಲ್ಮೀಕಿ ಈ ಸಂವಾದವನ್ನು ಹೆಜ್ಜೆ ಹೆಜ್ಜೆಯಾಗಿ ಬೆಳೆಸಿರುವ ಕೌಶಲ್ಯ ಬಹು ಹಿರಿದು. ತಂದೆ ಕೊನೆಯ ಮಾತಾಗಿ ಏನನ್ನು ಹೇಳಿದನು ಎನ್ನುವುದರಿಂದ, ನಾನು ನಿನಗೆ ರಾಜ್ಯವನ್ನು ಸಂಪಾದಿಸಿ ಕೊಡುತ್ತಿದೇನೆ ಎನ್ನುವವರೆಗೆ, ಐದು ಮೆಟ್ಟಲಿದೆ. ಒಂದೊಂದರಲ್ಲಿಯೂ ಭರತನಿಗೆ ವಿಷಯ ವಿಚಿತ್ರವಾಗಿ ಕಾಣುವಂತೆ ಉತ್ತರ ಬರುತ್ತದೆ. ಹೀಗೆ ಕವಿ ಈ ಸಂವಾದವನ್ನು ಸ್ವಾರಸವಾಗಿ ಚಮತ್ಕಾರಕವಾಗಿ ರಚಿಸಿದಾನೆ. ರಾಜ್ಯವನ್ನು ಪಡೆದು ಮಗನು ಸಂತೋಷಪಡುವನೆಂದು ನಿರೀಕ್ಷಿಸಿದ್ದ ಕೈಕಯೀದೇವಿಗೆ ಅವನಿಂದ ತುಂಬ ಬೈಗಳು ದೊರೆತವು. "ನೀನು ರಾಜನನ್ನು ಕೊಂದೆ, ರಾಮನನ್ನು ಕಾಡಿಗೆ ಅಟ್ಟಿದೆ. ನನಗೆ ಈ ರಾಜ್ಯದಿಂದ ಆಗಬೇಕಾದದೇನು? ರಾಮನು ನಿನ್ನ ವಿಷಯದಲ್ಲಿ ತನ್ನ ತಾಯ ವಿಷಯದಲ್ಲಿ ಹೇಗೋ ಹಾಗೆಯೇ ನಡೆದುಕೊಳ್ಳುತ್ತಿದ್ದನು. ದೊಡ್ಡ ತಾಯಿ ಕೌಸಲ್ಯೆ ದೀರ್ಘದರ್ಶಿನಿ; ನಿನ್ನನ್ನು ತಂಗಿಯಂತೆ ಕಾಣುತ್ತಿದ್ದಳು. ಇಂಥದರಲ್ಲಿ ಅವನನ್ನು ಕಾಡಿಗೆ ಅಟ್ಟಲು ಕಾರಣ ಏನನ್ನು ನೀನು ಕಂಡೆ? ರಾಮಲಕ್ಷ್ಮಣರು ಕಣ್ಮರೆಗಿಲ್ಲದೆ ನಾನು ಯಾವ ಶಕ್ತಿಯಿಂದ ರಾಜ್ಯವನ್ನಾಳಬಲ್ಲೆನು? ಅಥವಾ ನನಗೆ ಶಕ್ತಿಯೇ ಇತ್ತು. ನಾನು ನಿನ್ನ ಆಸೆಯನ್ನು ಸಲ್ಲಿಸುವವನಲ್ಲ. ನಮ್ಮ ಕುಲದಲ್ಲಿ ಜ್ಯೇಷ್ಠನು ಅಭಿಷಿಕ್ತನಾಗಬೇಕು. ನಮ್ಮ ಕುಲದ ಈ ಧರ್ಮವು ಇಂದು ನಿನ್ನಿಂದ ಕೆಟ್ಟಿತು. ನಾನು ಇದಕ್ಕೆ ಒಪ್ಪುವುದಿಲ್ಲ. ಕಾಡಿಗೆ ಹೋಗಿ ರಾಮನನ್ನು ಹಿಂತಿರುಗಿ ಕರೆದುಕೊಂಡುಬಂದು ಅವನ ದಾಸನಾಗಿ ನಿಲ್ಲುತ್ತೇನೆ" ಎಂದನು. ಹೀಗೆ ಇವನು ಕೂಗಾಡುತ್ತಿರುವ ಧ್ವನಿ ಕಿವಿಗೆ ಬಿದ್ದು ಕೌಸಲ್ಯಾದೇವಿ ಅವನು ಬಂದಿರುವುದನ್ನು ತಿಳಿದಳು. ಸುಮಿತ್ರೆಯನ್ನು ಕರೆತು "ಆ ಕ್ರೂರಿ ಕೈಕಯಿಯ ಮಗ ಭರತನು ಬಂದಿದಾನೆ.

ಅವನು ದೀರ್ಘದರ್ಶಿ. ನಾನು ಅವನನ್ನು ನೋಡಬೇಕು" ಎಂದು ಭರತನಿರುವ ಕಡೆಗೆ ಹೊರಟಳು. ಭರತನೂ ಆಗಲೇ ಶತ್ರುಘ್ನನ ಸಹಿತ ಕೌಸಲ್ಯೆಯ ಮಂದಿರವನ್ನು ಕುರಿತು ಬಂದನು; ದುಃಖಾರ್ತಳಾಗಿ ಪ್ರಜ್ಞೆ ತಪ್ಪಿ ನೆಲದಮೇಲೆ ಬಿದ್ದ ಕೌಸಲ್ಯೆಯನ್ನು ಅಪ್ಪಿಕೊಂಡನು. ಕೌಸಲ್ಯೆ ಭರತನನ್ನು ಕುರಿತು "ನಿನಗೆ ರಾಜ್ಯದಮೇಲೆ ಆಸೆಯಿತ್ತು. ಅದು ಈಗ ಅಕಂಟಕವಾಗಿ ದೊರಕಿತು; ಕೈಕಯಿಯ ಕ್ರೂರಕರ್ಮದಿಂದ ಶೀಘ್ರವಾಗಿ ಕೈಸೇರಿತು. ನನ್ನ ಮಗನಿಗೆ ನಾರುಮಡಿಯನ್ನುಡಿಸಿ ಅವನನ್ನು ಕಾಡಿಗೆ ಅಟ್ಟಲು ಕ್ರೂರದೃಷ್ಟಿಯ ಕೈಕಯೀದೇವಿ ಅವನಲ್ಲಿ ಯಾವ ತಪ್ಪನ್ನು ಕಂಡಳು? ಕೈಕಯಿ ನನ್ನನ್ನೂ ಬೇಗನೆ ಅವನಿರುವ ಕಡೆಗೆ ಅಟ್ಟುವುದು ತಕ್ಕದು. ಅಥವಾ ನಾನೇ ಸುಮಿತ್ರೆಯೊಡನೆ ಅತ್ತ ಹೊರಡುವೆನು. ಅಥವಾ ನೀನು ಕರೆದುಕೊಂಡುಹೋಗಬಹುದು" ಎಂದಳು. ಹೀಗೆ ಕೌಸಲ್ಯಾದೇವಿ ತನ್ನನ್ನು ಕುರಿತು ಕ್ರೂರವಾಗಿ ನುಡಿಯಲು ಭರತನು ಅವಳಿಗೆ ಕೈಮುಗಿದು ಹೀಗೆಂದನು: "ಆರ್ಯೆ, ತಪ್ಪಿತಸ್ಥನಲ್ಲದ ನನ್ನನ್ನು ಏಕೆ ಗದರುವೆ? ನನಗೆ ಇದೊಂದೂ ತಿಳಿಯದು. ನನಗೆ ರಾಮನಲ್ಲಿ ತುಂಬ ಪ್ರೀತಿ. ಸ್ಥಿರವಾದ ಪ್ರೀತಿ ಇದೆಯೆಂದು ನೀನು ಬಲ್ಲೆ. ಯಾರ ಅನುಮತಿಯಿಂದ ರಾಮನು ವನವಾಸಕ್ಕೆ ಹೋದನೋ ಅಂಥವನಿಗೆ ಈ ಪಾಪವಾಗಲಿ ಆ ಪಾಪವಾಗಲಿ" ಎಂದು ನೂರುಸಲ ತನ್ನನ್ನು ತಾನೇ ಶಪಿಸಿಕೊಂಡನು; ಹೀಗೆ ಶಪಿಸಿಕೊಳ್ಳುವ ಭರದಿಂದ ನೆಲದಮೇಲೆ ಬಿದ್ದನು. ಕೌಸಲ್ಯಾದೇವಿ ಇವನು ಇಷ್ಟು ಉದ್ವೇಗಪಡುವನೆಂದು ಯೋಚಿಸಿರಲಿಲ್ಲ; ಅಲ್ಲದೆ ರಾಮನ ಪ್ರವಾಸನ ಅವನಿಗೆ ಇಷ್ಟವಿಲ್ಲವೆನ್ನುವುದನ್ನು ಅವನಿಂದ ತಿಳಿಯುವುದಕ್ಕೆ ಮಾತ್ರ ಕಾದಿದ್ದಳು. ಆದಕಾರಣ ಭರತನನ್ನು ಕುರಿತು "ನನ್ನ ದುಃಖ ಮರಳಿ ಮೊದಲಾಯಿತು. ಹೀಗೆ ನಿನ್ನನ್ನೇ ಬಯ್ದುಕೊಂಡು ನೀನು ನನ್ನ ಪ್ರಾಣಕ್ಕೆ ನೋವುಮಾಡುತ್ತಿದೀಯೆ. ನೀನು ಧರ್ಮದ ದಾರಿಯಿಂದ ಚಲಿಸದೆ ಇರುವುದು ಇದು ಬಹಳ ಸಂತೋಷ. ಸತ್ಯಪ್ರತಿಜ್ಞನಾದ ಮಗುವೇ, ಒಳ್ಳೆಯವರ ಪದವಿಯನ್ನು ನೀನು ಪಡೆಯುವೆ" ಎಂದು ಕೌಸಲ್ಯಾದೇವಿ ಭರತನನ್ನು ತೊಡೆಯಮೇಲೆ ಕೂರಿಸಿಕೊಂಡು ಅಪ್ಪಿಕೊಂಡು ಅತ್ತಳು. ಹೀಗೆ ಇವರು ದುಃಖದಲ್ಲಿ ಇರಲಾಗಿ ವಸಿಷ್ಠನು

ಬಂದು ರಾಜನ ಉತ್ತರ ಕ್ರಿಯೆಗಳನ್ನು ಆರಂಭಿಸಬೇಕೆಂದು ಸೂಚಿಸಿದನು. ಇದೆಲ್ಲ ಮುಗಿದಮೇಲೆ ಭರತನು ರಾಮನನ್ನು ಕರೆತರುವುದಕ್ಕೆ ವನಕ್ಕೆ ಹೋಗುವುದೆಂಬ ತನ್ನ ಸಂಕಲ್ಪವನ್ನು ಎಲ್ಲರಿಗೂ ತಿಳಿಸಿ ಅದಕ್ಕೆ ಅವಶ್ಯಕವಾದ ಏರ್ಪಾಡನ್ನು ಮಾಡಿದನು. ಮಧ್ಯೆ ಇಷ್ಟು ಅನಾಹುತಕ್ಕೆ ಕಾರಣಳಾದ ಮಂಥರೆಯನ್ನು ಶಿಕ್ಷಿಸುವೆನೆಂದು ಶತ್ರುಘ್ನನು ಕೈ ದುಡುಕಿದನು. ಭರತನು ಅವನನ್ನು ಕುರಿತು “ಅವಳನ್ನು ಬಿಟ್ಟುಬಿಡು. ನನಗಾದರೂ ಪಾಪಿಷ್ಠಳಾದ ನನ್ನ ತಾಯನ್ನು ಕೊಲ್ಲಬೇಕೆಂಬ ಬುದ್ಧಿ. ರಾಮನು ಕೋಪಮಾಡುವನೆಂದು ಸುಮ್ಮನಿದ್ದೇನೆ. ಈ ಮಂಥರೆಯನ್ನು ಕೊಂದೆವೆಂದು ತಿಳಿದರೆ ರಾಮನು ಎಂದೆಂದಿಗೂ ನಮ್ಮೊಂದಿಗೆ ಮಾತನ್ನು ಆಡನು” ಎಂದು ಹೇಳಿ ಅವಳನ್ನು ಉಳಿಸಿದನು.

ರಾಮಚಂದ್ರನು ಸೀತಾಲಕ್ಷ್ಮಣರೊಡನೆ ಗಂಗೆಯ ಉತ್ತರ ಕೂಲದಲ್ಲಿ ಗುಹನ ಜೊತೆಗೆ ಒಂದು ದಿನ ಇದ್ದು ಸುಮಂತ್ರನನ್ನು ಬೀಳ್ಕೊಟ್ಟು ಗುಹನ ಸಹಾಯದಿಂದ ಆ ನದಿಯನ್ನು ದಾಟಿ ತನ್ನ ವನವಾಸದ ದಾರಿಯಲ್ಲಿ ಹೆಜ್ಜೆಯಿಟ್ಟು ದಿನ ಕಳೆದಿತ್ತು. ಅವನು ದಾರಿಯಲ್ಲಿ ಭರದ್ವಾಜನನ್ನು ನೋಡಿ ಅವನ ಮಾತಿನ ಪ್ರಕಾರ ಚಿತ್ರಕೂಟವನ್ನು ಬಂದು ಸೇರಿದನು. ರಾಮನು ವನವಾಸಕ್ಕೆ ಹೋದನೆನ್ನುವುದು ಗುಹನಿಗೆ ಅಸಮಾಧಾನ; ಭರದ್ವಾಜನಿಗೆ ಅಸಮಾಧಾನ. ಹೀಗಿರುತ್ತಾ ಭರತನು ರಾಮನನ್ನು ರಾಜ್ಯಾಭಿಷಿಕ್ತನಾಗೆಂದು ಕರೆಯುವುದಕ್ಕೆ ಸಮಸ್ತ ಪರಿವಾರದೊಡನೆ ಹೊರಟುಬರಲು ಗುಹನಿಗೆ ಅವನ ವಿಷಯದಲ್ಲಿ ಸಂದೇಹ ತಟ್ಟಿತು. ಕಾಡಿಗೆ ಅಟ್ಟಿದ್ದು ಸಾಲದೆ ಇವನು ಅಣ್ಣನಿಗೆ ಮತ್ತೇನು ಹಿಂಸೆ ಮಾಡಲು ಹೊರಟನೋ ಎಂದು ಅವನಿಗೆ ಭಯ. ರಾಮಲಕ್ಷ್ಮಣರು ರಾತ್ರಿ ಇಲ್ಲಿ ಇದ್ದು ಮಾರನೆಯ ದಿನ ನದಿಯನ್ನು ದಾಟಿ ಮುಂದಕ್ಕೆ ಹೋದರೆಂದು ಗುಹನು ಭರತನಿಗೆ ಅಂದಿನ ಚರಿತ್ರೆಯನ್ನು ವರ್ಣಿಸಿದನು. ರಾಮಚಂದ್ರನಿಗೆ ಇಂಥ ಅವಸ್ಥೆ ಬಂದಿತೇ ಎಂದು ವ್ಯಥೆಯಿಂದ ಭರತನು ಮೂರ್ಛೆಹೋದನು. ಇವನ ಪಕ್ಕದಲ್ಲಿದ್ದ ಶತ್ರುಘ್ನನು ಅವನನ್ನು ಕಟ್ಟಿಕೊಂಡು ಗಟ್ಟಿಯಾಗಿ ಅತ್ತನು. ಇವರ ತಾಯಿಯರು ಅಳುತ್ತ ಅವರನ್ನು ಸುತ್ತಿಕೊಂಡರು. ಕೌಸಲ್ಯಾದೇವಿಯೂ ಬಳಿಗೆ ಬಂದಳು. ಭರತನನ್ನು

ಎತ್ತಿ "ಮಗನೆ, ನಿನಗೆ ದೇಹದಲ್ಲಿ ಬಾಧೆ ಏನೂ ಇಲ್ಲವಷ್ಟೆ? ಈಗ ಈ ರಾಜಕುಲದ ಬಾಳ್ವೆ ನಿನ್ನಧೀನವಾಗಿದೆ. ಸೋದರನೊಡನೆ ರಾಮನು ಹೊರಟುಹೋಗಿರಲಾಗಿ ನಾನು ನಿನ್ನನ್ನು ನೋಡುತ್ತ ಜೀವದಿಂದಿದೇನೆ. ದಶರಥನು ಮೃತನಾಗಿರಲಾಗಿ ನೀನೇ ನಮ್ಮೆಲ್ಲರಿಗೆ ಯಜಮಾನನು. ಇಲ್ಲವೆ ಏನಾದರೂ ಕೆಟ್ಟ ವರ್ತಮಾನವನ್ನು ಕೇಳಿದೆಯೊ? ಅರಣ್ಯಕ್ಕೆ ಹೋದ ಲಕ್ಷ್ಮಣನಿಗೆ ಅಥವಾ ಪತ್ನೀಸಮೇತನಾದ ನನ್ನ ಒಬ್ಬನೇ ಮಗನಿಗೆ ಏನಾದರೂ ತೊಂದರೆಯಾಯಿತೆ?" ಎಂದು ಕೇಳಿದಳು. ರಾಮನಿಗೆ ಏನಾದರೂ ಅಶುಭ ಆಗಿರಬಹುದೋ ಎಂದೇ ಕೌಸಲ್ಯೆಗೆ ಮೊದಲು ಭಯ. ಅದಾದಮೇಲೆ ಲಕ್ಷ್ಮಣನನ್ನು ಕುರಿತು ಭಯ. ಏಕೆಂದರೆ, ಇವರು ಕಾಡಿಗೆ ಹೋಗಿರತಕ್ಕವರು. ಭರತನಿಗೆ ದೇಹದಲ್ಲಿ ತೊಂದರೆಯಾಗಿರಬಹುದೇ ಎನ್ನುವುದು ಮೂರನೆಯ ಭಯ. ಆದರೆ ವಿನಯದ ಕಾರಣದಿಂದಲೂ ಅವನು ರಾಮನ ವಿಷಯದಲ್ಲಿ ಚೆನ್ನಾಗಿ ನಡೆದುಕೊಳ್ಳುತ್ತಿದ್ದಾನೆಂಬ ಕಾರಣದಿಂದಲೂ ಕುಲದ ಕಲ್ಯಾಣಕ್ಕೆ ಸದ್ಯದಲ್ಲಿ ಇವನು ಆಶ್ರಯನೆಂಬ ಕಾರಣದಿಂದಲೂ ಅವಳು ಅವನ ಕ್ಷೇಮವನ್ನು ಮೊದಲು ಕೇಳುವಳು. ಆಮೇಲಾದರೂ ಹೆತ್ತ ತಾಯಿಗೆ ಸಹಜವೆನ್ನಬಹುದಾದ ಸ್ವಾರ್ಥವನ್ನು ತಡೆದುಕೊಂಡು ಲಕ್ಷ್ಮಣನ ವಿಷಯವನ್ನು ಕೇಳುವಳು. ಭರತನು ಇಂಥ ಭಯವೇನೂ ಬೇಡವೆಂದು ಕೌಸಲ್ಯಾದೇವಿಯನ್ನು ಸಮಾಧಾನಪಡಿಸಿ ಗುಹನನ್ನು ಕುರಿತು ರಾಮನು ಕುಳಿತ ಸ್ಥಳ, ಮಲಗಿದ ಸ್ಥಳ, ಎಲ್ಲವನ್ನೂ ವಿಚಾರಿಸಿ ನೋಡಿದನು. ಸೀತಾದೇವಿ ಮಲಗಿದ್ದ ಸ್ಥಳದಲ್ಲಿ ಅವಳ ಕೌಶೇಯದ ತಂತುಗಳು ಹುಲ್ಲಿನಲ್ಲಿ ಸಿಕ್ಕಿಕೊಂಡಿದ್ದವು. "ಸುಕುಮಾರಿಯಾದ ನನ್ನ ಅತ್ತಿಗೆ ಇಂಥ ಸ್ಥಳದಲ್ಲಿ ಮಲಗುವುದೆನ್ನುವುದು ನನ್ನ ಕಾರಣದಿಂದ ಅವಶ್ಯಕವಾಯಿತಲ್ಲಾ: ನಾನು ಕೆಟ್ಟೆನು! ಸಾರ್ವಭೌಮ ಕುಲದಲ್ಲಿ ಹುಟ್ಟಿದವನು, ಸರ್ವಲೋಕಕ್ಕೆ ಸಮ್ಮತನಾದವನು, ಸರ್ವಲೋಕದ ವಿಶ್ವಾಸಕ್ಕೆ ವಿಷಯನಾದವನು, ಅತ್ಯುತ್ತಮವಾದ ರಾಜ್ಯ ಸುಖವನ್ನು ಬಿಟ್ಟು ಇಂದೀವರಶ್ಯಾಮನೂ ರಕ್ತಾಕ್ಷನೂ ಪ್ರಿಯದರ್ಶನನೂ ಸುಖಭಾಗಿಯೂ ಅದುಃಖಾರ್ಹನೂ ಆದ ರಾಘವನು ನೆಲದಲ್ಲಿ ಹೇಗೆ ಮಲಗಿದನು! ಈ ವಿಷಮ ಕಾಲದಲ್ಲಿ ರಾಮನ ಜೊತೆಗೆ ನಡೆದಿರುವ ಶುಭ

ಲಕ್ಷಣನಾದ ಲಕ್ಷ್ಮಣನು ಧನ್ಯನೇ ಸರಿ, ಮಹಾಭಾಗ್ಯಶಾಲಿ'' ಎಂದು ಅಲ್ಲಿ ರಾತ್ರಿಯನ್ನು ಕಳೆದು ಮಾರನೆಯ ದಿನ ಮುಂದಕ್ಕೆ ಹೊರಟನು. ಭರದ್ವಾಜಾಶ್ರಮದಲ್ಲಿ ಒಂದು ದಿನವಿದ್ದು ರಾಮನು ಹೋದ ದಾರಿಯನ್ನು ತಿಳಿದು ಅವನ ಹಿಂದೆಯೇ ಹೋದನು. ಚಿತ್ರಕೂಟದ ಬಳಿಯಲ್ಲಿ ಆಶ್ರಮದಲ್ಲಿದ್ದ ರಾಮ ಲಕ್ಷ್ಮಣರಿಗೆ ಸೇನೆ ಬರುವುದು ಗೊತ್ತಾಯಿತು. ರಾಮನು ಲಕ್ಷ್ಮಣನನ್ನು ಕುರಿತು ''ಯಾರೋ ರಾಜರು ಅಥವಾ ರಾಜಸಮಾನರು ಬೇಟೆಗೆ ಬಂದಿರುವಂತೆ ಕಾಣುತ್ತದೆ ನೋಡು'' ಎಂದನು. ಲಕ್ಷ್ಮಣನು ಬೇಗನೆ ಒಂದು ಸಾಲವೃಕ್ಷವನ್ನು ಏರಿ ಸೇನೆ ಬರುತ್ತಿರುವ ಕಡೆಗೆ ನೋಡಿ, ''ಅಣ್ಣ, ಬೆಂಕಿಯನ್ನು ಆರಿಸಿ ನೀನು ಸೀತಾದೇವಿಯೊಂದಿಗೆ ಗುಹೆಯೊಳಕ್ಕೆ ಹೋಗು, ಬಿಲ್ಲು ಬಾಣ ಕವಚವನ್ನು ಸಿದ್ಧವಾಗಿಡು'' ಎಂದನು. ರಾಮನು ಅವನನ್ನು ಸೇನೆ ಯಾರದೆಂದು ಕಾಣುತ್ತದೆ ಎಂದು ಕೇಳಿದನು. ಲಕ್ಷ್ಮಣನು ಕೋಪದಿಂದ ಬೆಂಕಿ ಬೆಂಕಿಯಾಗಿ ''ರಾಜ್ಯ ಕೈ ಸೇರಿದಮೇಲೆ ಕೈಕಯಿಯ ಮಗ ಭರತನು ನಮ್ಮನ್ನು ಕೊಲ್ಲುವುದಕ್ಕಾಗಿ ಬರುತ್ತಿದಾನೆ. ಯಾರ ಸಲುವಾಗಿ ನಮಗೆ ಮಹದ್ವ್ಯಸನ ಉಂಟಾಗಿದೆಯೋ ಯಾರನಿಮಿತ್ತವಾಗಿ ನೀನು ರಾಜ್ಯದಿಂದ ಚ್ಯುತನಾದೆಯೋ ಆ ಶತ್ರು ಬಳಿಗೆ ಬರುತ್ತಿದಾನೆ. ಇವನು ವಧ್ಯನೆಂದು ನನಗೆ ಕಾಣುತ್ತದೆ. ಇವನ ವಧೆಯಿಂದ ಪಾಪ ಬರುವುದೆಂದು ನನಗೆ ತೋರುವುದಿಲ್ಲ. ನಾನು ಕೈಕಯಿಯನ್ನು ಬಂಧು ಬಾಂಧವರೊಡನೆ ಕೊಂದುಹಾಕುತ್ತೇನೆ'' ಎಂದು ಉದ್ವೇಗದಿಂದ ಒದರಿದನು. ರಾಮನು ಅವನನ್ನು ಸಮಾಧಾನಗೊಳಿಸಿ ಹೇಳಿದನು. ''ಮಹೇಷ್ವಾಸನೂ ಮಹಾಪ್ರಾಜ್ಞನೂ ಆದ ಭರತನು ತಾನಾಗಿ ಬಂದಿರುವಾಗ ಬಿಲ್ಲು ಬಾಣ ಗುರಾಣಿಯಿಂದ ಆಗತಕ್ಕ ಕೆಲಸ ಏನಿದೆ? ತಂದೆಯ ಮಾತನ್ನು ಕೆಡಿಸಿ, ತಾನಾಗಿ ಬಳಿಗೆ ಬಂದ ಭರತನನ್ನು ಕೊಂದು, ರಾಜ್ಯವನ್ನು ಕಟ್ಟಿಕೊಂಡು ನಾನು ಏನು ಮಾಡಿಯೇನು? ನಾನು ಧರ್ಮ ಅರ್ಥ ಕಾಮಗಳನ್ನು ನಿಮ್ಮೆಲ್ಲರ ಸಲುವಾಗಿ ಅಪೇಕ್ಷಿಸುತ್ತೇನೆ. ನಿಮಗಾಗಿ ಅಲ್ಲದೆ ಧರ್ಮದ ಮೂಲಕ ಅಲ್ಲದೆ ನನಗೆ ಇಂದ್ರಪಟ್ಟವೂ ಬೇಡ. ಭರತ, ನೀನು, ಶತ್ರುಘ್ನರನ್ನು ಬಿಟ್ಟು ನನಗೆ ಒದಗುವ ಎಳ್ಳಷ್ಟು ಸುಖವನ್ನಾದರೂ ಬೆಂಕಿ ಸುಡಲಿ. ನನಗೆ ತೋರುತ್ತದೆ: ನನ್ನ ಪ್ರಾಣಕ್ಕಿಂತ ಪ್ರಿಯನಾದ

ಭರತನು ಭ್ರಾತೃವಾತ್ಸಲ್ಯದಿಂದಲೂ ಕುಲಧರ್ಮವನ್ನು ನೆನೆದೂ ಸ್ನೇಹದಿಂದ ಶೋಕದಿಂದ ನಮ್ಮನ್ನು ನೋಡುವುದಕ್ಕೆಂದೇ ಬಂದಿದಾನೆ. ತಾಯಿಗೆ ಕಠಿಣವಾದ ಮಾತನ್ನು ಹೇಳಿ ತಂದೆಗೆ ಪ್ರಸನ್ನನಾಗಿ ನಡೆದುಕೊಂಡು ನನಗೆ ರಾಜ್ಯವನ್ನು ಕೊಡಬೇಕೆಂದು ಬಂದಿದಾನೆ. ನಿನಗೆ ಹಿಂದೆ ಯಾವಾಗ ಭರತನು ಯಾವ ವಿಪ್ರಿಯವನ್ನು ಮಾಡಿದನು, ಈಗ ನೀನು ಅವನ ವಿಷಯದಲ್ಲಿ ಶಂಕೆಪಡುವುದಕ್ಕೆ? ಯಾವ ರಾಜ್ಯದ ಸಲುವಾಗಿ ನೀನು ಇಂಥ ಮಾತನ್ನಾಡಿದೆಯೋ ಆ ರಾಜ್ಯವನ್ನು ನಿನಗೆ ಕೊಡುವಂತೆ ನಾನು ಭರತನಿಗೆ ಹೇಳುತ್ತೇನೆ. ನಾನು ಹಾಗೆ ಹೇಳಿದರೆ ಅವನು ನಿಜವಾಗಿಯೂ ಹಾಗೆಯೇ ಆಗಲಿ ಎನ್ನುತ್ತಾನೆ.'' ರಾಮನ ಈ ಮಾತನ್ನು ಕೇಳಿ ಲಕ್ಷ್ಮಣನು ಬಹು ನಾಚಿಕೊಂಡನು; ತನ್ನೊಳಗೆ ತಾನೇ ಅಡಗುವಂತೆ ಸಂಕೋಚಪಟ್ಟನು. ಆಮೇಲೆ ಇವರು ತಂದೆ ದಶರಥನೇ ಬಂದನೇನೋ ಎಂದು ಯೋಚಿಸಿದರು. ಆನೆ ಕುದುರೆಗಳು ತಂದೆಯವು; ಆದರೆ ಜೊತೆಗೆ ಛತ್ರವಿರಲಿಲ್ಲ. ಅದರಿಂದ ರಾಮನ ಮನಸ್ಸಿಗೆ ಭಯವುಂಟಾಯಿತು. ಭರತನು ಆ ವನವನ್ನು ಮುಟ್ಟಿ ಇವರಿರುವ ಸ್ಥಳವನ್ನು ಹುಡುಕಿಕೊಂಡು ಪರಿವಾರವನ್ನು ಬಿಟ್ಟು ಆಶ್ರಮವನ್ನು ಬಂದು ಸೇರಿದನು; ಅಲ್ಲಿ ಜಟಾಮಂಡಲಧಾರಿಯಾಗಿ ಕುಳಿತಿರುವ ಅಣ್ಣನನ್ನು ಕಂಡನು; ಸಿಂಹಸ್ಕಂಧನೂ ಮಹಾಬಾಹುವೂ ಆದ ಸಾಗರಾಂತ ಪೃಥಿವಿಯ ದೊರೆ ದರ್ಭೆಯ ಪೀಠದ ಮೇಲೆ ಕುಳಿತಿರುವುದನ್ನು ನೋಡಿ ದುಃಖ ಉಕ್ಕೇರಿಬಂದು ಅಣ್ಣನ ಬಳಿಗೆ ಓಡಿಬಂದನು. ಕೊರಳುಕಟ್ಟಿಕೊಂಡು ತೊದಲುವ ಮಾತಿನಿಂದ "ಪ್ರಜೆಗಳಿಂದ ಸೇವಿಸಲ್ಪಡಬೇಕಾದ ನನ್ನ ಅಣ್ಣನು ವನ್ಯಮೃಗಗಳಿಂದ ಉಪಾಸೀನನಾಗಿದಾನೆ. ಸಾವಿರ ವಸ್ತ್ರಗಳಿಂದ ಅಲಂಕೃತನಾಗಿರಬೇಕಾದವನು ಅಜಿನವನ್ನು ಧರಿಸಿದ್ದಾನೆ. ಯಾವ ಮೆಯ್ಗೆ ಮಹಾರ್ಹವಾದ ಚಂದನವು ಲೇಪವಾಗುತ್ತಿತ್ತೋ ಆ ಮೆಯ್ಗೆ ಈಗ ಹೇಗೆತಾನೆ ಈ ಮಲದಿಂದ ಸೇವೆಯಾಗುತ್ತಿದೆ? ನನಗಾಗಿ ಇವನಿಗೆ ಈ ಕಷ್ಟವೆಲ್ಲ ಪ್ರಾಪ್ತವಾಯಿತು. ನಾನು ನೃಶಂಸನು. ನನ್ನ ಬಾಳು ವ್ಯರ್ಥವಾಯಿತು. ಛೆ'' ಎಂದು ಪ್ರಲಪಿಸುತ್ತ, ಅಣ್ಣಾ ಎಂದು ಒಂದುಸಲ ಕೂಗಿ ಅವನ ಪಾದದಮೇಲೆ ಬಿದ್ದು ಇನ್ನೊಂದು ಮಾತನ್ನಾಡಲಾರದೆಹೋದನು. ಶತ್ರುಘ್ನನೂ ಬಂದು ಅಣ್ಣನಿಗೆ

ವಂದಿಸಿದನು. ರಾಮನು ಅವರನ್ನು ಅಪ್ಪಿಕೊಂಡನು. ಭರತನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು "ತಂದೆ ಎಲ್ಲಿ? ಅವರನ್ನು ಅಲ್ಲಿ ಬಿಟ್ಟು ನೀನು ವನಕ್ಕೆ ಬರಬಾರದಲ್ಲಾ, ರಾಜನಿಗೆ ಏನಾದರೂ ಆಯಿತೋ" ಎಂದು ಬಹುದೂರ ಅವನ ಕಷ್ಟಸುಖವನ್ನು ವಿಚಾರಿಸಿದನು. ಕೊನೆಗೆ, ರಾಜನು ಪ್ರಜೆಗಳನ್ನು ಧರ್ಮದಿಂದ ಪಾಲಿಸಿ ಇಹಪರಗಳೆರಡನ್ನೂ ಸಾಧಿಸುತ್ತಾನೆ, ಹಾಗೆ ನೀನು ನಡೆಯುತ್ತಿದೀಯಲ್ಲವೆ, ಎಂದು ಕೇಳಿದನು. ಭರತನು "ಧರ್ಮವಿಹೀನನಾದ ನಾನು ರಾಜಧರ್ಮವನ್ನು ಏನುಮಾಡಲಿ? ನಮ್ಮಲ್ಲಿ ಹಿರಿಯನು ಇರುತ್ತ ಕಿರಿಯನು ರಾಜನಾಗುವುದಿಲ್ಲ. ಆದ್ದರಿಂದ ನೀನು ಅಯೋಧ್ಯೆಗೆ ಹಿಂದಿರುಗು. ರಾಜ್ಯಾಭಿಷೇಕವನ್ನು ಮಾಡಿಕೊ. ನೀನಿತ್ತ ಬಂದೆ; ನಾನು ಕೇಕಯ ದೇಶದಲ್ಲಿದ್ದೆ. ರಾಜನು ದುಃಖದಲ್ಲಿ ದಿವಂಗತನಾದನು. ಪಿತೃಕ್ರಿಯೆಯನ್ನು ಮಾಡು. ಪ್ರಿಯನಾದ ಮಗನು ಕೊಟ್ಟ ದತ್ತವು ಪಿತೃಲೋಕದಲ್ಲಿ ಅಕ್ಷಯವಾಗುತ್ತದೆ" ಎಂದು ಹೇಳಿದನು. ಭರತನ ಮಾತು ರಾಮನನ್ನು ವಜ್ರದಂತೆ ತಾಕಿತು. ಅವನು ಕೆಳಗೆ ಬಿದ್ದನು. ಅವನೂ ವೈದೇಹಿಯೂ ಸುಮ್ಮನೆ ಅತ್ತರು. ರಾಮನು ಭರತನನ್ನು ಕುರಿತು "ತಂದೆ ತೀರಿಹೋದಮೇಲೆ ನಾನು ಅಯೋಧ್ಯೆಯನ್ನು ಕಟ್ಟಿಕೊಂಡು ಏನುಮಾಡಲಿ? ಅವನಿಲ್ಲದ ಅಯೋಧ್ಯೆಯನ್ನು ಪಾಲಿಸುವವರು ಯಾರು? ಭರತ, ನೀನೂ ಶತ್ರುಘ್ನನೂ ಧನ್ಯರು. ನೀವು ತಂದೆಯ ಪ್ರೇತಕರ್ಮಗಳನ್ನು ಮಾಡಿದಿರಿ. ಹಿಂದೆ ನನ್ನನ್ನು ಕುರಿತು ತಂದೆ ಹೇಳಿದ ಪ್ರಿಯವಾದ ಮಧುರವಾದ ವಾಕ್ಯಗಳನ್ನು ಪುನಃ ಎಲ್ಲಿ ಕೇಳುತ್ತೇನೆ" ಎಂದು ಹೇಳಿದನು. ಮಂದಾಕಿನೀ ನದಿಗೆ ಸೀತೆಯೊಡನೆ ಹೋಗಿ ಸ್ನಾನಮಾಡಿ ಇಂಗುದೀಪಿಣ್ಯಾಕದಿಂದ ತಂದೆಗೆ ಪಿಂಡವನ್ನು ನೀಡಿದನು. ರಾಜನ ಕುಮಾರನು ರಾಜನ ಆತ್ಮಕ್ಕೆ ಇಂಗುದಿಯ ಹಿಂಡಿಯಿಂದ ಪಿಂಡಹಾಕಿದ್ದನ್ನು ನೋಡಿ ಕೌಸಲ್ಯಾದಿಗಳು ಬಹಳ ನೊಂದರು. ಆಮೇಲೆ ಇವರು ಬಹಳವಾಗಿ ಅಳುತ್ತಿರಲು ಆ ಶಬ್ದವನ್ನು ಕೇಳಿ ಪರಿವಾರವೆಲ್ಲ ಓಡಿಬಂದಿತು. ಕೌಸಲ್ಯಾದೇವಿ ಸುಮಿತ್ರೆಗೆ "ಇಲ್ಲಿ ನಿನ್ನ ಮಗನು ಅಣ್ಣನ ಪ್ರೀತಿಗಾಗಿ ಸೇವಕವೃತ್ತಿಯನ್ನು ನಡೆಸುತ್ತಿದಾನೆ" ಎಂದು ಹೇಳುತ್ತ ಇಂಗುದೀಪಿಣ್ಯಾಕವನ್ನು ನೋಡಿ "ಇದಕ್ಕಿಂತ ಕಷ್ಟ

ವಾದದು ಇನ್ನೇನಿರುವುದು? ರಾಮನು ತಂದೆಗೆ ಇಂಗುದೀಪಿಣ್ಯಾಕವನ್ನು ಕೊಟ್ಟಿರುವುದನ್ನು ನೋಡಿಯೂ ನನ್ನೆದೆ ಒಡೆಯದೇ ಇದೆಯಲ್ಲ" ಎಂದು ದುಃಖಿಸಿ ಮುಂದೆ ಬಂದು, ಸ್ವರ್ಗದಿಂದ ಚ್ಯುತನಾದ ದೇವತೆಯಂತೆ ತೋರುತ್ತಿದ್ದ ರಾಮನನ್ನು ಕಂಡಳು; ಅವನ ಅವಸ್ಥೆಯನ್ನು ಕಂಡು ಗಟ್ಟಿಯಾಗಿ ಅತ್ತಳು. ರಾಮಚಂದ್ರನು ಎದ್ದು ಆಕೆಯ ಕಾಲುಗಳಿಗೆ ವಂದಿಸಿದನು. ಹಾಗೆಯೇ ಇತರ ತಾಯಿಯರಿಗೂ ವಂದನೆಮಾಡಿದನು. ಅವನ ಅನಂತರ ಲಕ್ಷ್ಮಣನೂ ಸೀತೆಯೂ ಎಲ್ಲರಿಗೂ ವಂದನೆಮಾಡಿದರು. ಕೌಸಲ್ಯಾದೇವಿ ಸೀತಾದೇವಿಯನ್ನು ತಾಯಿ ಮಗಳನ್ನು ಅಪ್ಪಿಕೊಳ್ಳುವಂತೆ ಅಪ್ಪಿಕೊಂಡು "ವಿದೇಹರಾಜನ ಸುತೆ, ದಶರಥನ ಸೊಸೆ, ರಾಮನ ಪತ್ನಿ, ಪಡುತ್ತಿರುವ ಈ ಕಷ್ಟವನ್ನು ನೋಡಿ ನಾನು ದುಃಖದಿಂದ ಸುಡುತ್ತಿದೇನೆ" ಎಂದಳು. ಆ ವೇಳೆಗೆ ವಸಿಷ್ಠನು ಬರಲು ರಾಮನು ಅವನಿಗೂ ವಂದಿಸಿದನು. ಆಮೇಲೆ ಭರತನು ಬಂದದು ಏಕೆಂದು ರಾಮನು ಕೇಳಲಾಗಿ ಅವನು ತನ್ನ ಅಣ್ಣನಿಗೆ ತನ್ನ ಪ್ರಾರ್ಥನೆಯನ್ನು ತಿಳಿಸಿದನು. "ಶರತ್ಕಾಲದ ರಜನಿ ವಿಮಲವಾದ ಶಶಿಯಿಂದ ಹೇಗೋ ಹಾಗೆ ಸಮಗ್ರಭೂಮಿ ನಿನ್ನಿಂದ ಸನಾಥ ವಾಗಲಿ. ಇದನ್ನು ನಾನೂ ನಮ್ಮ ಸಚಿವರೂ ತಲೆಬಾಗಿ ಬೇಡುತ್ತೇವೆ. ನಾನು ನಿನ್ನ ತಮ್ಮ, ಶಿಷ್ಯ, ದಾಸ. ನನ್ನಲ್ಲಿ ನೀನು ಪ್ರಸನ್ನನಾಗಬೇಕು. ಹಿರಿಯರಿಂದ ಬಂದು ನಮಗೆ ಶಾಶ್ವತ ಆದ ಪ್ರಜೆಯನ್ನು ಕೈಬಿಟ್ಟು ಹೋಗುವುದು ನಿನಗೆ ಸರಿಯಲ್ಲ" ಎಂದು ಅಣ್ಣನ ಪಾದದಮೇಲೆ ತಲೆಯನ್ನಿಟ್ಟು ಬೇಡಿಕೊಂಡನು. ಭರತನು ತಾಯನ್ನು ಬಯ್ದು ಎರಡು ಮಾತನ್ನು ಹೇಳಿದ್ದನು; ತನ್ನದೂ ತಪ್ಪಾಯಿತೆಂದು ಆಡಿಕೊಂಡಿದ್ದನು. ರಾಮನು ಅದಕ್ಕೆ "ನೀನು ಕುಲೀನನು; ಸತ್ವಸಂಪನ್ನನು, ತೇಜಸ್ವಿ, ಸತ್ಯ ವಂತನು. ನೀನು ರಾಜ್ಯಕ್ಕಾಗಿ ತಪ್ಪನ್ನು ಹೇಗೆ ಮಾಡೀಯೆ? ನಿನ್ನಲ್ಲಿ ಎಳ್ಳಷ್ಟೂ ತಪ್ಪು ಕಾಣಲಿಲ್ಲ. ನಿನ್ನ ತಾಯನ್ನಾದರೂ ನೀನು ದೂಷಿಸ ಬಾರದು. ಅದು ಹುಡುಗುತನವಾದೀತು. ತಂದೆಗೆ ಗೌರವ ತೋರಿಸುವಷ್ಟು ಕಾಲವೂ ತಾಯಿಗೂ ಗೌರವ ತೋರಿಸಬೇಕು. ಇನ್ನು ತಂದೆ ಮಾಡಿದ ಏರ್ಪಾಡು ಯಾವುದಿದೆಯೊ ಅದರಂತೆ ನಾವು ನಡೆದುಕೊಳ್ಳಬೇಕು. ನಾನು ಹದಿನಾಲ್ಕು ವರುಷ ವನವಾಸವನ್ನು ತಂದೆ ಕೊಟ್ಟ ಭಾಗವೆಂದು

ಅನುಭವಿಸುತ್ತೇನೆ. ನೀನು ಅದೇ ಅಪ್ಪಣೆಯ ಪ್ರಕಾರ ರಾಜ್ಯವನ್ನು ಅನುಭವಿಸು" ಎಂದನು. ಮಾರನೆಯ ದಿನ ಭರತನು ಮತ್ತೆ ಇದೇ ಪ್ರಾರ್ಥನೆಯನ್ನು ಮಾಡಿದನು. ರಾಮನು ಮತ್ತೆ ಅದೇ ಉತ್ತರವನ್ನು ಕೊಟ್ಟನು. ತನ್ನ ನಿಶ್ಚಯಕ್ಕೆ ಕಾರಣವಾದ ಧರ್ಮವನ್ನು ಕುರಿತು ತನ್ನ ಭಾವನೆಯನ್ನು ವಿವರಿಸಿದನು. ಭರತನು ಅಣ್ಣನನ್ನು ಕುರಿತು "ಲೋಕದಲ್ಲಿ ನಿನ್ನಹಾಗೆ ಯಾರಿರುವರು? ನೀನು ದುಃಖದಿಂದ ಕುಂದುವುದಿಲ್ಲ; ಸುಖದಿಂದ ಉಬ್ಬುವುದಿಲ್ಲ. ನೀನು ಅಮರೋಪಮಸತ್ವನು, ಮಹಾತ್ಮನು; ಸತ್ಯಸಂಗರನು, ಸರ್ವಜ್ಞನು, ಸರ್ವದರ್ಶಿ. ದಶರಥನು ಮಾಡಿದುದು ಅಂತ್ಯಕಾಲದ ಮಂಕಿನಿಂದ ಎಂದು ಎಣಿಸು. ತಾಯಿ ಮಾಡಿದುದು ತಪ್ಪಾಯಿತು. ಆ ಮಾತನ್ನು ಅಲ್ಲಿಗೆ ಬಿಟ್ಟು ಈಗ ಅಯೋಧ್ಯೆಗೆ ಹಿಂತಿರುಗಿ ನಮ್ಮೆಲ್ಲರನ್ನೂ ರಕ್ಷಿಸು" ಎಂದು ಮೊದಲಾಗಿ ಅವನನ್ನು ಬಹು ವಿಧವಾಗಿ ಬೇಡಿದನು. ರಾಮನು ಒಪ್ಪಲಿಲ್ಲ. ಜಾಬಾಲಿ ಎಂಬ ಬ್ರಾಹ್ಮಣೋತ್ತಮನು ರಾಮನನ್ನು ಕುರಿತು "ತಂದೆಯೆಂದೂ ತಂದೆಯ ಮಾತೆಂದೂ ಪ್ರತ್ಯಕ್ಷವಾಗಿ ಯಾವುದು ಒಳ್ಳೆಯದೊ ಅದನ್ನು ಮಾಡದೆ ಬಿಡಬಾರದು. ಭರತನು ಹೇಳುವಂತೆ ನೀನು ಹಿಂದಕ್ಕೆ ಬಂದು ರಾಜನಾಗುವುದೇ ಸರಿ" ಎಂದು ರಾಮನಿಗೆ ಹೇಳಿದನು. ರಾಮನು ಅವನನ್ನು ಗದರಿಸಿ ಈ ನಾಸ್ತಿಕವಾದವನ್ನು ನಾನು ಒಪ್ಪುವುದಿಲ್ಲ ಎಂದು ಹೇಳಿದನು. ವಸಿಷ್ಠನು "ಜಾಬಾಲಿ ನಾಸ್ತಿಕವಾದವನ್ನು ಮಾಡಲಿಲ್ಲ. ಇಕ್ಷ್ವಾಕು ವಂಶದಲ್ಲಿ ಹಿರಿಯನು ರಾಜನಾಗುವುದು ಪದ್ಧತಿ. ಆ ಧರ್ಮವನ್ನು ನೀನು ಪಾಲಿಸಬೇಕು" ಎಂದನು; ಮತ್ತೆ "ಮನುಷ್ಯನಿಗೆ ಆಚಾರ್ಯನೂ, ಪಿತನೂ, ಮಾತೆಯೂ ಗುರುಗಳೆನ್ನಿಸಿಕೊಳ್ಳುವರು. ನೀನು ರಾಜನಾಗಬೇಕೆಂಬುದು ನಿಮ್ಮ ತಾಯ ಅಪೇಕ್ಷೆ; ನನ್ನ ಅಪೇಕ್ಷೆ" ಎಂದನು. ರಾಮನು "ನನ್ನ ತಂದೆ ಯಾವುದನ್ನು ಆಗುವುದೆಂದು ಹೇಳಿದನೊ ಅದನ್ನು ಸುಳ್ಳುಮಾಡಲಾರೆನು" ಎಂದನು. ಭರತನು ನಾನು ಇಲ್ಲಿಯೇ ಅನ್ನ ನಿದ್ರೆಯಿಲ್ಲದೆ ಧಾರಣಮಾಡುತ್ತೇನೆ ಎಂದನು. ರಾಮನು ಹೀಗೆ ಮಾಡಬಾರದು ಎಂದು ಹೇಳಿದನು. ಅಯೋಧ್ಯೆಯ ಹಿರಿಯರು "ಒಳ್ಳೆಯದಾಯಿತು. ರಾಮನು ತಂದೆಯ ಮಾತಿನಂತೆ ನಡೆಯಬೇಕಾದರೆ ನಾವು

ಅದನ್ನು ತಪ್ಪಿಸಲಾಗುವುದಿಲ್ಲ'' ಎಂದರು. ಭರತನು ''ರಾಜ್ಯವನ್ನು ಕೊಡೆಂದು ನಾನು ತಂದೆಯನ್ನು ಕೇಳಲಿಲ್ಲ. ಈ ವಿಷಯವನ್ನು ತಾಯೊಂದಿಗೆ ಆಡಿದವನಲ್ಲ. ಅಣ್ಣನು ಅರಣ್ಯಕ್ಕೆ ಹೋಗಲು ನಾನು ಒಪ್ಪಿದವನಲ್ಲ. ತಂದೆಯ ಮಾತು ಅವಶ್ಯವಾಗಿ ನಡೆಯಬೇಕೆನ್ನುವುದಾದರೆ ಹದಿನಾಲ್ಕು ವರುಷ ಅರಣ್ಯದಲ್ಲಿ ನಾನಿರುತ್ತೇನೆ'' ಎಂದನು. ರಾಮನು ''ತಂದೆಯ ಮಾತನ್ನು ಲೋಪಮಾಡುವುದಕ್ಕೆ ನಾನಾಗಲಿ, ಭರತನಾಗಲಿ ಶಕ್ತರಲ್ಲ. ಭರತನು ಕ್ಷಮಾವಂತನು, ಗುರುಸತ್ಕಾರಕಾರಿ. ಇದನ್ನು ನಾನು ಬಲ್ಲೆನು. ನಾನು ವನವಾಸದಿಂದ ಹಿಂದಕ್ಕೆ ಬಂದ ಮೇಲೆ ಧರ್ಮಶೀಲನಾದ ನನ್ನ ಸೋದರನೊಡನೆ ಪೃಥಿವೀಪತಿಯಾಗುತ್ತೇನೆ'' ಎಂದು ಹೇಳಿದನು. ಮತ್ತೆರಡುಸಲ ಅಣ್ಣನನ್ನು ಒಪ್ಪಿಸುವುದಕ್ಕೆ ನೋಡಿ ಆಗದೆ ಕೊನೆಗೆ ಭರತನು ''ಅಣ್ಣಾ, ನಿನ್ನ ಪಾದಗಳಿಂದ ಆ ಪಾದುಕೆಗಳನ್ನು ತೆಗೆದುಕೊಡು'' ಎಂದನು. ರಾಮನು ಅವನ್ನು ತೆಗೆದುಕೊಟ್ಟನು. ಭರತನು ಅವಕ್ಕೆ ವಂದನೆ ಮಾಡಿ ರಾಮನನ್ನು ಕುರಿತು ''ಹದಿನಾಲ್ಕು ವರುಷ ನಾನೂ ಜಟಾಚೀರ ಧರನಾಗಿ ಫಲಮೂಲಗಳನ್ನು ತಿನ್ನುತ್ತ ನಿನ್ನ ಆಗಮನವನ್ನು ನಿರೀಕ್ಷಿಸುತ್ತ ನಗರದ ಹೊರಗೆ ಇರುತ್ತೇನೆ. ರಾಜ್ಯತಂತ್ರ ಈ ಪಾದುಕೆಗಳಲ್ಲಿ ನಿಂತಿದೆ. ಹದಿನಾಲ್ಕು ವರುಷ ಕಳೆದ ಮಾರನೆಯ ದಿನ ನಿನ್ನನ್ನು ನೋಡದೆಹೋದೆನೊ ನಾನು ಅಗ್ನಿಪ್ರವೇಶಮಾಡುವೆನು'' ಎಂದನು. ಒಪ್ಪಿದೆನು ಎಂದು ಪ್ರತಿಜ್ಞೆಮಾಡಿ ರಾಮನು ಅವನನ್ನೂ ಶತ್ರುಘ್ನನನ್ನೂ ಅಪ್ಪಿಕೊಂಡು ಭರತನಿಗೆ ''ತಾಯಿ ಕೈಕಯಿಯನ್ನು ರಕ್ಷಿಸಿಕೊ. ಅವಳಮೇಲೆ ಕೋಪ ಮಾಡಬೇಡ, ನನ್ನಾಣೆ ಸೀತೆಯ ಆಣೆ'' ಎಂದು ಹೇಳಿ ಅವರನ್ನು ಕಳುಹಿಸಿ ಕೊಟ್ಟನು. ಭರತನು ಪಾದುಕೆಯನ್ನು ತೆಗೆದುಕೊಂಡು ಅಯೋಧ್ಯೆಗೆ ಹಿಂತಿರುಗಿದನು.

## ೬

## ಕಥೆ ಪಾತ್ರಗಳ ಪರಿಶೀಲನ

### ಕಥೆಯ ವಿಷಯ

ಅಯೋಧ್ಯಾಕಾಂಡದ ಕಥೆ ಇಲ್ಲಿಗೆ ಮುಗಿಯುತ್ತದೆ. ಇದಾದ ಮೇಲೆ ಕೆಲವು ಕಾಲ ಆ ಪ್ರಾಂತದಲ್ಲಿದ್ದು ರಾಮಚಂದ್ರನು ದಕ್ಷಿಣಕ್ಕೆ ಹೊರಟು ವನದಲ್ಲಿ ಅಲ್ಲಲ್ಲಿ ಕೆಲಕಾಲ ಕಳೆದು ಅತ್ರಿ ಋಷಿಗಳ ಆಶ್ರಮ ವನ್ನು ಸೇರಿ ಋಷಿಯ ಮತ್ತು ಋಷಿಪತ್ನಿ ಅನಸೂಯೆಯ ಆಶೀರ್ವಾದ ಪಡೆದು ಸೂರ್ಯನು ಅಭ್ರಮಂಡಲವನ್ನು ಹೊಗುವಂತೆ ಅದರಾಚೆಯ ವನವನ್ನು ಪ್ರವೇಶಿಸಿದನು. ಕಥೆಯನ್ನು ವಾಲ್ಮೀಕಿಯ ನುಡಿಯಲ್ಲೇ ಸ್ವಲ್ಪ ವಿವರವಾಗಿ ಹೇಳಿದ್ದಾಗಿದೆ. ರಾಮಾಯಣದ ಕತೆ ಎಲ್ಲರಿಗೂ ತಿಳಿದಿರುವುದರಿಂದ ಇಲ್ಲಿ ಕಥಾಸಂಗ್ರಹವನ್ನು ಕೊಡುವುದು ಅನವಶ್ಯಕ ವಾಗಿತ್ತೆಂದು ಕೆಲವರಿಗೆ ತೋರಬಹುದು. ಆದರೆ ನಮಗೆ ಬೇಕಾಗಿರು ವುದು ರಾಮಾಯಣದ ಕಥೆಯಲ್ಲ: ಅದನ್ನು ವಾಲ್ಮೀಕಿ ಹೇಳುವ ರೀತಿ. ಮಗನನ್ನು ಕಾಡಿಗೆ ಕಳುಹಿಸಬೇಕಾಗಿ ಬಂದಾಗ ದಶರಥನು ಏನು ಮಾಡಿದನು, ಏನು ಹೇಳಿದನು? ಗೋಳಾಡಿದನು, ಬೇಡವೆಂದನು, ಇದು ನಮ್ಮ ಸಂಗ್ರಹ. ಆದರೆ ವಾಲ್ಮೀಕಿಯ ಚಿತ್ರ ಸರಿಯಾಗಿ ತಿಳಿಯ ಬೇಕಾದರೆ ಅವನ ಮಾತು ತಿಳಿಯಬೇಕು. ಈ ಮಾತನ್ನು ಎಲ್ಲರೂ ಬಲ್ಲ ರೆಂದು ನಾವು ಹೇಳಲಾಗುವುದಿಲ್ಲ. ಆದಕಾರಣ ವಿಮರ್ಶೆಗೆ ಸಹಾಯಕ ವಾಗುವಂತೆ ವಾಲ್ಮೀಕಿಯ ಮಾತನ್ನು ಸಂಗ್ರಹಿಸಿ ಕತೆಯನ್ನು ಬರೆದಿದೆ. ಆದರೂ ಈ ಕತೆ ಹೇಳುವುದರಲ್ಲಿ ಮುಖ್ಯವಾದ ಮಾತುಗಳನ್ನು ಮಾತ್ರ ಎತ್ತಿಕೊಂಡಿದೆ. ಕಾವ್ಯದಲ್ಲಿ ಇದೆಲ್ಲ ವಿಸ್ತಾರವಾಗಿ ಹರಡಿರತಕ್ಕ ಕಥೆ. ಒಬ್ಬೊಬ್ಬರ ಮಾತೂ ಹತ್ತು ಶ್ಲೋಕ ಹದಿನೆಂಟು ಶ್ಲೋಕದಷ್ಟು ಇರು ವುದು ಬಹು ಸಾಧಾರಣ. ಇದು ಮಹಾಕಾವ್ಯದ ಪದ್ಧತಿ. ಮನುಷ್ಯನ ಎತ್ತರಕ್ಕೆ ಅಥವಾ ಅದಕ್ಕೂ ಹೆಚ್ಚಿನ ಎತ್ತರಕ್ಕೆ ಬರೆದ ಚಿತ್ರ ವಿಗ್ರಹ ಗಳಲ್ಲಿ ಹುಬ್ಬಿನ ಕೂದಲು ಉಗುರಿನ ಮೊನೆಯನ್ನು ಬಿಡಿಸಿ ತೋರಿಸುವಂತೆ ಇಲ್ಲಿ ಮನುಷ್ಯನ ಮಾತನ್ನು ಹೊತ್ತಾಯಿತೆನ್ನದೆ ಬೇಸರವಾಯಿತೆನ್ನದೆ ಸಾವಧಾನವಾಗಿ ವಿವರವಾಗಿ ಗುರುತಿಸಿದೆ. ಸಮುದ್ರದ ತೆರೆಯ ಆಟದಲ್ಲಿ

ಹತ್ತಾರು ಅಲೆ ಒಂದರ ಹಿಂದೊಂದು ಬಂದು ಕೊನೆಗೆ ಒಂದು ಅದೆಲ್ಲದರ ಬಲದೊಂದಿಗೆ ತೀರದಲ್ಲಿ ಬಡಿಯುವಂತೆ ವಾಲ್ಮೀಕಿಯ ಕಾವ್ಯದ ಒಂದು ಭಾಷಣದಲ್ಲಿ ನಾಲ್ಕು ಭಾವ ಇದ್ದರೆ ಅದರಲ್ಲಿ ಒಂದೊಂದೂ ನಾಲ್ಕೈದು ಶ್ಲೋಕದಲ್ಲಿ ಮೇಲೇರಿ ಬೆಳೆದು ಕೊನೆಯ ಒಂದು ಶ್ಲೋಕದಲ್ಲಿ ಹೃದಯ ವನ್ನು ಬಡಿಯುತ್ತದೆ. ಹೀಗೆ ಒಂದೊಂದು ಭಾಷಣದಲ್ಲಿಯೂ ಹಲವು ಘಟ್ಟ, ಆ ಘಟ್ಟ ಒಂದೊಂದರಲ್ಲಿಯೂ ಹಲವು ಮೆಟ್ಟಲುಗಳು, ಕಾಣುವವು. ಇದು ವಿಸ್ತಾರವಾದ ಕಲೆ; ವಿವರವನ್ನರಿತ ಕಲೆ; ತನ್ನ ಕೆಲಸದ ವಿಷಯ ದಲ್ಲಿ ಶಂಕೆಯಿಲ್ಲದ ಕಲೆ. ಇದರ ಸೊಗಸನ್ನೆಲ್ಲ ತಿಳಿಯಬೇಕಾದರೆ ಪಾರಾಯಣದ ಪದ್ಧತಿಯಂಥ ಅನುಕೂಲವಾದ ಪದ್ಧತಿ ಬೇರೊಂದಿಲ್ಲ. ಹೇಳುವವನು ಆತುರವಿಲ್ಲದೆ ಬೇಸರವಿಲ್ಲದೆ ಹೇಳುವಂತೆ ಕೇಳುವವನೂ ಆತುರವಿಲ್ಲದೆ ಬೇಸರವಿಲ್ಲದೆ ಕೇಳಬೇಕು. ಇಲ್ಲಿ ಕಥೆಯನ್ನು ಓದಿ ಮುಗಿಸು ವುದು ಮುಖ್ಯವಲ್ಲ. ಅದರ ಒಂದೊಂದು ಹೆಜ್ಜೆಯೂ ಕೊನೆಯಷ್ಟೇ ಮುಖ್ಯ. ಮಹಾಕಾವ್ಯದಲ್ಲಿ ಕಾವ್ಯಸುಖ ಇರುವುದು ಕಥೆ ಕೊನೆಗೆ ಮುಟ್ಟುವುದರಿಂದ ಅಲ್ಲ. ಅದರ ಒಂದೊಂದು ಶ್ಲೋಕವೂ ಮನನಕ್ಕೆ ವಿಷಯ, ಅದೊಂದೊಂದನ್ನೂ ಮನಸ್ಸಿನಲ್ಲಿ ನುರಿಸಿ ಚಪ್ಪರಿಸಬೇಕು. ಇಂಥ ವಿವರವಾದ ಒಂದು ರೀತಿಯಿಂದ ಕಾವ್ಯವು ಮಾನವ ಜೀವನವನ್ನು ಕುರಿತು ಕವಿಯ ಭಾವ ಏನು ಎನ್ನುವುದನ್ನು ತೋರಿಸುತ್ತದೆ.

ಆ ಜೀವನದ ಬಯಲಾಟವನ್ನು ವಾಲ್ಮೀಕಿ ಅಯೋಧ್ಯಾಕಾಂಡದಲ್ಲಿ ತೆರೆದಿರುವಷ್ಟು ವಿಸ್ತಾರವಾಗಿ ಪ್ರಪಂಚದ ಸಾಹಿತ್ಯದ ಇನ್ನು ಯಾವ ಕಾವ್ಯವೂ ತೆರೆದಂತೆ ಕಾಣುವುದಿಲ್ಲ. ರಾಜನೂ ಅವನ ಮೂವರು ರಾಣಿ ಯರೂ ಒಬ್ಬೊಬ್ಬರು ಒಂದೊಂದು ಸ್ವಭಾವದವರು. ಅವರ ನಾಲ್ವರು ಮಕ್ಕಳು ಒಂದೊಂದು ಸ್ವಭಾವದವರು. ರಾಣಿ ರಾಜರಿಗೆ ಪ್ರಿಯನಾದ ಸೂತನೂ ಗುರುವೂ ಎರಡನೆಯ ರಾಣಿಯ ಸಲಿಗೆಯ ದಾಸಿಯೂ ಇಲ್ಲಿ ಮುಖ್ಯ ಪಾತ್ರಗಳೇ. ರಾಜನು ಗಲಭೆಯಿಲ್ಲದೆ ನಡೆಯಿಸಿಬಿಡಬೇಕೆನ್ನುವ ರಾಜ್ಯಾಭಿಷೇಚನ, ಅದಕ್ಕೆ ಬರುವ ತೊಡಕು, ಆ ಸಂದರ್ಭದಲ್ಲಿ ಆಗುವ ಎಲ್ಲ ಸಂಗತಿ, ಆಡುವ ಎಲ್ಲ ಮಾತು; ರಾಜಕುಮಾರನು ಅರಣ್ಯಕ್ಕೆ ಹೋಗಕೂಡದೆಂದು, ಅವನೊಂದಿಗೆ ನಾವೂ ಅರಣ್ಯಕ್ಕೆ ಬರುವೆವೆಂದು,

ಹೇಳುವ ಹತ್ತು ರೀತಿಯ ಜನದ ಮಾತು, ಅವರಿಗೆಲ್ಲ ಅವನು ಹೇಳುವ ಉತ್ತರ; ರಾಜನ ಮರಣ; ರಾಜನಾಗಬೇಕಾದ ಕಿರಿಯ ಮಗನು ಬಂದು ತನ್ನ ತಾಯನ್ನು ಕಾಣುವುದು, ದೊಡ್ಡಮ್ಮನನ್ನು ಕಾಣುವುದು, ಅರಣ್ಯಕ್ಕೆ ಹೋಗುವುದು; ಅಣ್ಣನನ್ನು ಬೇಡುವುದು, ಅವನು ಒಪ್ಪದೆ ಇರಲು ಅವನ ದಾಸನಾಗಿ ರಾಜ್ಯವಾಳುತ್ತೇನೆಂದು ಅವನ ಪಾದುಕೆಯನ್ನು ತರುವುದು: ಹೀಗೆ ಹತ್ತಾರು ರೀತಿಯ ಸ್ವಭಾವ ಹತ್ತಾರು ತೀವ್ರವಾದ ಸಂದರ್ಭದಲ್ಲಿ ತನ್ನ ಸುತ್ತಣ ಪ್ರಪಂಚದೊಂದಿಗೆ ವ್ಯವಹರಿಸುವುದು ಈ ಕಥೆಯಲ್ಲಿ ಚಿತ್ರಿತವಾಗಿದೆ. ಕಥೆಯ ಎಲ್ಲ ಪಾತ್ರಗಳೂ ನಿಜವಾದ ವ್ಯಕ್ತಿಗಳಾಗಿ ಎದುರಿನಲ್ಲಿ ಓಡಾಡುವಂತೆ ಸಹಜವಾದ ಸಂಪೂರ್ಣವಾದ ರೀತಿಯಲ್ಲಿ ನಿರ್ಮಿಸಲ್ಪಟ್ಟಿವೆ. ಇಷ್ಟು ಬೇರೆ ಬೇರೆ ಸ್ವಭಾವದ ಪಾತ್ರಗಳು ಇಷ್ಟೊಂದು ಸಂದರ್ಭಗಳಲ್ಲಿ ಚಿತ್ರಿತವಾಗಿರುವುದು ಭಾರತದ ಇತಿಹಾಸದಲ್ಲಿ ಹೊರತು ಇನ್ನೆಲ್ಲಿಯೂ ಇಲ್ಲ. ಆದರೆ ಭಾರತದ ಕಥೆ ಒಂದು ಕಥೆಯಲ್ಲ; ಒಂದು ಜೀವನ ಅಥವಾ ಸಂಸಾರದ ಹತ್ತು ದಿವಸದ ಚರಿತ್ರೆಯಲ್ಲ. ಅದರ ವಿಸ್ತಾರ ಬಹುಮಟ್ಟಿಗೆ ಉಪಕಥೆಗಳಿಂದ ಬಂದಿರತಕ್ಕದು. ಮುಖ್ಯ ಕಥೆಯ ವಿಸ್ತಾರವಾದರೂ ಅದರ ಇತಿಹಾಸ ಸ್ವಭಾವದಿಂದ ಬಂದಿರತಕ್ಕದು. ಎಂದರೆ ಭಾರತ ಗ್ರಂಥದ ವಸ್ತು ಮನುಷ್ಯನ ಜೀವನದ ಚಿತ್ರವಲ್ಲ, ಒಂದು ರಾಷ್ಟ್ರದ ಜೀವನದ ಚಿತ್ರ. ಅಯೋಧ್ಯಾಕಾಂಡದಲ್ಲಿ ನಮಗೆ ದೊರೆಯುವ ಕಥೆ ನಿಜವಾಗಿ ಒಂದು ಸಂಸಾರದ ಹತ್ತು ದಿನದ ಬಾಳುವೆಯ ಕಥೆ. ಈ ಕಾರಣದಿಂದ ಇದಕ್ಕೆ ಒಂದು ಏಕಭಾವವಿದೆ; ಇದರ ಕಥನದಲ್ಲಿ ಒಂದು ಅಚ್ಚುಕಟ್ಟಿದೆ.

### ದಶರಥ

ವಾಲ್ಮೀಕಿ ಮನುಷ್ಯನ ಸ್ವಭಾವವನ್ನು ತಿಳಿದಿರುವ ರೀತಿ ಅದ್ಭುತವಾದದು. ಅದನ್ನು ಅವನು ಚಿತ್ರಿಸಿರುವ ರೀತಿಯೂ ಅದ್ಭುತವೇ. ಅವನ ಕಥೆಯ ಪಾತ್ರಗಳಲ್ಲಿ ಯಾವುದನ್ನು ತೆಗೆದುಕೊಂಡರೂ ಇದು ಸ್ಪಷ್ಟವಾಗಿ ಕಾಣುತ್ತದೆ. ಮಕ್ಕಳಾಗಲಿಲ್ಲವೆಂದು ಒಬ್ಬಳಾದಮೇಲೆ ಒಬ್ಬಳು ಮೂವರು ರಾಣಿಯರನ್ನು ಮಾಡಿಕೊಂಡ ದಶರಥನು ಹಿರಿಯ ರಾಣಿಯಲ್ಲಿ ವಿಶ್ವಾಸ ಗೌರವಗಳಿದ್ದರೂ ಮೂರನೆಯವಳಲ್ಲಿ ವ್ಯಾಮೋಹದಿಂದ

ನಡೆದುಕೊಂಡಂತೆ ಕಥೆಯಲ್ಲಿ ವರ್ಣಿಸಿದೆ. ಮೂರನೆಯ ರಾಣಿಗೆ ಅವನು ವಾಗ್ದಾನಮಾಡಿದ್ದು, ಅದರಿಂದ ತೊಡಕಿಗೆ ಸಿಕ್ಕಿಕೊಂಡದ್ದು; ಆ ತೊಡಕಿನಿಂದ ಬಿಡಿಸಿಕೊಳ್ಳಲು ಬಯ್ಯುವುದು ಒಮ್ಮೆ, ಕೋಪಮಾಡುವುದು ಒಮ್ಮೆ, ಬೇಡುವುದು ಒಮ್ಮೆ, ತನ್ನನ್ನು ತಾನು ಬಯ್ದುಕೊಳ್ಳುವುದು ಒಮ್ಮೆ; ರಾಮನು ಕಾಡಿಗೆ ಹೋಗಲಾಗಿ ನಾನು ಸತ್ತುಹೋಗುತ್ತೇನೆ, ನೀನು ವಿಧವೆಯಾಗಿ ಮಗನೊಂದಿಗೆ ರಾಜ್ಯವಾಳುತ್ತೀಯೆ ಎಂದು ನಿಷ್ಠುರಮಾಡುವುದು ಒಮ್ಮೆ: ಹೀಗೆ ದಶರಥನು ಒಂದು ಮನೋಭಾವ ಆದಮೇಲೆ ಇನ್ನೊಂದರಲ್ಲಿ, ಬೆಂಕಿಯಲ್ಲಿ ಬಿದ್ದ ಹುಳುವಿನಂತೆ ಇತ್ತ ಅತ್ತ ಹೊರಳುತ್ತ, ಹೊರಳಿದಲ್ಲೆಲ್ಲ ಸುಟ್ಟುಕೊಳ್ಳುತ್ತ, ಇನ್ನು ಪ್ರಯೋಜನವಿಲ್ಲವೆಂದು ಸೋತು ನಿಲ್ಲುವುದು ಇಲ್ಲಿ ಸಂಪೂರ್ಣವಾಗಿ ಚಿತ್ರಿತವಾಗಿದೆ. ದಶರಥನ ಸ್ವಭಾವದಂಥ ಸ್ವಭಾವಕ್ಕೆ ಇಂಥ ಸಂದರ್ಭದಲ್ಲಿ ಈ ನಡತೆಯೆಲ್ಲ ಸಹಜ. ದಶರಥನು ಕಿರಿಯ ಹೆಂಡತಿಯ ಮೇಲಣ ಪ್ರೇಮದಿಂದ ಮಗನನ್ನು ಸಮ್ಮತಿಯಿಂದ ಕಾಡಿಗೆ ಅಟ್ಟಿದನೆಂದೂ, ಇವನು ಹೀಗೆ ಮಾಡಿದ್ದು ತಪ್ಪು ಎಂದೂ, ರಾಮಾಯಣದ ಕಥೆಯನ್ನು ವಿಮರ್ಶಿಸುವ ಕೆಲವರು ಆಗಾಗ ಹೇಳುವುದುಂಟು. ರಾಮನು ಕಾಡಿಗೆ ಹೋಗುವುದು ದಶರಥನಿಗೆ ಎಷ್ಟು ಮಾತ್ರವೂ ಸಮ್ಮತವಲ್ಲ. ದಶರಥನು ಮಾತಿಗೆ ಕಟ್ಟು ಬಿದ್ದನು. ಸತ್ಯವಂತನಾದದರಿಂದ ಸ್ಪಷ್ಟವಾಗಿ ಮಾತಿಗೆ ತಪ್ಪುವುದಕ್ಕೆ ಹಿಂತೆಗೆದನು. ಆ ಮಾತು ಇನ್ನು ಯಾರಿಂದಲಾದರೂ ತಪ್ಪುವುದಾಗಿದ್ದರೆ ಅವನು ಸಂತೋಷಪಡುತಿದ್ದನು. ಕೈಕಯಿಯೇ ಅವನನ್ನು ಆ ಕಟ್ಟಿನಿಂದ ತಪ್ಪಿಸಿದ್ದರೆ ಸಂತೋಷವೇ; ಆದರೆ ಅವಳಲ್ಲದೆ ಇನ್ನು ಯಾರು ಬಿಡಿಸಿದ್ದರೂ ಅವನು ಬೇಡವೆನ್ನುತ್ತಿರಲಿಲ್ಲ. ನಾನು ಕಾಡಿಗೆ ಹೋಗುವುದಿಲ್ಲ, ನಾನೇ ಯುವರಾಜನಾಗಬೇಕು, ಎಂದು ರಾಮನು ಹಟಮಾಡಿದ್ದರೆ ದಶರಥನು ಪ್ರಾಯಶಃ ಬಹಳ ಸಂತೋಷಪಡುತಿದ್ದನು. ''ಕಾಮುಕನಾದ ಈ ಮುದುಕನು ಏನನ್ನುತಾನೇ ಮಾಡಲಾರನು? ನೀನು ರಾಜನಾಗು, ನಾನು ಇವನನ್ನು ಬಲಿಹಾಕುತ್ತೇನೆ'' ಎಂದು ಲಕ್ಷ್ಮಣನು ರಾಮನಿಗೆ ಹೇಳಿದಂತೆ ದಶರಥನೇ ಅವನಿಗೆ ಹೇಳಿದನು. ಇದೆಲ್ಲ ಆಗಿ ರಾಮನು ಕಾಡಿಗೆ ಹೊರಡುವುದೆಂದೇ ನಿಶ್ಚಯವಾದಾಗ ರಾಜನು ''ರಾಮ

ನೊಂದಿಗೆ ಸೈನ್ಯ ಹೋಗಲಿ, ಪರಿವಾರ ಹೋಗಲಿ, ಸೀತೆಗೆ ಒಡವೆ ವಸ್ತು ಇರಲಿ'', ಎಂದು ಹೇಳಿದ್ದೂ ಅದೇ ಸ್ವಭಾವದ ಸಹಜ ಪ್ರವೃತ್ತಿಗಳು. ಕಾಡಿಗೆ ಹೊರಟ ಮಗನನ್ನು ನೋಡುತ್ತ ಬೀದಿಯಲ್ಲಿ ನಿಂತದು ಇದೇ ಸ್ವಭಾವದ ಸಹಜವಾದ ಪ್ರವೃತ್ತಿ. ತಂದೆತಾಯಿಗಳು ರಥದ ಹಿಂದೆ ಹೀಗೆ ಬಂದರೆಂದು ವಾಲ್ಮೀಕಿ ವರ್ಣಿಸಿರುವುದನ್ನು ನೋಡಿದಾಗ, ಇದೇನು ರಾಜರಾಣಿಯರು ಹೀಗೆ ಬರುವರೇ ಎಂದು ನಮಗೆ ಎನ್ನಿಸುತ್ತದೆ. ಆದರೆ ಈ ಸಂದರ್ಭದಲ್ಲಿ ರಥದ ಹಿಂದೆ ಓಡಿಬಂದವರು ರಾಜರಾಣಿಯರಲ್ಲ, ತಂದೆತಾಯಿಯರು. ಆಳುವುದಕ್ಕೆ ಆಣತಿ ಮಾಡುವುದಕ್ಕೆ ರಾಜರಾಣಿಯರು ತಮ್ಮ ಪದವಿಯಲ್ಲಿ ಪ್ರತಿಷ್ಠಿತರಾಗಿರುತ್ತಾರೆ. ಜೀವನದ ನೋವು ನಗೆಗೆ ಅವರು ಮನುಷ್ಯರು ಮಾತ್ರ. ಮುಪ್ಪಿನಲ್ಲಿ ಯಜ್ಞಮಾಡಿ ಮಕ್ಕಳನ್ನು ಪಡೆದ ದಶರಥನು ರಥದ ಧೂಳು ಕಂಡಷ್ಟು ಹೊತ್ತೂ ಮಗನನ್ನು ಕಂಡಂತೆ ಭಾವಿಸಿಕೊಂಡದೂ ಸಹಜವೇ. ಇಂಥ ಬಾಳಿನಲ್ಲಿ ಮಕ್ಕಳೆಂದರೆ ಈ ರೀತಿಯ ಮೋಹವಿರುವುದು ಎಲ್ಲ ಕಡೆಯೂ ಕಾಣುತ್ತದೆ. ಮಗನ ಹಿಂದೆ ಹೋದ ದೃಷ್ಟಿ ಹಿಂದಕ್ಕೆ ಬರಲಿಲ್ಲ ಎಂದು ರಾಜನು ಹೇಳುವ ಮಾತೂ ಇದೇ ಮನೋಧರ್ಮದ ಮುಂದಣ ಒಂದು ಹೆಜ್ಜೆ. ನೀನು ನನ್ನ ಮೈಯನ್ನು ಮುಟ್ಟಬೇಡ ಎಂದು ಅವನು ಕೈಕಯಿಯನ್ನು ತೊರೆದುಕೊಂಡದೂ, ಪ್ರಾಣಬಿಡುವುದಕ್ಕೆ ಕೌಸಲ್ಯೆಯ ಮಂದಿರಕ್ಕೆ ಹೋದದೂ, ಅಲ್ಲಿ ಹಿಂದಣ ಕಥೆಯನ್ನು ನೆನೆದುಕೊಂಡು ತನ್ನ ಅವಸ್ಥೆಯು ಆ ಕರ್ಮದ ಫಲವೆಂದು ಸ್ಮರಿಸಿದ್ದೂ, ಈ ಚಿತ್ರವನ್ನು ಅವಿರೋಧವಾಗಿ ಪೂರ್ಣಮಾಡುತ್ತವೆ. ಇದೆಲ್ಲಕ್ಕಿಂತಲೂ ಮೀರಿದ ಸಹಜಭಾವ ದಶರಥನ ಸಾವಿನ ಮಾತಿನದು. ಆ ಹೊತ್ತಿನಲ್ಲಿ ಅವನು ಕಾಡಿಗೆ ಹೋದ ತನ್ನ ಮಗನನ್ನು ನೆನೆದನು; ಕೌಸಲ್ಯೆ ಸುಮಿತ್ರೆಯರನ್ನು ಕುರಿತು ತಾನು ಸಾಯುವೆನೆಂದನು. ಕಣ್ಣುಮುಚ್ಚುವ ಕ್ಷಣದಲ್ಲಿ ಕುಲಪಾಂಸನಿ ಎಂದು ಕೈಕಯಿಯನ್ನು ನೆನೆದನು. ಬಹು ಪ್ರಿಯವಾದ ವಸ್ತುವೂ ತೀರ ಆಗದ ವಸ್ತುವೂ ಸಾಯುವ ನೆನಪಿಗೆ ಬರುತ್ತವೆಂದು ಬಲ್ಲವರು ಹೇಳುತ್ತಾರೆ. ದಶರಥನ ಸಾವಿನಲ್ಲಿ ಇದು ಕಾಣುತ್ತದೆ. ಇಷ್ಟು ಸಂದರ್ಭಗಳಲ್ಲಿ ಇಷ್ಟು ಮಾತಿನಲ್ಲಿ ಒಂದು ಸಲವಾದರೂ ನಮಗೆ ಇದೇಕೆ

ಹೀಗೆ ಈ ಮಾತು ಈ ನಡತೆ ಎಂದು ಸಂದೇಹ ತಟ್ಟುವುದೇ ಇಲ್ಲ. ಎಲ್ಲವೂ ಸೇರಿ ಸುಸಂಬದ್ಧವಾದ ಒಂದು ಕಲ್ಪನೆಯನ್ನು ಕೊಡುತ್ತದೆ. ಆ ಕಲ್ಪನೆ ನಮಗೆ ತುಂಬ ಪರಿಚಯವಾಗಿರುವ ಒಬ್ಬ ವ್ಯಕ್ತಿಯದು ಎಂಬಂತೆ ಇರುತ್ತದೆ. ಆ ವ್ಯಕ್ತಿಯ ಹೆಸರು ದಶರಥ. ಅವನ ವಿಷಯ ಗ್ರಂಥದಲ್ಲಿರುವಷ್ಟಲ್ಲದೆ ಮತ್ತೇನನ್ನಾದರೂ ಕೇಳಿದರೆ ನಾವು ಜ್ಞಾಪಕ ಮಾಡಿಕೊಂಡು ಹೇಳಬಹುದು ಎಂಬ ಭ್ರಮೆಯನ್ನು ಹುಟ್ಟಿಸುವಷ್ಟು ಮಟ್ಟಿಗೆ ನಿಜವೆನಿಸಿ ಸಂಪೂರ್ಣವಾಗಿ ಈ ವ್ಯಕ್ತಿಯ ಪರಿಚಯ ನಮಗೆ ಈ ಕಾಂಡದ ಕತೆಯಿಂದ ಅನುಭವಕ್ಕೆ ಬಂದಿರುತ್ತದೆ.

## ಕೌಸಲ್ಯೆ

ಕೌಸಲ್ಯೆಯ ಚಿತ್ರವೂ ಹೀಗೆಯೇ ಸಂಪೂರ್ಣವಾದದು. ತಾನು ಹಿರಿಯ ರಾಣಿಯಾದರೂ ಕಿರಿಯವಳ ಸಲುವಾಗಿ ತನ್ನ ಪ್ರಾಮುಖ್ಯ ಹೋಯಿತೆಂದು ಇವಳಿಗೆ ಅಸಮಾಧಾನ. ರಾಜನಿಗೆ ತನ್ನಲ್ಲಿ ಗೌರವವಿದೆ ಎಂದು ಕೌಸಲ್ಯೆ ಬಲ್ಲಳು. ಆದರೆ ಇದಿಷ್ಟರಿಂದ ಹೆಂಗಸಿಗೆ ತೃಪ್ತಿಯಾಗುವುದಿಲ್ಲ. ಅವಳಿಗೆ ಅವನ ಪ್ರೇಮವೂ ಬೇಕಾಗಿತ್ತು. ಆದರೆ ಅವನ ಸ್ವಭಾವದಲ್ಲಿ ಇದ್ದ ಆ ವಯಸ್ಸಿನ ಪ್ರೇಮ ಕಿರಿಯ ಹೆಂಡತಿಯಲ್ಲಿ ನೆಲೆಸಿತ್ತು. ಇದರಿಂದ ಕೌಸಲ್ಯೆಯ ಅಧಿಕಾರ ಕೈಕಯಿಯ ಅಧಿಕಾರದಂತೆ ಧಾರಾಳವಾಗಿರುವುದಕ್ಕೆ ಅವಕಾಶ ತಪ್ಪಿತ್ತು. ಅವಳನ್ನು ಸೇವಕರು ಜಿಪುಣೆಯೆಂದು ಹೇಳುತ್ತಿದ್ದರೆಂದು ಕಾಣುತ್ತದೆ. ಅವಳಿಗೆ, ತನ್ನ ಮಗನು ರಾಜನಾಗಬೇಕು, ಆಗ್ಗೆ ತಾನು ಕೈಮೇಲಾಗಿ ಬಾಳಬಹುದು, ಎಂದು ಆಸೆ. ಭರತನಿಗೆ ರಾಜ್ಯವಾಗಬೇಕೆಂದು ಪ್ರೇಮದ ರಾಣಿ ಕೈಕಯಿ ಕೇಳುವಳೋ ಎಂದು ಕೌಸಲ್ಯೆಗೆ ಭಯವಿತ್ತೆಂದು ಕಾಣುತ್ತದೆ. ತಾನು ಯುವರಾಜನಾಗುವೆನೆಂದು ರಾಮಚಂದ್ರನು ಬಂದು ತಾಯಿಗೆ ಹೇಳಿದಾಗ ಇವಳು ಹೇಳಿದ ಮಾತು ಈ ಧ್ವನಿಯನ್ನು ಕೊಡುತ್ತದೆ. ಇಂಥ ಸಂದರ್ಭದಲ್ಲಿ ಇವಳಿಗೆ ಒತ್ತಾಸೆಯಾಗಿ ಸುಮಿತ್ರಾದೇವಿ ಇರುತ್ತಿದ್ದಳು. ರಾಮನಿಗೆ ಯೌವರಾಜ್ಯಾಭಿಷೇಚನ ಆಗುವುದೆಂದು ತಿಳಿದಾಗ ಕೌಸಲ್ಯಾದೇವಿ ದಶರಥನನ್ನು ಪ್ರಶಂಸಿಸಿದಳು; ಮಗನ ಕಲ್ಯಾಣಕ್ಕಾಗಿ ಪೂಜೆಪುರಸ್ಕಾರಗಳಿಗೆ ಆರಂಭಿಸಿದಳು. ಆದರೆ ಇವಳ ಈ ಉದ್ಯಮ ಬಹು ಬೇಗನೆ

ಕೊನೆಗಂಡಿತು. ಸಂತೋಷದ ಸುದ್ದಿ ಬಂದಾಗ ಆನಂದದಿಂದ ಉಬ್ಬಿದಂತೆ ಕೆಟ್ಟ ಸುದ್ದಿ ಬಂದಾಗ ಕೌಸಲ್ಯಾದೇವಿ ದುಃಖದಿಂದ ಕುಸಿದುಹೋದಳು. ಆಗ ಆವಳು ಹೇಳಿದ ಮಾತು ಅಂಥ ಸಂದರ್ಭದಲ್ಲಿ ಯಾವ ತಾಯಾದರೂ ಹೇಳಬಹುದಾದ ಮಾತು. ತಾನು ಮಗನನ್ನು ಹೆತ್ತದ್ದು ಇದಕ್ಕಾಗಿಯೆ? ಮಕ್ಕಳಿಲ್ಲದವರಿಗೆ ಮಕ್ಕಳಿಲ್ಲವೆಂಬುದು ಒಂದೇ ಚಿಂತೆ. ಆದರೆ ಅವರಿಗೆ ಇಂಥ ದುಃಖದ ಭಯವಿಲ್ಲ. ಮಗನು ವನವಾಸ ಹೋಗಬೇಕೆಂಬ ಸುದ್ದಿ ತಿಳಿದರೂ ತಾನು ಸಾಯದಿರುವುದು ತನ್ನ ಎದೆ ಬಿರಿಯದೆ ಇರುವುದು ಅವಳಿಗೆ ಆಶ್ಚರ್ಯ. ಕೊನೆಗೆ ತನ್ನನ್ನು ಜೊತೆಗೆ ಕರೆದುಕೊಂಡುಹೋಗೆಂದು ಅವಳು ಕೇಳುವಳು. ಅವನು ಬೇಗ ಬರುವೆನೆಂದು, ರಾಜನನ್ನು ನೋಡಿಕೊಳ್ಳುವುದಕ್ಕೆ ಒಬ್ಬರಿರಬೇಕೆಂದು, ಪತಿಯನ್ನು ಬಿಟ್ಟು ಮಗನೊಡನೆ ವನಕ್ಕೆ ಹೋಗುವುದು ಧರ್ಮವಲ್ಲವೆಂದು, ದಶರಥನು ತಮ್ಮೆಲ್ಲರಿಗೆ ಪ್ರಭುವಾದವನು ಜೀವಂತನಾಗಿರುವಾಗ ಹಿರಿಯ ರಾಣಿ ವಿಧವೆಯಂತೆ ಅರಣ್ಯಕ್ಕೆ ಹೋಗುವುದು ಸರಿಯಾದೀತೇ ಎಂದು ಹೇಳಿ ಅವಳನ್ನು ನಿಲ್ಲಿಸಬೇಕಾಯಿತು. ತಂದೆ ಮಗನನ್ನು ಕಾಡಿಗೆ ಹೋಗೆಂದು ಹೇಳಿದ್ದಕ್ಕಿಂತ ಹೆಚ್ಚಾಗಿ, ಮಗನಾದವನು ತಂದೆಯ ಮಾತನ್ನು ನಡೆಸಬೇಕೆಂಬ ಕಾರಣದಿಂದ ರಾಮಚಂದ್ರನು ಅರಣ್ಯಕ್ಕೆ ಹೊರಟಿದ್ದನೆನ್ನುವುದನ್ನು ಕೌಸಲ್ಯೆ ಗ್ರಹಿಸಲಾರದೆಹೋದಳು. ತನ್ನಂತೆಯೇ ರಾಮನ ನಿಲುವನ್ನು ಸರಿಯಾಗಿ ಗ್ರಹಿಸಲಾರದೆ ಲಕ್ಷ್ಮಣನು ತಂದೆಯನ್ನು ನಿಗ್ರಹಿಸಿ ಅಣ್ಣನಿಗೆ ಅಭಿಷೇಚನ ನಡೆಸುವುದಾಗಿ ಹೇಳಿದಾಗ ಕೌಸಲ್ಯಾದೇವಿ ಇದು ಆದರೂ ಸಂತೋಷವೇ ಎಂದು ಯೋಚಿಸಿದಳು; ತಮ್ಮನ ಮಾತನ್ನು ಕುರಿತು ಯೋಚಿಸು ಎಂದು ಮಗನಿಗೆ ಹೇಳಿದಳು. ಇದು ಯಾವುದಕ್ಕೂ ಮನಸ್ಸನ್ನು ಕೊಡದೆ ರಾಮನು ವನವಾಸಕ್ಕೆ ಹೊರಟಾಗ ಕೌಸಲ್ಯಾದೇವಿ ಮನಸಾರ ಅವನಿಗೆ ಸ್ವಸ್ತ್ಯಯವನ್ನು ರಚಿಸಿದಳು. ಅದರ ರೀತಿಯಾದರೂ ವೃದ್ಧಮಾತೆಯ ಸ್ವಭಾವಕ್ಕೆ ತಕ್ಕಂತೆ ಗಂಭೀರವಾದದು: ಸಹಸ್ರಾಕ್ಷನು ವೃತ್ರನ ವಧೆಗಾಗಿ ಹೊರಟಾಗ ಅವನಿಗೆ ಅವನ ತಾಯಿ ಯಾವ ಮಂಗಳವನ್ನು ಮಾಡಿದಳೋ, ಇನ್ನಿಂಥ ನಾಲ್ಕು ಘನವಾದ ಸಂದರ್ಭದಲ್ಲಿ ಧೀರರಾದ ಪುತ್ರರಿಗೆ

ತಾಯಿಯರು ಯಾವುದನ್ನು ಮಾಡಿದರೋ, ಅದೇ ಮಂಗಳ ರಾಮ ಚಂದ್ರನಿಗೆ ಆಗಲಿ ಎಂದು ಅವಳು ಹರಸಿದಳು. ರಾಮನು ಹೊರಡುವ ವೇಳೆಯಲ್ಲಿ ಪತಿಯ ಜೊತೆಯಲ್ಲಿದ್ದು ಕೌಸಲ್ಯಾದೇವಿ ಅವನ ದುಃಖ ಎಷ್ಟೆನ್ನುವುದನ್ನು ನೋಡಿದಳು; ಅವನೊಂದಿಗೆ ತಾನೂ ರಥದ ಹಿಂದೆ ಓಡಿದಳು; ಅವನು ಕೈಕಯಿಯನ್ನು ಗದರಿ ತನ್ನ ಅರಮನೆಗೆ ಬರಲು ಅವನನ್ನು ನೋಡಿಕೊಂಡಳು. ಆದರೂ ಅವಳ ಮನಸ್ಸಿನಲ್ಲಿ ರಾಜನು ತನ್ನ ಮಗನನ್ನು ಕಾಡಿಗೆ ಅಟ್ಟಿದನೆಂದು ಕ್ರೋಧ ಇದ್ದೇ ಇತ್ತು. ಕೈಕಯಿಗಾಗಿ ಇದನ್ನು ಮಾಡಿದ್ದನೆಂಬ ಕಾರಣದಿಂದ ಆ ಕ್ರೋಧ ಮತ್ತೆ ಮತ್ತೆ ಜ್ವಲಿಸುತ್ತಿತ್ತು. ಅದನ್ನು ತೀರಿಸಿಕೊಳ್ಳುವುದು ಈ ಹೆಣ್ಣಿನ ಸ್ವಭಾವಕ್ಕೆ ತೀರ ಅವಶ್ಯಕವಾದ ಕರ್ಮವಾಗಿತ್ತು. ಅದರಿಂದ ಅವಳು ತನ್ನ ದುಃಖವನ್ನು ರಾಜನಿಗೆ ಸುಮ್ಮನೆ ಹೇಳಿಕೊಂಡು ಅವನ ದುಃಖ ವನ್ನು ಹೆಚ್ಚಿಸಿದಳು. ಈ ಮಾತಿನ ಬಹು ಭಾಗದಲ್ಲಿ ರಾಜನ ದುಃಖ ತನ್ನ ದುಃಖಕ್ಕೆ ಕಡಮೆ ಅಲ್ಲವೆಂದು ಅವಳಿಗೆ ತೋರಲಿಲ್ಲವೆನ್ನುವುದು ಕಾಣುತ್ತದೆ. ಸುಮಂತ್ರನು ಹಿಂತಿರುಗಿ ಬಂದಾಗ ರಾಜನು ಅವನನ್ನು ಮಾತನಾಡಿಸಲು ಉಸುರಿಲ್ಲದೆ ಇರಲಾಗಿ ಕೌಸಲ್ಯಾದೇವಿ ರಾಜನಿಗೆ "ಸುಮಂತ್ರನನ್ನು ಮಾತನಾಡಿಸು, ಹೆದರಬೇಡ, ಕೈಕಯಿ ಇಲ್ಲಿ ಇಲ್ಲ" ಎಂದು ಚುಚ್ಚು ಮಾತನ್ನು ಹೇಳಿದಳು. ಕಥೆಯ ಮುಖ್ಯ ಭಾಗ ಅಲ್ಲದೆ ಸಣ್ಣದಾದ ಇಂಥ ವಿಷಯಗಳಲ್ಲಿ ಕೂಡ ವಾಲ್ಮೀಕಿಯ ಸ್ವಭಾವಜ್ಞತೆ ಎಷ್ಟು ಸಮಗ್ರವಾದದು ಎಂದು ತಿಳಿಯುತ್ತದೆ. ಇಲ್ಲಿ ಕವಿತೆಯ ಸಮಗ್ರತೆ ಪ್ರಕೃತಿಯ ಸಮಗ್ರತೆಗೆ ಸಾಟಿಯಾಗುತ್ತದೆ. ತಾನು ನಿಷ್ಠುರವಾಗಿ ಮಾತನಾಡಿದಾಗ ದಶರಥನು ಕೈಮುಗಿದು ಕ್ಷಮೆ ಬೇಡಲು ಕೌಸಲ್ಯೆ ಅವನಿಗಾಗಿ ಕನಿಕರದಿಂದ ಕರಗಿದಳು; ತಪ್ಪು ಹುಡುಕುವ ದೃಷ್ಟಿಯನ್ನು ಬಿಟ್ಟು ಕಷ್ಟ ಹೇಳಿಕೊಳ್ಳುವ ನಿಲುವಿನಿಂದ ಅವನನ್ನು ಮಾತನಾಡಿಸಿದಳು. ಕೊನೆಗಾದರೂ ಅವನ ಸಾವಿನ ಹೊತ್ತಿ ನಲ್ಲಿ ಅವನ ಮಾತನ್ನು ಕೇಳುತ್ತ ಸಮಾಧಾನವನ್ನು ತೋರುತ್ತ ಹಿರಿಯ ರಾಣಿಯ ಹಿರಿಯತನದಿಂದ ಅವನ ಕಣ್ಣನ್ನು ಮುಚ್ಚಿದಳು. ರಾಮನ ತಾಯಿ ಎಲ್ಲ ತಾಯಂತೆ ಹೆಣ್ಣು; ಆದರೆ ರಾಮನನ್ನು ಹೆತ್ತ ಹೆಣ್ಣು.

ರಾಮನಲ್ಲಿ ರೂಪುಗೊಂಡ ಹಿರಿಮೆ ಅವಳಲ್ಲಿ ಇದ್ದ ಹಿರಿಮೆಯಿಂದ ಬಂದದು. ಭರತನನ್ನು ಮಾತನಾಡಿಸಿದ ರೀತಿಯಲ್ಲಿ, ಅವನನ್ನು ಒಪ್ಪಿಕೊಂಡ ರೀತಿಯಲ್ಲಿ, ಆಮೇಲೆ ಒಂದುಸಲವಾದರೂ ಕೈಕಯಿಯನ್ನು ದೂರದೆ ರಾಮನನ್ನು ಹಿಂದಕ್ಕೆ ಕರೆತರುವುದಕ್ಕೆ ಅವನೊಂದಿಗೆ ಸಹಕರಿಸಿದ ರೀತಿಯಲ್ಲಿ, ಕೌಸಲ್ಯೆಯ ಇದೇ ಹಿರಿಮೆ ಸ್ಪಷ್ಟವಾಗುತ್ತದೆ. ದಶರಥನಂತೆ ಕೌಸಲ್ಯೆ ರಾಮಾಯಣದಲ್ಲಿ ಸಂಪೂರ್ಣವಾಗಿ ರೂಪುಗೊಂಡಿದ್ದಾಳೆ.

### ಕೈಕಯಿ

ಕೈಕಯಿಯೂ ಹೀಗೆಯೇ ನಮಗೆ ನಿಜವಾದ ವ್ಯಕ್ತಿ. ರಾಜನ ಪ್ರೇಮದ ಅರಸಿ ಇವಳು ಹೆಮ್ಮೆವಂತಳೆಂದು ಎಲ್ಲರೂ ಬಲ್ಲರು. ಇದರಿಂದ ಇವಳು ಪ್ರಸಿದ್ಧಳಾಗಿದ್ದಳೆಂದು ಕತೆಯಲ್ಲಿ ಸೂಚನೆ ಹರಹಿದೆ. ಅವಳ ಮಗನಾದ ಭರತನೇ ಅವಳನ್ನು ಚಂಡಿ ಎಂದೂ ಅಭಿಮಾನಿನಿ ಎಂದೂ ಹೇಳುತ್ತಾನೆ. ಪ್ರಾಯಶಃ ಅವಳ ತಪ್ಪನ್ನು ನೋಡದೆ ಅಥವಾ ನೋಡಿದರೂ ನೋಡಿದೆನೆಂದು ತೋರಿಸದೆ ಇದ್ದವನು ರಾಮನು ಒಬ್ಬನೆಂದೇ ಕಾಣುತ್ತದೆ. ಅವನು ಹೀಗೆ ನಡೆದುಕೊಂಡದರಿಂದಲೇ ಇರಬೇಕು ಕೈಕಯಿಗೆ ಅವನಲ್ಲಿ ಬಹಳ ವಾತ್ಸಲ್ಯ. ಅವಳಿಗೆ ರಾಮನಿಗಿಂತ ಭರತನ ಮೇಲೆ ಹೆಚ್ಚಿನ ಪ್ರೇಮವಿರಲಿಲ್ಲ. ರಾಮನಿಗೆ ಪಟ್ಟಾಭಿಷೇಕವಾಗುವುದೆಂದಾಗ ಅವಳು ಬಹಳ ಸಂತೋಷಪಟ್ಟಳು. ಅವನು ತನ್ನನ್ನು ಚೆನ್ನಾಗಿ ನೋಡಿಕೊಳ್ಳುವನೆಂದೂ ಭರತನನ್ನು ತಂದೆ ಮಗನನ್ನು ರಕ್ಷಿಸುವಂತೆ ರಕ್ಷಿಸುವನೆಂದೂ ಅವಳಿಗೆ ನಿಶ್ಚಯವಾದ ನಂಬಿಕೆ. ಆದರೂ ಅವಳು ರಾಮನನ್ನು ಕಾಡಿಗೆ ಅಟ್ಟಿಸಿದಳು. ಇದಕ್ಕೆ ಕಾರಣ ಕೌಸಲ್ಯೆಯನ್ನು ಕುರಿತ ಮಾತ್ಸರ್ಯ. ತಾನು ದೊಡ್ಡ ರಾಣಿ, ಇವಳದೇನು ಹೆಮ್ಮೆ, ಎಂದು ಕೌಸಲ್ಯೆ ಕೈಕಯಿಯ ವಿಷಯದಲ್ಲಿ ತೋರಿದ್ದ ಎಲ್ಲ ಅನಾದರದ ಶಿಕ್ಷೆ ಅವಳಿಗೆ ರಾಮನ ಅನಿಷ್ಟದ ಮೂಲಕ ಮುಟ್ಟಿತು. ಹೆತ್ತವರ ತಪ್ಪಿಗೆ ಮಕ್ಕಳು ಕಷ್ಟಪಡುವುದು, ಈ ರೀತಿಯಲ್ಲಿ ಹಿರಿಯರ ಸಾಲವನ್ನು ಕಿರಿಯರು ಹರಿಸುವುದು, ಪ್ರಕೃತಿಯಲ್ಲಿ ಎಲ್ಲೆಲ್ಲೂ ಕಾಣುತ್ತದೆ. ರಾಮನಿಗೆ ಭರತನು ಕೈಮುಗಿಯಬೇಕಾಗುತ್ತದೆಂದರೆ ಕೈಕಯಿಗೆ ಚಿಂತೆ

ಯಾಗಲಿಲ್ಲ. ತಾನು ಕೌಸಲ್ಯೆಗೆ ತಗ್ಗಿ ನಡೆಯಬೇಕಾಗುತ್ತದೆ ಎಂದಾಗ ಅವಳ ಕೋಪ ಉಕ್ಕಿತು. ಇಷ್ಟು ದಿನ ತಾನು ಪ್ರಮುಖಳಾಗಿದ್ದು ಇನ್ನುಮೇಲೆ ಕೌಸಲ್ಯೆಯ ಕೈ ಮೇಲಾಗುವುದೆಂದರೆ ಅವಳ ಮನಸ್ಸು ಒಪ್ಪಲಿಲ್ಲ. ಕೌಸಲ್ಯೆಗೆ ಈ ಪ್ರಾಮುಖ್ಯ ಬರದಿರಲೆಂದೇ ಅವಳು ರಾಮನಿಗೆ ವನವಾಸವನ್ನು ಏರ್ಪಡಿಸಿದಳು; ರಾಜನನ್ನು ಮಾತಿನಲ್ಲಿ ಸಿಕ್ಕಿಸಿಕೊಂಡು ಆಮೇಲೆ ಅವನು ಏನು ಹೇಳಿದರೂ ಕಿವಿಗೊಡವೆ ತನ್ನ ಇಚ್ಛೆಯನ್ನು ಸಾಧಿಸಿದಳು. ಇದರ ರೀತಿಯೂ ಇದೇ ಸ್ವಭಾವದ ವಿಕಾಸ. ದಶರಥನು ವಿಧವಿಧವಾಗಿ ಬೇಡಿದ್ದಕ್ಕೆ ಇವಳದು "ಕೊಟ್ಟಮಾತಿನಿಂದ ತಪ್ಪಿಸಿಕೊಳ್ಳಲು ನೋಡುತ್ತೀಯಾ? ನೀನು ಕೌಸಲ್ಯೆಯೊಂದಿಗೆ ಸುಖವಾಗಿರಬೇಕೆಂದು ನೋಡುತ್ತಿದ್ದೀಯೆ. ನೀನು ಸತ್ಯವಂತನು. ಆಡಿದ ಮಾತನ್ನು ನಡೆಸು" ಎಂದು ಒಂದೇ ಉತ್ತರ. ಸುಮಂತ್ರನು ಬಹಳ ಮಾತನ್ನು ಆಡಿ ಈ ಹಠವನ್ನು ಬಿಡು ಎಂದು ಹೇಳಿದರೂ ಕೈಕಯಿದೇವಿ ಉತ್ತರ ಹೇಳಲಿಲ್ಲ; ಆ ಮಾತು ಕಿವಿಗೆ ಬಿದ್ದಂತೆ ಅವಳ ಮುಖದಲ್ಲಿ ಚಿಹ್ನೆ ಏನೂ ತೋರಲಿಲ್ಲ. ಸಿದ್ಧಾರ್ಥನೂ ವಸಿಷ್ಠನೂ ಕೋಪಮಾಡಿದಾಗಲೂ ಅವಳು ಉತ್ತರ ಹೇಳಲಿಲ್ಲ. ನೀನು ನನ್ನನ್ನು ಮುಟ್ಟಬೇಡವೆಂದು ರಾಜನು ಅವಳನ್ನು ಕೊಡವಿ ಬಿಡಿಸಿಕೊಂಡಾಗಲೂ ಅವಳು ಸುಮ್ಮನಿದ್ದಳು. ತಾನು ಇವರಿಗೆಲ್ಲ ಅಪ್ರಿಯವನ್ನು ಮಾಡಿದ್ದೇನೆಂದು ಅವಳು ಬಲ್ಲಳು. ಇವರ ಮಾತಿಗೆ ಉತ್ತರ ಏನನ್ನು ಹೇಳುವುದು? ಅವಳಿಗೆ ಇದ್ದದು ಒಂದೇ ಯೋಚನೆ. ರಾಮನು ಕಾಡಿಗೆ ಹೋದದಾಯಿತು; ಇನ್ನು ಭರತನು ಬಂದು ಅಭಿಷಿಕ್ತನಾಗಬೇಕು. ಅರಸನು ತೀರಿಹೋದಾಗ ಕೈಕಯಿ ಬಹಳ ದುಃಖಿಸಲಿಲ್ಲವೆಂದು ಕಾಣುತ್ತದೆ. ಭರತನು ಅಯೋಧ್ಯೆಗೆ ಬಂದನು; ಕೈಕಯಿಯ ದುರದೃಷ್ಟ ಸ್ಪಷ್ಟವಾಯಿತು. ಅವಳು ಬಹು ನಿಷ್ಠುರವನ್ನು ಸಹಿಸಿ ಬಹು ಸಾಹಸವನ್ನು ಮಾಡಿ ಮಗನಿಗೆ ರಾಜ್ಯವನ್ನು ಸಂಪಾದಿಸಿದ್ದಳು. ಇದಕ್ಕಾಗಿ ಮಗನು ತನ್ನನ್ನು ವಂದಿಸುವನೆಂದು ಅವಳು ನಿರೀಕ್ಷಿಸಿದ್ದಳೆಂದು ಕಾಣುತ್ತದೆ. ಅದಕ್ಕೆ ಪ್ರತಿಯಾಗಿ ಅವನಿಂದ ನಿಂದನೆಯನ್ನು ಪಡೆದಳು. ಕಾಡಿಗೆ ಹೋಗೆಂದು ಹೇಳಿ ಅವಳು ರಾಮನಿಂದ ಬೈಗಳನ್ನು ಕೇಳಲಿಲ್ಲ; ರಾಜನಾಗೆಂದು ಹೇಳಿ

ಭರತನಿಂದ ಬಯ್ಯಿಸಿಕೊಂಡಳು. ಮೊದಲು ಅವನು ಕೋಪಮಾಡಿದಾಗ ತಾನು ಅವನಿಗೆ ಕೆಡಕು ಏನನ್ನು ಮಾಡಿದೆನೆಂದು ಕೇಳಿದಳು; ರಾಜ್ಯ ಸಿಕ್ಕಿದೆ ಆಳು ಎಂದು ಹೇಳಿದಳು. ಈ ಮಾತಿಗೆ ಅವನು ಒಪ್ಪದೆ ಇರಲು ಅವಳು ಮತ್ತೆ ಮಾತನಾಡಲಿಲ್ಲ. ತನ್ನ ಸಂಧಾನ ಹುಸಿಯಾಗಿ ಹೋಯಿತೆಂದು ತಿಳಿದು ಅದನ್ನು ಅಲ್ಲಿಗೆ ಬಿಟ್ಟಳೆಂದು ಕಾಣುತ್ತದೆ. ಮುಖ್ಯವಾಗಿ ರಾಮಾಯಣದಲ್ಲಿ ಕೈಕಯಿದೇವಿ ಇದರಾಚೆಗೆ ಒಂದು ಮಾತನ್ನೂ ಆಡುವುದಿಲ್ಲ. ಅವಳ ವಿಷಯವನ್ನು ಒಬ್ಬಿಬ್ಬರು ಮಾತನಾಡುತ್ತಾರೆ. ಭರತನೂ ಲಕ್ಷ್ಮಣನೂ ಅವಳನ್ನು ದೂಷಿಸುವರು. ರಾಮನೂ ಸೀತೆಯೂ ಅತ್ಯಂತ ದುಃಖದ ಸಮಯದಲ್ಲಿ ಕೈಕಯಿದೇವಿಯ ಇಷ್ಟಾರ್ಥ ಸಂದಿತು ಎಂದುಕೊಳ್ಳುವರು; ಆದರೆ ಸಾಮಾನ್ಯವಾಗಿ ಅವರಿಬ್ಬರಿಗೂ ಅವಳ ವಿಷಯದಲ್ಲಿ ಕ್ಷಮೆಯೇ ಇದ್ದಿತೆಂದು ಕಾವ್ಯದಿಂದ ಕಾಣುತ್ತದೆ. ಲಕ್ಷ್ಮಣನು ಅವಳನ್ನು ನಿಂದಿಸಿ ನುಡಿದಾಗ ರಾಮನು ಆ ಮಾತನ್ನು ಅಲ್ಲಿಗೆ ಬಿಡು ಎಂದು ತಡೆಯುವನು. ಭರತನು ತಾಯನ್ನು ದೂಷಿಸಿ ಒದರಿದಾಗಲೂ ರಾಮನು ಅವನಿಗೆ ತಾಯನ್ನು ಬಯ್ಯುವುದು ಹುಡುಗತನ ಬಿಡು ಎನ್ನುವನು. ಅವನನ್ನು ಮನೆಗೆ ಕೊಟ್ಟು ಕಳುಹಿಸಿದಾಗ ತಾಯನ್ನು ಸರಿಯಾಗಿ ನೋಡಿಕೊಳ್ಳಬೇಕೆಂದು ತನ್ನ ಮತ್ತು ಸೀತೆಯ ಆಣೆಯಿಟ್ಟು ಕಳುಹಿಸಿದನು. ಇದು ರಾಮನ ಗುಣ ಮಾತ್ರವೆಂದು ನಾವು ತಿಳಿದರೆ ಸರಿಯಾಗಲಾರದು. ರಾಮನ ಕ್ಷಮಾಗುಣಕ್ಕೆ ಸಹಾಯವಾಗಿ ಆ ಮಲತಾಯ ಪ್ರೇಮದ ನೆನವೂ ಇತ್ತು. ಕೈಕಯಿ ತನ್ನನ್ನು ಕಾಡಿಗೆ ಅಟ್ಟಿದ ಕ್ರೌರ್ಯ ರಾಮನಿಗೆ ಕಂಡದು ಇತ್ತಣ ಮಾತು. ಅವಳು ತನ್ನನ್ನು ಹೆತ್ತ ತಾಯಂತೆ ಪ್ರೀತಿಯಿಂದ ನೋಡಿದ್ದದು ಅವನಿಗೆ ಇಪ್ಪತ್ತೈದು ವರುಷದ ಅನುಭವ. ಇಪ್ಪತ್ತೈದು ವರುಷಕಾಲ ತನ್ನನ್ನು ಪ್ರೇಮದಿಂದ ಕಂಡ ಮಲತಾಯಿ ರಾಮನಿಗೆ ತಾಯಂತೆ ಆಗಿದ್ದಳು. ಒಂದು ಸಂದರ್ಭದಲ್ಲಿ ಕ್ರೌರ್ಯವನ್ನು ತೋರಿದವಳು ಮತ್ತೆ ತಾಯ ನೆಲೆಗೆ ಬಂದಳೆಂದು ಕಾಣುತ್ತದೆ. ರಾಮನು ಕಾಡಿಗೆ ಹೋದನು. ದಶರಥನು ಸ್ವರ್ಗಸ್ಥನಾದನು. ಇದೆರಡನ್ನೂ ಅವಳು ತಡೆದುಕೊಂಡದ್ದು ಮಗನು ದೊರೆಯಾಗುವನೆಂಬ ಕಾರಣದಿಂದ. ಇದು ಯಾವಾಗ

ತಪ್ಪಿತೋ ಆಗ ಅವಳಿಗೂ ರಾಮನು ಹಿಂದಕ್ಕೆ ಬಂದರೆ ಚೆನ್ನಾದೀತೆಂದು ತೋರಿರಬೇಕು. ಅದರಿಂದಲೇ ಇರಬೇಕು, ಈ ತಾಯಿ, ಭರತನು ರಾಮನನ್ನು ಹಿಂದಕ್ಕೆ ಕರೆತರಲು ಹೊರಟಾಗ ಅವನ ಜೊತೆಗೆ ಹೋದಳು. ಭರತನ ಯಾತ್ರೆ ಅವಳಿಗೆ ಇಷ್ಟವಲ್ಲದಿದ್ದರೆ ಅವಳು ಹಿಂದೆ ನಿಲ್ಲಬಹುದಾಗಿತ್ತು. ಉಳಿದವರೆಲ್ಲ ರಾಮನ ವಿಷಯದಲ್ಲಿ ಪ್ರೇಮಿಗಳೆಂದು ಹೆಮ್ಮೆಪಡಬಹುದಾದವರು; ಅವರು ಅವನನ್ನು ನೋಡಲು ಕಾಡಿಗೆ ಹೋದದು ವಿಶೇಷವಲ್ಲ. ಅವನನ್ನು ಕಾಡಿಗೆ ಅಟ್ಟಿದ ಕೈಕಯೀದೇವಿ ಅವರೊಂದಿಗೆ ಹೇಗೆ ಹೋದಳು? ಮುಖ್ಯವಾಗಿ ಅವಳು ಧೀರೆ. ತನಗೆ ಸರಿಯೆಂದು ಕಂಡದನ್ನು ಮಾಡುವಳು. ಜನರು ಏನು ಹೇಳುವರೋ ಎಂಬ ಕಾರಣದಿಂದ ಹಿಂತೆಗೆಯುವವಳಲ್ಲ. ರಾಮನನ್ನು ಕಾಡಿಗೆ ಅಟ್ಟಿದ ಧೈರ್ಯವೇ ಅವಳನ್ನು ಭರತನ ಯಾತ್ರೆಯಲ್ಲಿ ಸೇರಿಸಿ ಕರೆದುಕೊಂಡು ಹೋಯಿತು. ಆದರೆ ರಾಮನು ಕಾಡಿಗೆ ಹೋಗಲಿ ಎಂಬ ಮೊದಲನೆಯ ಆಸೆ ಕೈಗೂಡಿದಷ್ಟು ಸುಲಭವಾಗಿ ಅವನು ಹಿಂದಕ್ಕೆ ಬರಲಿ ಎಂಬ ಎರಡನೆಯ ಆಸೆ ಕೈಗೂಡಲಿಲ್ಲ. ಬೆಟ್ಟದ ಮೇಲಿಂದ ಗುಂಡನ್ನು ಉರುಳಿಸಬಹುದು; ಇದು ಸುಲಭ. ಅದು ಉರುಳಿದಮೇಲೆ ಅದನ್ನು ಹಿಂದಿನ ಸ್ಥಾನದಲ್ಲಿ ಇರಿಸುವುದು ಕಷ್ಟದ ಕೆಲಸ. ಕೈಕಯೀದೇವಿ ಇದನ್ನು ಮನಗಂಡಳೆಂದು ಕಾಣುತ್ತದೆ. ರಾಮಚಂದ್ರನು ವನವಾಸವನ್ನು ಮುಗಿಸಿಕೊಂಡು ಹಿಂದಿರುಗಿದಾಗ ಹೆತ್ತ ತಾಯಿಗೆ ನಮಸ್ಕರಿಸಿದಂತೆ ಕೈಕಯೀದೇವಿಗೂ ನಮಸ್ಕರಿಸಿದನು. ಉಳಿದವರಂತೆ ಆಕೆಗೂ ಅಂದು ಬಹಳ ಆನಂದ ಆಗಿರಬೇಕು. ಕೆಟ್ಟ ಗಳಿಗೆಯಲ್ಲಿ ತಾನು ಬೇಡಿದ ವರದಿಂದ ಸಾಕಾದಷ್ಟು ಕಷ್ಟ ಕೈಗೂಡಿದ್ದಾಯಿತು. ಪತಿ ತೀರಿಹೋದನು; ಅದಕ್ಕೆ ಏನೂ ಮಾಡುವಂತಿಲ್ಲ. ಕಾಡಿಗೆ ಹೋದವರಾದರೂ ಕ್ಷೇಮವಾಗಿ ಬಂದು ಸೇರಿದರಲ್ಲಾ ಎನ್ನುವುದೇ ಅವಳ ಆನಂದಕ್ಕೆ ಸಾಕಾದ ಕಾರಣ. ಅದರ ಜೊತೆಗೆ, ಅನ್ನಾಹಾರಗಳನ್ನು ಬಿಟ್ಟು ಪಡಬಾರದ ಕಷ್ಟಗಳನ್ನು ಪಟ್ಟು ರಾಮನು ಬರುವವರೆಗೆ ಊರ ಹೊರಗೆ ನಿಂತ ತನ್ನ ಮಗನು ಇನ್ನಾದರೂ ಊರ ಒಳಗೆ ಬರುವನು, ಸುಖದಿಂದಿರುವನು, ಎನ್ನುವ ಸಂತೋಷ ಸೇರಿರಬೇಕು. ಕೈಕಯೀದೇವಿ ಸ್ವಾರ್ಥಪರಳು,

ನಿಷ್ಠುರ ಚೇತನಳು, ಆದರೂ ಅವಳು ಪುತ್ರಗರ್ಧಿನಿ. ರಾಮನಲ್ಲಿ ಹಿರಿಯುದಾದ ಗುಣ ಯಾವುದಿತ್ತೋ ಅದರ ಮೂಲ ಕೌಸಲ್ಯೆಯಲ್ಲಿತ್ತು ಎಂದು ಹೇಳಿದಹಾಗೆ ಭರತನ ಹಿರಿಯತನದ ಮೂಲ ಈ ತಾಯಲ್ಲಿತ್ತು ಎಂದು ನಾವು ಒಪ್ಪಿಕೊಳ್ಳಬೇಕು. ಕೈಕಯಿಯ ದೊಡ್ಡ ತಪ್ಪು ಹಗೆಯನ್ನು ಹಗೆದದ್ದು, ಮಗನನ್ನು ಪ್ರೀತಿಸಿದ್ದು. ತಪ್ಪನ್ನು ತಪ್ಪು ಎನ್ನೋಣ; ಆದರೆ ಯಾವ ತಪ್ಪನ್ನೂ ಅತಿದೊಡ್ಡದಾಗಿ ಮಾಡಿ ನಿಂದಿಸುವುದು ಬೇಡ. ಕೈಕಯಿಯನ್ನು ಎಲ್ಲರೂ ಒಂದಲ್ಲದಿದ್ದರೆ ಒಂದುಸಲ ದೂರಿದಾರೆ: ವಾಲ್ಮೀಕಿ ಒಮ್ಮೆಯೂ ದೂರಿಲ್ಲ. ಇವಳ ಸ್ವಭಾವವನ್ನು ವರ್ಣಿಸುವುದರಲ್ಲಿಯೂ ವಾಲ್ಮೀಕಿಯ ಕೌಶಲ್ಯ ಸಮಗ್ರವಾಗಿ ಕಾಣುತ್ತದೆ.

### ಸುಮಿತ್ರೆ

ಎರಡನೆಯ ರಾಣಿ ಸುಮಿತ್ರಾದೇವಿಯ ಚಿತ್ರವೂ ಹೀಗೆಯೇ ಸಮಗ್ರವಾಗಿದೆ. ಇವಳ ಸ್ವಭಾವವನ್ನು ಕುರಿತು ವಾಲ್ಮೀಕಿಯ ಅಭಿಪ್ರಾಯ ಏನಿತ್ತೆಂದು ಈ ಮೊದಲೇ ಸೂಚಿಸಿದೆ. ಜೀವನದಲ್ಲಿ ಕೆಲವರು ತಾವು ಮುಖ್ಯವೆಂದೂ ಇತರರು ತಮ್ಮ ಸುತ್ತ ಇರುವರೆಂದೂ ಕಲಿಸುವ ಸಂದರ್ಭಗಳಲ್ಲಿ ಬೆಳೆಯುತ್ತಾರೆ. ಇನ್ನುಕೆಲವರು, ಇನ್ನೊಬ್ಬರು ಮುಖ್ಯರು ತಾವು ಅವರ ಜೊತೆಯಲ್ಲಿರುವವರು, ಎಂಬ ದೃಷ್ಟಿಯಿಂದ ಬೆಳೆಯುತ್ತಾರೆ. ತಾವು ಮುಖ್ಯ ಎಂದು ಹೊರಟವರೆಲ್ಲ ಬೇಗನೆಯೋ ಸಾವಕಾಶವಾಗಿಯೋ, ಒಂದಲ್ಲದಿದ್ದರೆ ಒಂದು ದಿನ, ತಮಗಿಂತ ದೊಡ್ಡದು ಪ್ರಪಂಚದ ಬಾಳು ಎಂದು ತಿಳಿಯುತ್ತಾರೆ. ಎರಡನೆಯ ಗುಂಪಿಗೆ ಈ ಪಾಠದ ಆವಶ್ಯಕತೆ ಇಲ್ಲ. ಮೊದಲನೆಯ ಗುಂಪಿನ ಬೆಳವಣಿಗೆ ಅದೃಷ್ಟ ಚಕ್ರದಲ್ಲಿ ಮೇಲೆ ಏರುವಿಕೆ; ಆಮೇಲೆ ಬರುವ ಅರಿವು ಆ ಚಕ್ರದ ಇಳಿತ. ತಾವು ಮುಖ್ಯರೆನ್ನದೆ ಹೊರಡುವವರಿಗೆ ಆ ಏತವೂ ಇಲ್ಲ ಈ ಇಳಿತವೂ ಇಲ್ಲ. ಇವರು ಬಾಳಿನಿಂದ ಬಹಳವನ್ನು ಕೇಳುವುದಿಲ್ಲ; ಅದು ಬಹಳ ಕೊಂಚವನ್ನು ಕೊಟ್ಟರೆ ಅವರಿಗೆ ಅತೃಪ್ತಿಯಿಲ್ಲ; ಇವರ ನಿರೀಕ್ಷೆ ಕಡಮೆ ಆದದರಿಂದ ಇವರಿಗೆ ದೊರೆತಷ್ಟಕ್ಕೇ ಸಂತೋಷ. ಸುಮಿತ್ರೆ ಇಂಥ ಸ್ವಭಾವದ ಸ್ತ್ರೀ. ರಾಜನು ಅವಳಿಗೆ ಬಹಳ ವಿಶ್ವಾಸ ತೋರಿಸಲಿಲ್ಲ: ಒಳ್ಳೆಯದಾಯಿತು; ಇತ್ತ ಪಟ್ಟದ ರಾಣಿಯಲ್ಲ ಇತ್ತ ಮೆಚ್ಚಿನ ರಾಣಿಯಲ್ಲ; ಇದಕ್ಕೇನು ಚಿಂತೆ?

ಎರಡನೆಯ ರಾಣಿಯಾಗಿ ಮಧ್ಯವಯಸ್ಸಿನ ರಾಜನನ್ನು ಸೇರಿದವಳು ಎಷ್ಟು ಪ್ರೇಮವನ್ನು ನಿರೀಕ್ಷಿಸಬಹುದು? ರಾಜನಿಗೆ ಸುಮಿತ್ರೆಯಲ್ಲಿ ಸ್ವಲ್ಪ ಸ್ನೇಹವೇನೋ ಇತ್ತು; ಅಷ್ಟೇ ಅವಳಿಗೆ ತೃಪ್ತಿ. ಎರಡು ಮಕ್ಕಳನ್ನು ಹೆತ್ತಳು. ಒಬ್ಬನು ಒಬ್ಬ ಅಣ್ಣನೊಂದಿಗೆ ಇನ್ನೊಬ್ಬನು ಇನ್ನೊಬ್ಬ ಅಣ್ಣನೊಂದಿಗೆ ಸೇರಿಕೊಂಡು ಅವರು ಬೆಳೆದರು. ಅವರ ಕಷ್ಟಸುಖದ ವಿಷಯ ಸುಮಿತ್ರೆ ಯೋಚಿಸಬೇಕಾಗಿರಲಿಲ್ಲ. ರಾಮನಿಗೆ ಆದದು ಲಕ್ಷ್ಮಣನಿಗೆ, ಭರತನಿಗೆ ಆದದು ಶತ್ರುಘ್ನನಿಗೆ. ಕೈಕಯೀದೇವಿ ಅಭಿಮಾನಿಯಾದ ಕಾರಣ ಸುಮಿತ್ರೆ ಕೌಸಲ್ಯೆಯ ಜೊತೆ ಸೇರಿದಳು. ಅಲ್ಲದೆ ರಾಜನು ಕಿರಿಯ ರಾಣಿಯೊಂದಿಗೆ ಇರುತ್ತಿರಲಾಗಿ ಹಿರಿಯ ರಾಣಿಯರು ಸಹಜವಾಗಿ ಒಬ್ಬರಿಗೊಬ್ಬರು ಜೊತೆಯಾದರು. ಇದರಿಂದ ಕೌಸಲ್ಯೆಗೆ ಆದದು ತನಗೆ. ಹೀಗೆ ಸುಮಿತ್ರೆಯ ಜೀವನದ ತತ್ತ್ವ ಆತ್ಮನಿರಾಕರಣವಾಯಿತು. ಭರತನ ಮಾವನ ಮನೆ ಶತ್ರುಘ್ನನಿಗೂ ಮಾವನ ಮನೆಯಾಯಿತು. ರಾಮನಿಗೆ ಬಂದ ವನವಾಸ ಲಕ್ಷ್ಮಣನನ್ನು ಒಳಗೊಂಡಿತು. ಸುಮಿತ್ರೆ ಕೌಸಲ್ಯೆಯ ದುಃಖದಲ್ಲಿ ಭಾಗಿನಿಯಾದಳು. ರಾಮನನ್ನು ಅವನ ತಾಯಿ ವನಕ್ಕೆ ಹೋಗಬೇಡವೆಂದಳು. ಲಕ್ಷ್ಮಣನ ತಾಯಿ ಅವನನ್ನು ಹೋಗಿಬಾರೆಂದು ಕಳುಹಿಸಿಕೊಟ್ಟಳು; "ಸೃಷ್ಟಸ್ತ್ವಂ ವನವಾಸಾಯ" ಎಂದಳು. ರಾಮನು ಅರಣ್ಯಕ್ಕೆ ಹೋಗುವುದಾದರೆ ಲಕ್ಷ್ಮಣನೂ ಅವನ ಜೊತೆಗೆ ಹೋಗಬೇಕು; ಅವನು ವನವಾಸಕ್ಕಾಗಿ ಹುಟ್ಟಿದಂತೆಯೇ ಲೆಕ್ಕ. ಕೌಸಲ್ಯೆ ಮಗನ ವಿಯೋಗದಿಂದ ದುಃಖಿಸುವಾಗ ಸುಮಿತ್ರೆ ಅವಳಿಗೆ ಧೈರ್ಯ ಹೇಳುತ್ತಾಳೆ. ಅವಳ ಸ್ವಭಾವ ಎಷ್ಟು ಸ್ನೇಹಮಯವಾದದೆಂದು ಅವಳ ಆಗಣ ಮಾತುಗಳಿಂದ ತಿಳಿಯುತ್ತದೆ. ರಾಮನು ಎಂಥ ಗುಣಶಾಲಿ, ಎಂಥ ಧೀರ! ಸೂರ್ಯನು ಅವನಿಗೆ ಆಯಾಸವನ್ನುಂಟು ಮಾಡುವುದಿಲ್ಲ; ಗಾಳಿ ಅವನಿಗೆ ವಿರೋಧವಾಗಿರುವುದಿಲ್ಲ; ಚಂದ್ರನು ಅವನನ್ನು ಅಪ್ಪಿಕೊಂಡು ಮುದ್ದಿಸುವನು. ಅವನ ಜೊತೆಗೋ ಲಕ್ಷ್ಮಿಯ ಹಾಗೆ ಸೀತೆ; ಸೇವೆಗೆ ತನ್ನ ಮಗ ಲಕ್ಷ್ಮಣ. ಏನು ಕಡಮೆ ರಾಮನಿಗೆ? ಮೂವರು ಹೆಂಡರಲ್ಲಿ ಮಧ್ಯದವಳಾಗಿ ಪ್ರೀತಿಯಿಲ್ಲದ ಅರಮನೆಯಲ್ಲಿ ಬಾಳಿದ ಬಾಳಿನಿಂದ ಸುಮಿತ್ರೆಗೆ ಒಂದು ವಿಷಯ ಮಂದಟ್ಟಾಗಿತ್ತು.

ಬೇಕಾದ ಜನವಿದ್ದರೆ ಕಾಡೇ ಊರು; ಅಂಥ ಜನವಿಲ್ಲದಿದ್ದರೆ ಊರೇ ಕಾಡು. ಲಕ್ಷ್ಮಣನು ಅಡವಿಯನ್ನೇ ಅಯೋಧ್ಯೆಯೆಂದು ತಿಳಿಯತಕ್ಕದೆಂದು ಸುಮಿತ್ರೆ ಅವನಿಗೆ ಬುದ್ಧಿಹೇಳಿದಳು. ಅವಳು ಆ ಹೊತ್ತಿನಲ್ಲಿ ಅಯೋಧ್ಯೆಯನ್ನೇ ಅಡವಿಯೆಂದು ತಿಳಿದಿದ್ದಳೆಂದು ಕಾಣುತ್ತದೆ. ತನ್ನ ದುಃಖ ಕೌಸಲ್ಯೆಯ ದುಃಖಕ್ಕಿಂತ ಕಡಮೆಯಲ್ಲದಿದ್ದರೂ ಅವಳು ಕೌಸಲ್ಯೆಗೆ ಧೈರ್ಯ ಹೇಳಿದಳು; ಸಮಾಧಾನ ಹೇಳಿದಳು. ಆ ಸಮಾಧಾನ ಧೈರ್ಯದ ಮಾತು ನಿಜವಾದ ಸ್ನೇಹದಿಂದ ಬಂದವಾದ ಕಾರಣ, ಕೌಸಲ್ಯೆಯ ದುಸ್ಸಹವಾದ ದುಃಖವೂ ಅವುಗಳಿಂದ ಸ್ವಲ್ಪ ಕಡಮೆಯಾಯಿತು. ಇವಳ ನಡತೆ ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿರಬೇಕು. ಮೃತ್ಯುಶಯ್ಯೆಯಲ್ಲಿ ಮಲಗಿ ಇವರನ್ನು ನೋಡುತ್ತ ಇವರ ಮಾತನ್ನು ಕೇಳುತ್ತ ಇದ್ದ ದಶರಥನಿಗೆ ತನ್ನ ಎರಡನೆಯ ರಾಣಿಯ ಮನೋಧರ್ಮವನ್ನು ಕಂಡು ಗೌರವಬುದ್ಧಿ ಹುಟ್ಟಿತೆಂದು ಕಾಣುತ್ತದೆ. ಅವನು ಸಾಯುವ ಮೊದಲು ಆಡಿದ ಮಾತಿನಲ್ಲಿ ಕೈಕಯೀದೇವಿಯನ್ನು ಅಮಿತ್ರೆ ಕುಲಪಾಂಸನಿ ಎಂದು ನಿಂದಿಸಿದಂತೆ ಸುಮಿತ್ರೆಯನ್ನು ಹಾ ಸುಮಿತ್ರೇ ತಪಸ್ವಿನಿ ಎಂದನು. ದಶರಥನ ಆ ಮಾತಿನ ಭಾವನೆ ನಿಜವಾದದು. ಸುಮಿತ್ರೆ ಮುಖ್ಯವಾಗಿ ತಪಸ್ವಿನಿ.

ಇಲ್ಲಿ ಇನ್ನುಳಿದ ಜನರ ಸ್ವಭಾವಗಳನ್ನು ನಾವು ಹೀಗೆ ವಿವರವಾಗಿ ಪರೀಕ್ಷಿಸುವುದು ಅನವಶ್ಯಕ. ರಾಮ ಲಕ್ಷ್ಮಣರ ಮತ್ತು ಸೀತಾದೇವಿಯ ಚರಿತ್ರೆ ಇನ್ನುಮುಂದೆ ಬೆಳೆಯಿತು. ಆ ಬೆಳವಣಿಗೆಯನ್ನೂ ಸೂಚಿಸಿ ಆಮೇಲೆ ಅವರ ಸ್ವಭಾವಗಳ ಚಿತ್ರವನ್ನು ವಿವರವಾಗಿ ನೋಡಬಹುದು. ಇಲ್ಲಿ ಮುಖ್ಯವಾದ ಮಾತೆಂದರೆ ಅಯೋಧ್ಯಾಕಾಂಡವು ಕಥನಾರ್ಹವಾದ ವಿಷಯಗಳಿಂದ ತುಂಬಿದೆ ಎನ್ನುವುದು. ಈ ಮೊದಲೇ ಹೇಳಿದಂತೆ ಮಾನವನ ಜೀವನ ಇದಕ್ಕಿಂತ ವಿಸ್ತಾರವಾಗಿ ವಿವರವಾಗಿ ಪ್ರಪಂಚದ ಇನ್ನು ಯಾವ ಕಾವ್ಯದಲ್ಲಿಯೂ ಚಿತ್ರಿತವಾಗಿಲ್ಲ. ದಶರಥನ ಮತ್ತು ಅವನ ರಾಣಿಯರ ಚಿತ್ರಪಟಗಳ ನಿರೀಕ್ಷೆಯಿಂದಲೇ ಇದು ನಮ್ಮ ಮನಸ್ಸಿಗೆ ಸ್ಪಷ್ಟವಾಗುತ್ತದೆ.

## ೭
## ಮುಂದಣ ಜೀವನ ಚಿತ್ರಗಳು

ಅಯೋಧ್ಯಾಕಾಂಡದ ವಿಸ್ತಾರವಾದ ಶಯ್ಯೆಯಲ್ಲಿ ಎಲ್ಲೆಲ್ಲಿಯೂ ಕಾಣುವ ಜೀವನವಿಜ್ಞಾನ ಮುಂದಣ ಕಾಂಡಗಳಲ್ಲಿ ಆಗಾಗ ಕಾಣುತ್ತಲೇ ಇರುತ್ತದೆ. ನಾವು ಅವುಗಳಲ್ಲಿ ಎಲ್ಲವನ್ನೂ ಎತ್ತಿನೋಡುವುದು ಸಾಧ್ಯವಲ್ಲ; ಅದು ಅವಶ್ಯಕವೂ ಅಲ್ಲ. ಅವುಗಳಲ್ಲಿ ಬಹು ಮುಖ್ಯವಾದ ನಾಲ್ಕು ಅಥವಾ ಐದು ಸಂದರ್ಭಗಳನ್ನು ನೋಡಿದರೆ ಸಾಕು. ಅಲ್ಲಿ ವಾಲ್ಮೀಕಿಯ ಕಾವ್ಯ ಮತ್ತೆ ಮುಗಿಲನ್ನು ಮುಟ್ಟಿದೆ. ಈ ಕಾರಣದಿಂದ ಅವುಗಳನ್ನು ನೋಡುವುದು ಸಾಕು ಎನ್ನುವುದು ಹೇಗೋ ಹಾಗೆ ಅವಶ್ಯಕವೂ ಹೌದು.

### ಸೀತೆಯ ಅಪಹರಣ

ಅವುಗಳಲ್ಲಿ ಮೊದಲನೆಯದು, ಜಿಂಕೆಯ ಹಿಂದೆ ಹೋದ ರಾಮಚಂದ್ರನು ಕೂಗಿದಂತೆ ಕೇಳಿಬಂದ ಆರ್ತಸ್ವರದಿಂದ ಹೆದರಿ ಸೀತಾದೇವಿ ಲಕ್ಷ್ಮಣನನ್ನು ಅವನ ಸಹಾಯಕ್ಕೆ ಕಳುಹಿಸಿದ ಕಥೆ. ವನವಾಸದಲ್ಲಿ ಮೊದಲು ಒಂದು ವರ್ಷದ ಕಾಲ ಸೀತಾರಾಮ ಲಕ್ಷ್ಮಣರು ಚಿತ್ರಕೂಟವನ್ನು ಸೇರಿದ್ದರಲ್ಲಿ ಭರತನು ಬಂದು ಹೋಗುವುದರಲ್ಲಿ ಮುಗಿದಿರಬೇಕು. ಅಲ್ಲಿಂದ ಹೊರಟು ಅರಣ್ಯದಲ್ಲಿ ಸುತ್ತುತ್ತ ಇವರು ಹತ್ತು ವರ್ಷದಷ್ಟು ಕಾಲವನ್ನು ಕಳೆದರು. ಇದಾದಮೇಲೆ ಇವರು ಜನಸ್ಥಾನದಲ್ಲಿ ಇರುವಾಗ ಶೂರ್ಪನಖಿ ಇವರ ಬಳಿಗೆ ಬಂದಳು. ರಾಮನೋ ತಪ್ಪಿದರೆ ಲಕ್ಷ್ಮಣನೋ ತನ್ನನ್ನು ಮದುವೆಯಾಗಬೇಕೆಂದು ಬೇಡಿ, ರಾಮನು ತನ್ನನ್ನು ಮದುವೆಯಾಗದಿರುವುದಕ್ಕೆ ಅಡ್ಡಿಯಾಗಿರುವ ಸೀತೆಯನ್ನು ಕೊಲ್ಲುವೆನೆಂದು ಅವಳು ಮೇಲೆಬಿದ್ದು ಬರಲು, ಅಣ್ಣನ ಆಜ್ಞೆಯ ಪ್ರಕಾರ ಲಕ್ಷ್ಮಣನು ಆ ರಾಕ್ಷಸಿಯ ಕಿವಿ ಮೂಗನ್ನು ಕೊಯ್ದು ಕಳುಹಿಸಿದನು. ಅದರಿಂದ ಕೋಪಗೊಂಡು ಖರದೂಷಣ ತ್ರಿಶಿರಸರು ಬಂದು ರಾಮನಮೇಲೆ ಯುದ್ಧಮಾಡಿದರು. ರಾಮನು ಅವರನ್ನು ಕೊಂದನು. ಜನಸ್ಥಾನವು ರಾಕ್ಷಸರ ಹಾವಳಿಯಿಂದ ಮನುಷ್ಯರಿಗೆ ಅಭದ್ರವಾದ ವಾಸಸ್ಥಾನವಾಗಿತ್ತು. ಇದನ್ನು ಸೀತಾರಾಮ ಲಕ್ಷ್ಮಣರು

ಬಲ್ಲರು. ಶೂರ್ಪನಖಿಯು ಸಲುವಾಗಿ ಮತ್ತೆ ಯಾವ ತೊಂದರೆ ಬರಬಹುದೋ ಎಂದು ಇವರಿಗೆ ಭಯವೂ ಇದ್ದಿತೆಂದು ಕಾಣುತ್ತದೆ. ಭಯಕ್ಕೆ ತಕ್ಕಹಾಗೆ ಮಾರೀಚನು ವಿಚಿತ್ರ ಮೃಗರೂಪದಿಂದ ಇವರ ಆಶ್ರಮದ ಬಳಿ ಬಂದನು. ಈ ವೇಷ ಹಾಕಿಕೊಂಡು ಈ ಕೆಲಸದಲ್ಲಿ ತೊಡಗುವುದು ಮಾರೀಚನಿಗೆ ಇಷ್ಟವಿರಲಿಲ್ಲ. ಆದರೆ ಅವನು ಹೊರಟಲ್ಲದೆ ರಾವಣನು ಬಿಡಲಿಲ್ಲ. ಹಿಂದೆಂದೂ ನೋಡದ ನಾನಾ ರತ್ನಮಯವಾದ ಮೃಗವನ್ನು ಕಂಡು ಸೀತಾದೇವಿ ರಾಮಲಕ್ಷ್ಮಣರಿಗೆ ಆಯುಧ ತೆಗೆದು ಕೊಂಡು ಬನ್ನಿ ಎಂದು ಕೂಗಿ ಹೇಳಿದಳು. ಅವರು ಬಂದು ಮೃಗವನ್ನು ನೋಡಿದರು. ಅದರ ವಿಲಕ್ಷಣವಾದ ರೂಪವನ್ನು ನೋಡಿ ಲಕ್ಷ್ಮಣನು ಅದು ನಿಜವಾದ ಮೃಗ ಅಲ್ಲವೆಂದು ಒಡನೆಯೇ ಶಂಕೆಪಟ್ಟನು. ಇಂಥ ಮಾಯೆಗಳಲ್ಲಿ ಬಹಳ ಶಕ್ತನೆಂದು ಮಾರೀಚನು ಪ್ರಸಿದ್ಧನಾಗಿದ್ದನೆಂದು ಕಾಣುತ್ತದೆ. ಲಕ್ಷ್ಮಣನು ಅಣ್ಣನನ್ನು ಕುರಿತು "ಇದು ಮೃಗದ ವೇಷವನ್ನು ಧರಿಸಿರುವ ರಾಕ್ಷಸ ಮಾರೀಚನೆಂದು ನನಗೆ ತೋರುತ್ತದೆ. ಕಾಮರೂಪಿಯಾದ ಅವನಿಂದ ಅನೇಕ ರಾಜರು ನಿಹತರಾದರು. ಗಂಧರ್ವಪುರಸನ್ನಿಭವಾದ ಈ ವಿಚಿತ್ರ ಕಾಂತಿಯ ಮೃಗರೂಪವನ್ನು ಅವನು ಮಾಯೆಯಿಂದ ಮಾಡಿದ್ದಾನೆ. ಹಾಗಲ್ಲದೆ ಈ ರೀತಿ ರತ್ನವಿಚಿತ್ರ ವಾದ ಮೃಗ ಇರುವುದುಂಟೆ" ಎಂದನು. ಸೀತಾದೇವಿ ಈ ಮಾತನ್ನು ಒಪ್ಪಲಿಲ್ಲ. "ಮೃಗ ಬಹಳ ಚೆನ್ನಾಗಿದೆ. ನಮಗೆ ಆಡುವುದಕ್ಕಾಗುತ್ತದೆ. ಇದರ ರೂಪವೇನು! ಇದರ ಸೊಗಸೇನು! ಇದನ್ನು ಜೀವದೊಡನೆ ಹಿಡಿದು ತಂದರೆ ವನವಾಸ ಮುಗಿದಮೇಲೆ ಊರಿಗೆ ಹೋದಾಗ ಇದು ಅಂತಃ ಪುರಕ್ಕೆ ವಿಭೂಷಣವಾಗಿರುತ್ತದೆ. ಭರತನಿಗೆ ಅತ್ತೆಯವರಿಗೆ ನಮಗೆ ಎಲ್ಲ ರಿಗೂ ವಿಸ್ಮಯಕಾರಕವಾಗಿರುತ್ತದೆ. ಅದು ಜೀವದೊಡನೆ ಸಿಕ್ಕದಿದ್ದರೆ ಕೊಂದು ತಂದರೂ ಸರಿಯೆ. ಅದರ ಚರ್ಮ ಬಹಳ ಚೆನ್ನಾಗಿರುತ್ತದೆ" ಎಂದಳು. ರಾಮನಿಗೂ ವಿಸ್ಮಯವಾಯಿತು. ಸೀತೆ ಬೇರೆ ಅವನನ್ನು ಪ್ರೇರಿಸಿದಳು. ಅವನು ಲಕ್ಷ್ಮಣನನ್ನು ಕುರಿತು "ನೋಡು ಲಕ್ಷ್ಮಣ, ಸೀತಾದೇವಿಗೆ ಈ ಮೃಗದಮೇಲೆ ಅಪೇಕ್ಷೆ ಹುಟ್ಟಿದೆ. ರೂಪಶ್ರೇಷ್ಠತೆ ಯಿಂದ ಇದು ಮೃಗವೇ ಅಲ್ಲವೆಂದು ಕಾಣುತ್ತದೆ. ನಂದನ ವನದಲ್ಲಿ

ಚೈತ್ರರಥದಲ್ಲಿ ಇಂತಹ ಮೃಗ ಇರಲಾರದು; ಇನ್ನು ಭೂಮಿಯಲ್ಲಿ ಇರುವುದುಂಟೆ? ಇದರ ಸೊಗಸನ್ನು ನೋಡಿ ಸೀತಾದೇವಿ ಅದನ್ನು ಅಪೇಕ್ಷಿಸುತ್ತಾಳೆ. ಮೃಗವಾದರೆ ಒಳ್ಳೆಯದೇ ಆಯಿತು; ಹಾಗಲ್ಲದೆ ನೀನು ಹೇಳುವಂತೆ ಮಾರೀಚನ ಮಾಯೆಯೇ ಆಗಿದ್ದಲ್ಲಿ ಆಗಲೂ ಇದನ್ನು ನಾನು ಕೊಲ್ಲಬೇಕು; ಇದು ನನ್ನ ಕರ್ತವ್ಯ. ನೀನು ಇಲ್ಲಿಯೇ ಮೈಥಿಲಿಯನ್ನು ರಕ್ಷಿಸಿಕೊಂಡು ಎಚ್ಚರಿಕೆಯಿಂದಿರು. ನಾನು ಈ ಮೃಗವನ್ನು ಕೊಂದೋ ಹಿಡಿದೋ ತರುತ್ತೇನೆ. ನೀನು ಅಜಾಗ್ರತನಾಗದೆ ಸೀತಾದೇವಿಯನ್ನು ನೋಡಿಕೊಳ್ಳುತ್ತ ಇರು'' ಎಂದು ಹೊರಟನು. ಮಾರೀಚನು ಬಹುದೂರ ಓಡಿ ರಾಮನನ್ನು ಆಶ್ರಮದಿಂದ ದೂರ ಸೆಳೆದುಕೊಂಡುಹೋದನು. ರಾಮನು ಇನ್ನೆಷ್ಟು ದೂರ ಈ ಮೃಗವನ್ನು ಅಟ್ಟುವುದು ಎಂದು ಅವನನ್ನು ಬಾಣದಿಂದ ಹೊಡೆದನು. ಮಾರೀಚನು ರಾಮನ ಧ್ವನಿಯಿಂದ ''ಹಾ ಸೀತೆ, ಹಾ ಲಕ್ಷ್ಮಣಾ'' ಎಂದು ಕೂಗಿಕೊಂಡು ಜೀವವನ್ನು ಬಿಟ್ಟನು; ಉಸಿರು ಹೋದಾಗ ತನ್ನ ನಿಜವಾದ ರೂಪವನ್ನು ತಾಳಿದನು. ರಾಮನು ಅದನ್ನು ನೋಡಿ ''ಲಕ್ಷ್ಮಣನು ಹೇಳಿದಂತೆ ಇದು ಮಾರೀಚನ ಮಾಯೆಯೇ ಸರಿ; ಸೀತೇ ಲಕ್ಷ್ಮಣಾ ಎಂದು ಕೂಗಿ ಇವನು ಸತ್ತನಲ್ಲಾ, ಈ ಕೂಗನ್ನು ಕೇಳಿ ಸೀತೆಗೆ ಏನಾಗಬೇಕು? ಲಕ್ಷ್ಮಣನ ಅವಸ್ಥೆ ಏನು?'' ಎಂದು ಚಿಂತಿಸಿ ಆಹಾರಕ್ಕಾಗಿ ಬೇರೆ ಮಾಂಸವನ್ನು ಸಂಪಾದಿಸಿ ಆಶ್ರಮದ ಕಡೆಗೆ ಹೊರಟನು. ಗಂಡನ ಸ್ವರದಂತೆ ಕೇಳಿಸಿದ ಆರ್ತಸ್ವರವನ್ನು ಕೇಳಿ ಸೀತಾದೇವಿ ಲಕ್ಷ್ಮಣನನ್ನು ರಾಮನ ಬಳಿಗೆ ಸಹಾಯಕ್ಕೆ ಹೋಗೆಂದಳು. ''ರಾಮನ ಆರ್ತಶಬ್ದವನ್ನು ಕೇಳಿ ನನಗೆ ಪ್ರಾಣಹೋದಹಾಗಾಗಿದೆ. ನೀನು ಅವನ ಸಹಾಯಕ್ಕೆ ಹೋಗುವುದು ಒಳ್ಳೆಯದು. ಅವನು ರಾಕ್ಷಸರ ಕೈಗೆ ಸಿಕ್ಕಿಬಿದ್ದಿರಬೇಕು. ಅವನ ಸಹಾಯಕ್ಕೆ ಓಡಿಹೋಗು'' ಎಂದಳು. ಅಣ್ಣನ ಆಜ್ಞೆಯನ್ನು ನೆನೆದು ಲಕ್ಷ್ಮಣನು ಅತ್ತಿಗೆಯ ಮಾತಿನಂತೆ ಹೊರಡದೆ ಸುಮ್ಮನಿದ್ದನು. ಸೀತಾದೇವಿಗೆ ಕೋಪ ಬಂದಿತು. ಅವಳು ಲಕ್ಷ್ಮಣನಿಗೆ ''ಲಕ್ಷ್ಮಣಾ, ನೀನು ಅಣ್ಣನಿಗೆ ಮಿತ್ರನಂತೆ ಕಾಣುವ ಶತ್ರುವಾಗಿದ್ದೀಯೆ. ಆದದರಿಂದಲೇ ಇಂಥ ಸಂದರ್ಭದಲ್ಲಿ ಅವನಿಗೆ ನೆರವಾಗದಿರುವೆ. ನೀನು

ನನ್ನ ಸಲುವಾಗಿ ರಾಮನು ಏನಾದರೂ ಆಗಬೇಕೆಂದು ಅಪೇಕ್ಷಿಸುತ್ತೀಯೆ. ಅದರಿಂದಲೇ ಅವನ ಸಹಾಯಕ್ಕೆ ಹೋಗಲಿಲ್ಲ. ಅವನ ಕಷ್ಟ ನಿನಗೆ ಇಷ್ಟವೆಂದು ಕಾಣುತ್ತದೆ. ನಿನಗೆ ಅವನಲ್ಲಿ ಪ್ರೀತಿಯಿಲ್ಲ" ಎಂದು ನಿಷ್ಠುರ ನುಡಿದಳು. ಹೀಗೆ ಭಯದಿಂದ ಅಳುತ್ತಿರುವ ಅತ್ತಿಗೆಯನ್ನು ಕುರಿತು ಲಕ್ಷ್ಮಣನು ಹೀಗೆಂದನು. "ಪನ್ನಗಾಸುರಗಂಧರ್ವ ದೇವ ಮಾನುಷರಾಕ್ಷಸರಲ್ಲಿ ಯಾವನೂ ನಿನ್ನ ಪತಿಯನ್ನು ಸೋಲಿಸಲಾರನು. ರಾಮನೊಡನೆ ಕಾದುವವರು ಯಾರು? ಅವನು ಸಮರದಲ್ಲಿ ಅವಧ್ಯನು. ನೀನು ಹೀಗೆ ಹೇಳಬೇಡ. ರಾಮನಿಲ್ಲದ ವೇಳೆಯಲ್ಲಿ ನಿನ್ನನ್ನು ಇಲ್ಲಿಯೇ ಬಿಟ್ಟುಹೋಗಲು ನನಗೆ ಮನಸ್ಸು ಒಪ್ಪುವುದಿಲ್ಲ. ನಿನ್ನ ಪತಿ ಮೃಗವನ್ನು ಕೊಂದು ಶೀಘ್ರವಾಗಿಯೇ ಬರುತ್ತಾನೆ. ಈಗ ನಮಗೆ ಕೇಳಿಸಿದ್ದು ಅವನ ಸ್ವರವಲ್ಲ. ಅದು ಯಾರೋ ಮೋಸದಿಂದ ಕೂಗಿದ ಸ್ವರ. ಮಹಾತ್ಮನಾದ ನಮ್ಮಣ್ಣನು ನಿನ್ನನ್ನು ನನ್ನ ರಕ್ಷಣೆಯಲ್ಲಿ ಬಿಟ್ಟು ಹೋಗಿದಾನೆ. ನೀನು ನನಗೆ ನ್ಯಾಸಭೂತಳು. ನಿನ್ನನ್ನು ಬಿಟ್ಟುಹೋಗಲು ನನ್ನ ಮನಸ್ಸು ಒಪ್ಪುವುದಿಲ್ಲ. ಖರನನ್ನು ಕೊಂದ ಕಾರಣ ರಾಕ್ಷಸರಿಗೆ ನಮ್ಮಲ್ಲಿ ಹಗೆ. ಅವರು ಅರಣ್ಯದಲ್ಲಿ ಬಹು ವಿಧವಾಗಿ ಕೂಗುತ್ತಿರುತ್ತಾರೆ. ನೀನು ಈ ಕೂಗನ್ನು ಕೇಳಿ ಚಿಂತಿಸಬಾರದು" ಎಂದನು. ಸೀತಾದೇವಿ ಲಕ್ಷ್ಮಣನನ್ನು ನಿಷ್ಠುರವಾಗಿ ದೂರಿದಳು. "ಅನಾರ್ಯ, ಕರುಣೆ ಯಿಲ್ಲದವನೆ, ನೃಶಂಸ, ಕುಲಪಾಂಸನ, ರಾಮನ ಕಷ್ಟ ನಿನಗೆ ಇಷ್ಟವೆಂದೇ ಕಾಣುತ್ತದೆ. ಆದ್ದರಿಂದಲೇ ಹೀಗೆ ಮಾತನಾಡುತ್ತಿದೀಯೆ. ದಾಯಾದಿ ಗಳು ನಿನ್ನಂತೆ ಪ್ರಚ್ಛನ್ನಚಾರಿಗಳಾಗಿ ಕೆಟ್ಟುದನ್ನು ಮಾಡುವುದರಲ್ಲಿ ಏನು ಆಶ್ಚರ್ಯ? ನನ್ನಮೇಲೆ ಆಸೆಯಿಂದಲೋ, ಇಲ್ಲ ಭರತನ ಮಾತಿನಂತೆಯೋ ಅತಿದುಷ್ಟನಾದ ನೀನು ಒಬ್ಬನೇ ಆದ ರಾಮನ ಜೊತೆಗೆ ಒಬ್ಬನೇ ಬಂದಿದೀಯೆ. ಲಕ್ಷ್ಮಣ, ನಿನ್ನ ಅಥವಾ ಭರತನ ಆಸೆ ಸಿದ್ಧಿಸುವುದಿಲ್ಲ. ಇಂದೀವರಶ್ಯಾಮನೂ ಪದ್ಮಪತ್ರ ನಿಭೇಕ್ಷಣನೂ ಆದ ರಾಮನನ್ನು ಪತಿಯಾಗಿ ಪಡೆದು ಬೇರೆಯವರನ್ನು ನಾನು ಅಪೇಕ್ಷಿಸುವೆನೆ? ರಾಮನನ್ನು ಬಿಟ್ಟು ಒಂದು ಕ್ಷಣ ನಾನು ಭೂಮಿಯಲ್ಲಿ ಜೀವಿಸಲಾರೆನು. ನಿನ್ನ ಎದುರಿಗೇ ಜೀವವನ್ನು ಬಿಡುತ್ತೇನೆ" ಎಂದಳು. ಸೀತೆಯ

ಈ ವಿಚಿತ್ರವಾದ ಮಾತಿನಿಂದ ಲಕ್ಷ್ಮಣನ ಬುದ್ಧಿ ಕೆಡಲಿಲ್ಲ. ಸೀತೆ ತಾನು ಬರಿಯ ಹೆಂಗಸೆಂಬಂತೆ ಮಾತನಾಡಿದಳು. ಲಕ್ಷ್ಮಣನು ಜಿತೇಂದ್ರಿಯನು. ಅವನಿಗೆ ಅವಳು ಹೆಂಗಸಲ್ಲ; ಸೀತೆ, ಅತ್ತಿಗೆ, ರಾಮನ ಹೆಂಡತಿ, ಪೂಜೆಯ ದೇವತೆ. ಅವನು ಅವಳಿಗೆ ಕೈಮುಗಿದು ಹೇಳಿದನು: "ನಿನ್ನ ಮಾತಿಗೆ ಪ್ರತಿಹೇಳಲು ನಾನು ಶಕ್ತನಲ್ಲ. ನೀನು ನನಗೆ ಪೂಜ್ಯಳು, ದೇವರು. ಆದರೆ ಇಂಥ ಮಾತು ಹೆಂಗಸರಲ್ಲಿ ಬರುವುದು ಆಶ್ಚರ್ಯವಲ್ಲ. ಲೋಕದಲ್ಲಿ ನಾರಿಯರ ಸ್ವಭಾವ ಹೀಗೆಯೇ ಕಾಣುತ್ತದೆ. ಅವರಿಗೆ ಧರ್ಮವಿಲ್ಲ. ಅವರು ಚಪಲರು; ತೀಕ್ಷ್ಣವಾಗಿ ನುಡಿಯುವರು; ಜಗಳಗಳನ್ನು ಹುಟ್ಟಿಸುವರು. ಕಾಯಿಸಿದ ಬಾಣದಂತೆ ನನ್ನ ಕಿವಿಯನ್ನು ಹೊಕ್ಕ ಈ ಮಾತುಗಳನ್ನು ನಾನು ಸಹಿಸಲಾರೆನು. ಸಾಕ್ಷೀಭೂತರಾದ ವನದೇವತೆಗಳು ಎಲ್ಲರೂ ಸರಿಯಾದ ಮಾತನ್ನು ಹೇಳಿದ ನನಗೆ ಅನ್ಯಾಯದ ನಿಷ್ಠುರದ ಮಾತನ್ನು ನೀನು ಹೇಳಿರುವುದನ್ನು ಕೇಳಿರಲಿ. ಛೆ, ನನ್ನ ವಿಷಯದಲ್ಲಿ ಸಂದೇಹಪಡುವ ನೀನು ಏನಾದರೂ ಆಗು. ರಾಮನು ಎಲ್ಲಿರುವನೋ ಅಲ್ಲಿಗೆ ನಾನು ಹೋಗುತ್ತೇನೆ. ನಿನಗೆ ಒಳ್ಳೆಯದಾಗಲಿ. ಎಲ್ಲ ವನದೇವತೆಗಳೂ ನಿನ್ನನ್ನು ರಕ್ಷಿಸಿಕೊಳ್ಳಲಿ. ನನಗೇನೋ ದುರ್ನಿಮಿತ್ತಗಳು ಕಾಣುತ್ತಿವೆ. ರಾಮನೊಡನೆ ಮತ್ತೆ ಬಂದು ನಿನ್ನನ್ನು ಕಾಣುವೆನೋ ಇಲ್ಲವೋ!" ಹೀಗೆಂದು ಹೇಳಿದ ಲಕ್ಷ್ಮಣನಿಗೆ ದೇವಿ "ರಾಮನಿಲ್ಲದೆ ನಾನು ಜೀವಿಸುವುದಿಲ್ಲ. ಗೋದಾವರಿಯಲ್ಲಿ ಮುಳುಗಿ ದೇಹವನ್ನು ಬಿಡುತ್ತೇನೆ. ವಿಷವನ್ನು ಕುಡಿದೋ ಅಗ್ನಿಯನ್ನು ಹೊಕ್ಕೋ ಸಾಯುತ್ತೇನೆ. ರಾಮನನ್ನಲ್ಲದೆ ಬೇರೊಬ್ಬ ಪುರುಷನನ್ನು ನನ್ನ ಕಾಲಿನಿಂದ ಮುಟ್ಟುವುದಿಲ್ಲ" ಎಂದು ಹೇಳಿ ಹೊಟ್ಟೆಯನ್ನು ಹೊಡೆದುಕೊಂಡಳು. ಹೀಗೆ ಹುಚ್ಚಳಂತೆ ದುಃಖಿಸುತ್ತಿರುವ ಸೀತೆಗೆ ಲಕ್ಷ್ಮಣನು ಕೈಮುಗಿದು ನಮಸ್ಕಾರಮಾಡಿ ಕೊಂಚ ಪ್ರಣಾಮಮಾಡಿ ರಾಮನ ಕಡೆಗೆ ಹೊರಟನು. ಈ ಸಮಯವನ್ನೇ ಕಾದಿದ್ದ ರಾವಣನು ಲಕ್ಷ್ಮಣನು ಅತ್ತ ಹೋಗುತ್ತಲೇ ಇತ್ತ ಆಶ್ರಮಕ್ಕೆ ಭಿಕ್ಷುರೂಪದಿಂದ ಬಂದನು. "ಓ ಸುಂದರಿ, ನೀನು ಯಾರು? ಹ್ರೀಯೆ; ಶ್ರೀಯೆ, ಕೀರ್ತಿದೇವತೆಯೆ? ಅಪ್ಸರೆಯೆ, ಭೂತಿಯೆ, ಸ್ವೈರಚಾರಿಣಿಯಾದ ರತಿಯೆ?" ಎಂದು ಅವಳ

ಸೌಂದರ್ಯವನ್ನು ವಿವರವಾಗಿ ವರ್ಣಿಸಿದನು. ವರ್ಣಿಸಿ "ನಿನ್ನ ಈ ರೂಪ ಈ ಸೌಕುಮಾರ್ಯ ನನ್ನ ಮನಸ್ಸನ್ನು ಉನ್ಮಾದಗೊಳಿಸುತ್ತಿವೆ. ಕಾಮರೂಪಿಗಳಾದ ಘೋರರಾಕ್ಷಸರಿಗೆ ಇದು ವಾಸಸ್ಥಳ. ನೀನು ಇಲ್ಲಿ ಇರುವುದು ಸರಿಯಲ್ಲ. ಇಲ್ಲಿ ಒಬ್ಬಳೇ ಇದ್ದು ಭಯಪಡದೆ ಇರುವೆ ಹೇಗೆ? ನೀನು ಯಾರು, ಯಾರವಳು, ಎಲ್ಲಿಂದ ಬಂದವಳು? ಯಾವ ಕಾರಣದಿಂದ ರಾಕ್ಷಸಾ ವಾಸವಾದ ದಂಡಕಾರಣ್ಯದಲ್ಲಿ ಒಬ್ಬಳೇ ಇದೀಯೆ" ಎಂದು ಕೇಳಿದನು. ದ್ವಿಜನಂತೆ ಕಂಡ ರಾವಣನಿಗೆ ಸೀತೆ ಸತ್ಕಾರಮಾಡಿದಳು; ಅರ್ಘ್ಯ ಪಾದ್ಯ ಆಸನಗಳನ್ನು ಕೊಟ್ಟಳು. ವೇಷಕ್ಕೆ ವಿರೋಧವಾದ ಈ ಭಿಕ್ಷುವಿನ ಸೌಂದರ್ಯ ಪ್ರಶಂಸೆಯ ಮಾತಿನಿಂದ ಸೀತೆಯ ಮನಸ್ಸಿಗೆ ಭಯ ತಟ್ಟಿತೆಂದು ಕಾಣುತ್ತದೆ. ರಾಮನೂ ಲಕ್ಷ್ಮಣನೂ ಬಂದರೇ ಎಂದು ಅವಳು ಸುತ್ತನೋಡಿದಳು. ಇವನೊಂದಿಗೆ ಮಾತನಾಡುವುದಕ್ಕೆ ಅವಳಿಗೆ ಬೇಕಾಗಿರಲಿಲ್ಲ; ಆದರೆ ಮಾತನಾಡದಿದ್ದರೆ ಅತಿಥಿಯಾದ ಈ ಬ್ರಾಹ್ಮಣನು ಶಾಪಕೊಡಬಹುದು ಎಂದು ಭಯ. ಅವಳು ಅವನಿಗೆ ತನ್ನ ಚರಿತ್ರೆಯನ್ನು ಮೆಲ್ಲನೆ ಹೇಳಿದಳು. ಆಮೇಲೆ "ನಿನ್ನ ಹೆಸರು, ಕುಲ, ಗೋತ್ರ ಅದನ್ನು ನಿಜವಾಗಿ ತಿಳಿಸು. ದಂಡಕಾರಣ್ಯದಲ್ಲಿ ನೀನೊಬ್ಬನೇ ಏಕೆ ಸಂಚರಿಸುತ್ತಿದೀಯೆ" ಎಂದು ಕೇಳಿದಳು. ರಾವಣನು ಅವಳಿಗೆ ತನ್ನ ಪರಿಚಯವನ್ನು ಹೇಳಿದನು. "ಯಾರಿಂದ ದೇವಾಸುರ ಪನ್ನಗಸಮೇತವಾದ ಲೋಕಗಳು ವಿತ್ರಾಸಿತವಾಗಿವೆಯೋ ಆ ರಾಕ್ಷಸಗಣೇಶ್ವರನಾದ ರಾವಣನು ನಾನು. ಬಂಗಾರದಂಥ ಬಣ್ಣದ ನಿನ್ನನ್ನು ನೋಡಿದಮೇಲೆ ನನಗೆ ನನ್ನ ಪತ್ನಿಯರಲ್ಲಿ ಅಪೇಕ್ಷೆ ಉಂಟಾಗದೆ ಇವೆ. ಇಲ್ಲಿಂದ ಅಲ್ಲಿಂದ ನಾನು ಆರಿಸಿತಂದಿರುವ ಅನೇಕ ಉತ್ತಮ ಸ್ತ್ರೀಯರಿಗೆ ಹಿರಿಯಳೆನಿಸಿಕೊಂಡು ನೀನು ನನ್ನ ಅಗ್ರಮಹಿಷಿಯಾಗು. ಸಮುದ್ರಮಧ್ಯದಲ್ಲಿ ಇರುವ ಲಂಕೆ ನನ್ನ ಮಹಾಪುರಿ, ನೀನು ಅಲ್ಲಿ ನನ್ನೊಂದಿಗೆ ವನಗಳಲ್ಲಿ ವಿಹರಿಸುವೆ. ಆಗ ನಿನಗೆ ಇಲ್ಲಿ ಈ ಅರಣ್ಯದಲ್ಲಿ ವಾಸಮಾಡುವುದು ಬೇಕಾಗುವುದಿಲ್ಲ. ನೀನು ನನಗೆ ಭಾರ್ಯೆಯಾದರೆ ಸರ್ವಾಭರಣಭೂಷಿತೆಯರಾದ ಐದು ಸಹಸ್ರ ದಾಸಿಯರು ನಿನಗೆ ಸೇವೆ ಮಾಡುವರು" ಎಂದನು. ಸೀತಾದೇವಿ ಅವನನ್ನು ಧಿಕ್ಕರಿಸಿದಳು:

"ಮಹಾಗಿರಿಯಂತೆ ಅಕಂಪ್ಯನೂ ಮಹೇಂದ್ರನಿಗೆ ಸದೃಶನೂ ಮಹೋದಧಿಯಂತೆ ಅಕ್ಷೋಭ್ಯನೂ ಆದ ಪತಿ ರಾಮನಲ್ಲಿ ಅನುವ್ರತಳು ನಾನು. ಅವನು ಮಹಾಬಾಹು. ಮಹೋರಸ್ಕನು, ಸಿಂಹವಿಕ್ರಾಂತಗಾಮಿ; ನೃಸಿಂಹನು, ಸಿಂಹಸಂಕಾಶನು. ನೀನು ನರಿ, ಸಿಂಹಿಯನ್ನು ಅಪೇಕ್ಷಿಸುತ್ತಿದೀಯೆ. ಆದಿತ್ಯನ ಪ್ರಭೆಯನ್ನು ಹೇಗೆ ಮುಟ್ಟಲಾರೆಯೋ ಹಾಗೆ ನೀನು ನನ್ನನ್ನಾದರೂ ಮುಟ್ಟಲಾರೆ. ರಾಘವನ ಪ್ರಿಯಭಾರ್ಯೆಯನ್ನು ಅಪೇಕ್ಷಿಸುವ ನೀನು ಚಿನ್ನದ ಮರಗಳನ್ನು ಕಂಡ ಮಂದಭಾಗ್ಯನೇ ಸರಿ. ನಿನಗೂ ರಾಮನಿಗೂ ಮಧ್ಯೆ ನರಿಗೆ ಸಿಂಹಕ್ಕೆ ಇರುವ ಅಂತರ ಇದೆ. ಸಹಸ್ರಾಕ್ಷಸಮಪ್ರಭಾವನಾದ ರಾಮನು ಕಾರ್ಮುಕ ಬಾಣಪಾಣಿಯಾಗಿ ಇರಲಾಗಿ ನೀನು ನನ್ನನ್ನು ಅಪಹರಿಸಿಕೊಂಡು ಹೋದರೂ ದಕ್ಕಿಸಿಕೊಳ್ಳಲಾರೆ" ಎಂದಳು. ಧೈರ್ಯದ ಮಾತನ್ನು ಹೇಳಿದರೂ ಸೀತೆಗೆ ಮನಸ್ಸಿನಲ್ಲಿ ಭಯವಿತ್ತು. ಅಥವಾ ಮನಸ್ಸು ಧೀರವಾಗಿದ್ದರೂ ಅವಳ ದೇಹ ಹೆಣ್ಣಿನದು. ಈ ಮಾತನ್ನು ಹೇಳಿ ಅವಳು ನಡುಗಿದಳು. ರಾವಣನು ಹುಬ್ಬನ್ನು ಗಂಟಿಕ್ಕಿ ಕಠಿಣವಾದ ಈ ಮಾತುಗಳನ್ನು ಹೇಳಿದನು. "ನಾನು ವೈಶ್ರವಣನ ಸೋದರನು. ದೇವತೆಗಳು ಗಂಧರ್ವರು ಪಿಶಾಚಪತಗೋರಗರು ನನ್ನ ಭಯಕ್ಕಾಗಿ ಓಡುವರು. ನಾನಿರುವ ಕಡೆ ಹರಿಯಬೇಕಾದರೆ ಗಾಳಿ ಶಂಕಿಸುತ್ತದೆ: ಸೂರ್ಯನು ತನ್ನ ಬಿಸಿಕದಿರನ್ನು ತಣ್ಣಗೆ ಮಾಡುತ್ತಾನೆ. ನಾನಿರುವಲ್ಲಿ ಮರಗಳು ಎಲೆಯನ್ನು ಆಡಿಸುವುದಿಲ್ಲ; ನದಿಗಳ ಪ್ರವಾಹ ಸ್ತಿಮಿತವಾಗುತ್ತದೆ. ಲಂಕೆಗೆ ಬಂದು ಸುಖವಾಗಿರಲಾಗಿ ನೀನು ಗತಾಯುಷ ಮಾನುಷನಾದ ರಾಮನನ್ನು ನೆನೆಯುವುದಿಲ್ಲ. ರಾಜ್ಯಭ್ರಷ್ಟನಾದ ರಾಮನನ್ನು ಕಟ್ಟಿಕೊಂಡು ಏನುಮಾಡುವೆ?" ಸೀತಾದೇವಿ ಇದಕ್ಕೆ "ಸರ್ವಭೂತ ನಮಸ್ಕೃತನಾದ ವೈಶ್ರವಣದೇವನನ್ನು ಅಣ್ಣನೆಂದು ಹೇಳಿಕೊಂಡು ನೀನೇಕೆ ಈ ಅಕಾರ್ಯವನ್ನು ಮಾಡುವುದಕ್ಕೆ ಹೊರಟದೀಯೆ? ಅಜಿತೇಂದ್ರಿಯನೂ ದುರ್ಬುದ್ಧಿಯೂ ಆದ ನಿನ್ನನ್ನು ರಾಜನಾಗಿವುಳ್ಳ ಕಾರಣದಿಂದ ರಾಕ್ಷಸರು ಸರ್ವರೂ ನಾಶವಾಗುವುದೇ ನಿಜ. ಇಂದ್ರನ ಭಾರ್ಯೆಯಾದ ಶಚಿಯನ್ನು ಅಪಹರಿಸಿ ಜೀವಿಸುವುದು ಶಕ್ಯ; ರಾಮನ

ಭಾರ್ಯೆಯನ್ನು ಅಪಹರಿಸಿ ಜೀವಿಸುವುದು ಸಾಧ್ಯವಲ್ಲ. ನನಗೆ ಅಪಚಾರ ಮಾಡಿದ್ದಾದರೆ ನೀನು ಅಮೃತವನ್ನು ಕುಡಿದರೂ ಅಮರನಾಗಲಾರೆ" ಎಂದಳು. ರಾವಣನು "ನೀನು ಹುಚ್ಚಿ. ಹುಚ್ಚುಮಾತನ್ನಾಡು ತ್ತಿದೀಯೆ. ನನ್ನ ವೀರ್ಯ ಪರಾಕ್ರಮಗಳನ್ನು ನೀನು ಕೇಳಿಲ್ಲ" ಎಂದು ಭಿಕ್ಷುರೂಪವನ್ನು ಬಿಟ್ಟು ತನ್ನ ನಿಜವಾದ ರೂಪವನ್ನು ಧರಿಸಿ ಮತ್ತೆ ಅವಳನ್ನು ಕುರಿತು ರಾಮನನ್ನು ಬಿಟ್ಟು ತನ್ನನ್ನು ವರಿಸೆಂದು ಹೇಳುತ್ತ ಅವಳನ್ನು ಹಿಡಿದುಕೊಂಡನು. ಅವನ ರಥ ಬಂದಿತು; ಅವನು ಸೀತೆಯನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ರಥಾರೂಢನಾದನು; ರಥ ಮೇಲಕ್ಕೆ ಹೊರಟಿತು. ಸೀತಾದೇವಿ "ಹಾ ಲಕ್ಷ್ಮಣ, ಮಹಾ ಬಾಹು, ಗುರುಚಿತ್ತಪ್ರಸಾದಕ, ರಾಕ್ಷಸನು ನನ್ನನ್ನು ಅಪಹರಿಸಿಕೊಂಡು ಹೋಗುವುದನ್ನು ನೀನು ಕಾಣೆಯಲ್ಲಾ! ರಾಮಾ, ಧರ್ಮಕ್ಕಾಗಿ ಜೀವಿತ ವನ್ನೂ ಸುಖವನ್ನೂ ಅರ್ಥವನ್ನೂ ಬಿಟ್ಟ ನೀನು ಅಧರ್ಮದಿಂದ ನಾನು ಅಪಹೃತಳಾಗಿರುವುದನ್ನು ಕಾಣದೆ ಇದ್ದೀಯಲ್ಲಾ! ಪಾಪಿಯಾದ ರಾವಣನನ್ನು ದಂಡಿಸದೆ ಇರುವ ನೀನು ದುಷ್ಟರನ್ನು ನಿಗ್ರಹಿಸುವನಲ್ಲ ಅಲ್ಲವೆ? ಆಗಲಿ, ದುಷ್ಟನ ಕರ್ಮದ ಫಲ ಒಡನೆಯೇ ಕಾಣುವುದಿಲ್ಲ; ಸರಿಯಾದ ಕಾಲದಲ್ಲಿ ಒದಗುತ್ತದೆ. ಈಗ ಕೈಕಯಿ ಸಕಾಮಳಾಗಲಿ. ಜನಸ್ಥಾನದ ಸುಪುಷ್ಪಿತ ಕರ್ಣಿಕಾರಗಳೇ ನಿಮ್ಮನ್ನು ಬೇಡುತ್ತೇನೆ. ರಾವಣನು ಸೀತೆಯನ್ನು ಒಯ್ದನೆಂಬುದಾಗಿ ಬೇಗನೆ ರಾಮನಿಗೆ ತಿಳಿಸಿ. ಮಾಲ್ಯವಂತನನ್ನು, ಪ್ರಸ್ರವಣಗಿರಿಯನ್ನು, ಹಂಸಕಾರಂಡವಾಕೀರ್ಣಳಾದ ಗೋದಾವರೀ ನದಿಯನ್ನು, ವಂದಿಸಿ ಬೇಡುತ್ತೇನೆ: ನೀವು ರಾಮನಿಗೆ ಇದನ್ನು ಬೇಗನೆ ತಿಳಿಸಿ. ಈ ವನದ ವಿವಿಧ ವೃಕ್ಷಗಳಲ್ಲಿರುವ ದೇವತೆ ಗಳಿಗೆ ನಮಸ್ಕಾರಮಾಡಿ ಬೇಡುತ್ತೇನೆ: ಈ ಮಾತನ್ನು ರಾಮನಿಗೆ ತಿಳಿಸಿ. ಯಾವ ಯಾವ ಸತ್ವಗಳು, ಮೃಗಗಳಾಗಲಿ ಪಕ್ಷಿಗಳಾಗಲಿ, ಇಲ್ಲಿ ವಾಸಮಾಡುತ್ತವೆಯೊ ಅವನ್ನೆಲ್ಲ ಶರಣುಹೊಗುತ್ತೇನೆ: ಅವಳಿಷ್ಟಕ್ಕೆ ವಿರೋಧವಾಗಿ ರಾವಣನು ಸೀತೆಯನ್ನು ಅಪಹರಿಸಿದನೆಂದು ರಾಮನಿಗೆ ಹೇಳಿ. ರಾಮನು ನನ್ನನ್ನು ಬಿಡಿಸಿಕೊಳ್ಳುತ್ತಾನೆ" ಎಂದು ಕೂಗಿದಳು. ಆಗ ಅಲ್ಲಿ ಜಟಾಯು ಅವಳ ಕಣ್ಣಿಗೆ ಕಂಡನು. ಸೀತೆ "ಜಟಾಯು,

ನನ್ನನ್ನು ಅನಾಥಳಂತೆ ಈ ರಾಕ್ಷಸನು ಕೊಂಡೊಯ್ಯುತ್ತಿರುವುದನ್ನು ನೋಡು. ಈ ನಿಶಾಚರನು ಕ್ರೂರನು. ಇವನನ್ನು ತಡೆಯುವುದಕ್ಕೆ ನಿನ್ನಿಂದ ಆಗುವುದಿಲ್ಲ. ನನ್ನನ್ನು ಇವನು ಕೊಂಡೊಯ್ದನೆಂದು ರಾಮನಿಗೆ ತಿಳಿಸು. ಒಂದು ಮಾತನ್ನೂ ಬಿಡದೆ ಎಲ್ಲವನ್ನೂ ಲಕ್ಷ್ಮಣನಿಗೂ ಹೇಳು" ಎಂದಳು. ಜಟಾಯು ರಾವಣನನ್ನು ತಡೆದುನೋಡಿದನು; ಆಗಲಿಲ್ಲ. ರಾವಣನು ಸೀತಾದೇವಿಯನ್ನು ಲಂಕೆಗೆ ತೆಗೆದುಕೊಂಡು ಹೊರಟೇ ಹೋದನು.

ಲಂಕೆಯನ್ನು ಸೇರಿದಮೇಲೆ ರಾವಣನು ಸೀತೆಗೆ ತನ್ನ ಐಶ್ವರ್ಯ ವನ್ನೆಲ್ಲ ತೋರಿಸಿದನು. ಇದಕ್ಕೆ ಅವಳು ಮರುಳಾಗಿರಬೇಕೆಂದೇ ನೆನೆದು "ಪ್ರಪಂಚದಲ್ಲಿ ನನ್ನಂತೆ ಪರಾಕ್ರಮಶಾಲಿ ಇನ್ನೊಬ್ಬನಿಲ್ಲ. ನನ್ನಿಂದ ನಿನ್ನನ್ನು ಬಿಡಿಸಿಕೊಂಡುಹೋಗುವುದು ಯಾರಿಂದಲೂ ಸಾಧ್ಯವಲ್ಲ. ನನಗೆ ರಾಣಿಯಾಗು. ಈ ಐಶ್ವರ್ಯವನ್ನೆಲ್ಲ ಅನುಭವಿಸು" ಎಂದು ಅವಳನ್ನು ಬೇಡಿದನು. "ನೀನು ದುಃಖಿಸುತ್ತಿರುವ ಕಾರಣದಿಂದ ಕಮಲದಂಥ ನಿನ್ನ ಮುಖವು ಶೋಭಿಸದೆ ಇದೆ" ಎಂದು ತನ್ನ ಪ್ರಣಯವನ್ನು ವ್ಯಕ್ತಪಡಿಸಿದನು. ಸೀತೆ ಸೆರಗಿನಿಂದ ಮುಖವನ್ನು ಮರೆಯಿಸಿಕೊಂಡು ಕಣ್ಣೀರು ಸುರಿಸಿದಳು. ಅವಳಿಗೆ ಇಷ್ಟವಿದೆಯೆಂದೂ ಆದರೆ ನಾಚಿಕೆ ಯಿಂದ ಹಿಂದೆಗೆಯುತ್ತಿರುವಳೆಂದೂ ರಾವಣನು ತಿಳಿದನು. "ಈ ನಾಚಿಕೆ ಸಾಕು. ನಿನ್ನ ಪಾದಗಳನ್ನು ನನ್ನ ತಲೆಯಿಂದ ಮುಟ್ಟುತ್ತೇನೆ. ನನ್ನ ವಿಷಯದಲ್ಲಿ ಪ್ರಸನ್ನಳಾಗು. ನಾನು ನಿನ್ನ ಆಳು; ಊಳಿಗದವನು. ರಾವಣನು ಯಾವ ಹೆಂಗಸಿಗೂ ತಲೆಬಾಗಿದವನಲ್ಲ" ಎಂದನು. ತನ್ನ ಮಾತಿಗೆ ಅವಳು ಒಲಿಯುವಳೆಂದೇ ಅವನ ಊಹೆ. ದೇವಿ ತನಗೂ ಅವನಿಗೂ ಮಧ್ಯೆ ಒಂದು ಹುಲ್ಲುಕಡ್ಡಿಯನ್ನಿಟ್ಟು ಅವನಿಗೆ ಉತ್ತರವಾಗಿ "ರಾಜನಾದ ದಶರಥನು ಧರ್ಮಸೇತುವಿನಂತೆ ಅಚಲನು. ರಾಮನು ಅವನ ಮಗನು; ಧರ್ಮಾತ್ಮನೆಂದು ಮೂರು ಲೋಕದಲ್ಲಿ ಕೀರ್ತಿಪಡೆದಿರುವನು. ದೀರ್ಘಬಾಹುವೂ ವಿಶಾಲಾಕ್ಷನೂ ಆದ ಅವನು ನನ್ನ ದೈವ, ನನ್ನ ಪತಿ. ಇಕ್ಷ್ವಾಕುವಂಶದಲ್ಲಿ ಜನಿಸಿದ ಆತನು ಸಿಂಹಸ್ಕಂಧನು, ಮಹಾದ್ಯುತಿವಂತನು. ಅವನ ತಮ್ಮನಾದ ಲಕ್ಷ್ಮಣನೂ

ಅವನೂ ನಿನ್ನ ಜೀವವನ್ನು ತೆಗೆಯುವರು. ನೀನು ಅವರೆದುರಿಗೆ ನನ್ನನ್ನು ತೆಗೆದುಕೊಳ್ಳುವುದಕ್ಕೆ ಬಂದಿದ್ದರೆ ನಿನಗೆ ಖರನ ಗತಿಯಾಗುತ್ತಿತ್ತು. ನೀನು ನನ್ನನ್ನು ಮುಟ್ಟಲಾರೆ. ಈ ನನ್ನ ಮೆಯ್ ಪ್ರಜ್ಞೆ ತಪ್ಪಿರುವ ವೇಳೆ ನೀನು ಅದನ್ನು ಕಟ್ಟಬಹುದು ತಿನ್ನಬಹುದು. ಇದನ್ನು ಅಥವಾ ನನ್ನ ಜೀವವನ್ನು ರಕ್ಷಿಸುವುದು ನನ್ನಲ್ಲಿಲ್ಲ; ನನ್ನ ಮನಸ್ಸನ್ನು ನಿನಗೆ ಒಪ್ಪಿಸಲಾರೆನು'' ಎಂದು ಹೇಳಿದಳು. ರಾವಣನು ''ಒಂದು ವರುಷ ಕಾಯುತ್ತೇನೆ. ಅಷ್ಟರಲ್ಲಿ ನೀನು ಒಪ್ಪದೆಹೋದರೆ ನಿನ್ನನ್ನು ಚೂರು ಚೂರಾಗಿ ಕತ್ತರಿಸುತ್ತಾರೆ'' ಎಂದನು. ಮತ್ತು ಸೀತೆಯನ್ನು ನೋಡಿಕೊಳ್ಳಿರೆಂದು ಕಾವಲನ್ನಿಟ್ಟು ಅವಳನ್ನು ಅಶೋಕವನದಲ್ಲಿ ಇರಿಸಿದನು.

## ಹನುಮಂತನ ದೌತ್ಯ

ಇದು ಸೀತಾದೇವಿಯ ಕತೆಯಲ್ಲಿ ಒಂದು ಮುಖ್ಯ ಸಂದರ್ಭ. ಇನ್ನೊಂದು ಇಂಥದೇ ಸಂದರ್ಭ ರಾಮನ ಪರವಾಗಿ ಸೀತಾದೇವಿಯನ್ನು ಹುಡುಕುತ್ತ ಬಂದ ಹನುಮಂತನು ಅವಳನ್ನು ಲಂಕೆಯಲ್ಲಿ ಅರಸಿದ್ದು ಮತ್ತು ಕಂಡದ್ದು. ಹನುಮಂತನು ಅರಮನೆಯಲ್ಲೆಲ್ಲ ಸುತ್ತಿ ಹುಡುಕುತ್ತ ಬಂದು ಮಂಡೋದರಿ ರಾವಣನ ಬಳಿಯಲ್ಲಿ ಮಲಗಿದ್ದುದನ್ನು ಕಂಡು ಅವಳು ಸೀತೆಯೆಂದು ಕ್ಷಣಮಾತ್ರ ಭ್ರಮಿಸಿ, ಉತ್ತರಕ್ಷಣದಲ್ಲಿ ಎಲ್ಲಿಯಾದರೂ ಉಂಟೇ ಸೀತೆ ಇಲ್ಲಿರುವುದು ಎಂದು ಬುದ್ಧಿ ತಿಳಿದು ಮುಂದೆ ಹೋಗಿ, ಅಶೋಕವನದಲ್ಲಿ ರಾಕ್ಷಸಿಯರ ಮಧ್ಯೆ ಕುಳಿತು ದುಃಖಿತಳಾಗಿ ದೀನಳಾಗಿ ಕೃಶಳಾಗಿ ನಿಟ್ಟುಸಿರು ಬಿಡುತ್ತ ಇದ್ದ ದೇವಿಯನ್ನು ಕಂಡನು. ಆ ಸ್ಥಿತಿಯಲ್ಲಿ ಅವಳ ಲಾವಣ್ಯ ಅದ್ಭುತವಾಗಿತ್ತು. ಇಂಥ ಪತ್ನಿಯನ್ನು ಕಳೆದುಕೊಂಡು ಇನ್ನೂ ದೇಹವನ್ನು ಧರಿಸಿಕೊಂಡಿರುವ ರಾಮಚಂದ್ರನು ದುಷ್ಕರವಾದ ಕೆಲಸವನ್ನು ಮಾಡಿದಾನೆ ಎಂದು ಅವನಿಗೆ ತೋರಿತು. ಮಾರನೆಯ ಬೆಳಗ್ಗೆ ರಾವಣನು ಸೀತಾದೇವಿಯನ್ನು ಬೇಡುವುದಕ್ಕೆ ಬಂದನು. ಅವನು ಬರುವುದನ್ನು ಕಂಡು ಸೀತೆ ಗಾಳಿಯಲ್ಲಿ ನಡುಗುವ ಬಾಳೆಯಂತೆ ನಡುಗಿದಳು. ತೊಡೆಯಿಂದ ಉದರವನ್ನು ತೋಳಿನಿಂದ ಎದೆಯನ್ನು ಮುಚ್ಚಿಕೊಂಡು ಅಳುತ್ತ ಕುಳಿತಳು. ರಾವಣನು ''ನನ್ನನ್ನು

ನೋಡಿ ನೀನು ಮೈಯನ್ನು ಮರೆಸಿಕೊಳ್ಳುತ್ತೀಯೆ. ನಾನು ಸರ್ವಾಂಗ ಗುಣಸಂಪನ್ನೆಯಾದ ನಿನ್ನನ್ನು ಅಪೇಕ್ಷಿಸುತ್ತೇನೆ. ಪರಸ್ತ್ರೀಯರನ್ನು ಕೊಳ್ಳುವುದು ಆಳುವುದು ರಾಕ್ಷಸರ ದಾರಿ. ಆದರೂ ನನ್ನಲ್ಲಿ ಅಪೇಕ್ಷೆ ಯಿಲ್ಲದ ನಿನ್ನನ್ನು ನಾನು ಮುಟ್ಟುವುದಿಲ್ಲ. ನನ್ನ ವಿಷಯದಲ್ಲಿ ಭಯ ಪಡಬೇಡ. ನನ್ನನ್ನು ಪ್ರೀತಿಸು. ಈ ಉಪವಾಸವೂ, ಈ ಮಲಿನಾಂಬರವೂ, ಏಕ ವೇಣೀಧಾರಣವೂ, ಭೂಶಯ್ಯೆಯೂ ಅನವಶ್ಯಕ. ನನ್ನನ್ನು ಸೇರು, ಮಾಲ್ಯ, ಚಂದನ, ಅಗರು, ವಸ್ತ್ರಾಭರಣ, ಪಾನ, ಶಯನ, ಆಸನ, ಗೀತ, ನೃತ್ಯವಾದ್ಯಗಳನ್ನು ಪಡೆಯುವೆ. ನೀನು ಸ್ತ್ರೀರತ್ನ, ಈಗಿರುವಂತೆ ಇರಬಾರದು, ಒಡವೆಗಳನ್ನು ಧರಿಸು. ಸುಂದರವಾಗಿ ಒದಗಿರುವ ಈ ನಿನ್ನ ಯೌವನ ಕಳೆದು ಹೋಗುತ್ತದೆ. ವೇಗದಿಂದ ಹರಿಯುವ ನೀರಿನ ವೇಗದಂತೆ ಕಳೆದಮೇಲೆ ಇದು ಪುನಃ ಬರುವುದಿಲ್ಲ. ನಿನಗೆ ಸಮಾನ ವಾದ ರೂಪವುಳ್ಳವಳು ಇನ್ನೊಬ್ಬಳಿಲ್ಲ. ರೂಪಕರ್ತನಾದ ವಿಶ್ವಸ್ರಷ್ಟನು ನಿನ್ನನ್ನು ಮಾಡಿ ಉಪರತನಾದನೆಂದು ನನಗೆ ತೋರುತ್ತದೆ. ನಿನ್ನ ಮೆಯ್ಯ ಯಾವ ಯಾವ ಭಾಗವನ್ನು ನೋಡಿದರೆ ಅಲ್ಲಲ್ಲಿ ನನ್ನ ಕಣ್ಣು ಸೆರೆಯಾಗು ತ್ತಿದೆ. ನನ್ನ ಭಾರ್ಯೆಯಾಗು. ರಾಮನನ್ನು ಕುರಿತ ಈ ಮೋಹವನ್ನು ಬಿಡು. ನಾನು ಎಲ್ಲ ಕಡೆಯಿಂದ ತಂದಿರುವ ಬಹು ಮಂದಿ ಉತ್ತಮ ಸ್ತ್ರೀಯರ ಪ್ರಮುಖಳಾಗಿ ನನ್ನ ಅಗ್ರಮಹಿಷಿಯಾಗು. ನನ್ನ ಸರ್ವ ಐಶ್ವರ್ಯವನ್ನು ನಿನಗೆ ಕೊಡುತ್ತೇನೆ. ಸರ್ವ ಪೃಥಿವಿಯನ್ನೂ ಜಯಿಸಿ ಜನಕನಿಗೆ ಕೊಡುತ್ತೇನೆ. ನಾರುಮಡಿಯನ್ನುಟ್ಟು ಬಿಕಾರಿಯಾಗಿ ವನವಾಸಮಾಡುತ್ತಿರುವ ರಾಮನಿಂದ ಏನುಮಾಡುತ್ತೀಯೆ? ಅವನು ಇದಾನೊ, ಸತ್ತನೊ! ಯಾವ ವಿಧದಿಂದಲೂ ಅವನು ನನಗೆ ಸಮನಲ್ಲ. ನೀನು ನನ್ನನ್ನು ಸೇರಿ ಸುಖಿಸು. ನಿನ್ನಿಂದ ನಿನ್ನ ಬಂಧುಗಳೂ ಸುಖಿಸಲಿ'' ಎಂದು ಹೇಳಿದನು. ಸೀತೆ ಅವನಿಗೆ ''ನನ್ನ ಕಡೆಯಿಂದ ಮನಸ್ಸನ್ನು ಹಿಂದಕ್ಕೆ ತಿರುಗಿಸು, ನಿನ್ನ ಸ್ತ್ರೀಯರಲ್ಲಿ ಅದನ್ನು ಇರಿಸು. ನೀನು ಮಾಡುತ್ತಿರುವ ಪ್ರಾರ್ಥನೆ ಸರಿಯಲ್ಲ. ಉತ್ತಮ ಕುಲದಲ್ಲಿ ಹುಟ್ಟಿ ಉತ್ತಮ ಕುಲವನ್ನು ಸೇರಿರುವ ನಾನು ನಿನ್ನ ಪ್ರಾರ್ಥನೆಯಂತೆ ಮಾಡುವುದೂ ಸಾಧ್ಯವಲ್ಲ'' ಎಂದಳು. ಮತ್ತೆ ''ನಾನು ಪರಸತಿ,

ನಿನಗೆ ಸತಿ ಅಲ್ಲ. ಒಳ್ಳೆಯವರ ದಾರಿ ಯಾವುದು ನೋಡು, ಒಳ್ಳೆಯವರು ನಡೆಯುವಂತೆ ನಡೆ. ನಿನಗಾಗಿ ನೀನು ನಿನ್ನ ಹೆಂಡತಿಯರನ್ನು ಕಾದುಕೊಳ್ಳುವಂತೆ ಇತರರ ಹೆಂಡತಿಯರನ್ನು ಅವರಿಗಾಗಿ ರಕ್ಷಿಸಬೇಕು. ಇಲ್ಲಿ ಒಳ್ಳೆಯವರು ಇಲ್ಲವೋ, ಇದ್ದರೂ ಅವರನ್ನು ನೀನು ಅನುಸರಿಸುವುದಿಲ್ಲವೋ, ಅಂತೂ ನಿನ್ನ ಬುದ್ಧಿ ಸದಾಚಾರವನ್ನು ಬಿಟ್ಟು ವಿಪರೀತವಾಗಿದೆ. ಬಹು ಐಶ್ವರ್ಯ ಇದೆಯೆಂದು ನೀನು ಹೆಮ್ಮೆಪಡುತ್ತಿರುವೆ. ನೀನು ಈಗ ಮಾಡಿರುವ ಒಂದು ಅಪರಾಧದಿಂದ ಇದೆಲ್ಲ ಇಷ್ಟರಲ್ಲಿ ನಾಶವಾಗುವುದು. ವಸುಧಾಪತಿ ರಾಮನ ಭಾರ್ಯೆಯಾದ ನಾನು ಇನ್ನೊಬ್ಬನ ತೋಳಿಗೆ ಹೇಗೆ ಹೋದೇನು? ನೀನು ಜೀವದೊಂದಿಗೆ ಇರಬೇಕೆಂದು ಅಪೇಕ್ಷಿಸುವುದಾದರೆ ರಾಮನೊಂದಿಗೆ ಸ್ನೇಹವನ್ನು ಬಯಸು. ಕೋಪಗೊಂಡ ರಾಮನನ್ನು ನೀನು ತಡೆಯಲಾರೆ. ನೀನು ಬಹುಶೂರನೆನ್ನುವೆ. ಅಣ್ಣತಮ್ಮಂದಿರು ಅವರಿಬ್ಬರೂ ಇಲ್ಲದ ವೇಳೆ ಆಶ್ರಮಕ್ಕೆ ಬಂದು ನನ್ನನ್ನು ಕದ್ದ ಅಧಮನು ಏತರ ಶೂರನು? ರಾಮನ ಪರಾಕ್ರಮ ನಿನ್ನ ಪರಾಕ್ರಮಕ್ಕೆ ಸಮವಲ್ಲವೆನ್ನುವೆ. ವಾಸ್ತವವಾಗಿ ನೀನು ರಾಮನಿಗೆ ಎದುರಾಗಿ ನಿಲ್ಲಲಾರೆ ಎನ್ನುವುದು ಹಾಗಿರಲಿ, ನಾಯಿ ಹುಲಿಯ ವಾಸನೆಯನ್ನು ಹೇಗೆ ತಡೆಯಲಾರದೊ ಹಾಗೆ ರಾಮಲಕ್ಷ್ಮಣರ ಗಂಧವನ್ನು ಕೂಡ ತಡೆಯಲಾರೆ'' ಎಂದಳು. ರಾವಣನು ಕೋಪಗೊಂಡನು. ''ನಾನು ಒಳ್ಳೆಯ ಮಾತಾಡಿದಷ್ಟೂ ನೀನು ಕೆಟ್ಟಮಾತನ್ನೇ ಹೇಳುತ್ತಿದೀಯೆ. ನಿನ್ನ ಒಂದೊಂದು ಮಾತಿಗೂ ವಧೆ ಯೋಗ್ಯವಾದ ಶಿಕ್ಷೆ. ಆದರೆ ಪ್ರೇಮ ಹುಟ್ಟಿದಲ್ಲಿ ದಯೆಯೂ ಹುಟ್ಟುತ್ತದೆ. ಅದರಿಂದ ಸುಮ್ಮನಿದೇನೆ. ಇನ್ನೆರಡು ತಿಂಗಳು ನಾನು ಈ ಮೊದಲು ಹೇಳಿದ ಅವಧಿಯಿದೆ. ಆದಾದಮೇಲೆ ನೀನು ನನ್ನ ಶಯನವನ್ನು ಏರಬೇಕು. ಅದಕ್ಕೆ ಒಪ್ಪದೆ ಇದ್ದರೆ ನಿನ್ನನ್ನು ಕಡಿಯಿಸುತ್ತೇನೆ'' ಎಂದನು. ಸೀತಾದೇವಿ ಪುನಃ ಅವನನ್ನು ಧಿಕ್ಕರಿಸಲು ರಾವಣನು ಬಹು ಕೋಪಮಾಡಿ ಮೈಥಿಲಿಯನ್ನು ತಿದ್ದುವಂತೆ ಅವಳ ಕಾವಲ ಜನಕ್ಕೆ ಹೇಳಿ ತನ್ನ ಮಂದಿರಕ್ಕೆ ಹೋದನು. ರಾಕ್ಷಸಿಯರು ರಾಮನು ಏತಕ್ಕೂ ಬಾರದವನೆಂದೂ ರಾವಣನು ಎಂಥ ದೊಡ್ಡವನೆಂದೂ ಅವನ ಭಾರ್ಯೆಯಾಗು

ವುದಕ್ಕೆ ಸೀತೆ ಪುಣ್ಯಮಾಡಿರಬೇಕೆಂದೂ ಅವಳಿಗೆ ಬಹಳವಾಗಿ ಉಪದೇಶ ಮಾಡಿದರು. ಸೀತಾದೇವಿ ಈ ಮಾತುಗಳನ್ನೆಲ್ಲ ಕೇಳಲಾರದೆ ಸುಮ್ಮನೆ ದುಃಖಿಸಿದಳು. "ಸ್ತ್ರೀಗಾಗಲಿ ಪುರುಷನಿಗಾಗಲಿ ಹೊತ್ತು ಬರದೆ ಸಾವಿಲ್ಲ ವೆನ್ನುವುದು ಸತ್ಯವಾದ ಮಾತು. ಆದರಿಂದಲೇ ನಾನು ರಾಮನನ್ನಗಲಿ ಈ ರಾಕ್ಷಸಿಯರಿಂದ ಹೀಗೆ ಹಿಂಸಿತಳಾದರೂ ಜೀವಂತಳಾಗಿದೇನೆ. ತಾವರೆಯ ಎಸಳಂದದ ಕಣ್ಣಿನ, ಸಿಂಹದ ನಡೆಯುಂತ ನಡೆಯ, ಕೃತಜ್ಞನೂ ಪ್ರಿಯವಾದಿಯೂ ಆದ ನನ್ನ ನಾಥನನ್ನು ನೋಡುವಂಥ ವರು ಪುಣ್ಯವಂತರು. ಅವನನ್ನು ಬಿಟ್ಟು ನಾನು ಬದುಕಿರಲಾರೆನು. ಈ ಜೀವವನ್ನು ಬಿಡುತ್ತೇನೆ" ಎಂದು ಬಹುವಿಧವಾಗಿ ಯೋಚನೆಮಾಡಿ ಕೊಂಡಳು. ತನ್ನನ್ನು ಕದ್ದು ತಂದಹಾಗೆ ರಾವಣನು ಮೋಸದಿಂದ ರಾಮ ಲಕ್ಷ್ಮಣರನ್ನು ಕೊಂದಿರುವನೋ ಎಂದು ಹೆದರಿದಳು. "ಕಿಲ್ಬಿಷ ವನ್ನು ಕಳೆದ ಮಹಾತ್ಮರಾದ ಮುನಿಗಳು ನಿಜವಾಗಿಯೂ ಧನ್ಯರು. ಅವರಿಗೆ ಪ್ರಿಯ ಅಪ್ರಿಯಗಳಿಲ್ಲ. ಜಿತಾತ್ಮರಾದಕಾರಣ ಅವರು ಮಹಾ ಭಾಗ್ಯಶಾಲಿಗಳು" ಎಂದು ಹಲುಬಿದಳು. ಅಷ್ಟರಲ್ಲಿ ತ್ರಿಜಟೆ ಎಂಬ ರಾಕ್ಷಸಿಯೊಬ್ಬಳು ತನಗೆ ಆಗಿದ್ದ ಸ್ವಪ್ನ ಒಂದನ್ನು ತಿಳಿಸಿ ದೇವಿ ಶುಭವನ್ನು ಕಾಣುವಳೆಂದು ಅವಳಿಗೆ ಧೈರ್ಯವನ್ನು ಹೇಳಿದಳು. ಹನುಮಂತನು ದೇವಿಯ ಈ ಅವಸ್ಥೆಯನ್ನು ನೋಡಿ ಬಹಳವಾಗಿ ಕನಿಕರಗೊಂಡನು; ಮತ್ತು ತಾನು ಬಂದಿರುವ ವಿವರವನ್ನು ಅವಳಿಗೆ ತಿಳಿಸುವುದಕ್ಕೋಸ್ಕರ ಸೀತಾದೇವಿಗೆ ನೆರಳಾಗಿದ್ದ ಮರದಮೇಲಿನಿಂದ ಮೆಲ್ಲನೆಯ ಮಾತಿನಲ್ಲಿ ರಾಮನ ಕಥೆಯನ್ನು ಹೇಳಿದನು. ಇದು ಯಾರು ಈ ಮಾತನ್ನು ಹೇಳು ವವರು ಎಂದು ಸೀತಾದೇವಿ ತಲೆಯೆತ್ತಿ ನೋಡಲಾಗಿ ಒಂದು ಕಪಿಯ ಆಕಾರ ಕಣ್ಣಿಗೆ ಬಿತ್ತು. ಕಪಿ ಬಂದು ರಾಮನ ಕಥೆ ಹೇಳುವುದೆಂದರೆ ದೇವಿಗೆ ಇದು ಸ್ವಪ್ನವಿರಬೇಕೆಂದು ತೋರಿತು. "ಸ್ವಪ್ನದಲ್ಲಿ ಶಾಖಾ ಮೃಗವನ್ನು ನೋಡುವುದು ಕೆಟ್ಟದು. ಇದು ಯಾವ ಕೇಡನ್ನು ಸೂಚಿಸು ತ್ತದೆಯೋ! ರಾಮನಿಗೆ ಲಕ್ಷ್ಮಣನಿಗೆ ತಂದೆ ಜನಕರಾಜನಿಗೆ ಒಳ್ಳೆಯ ದಾಗಲಿ" ಎಂದುಕೊಂಡು ಸೀತಾದೇವಿ ಮರಳಿ, ಇದು ಸ್ವಪ್ನವೂ ಇರಲಾರದು, ಶೋಕ ದುಃಖಗಳಿಂದ ನನಗೆ ನಿದ್ರೆಯೇ ಬರುತ್ತಿಲ್ಲ, ಎಂದು

ಮುಂತಾಗಿ ತರ್ಕಿಸಿದಳು. ಆ ವೇಳೆಗೆ ಹನುಮಂತನು ಮರದಿಂದ ಕೆಳಗಿಳಿದು ದೇವಿಯ ಎದುರಿಗೆ ನಿಂತು ಕೈಮುಗಿದು "ತಾಯಿ, ನೀನು ಯಾರು? ನಿನ್ನನ್ನು ನೋಡಿದರೆ ದೇವತೆಗಳಲ್ಲಿ ಯಾರೋ ಒಬ್ಬರಂತೆ ಕಾಣುತ್ತಿದೀಯೆ. ನೀನು ಜನಸ್ಥಾನದಿಂದ ರಾವಣನು ಅಪಹರಿಸಿ ತಂದ ರಾಜಕನ್ಯೆ ಸೀತೆಯೋ ಸರಿ ಎಂದು ಕಾಣುತ್ತವೆ. ಇದನ್ನು ನನಗೆ ತಿಳಿಸ ಬೇಕು" ಎಂದನು. ಸೀತಾದೇವಿ ತನ್ನ ಕಥೆಯನ್ನು ಹೇಳಿದಳು. ಹನುಮಂತನು "ದೇವಿ, ನಾನು ರಾಮನ ಸಂದೇಶದಿಂದ ನಿನ್ನ ಬಳಿಗೆ ಬಂದಿರುವ ದೂತನು. ರಾಮನು ಸುಖವಾಗಿದಾನೆ. ನಿನಗೆ ಸುಖವನ್ನು ಬಯಸುತ್ತಾನೆ. ಲಕ್ಷ್ಮಣನು ನಿನಗೆ ಶಿರಸಾ ವಂದಿಸುತ್ತಾನೆ" ಎಂದು ಹೇಳಿದನು. ದೇವಿಗೆ ಆನಂದವಾಯಿತು. ಆಕ್ಷಣದಲ್ಲಿ "ಲೋಕದಲ್ಲಿ ಜನರಾಡುವ ಈ ಮಾತು ಸತ್ಯವೆಂದು ನನಗೆ ಕಾಣುತ್ತದೆ. ನೂರು ವರುಷದ ಮೇಲಾದರೂ ಸರಿಯೆ ಜೀವಂತನಾಗಿರುವವನಿಗೆ ಆನಂದ ಬರುತ್ತದೆ" ಎಂದುಕೊಂಡಳು. ಹೀಗೆಂದುಕೊಳ್ಳುತ್ತಿರುವಲ್ಲಿ ಹನುಮಂತನು ಸ್ವಲ್ಪ ಹತ್ತಿರ ಬಂದನು. ದೇವಿಗೆ ಭಯ ತಟ್ಟಿತು. ರಾವಣನೇನಾದರೂ ಈ ವೇಷದಲ್ಲಿ ಬಂದನೋ ಎಂದು ಅವಳು ಶಂಕೆ ಗೊಂಡಳು. ಅಂದು ಒಂದು ವೇಷದಲ್ಲಿ ಬಂದವನು ಇಂದು ಇನ್ನೊಂದು ವೇಷದಲ್ಲಿ ಬಂದಿರಬಹುದಲ್ಲವೆ? ಸೀತೆ ಹನುಮಂತನನ್ನು ಕುರಿತು "ನೀನು ಅಂದು ಪರಿವ್ರಾಜಕ ರೂಪದಲ್ಲಿ ಬಂದ ಮಾಯಾವಿಯಾದ ರಾವಣನೋ ಹೇಗೋ ಎಂದು ನನಗೆ ಸಂದೇಹವಾಗುತ್ತಿದೆ. ಆದರೆ ಅದಿರಲಾರದೆಂದು ಭಾವಿಸುತ್ತೇನೆ. ಏಕೆಂದರೆ ನಿನ್ನನ್ನು ನೋಡಿದ್ದರಿಂದ ನನ್ನ ಮನಸ್ಸಿನಲ್ಲಿ ಪ್ರೀತಿ ಹುಟ್ಟಿದೆ. ನೀನು ರಾಮನ ದೂತನಾಗಿಯೇ ಬಂದಿರುವುದಾದರೆ ನಿನಗೆ ಒಳ್ಳೆಯದಾಗಲಿ. ನಾನು ನಿನ್ನನ್ನು ಕೇಳುತ್ತೇನೆ. ರಾಮನನ್ನು ಕುರಿತ ಮಾತು ನನಗೆ ಬೇಕಾಗಿದೆ. ಅವನ ಗುಣವನ್ನು ವರ್ಣಿಸು" ಎಂದಳು. ಇದೇನು ಸ್ವಪ್ನವೋ ಎಂದು ಅವಳಿಗೆ ಮತ್ತೆ ಸಂದೇಹ. "ಇದು ಸ್ವಪ್ನವೇ ಆದರೆ ಅದೂ ಒಳ್ಳೆಯದೆ; ಏಕೆಂದರೆ ಇದರಲ್ಲಿ ನಾನು ರಾಮನು ಕಳುಹಿಸಿದ ದೂತನನ್ನು ನೋಡುತ್ತಿದೇನೆ. ಸ್ವಪ್ನದಲ್ಲಿ ನೋಡುವುದೇ ಆದರೆ ರಾಮಲಕ್ಷ್ಮಣರನ್ನು ನೋಡಬಾರದಿತ್ತೆ?

ಸ್ವಪ್ನವೂ ನನ್ನ ವಿಷಯದಲ್ಲಿ ಮತ್ಸರಿಯಾಗಿದೆ. ಆದರೆ ಇದು ಸ್ವಪ್ನವಲ್ಲವೆಂದು ಭಾವಿಸುತ್ತೇನೆ'' ಎಂದು ಅವಳು ಯೋಚಿಸಿದಳು. ದೇವಿಯ ಚಿಂತೆಯನ್ನು ತಿಳಿದು ಹನುಮಂತನು ರಾಮಲಕ್ಷ್ಮಣರ ಗುಣಗಳನ್ನು ವಿಸ್ತಾರವಾಗಿ ವರ್ಣಿಸಿದನು; ಅವರಿಗೆ ಸುಗ್ರೀವನ ಸಖ್ಯವಾಗಿರುವ ಸಂಗತಿಯನ್ನು ತಿಳಿಸಿದನು. ''ರಾಮನು ನಿನ್ನನ್ನು ನಿತ್ಯ ನೆನೆಯುತ್ತಿದಾನೆ. ನೀನು ಜೀವಿಸಿರುವುದು ಬಹಳ ಸಂತೋಷ. ನೀನು ಬೇಗದಲ್ಲೇ ವಾನರಕೋಟಿಯ ಮಧ್ಯೆ ಲಕ್ಷ್ಮಣ ಸುಗ್ರೀವ ಸಮೇತನಾದ ರಾಮನನ್ನು ಕಾಣುವೆ. ನಾನು ಆ ಸುಗ್ರೀವನ ಸಚಿವನು. ನೀನು ಸಂದೇಹವನ್ನು ಬಿಡು. ನನ್ನ ಮಾತಿನಲ್ಲಿ ನಂಬಿಕೆಯನ್ನಿಡು'' ಎಂದನು. ದೇವಿ ಸಂದೇಹಪರಿಹಾರಾರ್ಥವಾಗಿ ಅವನನ್ನು ಕುರಿತು ''ನಿನಗೂ ರಾಮಲಕ್ಷ್ಮಣರಿಗೂ ಗುರುತಾದದು ಹೇಗೆ. ಅವರು ನೋಡುವುದಕ್ಕೆ ಹೇಗಿದ್ದಾರೆ'' ಎಂದು ಕೇಳಿದಳು. ಹನುಮಂತನು ಅವರನ್ನು ವರ್ಣಿಸಿ ನಡೆದ ವಿಷಯವನ್ನು ಹೇಳಿದನು; ರಾಮನಿಂದ ಬಂದುದಕ್ಕೆ ಗುರುತಾಗಿ ಅವನ ಉಂಗುರವನ್ನು ಕೊಟ್ಟನು. ಗಂಡನ ಕೈಯ ಉಂಗುರವನ್ನು ನೋಡಿ ಜಾನಕಿ ಮತ್ತೆ ಗಂಡನನ್ನು ಸೇರಿದಂತೆ ಸಂತೋಷಪಟ್ಟಳು. ಅದನ್ನು ತಂದು ತನಗೆ ಕೊಟ್ಟ ಹನುಮಂತನನ್ನು ಹೊಗಳಿ ''ರಾಮನು ಸುಖವಾಗಿದಾನೆಯೆ? ನನ್ನನ್ನು ಬಿಟ್ಟು ಅವನು ಬಹಳ ದುಃಖಿಸುತ್ತಿರಬೇಕು. ರಾಮನಿಗೆ ತಾಯಲ್ಲಿ ತಂದೆಯಲ್ಲಿ ಇನ್ನು ಯಾರಲ್ಲೇ ಆಗಲಿ ನನ್ನಲ್ಲಿ ಇರುವಷ್ಟು ಪ್ರೀತಿಯಿಲ್ಲ. ಅವನು ನನ್ನನ್ನು ಬೇಗನೆ ಬಿಡಿಸಿಕೊಳ್ಳುವನೆ? ಭ್ರಾತೃವತ್ಸಲನಾದ ಭರತನು ನನಗಾಗಿ ಅಕ್ಷೋಹಿಣೀ ಸೇನೆಯನ್ನು ಕಳುಹಿಸಿಕೊಡುವನೆ? ವಾನರಾಧಿಪತಿಯಾದ ಸುಗ್ರೀವನು ಹರಿವೀರಾವೃತನಾಗಿ ಇಲ್ಲಿಗೆ ಬರುವನೆ? ಸುಮಿತ್ರಾನಂದವರ್ಧನನಾದ ಶೂರ ಲಕ್ಷ್ಮಣನು ಶರಜಾಲದಿಂದ ರಾಕ್ಷಸರನ್ನು ಧ್ವಂಸಮಾಡುವನೆ? ಇದುವರೆಗೆ ಇವರು ಏಕೆ ಬರಲಿಲ್ಲ?'' ಎಂದು ತನ್ನ ಮನಸ್ಸಿನ ಆಸೆಯನ್ನು ಬಹು ವಿಧವಾಗಿ ನುಡಿದಳು. ಹನುಮಂತನು ''ತಾಯಿ, ನೀನು ಇಲ್ಲಿರುವ ವಿಷಯವನ್ನು ರಾಮನು ಕಾಣನು. ಅದರಿಂದ ನಿನ್ನನ್ನು ಬಿಡಿಸಿಕೊಂಡು ಹೋಗಲಿಲ್ಲ. ನಾನು ಸುದ್ದಿಯನ್ನು ತೆಗೆದುಕೊಂಡು ಹೋದೊಡನೆ ಅವನು ಇಲ್ಲಿಗೆ ಹೊರಡು

ವನು. ಇಲ್ಲಿ ಬಂದು ಲಂಕೆಯ ರಾಕ್ಷಸರನ್ನು ಕೊನೆಗಾಣಿಸುವನು. ನೀನು ಸಮೀಪದಲ್ಲಿಲ್ಲದ್ದರಿಂದ ರಾಮನು ಶೋಕದಲ್ಲಿ ಮುಳುಗಿದ್ದಾನೆ. ಅವನಿಗೆ ಸುಖವೆನ್ನುವುದಿಲ್ಲ. ರಾಮನು ಮಾಂಸವನ್ನು ತಿನ್ನುವುದಿಲ್ಲ, ಮಧುವನ್ನು ಕುಡಿಯುವುದಿಲ್ಲ, ಎಂಥ ಒಳ್ಳೆಯ ಆಹಾರವನ್ನೂ ಒಲ್ಲದಿದಾನೆ. ನಿನ್ನ ಧ್ಯಾನದಲ್ಲಿ ಅವನಿಗೆ ಸೊಳ್ಳೆ ಚಿಕ್ಕಾಡು ಹುಳುಹುಟ್ಟೆರೆ ಮೈಮೇಲೆ ಬಂದದು ತಿಳಿಯುವುದಿಲ್ಲ. ರಾಮನಿಗೆ ನಿದ್ರೆಯಲ್ಲಿಯೂ ಎಚ್ಚರಿಕೆಯೆ. ಏಳುವಾಗ ನಿನ್ನ ಹೆಸರನ್ನು ಕರೆಯುತ್ತ ಏಳುತ್ತಾನೆ. ಹೂವು ಹಣ್ಣು ಮತ್ತೇನಾಗಲಿ ಚೆನ್ನಾಗಿರುವುದನ್ನು ಕಂಡಾಗ ಮತ್ತೆ ಮತ್ತೆ ಹಾಪ್ರಿಯೇ ಎಂದು ಅನೇಕಸಲ ನಿನ್ನನ್ನು ನೆನೆದು ಮಾತನಾಡುತ್ತಾನೆ. ಸದಾ ನಿನಗಾಗಿ ಪರಿತಪಿಸುತ್ತ ನಿನ್ನ ಹೆಸರನ್ನು ಕೂಗುತ್ತ ರಾಮಚಂದ್ರನು ವ್ರತವನ್ನು ಹಿಡಿದು ನಿನ್ನನ್ನು ಪಡೆಯುವ ಪ್ರಯತ್ನದಲ್ಲಿದಾನೆ'' ಎಂದನು. ಸೀತೆ ಇದನ್ನು ಕೇಳಿ ''ನಿನ್ನ ಮಾತು ನನಗೆ ವಿಷ ಸೋಕಿದ ಅಮೃತ ದಂತಿದೆ. ರಾಮನು ನನ್ನನ್ನೇ ಕುರಿತು ಯೋಚಿಸುತ್ತಿರುವುದು ಸಂತೋಷ. ಆದರೆ ದುಃಖದಲ್ಲಿರುವನು ಎನ್ನುವುದು ಅದನ್ನು ಕೆಡಿಸುತ್ತದೆ. ಮನುಷ್ಯನು ವಿಧಿಯನ್ನು ಮೀರುವುದು ಸಾಧ್ಯವಲ್ಲ. ಈ ಶೋಕದಿಂದ ರಾಮನು ಎಂದು ಪಾರಾಗುವನೋ, ರಾಕ್ಷಸರನ್ನು ವಧಿಸಿ ರಾವಣನನ್ನು ಸಂಹರಿಸಿ ಲಂಕೆಯನ್ನು ಬುಡಮುಟ್ಟ ಕಡಿದು ನನ್ನನ್ನು ಎಂದು ಕಾಣುವನೊ? ಬೇಗ ಮಾಡಬೇಕೆಂದು ಅವನಿಗೆ ಹೇಳಬೇಕು. ಈ ವರುಷ ಮುಗಿಯುವ ವರೆಗೆ ಮಾತ್ರ ನಾನು ಜೀವಂತಳಾಗಿರುವೆನು. ರಾವಣನು ನನ್ನನ್ನು ರಾಮನಿಗೆ ಒಪ್ಪಿಸುವಂತಿಲ್ಲ. ಇದನ್ನು ವಿಭೀಷಣನ ಮಗಳು ನನಗೆ ಹೇಳಿವಳು. ರಾಮನು ನನ್ನನ್ನು ಬಿಡಿಸಿಕೊಳ್ಳುತ್ತಾನೆ. ಅವನಿಗೆ ಉತ್ಸಾಹ ವಿದೆ, ಪೌರುಷವಿದೆ; ಕರುಣೆಯಿದೆ, ಕೃತಜ್ಞತೆಯಿದೆ'' ಹೀಗೆ ಮುಂತಾಗಿ ಹೇಳಿದಳು. ಹನುಮಂತನು ಅವಳಿಗೆ ಧೈರ್ಯ ಹೇಳಿದನು. ''ನನ್ನ ಮಾತನ್ನು ಕೇಳಿದೊಡನೆ ರಾಘವನು ಸೈನ್ಯದೊಡನೆ ಇತ್ತ ಬರುವನು. ಅಥವಾ, ತಾಯಿ, ನಾನು ಈಗಲೇ ನಿನ್ನನ್ನು ಈ ಕಷ್ಟದಿಂದ ಬಿಡಿಸುವೆನು. ನೀನು ನನ್ನ ಹೆಗಲಮೇಲೆ ಕುಳಿತುಕೊ. ನಾನು ನಿನ್ನೊಡನೆ ಸಾಗರವನ್ನು ದಾಟುವೆನು. ಅಗ್ನಿ ಇಂದ್ರನಿಗೆ ಹವ್ಯವನ್ನು ಸೇರಿಸುವಂತೆ ನಾನು

ನಿನ್ನನ್ನು ರಾಮನಿಗೆ ಸೇರಿಸುತ್ತೇನೆ. ರಾಮ ಲಕ್ಷ್ಮಣರನ್ನು ನೀನು ಈಗಲೇ ನೋಡಬಹುದು. ಸೂರ್ಯನನ್ನೂ ಚಂದ್ರನನ್ನೂ ಮಾತನಾಡಿಸುವವಳಂತೆ ನೀನು ನಭದಲ್ಲಿ ಹಾರಿ ರಾಮನನ್ನು ಸೇರುವೆ.'' ಹನುಮಂತನ ಅದ್ಭುತವಾದ ಈ ಮಾತನ್ನು ಕೇಳಿ ಸೀತಾದೇವಿ ''ಹನುಮಾನ್, ದಾರಿ ದೂರ. ನೀನು ನನ್ನನ್ನು ಹೊರುವುದು ಸಾಧ್ಯವೆ?'' ಎಂದಳು. ಹನುಮಂತನು ಅದಕ್ಕೆ, ನನ್ನ ಸತ್ವವನ್ನು ದೇವಿ ಕಾಣಳು, ನಾನು ಅಪೇಕ್ಷಿಸಿದಾಗ ಧರಿಸಬಹುದಾದ ರೂಪವನ್ನು ವೈದೇಹಿ ನೋಡಲಿ, ಎಂದು ಯೋಚಿಸಿ ತನ್ನ ಮಹದಾಕಾರವನ್ನು ಧರಿಸಿದನು. ಅದನ್ನು ನೋಡಿ ಸೀತಾದೇವಿ ''ಅಣ್ಣ, ನಿನ್ನ ಸತ್ವವೂ ಬಲವೂ ನನಗೆ ತಿಳಿದವು. ಸಾಮಾನ್ಯನಾದ ಯಾವನು ಇಲ್ಲಿಗೆ ಬರುವುದಕ್ಕೆ ಸಾಧ್ಯ? ನೀನು ನನ್ನನ್ನು ರಾಮನಲ್ಲಿಗೆ ಕರೆದುಕೊಂಡುಹೋಗುವುದು ಅಸಾಧ್ಯವಲ್ಲ. ಆದರೆ ಅದು ಅಯುಕ್ತ. ಆಕಾಶದಲ್ಲಿ ಹೋಗುತ್ತ ನಿನ್ನ ವೇಗದಿಂದ ನಾನು ಪ್ರಜ್ಞೆ ತಪ್ಪಿ ಸಾಗರದಲ್ಲಿ ಬಿದ್ದರೂ ಆಯಿತು. ಹಾಗಾಗುವುದಿಲ್ಲವೆಂದರೂ ಹೆಂಡತಿಯನ್ನು ಹೊತ್ತುತಂದ ನಿನ್ನ ವಿಷಯದಲ್ಲಾದರೂ ಸಂದೇಹ ಹುಟ್ಟಿದರೂ ಆಯಿತು. ರಾಕ್ಷಸರು ನಿನ್ನೊಡನೆ ಯುದ್ಧಮಾಡುವರು. ಅದರಲ್ಲಿ ನಮಗೆ ಜಯ ದೊರಕುವುದೋ ಇಲ್ಲವೋ! ಅಲ್ಲದೆ ನೀನೇ ರಾಕ್ಷಸರನ್ನು ಜಯಿಸಿದೆಯೆನ್ನು, ರಾಮನು ಅವರನ್ನು ದಂಡಿಸಿ ಪಡೆಯಬೇಕಾದ ಕೀರ್ತಿ ನಿನ್ನಿಂದ ತಪ್ಪುತ್ತದೆ. ಮೇಲಾಗಿ ನಾನು ರಾಮನನ್ನು ಹೊರತು ಬೇರೆ ಪುರುಷನ ಶರೀರವನ್ನು ಮುಟ್ಟುವುದಿಲ್ಲ. ನಾನು ರಾವಣನ ಶರೀರವನ್ನು ಮುಟ್ಟಿದೆನು ನಿಜ. ಆದರೆ ಆಗ ನಾನು ಅವನ ಕೈಗೆ ಸಿಕ್ಕಿಕೊಂಡಿದ್ದೆನು; ವಿವಶಳಾಗಿದ್ದೆನು. ರಾಮನು ಇಲ್ಲಿ ಬಂದು ಬಂಧುಸಮೇತನಾದ ರಾವಣನನ್ನು ಕೊಂದು ನನ್ನನ್ನು ಇಲ್ಲಿಂದ ಕರೆದುಕೊಂಡುಹೋಗುವುದೇ ಅವನ ಗೌರವಕ್ಕೆ ತಕ್ಕದು'' ಎಂದಳು. ಹನುಮಂತನು ''ದೇವಿ, ನಿನ್ನ ಮಾತು ನ್ಯಾಯವಾಗಿದೆ; ಸ್ತ್ರೀಯ ಸ್ವಭಾವಕ್ಕೆ ಸಾಧ್ವಿಯ ವಿನಯಕ್ಕೆ ಅನುಗುಣವಾಗಿದೆ. ಈ ಮಾತನ್ನೆಲ್ಲ ನಾನು ರಾಮನಲ್ಲಿ ಅರಿಕೆಮಾಡುತ್ತೇನೆ. ನಾನೇ ಕರೆದುಕೊಂಡುಹೋಗುತ್ತೇನೆಂದು ಹೇಳಿದ ಮಾತನ್ನು ಗುರುಸ್ನೇಹದಿಂದ, ಭಕ್ತಿಯಿಂದ, ಹೊರತು

ಮತ್ತೆ ಯಾವ ಕಾರಣದಿಂದಲೂ ನಾನು ಹೇಳಲಿಲ್ಲ. ನೀನು ನನ್ನೊಡನೆ ಬರುವುದಿಲ್ಲವಾದಕಾರಣ ರಾಮನಿಗೆ ಕೊಡುವುದಕ್ಕೆ ಒಂದು ಅಭಿಜ್ಞಾನ ವನ್ನು ಕೊಡು" ಎಂದನು. ಸೀತಾದೇವಿ ತನ್ನ ಚೂಡಾಮಣಿಯನ್ನು ಅವನ ಕೈಗೆ ಕೊಟ್ಟಳು. "ನಾನು ಎರಡು ತಿಂಗಳು ಮಾತ್ರ ಜೀವಿಸಿರು ತ್ತೇನೆಂದು ರಾಮನಿಗೆ ಹೇಳು. ಯಾರು ಹತ್ತಿರ ಇರಲಾಗಿ ರಾಮನು ತಂದೆಯನ್ನು ನೆನೆಯುವುದಿಲ್ಲವೊ ಆ ಲಕ್ಷ್ಮಣನನ್ನು ನಾನು ಕುಶಲಪ್ರಶ್ನೆ ಕೇಳಿದೆನೆಂದು ಹೇಳು. ಈ ಚೂಡಾಮಣಿಯನ್ನು ರಾಘವನ ಕೈಗೆ ಕೊಡು" ಎಂದಳು. "ಮತ್ತೆ ಮತ್ತೆ ರಾಮಲಕ್ಷ್ಮಣರ ಕುಶಲವನ್ನು ಕೇಳಿದೆನೆನ್ನು. ಸುಗ್ರೀವನನ್ನೂ ಅವನ ಅಮಾತ್ಯರನ್ನೂ ವಿಚಾರಿಸಿದೆ ನೆಂದು ಹೇಳು. ರಾಮನು ಬಂದು ನನ್ನನ್ನು ಬಿಡಿಸಿಕೊಂಡುಹೋಗು ವುದಕ್ಕೆ ಏನೇನು ಹೇಳಬೇಕೋ ಅದನ್ನು ನೀನು ಅವನಿಗೆ ಹೇಳಬೇಕು" ಎಂದಳು. ಹನುಮಂತನ ಮೂಲಕವಾಗಿ ರಾಮನ ಮಿತ್ರರೆಂಬ ಕಾರಣ ದಿಂದ ಸೀತಾದೇವಿಗೆ ಸುಗ್ರೀವನೂ ಅವನ ಅಮಾತ್ಯರೂ ಕುಶಲಪ್ರಶ್ನೆಯ ಪರಿಧಿಯಲ್ಲಿ ಸೇರಿದರು. ರಾಮನು ಬರುವಂತೆ ಮಾಡುವುದು ತನ್ನ ಕಾರ್ಯವೆಂದ ದೇವಿಗೆ ಹನುಮಂತನು ರಾಮನು ಖಂಡಿತವಾಗಿ ಬರುತ್ತಾ ನೆಂದು ಮತ್ತೆ ಧೈರ್ಯ ಹೇಳಿದನು. ಇನ್ನು ಹೊರಡಲು ಸಿದ್ಧನಾದ ಹನುಮಂತನನ್ನು ಪುನಃಪುನಃ ನೋಡಿ ಸೀತಾದೇವಿ "ಅಣ್ಣ, ನೀನು ಇಂದು ಇಲ್ಲಿಯೇ ಇದ್ದು ನಾಳೆ ಹೊರಡು. ಅಲ್ಪಭಾಗ್ಯೆಯಾದ ನನ್ನ ಈ ಶೋಕಕ್ಕೆ ಮುಹೂರ್ತಕಾಲ ಬಿಡುವಿರಲಿ. ನೀನು ಹೊರಟಮೇಲೆ ಮತ್ತೆ ಬರುವ ವಿಷಯದಲ್ಲಿಯೂ ನಾನು ಜೀವಿಸಿರುವ ವಿಷಯದಲ್ಲಿಯೂ ನನಗೆ ಸಂದೇಹವೆ. ರಾಮನು ದುಷ್ಪಾರವಾದ ಮಹೋದಧಿಯನ್ನು ಹೇಗೆತಾನೆ ಸೇನೆಯೊಡನೆ ದಾಟುತ್ತಾನೆ? ಹೇಗೊ ಅವನು ಇಲ್ಲಿಗೆ ಬರುವಂತೆ ಮಾಡುವುದು ನಿನ್ನ ಕೆಲಸ" ಎಂದಳು. ಹನುಮಂತನು "ದೇವಿ, ಹರಿ ಋಕ್ಷ ಸೈನ್ಯಗಳ ಈಶ್ವರನಾದ ಸುಗ್ರೀವನು ಈ ಕಾರ್ಯ ದಲ್ಲಿ ಮನಸ್ಸುಮಾಡಿದ್ದಾನೆ. ಅವನ ವಾನರವೀರರು ಸತ್ವವಂತರು, ವಿಕ್ರಮಸಂಪನ್ನರು. ಅಲ್ಲಿ ನನಗೆ ಜೊತೆಯವರು, ನನಗೆ ಮೀರಿದವರು, ಇದ್ದಾರೆ; ನನಗೆ ಕಡಿಮೆಯಾದವರು ಸುಗ್ರೀವನ ಸನ್ನಿಧಿಯಲ್ಲಿ ಒಬ್ಬರೂ

ಇಲ್ಲ. ನಾನೇ ಇಲ್ಲಿಗೆ ಬಂದೆನೆಂದಮೇಲೆ ಮಿಕ್ಕವರಿಗೆ ಏನು ಕಷ್ಟ? ನಮ್ಮ ಸೇನೆಯೊಡನೆ ಲಂಕೆಗೆ ಬಂದು ರಾವಣನನ್ನು ಕೊಂದು ರಾಮಚಂದ್ರನು ನಿನ್ನನ್ನು ಕರೆದುಕೊಂಡು ಅಯೋಧ್ಯೆಗೆ ಹೋಗುವನು. ರಾಮನಿಗೆ ಮಿಾರಿದವರು ಯಾರು? ಲಕ್ಷ್ಮಣನಿಗೆ ಸಮಾನರು ಯಾರು? ಅವರು ಸೇರಿದರೆ ಗಾಳಿ ಕಿಚ್ಚು ಸೇರಿದಂತೆ. ನೀನು ಇಲ್ಲಿ ಬಹು ದಿವಸ ಇರುವುದಿಲ್ಲ. ನಿನ್ನ ಪ್ರಿಯನು ಬರುವುದು ಸಾವಕಾಶವಾಗುವುದಿಲ್ಲ. ನಾನು ಹೋಗಿ ಅವನನ್ನು ಕಾಣುವವರೆಗೆ ಸಹಿಸಿಕೊ'' ಎಂದನು.

ಅಗ್ನಿಪ್ರವೇಶದ ಕಥೆ

ಸೀತಾದೇವಿಯ ಜೀವನದ ಮುಖ್ಯ ಚಿತ್ರ ಇನ್ನೊಂದು ಯುದ್ಧದಲ್ಲಿ ಜಯವಾದನಂತರ ರಾಮನು ಪತ್ನಿಗೆ ಮಾಡಿದ ಅವಮತಿಯ ಸಂದರ್ಭದ್ದು. ರಾವಣನ ಉತ್ತರಕ್ರಿಯಾದಿಗಳು ಮುಗಿದ ಒಡನೆ ವಿಭೀಷಣನಿಗೆ ಪಟ್ಟಾಭಿಷೇಕವಾಯಿತು. ಇದಾದಮೇಲೆ ರಾಮನು ಹನುಮಂತನನ್ನು ಕುರಿತು "ಹನುಮಾನ್, ಮಹಾರಾಜನಾದ ವಿಭೀಷಣನ ಅಪ್ಪಣೆಯಿಂದ ಲಂಕೆಯೊಳಕ್ಕೆ ಹೋಗಿ ರಾವಣಗೃಹವನ್ನು ಪ್ರವೇಶಿಸಿ ವಿಜಯದ ಸಂತೋಷವಾರ್ತೆಯನ್ನು ಸೀತಾದೇವಿಗೆ ಹೇಳಿ, ಸುಗ್ರೀವ ಲಕ್ಷ್ಮಣರೊಡನೆ ನಾನು ಸುಖವಾಗಿದ್ದೇನೆಂದೂ ರಾವಣನು ನನ್ನಿಂದ ಹತನಾಗಿರುವನೆಂದೂ ಪ್ರಿಯವಾರ್ತೆಯನ್ನು ತಿಳಿಸಿ, ಆಕೆಯ ಉತ್ತರವನ್ನು ತೆಗೆದುಕೊಂಡುಬಾ,'' ಎಂದನು. ರಾಮನು ಇನ್ನು ಏನೇನು ಉತ್ತರಗಳು ಸಾಧ್ಯವೆಂದು ತಿಳಿದಿದ್ದನೊ ನಮಗೆ ತೋರುವುದಿಲ್ಲ. ಇವನು ಬಂದಾನೆ ತನ್ನನ್ನು ಬಿಡಿಸಿಕೊಂಡಾನೆ ಎಂದು ಸೀತಾದೇವಿ ಕಾದಿದ್ದಳು. ಇದು ರಾಮನಿಗೆ ತಿಳಿದಿತ್ತು; ಆದರೂ ವಿಜಯದ ವಾರ್ತೆಯನ್ನು ಹೇಳಿ ಕಳುಹಿಸಿ ಅವಳಿಂದ ಸಂದೇಶವನ್ನು ತರಿಸುವುದು ಇವನಿಗೆ ಆವಶ್ಯಕವಾಯಿತು. ಹನುಮಂತನು ಒಡೆಯನ ಅಪ್ಪಣೆಯ ಪ್ರಕಾರ ಸೀತೆಯ ಬಳಿಗೆ ಹೋದನು; ರಾಮನ ಮಾತನ್ನು ತಿಳಿಸಿದನು; "ಈಗ ಲಂಕೆ ವಿಭೀಷಣನಿಗೆ ಸೇರಿದ್ದು. ನೀನು ಸ್ವಗೃಹದಲ್ಲೇ ಇದ್ದಂತೆ ಧೈರ್ಯವಾಗಿರಬಹುದು. ವಿಭೀಷಣನು ಈಗ ನಿನ್ನ ದರ್ಶನಕ್ಕಾಗಿ ಬರುವನು'' ಎಂದು ಹೇಳಿದನು. ಸೀತೆ ಸಂತೋಷಭರದಿಂದ ಮರುಮಾತನ್ನಾಡದೆಹೋದಳು.

ಹನುಮಂತನು "ದೇವಿ, ಏನು ಯೋಚನೆಮಾಡುತ್ತ ಇದೀಯೆ? ಏಕೆ ನನಗೆ ಉತ್ತರಕೊಡದೆ ಇರುವೆ" ಎಂದನು. ಸೀತೆ ಅವನಿಗೆ "ನನ್ನ ಪತಿಯ ವಿಜಯವನ್ನು ಕುರಿತ ಶುಭವಾರ್ತೆಯನ್ನು ಕೇಳಿ ಆನಂದ ಪರವಶಳಾಗಿ ನಾನು ಮಾತನಾಡದೆ ನಿಂತೆನು. ಇಂಥ ಮಾತನ್ನು ತಂದ ನಿನಗೆ ಪ್ರತಿಯಾಗಿ ಏನನ್ನು ಹೇಳುವುದು ಎಂದು ನನಗೆ ಕಾಣದೆ ಇದೆ" ಎಂದಳು. ಹನುಮಂತನು "ದೇವಿ, ನಿನ್ನ ಈ ಮಾತೇ ನನಗೆ ಎಲ್ಲ ಬಹುಮಾನಕ್ಕೆ ಸಮ" ಎಂದನು. ಸೀತಾದೇವಿ "ನಿನ್ನ ಮಾತು ಚೆನ್ನಾಗಿದೆ, ಮಧುರವಾಗಿದೆ. ಇಂಥ ಮಾತನ್ನು ಹೇಳಬಲ್ಲವನು ನೀನೊಬ್ಬನೆ. ಬಲ, ಶೌರ್ಯ, ಶ್ರುತ, ಸತ್ವ, ವಿಕ್ರಮ, ದಾಕ್ಷ್ಯ, ಕ್ಷಮೆ, ಧೃತಿ, ಹೀಗೆಯೇ ಅನೇಕ ಗುಣಗಳು ನಿನ್ನಲ್ಲಿ ಶೋಭಿಸುತ್ತವೆ" ಎಂದು ಅವನನ್ನು ಪ್ರಶಂಸಿಸಿದಳು. ಹನುಮಂತನು "ತಾಯಿ, ಈ ರಾಕ್ಷಸಿಯರು ನಿನಗೆ ಬಹಳ ತೊಂದರೆಮಾಡಿದ್ದಾರೆ. ಇವರನ್ನು ಶಿಕ್ಷಿಸುವೆನು" ಎಂದನು. ಸೀತಾದೇವಿ "ಅವರು ಅವರ ಒಡೆಯರ ಆಜ್ಞೆಯಂತೆ ನಡೆದುಕೊಂಡರು. ಇವರಲ್ಲಿ ಕೋಪವಮಾಡುವರುಂಟೆ? ನನ್ನ ಭಾಗ್ಯ ಸರಿಯಾಗಿಲ್ಲದ್ದರಿಂದ ಪೂರ್ವದ ದೋಷದಿಂದ ನನಗೆ ಕಷ್ಟ ಪ್ರಾಪ್ತವಾಯಿತು. ದೋಷಿಗಳಲ್ಲಾಗಲಿ ನಿರ್ದೋಷಿಗಳಲ್ಲಾಗಲಿ ಆರ್ಯರಾದವರು ಕರುಣೆಯನ್ನೆ ತೋರಬೇಕು. ತಪ್ಪುಮಾಡದವರು ಯಾರೂ ಇಲ್ಲ" ಎಂದಳು. ಹನುಮಂತನು "ದೇವಿ, ಇದು ನಿನಗೆ ತಕ್ಕ ಮಾತು. ರಾಮನ ಮಾತಿಗೆ ಉತ್ತರವನ್ನು ಹೇಳು. ನಾನು ಅವನಲ್ಲಿಗೆ ಹೋಗುತ್ತೇನೆ" ಎಂದನು. ಸೀತೆ "ನಾನು ಪತಿಯನ್ನು ನೋಡಲಪೇಕ್ಷಿಸುತ್ತೇನೆ" ಎಂದಳು. ಹನುಮಂತನು "ನೋಡುವೆ ತಾಯಿ" ಎಂದು ಹೇಳಿ ರಾಮನ ಬಳಿಗೆ ಹೋದನು; ದೇವಿಯ ಈ ಮಾತನ್ನು ತಿಳಿಸಿದನು. ರಾಮನು ಕಣ್ಣಿನಲ್ಲಿ ನೀರು ತುಂಬಲು ಒಡನೆ ಧ್ಯಾನದಲ್ಲಿ ನಿಂತನು; ಬಿಸಿಯಾಗಿ ನಿಟ್ಟುಸಿರು ಬಿಟ್ಟು ಭೂಮಿಯನ್ನು ನೋಡುತ್ತ ವಿಭೀಷಣನನ್ನು ಕುರಿತು, "ದೇವಿಗೆ ಶಿರಸ್ನಾನಮಾಡಿಸಿ ಅಂಗರಾಗ ಆಭರಣಗಳಿಂದ ಅಲಂಕರಿಸಿ ಆಕೆಯನ್ನು ಇಲ್ಲಿಗೆ ಕರೆದುತಾ" ಎಂದನು. ವಿಭೀಷಣನು ಹೋಗಿ ದೇವಿಗೆ ಈ ಮಾತನ್ನು ತಿಳಿಸಿದನು. ಸೀತಾದೇವಿ "ನಾನು ಸ್ನಾನಮಾಡದೆ ಪತಿ

ಯನ್ನು ನೋಡಲಪೇಕ್ಷಿಸುತ್ತೇನೆ'' ಎಂದಳು. ''ರಾಜನಾದ ನಿನ್ನ ಪತಿ ರಾಮನು ಹೇಳಿದಂತೆ ಮಾಡುವುದು ತಕ್ಕದು'' ಎಂದು ವಿಭೀಷಣನು ಅರಿಕೆಮಾಡಿದನು. ಸೀತಾದೇವಿ ಹಾಗೆಯೇ ಆಗಲೆಂದಳು. ವಿಭೀಷಣನ ಅರಮನೆಯ ಸ್ತ್ರೀಯರಿಂದ ಸೇವೆಯನ್ನು ಪಡೆದು ಅಲಂಕೃತಳಾದ ದೇವಿಯನ್ನು ಆ ರಾಕ್ಷಸರಾಜನು ಒಂದು ಶಿಬಿಕೆಯಲ್ಲಿ ಕೂಡಿಸಿಕೊಂಡು ಸೇನೆಯ ಕಾವಲೊಡನೆ ರಾಮನ ಬಳಿಗೆ ಕರೆತಂದನು; ರಾಮನ ಬಳಿಯನ್ನು ಸೇರಿ, ಸೀತಾದೇವಿ ಬಂದಿರುವಳೆಂದು ತಿಳಿಸಿದನು. ಬಹುಕಾಲ ರಾಕ್ಷಸನ ಮಂದಿರದಲ್ಲಿ ಇದ್ದು ಬಂದ ಹೆಂಡತಿಯ ಮಾತನ್ನು ಕೇಳಿ ರಾಮನಿಗೆ ಹರ್ಷ, ದೈನ್ಯ, ರೋಷಗಳು ಉಂಟಾದುವು; ಅವನು ವಿಭೀಷಣನಿಗೆ ''ವೈದೇಹಿ ನನ್ನ ಹತ್ತಿರಕ್ಕೆ ಬರಲಿ'' ಎಂದನು. ವಿಭೀಷಣನ ಆಜ್ಞೆಯ ಪ್ರಕಾರ ಅವನ ಸೇವಕರು ಸಮೀಪದಲ್ಲಿದ್ದ ಜನರನ್ನು ದೂರ ಹೋಗಿ ಎಂದು ಅಟ್ಟುವುದಕ್ಕೆ ಮೊದಲುಮಾಡಿದರು. ಇದರಿಂದ ಗದ್ದಲವಾಯಿತು. ರಾಮನು ಇದನ್ನು ನೋಡಿ ಜನರ ವಿಷಯದಲ್ಲಿ ದಾಕ್ಷಿಣ್ಯಗೊಂಡು ನೋಟದಿಂದ ಸುಡುವಂತೆ ಕೋಪದ ದೃಷ್ಟಿಯಿಂದ ನೋಡುತ್ತ ವಿಭೀಷಣನನ್ನು ಕುರಿತು ''ಇದೇಕೆ ನನ್ನನ್ನು ಲಕ್ಷ್ಯಮಾಡದೆ ನೀನು ಈ ಜನಕ್ಕೆ ತೊಂದರೆ ಕೊಡುತ್ತೀಯೆ? ಈ ನಿನ್ನ ಏರ್ಪಾಡನ್ನು ನಿಲ್ಲಿಸು. ಇವರೆಲ್ಲ ನನ್ನವರು. ಸ್ತ್ರೀಯರಿಗೆ ಆವರಣವೆನ್ನುವುದು ಮನೆ ಮುಸುಕು ಗೋಡೆಯಿಂದ ಬರುವುದಿಲ್ಲ; ಈ ರಾಜಸತ್ಕಾರದಿಂದ ಬರುವುದಿಲ್ಲ. ಅವರಿಗೆ ಅವರ ನಡತೆಯೇ ಆವರಣವಾಗಿರಬೇಕು. ಅಲ್ಲದೆ ವ್ಯಸನ ಯುದ್ಧ ಮುಂತಾದ ಸಂದರ್ಭಗಳಲ್ಲಿ ಪರರು ನೋಡುವುದರಿಂದ ಸ್ತ್ರೀಗೆ ದೋಷವಿಲ್ಲ. ಆದ್ದರಿಂದ ಈಗ ಸೀತೆ ಎಲ್ಲರೆದುರಿಗೆ ಬರಬಹುದು. ಅದರಲ್ಲಿಯೂ ನಾನೇ ಇಲ್ಲಿರುವುದರಿಂದ ಇದರಲ್ಲಿ ತಪ್ಪು ಇಲ್ಲವೇ ಇಲ್ಲ. ಸೀತೆಯನ್ನು ಕರೆದುತಾ, ನಾನು ಸ್ನೇಹಿತರೊಡನೆ ಇರುವಂತೆಯೇ ಸೀತೆ ನನ್ನನ್ನು ನೋಡಲಿ'' ಎಂದನು. ವಿಭೀಷಣನಿಗೆ ರಾಮನ ಈ ಮಾತಿನ ಅಭಿಪ್ರಾಯ ಸ್ಪಷ್ಟವಾಗಲಿಲ್ಲ. ಲಕ್ಷ್ಮಣ ಸುಗ್ರೀವ ಹನುಮಂತರು ರಾಮನಿಗೆ ಸೀತೆ ಬೇಕಾಗಿಲ್ಲವೆಂದು ಊಹಿಸಿ ಬಹಳ ವ್ಯಥಿತರಾದರು. ಸೀತಾದೇವಿ ಲಜ್ಜೆಯಿಂದ ತನ್ನಲ್ಲಿ ತಾನೇ ಅಡಗಿಹೋಗುತ್ತ ವಿಭೀಷಣನು ಹಿಂದೆ

ನಡೆಯಲು ರಾಮನ ಬಳಿಗೆ ಬಂದಳು. ಗುಂಪಿನ ಮಧ್ಯೆ ಸಂಕೋಚದಿಂದ ಮುಖವನ್ನು ವಸ್ತ್ರದಿಂದ ಮರೆಯಿಸಿಕೊಂಡು ಅಳುತ್ತ ರಾಮನನ್ನು ಕುರಿತು ಆರ್ಯಪುತ್ರ ಎಂದು ಉಸುರಿ ಹೆಚ್ಚು ಮಾತನಾಡಲಾರದೆ ಹೋದಳು. ರಾಮನು ಮಾತನಾಡಲಾರಂಭಿಸಿದನು. "ಭದ್ರೇ, ಶತ್ರುವನ್ನು ಜಯಿಸಿ ನಿನ್ನನ್ನು ನಾನು ಬಿಡಿಸಿದೆನು; ನನ್ನ ಅಪಮಾನವೇನಿತ್ತೊ ಅದನ್ನು ತೀರಿಸಿಕೊಂಡೆನು. ನನ್ನ ಶೌರ್ಯ ಇದರಿಂದ ವ್ಯಕ್ತವಾಯಿತು; ಇಷ್ಟರಿಂದ ನನ್ನ ಶ್ರಮ ಸಫಲವಾಯಿತು. ಹಾಗೆಯೇ ಹನುಮಂತನ ಎಲ್ಲ ಕಾರ್ಯಕ್ಕೂ ಸುಗ್ರೀವನ ಮತ್ತು ಅವನ ಸೇನೆಯ ಎಲ್ಲ ಶ್ರಮಕ್ಕೂ ಇದೇ ಫಲ." ಇವನ ಈ ಒಕ್ಕಣೆಯನ್ನು ಕೇಳುತ್ತ ಸೀತೆಗೆ ಕಣ್ಣಲ್ಲಿ ನೀರು ತುಂಬಿತು. ರಾಮನು ಇವಳ ಕಣ್ಣೀರನ್ನು ನೋಡಿ ಮತ್ತಷ್ಟು ರೋಷಗೊಂಡು "ನಾನು ಇದನ್ನೆಲ್ಲ ಮಾಡಿದುದು ನಿನ್ನ ಸಲುವಾಗಿ ಅಲ್ಲ. ನನ್ನ ಹೆಸರು ಕೆಡದಿರಲೆಂದು ಮಾಡಿದೆನು. ನಿನ್ನ ನಡತೆಯ ವಿಷಯದಲ್ಲಿ ಸಂದೇಹವಿರುವಲ್ಲಿ ನಿನ್ನನ್ನು ನೋಡುವುದು ನನ್ನ ಕಣ್ಣಿಗೆ ಯಾತನೆಯನ್ನು ಮಾಡುತ್ತಿದೆ. ನಿನ್ನ ಇಷ್ಟವಿದ್ದಲ್ಲಿಗೆ ಹೋಗು. ರಾವಣನ ತೊಡೆಯಿಂದ ಕೆಳಗೆ ಬಂದಿರುವಳೂ ಅವನ ದುಷ್ಟ ದೃಷ್ಟಿಯಿಂದ ದೃಷ್ಟಳೂ ಆದ ನಿನ್ನನ್ನು ಪುನಃ ಹೇಗೆ ಸ್ವೀಕರಿಸಲಿ? ನನಗೆ ನಿನ್ನಲ್ಲಿ ಅಪೇಕ್ಷೆಯಿಲ್ಲ. ನಿನ್ನ ಇಷ್ಟಬಂದ ಕಡೆ ಹೋಗು. ವಿಭೀಷಣನಲ್ಲಿಯೋ ಸುಗ್ರೀವನಲ್ಲಿಯೋ ಭರತನಲ್ಲಿಯೋ ನಿನಗೆ ಎಲ್ಲಿ ಸಮ್ಮತವೋ ಅಲ್ಲಿ ಸೇರು. ಮನೋಹರ ದಿವ್ಯರೂಪವುಳ್ಳ ನಿನ್ನನ್ನು ಗೃಹದಲ್ಲಿ ಇಷ್ಟು ಕಾಲ ನೋಡುತ್ತ ರಾವಣನು ಸುಮ್ಮನೆ ಇದ್ದಿರಲಾರನಲ್ಲ" ಎಂದನು. ರಾಮನ ಈ ಕಠಿನವಾದ ಮಾತನ್ನು ಕೇಳಿ ಸೀತೆ ಅತಿಯಾಗಿ ವ್ಯಥೆಗೊಂಡಳು, ನಾಚಿಕೆಪಟ್ಟಳು, ತನ್ನಲ್ಲಿ ತಾನು ಅಡಗಿಹೋಗುವಂತೆ ಸಂಕೋಚಪಟ್ಟಳು. ಸುರಿದುಬರುವ ಕಣ್ಣೀರನ್ನು ಒರಸಿಕೊಂಡು ಅವಳು ರಾಮನನ್ನು ಕುರಿತು "ವೀರನಾದ ನೀನು ಏಕೆ ಈ ಶ್ರೋತ್ರದಾರುಣವಾದ ರೂಕ್ಷವಾದ ನಮಗೆ ತಕ್ಕದಲ್ಲದ ಇಂಥ ಮಾತನ್ನು ಒರಟರು ಒರಟರಿಗೆ ಹೇಳುವಂತೆ ನನಗೆ ಹೇಳುತ್ತಿದೀಯೆ? ನೀನು ನನ್ನನ್ನು ಏನೆಂದು ತಿಳಿದಿದೀಯೋ ಅದಲ್ಲ ನಾನು. ನನ್ನ ನಡತೆಯಿಂದ ಆಣೆ

ಮಾಡುತ್ತೇನೆ. ನನ್ನಲ್ಲಿ ನಂಬಿಕೆಯನ್ನಿಡು. ಕೆಲ ಹೆಂಗಸರ ನಡತೆಯಿಂದ ನೀನು ಸ್ತ್ರೀ ಜಾತಿಯಲ್ಲಿಯೇ ಸಂದೇಹಪಡುತ್ತಿದೀಯೆ. ನೀನು ನನ್ನ ವಿಷಯವನ್ನು ಬಲ್ಲೆಯಾದರೆ ಈ ಸಂದೇಹವನ್ನು ಬಿಡು. ಪರಪುರುಷನು ನನ್ನ ದೇಹವನ್ನು ಮುಟ್ಟಿದ್ದು ಎನ್ನುವುದೇನಿದೆ ಅದು ನನ್ನನ್ನು ಮೀರಿ ಆದದು. ನನಗೆ ಅಲ್ಲಿ ಅಪೇಕ್ಷೆಯಿರಲಿಲ್ಲ. ಆ ತಪ್ಪು ನನ್ನದಲ್ಲ ನನ್ನ ಅದೃಷ್ಟದ್ದು. ನನ್ನ ಅಧೀನವಾದದು ಮನಸ್ಸು, ಅದು ನಿನ್ನಲ್ಲಿಯೇ ಇತ್ತು. ಮೆಯ್ ಹಾಗೆ ಅಧೀನವಲ್ಲ. ಅದಕ್ಕೆ ನಾನೇನು ಮಾಡಲಿ? ಮೊದಲಿಂದ ಜೊತೆಗೆ ಬೆಳೆದದರಿಂದ ನಡೆದದರಿಂದ ನಿನಗೆ ನನ್ನ ಸ್ವಭಾವ ತಿಳಿದಿರಬೇಕು. ಹಾಗೆ ತಿಳಿಯದೆ ಇದ್ದರೆ ನಾನು ಕೆಟ್ಟೆನು. ನಿನಗೆ ನನ್ನ ವಿಷಯದಲ್ಲಿ ಸಂದೇಹವಿದ್ದರೆ ಹನುಮಂತನನ್ನು ಇಲ್ಲಿಗೆ ಕಳುಹಿಸಬೇಕಾದದೇನಿತ್ತು? ಆಗಲೇ ನೀನು ನನ್ನನ್ನು ಬಿಡಬೇಕಾಗಿತ್ತು. ಆಗಲೇ ನಾನು ಜೀವವನ್ನು ಬಿಡುತ್ತಿದ್ದೆನು. ನೀನು ಈ ವೃಥಾಶ್ರಮವನ್ನು ತೆಗೆದುಕೊಳ್ಳಬೇಕಾಗಿರಲಿಲ್ಲ. ಈ ವೃಥಾಶ್ರಮವನ್ನು ಸುಹೃಜ್ಜನಕ್ಕೆ ಕೊಡಬೇಕಾಗಿರಲಿಲ್ಲ. ನರಶಾರ್ದೂಲನಾದ ನೀನು ಕೋಪವನ್ನೇ ಹಿಡಿದೆ. ಪುರುಷನು ಸ್ತ್ರೀತ್ವವನ್ನು ಲಘುವಾಗಿಯೇ ಗಣಿಸುವನು. ನಡತೆವಂತನಾದ ನೀನು ನನ್ನ ನಡತೆಯನ್ನು ಎಣಿಸಲಿಲ್ಲ. ಬಾಲ್ಯದಲ್ಲಿ ಹಿಡಿದ ಬಾಲೆಯ ಕೈ ಎನ್ನುವುದು ನಿನಗೆ ಪ್ರಮಾಣವಲ್ಲದೆಹೋಯಿತು. ನನ್ನ ಭಕ್ತಿ ಶೀಲ ಎಲ್ಲವನ್ನೂ ನೀನು ಹಿಂದಕ್ಕೆ ಎಸೆದೆ" ಎಂದಳು. ಹೀಗೆ ಹೇಳಿ ಬಾಷ್ಪಗದ್ಗದಕಂಠಳಾಗಿ ಅಲ್ಲಿಯೇ ದೈನ್ಯದಿಂದ ಚಿಂತೆಮಾಡುತ್ತ ನಿಂತಿದ್ದ ಲಕ್ಷ್ಮಣನನ್ನು ಕುರಿತು "ಸೌಮಿತ್ರಿ, ನನಗೆ ಒಂದು ಚಿತೆಯನ್ನು ಮಾಡು. ನನ್ನ ಈ ವ್ಯಸನಕ್ಕೆ ಅದೇ ಔಷಧ. ಮಿಥ್ಯಾಪವಾದದಿಂದ ನೊಂದು ಜೀವಿಸಿರುವುದು ನನಗೆ ಇಷ್ಟವಿಲ್ಲ. ನನ್ನಲ್ಲಿ ಪ್ರೀತಿಯಿಲ್ಲದ ಪತಿಯಿಂದ ಜನದ ಮಧ್ಯೆ ತ್ಯಕ್ತಳಾದ ನನಗೆ ಸಹನೆ ದಾರಿಯಲ್ಲ, ನಾನು ಅಗ್ನಿಯನ್ನು ಪ್ರವೇಶಿಸುತ್ತೇನೆ" ಎಂದಳು. ಲಕ್ಷ್ಮಣನು ರಾಮನ ಮುಖವನ್ನು ನೋಡಿದನು; ಅಣ್ಣನ ರೀತಿಯಿಂದ ಸೀತೆ ಅಗ್ನಿಯನ್ನು ಹೊಗುವುದು ಅವನಿಗೆ ಸಮ್ಮತವೆಂದು ಗ್ರಹಿಸಿದನು; ಒಂದು ಚಿತೆಯನ್ನು ಮಾಡಿದನು. ಆಗ ಸೀತೆ ಅಧೋಮುಖಳಾಗಿ ಮೆಲ್ಲಗೆ

ರಾಮನಿಗೆ ಪ್ರದಕ್ಷಿಣೆಮಾಡಿ ಅಗ್ನಿಯ ಸಮೀಪವನ್ನು ಸೇರಿ ಬ್ರಾಹ್ಮಣರಿಗೆ ದೇವತೆಗಳಿಗೆ ಪ್ರಣಾಮ ಮಾಡಿ ಬದ್ಧಾಂಜಲಿಪುಟಳಾಗಿ ಹೀಗೆಂದಳು: "ನನ್ನ ಮನಸ್ಸು ಯಾವ ಹೊತ್ತಿನಲ್ಲಾಗಲಿ ರಾಘವನನ್ನು ಬಿಟ್ಟು ಚಲಿಸಲಿಲ್ಲವಾದಕಾರಣ ಪಾವನಕರನಾದ ಅಗ್ನಿ ನನ್ನನ್ನು ರಕ್ಷಿಸಿ ಸಾಕ್ಷಿಯಾಗಲಿ. ರಾಮನು ದುಷ್ಟಳೆಂದು ತಿಳಿದಿರುವ ನಾನು ಶುದ್ಧ ಚಾರಿತ್ರಳಾದ ಕಾರಣ ಪಾವನಕರನಾದ ಅಗ್ನಿ ನನ್ನನ್ನು ಕಾಪಾಡಿ ಸಾಕ್ಷಿಯಾಗಲಿ. ಕರ್ಮದಿಂದ, ಮನಸ್ಸಿನಿಂದ, ಮಾತಿನಿಂದ ನಾನು ರಾಘವನನ್ನು ಹೇಗೆ ಅತಿಚರಿಸದೆ ಇದ್ದಿದೇನೋ ಹಾಗೆ ನನ್ನನ್ನು ಪಾವಕನು ಕಾಪಾಡಲಿ. ಹಾಗೆಯೇ ಆದಿತ್ಯನೂ, ವಾಯು, ದಿಶೆಗಳು, ಚಂದ್ರನು, ಹಗಲು ರಾತ್ರಿ, ಸಂಜೆ ಭೂಮಿ, ಇತರ ತತ್ವಗಳು, ನಾನು ಒಳ್ಳೆಯ ನಡತೆಯವಳೆಂದು ಬಲ್ಲ ಎಲ್ಲವೂ ನನ್ನನ್ನು ಕಾಪಾಡಲಿ." ಹೀಗೆಂದು ಸೀತಾದೇವಿ ಅಗ್ನಿಯನ್ನು ಪ್ರದಕ್ಷಿಣೆಮಾಡಿ ಉರಿಯೊಳಕ್ಕೆ ಹೊಕ್ಕಳು. ಇದನ್ನು ನೋಡುತ್ತಿದ್ದವರು ಭಯದಿಂದ ನಡುಗಿದರು. ಪಾವನವಾದ ಆಜ್ಯಾಹುತಿಯಂತೆ ಅಗ್ನಿಯನ್ನು ಹೊಕ್ಕ ಸೀತೆಯನ್ನು ನೋಡಿ ಅಲ್ಲಿದ್ದ ಸ್ತ್ರೀಯರೆಲ್ಲ ಅತ್ತರು. ದೇವಗಂಧರ್ವ ದಾನವರು, ವಾನರ ರಾಕ್ಷಸರು ಇದನ್ನು ನೋಡಿ ಹಾ ಹಾ ಎಂದು ಕೂಗಿಕೊಂಡರು. ಅಗ್ನಿಯಿಂದ ಸೀತಾದೇವಿಗೆ ತೊಂದರೆಯಾಗಲಿಲ್ಲ. ದೇವಿ ಈ ಪರೀಕ್ಷೆಯಿಂದ ಪಾರಾಗಿ ಬಂದು ರಾಮನನ್ನು ಸೇರಿದಳು. ರಾಮನು "ಸೀತೆ ನಿರ್ದೋಷಿಯೆಂದು ನಾನು ಬಲ್ಲೆನು. ಆದರೆ ಬಹುಕಾಲ ರಾವಣನ ಅಂತಃಪುರದಲ್ಲಿ ಇದ್ದಳಲ್ಲವೆ. ಈ ಪರೀಕ್ಷೆಯಿಲ್ಲದೆ ಅವಳನ್ನು ಸ್ವೀಕರಿಸಿದರೆ, ರಾಮನು ಚಪಲಚಿತ್ತನು ಕಾಮುಕನು ಎಂದು ಸಂತರು ಹೇಳಿಯಾರು ಎಂದು ಲೋಕಗಳ ನಂಬಿಕೆಗಾಗಿ ಸೀತೆ ಅಗ್ನಿಯನ್ನು ಪ್ರವೇಶಿಸಿದರೂ ಸುಮ್ಮನಿದ್ದೆನು. ತನ್ನ ತೇಜಸ್ಸಿನಿಂದಲೇ ಇವಳು ರಕ್ಷಿತಳು. ಸಮುದ್ರವು ದಡವನ್ನು ಹೇಗೆ ಮೀರಿ ಆಕ್ರಮಿಸಲಾರದೋ ಹಾಗೆ ರಾವಣನಿಗೆ ಇವಳಲ್ಲಿ ಅತಿವರ್ತನ ಸಾಧ್ಯವಲ್ಲ" ಎಂದು ಅವಳನ್ನು ಸ್ವೀಕರಿಸಿದನು. ಊರಿಗೆ ಹೊರಡುವುದೆಂದು ತ್ವರೆಮಾಡಿ ವಿಮಾನ ಬರಲು ರಾಮನು ಅದರಲ್ಲಿ ಕುಳಿತು ಸೀತೆಯನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಹೊರಟನು. ವೈದೇಹಿಯನ್ನು ಕವಿ

ಈ ಸಂದರ್ಭದಲ್ಲಿ ಲಜ್ಜಮಾನಾ ಎಂದು ವರ್ಣಿಸಿದಾನೆ. ಇದಕ್ಕೆ ಸ್ವಲ್ಪ ಮೊದಲು ಜನಸಮೂಹದಲ್ಲಿ ಕೆಟ್ಟಮಾತನ್ನಾಡಿ ರಾಮನು ಅವಳನ್ನು ನಾಚಿಸಿದ್ದನು; ಈಗ ನಾಚಿಸಿದ್ದು ಹೆಚ್ಚಿನ ಪ್ರೇಮವನ್ನು ತೋರಿ. ನಮಗಂತೂ ಆ ನಾಚಿಕೆಗಿಂತ ಈ ನಾಚಿಕೆ ಪ್ರಿಯವಾದದು. ಎಲ್ಲರೆದುರಿಗೆ ಪತಿಯ ತೊಡೆಯಮೇಲೆ ಕೂಡಬೇಕಲ್ಲಾ ಎಂದು ನಾಚುತ್ತ ಮುಗುಳು ನಗೆಯಿಂದ ಅವನ ತೊಡೆಯನ್ನೇರಿದ ಸೀತೆಯ ಚಿತ್ರದೊಂದಿಗೆ ಈ ಸಂದರ್ಭದ ಕಥೆಯನ್ನು ವಾಲ್ಮೀಕಿ ಮುಗಿಸಿದ್ದಾನೆ.

## ೮
## ಪಾತ್ರ ಪರಿಶೀಲನ
### ರಾಮ

ಈ ಚಿತ್ರಗಳಲ್ಲಿ ವ್ಯಕ್ತವಾಗುವ ಪಾತ್ರ ಸ್ವಭಾವವನ್ನು ಈಗ ನಾವು ನೋಡಬಹುದು. ಇವುಗಳಲ್ಲಿ ಮುಖ್ಯವಾದದು ರಾಮನ ಪಾತ್ರ. ಕವಿ ರಾಮನನ್ನು ಆದರ್ಶ ಪುರುಷನೆಂದು ವರ್ಣಿಸಿರುವಂತೆ ಕಾಣುತ್ತದೆ. ರಾಮನನ್ನು ಎಲ್ಲರೂ ಹೊಗಳುವವರೆ. ವಿಶ್ವಾಮಿತ್ರನು ಬಂದು ರಾಮ ಲಕ್ಷ್ಮಣರನ್ನು ತನ್ನ ಸಹಾಯಕ್ಕೆ ಕಳುಹಿಸಿಕೊಡಬೇಕೆಂದು ಕೇಳುವ ವೇಳೆಗೆ ರಾಮನು ಇನ್ನೂ ತರುಣನು. ಆದರೆ ಅವನ ಬಿಲ್ಲಾಳುತನ ಪ್ರಪಂಚಕ್ಕೆ ಪ್ರಸಿದ್ಧವಾಗಿತ್ತು. ಒಂದು ಸೇನೆಯಿಂದ ಆಗಲಾರದ ಕೆಲಸ ವನ್ನು ಅವನೊಬ್ಬನು ಮಾಡಬಲ್ಲನೆಂದು ಅವನಿಗೆ ಯಶಸ್ಸು ಬಂದಿತ್ತು. ಮಗನ ವಿಷಯದಲ್ಲಿ ದಶರಥನು ಸಂದೇಹಪಡಲು ವಿಶ್ವಾಮಿತ್ರನು "ರಾಮನ ಯೋಗ್ಯತೆಯನ್ನು ನಾನು ಬಲ್ಲೆನು, ವಸಿಷ್ಠನು ಬಲ್ಲನು, ಇಲ್ಲಿರುವ ತಪಸ್ವಿಗಳು ಬಲ್ಲರು" ಎಂದು ಹೇಳಿದನು. ಮಗುವೆಂದು ಸಾಕಿದ ದಶರಥನಿಗೆ ಮಗನ ಮೇಲಣ ಪ್ರೇಮದಿಂದ ಅದಷ್ಟು ದೊಡ್ಡ ದೆಂದು ಕಾಣಲಿಲ್ಲ. ರಾಮನು ವಿಶ್ವಾಮಿತ್ರನಿಂದ ಧನುರ್ವಿದ್ಯೆಯಲ್ಲಿ ಪಾರಂಗತನಾದನು; ಅವನೊಂದಿಗೆ ಮಿಥಿಲಾನಗರಿಗೆ ಹೋಗಿ ಯಾರೂ ಬಾಗಿಸದ ಧನುಸ್ಸನ್ನು ನಿರಾಯಾಸವಾಗಿ ಬಾಗಿಸಿದನು. ಶೌರ್ಯದಲ್ಲಿ ಹೇಗೋ ಹಾಗೆ ಇತರ ಗುಣಗಳಲ್ಲಿಯೂ ರಾಮನು ಹೆಸರುವಾಸಿಯಾಗಿ

ದ್ದನು. ಅವನ ಮಾತು ಬಂದಾಗ ಕಾವ್ಯದಲ್ಲಿ ಒಂದು ಕಡೆ ಅವನ ಗುಣ ಕಥನ ಮೂವತ್ತು ಶ್ಲೋಕದಷ್ಟು ವಿಸ್ತಾರವಾಗಿದೆ. ದಶರಥನು ಅವನನ್ನು ಯುವರಾಜನಾಗಿ ಮಾಡಬೇಕೆಂದಾಗ ದೇಶದ ಜನ ಅದನ್ನು ಬಹಳ ಸಂತೋಷದಿಂದ ಒಪ್ಪಿಕೊಂಡರು. ತಾನು ಧರ್ಮದಲ್ಲಿ ನಡೆಯುವುದಲ್ಲದೆ ರಾಮನು ಜನರ ವಿಷಯದಲ್ಲಿ ವಿಶ್ವಾಸದಿಂದ ಕ್ಷಮೆಯಿಂದ ನಡೆದು ಕೊಳ್ಳುತ್ತಿದ್ದನೆಂದು ಅವರ ಮಾತುಗಳಿಂದ ತಿಳಿಯುತ್ತದೆ. ದೊರೆಯ ಮಗನಾದರೂ ಅವನಿಗೆ ಅಹಂಕಾರವಿಲ್ಲ; ತಾನೇ ಜನರನ್ನು ಮೊದಲು ಮಾತನಾಡಿಸುವನು; ಹಾಗೆ ಮಾಡುವಲ್ಲಿ ಮೃದುವಾದ ಮಾತನ್ನು ಹೇಳು ವನು; ಅದನ್ನೂ ನಗುತ್ತ ಹೇಳುವನು. ಒಬ್ಬರಿಗೆ ಒಳ್ಳೆಯದಾದರೆ ಅವರ ತಂದೆ ಹೇಗೆ ಸಂತೋಷಪಡಬಹುದೋ ಹಾಗೆ ಇವನು ಸಂತೋಷ ಪಡುವನು. ಇವನ ಎಲ್ಲ ಗುಣಗಳನ್ನು ನೋಡಿ ಮೋದಿಸಿ ಲೋಕನಾಥ ಉಪಮನಾದ ಇವನನ್ನು ನಾಥನಾಗಿ ಅಪೇಕ್ಷಿಸಿತಂತೆ. ಇವನನ್ನು ಕಾಡಿಗೆ ಅಟ್ಟಿದ ಕೈಕಯಿದೇವಿಯೂ ಇವನ ಗುಣಗಳನ್ನು ಬಹಳವಾಗಿ ಹೊಗಳಿದಾಳೆ. ದಶರಥನು ಯಾವ ಹೆಂಗಸನ್ನು ಒಂದುಸಲ ಕಣ್ಣೆತ್ತಿ ನೋಡಿದ್ದರೂ ಅವಳನ್ನು ಇವನು ಕೌಸಲ್ಯೆಗೆ ಸಮನಾದ ಗೌರವದಿಂದ ಕಂಡನು: ಇದನ್ನು ದಶರಥನ ಮಹಿಳೆಯರು ಹೇಳಿದ್ದಾರೆ. ಭರತನೂ ಲಕ್ಷ್ಮಣನೂ ಸುಮಿತ್ರೆಯೂ ರಾಮನನ್ನು ಹೊಗಳಿರುವುದಂತೂ ಸ್ಪಷ್ಟವೇ ಆಗಿದೆ. ಇವನಿಗೆ ಕೇಡನ್ನು ಮಾಡುವುದಕ್ಕೆ ಹೊರಡುವ ಮೊದಲು ಮಾರೀಚನು ಇವನ ಗುಣಗಳನ್ನು ಗಾನಮಾಡಿದನು. ತಂದೆ ಮಲ ತಾಯಿಯ ಮನಸ್ಸನ್ನು ಸಂತೋಷಪಡಿಸುವುದಕ್ಕಾಗಿ ದೇಶವನ್ನು ತಾನಾಗಿ ತ್ಯಜಿಸಿ ಬಂದ ವೀರನಿವನೆಂದು ಅವನು ರಾಮನನ್ನು ಹೊಗಳಿದ್ದಾನೆ. ರಾಮನಿಗೆ ತಂದೆಯೆಂದರೆ ಬಹಳ ಗೌರವ; ಅತಿಶಯವಾದ ಪ್ರೇಮ. ಹೆತ್ತ ತಾಯಿ ಕೌಸಲ್ಯೆಯ ವಿಷಯದಲ್ಲಿ ತುಂಬ ಕನಿಕರ. ಕೈಕಯಿಯಿಂದ ತಾಯ ಮನಸ್ಸಿಗೆ ಕ್ಲೇಶ ಆಗುತ್ತಿದೆಯೆಂದು ಅವನಿಗೆ ತಿಳಿದಿದ್ದಿರಬೇಕು. ಆದರೂ ಮಲತಾಯ ವಿಷಯದಲ್ಲಿಯೂ ಅವನು ಪ್ರೀತಿಯಿಂದಲೇ ನಡೆದುಕೊಂಡನು. ಪ್ರಪಂಚದ ದಾರಿ ಹೀಗೆ ಎಂಬ ತಾಳ್ಮೆಯಿಂದ ಅವನು ಎಲ್ಲರನ್ನೂ ಅವರವರಿಗೆ ತೋರಿದ ದಾರಿಯಲ್ಲಿ ನಡೆಯುವುದಕ್ಕೆ

ಒಪ್ಪುತ್ತಿದ್ದನೆಂದು ಕಾಣುತ್ತದೆ. ಅವನಿಗೆ ಅಭಿಷೇಕ ಮಾಡಬೇಕೆಂದು ತಂದೆ ಅಪೇಕ್ಷಿಸಿದಾಗ ರಾಮನು ಒಪ್ಪಿಕೊಂಡನು; ಅದು ಕೂಡ ದೆಂದಾಗಲೂ ಹಾಗೆಯೇ ಒಪ್ಪಿಕೊಂಡನು. ರಾಮನು ಕಾಡಿಗೆ ಹೋಗುವ ಮಾತಿಗೆ ದಶರಥನು ಹಿಂತೆಗೆದದ್ದೆಲ್ಲ ತನ್ನ ಸಲುವಾಗಿ; ರಾಮನು ಒಪ್ಪಲಾರನೆಂದಲ್ಲ. ಕೈಕಯೀದೇವಿ ವನವಾಸಕ್ಕೆ ಹೋಗಬೇಕೆಂದು ತನಗೆ ಹೇಳಿದಾಗ ರಾಮನು "ನಾನು ಅರ್ಥಪರನಲ್ಲ, ಋಷಿಸಮಾನನೆಂದು ತಿಳಿ" ಎಂದು ಹೇಳಿದನು. ತನ್ನ ಧ್ಯೇಯವೇನೆಂಬುದನ್ನು ಅವನು ಬಲ್ಲನು; ಆ ವಿಷಯದಲ್ಲಿ ಅವನಿಗೆ ಆತ್ಮಪ್ರತ್ಯಯವೂ ತುಂಬ ಇತ್ತು. ಕಷ್ಟವಾಗಲಿ ನಿಷ್ಠುರವಾಗಲಿ ತಾನು ಕಾಡಿಗೆ ಹೋಗುವುದೇ ಸರಿ ಎಂದು ನಿಶ್ಚಯಮಾಡಿದಮೇಲೆ ಯಾರು ಏನು ಹೇಳಿದರೂ ಅವನು ತನ್ನ ನಿಶ್ಚಯದಿಂದ ಕದಲಲಿಲ್ಲ. ತನ್ನ ಜೊತೆಗೆ ಇತರರು ಬಂದು ಕಷ್ಟಪಡುವೆ ವೆಂದಾಗ ಬೇಡವೆಂದು ಹೇಳಿದನು. ಕೌಸಲ್ಯೆಗೆ ಹೇಳಬೇಕಾದರೆ, ತಂದೆಯನ್ನು ನೋಡಿಕೊಳ್ಳುವವರು ಯಾರೂ ಇಲ್ಲವೆಂದೂ ಅವನ ಬಳಿ ಇರುವುದು ಅವಳ ಕರ್ತವ್ಯವೆಂದೂ, ಅವಳಿಗೆ ಯಾವುದು ಆವಶ್ಯಕವೋ ಆ ಮಾತನ್ನು ಹೇಳಿದನು. ಲಕ್ಷ್ಮಣನಿಗೆ ಹೇಳಬೇಕಾದರೆ, ತಾಯಿ ಕೌಸಲ್ಯೆಯನ್ನು ನೋಡಿಕೊಳ್ಳುವರು ಬೇಕು, ಭರತನು ಅವಳನ್ನು ತಿರಸ್ಕಾರದಿಂದ ನೋಡದಂತೆ ಲಕ್ಷ್ಮಣನು ಅಲ್ಲಿರುವುದು ಒಳ್ಳೆಯದು, ಎಂದು ಮೊದಲಾಗಿ ಹೇಳಿದನು. ಸೀತಾದೇವಿಗೆ ಅರಣ್ಯದ ಬಹು ವಿಧದ ಕಷ್ಟಗಳನ್ನು ವರ್ಣಿಸಿ ಅವಳು ಬರುವುದು ಬೇಡವೆಂದನು. ಸುಮಂತ್ರ ನಿಗೆ ಹೀಗೆಯೇ ಬೇರೆ ಒಂದು ರೀತಿಯ ಮಾತು. ಹೀಗೆ ಇವನು ಜನರ ಸ್ವಭಾವವನ್ನರಿತು ಅವರವರಿಗೆ ಯಾವ ಮಾತು ಅನ್ವಯಿಸುತ್ತಿತ್ತೋ ಅದನ್ನು ಹೇಳುತ್ತಿದ್ದನು. ಇತರರಿಗೆ ಮನಸ್ಸಿಗೆ ಸಮಾಧಾನವಾಗುವಂತೆ ತನಗೆ ಬಂದ ಕಷ್ಟವನ್ನು ಬಹಳ ಕಡಮೆ ಎಂಬಂತೆ ಮಾತನಾಡುವನು. ತಾನು ವನದಲ್ಲಿ ಸುತ್ತಾಡುವುದು ಒಂದು ವಿಹಾರವೆಂಬಂತೆ ತಂದೆತಾಯಿ ಗಳಲ್ಲಿ ನುಡಿದನು. ರಾಮನಿಗೆ ಊರೆಂದರೆ ಮಮತೆ: ಅದರ ಉದ್ಯಾನ ಗಳಲ್ಲಿ ಓಡಿಯಾಡುವುದು, ಸರಯೂನದಿಯಲ್ಲಿ ಸ್ನಾನ ಮಾಡುವುದು, ಅದರ ತೀರದ ವನಗಳಲ್ಲಿ ಬೇಟೆಯಾಡುವುದು, ಇದರಲ್ಲೆಲ್ಲ ಅವನಿಗೆ

ಸುಖವುಂಟು. ಅದನ್ನು ಬಿಟ್ಟುಹೋಗಿ ಕಾಡಿನಲ್ಲಿ ಇರುವಾಗ ಅವನು ಆ ಸುಖವನ್ನೆಲ್ಲ ನೆನೆದುಕೊಂಡನು; ನಾವು ಮತ್ತೆ ಆ ಸುಖವನ್ನೆಲ್ಲ ಎಂದು ಅನುಭವಿಸುವೆವೊ ಎಂದು ಹೇಳಿದನು. ಆದರೆ ತನಗೆ ಈ ಸುಖವನ್ನು ತಪ್ಪಿಸಿದ ಕೈಕಯಿಯನ್ನು ಕುರಿತು ಕಠಿಣವಾದ ಯೋಚನೆಯನ್ನು ಅವನು ಮಾಡಲಿಲ್ಲ. ಲಕ್ಷ್ಮಣನು ಅವಳನ್ನು ಕುರಿತು ಕಠಿಣವಾದ ಮಾತನ್ನು ಆಡಿದಾಗ "ನೀನು ಚಿಕ್ಕಮ್ಮನ ವಿಷಯವಾಗಿ ತಪ್ಪು ಹೇಳಬೇಡ. ಅದಕ್ಕೆ ಪ್ರತಿಯಾಗಿ ಪ್ರೀತಿವಂತನಾದ ಭರತನ ಮಾತನ್ನು ಹೇಳು, ನನಗೆ ಚೆನ್ನಾಗಿರುತ್ತದೆ" ಎಂದನು. ಸಾಧ್ಯವಾದರೆ ಒಳ್ಳೆಯದನ್ನಾಡಬೇಕು; ಅದರಿಂದ ಸುಖಪಡಬೇಕು; ಅದು ಸಾಧ್ಯವಲ್ಲದಿದ್ದರೆ ಬಾಯಿಮುಚ್ಚಿಕೊಂಡಿರಬಹುದು. ಎಂದರೆ, ಉಪಕಾರಿಗಳು ಯಾರು ಅಪಕಾರಿಗಳು ಯಾರು ಎಂದು ತಿಳಿಯದೆ ಮರದ ತುಂಡಿನಂತೆ ಇರಬೇಕೆಂದಲ್ಲ. ಪರಿಸ್ಥಿತಿಯನ್ನು ತಿಳಿಯಬೇಕು; ತಿಳಿದೂ ಸಹಿಸಿಕೊಳ್ಳಬೇಕು. ರಾಮನು ತನ್ನ ಧರ್ಮ ಯಾವುದೆನ್ನುವುದನ್ನು ನಿಶ್ಚಯಮಾಡಿಕೊಂಡಿದ್ದನು. ಅದನ್ನು ನಡೆಯಿಸುವ ವಿಷಯದಲ್ಲಿ ಅವನು ಹಿಂದೆಗೆಯುತ್ತಿರಲಿಲ್ಲ. ಅವನು ಇತರರ ಧರ್ಮವನ್ನೂ ಬಲ್ಲನು; ಆದರೆ ಅದನ್ನು ನಡೆಯಿಸುವುದಕ್ಕಾಗಿ ಅವರು ಕಷ್ಟಪಡಬೇಕೆಂದು ಅವನು ಅವರಿಗೆ ಕಾಯಿದೆ ಮಾಡುತ್ತಿರಲಿಲ್ಲ. ತಾಯಿ ಕೌಸಲ್ಯೆಗೆ ಮಾತ್ರ ತನ್ನೊಂದಿಗೆ ಬರುವುದು ತಪ್ಪು ಅರಸನೊಂದಿಗೆ ಅಯೋಧ್ಯೆಯಲ್ಲಿರಬೇಕು ಎಂದು ಅವನು ಶಾಸನಮಾಡುವ ರೀತಿಯಲ್ಲಿ ಹೇಳಿದನು. ಅದಕ್ಕೆ ಕಾರಣವೇನೆಂದರೆ, ಅವಳು ಯೋಚಿಸಿದ್ದು ಅಧರ್ಮ; ಧರ್ಮದ ಅಭಾವ ಮಾತ್ರವಲ್ಲ, ಅದರ ವಿರುದ್ಧವೃತ್ತಿ. ಅದರಿಂದ ದಶರಥನ ಸಂಸಾರ ಎಲ್ಲರಿಗೂ ಕಾಣುವಂತೆ ಒಡೆಯುತಿತ್ತು; ತಾಯಿಗೆ ಅಪಯಶಸ್ಸು ಬರುತಿತ್ತು; ತನಗಾಗಿ ಇನ್ನೊಬ್ಬರು ಕಷ್ಟಪಡುವುದಕ್ಕೆ ಅವನು ಒಪ್ಪಿದಂತಾಗುತಿತ್ತು. ಸೀತೆ ತನ್ನೊಂದಿಗೆ ಅರಣ್ಯಕ್ಕೆ ಬರುವುದಾದರೆ ಅವಳಿಗೆ ಅದು ಧರ್ಮವೆಂದು ರಾಮನು ಬಲ್ಲನು. ಆದರೂ ಅವನು ಅವಳಿಗೆ ಆ ಕಷ್ಟವಾದ ಧರ್ಮವನ್ನು ನಿರೂಪಿಸಲಿಲ್ಲ. ಅಷ್ಟು ಮಾತ್ರವಲ್ಲ; ತನ್ನೊಂದಿಗೆ ಬರುತ್ತೇನೆಂದು ಅವಳು ಹೇಳಿದಾಗ ಅದು ಬಹಳ ಕಷ್ಟವಾಗುವುದೆಂದು ಅವನು ಅವಳಿಗೆ ಸ್ಪಷ್ಟ

ಪಡಿಸಿದನು. ಆದರೂ ಅವಳು ಮುಷ್ಕರಮಾಡಿದಮೇಲೆ ಅವಳು ಆ ಧರ್ಮವನ್ನು ನಡೆಸುವುದಕ್ಕೆ ಅವನು ಒಪ್ಪಿದನು. ಜನಕನು ಸೀತೆಯನ್ನು ರಾಮನ ಕೈಗೆ ಕೊಡುವಾಗ "ನನ್ನ ಮಗಳಾದ ಈ ಸೀತೆ ನಿನಗೆ ಸಹಧರ್ಮಚರೀ" ಎಂದು ಹೇಳಿದನು. ತನ್ನೊಂದಿಗೆ ಬರಬಹುದೆಂದು ಅವಳಿಗೆ ಹೇಳುವಾಗ ರಾಮನು "ಸಹಧರ್ಮಚರೀ ಭವ" ಎಂದನು. ಅದುವರೆಗೆ ಸುಖದಲ್ಲಿ ಜೊತೆಯಾಗಿದ್ದದು ಧರ್ಮದ ಸುಖವಾದ ಭಾಗದ ಅನುಷ್ಠಾನ; ಗಂಡನೊಡನೆ ವನವಾಸಕ್ಕೆ ಹೋಗುವುದು ಅದೇ ಧರ್ಮದ ಕಷ್ಟವಾದ ಭಾಗ. ಅದುವರೆಗಿನ ಧರ್ಮಾನುಷ್ಠಾನ ಧರ್ಮಾಚರಣೆಯೇ ಸರಿ; ಆದರೆ ಅಷ್ಟರಿಂದ ಯಾರೂ ಧರ್ಮಾಚರಣದ ಪಟ್ಟವನ್ನು ಸಾಧಿಸಿದಂತೆ ಆಗದು. ಆಮೇಲಣ ಧರ್ಮಾನುಷ್ಠಾನದಿಂದಲೇ ಆ ಪಟ್ಟ ಕೈಸೇರುವುದು. ರಾಮನನ್ನು ಅನುಸರಿಸಿ ಅರಣ್ಯಕ್ಕೆ ಹೋಗಿಯೇ ಸೀತೆ ಅವನ ಸಹಧರ್ಮಚಾರಿಣಿಯಾದಳು. ಇದರಿಂದ ರಾಮನಿಗೆ ಸಂತೋಷ. ಸೀತೆ ಜೊತೆಗಿರುವುದರಿಂದ ಅವನಿಗೆ ಅವನ ವನವಾಸದ ಕಷ್ಟ ಕಡಮೆಯಾಯಿತು. ಹೀಗೆಂದು ಅವನು ಹೇಳಿಯೂ ಹೇಳಿದನು. ಕೌಸಲ್ಯೆ ಧರ್ಮವನ್ನು ಬಿಟ್ಟು ತನ್ನ ಜೊತೆಗೆ ಬರುವೆನೆಂದಾಗ ಅವನು ಬೇಡವೆಂದನು; ಸೀತೆ ಧರ್ಮವನ್ನು ಆಚರಿಸಿ ಇಬ್ಬರ ಸುಖವನ್ನೂ ಸಾಧಿಸುವೆನೆಂದಾಗ ಅವನು ಒಪ್ಪಿದನು. ಧರ್ಮ ಮುಖ್ಯ; ಅದನ್ನು ಸಾಧಿಸಬೇಕು; ಆದರಿಂದ ಸುಖವೂ ಬಂದರೆ ಅದನ್ನು ಅನುಭವಿಸಬಹುದು; ಆದರೆ ಧರ್ಮವನ್ನು ಬಿಟ್ಟು ಸುಖಕ್ಕೆ ಆಶಿಸಬಾರದು. ಯಾವುದಾದರೂ ಸಂದರ್ಭದಲ್ಲಿ ದಾರಿ ಯಾವುದು ಎಂದು ನಿರ್ಧರಿಸಬೇಕಾದಾಗ ಇವುಗಳಲ್ಲಿ ಧರ್ಮದ ದಾರಿ ಯಾವುದೆಂದು ಕೇಳಬೇಕು. ಇದೂ ಧರ್ಮವೇ ಅದೂ ಧರ್ಮವೇ ಎಂದು ಕಂಡಾಗ, ಇನ್ನೊಬ್ಬರ ಧರ್ಮ ಯಾವುದು ಎಂದು ಕೇಳುವುದಕ್ಕೆ ಪ್ರತಿಯಾಗಿ, ನನ್ನ ಧರ್ಮ ಯಾವುದು ಎಂದು ತಿಳಿದು ಅದನ್ನು ಮಾಡಬೇಕು; ಇನ್ನೊಬ್ಬರ ಧರ್ಮವನ್ನು ನಡೆಸುವ ಭಾರವನ್ನು ಆ ಇನ್ನೊಬ್ಬರಿಗೆ ಬಿಡಬೇಕು. ಆ ಇನ್ನೊಬ್ಬರ ಧರ್ಮವನ್ನೂ ತಮ್ಮ ಧರ್ಮವನ್ನೂ ನಿರ್ಣಯಿಸುವುದರಲ್ಲಿ ತನಗೆ ಯಾವುದರಲ್ಲಿ ಸುಖವೆನ್ನುವುದರಿಂದ ನಿರ್ಣಯ ಆ ಕಡೆಗೆ ಹೋಗದಂತೆ ಎಚ್ಚರದಿಂದ ಇರಬೇಕು.

ಕಷ್ಟವಾದರೂ ಸರಿ ರಾಮನೊಂದಿಗೆ ಹೋಗುವೆನೆನ್ನುವುದು ಸೀತೆಯನ್ನು ಹೊಂದಿದ ನಿರ್ಧರ. ಸೀತೆ ಜೊತೆಗಿದ್ದರೆ ತನಗೆ ಸುಖ. ಜೊತೆಗಿರುವುದು ಅವಳ ಧರ್ಮ. ಆದರೂ ಜೊತೆಗೆ ಬಂದು ಅರಣ್ಯವಾಸದ ಕಷ್ಟಗಳನ್ನು ಅನುಭವಿಸು ಎಂದು ಹೇಳುವುದು ರಾಮನಲ್ಲಿ ಸ್ವಾರ್ಥಸಾಧನವಾಗುತಿತ್ತು. ತನ್ನ ನಡತೆಯ ಕಾರಣವನ್ನು ಹೇಳುವಾಗ ರಾಮನು ಇದನ್ನು ವಿವರಿಸಿದನು. ಕವಿ ರಾಮನನ್ನು ಸತ್ಯಪರಾಕ್ರಮನೆಂದೂ ಸತ್ಯಸಂಗರನೆಂದೂ ವರ್ಣಿಸಿದಾನೆ. ತಂದೆಯ ಮಾತು ತಪ್ಪಬಾರದೆಂದು ಅವನು ಎಲ್ಲರೊಂದಿಗೂ—ಕೌಸಲ್ಯೆಯೊಂದಿಗೆ, ಲಕ್ಷ್ಮಣನೊಂದಿಗೆ, ಆ ತಂದೆಯೊಂದಿಗೆ, ಜಾಬಾಲಿಯೊಂದಿಗೆ, ವಸಿಷ್ಠನೊಂದಿಗೆ, ಭರತನೊಂದಿಗೆ—ಚರ್ಚಿಸಬೇಕಾಯಿತು. ಅವನು ವಿನಯವಂತನು; ಆದರೂ ತನಗೆ ಸರಿಯೆಂದು ತೋರಿದ ದಾರಿಯನ್ನು ಬಿಡು ಎಂದು ಹಿರಿಯರು ಹೇಳಿದರೂ ಒಪ್ಪುತ್ತಿರಲಿಲ್ಲ. ವನವಾಸದ ಕಾಲದಲ್ಲಿ ಋಷಿಗಳು ಅವನ ಸಹಾಯವನ್ನು ಬೇಡಲಾಗಿ ಅವನು ಒಡನೆ ಅಭಯದಾನ ಮಾಡಿದನು. ರಾಮನು ಮನುಷ್ಯರ ಸ್ವಭಾವವನ್ನು ಬಹುಬೇಗನೆ ಗ್ರಹಿಸುವನು. ಹನುಮಂತನನ್ನು ಕಂಡ ಒಡನೆಯೇ ಅವನು ಮಹಾತ್ಮನೆಂದು ಕಂಡುಕೊಂಡನು. ಸುಗ್ರೀವನನ್ನು ಕಂಡ ಒಡನೆಯೇ ಅವನು ಯಾವ ತಪ್ಪು ಮಾಡಿದ್ದರೂ ಧೂರ್ತತನದಿಂದ ಮಾಡಿದವನಲ್ಲವೆಂದು ತಿಳಿದುಕೊಂಡನು. ಆದ್ದರಿಂದಲೇ ಅವನನ್ನು ದೊರೆಯಾಗಿ ಮಾಡುವುದಕ್ಕೆ ರಾಮನು ವಾಲಿಯನ್ನು ಕೊಂದನು. ಲಂಕೆಗೆ ದಂಡೆತ್ತಿಹೊರಟಾಗ ದಾರಿಯಲ್ಲಿ ರಾವಣನ ತಮ್ಮ ವಿಭೀಷಣನು ತನ್ನ ಪಕ್ಷಕ್ಕೆ ಬರುವೆನೆನ್ನಲು ಅವನನ್ನು ಒಡನೆಯೆ ಅಂಗೀಕರಿಸಿದನು. ಹಗೆಯ ತಮ್ಮನನ್ನು ಪರೀಕ್ಷಿಸದೆ ಅಂಗೀಕರಿಸಬಾರದೆಂದು ಸುಗ್ರೀವ ಮುಂತಾದವರು ಹೇಳಲು ರಾಮನು "ನಾನು ನಿನ್ನವನೆಂದು ಒಂದು ಸಲ ಹೇಳಿದ ಯಾವನಿಗಾದರೂ ಸಮಸ್ತ ಭೂತಗಳಿಂದ ನಾನು ಅಭಯವನ್ನು ದಾನಮಾಡುತ್ತೇನೆ; ಇದು ನನ್ನ ವ್ರತ" ಎಂದನು. ರಾಮನಿಗೆ ತಾನು ರಾವಣನನ್ನು ಕೊಲ್ಲುವೆನೆನ್ನುವ ವಿಷಯದಲ್ಲಿ ಸಂದೇಹವೇ ಇರಲಿಲ್ಲ. ಅವನು ಆಗಲೇ ವಿಭೀಷಣನಿಗೆ ಲಂಕೆಯ ರಾಜನೆಂದು ಅಭಿಷೇಕಮಾಡಿದನು. ರಾಮನು ಯುದ್ಧದಲ್ಲಿ ಶೂರನೆನ್ನುವುದು ಬಾಲ್ಯ

ದಿಂದಲೇ ಸ್ಪಷ್ಟವಾಯಿತು. ಆ ಶೌರ್ಯ ಸಾರ್ಥಕವಾದುದು ಲೋಕ ಕಂಟಕನಾದ ರಾವಣನನ್ನು ಕೊಂದಾಗ. ಇಂಥ ಶೌರ್ಯದ ಜೊತೆಗೆ ರಾಮನಿಗೆ ಎಲ್ಲ ಜೀವಗಳ ವಿಷಯದಲ್ಲಿ ಕರುಣೆ ತುಂಬಿತ್ತು. ಅಯೋಧ್ಯೆಯನ್ನು ಬಿಟ್ಟು ಗಂಗೆಯ ಪ್ರಾಂತಕ್ಕೆ ಬಂದವೇಳೆ ಗುಹನು ಅವನನ್ನು ಕುರಿತು ನನ್ನಿಂದ ಸೇವೆ ಏನಾಗಬೇಕು ಎಂದು ಕೇಳಿದನು. ರಾಮನು ತನ್ನ ರಥದ ಕುದುರೆಗಳಿಗೆ ಹುಲ್ಲು ಕೊಟ್ಟರೆ ತನಗೆ ಎಲ್ಲ ಉಪಚಾರವೂ ಆದಂತೆಯೆ ಎಂದು ಹೇಳಿದನು; ಮತ್ತು ಸುಮಂತ್ರನಿಗೆ ಕುದುರೆಗಳನ್ನು ನೋಡಿಕೊಳ್ಳುವಂತೆ ಆಜ್ಞೆ ಮಾಡಿದನು. ಅವನಿಗೆ ತಾನು ಹಿರಿಯನೆಂಬ ರೀತಿಯಲ್ಲಿ ನಡೆದುಕೊಳ್ಳುವುದು ಸಹಜವಾಗಿಹೋಗಿತ್ತು. ಭರತ ಲಕ್ಷ್ಮಣ ಶತ್ರುಘ್ನರು ಅವನಿಗಿಂತ ಒಂದು ದಿನ ಅರ್ಧ ದಿನ ಚಿಕ್ಕವರು. ಆದರೆ ನಡವಳಿಕೆಯಲ್ಲಿ ವರ್ಷಾಂತರ ಚಿಕ್ಕವರೆಂಬಂತೆ ರಾಮನು ಅವರನ್ನು ಕಾಣುತ್ತಿದ್ದನು. ಅವರಾದರೂ ರಾಮನನ್ನು ಅದೇ ಮರ್ಯಾದೆಯಿಂದ ನೋಡುತ್ತಿದ್ದರು. ಹೀಗಿದ್ದರೂ ರಾಮನು ರಾಜನಾಗಿರುವಂದು ಭರತನು ತನಗೆ ಹಿರಿಯವನೆಂಬಂತೆಯೂ ತಾನು ಅವನ ಸೇವಕನೆಂಬಂತೆಯೂ ನಡೆದುಕೊಂಡನು. ಋಷಿಗಳಿಗೆ ಸುಗ್ರೀವನಿಗೆ ಅವನು ರಕ್ಷಣೆಯನ್ನು ನೀಡಿದ್ದು ರಾಜನಾದ ಭರತನ ಪರವಾಗಿ, ಅವನ ಪ್ರತಿನಿಧಿಯಾಗಿ. ರಾಮನ ಈ ರಾಜಿಕ ಬುದ್ಧಿ ಅವನ ಧರ್ಮದಂತೆ ಅವನಿಗೆ ಸಹಜವಾಗಿ ಬಂದದು. ಹೊಸ ಕಾಲದ ರಾಜನೀತಿಯಲ್ಲಾದರೂ ಇದಕ್ಕೆ ಮಿಂಚಿದ ಭಾವನೆಯಿಲ್ಲ. ತನ್ನ ಬಳಿಗೆ ಬಂದ ಎಲ್ಲರ ವಿಷಯದಲ್ಲಿಯೂ ಅವನ ಪ್ರೀತಿ ಅಗಾಧವಾದದು. ಸೀತೆಗಾಗಿ ಲಕ್ಷ್ಮಣನಿಗಾಗಿ ಅವನು ಕಾತರನಾದಂತೆ ಸುಗ್ರೀವನಿಗಾಗಿ ಕಾತರನಾದನು. ರಾವಣನನ್ನು ಕೊಂದಮೇಲೆ ಲಂಕೆಯೊಳಕ್ಕೆ ಅವನು ಹೊಗಲಿಲ್ಲ: ವನವಾಸದ ಅವಧಿ ಮುಗಿಯುವವರೆಗೆ ಊರನ್ನು ಹೊಗಕೂಡದೆಂದು; ಅಲ್ಲದೆ ಭರತನು ಕಾದಿದಾನೆ, ಅಯೋಧ್ಯೆಗೆ ಹೋಗುವುದರಲ್ಲಿ ಸಾವಕಾಶಮಾಡಬಾರದು ಎಂದು. ಅದೇ ಹದಿನಾಲ್ಕು ವರ್ಷ ಕಳೆದು ಅಯೋಧ್ಯೆಗೆ ಬಂದಾಗ ವನವಾಸವನ್ನು ಒಪ್ಪಿಕೊಂಡಷ್ಟೇ ಸಮ್ಮತಿಯಿಂದ ಅವನು ರಾಜಪದವಿಯನ್ನೂ ಒಪ್ಪಿಕೊಂಡನು. ಅವನು ಆಶ್ರಮದಲ್ಲಿ ಅಸುಖಿಯಾಗಲಿಲ್ಲ;

ಅರಮನೆಯಲ್ಲಿ ಮೈಮರೆಯಲಿಲ್ಲ. ದೊರೆತನ ಸುಖದ ಮೋಳಿಗೆಯಲ್ಲ, ದೊರೆಯ ಕೆಲಸ ಸುಲಭವಲ್ಲ, ಎನ್ನುವುದನ್ನು ಅವನು ತಿಳಿದಿದ್ದನು. ಅಯೋಧ್ಯೆಯ ರಾಜನಾಗಿ ರಾಜ್ಯವನ್ನು ಆಳಿ ಅವನು ಜನರ ಮನಸ್ಸಿಗೆ ದೇವರೆಂದು ಕಾಣುವಂತೆ ನಡೆದುಕೊಂಡನು. ರಾಮನ ಗುಣಗಳನ್ನು ಹೇಳುತ್ತ ಹೋದರೆ ರಾಮಾಯಣವನ್ನು ಮತ್ತೆ ಸಂಗ್ರಹಿಸಬೇಕಾಗುವುದು. ಉದಾತ್ತವಾದ ಒಂದು ಸ್ವಭಾವವನ್ನು ಚಿತ್ರಿಸಿ ತೋರಿಸುವುದು ವಾಲ್ಮೀಕಿಯ ಉದ್ದೇಶ. ಅವನು ಅದನ್ನು ಸಾಧಿಸಿ ಕೃತಕೃತ್ಯನಾದನು. ರಾಮನು ಕಥಾಸಾಮ್ರಾಜ್ಯದ ಅತ್ಯುತ್ತಮ ವ್ಯಕ್ತಿಗಳಲ್ಲಿ ಉತ್ತಮನಾಗಿ ಈಗಲೂ ನಿಂತಿದಾನೆ.

### ಆಕ್ಷೇಪ ಸಮಾಧಾನಗಳು

### ವಾಲೀ ವಧ ವಿಚಾರ

ಆದರೆ ರಾಮನ ನಡತೆಯ ಎರಡು ಸಂದರ್ಭವನ್ನು ಕುರಿತು ಚರ್ಚೆ ಮಾಡುವುದು ವಾಡಿಕೆಯಾಗಿದೆ. ಅವನು ವಾಲಿಯನ್ನು ಕೊಂದದು ಸರಿಯೇ ಎನ್ನುವುದೂ ಅವನು ಸೀತೆಯನ್ನು ಸತ್ಯವಂತೆಯೆಂದು ತಿಳಿದೂ ಅಗ್ನಿಪ್ರವೇಶ ಮಾಡಲು ಬಿಟ್ಟದು ತರವೆ ಎನ್ನುವುದೂ ಚರ್ಚೆಯ ಈ ಎರಡು ವಿಷಯಗಳು. ಇಷ್ಟೆಲ್ಲ ಆದಮೇಲೂ ಊರಲ್ಲಿ ಯಾರೋ ಸಣ್ಣಮಾತನ್ನಾಡಿದರೆಂದು ಗರ್ಭಿಣಿಯಾದ ಸೀತೆಯನ್ನು ಇವನು ಕಾಡಿಗೆ ಅಟ್ಟಿದ್ದು ಸರಿಯೆ ಎಂಬದು ಮೂರನೆಯ ಚರ್ಚೆ. ಈ ಮೂರನೆಯ ವಿಷಯವನ್ನು ನಾವು ಇಲ್ಲಿ ಎತ್ತಿಕೊಳ್ಳುವುದು ಅವಶ್ಯಕವಲ್ಲ. ಇದು ಉತ್ತರ ಕಾಂಡದಲ್ಲಿ ಬರುವ ಕಥೆ. ಆ ಕಾಂಡ ವಾಲ್ಮೀಕಿಯ ಕಾವ್ಯವಲ್ಲ ಎಂಬ ಅಭಿಪ್ರಾಯವನ್ನು ಈ ಮೊದಲೇ ಹೇಳಿದೆ. ರಾಮನು ವಾಲಿಯನ್ನು ಕೊಂದ ಕಥೆಯನ್ನು ಕುರಿತು ಮುಖ್ಯವಾದ ಆಕ್ಷೇಪ ಇವನು ಮರೆಯಲ್ಲಿ ನಿಂತು ವಾಲಿಗೆ ತಿಳಿಯದಂತೆ ಬಾಣವನ್ನು ಬಿಟ್ಟನೆನ್ನುವುದು. ಇನ್ನೊಂದು ಆಕ್ಷೇಪ ಸುಗ್ರೀವನು ತನಗೆ ಸಹಾಯ ಮಾಡುವುದಾಗಿ ಮಾತುಕೊಟ್ಟ ಕಾರಣದಿಂದ ರಾಮನು ವಾಲಿಯ ತಪ್ಪು ಸರಿಯನ್ನು ಕುರಿತು ವಿವರವನ್ನು ತಿಳಿದುಕೊಳ್ಳದೆ ವಾಲಿಯ ಜೀವವನ್ನು ತೆಗೆದನೆನ್ನುವುದು. ಈ ಆಕ್ಷೇಪಗಳು ಪೂರ್ವದಲ್ಲೇ ಬಂದವು. ಈ ಕಥೆಯನ್ನು ಹೇಳುವುದರಲ್ಲಿ

ಕವಿ ಅವುಗಳಿಗೆ ಸಮಾಧಾನವನ್ನೂ ಪಾತ್ರಗಳ ಬಾಯಿಂದ ಹೇಳಿಸಿದ್ದಾನೆ. ಆದರೂ ಪೂರ್ವದಲ್ಲಿ ಕೂಡ ಈ ಸಮಾಧಾನಗಳಿಂದ ಜನಕ್ಕೆ ಒಪ್ಪಿಗೆ ಯಾದಂತೆ ಕಾಣುವುದಿಲ್ಲ. ಸಂಪ್ರದಾಯದ ಬಹು ಜನಕ್ಕೆ "ರಾಮನು ದೇವರು, ಅವನು ಮಾಡಿದ್ದು ತಪ್ಪಲ್ಲ" ಎಂದು ಹೇಳುವ ಮನೋ ಧರ್ಮ ವಾಡಿಕೆಯಾಯಿತೆಂದು ತೋರುತ್ತದೆ. ಆದರೂ ಈ ದೋಷದ ಹೊರೆ ಅವರಿಗೆ ಭಾರವಾಗಿ ಕಾಣುತಿತ್ತು. ಅದನ್ನು ಇಳಿಸಿಕೊಳ್ಳುವುದ ಕ್ಕಾಗಿ ಅವರು ವಾಲಿಯನ್ನು ಕೃಷ್ಣಾವತಾರದಲ್ಲಿ ಒಬ್ಬ ಬೇಡನನ್ನಾಗಿ ಮಾಡಿ ಕೃಷ್ಣನನ್ನು ಅವನಿಂದ ಕೊಲ್ಲಿಸಿದರು. ರಾಮನು ವಾಲಿಯನ್ನು ಕೊಂದು ಕಟ್ಟಿಕೊಂಡ ಸಾಲವನ್ನು ಬೇಡನಿಂದ ಜೀವಬಿಟ್ಟು ಕೃಷ್ಣನು ತೀರಿಸಿದನು. ಕೃಷ್ಣನಿಗೆ ತಾನು ರಾಮನು ಎಂಬ ತಿಳಿವಳಿಕೆಯೂ ಬೇಡನಿಗೆ ತಾನು ವಾಲಿಯೆಂಬ ತಿಳಿವಳಿಕೆಯೂ ಇದ್ದಿದ್ದ ಪಕ್ಷದಲ್ಲಿ ಈ ಸಾಲ ಹೀಗೆ ಹರಿಯುವುದಕ್ಕೆ ಏನೂ ಅಡ್ಡಿಯಿಲ್ಲ. ಈ ವಿಚಾರದಲ್ಲಿ ಧೈರ್ಯ ವಾದ ನಂಬಿಕೆ ಉಳ್ಳವರು ಈ ಮುಯ್ಯಿಗೆ ಮುಯ್ಯಿಂದ ಸಮಾಧಾನ ವನ್ನು ಹೊಂದಬಹುದು. ದೇವರಿಗಾದರೂ ತಪ್ಪಿಗೆ ಶಿಕ್ಷೆ ತಪ್ಪಿದ್ದಲ್ಲ ಎಂಬ ಇದರಡಿಯ ಭಾವನೆಯೂ ಗಂಭೀರವಾದದು. ದೇವರು ತಪ್ಪನ್ನು ಮಾಡುವುದಾದರೂ ಏಕೆ ಎನ್ನುವ ಪ್ರಶ್ನೆಗೆ ಮಾತ್ರ ಇಲ್ಲಿ ಸಮಂಜಸವಾದ ಉತ್ತರ ದೊರೆಯುವುದಿಲ್ಲ. ಸಂಪ್ರದಾಯದವರ ಮನಸ್ಸಿನ ಸ್ಥಿತಿ ಹೀಗಿರಲಾಗಿ ಆಧುನಿಕ ಕಾಲದ ವಿಮರ್ಶೆ ಅಂದು ಕವಿ ಎತ್ತಿ ಮುಗಿಸಿದ ಆಕ್ಷೇಪವನ್ನು ಮತ್ತೆ ಎತ್ತುತ್ತದೆ. ಎರಡು ಪಕ್ಷವನ್ನೂ ವಿಚಾರಿಸದೆ ರಾಮನು ಸುಗ್ರೀವನ ಪಕ್ಷವನ್ನು ವಹಿಸಕೂಡದಾಗಿತ್ತು; ಹಾಗೆ ವಹಿಸಿ ದರೂ ವಾಲಿಯನ್ನು ಯುದ್ಧಕ್ಕೆ ಕರೆದು ಅವನನ್ನು ಕೊಲ್ಲಬೇಕಾಗಿತ್ತು: ಇದೇ ಈಗಣ ನಾವು ಹೇಳುವ ಮಾತು. ಈ ಮಾತು ನವೀನಕಾಲದ ಪರಿಷ್ಕೃತವಾದ ರಾಜನೀತಿಯ ಮತ್ತು ಶೌರ್ಯದ ದೃಷ್ಟಿಯಿಂದ ಹೇಳ ತಕ್ಕದು. ಈಗಣ ರಾಜನೀತಿಯೂ ಶೌರ್ಯವೂ ಆಗಣ ರಾಜನೀತಿ ಗಿಂತಲೂ ಶೌರ್ಯಕ್ಕಿಂತಲೂ ಹಿರಿಯದೆ ಕಿರಿಯದೆ ಎನ್ನುವ ಚರ್ಚೆ ಇಲ್ಲಿ ಅಪ್ರಕೃತ. ಈಗಲೂ ರಾಜನೀತಿ ತನ್ನ ಪಕ್ಷದ ಪ್ರಯೋಜನಕ್ಕಾಗಿ ಜಗಳ ಮಾಡುವ ಇಬ್ಬರಲ್ಲಿ ಒಬ್ಬನ ಪಕ್ಷವನ್ನು, ಅದು ಸರಿಯಾದ ಪಕ್ಷವೆ,

ತಪ್ಪಾದದೆ, ಎಂದು ಬಹಳವಾಗಿ ವಿಚಾರಮಾಡದೆ ತನ್ನದಾಗಿ ಮಾಡಿಕೊಳ್ಳು ತ್ತದೆ. ಈಗಣ ಶೌರ್ಯ ಹಗೆಯನ್ನು ಎದುರಿಗೆ ಕರೆದು ತಾನು ಎದುರಿಗೆ ನಿಂತು ಅವನ ತುಪಾಕಿಗೆ ತಾನು ಗುರಿಯಾದಮೇಲೆಯೇ ತನ್ನ ತುಪಾಕಿ ಯಿಂದ ಅವನನ್ನು ಹೊಡೆಯುವುದಿಲ್ಲ. ರಾಮನು ರಾಜ್ಯವನ್ನು ಕಳೆದು ಕೊಂಡು ಕಾಡಿನಲ್ಲಿದ್ದ ಸುಗ್ರೀವನಿಗೆ ಸಖ್ಯವನ್ನು ಕೊಟ್ಟನು. ಈಗಣ ರಾಜನೀತಿಯೂ ಇಂಥವರಿಂದಲೇ ಸಹಾಯವನ್ನು ಪಡೆಯುವುದು. ರಾಜ ನಾಗಿದ್ದ ವಾಲಿ ರಾಜ್ಯಭ್ರಷ್ಟನಾದ ರಾಮನ ಕಷ್ಟವನ್ನು ಕೇಳುತ್ತಿದ್ದನೋ ಇಲ್ಲವೋ ಇದನ್ನು ಯಾರು ಹೇಳಬೇಕು? ಆದರೆ ನಾವು ರಾಮನ ಈ ಸಂದರ್ಭದ ನಡತೆಯನ್ನು ಅವನು ದೇವರು ಎಂಬ ದೃಷ್ಟಿಯಿಂದಲಾಗಲಿ ಅವನು ಅನುಸರಿಸಿದ ರಾಜನೀತಿಯನ್ನು ಹೊಸ ಕಾಲದ ಪರಿಷ್ಕೃತ ವಾದುದೆಂಬ ರಾಜನೀತಿಯ ದೃಷ್ಟಿಯಿಂಗಲಾಗಲಿ ನೋಡಬಾರದು. ರಾಮಲಕ್ಷ್ಮಣರಿಗೆ, ವಾಲಿ ಸುಗ್ರೀವರಿಗೆ, ತಮ್ಮ ನಡತೆ ಹೇಗೆ ಕಂಡಿತೆಂಬ ದೃಷ್ಟಿಯಿಂದ ನೋಡಬೇಕು. "ತಪ್ಪು ಸರಿಯನ್ನು ವಿಚಾರಿಸದೆ ಸುಗ್ರೀವನ ಮಾತನ್ನು ಕೇಳಿ ನನ್ನನ್ನು ಮರೆಯಿಂದ ಕೊಂದೆ. ಇದು ಯಾವ ಧರ್ಮ, ಯಾವ ಶೌರ್ಯ" ಎಂದು ವಾಲಿ ಕೇಳಿದ್ದಕ್ಕೆ, ರಾಮನು ಅವನಿಗೆ "ತಮ್ಮ ನನ್ನು ಕಾಡಿಗೆ ಅಟ್ಟಿ ಅವನ ಹೆಂಡತಿಯನ್ನು ಇಟ್ಟುಕೊಂಡು ಸುಖದಲ್ಲಿದ್ದ ನೀನು ದಂಡಕ್ಕೆ ಅರ್ಹನು. ಈ ಪ್ರಪಂಚಕ್ಕೆಲ್ಲ ಇಕ್ಷ್ವಾಕುವಂಶದ ರಾಜರು ನಾಥರು. ರಾಜನಾದ ಭರತನ ಪರವಾಗಿ ನಾನು ಈ ದಂಡನೆಯನ್ನು ಮಾಡಿದೇನೆ. ನೀನು ದಂಡನೆಗೆ ಅರ್ಹನೆಂದಮೇಲೆ ಅದನ್ನು ಯಾವ ರೀತಿಯಲ್ಲಿ ವಿನಿಯೋಗ ಮಾಡಬೇಕೆನ್ನುವುದು ನನ್ನ ಇಷ್ಟ. ಇಲ್ಲಿ ಶೌರ್ಯದ ಮಾತು ಯಾವುದೂ ಇಲ್ಲ" ಎಂದು ಹೇಳಿದನು. ಈ ಉತ್ತರ ದಿಂದ ವಾಲಿ ಸಮಾಧಾನಗೊಂಡನೆಂದು ವಾಲ್ಮೀಕಿ ಹೇಳುತ್ತಾನೆ. ವಾಲಿ ಇದನ್ನು ಒಪ್ಪಿಕೊಂಡನೋ ಇಲ್ಲವೋ ನಮಗೆ ತಿಳಿಸುವ ಬೇರೆ ಆಧಾರ ವಿಲ್ಲ. ಆದರೆ ಇದರಲ್ಲಿ ರಾಮನ ನಿಲುವು ಏನೆನ್ನುವುದು ನಮಗೆ ಸ್ಪಷ್ಟ ವಾಗುತ್ತದೆ. ಇಕ್ಷ್ವಾಕುವಂಶದವರು ಈ ಪ್ರಾಂತಕ್ಕೆಲ್ಲ ಅಧಿನಾಥರೆನು ವುದು ರಾಮನ ಭಾವನೆ. ಈ ಕಾರಣದಿಂದಲೇ ಅವನು ಋಷಿಗಳು ಸಹಾಯವನ್ನು ಬೇಡಿದೊಡನೆ ಸಹಾಯ ಮಾಡುವುದಾಗಿ ಮಾತು

ಕೊಟ್ಟನು. ಸುಗ್ರೀವನು ಯಾವ ಸ್ಥಿತಿಯಲ್ಲಿದ್ದಾನೆನ್ನುವುದನ್ನು ಮೊದಲು ರಾಮನಿಗೆ ಹೇಳಿದವನು ಹನುಮಂತನು. ಹನುಮಂತನು ಬಹು ಬುದ್ಧಿಶಾಲಿ. ಅವನ ರೀತಿಯಿಂದ ಅವನು ನಂಬಿಕೆಗೆ ಅರ್ಹನೆಂದು ರಾಮನಿಗೆ ತೋರಿತು. ಸುಗ್ರೀವನಿಗೆ ವಾಲಿಯಿಂದ ಅನ್ಯಾಯವಾಗಿದೆಯೆಂದು ರಾಮನಿಗೆ ನಂಬಿಕೆ ಹುಟ್ಟಿತು. ತಮ್ಮನಿಗೆ ರಾಜ್ಯಬೇಕೆಂದಾಗ ಒಪ್ಪಿ ಕಾಡಿಗೆ ಬಂದಿದ್ದ ರಾಮನಿಗೆ ವಾಲಿ ಬಹಳ ಧೂರ್ತನೆಂದು ಕಂಡಿತು. ಸಾಲದ್ದಕ್ಕೆ ಅವನು ಸುಗ್ರೀವನ ಹೆಂಡತಿಯನ್ನು ಕಸಿದುಕೊಂಡಿದ್ದನು. ಪರನಾರಿಯನ್ನು ಕಣ್ಣೆತ್ತಿನೋಡದ ರಾಮನಿಗೆ ಇದು ಅಕ್ಷಮ್ಯವಾದ ಪಾತಕವೆಂದು ಕಂಡಿತು. ಈ ಎರಡು ವಿಷಯದಲ್ಲಿಯೂ ಅವನಿಗೆ ನಿಸ್ಸಂದೇಹವಾದಮೇಲೆ ವಾಲಿಗೆ ಶಿಕ್ಷೆಮಾಡುವ ವಿಷಯದಲ್ಲಿ ಅವನು ಹಿಂತೆಗೆಯಬೇಕಾಗಲಿಲ್ಲ. ಅದರ ರೀತಿಯನ್ನು ಕುರಿತು ಮಾತ್ರ ಯೋಚಿಸಬಹುದಾಗಿತ್ತು. ವಾಲಿ ವಾನರನು. ಅವನನ್ನು ಕೊಲ್ಲಬೇಕಾದರೆ ರೀತಿ ಏನೆಂದು ರಾಮನು ಬಹಳವಾಗಿ ಯೋಚಿಸಲಿಲ್ಲ. ಹುಲಿಯನ್ನು ಕೊಲ್ಲುವವನು ಅದರ ಜೊತೆಗೆ ಮೈದಾನದಲ್ಲಿ ನಿಂತು ಯುದ್ಧಮಾಡಬೇಕಾದದಿಲ್ಲ. ತಮ್ಮನನ್ನು ಕಾಡಿಗಟ್ಟಿ ಅವನ ಹೆಂಡತಿಯನ್ನು ಇಟ್ಟುಕೊಂಡ ಧೂರ್ತ ಶಾಖಾಮೃಗವನ್ನು ಕೊಲ್ಲುವುದಕ್ಕೆ ಎಷ್ಟು ಒಕ್ಕಣೆ ಎಂದು ರಾಮನು ಯೋಚಿಸಿದನು. ನಾಗರಿಕ ಜನಾಂಗಗಳು ಅನಾಗರಿಕ ರಾಷ್ಟ್ರಗಳಲ್ಲಿ ಪ್ರವೇಶಿಸುವಾಗ ಹೇಗೆ ನಡೆದುಕೊಳ್ಳುವರೆಂಬ ವಿಷಯವನ್ನು ಬಲ್ಲವರು ಇವನ ಈ ಯೋಚನೆ ಅಸಾಧಾರಣ ಎಂದಾಗಲಿ, ಅಸಾಧುವೆಂದಾಗಲಿ, ಹೇಳಲಾರರು; ಅಸಾಧುವೆಂದು ಹೇಳುವುದಾದರೂ ತಾವು ಆ ಸಂದರ್ಭವನ್ನು ಸರಿಯಾಗಿ ಊಹಿಸಲಾರದೆ ಕೊಟಡಿಯಲ್ಲಿ ಕುಳಿತು ತೀರ್ಪು ಕೊಡುವರು. ಯಾರ ನಡತೆಯನ್ನೂ ಹೀಗೆ ವಿಮರ್ಶಿಸುವುದು ತಪ್ಪು. ಆ ಕಾಲದಲ್ಲಿ ಆ ಸ್ಥಳದಲ್ಲಿ ಆ ಸಂದರ್ಭದಲ್ಲಿ ರಾಮನು ದೊಡ್ಡ ರೀತಿಯಿಂದ ನಡೆದುಕೊಂಡನೆ ಇಲ್ಲವೆ ಎಂದು ನಾವು ವಿಮರ್ಶಿಸಬಹುದು. ಕೆಲವರಿಗಾದರೂ ಅವನ ನಡತೆ ಅವನ ನಂಬಿಕೆಯ ಪ್ರಕಾರ ಸರಿಯಾಗಿತ್ತೆಂದು ತೋರಬಹುದು. ಎಂದರೆ ರಾಮನು ಯಾವುದು ಧರ್ಮವೆಂದು ತನ್ನಲ್ಲಿ ವಿಚಾರಮಾಡಿಕೊಂಡು

ಆದರಂತೆ ನಡೆದನು ಎಂದು ಇಂಥವರಿಗೆ ತೋರುತ್ತದೆ. ಒಪ್ಪದವರು ಅವನು ಅಧರ್ಮವೆಂದು ತಿಳಿದದನ್ನೇ ಮಾಡಿದನು ಎಂದೋ, ಧರ್ಮ ವೆಂದು ಅಷ್ಟಾಗಿ ನಿಶ್ಚಯಮಾಡದೆ ತನಗೆ ಸಹಾಯ ಮಾಡುವೆನೆಂದ ಸುಗ್ರೀವನಿಗೆ ರಾಜ್ಯವನ್ನು ಕೊಡಿಸುವುದಕ್ಕಾಗಿ ವಾಲಿಯನ್ನು ಕೊಂದ ನೆಂದೋ ಹೇಳಬೇಕು. ರಾಮನು ಕಂಡಂತೆ ಅಧರ್ಮವನ್ನು ಮಾಡಿದ ನೆಂದು ಯಾರೂ ಹೇಳಲಾರರು; ಅವನು ಮಾಡಿದ ಕೆಲಸದ ಧರ್ಮದಲ್ಲಿ ಸ್ವಲ್ಪ ಕೊರತೆ ಕಾಣುತ್ತದೆ ಎಂದೇ ಪ್ರಾಯಶಃ ಹೇಳುವರು. ಹೀಗಾದರೂ ಧರ್ಮಜ್ಞನೂ ಶೂರನೂ ಆದ ರಾಮನು, ಹೆಂಡತಿಯನ್ನು ಕಳೆದುಕೊಂಡ ಶೋಕದಲ್ಲಿ, ಅವಳು ಏನಾದಳೋ ಎತ್ತ ಹೋದಳೋ ಎಂಬ ಮೋಹದಲ್ಲಿ, ತನ್ನಂತೆ ದುಃಖದಲ್ಲಿದ್ದ ಬಡಪಾಯಿ ಸುಗ್ರೀವನಿಗಾಗಿ ಮರುಕಗೊಂಡು, ಅವನ ಹೆಂಡತಿಯನ್ನು ಕದ್ದಿದ್ದ ವಾಲಿಯಮೇಲೆ ಕೋಪಮಾಡಿ, ತಾನು ಮಾಡುವುದು ಸರಿಯೇ ಎಂಬ ವಿಷಯದಲ್ಲಿ ಸ್ವಲ್ಪ ಸಂದೇಹವಿದ್ದರೂ ವಾಲಿಯನ್ನು ಮರೆಯಿಂದ ಕೊಂದನು ಎಂದು ಮಾತ್ರ ನಾವು ಹೇಳಿ ದಂತಾಗುವುದು. ರಾಮನ ನಡತೆಯಲ್ಲಿ ಇದು ಒಂದು ಕುಂದಾಗ ಬಹುದು; ಆದರೆ ಅವನ ಒಳ್ಳೆಯತನದ ಮೊತ್ತದಲ್ಲಿ ಇದರ ತೂಕ ಬಹಳವಾಗಲಾರದು. ರಾಮನು ದೇವರೆಂದರೆ ದೇವರು ಏಕೆ ತಪ್ಪು ಮಾಡಿದನು ಎಂಬ ಪ್ರಶ್ನೆ ಉಳಿಯುತ್ತದೆ. ರಾಮನು ಮನುಷ್ಯನೆಂಬ ದೃಷ್ಟಿಗೆ ಈ ದೋಷವು ಕ್ಷಮ್ಯವಾಗಿ ಕಾಣಬೇಕು. ರಾಮನು ದೇವ ಕಲ್ಪನು; ಆದರೂ ಮನುಷ್ಯನು. ಅವನ ಜೀವನದ ಅನೇಕ ಗುಣ ಗಳನ್ನು ಕುರಿತು ಚಿಂತಿಸಿದವರಿಗೆ ಈ ತಪ್ಪನ್ನು ಎಣಿಸುವುದು ಬರಿಯ ರಂಧ್ರಾನ್ವೇಷಣ ಎಂದು ತೋರುತ್ತದೆ.

### ಅಗ್ನಿಪ್ರವೇಶ ವಿಚಾರ

ರಾವಣನ ವಧೆಯಾದಮೇಲೆ ರಾಮನು ಸೀತೆಯನ್ನು ಕುರಿತು ಆಡಿದ ನಿಷ್ಠುರವನ್ನೂ ಹೀಗೆಯೇ ಆ ಸಮಯ, ಆ ಸ್ಥಳ, ಆ ಸಂದರ್ಭ ವನ್ನು ಗಮನದಲ್ಲಿಟ್ಟುಕೊಂಡು ವಿಮರ್ಶಿಸಬೇಕು. ವನವಾಸದ ಕಷ್ಟ ಎಷ್ಟೆಂದು ತಿಳಿದೇ ರಾಮನು ಸೀತೆಯನ್ನು ವನಕ್ಕೆ ಬರುವುದು ಬೇಡವೆಂದು ಅಯೋಧ್ಯೆಯನ್ನು ಬಿಡುವ ಮೊದಲು ತಡೆದಿದ್ದನು. ಸೀತೆ ಹಟಮಾಡಿ

ಅವನೊಡನೆ ವನಕ್ಕೆ ಬಂದಿದ್ದಳು. ರಾಮನಿಗೆ ಇದು ಇಷ್ಟವಾಗಿಯೇ ಇದ್ದಿತು. ವನವಾಸದ ಬಹು ವರ್ಷಕಾಲ ಆಟದಂತೆ ಕಳೆಯಿತು. ಕರ್ತವ್ಯದ ದೃಷ್ಟಿಯಿಂದ ರಾಕ್ಷಸರ ಗಡಿನಾಡಿನಲ್ಲಿ ಬಂದು ನಿಂತು ರಾಮನು ಅವರ ವೈರವನ್ನು ಕಟ್ಟಿಕೊಂಡನು. ಒಂದು ದಿನ ಮಾರೀಚನು ಮಾಯಾಮೃಗವಾಗಿ ಬರಲು ಅದು ಮಾಯೆಯ ಮೃಗ ಇದ್ದರೂ ಇರಬಹುದೆಂಬ ಶಂಕೆ ಇದ್ದರೂ ಸೀತೆ ಅದನ್ನು ಬಹಳವಾಗಿ ಅಪೇಕ್ಷಿಸಿದ್ದರಿಂದ ರಾಮನು ಅದನ್ನು ಹಿಂಪಟ್ಟಿಹೋದನು. ಹೋಗುತ್ತ ಅವನು ಲಕ್ಷ್ಮಣನನ್ನು ಸೀತೆಯನ್ನು ನೋಡಿಕೊಳ್ಳೆಂದು ಕಾವಲಿಟ್ಟು ಹೋದನು. ಸ್ವಲ್ಪ ಹೊತ್ತಿನಮೇಲೆ ರಾಮನ ಧ್ವನಿಯಂಥ ಧ್ವನಿಯಿಂದ ಸೀತೇ ಲಕ್ಷ್ಮಣಾ ಎಂದು ಕೂಗಿದಂತೆ ಕೇಳಿತು. ರಾಮನು ಎಂದೂ ಹೀಗೆ ಕೂಗಿಕೊಂಡವನಲ್ಲ. ಅದಕ್ಕೆ ಕೊಂಚ ಹಿಂದೆ ರಾಮನು ತನ್ನ ಎರಡು ತೋಳಿನಿಂದ ಖರದೂಷಣ ತ್ರಿಶಿರಸರನ್ನೂ ಹದಿನಾಲ್ಕು ಸಾವಿರ ರಾಕ್ಷಸರನ್ನೂ ಮುಗಿಸಿದ್ದನು. ಇಂಥವನು ಸೀತೇ ಲಕ್ಷ್ಮಣಾ ಎಂದು ಕೂಗಿಕೊಂಡನೆಂದು ಸೀತೆ ನಂಬುವುದು ಅನವಶ್ಯಕವಾಗಿತ್ತು. ಇದು ಮಾಯೆ, ಮೋಸ ಎಂದು ಲಕ್ಷ್ಮಣನು ಅರಿಕೆಮಾಡಿಕೊಂಡರೂ ಅವನನ್ನು ಹಟಮಾಡಿ ಅಟ್ಟಬೇಕಾಗಿರಲಿಲ್ಲ. ಆ ಹಟದ ಮಾತಾದರೂ ಎಂಥ ಮಾತು. ಲಕ್ಷ್ಮಣನು ಧರ್ಮಿಷ್ಠನೆಂದೂ ಸತ್ಯವ್ರತನೆಂದೂ ರಾಮನನ್ನೂ ತನ್ನನ್ನೂ ತಂದೆತಾಯಂತೆ ಪೂಜಿಸುವನೆಂದೂ ಸೀತೆ ಬಲ್ಲಳು. ಆದರೂ ಅವನು ತನ್ನ ವಿಷಯದಲ್ಲಿ ದುರಭಿಪ್ರಾಯದಿಂದ ಅನುಸರಿಸಿ ಬಂದಿರುವನೆಂದೂ ಅಣ್ಣನು ಸತ್ತರೆ ಸಾಯಲಿ ಅತ್ತಿಗೆ ನನಗೆ ದಕ್ಕುವಳು ಎಂದು ರಾಮನ ಸಹಾಯಕ್ಕೆ ಹೋಗದೆ ನಿಂತಿರುವನೆಂದೂ ಅವಳು ಮೈದುನನಿಗೆ ಬಾಯಿಬಿಟ್ಟು ಹೇಳಿ ನಿರ್ದೋಷಿಯ ಹೊಟ್ಟೆಯನ್ನು ಉರಿಯಿಸಿ ಕಳುಹಿಸಿದಳು. ಇದೆಲ್ಲ ಯಾವ ಉದ್ಧಾರಕ್ಕೆ? ರಾವಣನು ತನ್ನನ್ನು ಹೊತ್ತುಕೊಂಡು ಹೋಗುವಂತೆ ಅನುಕೂಲವನ್ನು ಕಲ್ಪಿಸುವುದಕ್ಕೆ. ಅವಳು ಲಕ್ಷ್ಮಣನಿಗೆ ಹೇಳಿದ ಮಾತನ್ನು ತಿರುಗಿಸಿ ಹೇಳುವುದಾದರೆ, ರಾಮನೊಡನೆ ಇದ್ದುದು ಸಾಕಾಯಿತು, ಯಾರಾದರೂ ಬಂದು ನನ್ನನ್ನು ಕರೆದುಕೊಂಡುಹೋಗಲು ಅವಕಾಶವಿರಲಿ, ಎಂದು ಲಕ್ಷ್ಮಣನನ್ನು ಅಟ್ಟಿದಳೋ ಎನ್ನಬಹುದು.

ಹೇಳಬಾರದ ಮಾತನ್ನು ನಿರಪರಾಧಿಗೆ ಹೇಳಿ, ರಾವಣನಿಗೆ ಸುಲಭವಾಗಿ ಸಿಕ್ಕಿ, ಲೋಕದ ಜನರು ಇಷ್ಟಬಂದಹಾಗೆ ಆಡುವುದಕ್ಕೆ ಸೀತೆಯೇ ಅವಕಾಶವನ್ನು ಕಲ್ಪಿಸಿದಳು. ಅಯ್ಯೋ ಎನ್ನುತ್ತ ಇದ್ದು ಅನ್ನ ಆಹಾರಗಳನ್ನು ಬಿಟ್ಟು ತಲೆಬಾಚಿಕೊಳ್ಳದೆ ಪತಿವ್ರತೆಯಾಗಿ ಹೊರಕ್ಕೆ ಬಂದರೆ ಜನದ ಮಾತು ನಿಲ್ಲುವುದೇನು? ಚೆಲುವೆಯನ್ನು ಒಂದು ವರುಷ ಮನೆಯಲ್ಲಿಟ್ಟು ಕೊಂಡಿದ್ದು ರಾವಣನು ಅವಳನ್ನು ಹಾಗೆಯೇ ಬಿಟ್ಟಿದ್ದನೆ ಎಂದು ಜನ ಹೇಳಲೇ ಹೇಳುವರು. ಸೀತೆಯನ್ನು ಚೆನ್ನಾಗಿ ಕಾಣದವರು "ಏನಾದರೆ ತಾನೆ ಏನು? ತ್ರಿಲೋಕೈಕ ವೀರನೂ ಭಾಗ್ಯಶಾಲಿಯೂ ಆದ ರಾವಣನನ್ನು ನೋಡಿದಮೇಲೆ ಸೀತೆಗಾಗಲಿ ಮನಸ್ಸು ಕಾಡಿನಲ್ಲಿ ಅಲೆಯುತ್ತಿದ್ದ ಸಾಮಾನ್ಯ ಮನುಷ್ಯ ರಾಮನ ವಿಷಯದಲ್ಲಿ ಕನಸು ಎಚ್ಚರದಲ್ಲಿ ಒಂದೇ ರೀತಿಯಾಗಿತ್ತೆ?" ಎಂದು ಹೇಳುವುದೇ ನಿಜ. ರಾವಣನನ್ನೂ ಸೀತೆಯನ್ನೂ ಹೀಗೆ ಹೇಳದಿದ್ದರೂ ರಾಮನನ್ನಂತೂ ಜನರು ಅಪಹಾಸ್ಯ ಮಾಡುವುದು ಸಿದ್ಧವಾದ ಮಾತು. "ಒಂದು ವರ್ಷ ರಾವಣನ ಅಂತಃಪುರದಲ್ಲಿದ್ದ ಹೆಂಡತಿಯನ್ನು ರಾಮನು ಮತ್ತೆ ಅಂಗೀಕರಿಸಿದನು. ಸೀತೆ ಚೆಲುವೆ. ಅವಳನ್ನು ತೊರೆಯುವುದಕ್ಕೆ ಅವನಿಗೆ ಮನಸ್ಸು ಬರಲಿಲ್ಲ. ಮಡಕೆ ಮೈಲಿಗೆಯಾದರೂ ಚೆನ್ನಾಗಿದೆಯೆಂದು ಬಿಡಲಾರದೆ ಒಳಗೆ ತೆಗೆದು ಕೊಂಡನು" ಎನ್ನುವರು. ತನ್ನ ಮನೆತನಕ್ಕೆ ನಿತ್ಯವಾದ ಒಂದು ಅಪಯಶಸ್ಸು ಬಂದು ಸೇರಿತು ಎಂದು ರಾಮನಿಗೆ ಕಂಡದು ಆಶ್ಚರ್ಯವೆ? ಒಂದು ವರುಷ ಕಷ್ಟದಲ್ಲಿದ್ದಳೇ ಎಂದೂ, ಅದರಿಂದ ಬಿಡುಗಡೆಯಾಗಿ ಜೀವದೊಂದಿಗೆ ಎದುರಿಗೆ ನಿಂತಳೇ ಎಂದೂ, ಅವನಿಗೆ ಮನಸ್ಸಿನಲ್ಲಿ ಪ್ರೀತಿ ಕನಿಕರ. ಲಕ್ಷ್ಮಣನಿಗೆ ಎಂಥೆಂಥ ಮಾತನ್ನು ಹೇಳಿ ತನಗೆ ಇಷ್ಟೆಲ್ಲ ಗೋಳಿಗೆ ಕಾರಣವನ್ನುಂಟುಮಾಡಿ ಸಂಪನ್ನೆ ಎದುರಿಗೆ ಬಂದಳೇ ಎಂದು ಅವನಿಗೆ ಕೋಪ. ಇಷ್ಟು ಕಷ್ಟಪಟ್ಟು ಬಿಡಿಸಿಕೊಂಡ ಈ ಹೆಣ್ಣು ತನ್ನನ್ನೂ ತನ್ನ ಕುಲವನ್ನೂ ಲೋಕದ ಮುಂದೆ ಹಗುರಮಾಡಿದಳೇ ಎಂದು ಅವನಿಗೆ ಸಂಕೋಚ. ಇದಕ್ಕೆಲ್ಲ ಇವಳ ಉತ್ತರ ಏನು? ಸೀತೆ ಸತ್ಯವಂತಳೆಂದು ರಾಮನು ಒಪ್ಪಿಕೊಂಡಿದ್ದರೆ ಅದು ಅವನ ಮಾತ್ರಕ್ಕೆ ಸಾಕಾಗಬಹುದಾಗಿತ್ತು; ಲೋಕಕ್ಕೆ ಸಾಲದು. ಲೋಕದ ಮಾತಿಗೆ ಏನು ಉತ್ತರ

ಹೇಳುವುದು? ರಾಮನು ಆ ಹೊತ್ತಿನ ಭಾವಗಳ ವ್ಯಾಕುಲದಲ್ಲಿ ಲೋಕ ಹೇಳುವ ಮಾತನ್ನು ತಾನು ಹೇಳಿಬಿಟ್ಟನು. ರಾಮನ ನಡತೆಯನ್ನು ದೂರುವವರು ಮನುಷ್ಯನ ಸ್ವಭಾವವನ್ನು ಕುರಿತು ಸ್ವಲ್ಪ ಯೋಚನೆ ಮಾಡಬೇಕು. ಅಂಥ ಸಂದರ್ಭದಲ್ಲಿ ತಾವು ಹೇಗೆ ನಡೆದುಕೊಳ್ಳುತ್ತಿದ್ದ ರೆಂದು ಯೋಚಿಸಬೇಕು. ಇದೇ ರೀತಿಯ ಸಂದರ್ಭ ತಮ್ಮ ಸುತ್ತಲಲ್ಲಿ ಎಲ್ಲಿಯಾದರೂ ಕಂಡಿದ್ದರೆ ಅಲ್ಲಿ ಜನರ ನಡೆ ನುಡಿ ಹೇಗೆ ಇದ್ದಿದೆ ಎಂದು ಪರಿಶೀಲಿಸಬೇಕು. ಬೆಂಕಿಯ ಹತ್ತಿರ ಹೋಗಬೇಡವೋ ಎಂದು ಕೂಗು ತ್ತಿರುವಾಗ ಹುಡುಗನು ಅದಕ್ಕೆ ಕೈ ಹಾಕಿ ಸುಟ್ಟುಕೊಂಡರೆ, ಅವನನ್ನು ಹೊರಕ್ಕೆ ಎಳೆದು ಕೋಪದಿಂದ ಬಯ್ಯುವ ಹೊಡೆಯುವ ತಾಯ ಮನೋ ಧರ್ಮವನ್ನು ತಿಳಿಯಬೇಕು. ಆ ಹೊತ್ತಿನ ಹತ್ತು ಭಾವದ ತುಮುಲದಲ್ಲಿ ರಾಮನು ಸೀತೆಯ ಚರಿತ್ರೆಯನ್ನು ಕುರಿತು ಸಂದೇಹದ ಮಾತನ್ನು ಹೇಳಿದಮೇಲೆ ಸೀತೆಗೆ ಉಳಿದದ್ದೇನು? ತಾನು ಸತ್ಯವಂತೆ ಎನ್ನುವುದನ್ನು ಪ್ರಪಂಚ ಒಪ್ಪುವಂತೆ ಸಿದ್ಧಮಾಡುವುದು. ಅದಕ್ಕಾಗಿ ಅವಳು ಚಿತೆ ಯನ್ನು ಮಾಡಿಸಿ ಅಗ್ನಿಯನ್ನು ಹೊಕ್ಕಳು. ಕಾವ್ಯದಲ್ಲಿ ಈ ಅಗ್ನಿಪ್ರವೇಶ ವಿಚಾರವನ್ನು ಕಾವ್ಯದ ರೀತಿಯಿಂದ ವರ್ಣಿಸಿದೆ. ಸಾಯಬೇಕೆಂದು ಸೀತೆ ಅಗ್ನಿಯನ್ನು ಪ್ರವೇಶಿಸುವೆನೆಂದಂತೆ, ಅವಳು ಸಾಯಲೆಂದೇ ರಾಮನು ಸುಮ್ಮನಿದ್ದಂತೆ, ಅಗ್ನಿಯೆಂಬ ದೇವತಾ ವ್ಯಕ್ತಿ ಅವಳನ್ನು ಹೊರಕ್ಕೆ ತಂದು ರಾಮನಿಗೆ ಕೊಟ್ಟಂತೆ, ಕವಿಯ ವರ್ಣನೆ. ಕಾವ್ಯಕ್ಕೆ ಸಹಜ ವಾದ ವಿಚಿತ್ರಗಳಿಂದ ಬಿಡಿಸಿ ಈ ಕಥಾನಕವನ್ನು ನೋಡಿದೆವಾದರೆ ನಮಗೆ ಉಳಿಯುವ ವಿಚಾರ ಏನು? ನಾನು ಸತ್ಯವಂತಳೆನ್ನುವುದನ್ನು ತೋರಿಸಿಕೊಡುತ್ತೇನೆ ಎಂದು ಸೀತೆ ಅಗ್ನಿಯಲ್ಲಿ ನಡೆದಳು. ಇದು ಒಂದು ರೀತಿಯ ಪರೀಕ್ಷೆ. ಪೂರ್ವದಲ್ಲಿ ಎಲ್ಲ ಕಡೆಯಲ್ಲಿಯೂ ವಾಡಿಕೆ ಯಲ್ಲಿದ್ದದು. ಈಗಲೂ ಕೆಲವು ಕಡೆ ವಾಡಿಕೆಯಲ್ಲಿದೆ. ಸತ್ಯವಂತ ರಾದವರಿಗೆ ಇಂಥ ಸಂದರ್ಭದಲ್ಲಿ ಪಂಚಭೂತಗಳು ನೆರವಾಗುವುವೆಂದು ಅಂಥ ಜನರ ನಂಬಿಕೆ. ಸೀತಾದೇವಿ ಅಗ್ನಿಯನ್ನು ಪ್ರವೇಶಿಸಿದಾಗ ಅವಳ ಸತ್ಯದ ಫಲವಾದ ಮನೋದಾರ್ಢ್ಯದಿಂದ ಬೆಂಕಿಯಿಂದ ಸುಡದೆ ಅವಳು ಹೊರಕ್ಕೆ ಬಂದಳು; ಅವಳು ಸತ್ಯವಂತೆಯೆನ್ನುವುದು ಪ್ರಪಂಚಕ್ಕೇ

ಪ್ರಕಾಶವಾಯಿತು. ಈ ಅಗ್ನಿಪ್ರವೇಶದ ಕಥಾನಕ ಈ ರೀತಿಯ ಅಗ್ನಿ ಪರೀಕ್ಷೆಯ ಸಂದರ್ಭವನ್ನು ವರ್ಣಿಸಿದೆ ಎನ್ನುವುದಕ್ಕೆ ಕಥೆಯ ಮಾತು ಗಳೂ ಸಾಧಕವಾಗಿವೆ. ನಾನು ಸತ್ಯವಂತೆಯಾದರೆ ಸಾಕ್ಷಿಯಾದ ಪಾವಕನು ನನ್ನನ್ನು ರಕ್ಷಿಸಲಿ ಎಂದು ಸೀತೆ ಹೇಳಿದಳು. ಅಗ್ನಿ ತನ್ನನ್ನು ಸುಡಲಿ ಎಂದು ಅವಳು ಅದನ್ನು ಹೊಗಲಿಲ್ಲ; ಮನುಷ್ಯರ ನಡತೆಗೆ ಸಾಕ್ಷಿಯಾದ ಅಗ್ನಿದೇವತೆ ತನ್ನನ್ನು ರಕ್ಷಿಸಲಿ ಎಂದು ಹೊಕ್ಕಳು. ತನಗೆ ಅಗ್ನಿಯಿಂದ ತೊಂದರೆಯಾಗುವುದಿಲ್ಲವೆಂದು ಅವಳ ನಂಬಿಕೆ. ಹೀಗೆಯೇ ರಾಮನಿಗಾದರೂ ಅಗ್ನಿ ಅವಳನ್ನು ಸುಡುವುದಿಲ್ಲವೆಂದು ನಂಬಿಕೆ. ಅವಳ ಸತ್ಯದ ವಿಷಯದಲ್ಲಿ ಅವನಿಗೆ ಸಂದೇಹವಿಲ್ಲ; ಆದಕಾರಣ ಅವಳು ಈ ಪರೀಕ್ಷೆಯಿಂದ ಪಾರಾಗುವಳೆನ್ನುವುದರಲ್ಲಿಯೂ ಸಂದೇಹವಿಲ್ಲ. ಆದ್ದರಿಂದಲೇ ಅವಳು ಅಗ್ನಿಯನ್ನು ಹೊಗುವೆನೆಂದರೆ ರಾಮನು ಬೇಡ ವೆನ್ನಲಿಲ್ಲ. ಸೀತೆ ರಾವಣನ ಮನೆಯಲ್ಲಿದ್ದಳೆನ್ನುವುದನ್ನು ಅರಿತ ಲೋಕ ಅವಳು ಅಗ್ನಿಯನ್ನು ಹೊಕ್ಕು ತನ್ನ ಸತ್ಯವನ್ನು ಸಿದ್ಧಾಂತಮಾಡು ವುದನ್ನು ಕಾಣಲಿ ಎನ್ನುವುದೇ ಅವನ ಉದ್ದೇಶ. ಅಗ್ನಿಪ್ರವೇಶದಿಂದ ತನ್ನ ಚರಿತೆ ಶುದ್ಧವಾದದೆಂದು ಪ್ರಪಂಚಕ್ಕೆ ತೋರಿ ಸೀತೆ ಮರಳಿ ತನ್ನನ್ನು ಸೇರಿದಾಗ ರಾಮನು ಈ ಮಾತನ್ನು ಹೇಳಿದನು. "ಇವಳು ಸತ್ಯವಂತೆ ಎಂದು ಬಲ್ಲೆನು. ಆದರೆ ಅದನ್ನು ಲೋಕಕ್ಕೆ ತಿಳಿಸುವುದಕ್ಕಾಗಿ ಹೀಗೆ ಮಾಡಬೇಕಾಯಿತು" ಎಂದ ಅವನ ಮಾತು ಸಮಯಕ್ಕೆ ಅನುಸಾರ ವಾಗಿ ಆಡಿದ ಪೊಳ್ಳುಮಾತಲ್ಲ. ಅವನು ಆ ಮಾತುಗಳಿಂದ ತನ್ನ ನಿಜ ವಾದ ಭಾವವನ್ನೇ ವ್ಯಕ್ತಪಡಿಸಿದನು. ರಾಮನು ಮನುಷ್ಯರ ಸ್ವಭಾವ ವನ್ನು ಚೆನ್ನಾಗಿ ಬಲ್ಲನು. ಲಕ್ಷ್ಮಣನನ್ನು ರಾಮನ ಸಹಾಯಕ್ಕಾಗಿ ಅಟ್ಟುವ ವೇಳೆ ಸೀತೆ ಮೈದುನನಿಗೆ ಹೇಳಿದ ಕೆಟ್ಟ ಮಾತಿನ ಕಹಿ ಲಕ್ಷ್ಮಣನ ಮನಸ್ಸಿನಲ್ಲಿ ಇದ್ದೇ ಇರುವುದು. ಅದು ಹೋಗಬೇಕಾದರೆ ರಾಮನೇ ಅವಳನ್ನು ಎರಡು ಕೆಟ್ಟ ಮಾತಿನಿಂದ ಖಂಡಿಸುವುದು ಅವಶ್ಯಕವೆಂದು ಅವನಿಗೆ ಕಂಡಿರಬೇಕು. ಇದರಮೇಲೆ ಕೆಲವರಿಗೆ ಸೀತೆ ಅಗ್ನಿಯಲ್ಲಿ ಸುಟ್ಟುಹೋಗಿದ್ದರೆ ಏನು ಗತಿ ಎಂದು ತೋರಬೇಕು. ಇದಕ್ಕೂ ಒಂದು ನ್ಯಾಯವಾದ ಸಮಾಧಾನ ಇದೆ. ರಾಮನು ಬಾಳಿನಲ್ಲಿ ಅಪೇಕ್ಷಿಸಿದ್ದು

ಧರ್ಮದಲ್ಲಿ ಪ್ರತಿಷ್ಠಿತವಾದ ಸುಖವನ್ನು; ಧರ್ಮಕ್ಕೆ ಬೆನ್ನು ತಿರುಗಿಸಿ ಅವನು ಸುಖಕ್ಕೆ ಕೈ ನೀಡಲಿಲ್ಲ. ತನ್ನ ಸತ್ಯವನ್ನು ತೋರಿಸುವ ಯತ್ನದಲ್ಲಿ ಸೀತೆ ಅಗ್ನಿಯಲ್ಲಿ ಸುಟ್ಟು ಮುಗಿದಿದ್ದರೆ ಅವನು ದುಃಖಪಡುತ್ತಿದ್ದನು. ಆದರೆ ಅವಳು ಅಗ್ನಿಯನ್ನು ಹೊಕ್ಕ ವಿಷಯದಲ್ಲಿ ಪಶ್ಚಾತ್ತಾಪ ಪಡುತ್ತಿರಲಿಲ್ಲ. ಒಳ್ಳೆಯ ಹೆಸರಿಗಾಗಿ ಅಗ್ನಿಯನ್ನು ಹೊಗಬೇಕು. ಅದು ಸುಟ್ಟರೆ ಸುಡಿಸಿಕೊಳ್ಳಬೇಕು. ಸತ್ಯಕ್ಕಾಗಿ ತಾನು ರಾಜ್ಯವನ್ನು ಬಿಟ್ಟು ಕಾಡಿಗೆ ಬಂದನು. ಸತ್ಯಕ್ಕಾಗಿ ಅವಳು ಜೀವವನ್ನು ಬಿಟ್ಟು ಅಗ್ನಿಯನ್ನು ಹೊಕ್ಕಳು. ಜೀವವನ್ನು ಪೆಟ್ಟಿಗೆಯಲ್ಲಿಟ್ಟು ಬೀಗಹಾಕಿ ಭದ್ರಪಡಿಸಿ ರಕ್ತವೆಂದರೆ ನಡುಗುವ ನಮ್ಮ ಕಾಲದ ಜನಕ್ಕೆ ಸಾವೆನ್ನುವುದು ಬಹು ಭಯಂಕರವಾದ ಘಟನೆಯೆಂದು ಕಾಣುತ್ತದೆ. ಸುತ್ತ ಇರುವ ಸಾವನ್ನು, ನಮ್ಮ ಬಾಳನ್ನೇ ನುಂಗುತ್ತಿರುವ ಸಾವನ್ನು, ನೋಡಲಾರದೆ ನಾವು ಮುಖವನ್ನು ಬೇರೆಯ ಕಡೆಗೆ ತಿರುಗಿಸಿಕೊಳ್ಳುತ್ತಿದೇವೆ. ನಮಗೆ ಅಗ್ನಿ ಪ್ರವೇಶ ಬಹು ಕಠಿಣ ಪ್ರಸಂಗವೆಂದು ಕಾಣುತ್ತದೆ. ಅನೇಕ ರಾಕ್ಷಸರನ್ನು ಕೊಂದ ರಾಮನಿಗಾಗಲಿ, ಯುದ್ಧಭೂಮಿಯ ಶವಗಳನ್ನು ನೋಡುತ್ತ ಬಂದ ಸೀತೆಗಾಗಲಿ, ಸಾವು ಇಷ್ಟು ಭೀಕರವಾಗಿ ಕಂಡಿರಲಾರದು. ಮಾನವಂತರಾದ ಅವರಿಬ್ಬರಿಗೂ ಹೆಸರಿಗಾಗಿ ಸಾಯುವುದು ಅವಮತಿಯ ಬಾಳುವೆಗಿಂತ ಸುಖವೆಂದೇ ಕಂಡಿರಬೇಕು. ನಮ್ಮ ದೇಶದ ಚರಿತ್ರೆಯಲ್ಲಿ ಮಾನಕ್ಕಾಗಿ ಪ್ರಾಣವನ್ನು ಕೊಟ್ಟಿರುವುದು ಹೊಸ ವಿಷಯವೇನೂ ಅಲ್ಲ. ದೇವರ ಕೃಪೆಯಿಂದ ಇದು ಎಲ್ಲ ದೇಶದ ಚರಿತ್ರೆಯಲ್ಲೂ ಕಾಣುತ್ತಲೇ ಇದೆ. ತನ್ನ ವಿಷಯದಲ್ಲಿ ಯಾರೂ ಶಂಕೆಪಡರು ಎಂದು ನಂಬಿಕೆ ಇದ್ದಷ್ಟು ಹೊತ್ತೂ ಸೀತೆ ಸಂತೋಷದಿಂದಿರುತ್ತಿದ್ದಳು. ಅದನ್ನು ಲೋಕಕ್ಕೆ ತೋರಿಸುವುದಕ್ಕೆಂತಲೇ ಅವಳು ಅಶೋಕವನದಲ್ಲಿದ್ದ ಹಾಗೆಯೇ ಅಸ್ನಾತಳಾಗಿ, ಮಲಿನವಸನಳಾಗಿ, ಏಕವೇಣೀಧರೆಯಾಗಿ, ಕ್ಲಾಂತಳಾಗಿ ರಾಮನ ಬಳಿಗೆ ಬರಲು ಅಪೇಕ್ಷಿಸಿದಳು. ಸಚ್ಚರಿತ್ರೆಯನ್ನು ಲೋಕ ಇಷ್ಟರಿಂದ ಒಪ್ಪಿಕೊಳ್ಳುವುದಿಲ್ಲವೆಂದು ರಾಮನಿಗೆ ಕಂಡಿತು. ಲೋಕದ ಭಾವನೆಗೆ ಅವನು ಮಾತಿನಲ್ಲಿ ರೂಪು ಕೊಟ್ಟನು. ತನ್ನ ಚರಿತ್ರೆಯ ವಿಷಯದಲ್ಲಿ ಶಂಕೆಯಿರಬಹುದೆಂದು ಕಂಡಾಗ ಸೀತೆಗೆ

ಹೊಟ್ಟೆ ಉರಿಯಿತು. ಇಂಥ ಹೊತ್ತಿನಲ್ಲಿ ಮನಸ್ಸಿನ ಉದ್ವೇಗದ ಜೇಗೆ ಹೊರಗಿನ ಬೆಂಕಿಯನ್ನು ತಂಪಾಗಿಮಾಡುತ್ತದೆ. ಇದೆಲ್ಲವನ್ನೂ ಕುರಿತು ಯೋಚಿಸಿದವರಿಗೆ ರಾಮನು ಸೀತೆಗೆ ಹೇಳಿದ ಮಾತು ಆಗ್ಗೆ ಅಪ್ರಿಯ ವಾದರೂ ಒಟ್ಟಿನಲ್ಲಿ ಹಿತವಾದದೆಂದೇ ಕಾಣುತ್ತದೆ. ಪತಿ ಸತಿಯ ಮೈಯ್ಯನ್ನು ರಕ್ಷಿಸಬೇಕು; ಹಾಗೆಯೇ ಅವಳ ಹೆಸರನ್ನೂ ರಕ್ಷಿಸಬೇಕು. ಆ ಹೆಸರನ್ನು ರಕ್ಷಿಸುವುದಕ್ಕೆ ಅವಶ್ಯಕವಾದದನ್ನೆಲ್ಲ ಮಾಡಬೇಕು. ಇಂಥವೇಳೆ ಪತಿ ಪತ್ನಿಗೆ ಕೆಟ್ಟಮಾತನ್ನು ಹೇಳಿ ಅವಳ ಪಾರಿಶುದ್ಧ್ಯವನ್ನು ಬೆಳಗದೆಬಿಟ್ಟರೆ, ಹೇಳುವರೂ ಬೆಳಗುವರೂ ಬೇರೆ ಯಾರು? ರಾಮನು ಸೀತೆಗೆ ಈ ಸಂದರ್ಭದಲ್ಲಿ ಲೋಕದ ಕಠಿಣವಾದ ಮಾತನ್ನು ಕಿವಿಗೆ ಹಾಕಿ ಪ್ರಿಯನಾದ ಸಖನಂತೆ ನಡೆದುಕೊಂಡನು. ರಾಮನ ನಡತೆಯನ್ನು ಸರಿಯೆಂದು ಹೇಳುವ ಈ ವಾದವು ಕೆಲವರಿಗೆ ಕಪ್ಪನ್ನು ಬಿಳುಪಾಗಿ ಮಾಡುವ ವಾಕ್ಚಾತುರ್ಯವೆಂದು ಕಾಣಬಹುದು. ಅವರಿಗೆ ನಾವು ಹೇಳುವುದಿಷ್ಟೆ. ಆ ಜನರನ್ನು ಊಹಿಸಿ; ಆ ಸಂದರ್ಭವನ್ನು ಊಹಿಸಿ; ಆ ಪತಿ ಆ ಸತಿಗೆ ಒಳ್ಳೆಯದಾಗುವಂತೆ ಇನ್ನೇನನ್ನು ಮಾಡಬಹುದಾಗಿ ತ್ತೆಂದು ಯೋಚಿಸಿ; ಅದನ್ನು ಮಾಡಿದ್ದರೆ ಲೋಕ ಏನನ್ನು ಹೇಳಬಹು ದಾಗಿತ್ತೆಂದು ವಿಚಾರಿಸಿ. ಆಮೇಲೆ ರಾಮನಲ್ಲಿ ಕುಂದನ್ನು ಎಣಿಸುವಿರಂತೆ. "ಲೋಕ ಏನೆಂದರೆ ಏನು? ಸತ್ಯವಂತರೆಂದು ನಮ್ಮ ಮನಸ್ಸಿಗೆ ಸ್ಥಿರವಾಗಿದ್ದರೆ ಸಾಲದೆ?" ಎನ್ನುವ ಒಂದು ಮಾತನ್ನು ಮಾತ್ರ ನಾವು ಇಲ್ಲಿ ಹೇಳುವುದು ಬೇಡ. ನಮ್ಮ ಸುಖಕ್ಕಾಗಿ ಒಂದು ಕೆಲಸವನ್ನು ಮಾಡುತ್ತ, ಲೋಕವೇನೆಂದರೆ ಏನು ಎನ್ನುವುದು ದೊಡ್ಡವರ ದಾರಿಯಲ್ಲ. ಲೋಕ ಏನೆಂದರೆ ಏನು ಎಂದು ದೊಡ್ಡವರು ಹೇಳುತ್ತಾರೆ: ಆದರೆ ಆಗ ಅವರು ತಮಗೆ ಧರ್ಮವೆಂದು ಕಂಡುದರ ಸಲುವಾಗಿ ಕಷ್ಟವನ್ನು ಕಟ್ಟಿಕೊಳ್ಳುತ್ತಾರೆ. ಇವನು ಎಂಥ ಕಠಿಣನೆಂದು ಲೋಕ ತನ್ನನ್ನು ದೂರಬಹುದೆಂದು ಆ ಹೊತ್ತು ರಾಮನಿಗೆ ತಿಳಿದಿತ್ತು. ಆದರೂ ಅವನು ತನ್ನ, ತನ್ನ ಸತಿಯ, ತನ್ನ ಕುಲದ ಯಶಸ್ಸಿಗಾಗಿ ಕಷ್ಟವನ್ನು ಅಪ್ಪಿ ಕೊಂಡನು. ಅಗ್ನಿಯನ್ನು ಹೊಕ್ಕದು ಸೀತೆ ಮಾತ್ರವಲ್ಲ. ಅವಳ ಜೊತೆಯಲ್ಲಿ ರಾಮನೂ ಒಂದು ಅಗ್ನಿಯನ್ನು ಹೊಕ್ಕನು. ಅವಳು ಬದುಕಿ

ಕೊಂಡಾಗ ಅವನೂ ಬದುಕಿಕೊಂಡನು. ಆ ಎರಡು ಮನಸ್ಸು, ಎರಡು ಜೀವ, ಹೀಗೆ ಒಂದಾಗಿದ್ದದರಿಂದಲೇ ಸ್ವಲ್ಪ ಹೊತ್ತು ಕವಲೊಡೆದು ಮತ್ತೆ ಕ್ರೋಧವಿಲ್ಲದೆ ಬೆರೆತದು. ಇದರಿಂದಲೇ ಸೀತಾದೇವಿ ಗಂಡನ ಕಾಠಿಣ್ಯವನ್ನು ನೆನೆಯದೆ ಇದಾದ ಸ್ವಲ್ಪ ಹೊತ್ತಿನಮೇಲೆ ಅವನು ಕರೆದಾಗ ಅವನ ತೊಡೆಯಮೇಲೆ ಸಂತೋಷದಿಂದ ಕುಳಿತದು. ಅಗ್ನಿಪ್ರವೇಶ ಮಾಡಿದಮೇಲೆ ಆ ತೊಡೆಯಮೇಲೆ ಕುಳಿತು ಸೀತೆ ಲೋಕವನ್ನು ಧೈರ್ಯದಿಂದ ನೋಡಿದಳು. ಆಗ ಅವಳಲ್ಲಿ ಕಂಡ ಸ್ವಲ್ಪ ಲಜ್ಜೆ ಸುಖದ್ದು, ಸಂತೋಷದ್ದು. ಅಗ್ನಿಪ್ರವೇಶ ಮಾಡದೆ ಅವಳು ಗಂಡನ ತೊಡೆಯ ಮೇಲೆ ಕುಳಿತಿದ್ದರೆ ಎಲ್ಲರ ಮನಸ್ಸಿನಲ್ಲಿಯೂ ಸ್ವಲ್ಪ ಕಳಂಕ ಉಳಿದಿರುವ ಸಂಭವವಿತ್ತು; ಕುಳಿತು ಅವಳು ಸ್ವಲ್ಪ ಲಜ್ಜೆಯನ್ನು ತೋರಿಸಿದ್ದರೆ ಅದರ ಕಾರಣ ಏನೆಂಬ ವಿಷಯದಲ್ಲಿ ಬಹು ಜನರಿಗೆ ಬೇರೆ ಬೇರೆ ಭಾವನೆ ಇರುವ ಸಂಭವವಿತ್ತು.

### ಸೀತೆ

ಕವಿ ಸೀತೆಯನ್ನು ಚಿತ್ರಿಸಿರುವ ರೀತಿಯನ್ನು ಈಗ ನಾವು ನೋಡಬಹುದು. ರಾಮಾಯಣದ ಉಪೋದ್ಘಾತಕಾರನು ಈ ಕಾವ್ಯವನ್ನು "ಸೀತಾಯಾಶ್ಚರಿತಂ ಮಹತ್" ಎಂದು ಹೇಳಿದುದು ಈ ಮೊದಲೇ ಉಕ್ತವಾಗಿದೆ. ಉಪೋದ್ಘಾತ ಕರ್ತೃವಿನ ಬುದ್ಧಿ ಬಹು ಸೂಕ್ಷ್ಮವಾದದು. ರಾಮಾಯಣವನ್ನು ರಾಮಾಯಣ ಎನ್ನದೆ ಬೇರೆ ಒಂದು ಹೆಸರಿಂದ ಕರೆಯಬೇಕಾದರೆ ಸೀತಾ ಚರಿತ ಎಂದೇ ಹೇಳಬೇಕು. ರಾಮನು ಎಂಥ ಧೀರನು, ಎಂಥ ಮಹಾತ್ಮನು, ಎಂಥ ಸತ್ಯಪರಾಕ್ರಮನು ಎಂದು ತೋರಿಸಲು ಕವಿ ಎಷ್ಟು ಮಟ್ಟಿಗೆ ಉದ್ದೇಶಿಸಿದನೋ ಅಷ್ಟೇ ಅಥವಾ ಅದಕ್ಕೂ ಹೆಚ್ಚಾಗಿ ಅವನು, ರಾಮನ ಸತಿ ಸೀತೆ ಧೀರಳು, ಮಹಾತ್ಮಳು, ಸತ್ಯಸಂಗರಳು ಎಂದು ತೋರಿಸಲು ಉದ್ದೇಶಿಸಿದನು. ಸೀತಾರಾಮರ ಸಂಸಾರವನ್ನು ಕವಿ ಅಷ್ಟಾಗಿ ವರ್ಣಿಸಲಿಲ್ಲ. ಆದರೆ ಅವರು ಎಳೆಯತನದ ಸಂಸಾರದ ಸುಖವನ್ನು ಅನುಭವಿಸಿದರೆಂದು ಸಾಕಾದಷ್ಟು ಸೂಚನೆ ಮಾಡಿದಾನೆ. "ಈ ನನ್ನ ಮಗಳು ಸೀತೆ ನಿನ್ನ ಸಹಧರ್ಮಚಾರಿಣಿ" ಎಂದು ಜನಕನು ಅವಳ ಕೈಯನ್ನು ರಾಮನ ಕೈಯಲ್ಲಿ

ಇಟ್ಟ ವೇಳೆ ರಾಮನೂ ಸೀತೆಯೂ ಇನ್ನೂ ಸಣ್ಣವರು. ಆದರೆ ಅವಳಿಗೆ ಸಹಧರ್ಮಚಾರಿಣಿಯ ಹೊಣೆ ಯಾವುದೆಂಬ ವಿಷಯದಲ್ಲಿ ಅವಶ್ಯವಾದ ತಿಳಿವಳಿಕೆ ಆಗಲೇ ಹುಟ್ಟಿತ್ತು. ತಂದೆಯ ಕುಲದ ಹಿರಿಮೆಯ ಭಾವನೆಯಿಂದ, ಅವನ ಧರ್ಮದ ಅನವರತ ವೀಕ್ಷಣದಿಂದ, ಅವನ ಸತಿಯ ಸದ್ವರ್ತನದ ಆದರ್ಶದಿಂದ, ಸೀತೆ ಆ ಮೊದಲೇ ಧರ್ಮದೇವತೆಯಂತೆ ಕೃತಾತ್ಮಳಾಗಿದ್ದಳು. ಅದರಿಂದಲೇ ಅವಳು ಪತಿಯೊಡನೆ ಅರಮನೆಯಲ್ಲಿ ಸುಖದಿಂದಿರುವುದಕ್ಕೆ ಹೇಗೋ ಹಾಗೆ ಅವನೊಡನೆ ಕಾಡಿನಲ್ಲಿ ಕಷ್ಟಪಡುವುದಕ್ಕೂ ಸಿದ್ಧಳಾಗಿದ್ದಳು. "ನಾನು ಕಾಡಿಗೆ ಹೋಗಿಬರುತ್ತೇನೆ. ನೀನು ಇಲ್ಲಿಯೇ ಇರು" ಎಂದು ಹೇಳುವುದು ಪತಿಯ ದೃಷ್ಟಿಯಿಂದ ಹೇಗೆ ಸರಿಯಾದ ಮಾತೋ ಹಾಗೆ "ನೀನು ಎಲ್ಲಿ ಹೋದರೆ ಅಲ್ಲಿ ನಾನು ಬರುತ್ತೇನೆ" ಎಂದು ಹೇಳುವುದು ತನ್ನ ದೃಷ್ಟಿಯಿಂದ ಸರಿಯೆಂದು ಸೀತೆಗೆ ನಿಶ್ಚಯವಾಗಿತ್ತು. ಅದನ್ನು ಅವಳು ಒಡನೆಯೇ ಹೇಳಿದಳು; ಸಹಜವಾಗಿ ಹೇಳಿದಳು; ತನಗೆ ಹೇಳುವುದಕ್ಕೆ ಸರಿಯಾದ ಮಾತು ಬೇರೆ ಇಲ್ಲವೆಂಬಂತೆ ಹೇಳಿದಳು. ರಾಮನು ಈ ಮಾತಿನ ವೇಗಕ್ಕೆ ಸೋತನು; ಅದರಿಂದ ಇವಳ ಪ್ರೇಮವೆಂಥದೆಂದು ತಿಳಿದನು. "ನಿನ್ನ ಇಷ್ಟದಂತೆ ಮಾಡು, ನನಗೂ ಅದು ಇಷ್ಟವೆ. ಈ ನಡತೆ ನಿನಗೆ ಅನುಗುಣವಾದದು. ಇದರಿಂದ ನೀನು ನಿಜವಾಗಿ ನಿಮ್ಮ ತಂದೆ ಹೇಳಿದಂತೆ ನನ್ನ ಸಹಧರ್ಮಚಾರಿಣಿ ಆಗುವೆ" ಎಂದನು. ತನ್ನ ಮನಸ್ಸಿನ ನಿಶ್ಚಯವನ್ನು ರಾಮನಿಗೆ ತಿಳಿಸುವುದರಲ್ಲಿ ಸೀತೆ ಅವನನ್ನು ಹಳಿಯುವುದಕ್ಕೆ ಹಿಂಜರಿಯಲಿಲ್ಲ. ಕಾಡಿಗೆ ಹೋಗುವುದು ತನಗೆ ಇಷ್ಟ, ಕಾಡಿನಲ್ಲಿರುವುದು ಬಹಳ ಚೆನ್ನಾಗಿರುತ್ತದೆ, ಕಾಡಿಗೆ ಹೋಗಬೇಕೆಂದು ತನ್ನ ಜಾತಕದಲ್ಲಿದೆ, ಎಂದು ತನ್ನ ದೃಷ್ಟಿಯಿಂದಲೂ, ಪ್ರೀತಿಯಿಂದ ನಡೆದುಕೊಂಡಿರುವ ತನ್ನನ್ನು ತೊರೆದು ಹೋಗಲು ರಾಮನಿಗೆ ಕಾರಣ ಯಾವುದೂ ಇರಲಾರದು, ಹಾಗೆ ಹೋಗುವುದು ವೀರನಾದ ರಾಜಕುಮಾರನಿಗೆ ತಕ್ಕದಲ್ಲ, ತಾನು ಅರಣ್ಯದಲ್ಲಿ ರಾಮನಿಗೆ ಬಹಳ ಭಾರವಾಗುವುದಿಲ್ಲ, ಅವನು ಏನನ್ನು ತಂದರೂ ಅದನ್ನು ತಿಂದು ತೃಪ್ತಳಾಗಿ ಇರುತ್ತೇನೆ ಎಂದು ಅವನ ದೃಷ್ಟಿಯಿಂದಲೂ ಮತ್ತೆ ಮತ್ತೆ ಹೇಳಿದಳು. ತನ್ನನ್ನು ಬಿಟ್ಟೇ ಹೋಗುವುದಾದರೆ ಅದು

ರಾಮನ ಪೌರುಷಕ್ಕೇ ಕಳಂಕವೆಂದು ಬಾಯಿಬಿಟ್ಟು ಹೇಳಿದಳು. ರಾಮನು ತನ್ನನ್ನು ಬೆಂಕಿಗೆ ಹೊಗುವುದಕ್ಕೆ ಬಿಟ್ಟಾಗ ಅವಳು ಇಂಥ ಮಾತನ್ನಾಡಲಿಲ್ಲ. ಅಯೋಧ್ಯೆಯಲ್ಲಿರು ಎಂದಾಗ ಹೆಂಗಸಿನ ವಿನಯಕ್ಕೆ ವಿರುದ್ಧವೆಂದು ಕಾಣುವ ಈ ಮಾತನ್ನು ಆಡಿಬಿಟ್ಟಳು. ಸೀತೆ ಆವಶ್ಯಕ ವೆಂದು ಕಂಡಾಗ ಯಾವ ಮಾತನ್ನಾಡುವುದಕ್ಕೂ ಹಿಂಜರಿಯುವಳಲ್ಲ ವೆನ್ನುವುದು ರಾಮನ ಸಹಾಯಕ್ಕಾಗಿ ಲಕ್ಷ್ಮಣನನ್ನು ಕಳುಹಿಸುವ ಸಂದರ್ಭದಲ್ಲಿ ಅವಳು ಹೇಳಿದ ಮಾತಿನಿಂದಲೂ ಕಾಣುತ್ತದೆ. ಸ್ಥೂಲವಾಗಿ ನೋಡಿದರೆ, ಇದೇಕೆ ಈ ಹೆಂಗಸು ಗಂಡನ ತಮ್ಮನಿಗೆ ಇಂಥ ಮಾತನ್ನು ಆಡಿದಳು, ಎನ್ನಿಸುತ್ತದೆ. ಆ ಸಮಯ, ಆ ಸ್ಥಳ, ಆ ಸಂದರ್ಭಗಳನ್ನು ಊಹಿಸಿಕೊಂಡರೆ ಸೀತೆ ಆ ಮಾತನ್ನಲ್ಲದೆ ಇನ್ನು ಏನನ್ನು ಆಡುವುದೂ ಸಾಧ್ಯವಿರಲಿಲ್ಲವೆನ್ನುವುದು ಸ್ಪಷ್ಟವಾಗುವುದು. ರಾಮನು ರಾಕ್ಷಸರ ಮಾಯೆಯಿರಬಹುದೆಂದು ಸಂದೇಹವನ್ನುಂಟುಮಾಡಿದ್ದ ಮೃಗವನ್ನು ಬೆನ್ನಟ್ಟಿಹೋಗಿದ್ದನು. ಲಕ್ಷ್ಮಣನಿಗಂತೂ ಆ ಮೃಗ ರಾಕ್ಷಸರ ಮಾಯೆಯೆಂದು ಪ್ರಬಲವಾದ ಸಂದೇಹ. ಇದು ಏನಾಗುವುದೋ ಎಂದು ಅವನು ತೀವ್ರವಾದ ಶಂಕೆಯಿಂದ ನಿಂತಿದಾನೆ. ಪತಿ ಅಟ್ಟಿರುವುದು ಮೃಗವೋ ರಾಕ್ಷಸನೋ ಎಂದು ಸೀತೆಗೂ ಶಂಕೆ ಯುಂಟು. ಇವರು ಇದ್ದದು ರಾಕ್ಷಸರ ಓಡಾಟದ ವನಪ್ರದೇಶ ದಲ್ಲಿ. ಮಾರೀಚ ಮೊದಲಾದ ರಾಕ್ಷಸರ ಅಸಾಧಾರಣ ಪರಾಕ್ರಮ ವನ್ನೂ, ಅಭೇದ್ಯ ಛದ್ಮಗಳನ್ನೂ, ಅಚಿಂತ್ಯ ವರ್ತನಗಳನ್ನೂ ಕುರಿತು ಆಶ್ರಮದಲ್ಲಿ ಆಗಾಗ ಸೀತಾರಾಮಲಕ್ಷ್ಮಣರು ಮಾತನಾಡಿರಬೇಕು. ಮಾಯಾಮೃಗವನ್ನು ಕಂಡಾಗ ಲಕ್ಷ್ಮಣನು ಆಡಿದಮಾತು ಇದನ್ನು ಸೂಚಿಸುತ್ತದೆ. ಇಂಥ ವೇಳೆಯಲ್ಲಿ ಕಾಡಿನಲ್ಲಿ ರಾಮನ ಧ್ವನಿಯಿಂದ ಸೀತೇ ಲಕ್ಷ್ಮಣಾ ಎಂದು ಕೂಗು ಕೇಳಿದರೆ ಸೀತೆಗೆ ಏನಾಗಬೇಕು? ರಾಕ್ಷಸನು ಹೀಗೆ ಕೂಗಿದಾಗ ರಾಮನೇ ಸೀತೆಯ ಮನಸ್ಸಿನ ಅವಸ್ಥೆ ಏನಾಗಬೇಕು ಎಂದು ಚಿಂತೆಮಾಡಿದನು. ಕೂಗಿದವನು ರಾಮನಲ್ಲ ವೆಂದು ಸಾವಿರ ಜನ ಸಾವಿರ ಹೇಳಬಹುದು. ಸೀತೆಗೂ ಸ್ವಲ್ಪ ಮಟ್ಟಿಗೆ ಹಾಗೆ ತೋರಬಹುದಾಗಿತ್ತು. ಆದರೆ ಕೂಗಿದ್ದು ರಾಮನೇ ಆಗಿದ್ದರೆ

ಗತಿ ಏನು? ರಾಮನಲ್ಲವೆಂದು ಒಂದೆರಡು ಗಂಟೆ ಕುಳಿತಿದ್ದು ಆಮೇಲೆ ಹೋಗಿ ನೋಡಿ ರಾಮನೇ ಪೆಟ್ಟುತಿಂದು ನೆಲದಲ್ಲಿ ಬಿದ್ದಿರುವುದನ್ನು ಕಂಡರೆ? ಗಂಡನು ಕೂಗಿದರೂ ಸಹಾಯಕ್ಕೆ ಹೋಗದೆ ನಿಲ್ಲುವುದು ಹೆಂಡತಿಗೆ ಸಾಧ್ಯವೆ? ಈ ಹೆಂಡತಿಗಂತೂ ಅದು ಅಸಾಧ್ಯವಾಯಿತು. ಕೂಗಿಕೊಂಡದು ನಿಜವಾಗಿಯೂ ರಾಮನಾದರೆ ಲಕ್ಷ್ಮಣನು ಸಹಾಯಕ್ಕೆ ಹೋಗುವುದು ಒಳ್ಳೆಯದೇ ಆಯಿತು. ಕೂಗಿದ್ದು ರಾಮನಲ್ಲದಿದ್ದರೆ ತೊಂದರೆ ಏನು? ಇಬ್ಬರೂ ಹಿಂದಕ್ಕೆ ಬರುವರು. ಅವರು ಬರುವವರೆಗೆ ತಾನು ಒಬ್ಬೊಂಟಿಗಳಾಗಿ ಇರುವುದೊಂದಲ್ಲದೆ ಇದರಿಂದೇನು? ಅಷ್ಟು ಕೊಂಚ ಹೊತ್ತಿನಲ್ಲಿ ಏನಾಗಬಹುದು? ಇದೆಲ್ಲ ರಾಕ್ಷಸರ ಮೋಸವೇ ಆದಲ್ಲಿ ಅಷ್ಟು ಹೊತ್ತಿನಲ್ಲೇ ಏನಾದರೂ ಆಗಬಹುದೆಂದು ಸೀತೆ ಭಯಪಡಬಹುದಾಗಿತ್ತು. ಆದರೆ ಏನೇನು ಆಗಬಹುದೆಂದು ಯೋಚಿಸುವುದಕ್ಕೂ ಆಗಬಹುದಾದ ಅದನ್ನು ಈಗಾಗಲೇ ಆಗಿರಬಹುದಾದ ಕೇಡಿನೊಂದಿಗೆ ತೂಕಮಾಡಿ ಯಾವುದು ಹೆಚ್ಚು ಎಂದು ನಿರ್ಧರಿಸುವುದಕ್ಕೂ ಆಗ ಅವಳಿಗೆ ಹೊತ್ತು ಇರಲಿಲ್ಲ, ಮನಸ್ಸೂ ಇರಲಿಲ್ಲ. ರಾಮನಿಗೆ ಏನಾಗಿದೆಯೊ; ಅವನ ಸಹಾಯಕ್ಕೆ ಲಕ್ಷ್ಮಣನು ಹೋಗಬೇಕು: ಅವಳ ಜೀವಕ್ಕೆ ಆಗ ತೋಚಿದ್ದು ಇಷ್ಟು ಮಾತ್ರ. ತನ್ನ ಕರ್ತವ್ಯದ ದೃಷ್ಟಿಯಿಂದ ಲಕ್ಷ್ಮಣನು ಹೋಗುವುದಿಲ್ಲವೆನ್ನಲು ಸೀತೆ ಅವನನ್ನು ಛಡಿಯಂಥ ಮಾತಿನಿಂದ ಹೊಡೆದಳು. ಈ ಕಥೆಯನ್ನು ಹೇಳುವಲ್ಲಿ ಕವಿ ಲಕ್ಷ್ಮಣನ ಹೋಗುವುದಿಲ್ಲವೆಂಬ ಮಾತಿನಿಂದ ಸೀತೆಯ ನೀನು ನನ್ನ ವಿಷಯದಲ್ಲಿ ದುರಭಿಪ್ರಾಯವನ್ನಿಟ್ಟುಕೊಂಡಿದ್ದೀಯೆ ಎಂಬ ಮಾತಿಗೆ ಅಂತರವನ್ನೇ ಬಿಟ್ಟಿಲ್ಲ. ಲಕ್ಷ್ಮಣನಿಗೆ ಹೇಳಬಹುದಾದ ಉಳಿದ ಮಾತನ್ನೆಲ್ಲ ಹೇಳಿ ಕೊನೆಗೆ ವಿಧಿಯಿಲ್ಲದೆ ಸೀತೆ ಈ ಕೆಟ್ಟಮಾತನ್ನು ಹೇಳಲಿಲ್ಲ. ಹೋಗುವುದಿಲ್ಲ ಎಂದ ಒಡನೆಯೆ ಕಶಾಪ್ರಹಾರ ಮಾಡಿದಳು. ಲಕ್ಷ್ಮಣನು ರಾಮನ ಸಹಾಯಕ್ಕೆ ಹೋಗದೆ ನಿಂತರೂ ನಿಲ್ಲಬಹುದಾಗಿತ್ತು; ಸೀತೆಯು ಸಹಾಯಕ್ಕೆಂದು ನಿಲ್ಲಲಾಗದೆಹೋಯಿತು. ಇದೇ ಸೀತೆಯ ಉದ್ದೇಶ. ತನ್ನ ಪ್ರಿಯನ ಸಲುವಾಗಿ ಅವಳು ಎಣಿಸಬಾರದ ಯೋಚನೆಗೆ ನಾಲಗೆಯಲ್ಲಿ ನುಡಿಯನ್ನು ಕೊಟ್ಟಳು. ಪ್ರಿಯವಾದ ವಸ್ತುವಿಗಾಗಿ ಹೆಂಗಸು

ಹೀಗೆ ನಡೆಯುವುದು ಸಹಜ. ಇದು ಬಾಳಿನಲ್ಲಿ ಕಾಣುತ್ತದೆ. ಇದನ್ನು ಕಾವ್ಯ ಅನೇಕಸಲ ಗುರುತಿಸಿದೆ. ನಿಜವಾಗಿ ನೋಡಿದರೆ ಸೀತೆ ಬೆಂಕಿಯನ್ನು ಹೊಕ್ಕಾಗ ತೋರಿಸಿದ ಧೈರ್ಯ ಈ ಮಾತನ್ನಾಡಿದಾಗ ತೋರಿಸಿದುದಕ್ಕಿಂತ ಹೆಚ್ಚಿನದಲ್ಲ. ಲಕ್ಷ್ಮಣನನ್ನು ಕುರಿತು ಇಂಥ ಮಾತನ್ನಾಡಿದರೂ ಸೀತೆಗೆ ಅವನ ವರ್ತನೆಯ ವಿಷಯದಲ್ಲಿ ಸ್ವಲ್ಪವಾದರೂ ಶಂಕೆಯಿರಲಿಲ್ಲ. ರಾವಣನು ಬಂದು ತನ್ನನ್ನು ಕದ್ದವೇಳೆಯಲ್ಲಿ ಅವಳು ಮೊದಲು ಕರೆದದು ಲಕ್ಷ್ಮಣನ ಹೆಸರನ್ನು. ಹನುಮಂತನು ಪತಿಯ ಸಂದೇಶವನ್ನು ತಂದಾಗ ಅವಳು ಲಕ್ಷ್ಮಣನನ್ನು ಬಹಳವಾಗಿ ಪ್ರಶಂಸಿಸಿದಳು. ಅವನು ತನಗಾಗಿಯೂ ರಾಮನಿಗಾಗಿಯೂ ಸ್ವಾರ್ಥವನ್ನು ತ್ಯಾಗಮಾಡಿದ್ದನೆನ್ನುವುದನ್ನು ಅವಳ ಮನಸ್ಸು ಕಂಡಿತ್ತು. ರಾಮನು ತನ್ನನ್ನು ಅವಮಾನಪಡಿಸಿದಾಗ ಅವಳು 'ಚಿತಾಂಮೇ ಕುರುಸೌಮಿತ್ರೇ' ಎಂದು ತನಗೆ ಚಿತೆಯನ್ನು ಮಾಡೆಂದು ಲಕ್ಷ್ಮಣನಿಗೆ ಹೇಳಿದಳು. ಈ ಮಾತಿನ ರೀತಿಯಲ್ಲೆಲ್ಲ ಕವಿ ಉತ್ತಮಸ್ತ್ರೀ ಹೃದಯ ಒಂದರ ಸ್ವಭಾವವನ್ನು ಹೊರಗೆಡಹಿದ್ದಾನೆ. ಹೀಗೆಯೇ ಇತರ ಸಂದರ್ಭಗಳಲ್ಲಿ ಸೀತೆಯ ಉತ್ತಮವಾದ ಸ್ತ್ರೀ ಸಹಜವಾದ ಸ್ವಭಾವ ಕಾಣುವುದು. ತನ್ನ ಮಗನ ವಿಷಯದಲ್ಲಿ ಗೌರವದಿಂದ ನಡೆದುಕೊ ಎಂದು ಕೌಸಲ್ಯೆ ತನಗೆ ಹೇಳಿದಾಗ ಸೀತೆ ಅವಳಿಗೆ ''ನೀನು ಹೇಳದೆಯೇ ನಾನು ಅವನೊಂದಿಗೆ ಕಾಡಿಗೆ ಹೊರಟಿದ್ದೇನೆ. ನೀನು ಹೇಳಿಕೊಡತಕ್ಕದೇನು'' ಎಂದು ಉತ್ತರ ಕೊಡಬಹುದಾಗಿತ್ತು. ಅವಳು ಹಾಗೆ ಹೇಳಲಿಲ್ಲ; ಅತ್ತೆಯ ಮಾತನ್ನು ಅಂಗೀಕರಿಸಿದಳು. ಅನಸೂಯಾದೇವಿ ತನ್ನ ಕಥೆಯನ್ನು ಕೇಳಿದಾಗ ಈ ತರುಣ ಸತಿ ಹಿರಿಯರಲ್ಲಿ ಕಿರಿಯರು ಬಿನ್ನವಿಸಿಕೊಳ್ಳುವ ರೀತಿಯಲ್ಲಿ ತನ್ನ ಬಾಲ್ಯದ ವೃತ್ತಾಂತವನ್ನೂ ವಿವಾಹದ ವಿಷಯವನ್ನೂ ರಾಮನ ವರ್ತನದ ವಿವರವನ್ನೂ ಸರಳತೆಯಿಂದ ಸಂತೋಷದಿಂದ ಹೆಮ್ಮೆಯಿಂದ ಅರಿಕೆಮಾಡಿದಳು. ಅನಸೂಯೆ ಪತಿವ್ರತೆಯ ಧರ್ಮವನ್ನು ಉಪದೇಶಮಾಡಲು ದೇವಿ ಆ ಮೊದಲು ಅತ್ತೆಯ ಮಾತನ್ನು ಅಂಗೀಕರಿಸಿದ್ದಂತೆ ಆ ಮಾತನ್ನೂ ನಮ್ರತೆಯಿಂದ ಅಂಗೀಕರಿಸಿದಳು. ಸೀತೆ ರಾಮನಿಗೆ ಅವನ ಕರ್ತವ್ಯದ ವಿಷಯವಾಗಿ ಬುದ್ಧಿ ಹೇಳುವುದಕ್ಕೂ ಹಿಂದೆಗೆಯ

ಲಿಲ್ಲ. ಅದನ್ನು ಹೇಳುವುದರಲ್ಲಿ ಅವನ ಆತ್ಮಗೌರವಕ್ಕೆ ಕುಂದುಬಾರದಂತೆ "ಇದು ನಿನಗೆ ತಿಳಿಯದ ವಿಷಯವಲ್ಲ. ಆದರೂ ಜ್ಞಾಪಕ ಕೊಡುತ್ತೇನೆ" ಎಂದು ಹೇಳಿದಳು. ಅವಳು ಹೀಗೆ ವಹಿಸಿಕೊಂಡ ಅಧಿಕಾರವನ್ನು ರಾಮನೂ ಒಪ್ಪಿಕೊಂಡನು; ತನ್ನ ನಡೆಗೆ ಕಾರಣವೇನೆಂದು ವಿವರಿಸಿ ಅವಳ ಮಾತಿಗೆ ಸಮಾಧಾನ ಹೇಳಿದನು. ರಾವಣನು ತನ್ನನ್ನು ಕದ್ದಾಗ ಸೀತಾದೇವಿ ವನದ ಎಲ್ಲ ಸತ್ವಗಳಿಗೂ ಹಾಕಿದ ಶರಣು ಹೆಣ್ಣ ರೀತಿಯದು. ರಾವಣನಿಗೆ ಅವಳು ಹೇಳುವ ಎಲ್ಲ ಮಾತೂ ಅವನ ವಿಷಯದಲ್ಲಿ ನಡೆದ ಎಲ್ಲ ನಡೆಯೂ ವಿವರ ವಿವರವಾಗಿ ಸ್ತ್ರೀ ಸ್ವಭಾವಕ್ಕೆ ಸಹಜವಾಗಿದೆ. ಹೀಗೆಯೇ ಹನುಮಂತನು ಬಂದಾಗ ರಾಮಲಕ್ಷ್ಮಣರ ಆರೋಗ್ಯವನ್ನು ಕುರಿತು ಕೇಳಿ, ರಾಮನಿಗೆ ತನ್ನ ವಿಷಯದಲ್ಲಿ ಪ್ರೀತಿ ಎಷ್ಟೆಂದು ಹೇಳಿ, ರಾಮನು ತನ್ನನ್ನು ಬಿಡಿಸಿಕೊಳ್ಳಲು ಬೇಗನೆ ಬರುವಂತೆ ಮಾಡು ಎಂದು ಬೇಡಿ, ವಿಶ್ಲೇಷದ ವೇಳೆಯಲ್ಲಿ ತನ್ನ ಕಷ್ಟ ಅಲ್ಲ, ರಾಮನ ಕಷ್ಟ ಎಂದಿಗೆ ತೀರುವುದೋ ಎಂದು ಹಂಬಲಿಸಿದ ಇವಳ ಮಾತಿನಲ್ಲೆಲ್ಲ ಉತ್ತಮ ಸ್ತ್ರೀತ್ವದ ನಿಸರ್ಗ ಸರಳತೆ ಕಾಣುತ್ತದೆ. ದೂರನ್ನು ಹೊರಲಾರದೆ ಅಗ್ನಿಯನ್ನು ಹೊಕ್ಕು ಉತ್ತರಕ್ಷಣದಲ್ಲಿ ಪತಿ ಕೈಚಾಚಲು ಸಂತೋಷದಿಂದ ಅದನ್ನು ಆಶ್ರಯಿಸಿದ ಇವಳ ಕ್ಷಮಾ ಗುಣವೂ ಈ ಸರಳತೆಯ ಫಲ. ಈ ಕ್ಷಮೆ ಮುಂಬೇಸಗೆಯ ಬಿಸಿಲಿಗೆ ಒಣಗಿ ಹಳದಿಯಾಗಿರುವ ಭೂಮಿ ಮುಂಗಾರಿನ ಒಂದು ಹನಿಯಿಂದ ಮತ್ತೆ ಹಸುರಾಗುವ ರೀತಿಯದು. ಭೂಮಿ ಹೇಗೋ ಹಾಗೆ ಸೀತೆ ಕ್ಷಮಾಶೀಲಳು. ಈ ಕ್ಷಮೆಯ ಮೂಲ ಅಸೀಮವಾದ ಒಂದು ಕನಿಕರ. ಸಾಯುತ್ತೇನೆಂದು ಚಿತೆಯನ್ನು ಹೊತ್ತಿಸಿ ದೇವಿ ತಾನು ತೀರಿಕೊಂಡರೆ ಗಂಡನ ಗತಿ ಏನೆಂದು ನೆನೆದು ಅಗ್ನಿ ತನ್ನನ್ನು ರಕ್ಷಿಸಲೆಂದು ಬೇಡಿದಳೆಂದು ಕಾಣುತ್ತದೆ. ಆರ್ಯ ಜೀವನಕ್ಕೆ ಕರುಣೆ ಕರ್ತವ್ಯವೆನ್ನುವುದು ರಾಕ್ಷಸರನ್ನು ಕುರಿತು ಮಾತ್ರವಲ್ಲ, ಆರ್ಯನನ್ನು ಕುರಿತೂ ನಿಜ. ತನ್ನ ಈ ಕನಿಕರ, ಈ ಕ್ಷಮೆಯಿಂದ ಸೀತಾದೇವಿ ಸ್ತ್ರೀಕುಲದ ಮೌಳಿಮಣಿಯಾದಳು, ಸ್ತ್ರೀಯರಿಗೆ ಆದರ್ಶವಾದಳು. ಲಂಕೆಯನ್ನು ಬಿಟ್ಟು ಅಯೋಧ್ಯೆಗೆ ಬರುತ್ತ ರಾಮನು ಕಿಷ್ಕಿಂಧೆಯನ್ನು ತೋರಿಸಲು ಸೀತೆ

ಸುಗ್ರೀವನ ಸಂಸಾರವನ್ನು ನೋಡಬೇಕೆಂದೂ ಅದನ್ನು ಅಯೋಧ್ಯೆಗೆ ಕರೆದುಕೊಂಡು ಹೋಗಬೇಕೆಂದೂ ಅಪೇಕ್ಷಿಸಿದಳು. ಅವಳು ಎಷ್ಟು ಸ್ನೇಹಪರಳೆಂದು ಇದರಿಂದ ಕಾಣುತ್ತದೆ. ಈ ಸ್ನೇಹಪರತೆ ಎಂಥ ಆನಂದದಲ್ಲಿಯೂ ಅವಳನ್ನು ಬಿಡಲಿಲ್ಲ. ಪೈತಾಮಹವಾದ ರಾಜ್ಯದಲ್ಲಿ ಪತಿಯೊಡನೆ ಅಭಿಷಿಕ್ತಳಾದ ವೇಳೆ ರಾಮನು ಅವಳಿಗೆ ಒಂದು ರತ್ನಾಭರಣವನ್ನು ಕೊಡಲು ಸೀತೆ ಅದನ್ನು ತನ್ನ ಎಲ್ಲ ಸುಖಕ್ಕೆ ಕಾರಣನಾದ ಹನುಮಂತನಿಗೆ ಕೊಡಲು ಅಪೇಕ್ಷಿಸಿದಳು. ರಾಮನು ಈ ಇಂಗಿತವನ್ನು ಅನುಮೋದಿಸಲು ಅವಳು ಆ ಹಾರವನ್ನು ಹನುಮಂತನಿಗೆ ಒಪ್ಪಿಸಿದಳು. ಸೀತೆ ಹಗೆಯ ಊರಿನಲ್ಲಿ ಭಯಶೋಕಗಳ ಆಳದಲ್ಲಿ ಒಬ್ಬಳೇ ಸೊರಗುತ್ತಿದ್ದಾಗ ಬಿಡುಗಡೆಯ ಆಸೆ ಅವಳಿಗೆ ಹನುಮಂತನ ರೂಪದಲ್ಲಿ ಬಂದಿತು. ಅವನು ಬರುವವರೆಗೆ ಒಂದೇಸಮನೆ ಕವಿದಿದ್ದ ಕಾರಿರುಳು ಅವನಿಂದ ಬೆಳಗಾಯಿತು. ಕಳೆದುಕೊಂಡ ಭಾಗ್ಯದ ಪುನರ್ಲಾಭ ಸಾಧ್ಯವೆಂದು ಅವನಿಂದ ಅವಳಿಗೆ ತಿಳಿಯಿತು. ಆದ್ದರಿಂದ ಅವಳು ಅವನನ್ನು ತನ್ನ ಶುಭದ ಲಾಂಛನವೆಂದು ಬಗೆದಳು. ಅವನು ರಾಮನಿಗೆ ತನ್ನ ವಿಷಯವನ್ನು ಹೇಳುವುದಕ್ಕೆ ಹೊರಟು ಸಿದ್ಧನಾದಾಗ ಸೀತೆ ಅವನಿಗೆ, ಒಂದು ದಿನ ಇಲ್ಲಿ ಇದ್ದುಹೋಗು, ಎಂದು ಹೇಳಿದಳು. ತನ್ನ ವರ್ತಮಾನ ರಾಮನನ್ನು ಸೇರಬೇಕು; ರಾಮನು ಬಂದು ತನ್ನನ್ನು ಬಿಡಿಸಿಕೊಳ್ಳಬೇಕು; ಇದರಲ್ಲಿ ವಿಳಂಬ ಆಗಬಾರದು. ಆದರೂ ಒಂದು ದಿನದ ವಿಳಂಬವನ್ನು ಸೀತೆ ತಾನೇ ಬೇಡಿದಳು. ಇದರಿಂದ ಸೀತೆಯ ಮನಸ್ಸಿಗೆ ಹನುಮಂತನು ಎಷ್ಟು ಹಿತವಾಗಿ ಕಂಡನೆಂದು ನಾವು ಊಹಿಸಬಹುದಾಗಿದೆ. ರಾಮನ ಅಂಗುಳೀಯಕದಂತೆ ಹನುಮಂತನು ಅವಳಿಗೆ ಮೂರ್ತೀಭವಿಸಿದ ಪತಿಸಂದೇಶವೆಂದು ಕಂಡನು. ಅದರಿಂದ ಅವಳು ಆ ಸೇವಕನಿಗೆ ಇನ್ನು ಯಾರಿಗೂ ಮಾಡದ ಮರ್ಯಾದೆಯನ್ನು ಮಾಡಿದಳು. ಪ್ರಪಂಚದ ಕಾವ್ಯನಾಯಕಿಯರಲ್ಲಿ ಪ್ರಸಿದ್ಧರಾದ ನಾಯಕಿಯರ ಮಧ್ಯೆ ಸೀತಾದೇವಿ ಅಗ್ರಗಣ್ಯಳು. ಕಾವ್ಯ ಇದಕ್ಕೆ ಹೆಚ್ಚಿನದನ್ನು ಕಂಡಿಲ್ಲ; ಇದಕ್ಕೆ ಹೆಚ್ಚಿನದನ್ನು ಚಿತ್ರಿಸಿಲ್ಲ.

## ಲಕ್ಷ್ಮಣ

ಲಕ್ಷ್ಮಣನನ್ನು ಕುರಿತ ಕಲ್ಪನೆಯಲ್ಲಿಯೂ ಕವಿ ಇದೇ ರೀತಿಯ ಸಾಮಗ್ರ್ಯವನ್ನು ತೋರಿದಾನೆ. ರಾಮನಿಗೆ ಲಕ್ಷ್ಮಣನಿಗೆ ವಯಸ್ಸಿನಲ್ಲಿ ಅಂತರವೇ ಇಲ್ಲ. ರಾಮನು ಹುಟ್ಟಿದ ಒಂದೆರಡು ದಿನದಲ್ಲಿ ಇವರೆಲ್ಲ ಹುಟ್ಟಿದರು. ಆದರೂ ಈ ಅಣ್ಣತಮ್ಮಂದಿರು ಬಹು ವರ್ಷದ ಅಂತರವುಳ್ಳ ಸೋದರರಂತೆ ನಡೆದುಕೊಂಡರು. ಇದಕ್ಕೆ ಕಾರಣ ಇವನು ಹಿರಿಯನೆಂದು ಕಿರಿಯನು ಧರಿಸಿದ ಭಕ್ತಿ, ಇವನು ಕಿರಿಯನೆಂದು ಹಿರಿಯನು ಧರಿಸಿದ ಪ್ರೀತಿ. ಎಳೆತನದಿಂದಲೂ ರಾಮ ಲಕ್ಷ್ಮಣರೂ ಭರತ ಶತ್ರುಘ್ನರೂ ಜೊತೆ ಜೊತೆಯಾಗಿ ಬೆಳೆದರು. ರಾಮ ಲಕ್ಷ್ಮಣರು ಒಬ್ಬರನ್ನೊಬ್ಬರು ಬಿಟ್ಟು ಊಟಮಾಡುತ್ತಿರಲಿಲ್ಲ, ಮಲಗುತ್ತಿರಲಿಲ್ಲವಂತೆ. ಇಂಥ ಸಂದರ್ಭದಲ್ಲಿ ಹಿರಿಯನಾದರೂ ಕಿರಿಯನನ್ನು ಬಿಟ್ಟು ಜೀವಿಸಬಹುದು; ಕಿರಿಯನಿಗೆ ಹಿರಿಯನ ಸಹವಾಸ ತೀರ ಅವಶ್ಯಕವಾಗುತ್ತದೆ. ರಾಮ ಲಕ್ಷ್ಮಣರಿಗೆ ಹೆಂಡಿರು ಬಂದಾಗ ಲಕ್ಷ್ಮಣನು ರಾಮನ ಬಾಳಿಂದ ಸ್ವಲ್ಪ ದೂರವಾದನೆಂದು ನಾವು ಊಹಿಸಬಹುದು. ಆದರೆ ಲಕ್ಷ್ಮಣನ ಮುಖ ರಾಮನ ಕಡೆಗೇ ಇದ್ದಿರಬೇಕು. ಇವರು ಇದ್ದ ರೀತಿಯಲ್ಲಿ ರಾಮನಿಗೆ ಸಂಸಾರದ ಸುಖಕ್ಕೆ ಸೀತೆ ಹೇಗೋ ಹಾಗೆ ಉಳಿದೆಲ್ಲ ಸುಖಕ್ಕೆ ಲಕ್ಷ್ಮಣನು ಜೊತೆಗಾರನಾದನು. ಲಕ್ಷ್ಮಣನಿಗೆ ರಾಮನು ಉಳಿದ ಎಲ್ಲ ಬಾಳಿಗಿಂತ ಪ್ರಿಯವಾಗಿ ಕಂಡನು. ರಾಮನ ಸಲುವಾಗಿ ಲಕ್ಷ್ಮಣನು ಭರತನ ವಿಷಯದಲ್ಲಿ ಅಸೂಯೆಪಡುತ್ತಲೇ ಇದ್ದನೆಂದು ಕಾಣುತ್ತದೆ. ಕೈಕಯಿ ತನ್ನ ಮಗನು ರಾಜನಾಗಬೇಕೆಂದು ಕೇಳಿದ್ದು ತಿಳಿದ ಮೊದಲು ಭರತನು ಅರಣ್ಯಕ್ಕೆ ಬಂದು ರಾಮನ ಪಾದುಕೆಯನ್ನು ತೆಗೆದುಕೊಂಡುಹೋಗುವವರೆಗೆ ಈ ಅಸೂಯೆ ಲಕ್ಷ್ಮಣನ ಮಾತಿನಲ್ಲಿ ನಡತೆಯಲ್ಲಿ ಉಕ್ಕಿ ಉಕ್ಕಿ ಹರಿಯಿತು. ಅರಣ್ಯಕ್ಕೆ ಹೋಗಬೇಕೆಂದು ಆಜ್ಞಪ್ತನಾಗಿ ರಾಮನು ಕೋಪಗೊಳ್ಳಲಿಲ್ಲ; ಅವನಿಗೆ ಹೀಗೆ ಹೇಳಿದರೇ ಎಂದು ಲಕ್ಷ್ಮಣನು ಕಿಡಿಕಿಡಿಯಾದನು. ಈ ಕೋಪದ ಆವೇಶದಲ್ಲಿ ಅವನು ಬಾಯಿಗೆ ಬಂದಹಾಗೆ ಮಾತನಾಡಿದನು. ಅವನು ಕೈಕಯಿಯನ್ನು ನಿಂದಿಸಿದನು; ತಂದೆಯನ್ನು ಖಂಡಿಸಿದನು; ಈ ಕೋಳ-

ಅಲಂಕಾರಕ್ಕಲ್ಲ ಇರುವುದು, ಈ ಬಾಣವನ್ನು ನಾನು ಹಿಡಿದಿರುವುದು ಸೊಗಸಿಗಾಗಿ ಅಲ್ಲ, ಎಂದು ಒದರಿದನು. ಅಯೋಧ್ಯೆಯಲ್ಲಿ ನಿಲ್ಲದಿರ ಬೇಕಾದರೆ ರಾಮನಿಗೆ ಶಕ್ತಿಯಿಲ್ಲದ್ದು ಕಾರಣವಲ್ಲ, ಇಷ್ಟವಿಲ್ಲದ್ದು ಕಾರಣ ಎಂದು ಅವನಿಗೆ ತೋರಲಿಲ್ಲ. ರಾಮನು ಅಸಹಾಯಶೂರನು ಎಂದು ಅವನು ಬಲ್ಲನು; ಅಯೋಧ್ಯೆಯಲ್ಲಿ ಇರಬೇಕೆಂದು ಅಪೇಕ್ಷಿಸಿದರೆ ನಿಲ್ಲುವು ದಕ್ಕೆ ಅವನಿಗೆ ಶಕ್ತಿಯಿದ್ದಿತೆಂದೂ ತನ್ನ ಸಹಾಯ ಅವನಿಗೆ ಬೇಕಿಲ್ಲವೆಂದೂ ಲಕ್ಷ್ಮಣನಿಗೆ ತಿಳಿಯದೆ ಇರಲಿಲ್ಲ. ಆದರೂ ತನ್ನ ಸಹಾಯ ರಾಮನಿಗೆ ಬೇಕು ಎಂಬಂತೆ ಅವನು ತರಳನ ರೀತಿಯಲ್ಲಿ ಜಂಭಕೊಚ್ಚಿದನು. ಆದರೆ ಅವನು ಆಡಿದ ಮಾತು ಆಗ ಜಂಭದಿಂದ ಬರಲಿಲ್ಲ; ಅಣ್ಣನನ್ನು ಕುರಿತ ಸ್ನೇಹದಿಂದ ಹೊರಟಿತು. ರಾಮನು ಈ ಮಾತನ್ನೆಲ್ಲ ಒಪ್ಪದೆ ಕಾಡಿಗೆ ಹೊರಡುವುದೆಂದೇ ನಿಶ್ಚಯಿಸಿದಾಗ ಲಕ್ಷ್ಮಣನು ಬಾಯಲ್ಲಿ ಹೇಳದೆ ತಾನೂ ಅವನೊಂದಿಗೆ ಹೋಗುವುದೆಂದು ನಿಶ್ಚಯಮಾಡಿಕೊಂಡನು. ತನ್ನ ನಿಶ್ಚಯದ ಧ್ವನಿ ತೋರುವಂತೆ ರಾಮನೆದುರಿಗೆ ಕೌಸಲ್ಯೆಗೆ ಒಂದು ಮಾತನ್ನು ಹೇಳಿದನು. ಜೊತೆಗೆ ಬರುತ್ತೇನೆಂದು ರಾಮನಿಗೆ ಹೇಳಿದ್ದರೆ ಅವನು ಬೇಡವೆನ್ನಬಹುದಾಗಿತ್ತು; ಕೌಸಲ್ಯೆಗೆ ಹೇಳಿದ ಮಾತಿನ ಧ್ವನಿಗೆ ಅವನು ಅಡ್ಡಿಹೇಳಬೇಕಾಗಿರಲಿಲ್ಲ; ಹೇಳಲೂ ಇಲ್ಲ. ಅವನು ಸುಮ್ಮ ನಿದ್ದುದನ್ನು ಲಕ್ಷ್ಮಣನು ಸಮ್ಮತಿಗೆ ಸಮವೆಂದು ಆ ಮೇಲೆ ವಾದಿಸಿದನು. ಮದುವೆಯಾದ ಹೆಂಡತಿ ಜಗಳವಾಡಿ ರಾಮನೊಡನೆ ಕಾಡಿಗೆ ಹೊರಡು ವುದಕ್ಕೆ ಅಪ್ಪಣೆ ಪಡೆದಂತೆ ತಮ್ಮನಾದ ಇವನೂ ಜಗಳಮಾಡಿ ಸಮ್ಮತಿ ಪಡೆದು ಜೊತೆಗೆ ಹೊರಟನು. ಅಣ್ಣನೆಂದರೆ ಇಂಥ ಪ್ರೇಮವುಳ್ಳ ಲಕ್ಷ್ಮಣನು ಸುಮಿತ್ರೆ ಹೇಳಿದಂತೆ ಆ ಅಣ್ಣನ ಜೊತೆಗೆ ವನಕ್ಕೆ ಹೋಗು ವುದಕ್ಕಾಗಿಯೇ ಹುಟ್ಟಿದಂತಾಯಿತು. ಅಣ್ಣನೊಡನೆ ಹೋಗುವುದು ತನಗೆ ಹೇಗೆ ಇಷ್ಟವೋ ಹಾಗೆ ಆ ಅಣ್ಣನಿಗೆ ಪ್ರಯೋಜನಕರವೂ ಹೌದೆಂದು ಲಕ್ಷ್ಮಣನು ಚೆನ್ನಾಗಿ ಬಲ್ಲನು, ಸ್ಪಷ್ಟವಾಗಿ ಹೇಳಿದನು. ರಾಮಾಯಣವನ್ನು ಒಂದುಸಲ ಓದಿದಮೇಲೆ ಸೀತೆಯಾಗಲಿ ಲಕ್ಷ್ಮಣ ನಾಗಲಿ ಜೊತೆಗಿಲ್ಲದೆ ರಾಮನೊಬ್ಬನೇ ಅರಣ್ಯಕ್ಕೆ ಹೋಗಿದ್ದರೆ ಹೇಗಿರು ತ್ತಿದ್ದಿತು ಎಂಬುದನ್ನು ನಮ್ಮ ಮನಸ್ಸು ಭಾವಿಸಲೇ ಆರದು. ರಾಮನೇ

ಹಿರಿಯನು ; ಇವರಿಬ್ಬರೂ ಅವನ ಅನುಯಾಯಿಗಳು, ಆದರೂ ಇವರಿಲ್ಲದೆ ಅವನನ್ನು ಕಲ್ಪಿಸುವುದು ಊಹೆಗೆ ಕಷ್ಟ. ಅರಣ್ಯದಲ್ಲಿ ಆಶ್ರಮವನ್ನು ಮಾಡಬೇಕಾದರೆ ರಾಮನು ನಿನಗೂ ಸೀತೆಗೂ ಚೆನ್ನವೆಂದು ತೋರಿದ ಸ್ಥಳವನ್ನು ಆರಿಸು ಎಂದು ತಮ್ಮನಿಗೆ ಹೇಳಿದನು. ಲಕ್ಷ್ಮಣನು "ಈ ರೀತಿಯ ಮಾತನ್ನು ನನಗೆ ಹೇಳಬೇಡ. ಎಲ್ಲಿ ಚೆನ್ನಾಗಿದೆಯೋ ನೋಡು, ಇಲ್ಲಿ ಕಟ್ಟು ಎಂದು ಹೇಳು, ನಾನು ಕಟ್ಟುತ್ತೇನೆ" ಎಂದನು. ಅಣ್ಣನ ಪರವಾಗಿ ತಾನು ನಿರ್ಧರಿಸುವುದಕ್ಕೆ ಈ ತಮ್ಮನು ಒಪ್ಪಲಿಲ್ಲ. ಅವನು ಹೇಳಬೇಕು, ತಾನು ಮಾಡಬೇಕು: ಇದು ಇವನ ಮನೋಧರ್ಮ. ಆಳುವುದಕ್ಕೆ ಬೇಕಾದ ಗುಣ ಇದ್ದರೂ ಹಿರಿದೆನ್ನುವುದಕ್ಕೆ ತಗ್ಗಿ ನಡೆಯುವುದೆನ್ನುವುದು ಇವನಿಗೆ ಬಹಳ ಪಾಠವಾಗಿಹೋಗಿತ್ತು. ಯೋಗ್ಯತೆ ಇಲ್ಲದವರು ಆಳಲಪೇಕ್ಷಿಸುವ ಪ್ರಪಂಚದಲ್ಲಿ ಯೋಗ್ಯತೆ ಇದ್ದೂ ಇವನು ಸೇವೆಗೆ ನಿಂತನು. ಊಟ ಉಪಚಾರಕ್ಕೆ, ನಿಲ್ಲುವುದು ಕೂರುವುದಕ್ಕೆ, ಇವನು ಕಟ್ಟಿದ ಲತಾಗೃಹಗಳನ್ನು ನೋಡಿ ರಾಮನು ಮೆಚ್ಚಿಕೊಂಡನು. ತಮ್ಮನ ಪ್ರೀತಿಯಿಂದ ತಂದೆ ಹೋದನೆನ್ನುವುದು ತನ್ನ ಮನಸ್ಸಿಗೆ ಸೋಕಲಿಲ್ಲವೆಂದು ಅವನನ್ನು ಹೊಗಳಿದನು. ಲಕ್ಷ್ಮಣನು ರಾಮನೂ ಸೀತೆಯೂ ದೊಡ್ಡವರು ತಾನು ಒಂದು ಮಗು ಎಂಬಂತೆ ಅವರ ಜೊತೆಯಲ್ಲಿ ನಡೆದುಕೊಂಡನು. ಅಣ್ಣನಿಗೂ ಅತ್ತಿಗೆಗೂ ದಿನವೂ ಪ್ರಣಾಮ ಮಾಡುತ್ತಿದ್ದನೆಂದು ಕಾಣುತ್ತದೆ. ಆ ವೇಳೆಯಲ್ಲಿ ಅವನಿಗೆ ಅತ್ತಿಗೆಯ ಪಾದವನ್ನು ನೋಡಿ ನೋಡಿ ಅದರ ಒಡವೆ ಏನೆನ್ನುವುದು ತಿಳಿದಿತ್ತು. ಅತ್ತಿಗೆಯ ಉಳಿದ ಒಡವುತೊಡವುಗಳನ್ನು ಅವನು ಸರಿಯಾಗಿ ನೋಡಿದವನಲ್ಲ. ರಾವಣನು ಹೊತ್ತುಕೊಂಡು ಹೋಗುವ ವೇಳೆ ಸೀತಾದೇವಿ ದಾರಿಯಲ್ಲಿ ಒಂದು ಗಿರಿಶೃಂಗದಲ್ಲಿ ಐದು ಜನ ವಾನರಪುಂಗವರನ್ನು ಕಂಡು ತನ್ನ ಕುಂಡಲಕೇಯೂರ ನೂಪುರಗಳನ್ನು ರಾಮಲಕ್ಷ್ಮಣರು ಇತ್ತ ಬಂದರೆ ಗುರುತಿಗೆ ಇವರು ತೋರಿಸಲಿ ಎಂದು ಅವರ ಕಡೆಗೆ ಎಸೆದಳು. ಸೀತೆಯನ್ನರಸುತ್ತ ಈ ಅಣ್ಣತಮ್ಮಂದಿರು ಬಂದಾಗ ಸುಗ್ರೀವ ಪ್ರಮುಖರಾದ ಆ ವಾನರರು ಆ ಒಡವೆಗಳನ್ನು ಅವರಿಗೆ ತೋರಿಸಿದರು. ಲಕ್ಷ್ಮಣನು ನೂಪುರವನ್ನು ಗುರುತಿಸಿದನು: ಕುಂಡಲ ಕೇಯೂರಗಳನ್ನು

ಗುರುತು ಹಿಡಿಯಲು ಅವನಿಗೆ ಆಗಲಿಲ್ಲ. ಅತ್ತಿಗೆಯ ವಿಷಯದಲ್ಲಿ ಇಂಥ ನಿಷ್ಕಲ್ಮಷವಾದ ಭಾವವಿದ್ದದರಿಂದಲೇ ಅವಳು ಕೆಟ್ಟಮಾತನಾಡಿದಾಗ ಇವನಿಗೆ ಅಷ್ಟು ಕೋಪ ಬಂದದು. ಕೋಪ ಬಂದಾಗ ತಂದೆಯನ್ನು ಬಾಯಿಗೆ ಬಂದಂತೆ ಬಯ್ದಿದ್ದಹಾಗೆ ಇವನು ಅತ್ತಿಗೆಯನ್ನೂ ಸಿಕ್ಕಿದಂತೆ ಬಯ್ದನು; ಬಯ್ಯುತ್ತ ಅಣ್ಣನನ್ನು ನೋಡುವುದಕ್ಕೆ ಹೊರಟನು. ಲಕ್ಷ್ಮಣನು ಇಷ್ಟು ಕೋಪಿಷ್ಠನಲ್ಲದಿದ್ದರೆ ಪ್ರಾಯಶಃ ಸ್ವಲ್ಪ ದೂರ ಹೋಗಿ ಅಣ್ಣನ ಅಪ್ಪಣೆಯನ್ನು ನಡೆಸುವುದಕ್ಕಾಗಿ ಮರೆಯಿಂದ ಕಾವಲಿರ ಬಹುದಾಗಿದ್ದಿತು. ಆದರೆ ಕೋಪದ ಭರದಲ್ಲಿ ಇಷ್ಟೆಲ್ಲ ವಿವೇಚನೆಗೆ ಅವಕಾಶವಿರಲಿಲ್ಲ. ಆದರೂ ಅವನು ಹೊರಡಬೇಕಾದರೆ ಸೀತೆಯನ್ನು ರಕ್ಷಿಸುವುದಕ್ಕೆ ವನದೇವತೆಗಳನ್ನು ಕಾವಲಿಟ್ಟನು; ಅತ್ತಿಗೆಗೆ ಕೊಂಚ ಪ್ರಣಾಮಮಾಡಿ ಹೊರಟನು. ಈ ಕೊಂಚ ಪ್ರಣಾಮಮಾಡಿ ಎನ್ನುವುದು ಲಕ್ಷ್ಮಣನ ಸ್ವಭಾವವನ್ನು ಚೆನ್ನಾಗಿ ವ್ಯಕ್ತಪಡಿಸುತ್ತದೆ. ಸೀತೆ ಎಂಥ ಅವಿವೇಕದ ಮಾತನ್ನಾಡಿ ತಾನು ಅತ್ತಿಗೆ ಎನ್ನುವುದನ್ನು ಮರೆತರೂ ಈ ಮೈದುನನು ತನ್ನ ಮೈದುನತನವನ್ನು ಮರೆಯಲಾಗಲಿಲ್ಲ. ದಿನವೂ ಕಾಡಿಗೆ ಹೊರಡಬೇಕಾದರೆ ಅತ್ತಿಗೆಗೆ ನಮಸ್ಕಾರ ಮಾಡಿ ಹೊರಡು ತ್ತಿದ್ದನು. ಇಂದು ಹೊರಡುವಾಗಲೂ ನಮಸ್ಕಾರ ಮಾಡದೆ ವಿಧಿಯಿಲ್ಲ; ಎಂದಿನಂತೆ ಮಾಡುವುದು ಸಾಧ್ಯವಲ್ಲ. ಅತ್ತಿಗೆಯಿಂದ ಕೆಟ್ಟಮಾತನ್ನು ಕೇಳಿ ರಾಮನ ಸಹಾಯಕ್ಕೆ ಹೋದ ಇವನು ರಾಮನಿಂದಲೂ ಆಕ್ಷೇಪಣೆಗೆ ಗುರಿಯಾದನು. ಇದು ಎಲ್ಲ ಸೇವಕರ ಗತಿ. ಆಶ್ರಮಕ್ಕೆ ಮರಳಿ ಬಂದಾಗ ರಾಮನ ಮನಸ್ಸಿನ ಸ್ಥಿತಿ ಏನಾಯಿತೆಂದು ಕವಿ ವರ್ಣಿಸಿದಾನೆ. ಲಕ್ಷ್ಮಣನ ಮನಸ್ಸಿನ ಸ್ಥಿತಿಯನ್ನು ವರ್ಣಿಸಿಲ್ಲ; ಆದರೆ ಅದನ್ನು ನಾವು ಊಹಿಸಬಹುದು. ಕೆಟ್ಟಮಾತನ್ನಾಡಿದ ಅತ್ತಿಗೆಯದು ತಪ್ಪಲ್ಲ, ಕೆಟ್ಟ ಮಾತನ್ನು ಸಹಿಸಿಕೊಳ್ಳದೆ ಅತ್ತಿಗೆಯನ್ನು ಬಿಟ್ಟುಹೋದ ತನ್ನ ತಪ್ಪು ಬಹು ದೊಡ್ಡ ತಪ್ಪು ಎಂದು ಅವನಿಗೆ ಕಂಡಿರಬೇಕು. ಎಲ್ಲವನ್ನೂ ಬಿಟ್ಟು ತನ್ನೊಡನೆ ಕಾಡಿಗೆ ಬಂದನೆಂಬ ಕಾರಣದಿಂದ ನಿಜವಾಗಿಯೂ ದಾಕ್ಷಿಣ್ಯ ಸ್ವಭಾವದ ರಾಮಚಂದ್ರನು ತಮ್ಮನನ್ನು ಬಹಳ ದೂರಲಿಲ್ಲ. ಆದರೆ ಅವನಿಗೂ ಆ ಹೆಂಡತಿಯ ಹಟದಂತೆ ಈ ತಮ್ಮನ ಹುಡುಗತನವೂ ಬಹು

ಕಷ್ಟಕ್ಕೆ ಕಾರಣವಾಯಿತೆಂದು ತೋರಿರಬೇಕು. ಸುಗ್ರೀವನ ಸಖ್ಯವಾದ ಮೇಲೆ ಸೀತೆಯನ್ನು ಹುಡುಕುವ ಸನ್ನಾಹ ಸ್ವಲ್ಪ ತಡವಾದಾಗ ಲಕ್ಷ್ಮಣನು ರಾಮನ ಪರವಾಗಿ ಸುಗ್ರೀವನಿಗೆ ಸಂದೇಶವನ್ನು ತೆಗೆದು ಕೊಂಡುಹೋದನು. ಆಗಲೂ ಇವನದು ಕೋಪವೆ. ಇವನ ರೀತಿಯನ್ನು ನೋಡಿ ಕಿಷ್ಕಿಂಧೆಯ ವಾನರರು ಭೀತರಾಗಿ ದೂರದೂರ ಸರಿದರು. ಸುಗ್ರೀವನ ಅರಮನೆಯನ್ನು ಹೊಕ್ಕಾಗ ಪ್ರಜ್ವಲಿಸಿ ಬೆಳೆದಿದ್ದ ಇವನ ಕೋಪ ಅಲ್ಲಿ ಸ್ತ್ರೀಯರ ಆಭರಣಗಳ ಸದ್ದನ್ನು ಕೇಳಿ ಕಡಿಮೆಯಾಯಿತು. ಹೆಂಗಸರ ಸನ್ನಿಧಿಯಲ್ಲಿ ವೀರನಿಗೆ ಕೋಪ ತರವಲ್ಲ. ಇವನು ಬಂದನೆಂದು ತಿಳಿದು ಇವನಿಗೆ ಸಮಾಧಾನ ಹೇಳೆಂದು ಸುಗ್ರೀವನು ತಾರೆಯನ್ನು ಕಳುಹಿಸಿದನು. ತಾರೆ ಬಂದು ತನಗೆ ಸಹಜವಾದ ವಿಲಾಸದಿಂದ ಭಾವ ಯುಕ್ತವಾದ ಎರಡು ಮಾತನ್ನಾಡಿ ಸುಗ್ರೀವನ ಪರವಾಗಿ ಕ್ಷಮೆಯನ್ನು ಬೇಡಲು ಇವನ ಕೋಪ ತೀರ ತಣ್ಣಗಾಯಿತು. ಯುದ್ಧದಲ್ಲಿ ಉಳಿದ ನಾಯಕರೊಂದಿಗೆ ತಾನೊಬ್ಬ ಸಾಮಾನ್ಯ ನಾಯಕನಂತೆ ಲಕ್ಷ್ಮಣನೂ ಭಾಗವನ್ನು ವಹಿಸಿದನು. ಅವನು ಇಂದ್ರಜಿತ್ತನ್ನು ಕೊಂದು ಬಂದಾಗ ರಾಮನು ಅವನನ್ನು ಬಹಳವಾಗಿ ಶ್ಲಾಘಿಸಲು ಈ ತಮ್ಮನು ನಾಚಿಕೊಂಡು ನಿಂತನು. ಆ ಅಣ್ಣನು ತಮ್ಮನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಅವನ ಮೈಯ ಗಾಯದಿಂದ ತಾನು ನೊಂದನು. ಅಷ್ಟಘಂಟಾ ಶಕ್ತಿ ಯಿಂದ ಲಕ್ಷ್ಮಣನು ಮೂರ್ಛೆಬಿದ್ದಾಗಲಂತೂ ರಾಮನಿಗೆ ತನ್ನ ಬಾಳೇ ಕೆಟ್ಟುಹೋದಂತೆ ಕಂಡಿತು. ಸೀತೆ ಮರಳಿ ದೊರೆಯದಿದ್ದರೂ ಸಮ್ಮತವೆ, ತಮ್ಮನು ಹೋಗುವುದು ಸಮ್ಮತವಲ್ಲ, ಎಂಬಂತೆ ಅವನು ಆಗ ಹಲುಬಿ ದನು. ಅಯೋಧ್ಯೆಗೆ ಬಂದಮೇಲೆ ತನಗೆ ಪಟ್ಟಾಭಿಷೇಕವಾದಾಗ ರಾಮನು ಲಕ್ಷ್ಮಣನನ್ನು ಯುವರಾಜನಾಗೆಂದನು. ಇದನ್ನು ರಾಮನು ವ್ಯಂಗ್ಯದಲ್ಲಿ ಆಡಿದನೆಂಬಂತೆ ಕೆಲವರು ಅರ್ಥ ಹೇಳುತ್ತಾರೆ. ಇಲ್ಲಿ ನಿಜವಾಗಿ ವ್ಯಂಗ್ಯದ ಸೂಚನೆಯೇನೂ ಇಲ್ಲ. ಜನ್ಮವೆತ್ತಿದ ಕ್ರಮದಲ್ಲಿ ಲಕ್ಷ್ಮಣನು ಭರತನಿಗೆ ಮುಂದು ಎಂದು ಒಂದೆರಡು ಕಡೆ ಸೂಚನೆ ಇದೆ. ರಾಮನಾದಮೇಲೆ ಅವನೇ ಹಿರಿಯನು. ಆದದರಿಂದ ರಾಮನು ಅವನಿಗೆ ಯುವರಾಜ ಪದವಿಯನ್ನು ನೀಡಿದ್ದು ನ್ಯಾಯವೇ. ಆದರೆ ಲಕ್ಷ್ಮಣನು

ಅದಕ್ಕೆ ಒಪ್ಪಲಿಲ್ಲ; ಭರತನು ಯುವರಾಜನಾಗಲೆಂದು ಕೇಳಿಕೊಂಡನು. ಸೀತಾರಾಮರು ಅಯೋಧ್ಯೆಗೆ ಬಂದಮೇಲೆ ಲಕ್ಷ್ಮಣನಿಗೆ ಯೌವರಾಜ್ಯ ಮುಂತಾದ ಪದವಿಗಳಿಂದ ಆಗಬೇಕಾದದು ಏನೂ ಇರಲಿಲ್ಲ. ಅವನು ಎಂದಿನಂತೆ ರಾಮನ ತಮ್ಮನಾಗಿರುವ ಪದವಿಯನ್ನು ಅನುಭವಿಸುವುದರಲ್ಲಿ ತೃಪ್ತನಾಗಿದ್ದನು. ರಾಮನಿಗಾಗಿ ಬಹು ಜನ ದುಡಿದರು: ಅವರಲ್ಲಿ ಮೊದಲಸ್ಥಾನ ಈ ತಮ್ಮನದು. ಶೌರ್ಯದಲ್ಲಿ, ಚಾರಿತ್ರಶುದ್ಧಿಯಲ್ಲಿ, ನೀತಿಯಲ್ಲಿ, ಆರ್ಜವದಲ್ಲಿ, ಋತದಲ್ಲಿ, ಪ್ರೇಮದಲ್ಲಿ, ಸರಳತೆಯಲ್ಲಿ, ಲಕ್ಷ್ಮಣನಿಗೆ ಸಮನೆಂಬ ವ್ಯಕ್ತಿ ಸಾಹಿತ್ಯದಲ್ಲಿ ಸಿಕ್ಕಬಹುದು. ಮಿಗಿಲೆಂಬ ವ್ಯಕ್ತಿ ಇರಲಾರನು.

### ಭರತ

ಭರತನು ರಾಮನ ಚರಿತ್ರೆಯಲ್ಲಿ ಲಕ್ಷ್ಮಣನಷ್ಟು ವಿಸ್ತಾರವಾದ ಭಾಗವನ್ನು ಆಕ್ರಮಿಸಿಲ್ಲ. ಆದರೆ ಅವನ ಭ್ರಾತೃಪ್ರೇಮವಾದರೂ ಸುಂದರವಾದದು, ಸ್ತುತ್ಯವಾದದು. ಹುಡುಗನಂತೆ ನಡೆಯುವುದಕ್ಕೆ ಅವನಿಗೆ ಅಧಿಕಾರವಿರಲಿಲ್ಲ; ಅವನು ಹಿರಿಯರಲ್ಲಿ ಒಬ್ಬನು. ಆದರೆ ತಾಯನ್ನು ನಿಂದಿಸುವುದರಲ್ಲಿ, ತನ್ನನ್ನು ಶಪಿಸಿಕೊಳ್ಳುವುದರಲ್ಲಿ, ಅಣ್ಣನು ಅಯೋಧ್ಯೆಗೆ ಬರಬೇಕೆಂದು ಹಟಮಾಡುವುದರಲ್ಲಿ, ಇವನು ತಾನು ಕಿರಿಯ ನೆನ್ನುವುದನ್ನು ತೋರಿಸುತ್ತಾನೆ. ಮಾವನ ಮನೆಯಿಂದ ಅಯೋಧ್ಯೆಗೆ ಬಂದು ತಾಯಿಯಿಂದ ಅವನು ದಶರಥನ ಮರಣದ ಮತ್ತು ರಾಮನ ಅರಣ್ಯಗಮನದ ವೃತ್ತಾಂತವನ್ನು ತಿಳಿದ ಸಂದರ್ಭದ ಕಥನ ಕೌಶಲವನ್ನು ಈ ಮೊದಲೇ ಹೇಳಿದೆ. ಅಲ್ಲಿ ಭರತನ ಸ್ವಭಾವ ಚೆನ್ನಾಗಿ ಪ್ರಕಾಶ ವಾಗುತ್ತದೆ. ಅವನಿಗೆ ದೊರೆತನ ಬೇಕಿರಲಿಲ್ಲ. ಅದಕ್ಕಾಗಿ ಇಷ್ಟೆಲ್ಲ ಅನಾಹುತವಾಯಿತೆಂದು ಅವನು ಹುಚ್ಚನಂತಾದನು. ಕೈಕಯಿ ಮಾಡಿದ್ದು ತಪ್ಪೆಂದು ಅವಳಿಗೆ ಹೇಳುವಲ್ಲಿ, ತಾಯ ವಿಷಯದಲ್ಲಿ ಮಗನು ಹೇಳ ಬಹುದಾದ ಮಾತಿನ ಎಲ್ಲೆಯನ್ನು ಮೀರಿ ನುಡಿದನು. ತನಗೆ ದುರಭಿ ಪ್ರಾಯವಿಲ್ಲವೆಂದು ಕೌಸಲ್ಯೆಗೆ ಪ್ರತ್ಯಯವನ್ನು ಉಂಟುಮಾಡುವುದಕ್ಕಾಗಿ "ರಾಮನು ಹೋದದು ನನ್ನ ಅನುಮತಿಯಿಂದ ಆದರೆ ನನಗೆ ಈ ಪಾಪ

ಬರಲಿ, ಆ ಪಾತಕ ಒದಗಲಿ, ಇನ್ನೊಂದು ದುರ್ಗತಿ ಸಂಭವಿಸಲಿ'' ಎಂದು ಶಾಪಗಳ ಸುರಿಮಳೆಯನ್ನು ಸುರಿದನು. ಇದೆಲ್ಲಕ್ಕೂ ಮುಖ್ಯಕಾರಣ ಅವನಿಗೆ ರಾಮನಲ್ಲಿದ್ದ ಪ್ರೇಮ. ದಶರಥನು ಭರತನಿಲ್ಲದ ವೇಳೆಯನ್ನು ನೋಡಿ ರಾಮನ ಯೌವರಾಜ್ಯಾಭಿಷೇಕದ ಏರ್ಪಾಡನ್ನು ಮಾಡಿದನೆಂದು ಈ ಮೊದಲು ಸೂಚಿಸಿದೆ. ಅಣ್ಣನು ದೊರೆಯಾಗತಕ್ಕದು ನ್ಯಾಯ ಎಂದು ಭರತನಿಗೆ ತಿಳಿದಿತ್ತು. ಆದರೆ ಇವನು ಇದನ್ನು ತಿಳಿದಿರುವನೆಂದು ದಶರಥನು ಕಾಣಲಿಲ್ಲ. ಈ ಮಗನಲ್ಲಿ ನಂಬಿಕೆಯಿದ್ದು ಅವನಿರುವ ವೇಳೆ ದಶರಥನು ರಾಮನ ಅಭಿಷೇಚನದ ಏರ್ಪಾಡನ್ನು ಮಾಡಿದ್ದರೆ ರಾಮಾಯಣದ ಕಥೆ ವನವಾಸದವರೆಗೆ ಬೆಳೆಯುತ್ತಿರಲಿಲ್ಲ. ತಾಯಿ ಇಂಥ ಅವಿವೇಕದ ವರವನ್ನು ಕೇಳುವಳೆಂದು ತಿಳಿದೊಡನೆ ಭರತನು ಕೂಗಾಡಿ ನನಗೆ ರಾಜ್ಯ ಬೇಡವೆಂದು ಆ ಮಾತನ್ನು ಮುಗಿಸುತ್ತಿದ್ದನು. ಅವನನ್ನು ನಂಬದೆ ದಶರಥನು ಯಾವ ಅನರ್ಥವನ್ನು ತಪ್ಪಿಸಲು ನೋಡಿದನೋ ಅದೇ ಅನರ್ಥದ ದಾರಿಯನ್ನು ಸುಕರವಾಗಿ ಮಾಡಿದನು. ರಾಮನನ್ನು ಕರೆತರಲು ಹೊರಟು ಗುಹನ ಊರಿನಲ್ಲಿ ಅಣ್ಣನು ನೆಲದ ಮೇಲೆ ಮಲಗಿದ್ದುದನ್ನು ಪ್ರತ್ಯಕ್ಷವಾಗಿ ಅರಿತಾಗ ಭರತನ ದುಃಖ ಮಿತಿಮೀರಿಹೋಯಿತು. ಈ ದುಃಖದ ಜೊತೆಗೆ ಇವನಿಗೆ ಎಲ್ಲರೂ ತನ್ನ ವಿಷಯದಲ್ಲಿ ಶಂಕೆಪಡುತ್ತಿರುವರೆಂಬ ನೋವು ಬೇರೆ. ಗುಹನು ಇವನ ವಿಷಯದಲ್ಲಿ ಸಂದೇಹಪಟ್ಟನು; ಭರದ್ವಾಜನೂ ಸಂದೇಹಪಟ್ಟನು. ಅಣ್ಣನನ್ನು ಇವನು ಹಿಂಬಾಲಿಸಿ ಹೋಗುವುದೇಕೆ? ಅವನಿಗೆ ಸೇರ ಬೇಕಾಗಿದ್ದ ರಾಜ್ಯ ತನಗೆ ಬಂದರೂ ಇವನಿಗೆ ತೃಪ್ತಿಯಿಲ್ಲವೆ? ಇದು ಅವರ ಮನಸ್ಸಿನ ಎಣಿಕೆ. ತನ್ನ ಮನಸ್ಸಿನಲ್ಲಿ ಕಲ್ಮಷವಿಲ್ಲದಿರುವಲ್ಲಿ ಇಂಥ ಜೀವಕ್ಕೆ ಹೀಗೆ ಶಂಕೆಪಡುವವರ ಒಂದೊಂದು ಮಾತೂ ಮುಳ್ಳಿನ ಕೊನೆಯಂತೆ ಕ್ರೂರವಾಗುತ್ತದೆ. ಒಂದು ಕೆಟ್ಟ ಯೋಚನೆಯಿಲ್ಲದೆ ಅಣ್ಣನ ವಿಷಯದಲ್ಲಿ ಅಕುಟಿಲವಾಗಿ ನಡೆದುಕೊಂಡ ಭರತನು ತಾನು ಕಾಡಿಗೆ ಹೋಗುತ್ತಿರುವುದು ರಾಮನಿಗೆ ಕೇಡನ್ನು ಮಾಡುವುದಕ್ಕಾಗಿ ಅಲ್ಲ ಎಂದು ಹೆರವರಿಗೆ ವಿವರಿಸಬೇಕಾಯಿತು. ಗುಹನೂ ಭರದ್ವಾಜನೂ ರಾಮನಿಗೆ ಬೇಕಾದವರೆನ್ನುವ ವಿಷಯದಲ್ಲಿ ಲೋಕಕ್ಕೆ ಸಂದೇಹವಿಲ್ಲ.

ತಾನೂ ಬೇಕಾದವನೆನ್ನುವುದನ್ನು ಭರತನು ತೋರಿಸಿಕೊಡಬೇಕಾಯಿತು. "ತಾಯ ಇಚ್ಛೆಯನ್ನು ನಡೆಸಿಕೊಟ್ಟದ್ದಾಯಿತು. ಇನ್ನು ಹಿಂದಿರುಗಿ ಬಂದು ನ್ಯಾಯವಾಗಿ ನಿನಗೆ ಬರಬೇಕಾಗಿದ್ದ ರಾಜ್ಯವನ್ನು ಆಳು" ಎಂದು ಭರತನು ರಾಮುನನ್ನು ಬಗೆ ಬಗೆಯಾಗಿ ಬೇಡಿಕೊಂಡನು. ಅವನು ಒಪ್ಪದೆ ಇರಲು ಅವನ ಪಾದುಕೆಯನ್ನು ರಾಜನ ಸ್ಥಾನದಲ್ಲಿ ಇರಿಸಲು ತೆಗೆದುಕೊಂಡು ಅಯೋಧ್ಯೆಗೆ ಹಿಂತಿರುಗಿದನು. ರಾಮನು ಒಪ್ಪಿದ್ದರೆ ಭರತನು ಅವನೊಂದಿಗೆ ಲಕ್ಷ್ಮಣನಂತೆ ಅರಣ್ಯದಲ್ಲಿ ಇದ್ದುಬಿಡುತ್ತಿದ್ದನು. ಆದರೆ ರಾಮನು ಅರಣ್ಯದಲ್ಲಿ ಇರುವುದು ಹೇಗೋ ಹಾಗೆ ಭರತನು ರಾಜ್ಯದಲ್ಲಿ ಇರುವುದೂ ಪಿತೃವಾಕ್ಯದ ಭಾಗ. ಅದನ್ನು ಈ ಮಕ್ಕಳು ನಡೆಯಿಸಬೇಕಾಯಿತು. ಈ ಕರ್ತವ್ಯ ಇಷ್ಟವಲ್ಲದಿದ್ದರೂ ಅಣ್ಣನನ್ನು ಮೆಚ್ಚಿಸುವುದಕ್ಕಾಗಿ ಭರತನು ಅದನ್ನು ವಹಿಸಿದನು. ಸುಮಿತ್ರಾದೇವಿ ಲಕ್ಷ್ಮಣನಿಗೆ ಅಡವಿಯನ್ನೇ ಅಯೋಧ್ಯೆಯೆಂದು ತಿಳಿ ಎಂದು ಹೇಳಿದ ಮಾತನ್ನು ಅಯೋಧ್ಯೆಯನ್ನು ಅಡವಿಯೆಂದು ತಿಳಿ ಎಂಬ ಅರ್ಥದಿಂದಲೂ ಹೇಳಿದಳೆಂದು ನಮ್ಮಲ್ಲಿ ವ್ಯಾಖ್ಯಾನಮಾಡುವುದುಂಟು. ಸುಮಿತ್ರಾದೇವಿ ಆ ಅರ್ಥದಿಂದ ಹೇಳಿದರೂ ಹೇಳದಿದ್ದರೂ, ಅಯೋಧ್ಯೆ ರಾಮನಿಲ್ಲದ ಕಾರಣ ಬಹು ಜನರಿಗೆ ಅಡವಿಗಿಂತ ಕೇಡಾಯಿತು. ಅವರಲ್ಲಿ ಭರತನು ಮೊದಲಿ. ಅಣ್ಣನು ಬರುವವರೆಗೆ ಅವನು ಊರ ಹೊರಗಡೆ ನಿಂತನು; ಅಲ್ಲಿ ತಪಸ್ಸುಮಾಡುತ್ತ ಅವನು ಬಂದಾನೇ ಎಂದು ಕಾದನು; ಅವನು ಬಂದ ದಿನ ತನಗೆ ಹೊರೆಯಾಗಿದ್ದ ರಾಜ್ಯವನ್ನು ಮತ್ತೆ ಅವನ ಕೈಗೆ ಕೊಟ್ಟು ಸುಖಿಯಾದನು. ರಾಜನ ಸೇವೆಮಾಡುವವರು ಕೆಲವರು ಕೆಲಸಗಳಲ್ಲಿ ತೊಡಗುವರು, ಕೆಲವರು ಸುಮ್ಮನೆ ನಿಲ್ಲುವರು; ಈ ಸುಮ್ಮನೆ ನಿಂತವರೂ ಉದ್ಯಮಗಳಲ್ಲಿ ನಿಯುಕ್ತರಾದವರಂತೆಯೇ, ಮಾಡುವುದು ರಾಜನ ಸೇವೆಯನ್ನೇ; ಎಂದು ಪಾಶ್ಚಾತ್ಯ ಕವಿಯೊಬ್ಬನು ತಾನು ಕುರುಡನಾಗಿ ಪ್ರಪಂಚದ ಕಾರ್ಯದಲ್ಲಿ ತೊಡಗಲಾಗದುದಕ್ಕೆ ವ್ಯಥೆಪಡುತ್ತ ಹೇಳಿದಾನೆ. ಕಾಡಿಗೆ ಹೋದ ಅಣ್ಣನು ಸೀತೆ ಲಕ್ಷ್ಮಣ ಇವರೊಡನೆ ಎಲ್ಲೆಲ್ಲಿ ಹೋಗಿದಾನೋ, ಯಾವ ಯಾವ ಕಷ್ಟಕ್ಕೆ ಸಿಕ್ಕಿದಾನೋ ಎಂದು ಹಗಲು ಇರುಳು ಹನ್ನೆರಡು ವರುಷದ ಕಾಲ ಚಿಂತಿಸುತ್ತ ಇದ್ದ ಭರತನಿಗೆ ಈ

ಮಾತು ಚೆನ್ನಾಗಿ ಅನ್ವಯಿಸುತ್ತದೆ. ಭರತನ ಪ್ರೇಮವಾಗಲಿ ಭರತನ ಸೇವೆಯಾಗಲಿ ಲಕ್ಷ್ಮಣನ ಪ್ರೇಮ ಸೇವೆಗಳಿಗೆ ಕಡಿಮೆಯವಲ್ಲ.

### ಹನುಮಂತ

ಈ ಕಥೆಯ ಇತರ ವ್ಯಕ್ತಿಗಳಲ್ಲಿ ಇಷ್ಟು ವಿಸ್ತಾರವಾಗಿ ಕಲ್ಪಿತರಾಗಿರುವವರು ಪ್ರಾಯಶಃ ಇನ್ನಿಬ್ಬರೇ: ಹನುಮಂತ, ರಾವಣ. ಹನುಮಂತನು ರಾಮನಿಗೆ ಸೀತೆ ಅಥವಾ ಲಕ್ಷ್ಮಣನ ಹಾಗೆ ಹುಟ್ಟನಿಂದ ಅಥವಾ ಸಂಬಂಧದಿಂದ ಹತ್ತಿರದವನಲ್ಲ. ಆದರೆ ಅವನು ಮಾಡಿದ ಸೇವೆಯ ಮಹತ್ವದಿಂದ ಅವರ ಹೆಸರಿನಂತೆಯೇ ಅವನ ಹೆಸರೂ ರಾಮನ ಹೆಸರಿನೊಂದಿಗೆ ಸೇರಿಹೋಗಿದೆ. ಹನುಮಂತನು ರಾಮಾಯಣದಲ್ಲಿ ಮೊದಲು ನಮಗೆ ಗೋಚರನಾಗುವುದು ಅವನು ಸುಗ್ರೀವನ ಪರವಾಗಿ ರಾಮನ ಬಳಿಗೆ ದೂತನಾಗಿ ಬಂದಾಗ. ಅವನ ಮಾತಿನ ರೀತಿಯಿಂದ ರಾಮ ಲಕ್ಷ್ಮಣರು ಚಮತ್ಕೃತರಾದರು. ರಾಮ ಲಕ್ಷ್ಮಣರ ಭಾಷೆ ಉತ್ತರ ದೇಶದ್ದು. ಹನುಮಂತನು ದಕ್ಷಿಣ ದೇಶದವನು. ಅವನು ತಮ್ಮ ಮಾತನ್ನು ಅಷ್ಟು ಸ್ವಚ್ಛವಾಗಿ ಆಡಿದ್ದನ್ನು ಕೇಳಿ ಇವರಿಗೆ ಅವನ ವಿಷಯದಲ್ಲಿ ವಿಶೇಷ ಗೌರವ ಹುಟ್ಟಿತು. ನೋಡಿದ ಕ್ಷಣದಲ್ಲಿಯೇ ಶುದ್ಧ ಚರಿತನೆಂದು ಅವನು ಅವರ ನಂಬಿಕೆಯನ್ನು ಸಂಪಾದಿಸಿದನು. ಸುಗ್ರೀವನಿಗೆ ರಾಮನ ಸ್ನೇಹ ಅಷ್ಟು ಸುಲಭವಾಗಿ ದೊರೆತದಕ್ಕೆ ಹನುಮಂತನು ಮುಖ್ಯ ಕಾರಣ. ಅವನು ಆ ಮೊದಲೇ ಅನೇಕ ಸಾಹಸ ಕರ್ಮಗಳಿಂದ ವಾನರಕುಲದಲ್ಲಿ ಪ್ರಸಿದ್ಧನಾಗಿದ್ದನು. ಅಂಜನಾದ್ರಿ ಅವನ ತೌರುಮಲೆ. ಗಾಳಿಯ ಮಗನೆಂದು ಅವನಿಗೊಂದು ಪ್ರಶಸ್ತಿ. ವಾನರ ರಾಜನಾದ ವಾಲಿ ರಾಕ್ಷಸನಾದ ದುಂದುಭಿಯೊಡನೆ ಕಾದುತ್ತ ಒಂದು ಗವಿಯೊಳಕ್ಕೆ ಹೋಗಿ ಬಹು ಕಾಲ ಹಿಂದಕ್ಕೆ ಬಾರದಿರಲು, ಅವನ ತಮ್ಮ ಸುಗ್ರೀವನು ವಾನರ ರಾಜ್ಯವನ್ನು ಆಳಲು ಮೊದಲುಮಾಡಿದನು. ವಾಲಿ ತೀರಿಹೋಗಿರಬೇಕೆಂದೇ ಅವನು ಭಾವಿಸಿದನಂತೆ. ಇದು ಹೌದೋ ಅಲ್ಲವೊ ನಾವು ಖಂಡಿತವಾಗಿ ಹೇಳುವಂತಿಲ್ಲ. ಸುಗ್ರೀವನು ಭಾವಿಸಿದಂತೆ ವಾಲಿ ತೀರಿ ಹೋಗಿರಲಿಲ್ಲ. ದುಂದುಭಿಯನ್ನು ಕೊಂದು ಅವನು ಹಿಂದಕ್ಕೆ ಬಂದನು. ಸುಗ್ರೀವನು ದೊರೆತನವನ್ನು ವಹಿಸಿಕೊಂಡಿದ್ದುದನ್ನು ಕಂಡು ತನ್ನ

ವಿಷಯದಲ್ಲಿ ಆ ತಮ್ಮನು ದ್ರೋಹಮಾಡಿದನೆಂದು ಅವನು ಆಕ್ರೋಶ ಗೊಂಡನು. ಆಗ ಹನುಮಂತನು ಸುಗ್ರೀವನ ಪಕ್ಷವನ್ನು ವಹಿಸಿದ ನೆಂದು ಕಾಣುತ್ತದೆ. ಈ ಕಾರಣದಿಂದ ಅವನು ಸುಗ್ರೀವನು ರಾಜ್ಯ ಭ್ರಷ್ಟನಾದಾಗ ಅವನನ್ನು ಅನುಸರಿಸಿ ಹೋದನು. ರಾಮನ ಸಹಾಯ ದಿಂದ ಸುಗ್ರೀವನು ಮತ್ತೆ ವಾನರ ರಾಜ್ಯವನ್ನು ಪಡೆದಾಗ ಹನುಮಂತನು ಎಂದಿನಂತೆ ಅವನ ಮುಖ್ಯ ಸಚಿವನಾದನು. ಹನುಮಂತನ ಉಳಿದೆಲ್ಲ ಗುಣದ ಜೊತೆಗೆ ಅವನಲ್ಲಿ ಬಹು ದೊಡ್ಡ ಒಂದು ಯೋಗ್ಯತೆಯಿತ್ತು. ಅವನು ಬ್ರಹ್ಮಚಾರಿ. ತಮ್ಮನ ಹೆಂಡತಿಯನ್ನು ಅಣ್ಣನೂ ಅಣ್ಣನ ಹೆಂಡತಿಯನ್ನು ತಮ್ಮನೂ ಬಳಸಿಕೊಳ್ಳುತ್ತಿದ್ದ ವಾನರ ಜನಾಂಗ ದಲ್ಲಿ ಈ ಗುಣ ಎಷ್ಟು ದೊಡ್ಡದಾಗಿ ಕಂಡಿರಬೇಕೆಂದು ನಾವು ಊಹಿಸ ಬಹುದು. ಸೀತೆಯನ್ನರಸುವುದಕ್ಕೆ ನಾಲ್ಕು ದಿಕ್ಕಿಗೂ ವಾನರ ದೂತರು ಹೊರಟಾಗ ಹನುಮಂತನು ವಾಲಿಯ ಮಗನಾದ ಅಂಗದ, ಋಕ್ಷ ಪತಿಯಾದ ಜಾಂಬವಂತ, ಇವರ ಹಿಂದೆ ಹೊರಟ ಗುಂಪಿನೊಡನೆ ದಕ್ಷಿಣ ದಿಕ್ಕಿಗೆ ಸಾರಿದನು. ಇಷ್ಟು ಅವಧಿಯಲ್ಲಿ ಹಿಂದಕ್ಕೆ ಬರಬೇಕು, ಬಾರದಿದ್ದರೆ ತಲೆ ತೆಗೆಯುವೆನು, ಎಂದು ಸುಗ್ರೀವನು ದೂತರಿಗೆಲ್ಲ ಆಜ್ಞೆಮಾಡಿದ್ದನು. ಅವಧಿ ಮುಗಿಯಿತು. ಅಂಗದನ ತಂಡ ಹಿಂದಕ್ಕೆ ಹೋಗಲಿಲ್ಲ. ತಡವಾಗಿ ಹಿಂದಕ್ಕೆ ಹೋದರೆ ಸುಗ್ರೀವನು ಶಿಕ್ಷಿಸುವ ನೆಂದು ಅಂಗದನು ತಾನು ಹಿಂದಕ್ಕೆ ಹೋಗುವುದಿಲ್ಲವೆಂದನು. ಅವನ ಅನುಯಾಯಿಗಳು ಹಲವರು ಇದೇ ಸರಿಯೆಂದರು. ಹೀಗಾದರೆ ವಾನರ ರಾಜ್ಯ ಎರಡು ಭಾಗವಾಗಿ ಉತ್ತರದ ಭಾಗಕ್ಕೆ ಸುಗ್ರೀವ, ದಕ್ಷಿಣದ ಭಾಗಕ್ಕೆ ಅಂಗದ, ರಾಜರಾಗುವರೆಂದು ಹನುಮಂತನಿಗೆ ಕಂಡಿತು. ತನ್ನ ಅರಸನಾದ ಸುಗ್ರೀವನಿಗೆ ಇದರಿಂದ ಹಾನಿಯೆಂದು ಹನುಮಂತನು ಅಂಜಿದನು. ಅಂಗದನಿಗೂ ಇದು ಶ್ರೇಯಸ್ಕರವಲ್ಲ. ಅಣ್ಣತಮ್ಮಂದಿರ ಜಗಳದಿಂದ ಸಾಕಾದಷ್ಟು ಕಾಲ ಕ್ಷೋಭೆಗೊಂಡು ಆಗತಾನೆ ಒಬ್ಬ ರಾಜನ ನೆರಳಲ್ಲಿ ಸೇರಿದ್ದ ವಾನರ ಕುಲಕ್ಕಾದರೂ ಇದು ಕೇಡೆಂದು ಅವನ ಮನಸ್ಸಿಗೆ ತೋರಿತು. ಹೀಗೆ ಮಾಡಬಾರದೆಂದು ಅವನು ಅಂಗದನಿಗೆ ಸಮಾಧಾನ ಹೇಳಿ, ಇಂಥ ಸಂಧಾನದಿಂದ ಉದಿಸಬಹುದಾಗಿದ್ದ ಅನರ್ಥ

ಪರಂಪರೆಯನ್ನು ನಿವಾರಿಸಿದನು. ರಾವಣನು ಸೀತೆಯನ್ನು ಲಂಕೆಗೆ ಕರೆದುಕೊಂಡುಹೋದನೆಂದು ಸಂಪಾತಿಯ ಮಾತಿನಿಂದ ಇವರಿಗೆ ತಿಳಿದ ಮೇಲೆ ಸಾಗರವನ್ನು ದಾಟಿ ಲಂಕೆಗೆ ಹೋಗುವವರು ಯಾರೆಂದು ಇವರು ಯೋಚಿಸಬೇಕಾಯಿತು. ಕೊನೆಗೆ ಈ ಶಕ್ತಿ ಹನುಮಂತನೊಬ್ಬನಿಗೆ ಹೊರತು ಇನ್ನು ಯಾರಿಗೂ ಇಲ್ಲವೆಂದು ಎಲ್ಲರೂ ನಿರ್ಧರಿಸಿದರು. ನಾನಿಷ್ಟು ಯೋಜನವನ್ನು ದಾಟಬಲ್ಲೆನು, ತಾನಿಷ್ಟು ಯೋಜನವನ್ನು ದಾಟಬಲ್ಲೆನು, ಎಂದು ವಾನರ ವೀರರು ತಮ್ಮ ತಮ್ಮ ಪ್ರತಾಪದ ಅಳ ವನ್ನು ಹೇಳಿದಾಗ ಹನುಮಂತನು ಉಸುರೆತ್ತದೆ ಸುಮ್ಮನೆ ಕುಳಿತಿದ್ದನು. ವೃದ್ಧನಾದ ಜಾಂಬವಂತನು "ಹನುಮಾನ್, ನೀನು ಸುಮ್ಮನಿದ್ದರೆ ಆಗುವುದಿಲ್ಲ" ಎಂದಮೇಲೆ, ಈ ವೀರನು ತಾನು ಈ ಕೆಲಸವನ್ನು ಮಾಡುವುದಾಗಿ ಒಪ್ಪಿಕೊಂಡನು. ನೂರು ಯೋಜನ ಸಾಗರವನ್ನು ವಾನರನೊಬ್ಬನು ಹಾರಿದನೆ ಎನ್ನುವುದನ್ನು ನಾವು ಇಲ್ಲಿ ವಿಚಾರಮಾಡ ಬೇಕಾದದಿಲ್ಲ. ನಾವು ಅವಶ್ಯವಾಗಿ ಒಪ್ಪಿಕೊಳ್ಳಬಹುದಾದದು ಒಂದು ವಿಷಯ. ಸಾಗರದ ಇತ್ತಡಿಯಿಂದ ಲಂಕೆಗೆ ಹೋಗುವುದೆನ್ನುವುದು ಸಾಮಾನ್ಯ ಚೇತನರಿಗೆ ಅಸಾಧ್ಯವಾದ ಕಾರ್ಯ. ಈ ಕಾರ್ಯವನ್ನು ಹನುಮಂತನು ಮಾಡಿದನು. ಲಂಕೆಯನ್ನು ಹೊಕ್ಕು ರಾವಣನ ಅರಮನೆ ಯನ್ನು ಪ್ರವೇಶಿಸಿ ಅಲ್ಲಿ ಸೀತೆಯಿರುವಳೋ ಎಂದು ಅವನು ರಾತ್ರಿ ಹುಡುಕಿದನು. ರಾವಣನ ಸ್ತ್ರೀಯರು ನಿದ್ರೆಯಲ್ಲಿ ಸಿಕ್ಕಿ ಸಿಕ್ಕಿದಹಾಗೆ ಮಲಗಿದ್ದ ಶಯ್ಯಾಗೃಹದಲ್ಲಿ ಒಬ್ಬೊಬ್ಬರನ್ನೂ ನೋಡುತ್ತ ಇದು ಸೀತೆ ಯಲ್ಲ, ಇದು ಸೀತೆಯಲ್ಲ, ಎಂದುಕೊಂಡು ಮುಂದುವರಿದನು. ಬ್ರಹ್ಮ ಚಾರಿ ಸ್ತ್ರೀಯರನ್ನು ಈ ಅವಸ್ಥೆಯಲ್ಲಿ ನೋಡುವುದು ಸರಿಯೇ ಎಂದು ಅವನಿಗೆ ಸಂದೇಹ ಹುಟ್ಟಿತು. "ಸ್ತ್ರೀಯನ್ನು ಹುಡುಕುವುದು ಸ್ತ್ರೀಯರ ಮಧ್ಯೆ ತಾನೆ. ಇದರಲ್ಲಿ ತಪ್ಪೇನು? ಮುಖ್ಯ ನನ್ನ ಮನಸ್ಸಿನಲ್ಲಿ ಯಾವ ವಿಧವಾದ ತಪ್ಪು ಭಾವನೆಯೂ ಹುಟ್ಟಲಿಲ್ಲ" ಎಂದು ಅವನು ತನಗೆ ತಾನೇ ಸಮಾಧಾನ ಹೇಳಿಕೊಂಡನು. ಶಂಕೆ ಉತ್ತರ ಎರಡೂ ಅವನ ಸ್ವಭಾವವನ್ನು ಸೂಚಿಸುತ್ತವೆ. ಅವನು ತನ್ನ ನಡತೆಯನ್ನು ತಾನು ಸದಾ ಪರೀಕ್ಷಿಸಿಕೊಳ್ಳುತ್ತಿದ್ದನು. ಕಲಂಕವಿಲ್ಲದಿದ್ದಾಗ ಆ ನಡತೆಯನ್ನು

ದೂರದೆ ಬಿಡುತ್ತಿದ್ದನು. ಇಂಥ ಸಂದರ್ಭದಲ್ಲಿ ವ್ಯಕ್ತಿಯ ಅರಿವು ನ್ಯಾಯಾಧೀಶನಂತೆ; ಅವನ ನಡತೆ ನ್ಯಾಯಸ್ಥಾನದಲ್ಲಿ ಒಂದು ದೂರನ್ನು ಹೊತ್ತು ಬಂದ ಮನುಷ್ಯನಂತೆ. ನಡತೆ ಮಾಡಿದ ತಪ್ಪೇನೆಂದು ಅಥವಾ ಅದನ್ನು ಮಾಡಲಿಲ್ಲವೆಂದು ಮನಸ್ಸು ಹೇಳುತ್ತದೆ. ಈ ನ್ಯಾಯ ಸ್ಥಾನದಲ್ಲಿ ಸುಳ್ಳು ಆರೋಪಕ್ಕೂ ಅವಕಾಶವಿಲ್ಲ. ಇರುವ ತಪ್ಪನ್ನು ಮುಚ್ಚಿಡುವುದಕ್ಕೂ ಅವಕಾಶವಿಲ್ಲ. ಇಲ್ಲಿ ಪಾರಾಗುವುದು ಅತ್ಯುತ್ತಮ ಚೇತನಗಳಿಗೆ ಮಾತ್ರ ಸಾಧ್ಯ. ಬಹು ಕಷ್ಟದ ಸಂದರ್ಭದಲ್ಲಿ ಹನುಮಂತ ನಿಗೆ ಇದು ಸಾಧ್ಯವಾಯಿತು. ಮಂಡೋದರಿಯನ್ನು ಮೊದಲು ನೋಡಿದ ಕ್ಷಣದಲ್ಲಿ ಹನುಮಂತನು ಅವಳನ್ನು ಸೀತೆಯೆಂದೇ ನೆನೆದನು. ಒಂದು ಕ್ಷಣದಲ್ಲಿ ಸೀತಾದೇವಿ ರಾವಣನ ಶಯ್ಯೆಯಲ್ಲಿ ಇರುವಳೆ ಎಂದು ತನ್ನನ್ನು ತಾನೇ ತಿದ್ದಿಕೊಂಡನು. ಸೀತೆಯನ್ನು ಕಂಡವೇಳೆ ಅವಳ ಅವಸ್ಥೆಯಿಂದ ಅವಳು ರಾಮನ ಪತ್ನಿಯೆಂದು ಊಹಿಸಿ ಅವಳಿಗೆ ನಂಬಿಕೆ ಹುಟ್ಟು ವುದಕ್ಕಾಗಿ ಅವಳಿಗೆ ಕೇಳುವಂತೆ ರಾಮನ ಗುಣಕಥನಮಾಡಿದ್ದು ಹನುಮಂತನ ಸೂಕ್ಷ್ಮವಾದ ಬುದ್ಧಿಯ ವ್ಯಾಪಾರ. ಆಮೇಲಣ ಮಾತಿ ನಲ್ಲಿ ಹನುಮಂತನು ಸೀತಾದೇವಿಗೆ ಮನವೊಪ್ಪುವಂತೆ ಎಲ್ಲ ವಿಷಯ ವನ್ನೂ ಉಚಿತ ರೀತಿಯಿಂದ ಅರಿಕೆಮಾಡಿದನು. ಅವಳು ಮತ್ತೆ ಮತ್ತೆ, ರಾಮನು ಬಂದು ನನ್ನನ್ನು ಬಿಡಿಸಿಕೊಂಡುಹೋಗುವುದಕ್ಕೆ ಏನು ಅವಶ್ಯಕವೋ ಅದನ್ನು ಮಾಡಬೇಕೆಂದು ಬೇಡಲು ಅವನು ದೇವಿಗೆ ಆ ವಿಚಾರದಲ್ಲಿ ಶಂಕೆಯೇ ಬೇಡವೆಂದು ಯುಕ್ತವಾದ ಮಾತುಗಳಿಂದ ಧೈರ್ಯ ಹೇಳಿದನು. ಸುಗ್ರೀವನ ಸೇನೆ ಎಷ್ಟು ಶಕ್ತವಾದದು ಎಂದು ಹೇಳುವಲ್ಲಿ ಹನುಮಂತನು ಆ ರಾಜನೆದುರಿಗೆ ತನಗೆ ಕಡಮೆಯಾದವರೇ ಇಲ್ಲವೆಂದು ತನ್ನ ಜೊತೆಯವರನ್ನು ಹೊಗಳಿದನು. ಇದು ದಿಟವೆಂದು ಅವನು ನಿಜವಾಗಿಯೂ ನಂಬಿದನೋ ಇಲ್ಲವೋ! ನಂಬಿದನೆಂದೇ ಕಾಣು ತ್ತದೆ: ಉದಾತ್ತಜೀವನಕ್ಕೆ ನಿರಭಿಮಾನ ಸುಲಭ. ನಂಬಲಿ, ನಂಬದಿರಲಿ, ಇಂಥ ಮಾತನ್ನು ನಂಬಿಕೆಯ ಮಾತಂತೆ ಸುಮ್ಮನೆ ಬಾಯಲ್ಲಿ ಹೇಳ ಬೇಕಾದರೂ ಮನುಷ್ಯನಾಗಲಿ ವಾನರನಾಗಲಿ ಬಹು ಹಿರಿಯನಾಗಿರ ಬೇಕು. ತನ್ನ ಗುಣ ಇಷ್ಟು ಕಡಮೆಯೆಂದು ಇತರರ ಗುಣ ಇಷ್ಟು

ಹಿರಿಯದೆಂದು ನುಡಿಯುವುದಕ್ಕಾದರೂ ಅಂತಃಕರಣ ಶುದ್ಧವಾಗಿರಬೇಕು; ಆತ್ಮದಿಂದ ಮಮತೆ ಉದುರುವುದರಲ್ಲಿರಬೇಕು. ಹನುಮಂತನ ಮನಸ್ಸು ಬಹಳ ಎಳಸಾದದೂ ಹೌದು. ಸೀತೆಯನ್ನು ಬೆನ್ನಮೇಲೆ ಕೂರಿಸಿಕೊಂಡು ರಾಮನ ಬಳಿಗೆ ಏಕೆ ಕರೆದುಕೊಂಡುಹೋಗಬಾರದು ಎಂದೇ ಅವನಿಗೆ ತೋರಿತು. ಇದನ್ನು ಮಾಡೋಣವೆಂಬ ಉತ್ಸಾಹವಾಗಲಿ ಇದರಲ್ಲಿ ತಪ್ಪಿಲ್ಲವೆಂಬ ಒಂದು ಸರಳತೆಯಾಗಲಿ ಬಹು ಶುದ್ಧವಾದ ಚೇತನಕ್ಕೆ ಮಾತ್ರ ಸಾಧ್ಯ. ಲಂಕಾ ದಹನದ ಭಾಗ ವಾಲ್ಮೀಕಿ ಕೃತವಲ್ಲವೆಂದು ಈ ಮೊದಲೇ ಸೂಚಿಸಿದೆ. ಹನುಮಂತನು ಲಂಕೆಯಿಂದ ಹಿಂದಿರುಗಿ ಸೀತೆಯನ್ನು ಕಂಡೆನೆಂದು ರಾಮನಿಗೆ ಹೇಳಿ ರಾಮನಿಗೆ ಪರಮಾಪ್ತ ಸೇವಕನಾದನು. ಸೀತೆಯನ್ನು ಬಿಡಿಸಿಕೊಳ್ಳುವುದಕ್ಕೆ ಮುಖ್ಯ ಕಾರಣನಾದಹಾಗೆ ಅಷ್ಟಘಂಟಾಶಕ್ತಿಯಿಂದ ಮೂರ್ಛಿತನಾದ ಲಕ್ಷ್ಮಣನನ್ನು ರಾಮನಿಗೆ ಉಳಿಸಿಕೊಡುವುದಕ್ಕೂ ಇವನು ಕಾರಣನಾದನು. ಯುದ್ಧದಲ್ಲಿ ಜಯವಾದಮೇಲೆ ರಾಮನ ಪರವಾಗಿ ಸೀತಾದೇವಿಗೆ ಸಂದೇಶವನ್ನು ತೆಗೆದುಕೊಂಡುಹೋಗುವುದೂ ಇವನ ಕಾರ್ಯವಾಯಿತು. ಹಾಗೆಯೇ ರಾಮನ ಬರವನ್ನು ಭರತನಿಗೆ ಅರಿಕೆಮಾಡುವ ಕೆಲಸವೂ ಇವನ ಪಾಲಿಗೆ ಬಂದಿತು. ಈ ಕಾರಣದಿಂದಲೇ ಸೀತಾದೇವಿ ರಾಮನು ತನಗೆ ಕೊಟ್ಟ ಆಭರಣವನ್ನು ಹನುಮಂತನಿಗೆ ಅರ್ಪಿಸುವುದು ಉಚಿತವಾಯಿತು. ಹನುಮಂತನ ಸ್ತೋತ್ರವನ್ನು ರಚಿಸಿದ ಕವಿಯೊಬ್ಬನು ಅವನನ್ನು 'ರಾಮಾಯಣ ಮಹಾಮಾಲಾರತ್ನಂ' ಎಂದು ಹೊಗಳಿದ್ದಾನೆ. ಇದು ನಿಜವಾದ ಮಾತು. ಹನುಮಂತನ ಕಲ್ಪನೆಯಲ್ಲಿ ಕವಿಯ ಪ್ರತಿಭೆ ಸೀತೆ ಅಥವಾ ರಾಮನ ಕಲ್ಪನೆಯಲ್ಲಿ ಮುಟ್ಟಿದಷ್ಟು ಎತ್ತರವನ್ನು ಮುಟ್ಟಿದೆ.

### ರಾವಣ

ರಾವಣನು ಈ ಮಹಾವ್ಯಕ್ತಿಗಳಿಗೆ ಪ್ರತಿಯಾಗಿ ನಿಲ್ಲುವುದಕ್ಕೆ ಯೋಗ್ಯತೆಯುಳ್ಳ ಪ್ರತಿನಾಯಕನು. ಅವನು ದೇವತೆಗಳನ್ನು ಯುದ್ಧದಲ್ಲಿ ಸೋಲಿಸಿದ್ದನು. ಅಣ್ಣನಾದ ಕುಬೇರನಿಂದ ಅವನ ಪುಷ್ಪಕ ವಿಮಾನವನ್ನು ಕಿತ್ತುಕೊಂಡು ಬಂದಿದ್ದನು. ಲಂಕೆಯನ್ನು ಲೋಕಗಳ ಐಶ್ವರ್ಯದ

ನಿಧಿಯೆಂಬಂತೆ ಮಾಡಿದ್ದನು. ಆದರೆ ಇದೆಲ್ಲದರಲ್ಲಿಯೂ ತನ್ನ ಹಿಂಸ್ರ ಬುದ್ಧಿಯನ್ನು ಪ್ರಕಟಮಾಡಿದ್ದನು. ರಾವಣನು ತಾನು ಗೆದ್ದ ರಾಷ್ಟ್ರ ಗಳಿಂದ ಸುಂದರಿಯರನ್ನು ಬಲಾತ್ಕರಿಸಿ ತಂದು ತನ್ನ ಅಂತಃಪುರದಲ್ಲಿ ಸೇರಿಸಿಕೊಂಡಿದ್ದನು. ಹನುಮಂತನು ಇವನ ಶಯ್ಯಾಗೃಹದಲ್ಲಿ ನೋಡಿದ ಸ್ತ್ರೀಯರ ಸಂಖ್ಯೆಗೆ ಲೆಕ್ಕವಿಲ್ಲ. ರಾತ್ರಿ ಎಲ್ಲರೂ ಒಟ್ಟಿಗೆ ಸೇರಿ ಕುಡಿದು ಕುಣಿದು ಸಿಕ್ಕಿದಂತೆ ಆಡಿ ಸೋತು ಮಲಗಿದ್ದರು. ದಶರಥನಿಗೆ ಬಹು ಹೆಂಡಿರಿದ್ದರು. ಆದರೆ ಅಯೋಧ್ಯೆಯ ರಾಜನು ನೂರು ಜನ ಹೆಂಗಸರ ಮಧ್ಯೆ ಒಬ್ಬನು ಸೇರಿ ಈ ರೀತಿಯ ಗೋಷ್ಠಿಕ್ರೀಡೆಯನ್ನು ನಡೆಯಿಸಿದ ಸೂಚನೆ ಇಲ್ಲ. ಲಂಕೆಯ ರಾಜನಿಗೆ ಇದು ಪದ್ಧತಿಯಾಗಿತ್ತು. ರಾವಣನು ಮುಖ್ಯವಾಗಿ ಸ್ತ್ರೈಣನು. ಸಮುದ್ರ ಮಧ್ಯದ ದ್ವೀಪದಲ್ಲಿ ಹೀಗೆ ಸುಖದಿಂದಿರುತ್ತ ಸಾಗರದ ಅತ್ತಡಿಯ ಅರಣ್ಯ ದೇಶದಲ್ಲಿ ಪಾಳೆಯ ಗಳನ್ನಿರಿಸಿ ಉತ್ತರದಿಂದ ಬಂದ ಋಷಿಗಳ ಗುಂಪುಗಳಿಗೆ ವಿರೋಧ ಮಾಡುತ್ತ ಇವನು ರಾಕ್ಷಸರಲ್ಲಿ ಪ್ರಮುಖನಾಗಿದ್ದನು. ರಾವಣನೂ ವೇದವನ್ನು ಬಲ್ಲನು. ಕುಲದಲ್ಲಿ ಅವನು ಬ್ರಾಹ್ಮಣನು. ಆದರೂ ಉತ್ತರದಿಂದ ಬಂದವರಿಗೆ ಇವನು ವಿರೋಧವನ್ನು ನಡೆಯಿಸುವುದರಲ್ಲಿ ಉದ್ಯುಕ್ತನಾಗಿದ್ದನು. ಇಂಥ ವಿರೋಧವನ್ನಾಚರಿಸುವ ಒಂದು ಸಂದರ್ಭ ದಲ್ಲಿಯೇ ಮಾರೀಚನು ವಿಶ್ವಾಮಿತ್ರನ ಆಶ್ರಮಕ್ಕೆ ಹೋಗಿ ತರುಣನಾದ ರಾಮನಿಂದ ಪೆಟ್ಟುತಿಂದು ಹಿಂದಕ್ಕೆ ಬಂದಿದ್ದದು. ಈ ಕಾರಣದಿಂದಲೇ ರಾಮನು ಅರಣ್ಯಕ್ಕೆ ಬಂದಾಗ ಋಷಿಗಳು ತಮ್ಮ ತಮ್ಮಲ್ಲಿ ಮಾತನಾಡಿ ಕೊಂಡು ತಮ್ಮನ್ನು ರಾಕ್ಷಸ ಕುಲದಿಂದ ರಕ್ಷಿಸಬೇಕೆಂದು ಅವನನ್ನು ಬೇಡಿದರು. ಖರದೂಷಣ ತ್ರಿಶಿರಸರನ್ನು ಕೊಂದದರಿಂದ ರಾಮನ ಈ ಕಾರ್ಯ ಒಂದು ಘಟ್ಟವನ್ನು ಮುಟ್ಟಿತು. ಇದಕ್ಕೆ ಪ್ರತೀಕಾರವನ್ನು ಮಾಡುವುದಕ್ಕೆ ರಾವಣನೋ ಅವನ ಕಡೆಯವರೋ ರಾಮನಮೇಲೆ ದಂಡೆತ್ತಿಬಂದು ಯುದ್ಧಮಾಡಬಹುದಾಗಿತ್ತು. ಆದರೆ ಶೂರ್ಪನಖಿ ರಾವಣನಿಗೆ ರಾಮನ ಹೆಂಡತಿಯನ್ನು ಅಪಹರಿಸಬೇಕೆಂದು ಸಲಹೆ ಕೊಟ್ಟಳು. ಶೂರ್ಪನಖಿಗೆ ರಾಮನನ್ನು ಕುರಿತು ಉಂಟಾದ ಮೋಹವೂ, ಸೀತೆಯ ಸಲುವಾಗಿ ತಾನು ಅವಮಾನಿತಳಾದೆನೆಂಬ ಆಗ್ರಹವೂ ಇದಕ್ಕೆ

ಕಾರಣ ಹೌದು. ಆದರೆ ಅದರ ಜೊತೆಗೆ ರಾವಣನು ಸ್ತ್ರೈಣನೆಂಬುದೂ ಒಂದು ಕಾರಣ. ಹೆಂಗಸನ್ನು ಸಂಪಾದಿಸುವ ಉಪಾಯವನ್ನು ಹೇಳಿದರೆ ರಾವಣನು ಸುಲಭವಾಗಿ ಒಪ್ಪಿಕೊಳ್ಳುವನೆಂದು ಅವನ ನಂಟರು ಬಲ್ಲರು. ಶೂರ್ಪನಖಿ ಈ ಸಲಹೆಯನ್ನು ಹೇಳಿದೊಡನೆಯೇ ರಾವಣನು ಮಾರೀಚನ ಬಳಿಗೆ ಬಂದು ಸೀತೆಯನ್ನು ಕದಿಯುವುದಕ್ಕೆ ಬೇಕಾದ ಸನ್ನಾಹ ವನ್ನು ಮಾಡಿದನು. ಸ್ತ್ರೀ ಚೌರ್ಯ ತನಗೆ ಯೋಗ್ಯವಾದ ಕರ್ಮ ಅಲ್ಲ ವೆಂದು ರಾವಣನಿಗೆ ತೋರಲಿಲ್ಲ. ಅವನು ಸೀತೆಯ ಬಳಿಗೆ ಯತಿಯ ವೇಷದಲ್ಲಿ ಬಂದನು. ವೇಷ ಯತಿಯದಾದರೂ ಬುದ್ಧಿ ಎಂದಿನಂತೆ ಇದ್ದ ದರಿಂದ ಒಬ್ಬೊಂಟಿಗಳಾದ ರಾಮಪತ್ನಿಯ ರೂಪಲಾವಣ್ಯವನ್ನು ಬಾಯಿ ಚಪ್ಪರಿಸುತ್ತ ಬಿಡಿ ಬಿಡಿಯಾಗಿ ಬಣ್ಣಿಸಿದನು. ಇವನು ಯತಿಯಂತಿದ್ದಾನೆ, ಕೋಪಮಾಡುವುದು ಹೇಗೆ, ಎಂದು ಸೀತೆ ಸುಮ್ಮನಿದ್ದಳು. ಒಂದು ಗಳಿಗೆಯಲ್ಲಿ ರಾವಣನು ಅವಳನ್ನು ಬಲಾತ್ಕಾರದಿಂದ ಹೊತ್ತುಕೊಂಡು ಹೊರಟನು. ನಿನಗೆ ಇದು ತರವಲ್ಲ ಎಂದು ಜಟಾಯು ಬಂದು ತಡೆಯಲು ರಾವಣನು ಜಟಾಯುವನ್ನು ಕಡಿದು ಕೆಡವಿ ಸೀತೆಯನ್ನು ಲಂಕೆಗೆ ಕರೆದುಕೊಂಡುಹೋಗಿ ಅವಳಿಗೆ ತನ್ನ ಐಶ್ವರ್ಯವನ್ನೆಲ್ಲ ತೋರಿಸಿ, ನನ್ನ ಹೆಂಡತಿಯಾಗು, ಈ ಐಶ್ವರ್ಯವನ್ನೆಲ್ಲ ಅನುಭವಿಸು, ಎಂದು ಹೇಳಿದನು. ಎಲ್ಲ ಸ್ತ್ರೀಯರೂ ಪಾತಿವ್ರತ್ಯಕ್ಕಾಗಿ ಇಂಥ ಐಶ್ವರ್ಯವನ್ನು ಕಡೆಗಣಿ ಸುವುದಿಲ್ಲ. ಅವನು ಆ ಮೊದಲು ಪ್ರಾಯಶಃ ಹಾಗೆ ಕಡೆಗಣಿಸದವರನ್ನೇ ನೋಡಿದ್ದನು. ಆದರೆ ಎಲ್ಲ ಸ್ತ್ರೀಯರೂ ಐಶ್ವಯಕ್ಕೆ ಮನ ಸೋಲುವು ದಿಲ್ಲ. ಕೆಲವರು ಐಶ್ವರ್ಯವನ್ನು ಕಡೆಗಣಿಸುತ್ತಾರೆ, ತಮ್ಮ ಚಾರಿತ್ರ ವನ್ನು ಕೆಡಿಸಿಕೊಳ್ಳುವುದಿಲ್ಲವೆನ್ನುತ್ತಾರೆ. ಸೀತೆ ಇಂಥವಳೆಂದು ರಾವಣನಿಗೆ ತೋರಲಿಲ್ಲ. ಇಂದಿಲ್ಲದಿದ್ದರೆ ನಾಳೆ ಇವಳು ತನ್ನನ್ನು ಒಪ್ಪಿಕೊಳ್ಳುವಳೆಂದು ಅವನು ತಿಳಿದನು. ಯೌವನ ಧ್ರುವವಲ್ಲ, ಹರಿದುಹೋದ ಹೊಳೆಯ ನೀರಂತೆ ಅದು ಮತ್ತೆ ಬಾರದು, ಎಂದು ಅವನು ಅವಳಿಗೆ ಉಪದೇಶಮಾಡಿದನು. ಎಷ್ಟು ಹೇಳಿದರೂ ಅವಳು ಕೇಳದಿರಲು ಅವಳಿಗೆ ಕಾವಲನ್ನಿರಿಸಿದನು. ವರ್ಷದ ಅವಧಿಯನ್ನು ಕೊಟ್ಟು ಅವಳ ಮನಸ್ಸು ಕರಗುವುದೆಂದು ನಿರೀಕ್ಷಿಸಿದನು. ಅಲ್ಪ

ನಾದ ಮಾನವನಾದ ರಾಮನು ಸಾಗರವನ್ನು ದಾಟಿ ಲಂಕೆಗೆ ಬಂದು ಸೀತೆಯನ್ನು ಬಿಡಿಸಿಕೊಳ್ಳುವುದೆನ್ನುವುದು ರಾವಣನಿಗೆ ಸಾಧ್ಯವಾಗಿ ತೋರಲಿಲ್ಲ. ಆದರೆ ಒಂದು ದಿನ ರಾಮನು ಬಂದೇ ಬಂದನು ಲಂಕೇಶ್ವರನು ಅವನ ವಾನರ ಸೇನೆಯ ಎದುರಿಗೆ ತನ್ನ ರಾಕ್ಷಸ ಸೈನ್ಯವನ್ನಿಟ್ಟು ಯುದ್ಧಮಾಡಬೇಕಾಯಿತು. ನೀನು ರಾಮನೊಂದಿಗೆ ವಿರೋಧವನ್ನು ಕಟ್ಟಿಕೊಳ್ಳಬೇಡ, ನನ್ನನ್ನು ಅವನಿಗೆ ಕೊಟ್ಟುಬಿಡು, ಎಂದು ಸೀತೆ ಅವನಿಗೆ ಹೇಳಿದಳು; ರಾವಣನು ಅದಕ್ಕೆ ಕಿವಿಗೊಡಲಿಲ್ಲ. ರಾಮನ ಸೇನೆ ಬರುತ್ತಿದೆ ಎಂದು ತಿಳಿದಾಗ ಅವನ ತಮ್ಮ ವಿಭೀಷಣನೂ ಅವನಿಗೆ ಬುದ್ಧಿ ಹೇಳಿದನು; ಅದೂ ರಾವಣನಿಗೆ ರುಚಿಸಲಿಲ್ಲ. ವಿಭೀಷಣನು ಅಣ್ಣನನ್ನು ಬಿಟ್ಟು ರಾಮನತ್ತ ನಡೆದನು. ಯುದ್ಧದಲ್ಲಿ ತನ್ನವರು ಸಾಯುತ್ತ ಬರಲು ರಾವಣನು ಆಗ್ರಹಗೊಂಡು ಸೀತೆಯ ಬಳಿ ಬಂದು ಅವಳನ್ನು ಮತ್ತೆ ಬೆದರಿಸಿದನು. ರಾಮ ಲಕ್ಷ್ಮಣರದೆಂಬಂತೆ ಕಾಣುವ ಎರಡು ರುಂಡಗಳನ್ನು ಅವಳಿಗೆ ತೋರಿಸಿ ನಿನ್ನ ಗಂಡ ಮೈದುನರು ತೀರಿಹೋದರು, ಈಗಲಾದರೂ ನನ್ನ ವಶವಾಗು, ಎಂದನು. ಇವನ ಸ್ತ್ರೀವ್ಯಾಮೋಹಕ್ಕೆ ಇದೆಲ್ಲ ಸರಿಯೆಂದು ಕಂಡಿತು. ಆ ಹೊತ್ತಿನಲ್ಲಿ ಯುದ್ಧದ ವಾರ್ತೆ ಬೇರೆ ಒಂದು ಬಂದಕಾರಣ ಅವನು ಹಿಂದಕ್ಕೆ ಹೋಗಬೇಕಾಯಿತು. ಆ ಮಾಯದ ರುಂಡಗಳೆರಡೂ ಅದೃಶ್ಯವಾದುವು; ಸೀತೆಯ ಭಯ ಸ್ವಲ್ಪ ಕಡಮೆಯಾಯಿತು. ಕೊನೆಗೆ ಸೀತೆಗಾಗಿ ರಾವಣನು ಪ್ರಾಣವನ್ನೇ ಕಳೆದುಕೊಂಡನು. ರಾವಣನು ಸೀತೆಯನ್ನು ಕದಿಯುವ ಸಂಧಾನವನ್ನು ಮೊದಲು ಮಾರೀಚನಲ್ಲಿ ಯೋಚಿಸಿದಾಗ ಮೇಧಾವಿಯಾದ ಆ ಮಂತ್ರಿ ತನ್ನ ರಾಜನಿಗೆ ಎಚ್ಚರಿಕೆ ಹೇಳಿದನು. "ನೀನು ಸುಖವಾಗಿದ್ದೀಯೆ, ಈ ಸುಖವನ್ನು ಹಾಳುಮಾಡುವುದಕ್ಕೆ ಈ ಸಲಹೆಯನ್ನು ಕೊಟ್ಟವರು ಯಾರು? ರಾಕ್ಷಸಕುಲ ವಿನಾಶಕರವಾದ ಈ ಯೋಚನೆಯನ್ನು ಬಿಡು" ಎಂದನು. ರಾವಣನು ಆ ಎಚ್ಚರಿಕೆಗೆ ಮನಸ್ಸು ಕೊಡಲಿಲ್ಲ. ತನ್ನ ಹಟಕ್ಕಾಗಿ ತಮ್ಮಂದಿರನ್ನೂ ಮಕ್ಕಳನ್ನೂ ಕಳೆದುಕೊಂಡನು; ಶೋಕದ ಹೊರೆಯನ್ನು ತಲೆಗಿಟ್ಟುಕೊಂಡು ತಾನೂ ಹತನಾದನು. ರಾವಣನ ಸ್ವಭಾವದಲ್ಲಿ ಹೀಗೆ ಮುಖ್ಯವಾಗಿ ಕಾಣುವ

ಗುಣಗಳು, ಹಿಂಸ್ರ ಬುದ್ಧಿಯಿಂದ ಕಲುಷಿತವಾದ ಒಂದು ರೀತಿಯ ಧೈರ್ಯ, ಶೌರ್ಯ; ನಿಜವಾದ ಶೌರ್ಯಕ್ಕೆ ವಿರುದ್ಧವೆಂದು ಕಾಣುವ ಕೌಟಿಲ್ಯ; ಚೆಲುವೆಯನ್ನು ಹೇಗಾದರೂ ವಶಪಡಿಸಿಕೊಳ್ಳಬೇಕೆಂಬ ಸ್ತ್ರೀವ್ಯಾಮೋಹ; ತನ್ನ ಇಚ್ಛೆಗೆ ವಿರೋಧವಾಗಿ ಬುದ್ಧಿ ಹೇಳುವವರಲ್ಲಿ ಅವಿಶ್ವಾಸ, ಕ್ರೂರವರ್ತನ; ನನಗೆ ಯಾರು ಸಮನೆಂಬ ಅಹಂಕಾರ. ಯೌವನವಿರುವಾಗ ಸುಖಪಡಬೇಕೆಂಬ ಕಾಮುಕ ಬುದ್ಧಿ; ತನ್ನ ತಪ್ಪಿಗೆ ಶಿಕ್ಷೆ ಅಡಸಿಬಂದಾಗ ಏನೇ ಆದರೂ ತಪ್ಪನ್ನು ಒಪ್ಪಿಕೊಳ್ಳುವುದಿಲ್ಲವೆಂಬ ಮುಷ್ಕರ. ಆದರೆ ಈ ಕೆಟ್ಟಗುಣಗಳು ಅವನ ಕಾರ್ಯದಂತೆ ವಿಸ್ತಾರ ವಾದುವು, ವಿಶಾಲವಾದುವು; ರಾಮನ ಎದುರಿಗೆ ನಿಲ್ಲಲು ಅರ್ಹವಾದ ಗಾತ್ರ ಉಳ್ಳವು. ಕವಿಯ ಕಲ್ಪನಾ ಶಕ್ತಿಗೆ ಈ ಪಾತ್ರವೂ ಪ್ರಶಸ್ತಿಯನ್ನು ತರತಕ್ಕದಾಗಿದೆ.

ಇಷ್ಟು ಅವಗುಣಗಳ ಮಧ್ಯೆ ರಾವಣನಲ್ಲಿ ಒಂದು ಒಳ್ಳೆಯ ಗುಣ ಇತ್ತು. ಸೀತೆಯನ್ನು ಬಲವಂತವಾಗಿ ಹೊತ್ತುತಂದ ರಾಕ್ಷಸನು ಅವಳನ್ನು ಬಲವಂತದಿಂದ ತನ್ನ ಹಾಸಿಗೆಗೆ ಎಳೆದುಕೊಳ್ಳಲಿಲ್ಲ. ಸ್ತ್ರೀ ಪುರುಷರ ಸ್ವಭಾವವನ್ನು ವಾಲ್ಮೀಕಿಗಿಂತ ಚೆನ್ನಾಗಿ ಬಲ್ಲೆವೆಂಬ ಆತ್ಮವಿಶ್ವಾಸದಿಂದ ಪ್ರೇರಿತರಾಗಿ ರಾಮಾಯಣದ ಕಥೆಯನ್ನೇ ತಿದ್ದಬಯಸುವ ಕೆಲವರು, ರಾವಣನು ಸೀತೆಯನ್ನು ಹಾಗೆಯೇ ಬಿಟ್ಟನೆನ್ನುವುದು ಕವಿಯ ಕಲ್ಪನೆ, ಎಂದು ಸೂಚಿಸುವುದುಂಟು. ಪೂರ್ವಿಕರಿಗಾದರೂ ರಾವಣನ ನಡತೆಗೆ ಅಸಾಧಾರಣವಾದ ಕಾರಣವೊಂದು ಆವಶ್ಯಕವೆಂದು ಕಂಡಿತು. ಅಂಥ ಕಾರಣವಿಲ್ಲದೆ ಪುರುಷನು ತಾನು ಅಪೇಕ್ಷಿಸುತ್ತಿರುವ ಸ್ತ್ರೀಯನ್ನು ಮುಟ್ಟದೆ ಬಿಡಲಾರನೆಂದು ಕಂಡದರಿಂದ ಅವರು, ಬಲಾತ್ಕಾರದಿಂದ ಸ್ತ್ರೀಯ ಸಹವಾಸವನ್ನು ಮಾಡಿದರೆ ಸಾಯುವೆಯೆಂದು ಅವನಿಗೆ ಶಾಪವಿತ್ತು, ಎಂದು ಹೇಳಿದರು. ಪೂರ್ವಾಚಾರದ ಜನಾಂಗಗಳಲ್ಲಿ "ಟ್ಯಾಬೂ" ಎಂಬ ಹೆಸರಿನ ಒಂದು ವಾಡಿಕೆ ಇದೆಯಂತೆ. ಅದು ಈ ರೀತಿಯದು. ಆ ಕಾಲಕ್ಕೆ ಲಂಕೆಯಲ್ಲಿ ಇಂಥ ಭಯವಿದ್ದಿರಬಹುದು. ಬಲಾತ್ಕಾರದಿಂದ ತಂದ ಹೆಣ್ಣಿಗೆ ಒಂದು ವರುಷದ ಅವಧಿಯನ್ನು ಕೊಡುವುದು ಈಗಲೂ ಕೆಲವು ವನ್ಯಜನದಲ್ಲಿ ವಾಡಿಕೆಯಂತೆ. ರಾವಣನು ಅನುಸರಿಸಿದ್ದು

ಇಂಥ ವಾಡಿಕೆ ಇದ್ದರೂ ಇರಬಹುದು. ಇದು ಹೇಗಾದರೂ ನಾವು ಒಂದು ವಿಷಯವನ್ನು ಜ್ಞಾಪಕವಿಟ್ಟುಕೊಳ್ಳುವುದು ಆವಶ್ಯಕ. ಈ ಎರಡು ಭಾವನೆಗೂ ಮೂಲವಾದ ಸ್ವಭಾವದ ಕಲ್ಪನೆ ನಮ್ಮದು. ವಾಲ್ಮೀಕಿ ರಾವಣನ ವಿಷಯದಲ್ಲಿ ಬೇರೊಂದು ಕಲ್ಪನೆಯಿಂದ ಕಾವ್ಯವನ್ನು ರಚಿಸಿದನೆಂದು ಕಾಣುತ್ತದೆ. ರಾವಣನು ತನ್ನನ್ನು ಅಪೇಕ್ಷಿಸದ ಸ್ತ್ರೀಯನ್ನು ಬಲಾತ್ಕಾರದಿಂದ ಅನುಭವಿಸುವ ಕುತ್ಸಿತನಲ್ಲ. ಅವನು ಸ್ತ್ರೀ ಸಹವಾಸದ ಸುಖವನ್ನು ಅರಿತಿದ್ದನು; ಅದರ ರುಚಿಯು ಬಹು ಭಾಗ ಹೆಣ್ಣಿನ ಸಮ್ಮತಿಯಿಂದ ಬರತಕ್ಕುದೆಂದು ಕಂಡಿದ್ದನು. ಕಣ್ಣೀರು ಸುರಿಸುತ್ತ ಕೂದಲನ್ನು ಜಡೆಗಟ್ಟಿ ರಾಮನನ್ನು ನೆನೆಯುತ್ತಿರುವ ಸೀತೆಯನ್ನು ರಾವಣನು ಅಪೇಕ್ಷಿಸಲಿಲ್ಲ. ರಾಮನ ಯೋಚನೆಯನ್ನು ಬಿಟ್ಟು ಲಂಕೇಶ್ವರನಾದ ತನಗೆ ಮನಸ್ಸನ್ನು ತೆತ್ತು ತನ್ನ ರಾಣಿಯರೆಲ್ಲರಿಗೆ ಅಧಿರಾಜ್ಞಿಯಾಗಿ ತನ್ನನ್ನು ಒಲಿದು ಸೇರುವ ಸೀತೆಯನ್ನು ಅವನು ಅಪೇಕ್ಷಿಸಿದನು. ನೀನು ಎಂಥ ಚೆಲುವೆ, ಈ ಅಳುವಿನಿಂದ ಮುಖ ಸೊಗಸದೆ ಇದೆ, ಪ್ರಸನ್ನಳಾಗು, ಎಂದು ಅವನು ಅವಳನ್ನು ಬೇಡಿದನು. ಪ್ರಸನ್ನಳಾದ ಸೀತೆಯನ್ನು ಊಹೆಯಲ್ಲಿ ಕಾಣುತ್ತ ಅಪ್ರಸನ್ನಳನ್ನು ಅನುಭವಿಸುವ ನೀಚಸ್ವಭಾವ ರಾವಣನದಲ್ಲ. ಅವನು ಭೋಗಿ. ಆಹಾರದಲ್ಲಿ ಭೋಗಿಯಾದವನು ಕದನ್ನಕ್ಕೆ ಬಾಯಿತೆರೆಯುವುದಿಲ್ಲ. ಸ್ತ್ರೀ ವಿಷಯದಲ್ಲಿ ಭೋಗಿಗೆ ಒಲಿಯದ ಹೆಣ್ಣಿನ ಅನುಭವ ಕದನ್ನದಂತೆ ಅನುಪಭೋಗ್ಯವಾದದು. ಅಲ್ಲದೆ ರಾವಣನಿಗೆ ಉಳಿದ ಸ್ತ್ರೀಯರಲ್ಲಿ ಹುಟ್ಟಿದ್ದಕ್ಕಿಂತ ಸ್ವಲ್ಪ ಉತ್ತಮರೀತಿಯ ಪ್ರೇಮ ಸೀತೆಯನ್ನು ಕುರಿತು ಉಂಟಾಯಿತೆಂದು ಕಾಣುತ್ತದೆ. ಅವಳ ಅಸದೃಶ ಲಾವಣ್ಯದಿಂದ ಅವನ ಮನಸ್ಸಿನಲ್ಲಿ ಅತಿಶಯವಾದ ಗೌರವ ಅತಿಶಯವಾದ ಪ್ರೇಮ ಉಂಟಾಗಿರಬೇಕು. ಅವನು ಈ ಕಾರಣದಿಂದ ಅವಳಲ್ಲಿ ಧೂರ್ತತೆಯಿಂದ ನಡೆಯಲು ಹಿಂತೆಗೆದನು. ಅವಳು ಕಠಿಣವಾಗಿ ಮಾತನಾಡಿದಾಗ ಕೋಪ ಬಂದರೂ ಅವಳಮೇಲೆ ಕ್ರೌರ್ಯದಿಂದ ನಡೆದುಕೊಳ್ಳಲಿಲ್ಲ. "ನಿನಗೆ ಇದಕ್ಕೆ ಶಿಕ್ಷೆಯನ್ನು ವಿಧಿಸಬೇಕು. ಆದರೆ ಪ್ರಣಯಿ ತನ್ನ ಪ್ರೀತಿಯ ವಸ್ತುವಿನ ವಿಷಯದಲ್ಲಿ ಕನಿಕರವನ್ನು ತಾಳುತ್ತಾನೆ. ಆದ್ದರಿಂದ ನಾನು ನಿನ್ನನ್ನು ಏನೂ ಮಾಡುವುದಿಲ್ಲ" ಎಂದು

ಹೇಳಿದನು. ರಾವಣನ ಈ ಒಂದು ಗುಣದಿಂದ ಸೀತೆ, ಜೀವ, ಮರ್ಯಾದೆ, ಎರಡರೊಂದಿಗೆ ಮತ್ತೆ ರಾಮನನ್ನು ಸೇರುವುದು ಸಾಧ್ಯವಾಯಿತು. ಬಲಾತ್ಕಾರದಿಂದ ಹೊತ್ತುಕೊಂಡು ಬಂದಂತೆ ಬಲಾತ್ಕಾರದಿಂದ ಅವಳನ್ನು ಅನುಭವಿಸುವ ಯೋಚನೆಯನ್ನೂ ರಾವಣನು ಮಾಡಿದ್ದರೆ ಸೀತೆ ಪ್ರಾಯಶಃ ಜೀವವನ್ನು ಬಿಡಬೇಕಾಗುತ್ತಿದ್ದಿತು. ವಾಲ್ಮೀಕಿ ರಾವಣನ ಪಾತ್ರವನ್ನು ಕಲ್ಪಿಸುವುದರಲ್ಲಿ ಇವನ ಈ ಮನೋಧರ್ಮವನ್ನು ವ್ಯಕ್ತ ಪಡಿಸಿ ಸನ್ನಿವೇಶವನ್ನು ಸಹಜವೆಂದು ತೋರಿಸಿದಾನೆ.

ಈ ಮಾತಿನಿಂದ ರಾವಣನು ಪಾಶ್ಚಾತ್ಯ ದೇಶಗಳ ಕೆಲವು ದುಃಖಾಂತ ನಾಟಕಗಳ ನಾಯಕರ ರೀತಿಯ ಒಬ್ಬ ನಾಯಕನೆನ್ನುವುದು ಇಲ್ಲಿ ಅಭಿಪ್ರಾಯವಲ್ಲ. ಷೇಕ್ಸ್‌ಪಿಯರ ಕೆಲವು ನಾಟಕಗಳಲ್ಲಿ ಬಹು ಮಟ್ಟಿಗೆ ಗುಣಶಾಲಿಯಾದ ನಾಯಕನು ಯಾವುದೋ ಒಂದು ದುರ್ಗುಣದಿಂದ ಅಥವಾ ಗುಣದ ಅಭಾವದಿಂದ ದಾರಿತಪ್ಪಿ ಜೀವನದ ಸುಳಿಯಲ್ಲಿ ಸಿಕ್ಕಿ ದುಃಖದಲ್ಲಿ ಕೊನೆಗಾಣುವ ಚಿತ್ರ ಕಾಣುತ್ತದೆ. ಹ್ಯಾಮ್ಲೆಟ್ ಕರ್ತವ್ಯವನ್ನು ನಿರ್ಧರಿಸಿಕೊಂಡಮೇಲೆ ಅದನ್ನು ನಡೆಸುವುದರಲ್ಲಿ ಆಲಸ್ಯ ಮಾಡುವುದರಿಂದ ಕೆಡುತ್ತಾನೆ. ಉಳಿದಹಾಗೆ ಅವನು ಬಹು ಗುಣಶಾಲಿ. ಹೀಗೆಯೇ ಮ್ಯಾಕ್ಬೆತ್ ಉಳಿದಂತೆ ಬಹು ಒಳ್ಳೆಯವನು, ಆದರೆ ಅವನಿಗೆ ಅಧಿಕಾರದಲ್ಲಿ ಆಸೆ. ರಾಜನಾಗುವೆಯೆಂದು ಮಾಟಗಾತಿಯರು ಹೇಳಿದರೆ ಅದನ್ನು ನಂಬಿ, ಅದನ್ನು ನಿಜಮಾಡುವುದಕ್ಕಾಗಿ ಎಂಬಂತೆ ರಾಜನಾಗಿದ್ದವನನ್ನು ಕೊಂದು, ತಾನು ರಾಜನಾಗಿ, ರಾಜ್ಯದ ಜನ ಮೇಲೆಬೀಳಲು ಯುದ್ಧಮಾಡಿ ಸತ್ತುಹೋಗುವನು. ಇವನ ರಾಜ್ಯಾಕಾಂಕ್ಷೆ ಉಳಿದೆಲ್ಲ ಗುಣವನ್ನೂ ಸಾವಿರ ಚಿತ್ತಾರವನ್ನು ಒಂದು ಮಸಿ ನುಂಗುವಂತೆ ನುಂಗಿತು. ಜೀವನದ ದುಃಖಕ್ಕೆ ಇಂಥ ಒಂದು ಕೆಟ್ಟ ಗುಣ ಕಾರಣವೆಂದು ತೋರಿಸುವುದು ಷೇಕ್ಸ್‌ಪಿಯರ ಉದ್ದೇಶ ಹೌದೊ ಅಲ್ಲವೊ ನಾವು ಹೇಳುವಂತಿಲ್ಲ. ಅವನ ನಾಟಕ ಕೆಲವದರಿಂದ ಈ ಭಾವವನ್ನು ವಿಮರ್ಶಕರೊಬ್ಬರು ಗ್ರಹಿಸಿದರು. ಈಚೆಗೆ ನಮ್ಮಲ್ಲಿ ಕೆಲವರು ಪಶ್ಚಿಮ ದೇಶದ ದುಃಖಾಂತ ನಾಟಕ ಎಲ್ಲದರಲ್ಲಿಯೂ ಇದು ಕಾಣುತ್ತದೆಂದು ತಿಳಿದಿರುವಂತೆ ತೋರುತ್ತದೆ. ಇಂಥವರು ರಾವಣ, ಶಿಶುಪಾಲ, ಹಿರಣ್ಯಕಶಿಪು

ಮುಂತಾದವರನ್ನು ಎಲ್ಲಾ ಒಳ್ಳೆಯ ಗುಣ ಇದ್ದು ಒಂದು ಕೆಟ್ಟಗುಣದಿಂದ ಕೆಟ್ಟುಹೋದ ನಾಯಕರಾಗಿ ಚಿತ್ರಿಸಲು ಯತ್ನಮಾಡುತ್ತಾರೆ. ಪಾಶ್ಚಾತ್ಯ ನಾಟಕದಲ್ಲಿಯೇ ಎಲ್ಲ ಕಡೆಯೂ ಕಾಣದ, ಷೇಕ್ಸ್‌ಪಿಯರ್ ನಾಟಕದಲ್ಲಿ ಕೂಡ ಕೆಲವದರಲ್ಲಿ ಮಾತ್ರ ಕಾಣುವುದೆನ್ನುವ, ಈ ಭಾವದಿಂದ ನಮ್ಮ ದೇಶದ ಕಥೆಗಳ ಪ್ರತಿನಾಯಕರನ್ನೆಲ್ಲ ಪುನಃ ಚಿತ್ರಿಸುವ ಇಂಥ ಯತ್ನ ಸಾಹಿತ್ಯದಲ್ಲಾದರೂ ಸಾಧುವಾಗುತ್ತದೆಯೆ ಎನ್ನುವುದು ಚರ್ಚಾರ್ಹವಾದ ವಿಷಯ. ಆದರೆ ಸಾಹಿತ್ಯ ಅನನ್ಯತಂತ್ರವಾದದು. ಅದು ಗುರಿಯರಿತು ನಡೆಯುವಾಗ ತನಗೆ ಸರಿಯೆಂದು ತೋರಿದ ದಾರಿಯನ್ನು ಹಿಡಿಯ ಬಹುದು. ವಿಮರ್ಶೆ ಹೀಗೆ ಮಾಡುವುದಕ್ಕಿಲ್ಲ. ವಾಲ್ಮೀಕಿಯ ರಾವಣನು ಹ್ಯಾಮ್ಲೆಟ್ ಮ್ಯಾಕ್ಬೆತ್ ಇವರ ರೀತಿಯ ನಾಯಕನಲ್ಲ; ವಾಲ್ಮೀಕಿ ಅವನ ಚರಿತ್ರೆಯನ್ನು ಬರೆಯುವುದಕ್ಕೆ ಹೊರಡಲಿಲ್ಲ. ಷೇಕ್ಸ್‌ಪಿಯರನ ಹ್ಯಾಮ್ಲೆಟ್ ಮ್ಯಾಕ್ಬೆತ್ ಇವರ ವಿಷಯದಲ್ಲಿ ನಮಗೆ ಕನಿಕರ ಹುಟ್ಟು ವಂತೆ ರಾವಣನ ವಿಷಯವನ್ನು ಓದುವಾಗಲೂ ಅಯ್ಯೋ ಇವನು ಹೀಗೆ ಕೆಡುತ್ತಾನಲ್ಲ ಎಂದು ಮನಸ್ಸು ಕರಗುವುದು ನಿಜ; ಆದರೆ ಇದು ಅವನು ಮೊತ್ತದಲ್ಲಿ ಒಳ್ಳೆಯವನಾಗಿ ಒಂದು ದೋಷದಿಂದ ಕೆಡುವನೆಂಬ ಕಾರಣ ದಿಂದ ಅಲ್ಲ. ವಾಲ್ಮೀಕಿ ಅವನಿಗೆ ಹತ್ತು ಕಡೆಯಿಂದ ಬುದ್ಧಿ ಹೇಳಿಸು ತ್ತಾನೆ; ಹತ್ತುಸಲ ಅವನು ಅದನ್ನು ಕೇಳಲಿಲ್ಲವೆಂದು ತೋರಿಸುತ್ತಾನೆ. ತನ್ನ ಸ್ವಭಾವದ ಬಲೆಗೆ ಸಿಕ್ಕಿ ಚೇತನನು ತಪ್ಪಿಸಿಕೊಳ್ಳಲಾರದೆ ಹೇಗೆ ತೊಳಲುತ್ತಾನೆಂದು ಚಿತ್ರಿಸಿ ನಮ್ಮಿಂದ ಅಯ್ಯೋ ಎನ್ನಿಸುತ್ತಾನೆ. ಬಾಳಿನ ವಿಷಯದಲ್ಲಿ ಇಂಥ ಸಂದರ್ಭವನ್ನು ಕುರಿತ ಅಭಿಪ್ರಾಯವನ್ನು ಕವಿ ಸೀತೆಯ ಬಾಯಲ್ಲಿ ಹೇಳಿಸಿದ್ದಾನೆ. ರಾವಣನ ವಧೆಯಾದಮೇಲೆ ರಾಮನ ಸಂದೇಶವನ್ನು ತಂದ ಹನುಮಂತನು ಸೀತಾದೇವಿಗೆ ತೊಂದರೆ ಕೊಟ್ಟಿದ್ದ ರಾಕ್ಷಸ ಸ್ತ್ರೀಯರನ್ನು ದಂಡಿಸುವೆನೆಂದು ದೇವಿಯ ಅಪ್ಪಣೆ ಯನ್ನು ಕೇಳಿದನು. ಸೀತಾದೇವಿ "ಅವರು ಅವರ ಒಡೆಯನ ಆಜ್ಞೆ ಯನ್ನು ನಡೆಸಿದರು. ಅದಕ್ಕಾಗಿ ಅವರನ್ನು ದಂಡಿಸಬಾರದು. ದಂಡನೆಗೆ ಅರ್ಹರಾದರೂ ಅವರ ವಿಷಯದಲ್ಲಿ ಆರ್ಯರಿಗೆ ಕರುಣೆಯೇ ಕರ್ತವ್ಯ, ತಪ್ಪುಮಾಡದವರು ಯಾರೂ ಇಲ್ಲ" ಎಂದಳು. "ಪಾಪಾನಾಂವಾ ಶುಭಾ

ನಾಂವಾ ವಧಾರ್ಹಾಣಾಂ ಪ್ಲವಂಗಮ ಕಾರ್ಯಂ ಕರುಣಮಾರ್ಯೇಣ ನಕಶ್ಚಿನ್ನಾಪರಾಧ್ಯತಿ.'' ವಿಭೀಷಣನನ್ನು ಅಂಗೀಕರಿಸುವುದೇ ಬಿಡುವುದೇ ಎಂಬ ಚರ್ಚೆ ಬಂದಾಗ ರಾಮನು, ರಾವಣನ ತಮ್ಮನ ಮಾತೇನು, ರಾವಣನೇ ಬಂದರೂ ನಾನು ಅವನನ್ನು ಮನ್ನಿಸಿ ಒಪ್ಪಿಕೊಳ್ಳುವೆನು, ಎಂದನು. ಇವು ಕಾವ್ಯದಲ್ಲಿ ಸೀತಾದೇವಿಯ ಮಾತು, ರಾಮನ ಮಾತು; ಕಾವ್ಯದ ಹೊರಗೆ ವಾಲ್ಮೀಕಿಯವು. ಅವನ್ನು ಅವನು ರಾವಣನ ವಿಷಯದಲ್ಲಿ ಹೇಳುವುದಕ್ಕೆ ಸಿದ್ಧನಾಗಿದ್ದನು. ಅವನು ರಾವಣನನ್ನು ಕುರಿತು ಕನಿಕರಪಟ್ಟಿದ್ದನು; ಅದರಿಂದ ಅವನು ರಚಿಸಿದ ರಾವಣನ ಚಿತ್ರ ನಮ್ಮ ಕನಿಕರಕ್ಕೂ ಪಾತ್ರವಾಗುತ್ತದೆ. ಇದು ಕವಿಯ ಕೌಶಲದ ಬಹು ಹಿರಿಯಭಾಗ. ಮಿಲ್ಟನ್ ಕವಿಯ ಕಾವ್ಯದಲ್ಲಿ ದೇವರು ನಾಯಕನು, ಸೈತಾನನು ಪ್ರತಿನಾಯಕನು. ಆದರೆ ಕಾವ್ಯವನ್ನು ಓದಿದವರಿಗೆ ಸೈತಾನನೇ ನಾಯಕನು, ದೇವರು ಅವನನ್ನು ಹಿಂಸೆಪಡಿಸಿದ ಪ್ರಭು, ಎಂಬ ಭಾವನೆ ಹುಟ್ಟುವಂತೆ ಕವಿ ಪ್ರತಿನಾಯಕನ ಚಿತ್ರದಲ್ಲಿ ಗುಣಗಳನ್ನು ತುಂಬಿದನೆಂದು ಅನೇಕರು ಅಭಿಪ್ರಾಯ ಪಟ್ಟಿದಾರೆ. ರಾಮಾಯಣದಲ್ಲಿ ಇಂಥ ಅಚಾತುರ್ಯ ಆಗಿಲ್ಲವೆಂದು ಪಾಶ್ಚಾತ್ಯ ವಿಮರ್ಶಕರೊಬ್ಬರು ಹೇಳಿದ್ದಾರೆ. ಇದು ನಿಜ. ಕವಿಗೆ ರಾವಣನಿಗಿಂತ ರಾಮನು ಹಿರಿಯನು ಮಾತ್ರ ಅಲ್ಲ, ಪ್ರಿಯನೂ ನಿಜವೂ ಆಗಿದ್ದನು. ಆದ್ದರಿಂದಲೇ ರಾವಣನ ವಿಷಯದಲ್ಲಿ ಕನಿಕರಿಸುವಾಗ ನಾವು ರಾಮನು ಅವನ ವಿಷಯದಲ್ಲಿ ನಡೆದುಕೊಂಡ ರೀತಿಯನ್ನು ಕುರಿತು ಅತೃಪ್ತರಾಗುವುದಿಲ್ಲ. ರಾಮನ ವಿಷಯದಲ್ಲಿ ಒಂದೆರಡುಸಲ ನಾವು ಅಸಮಾಧಾನಪಡಬಹುದು. ಆಗ ನಾವು ಮಾಲುವುದು ಪ್ರತಿನಾಯಕನ ಕಡೆಗಲ್ಲ; ಭರತನ ಕಡೆಗೆ, ವಾಲಿಯ ಕಡೆಗೆ, ಸೀತೆಯ ಕಡೆಗೆ. ರಾವಣನ ನಡತೆ ತಪ್ಪು ಎನ್ನುವ ವಿಷಯದಲ್ಲಿ ನಮಗೆ ಯಾವ ಸಂದರ್ಭದಲ್ಲಿ ಆಗಲಿ ಸಂದೇಹ ಹುಟ್ಟುವುದಿಲ್ಲ.

ದಶರಥನು ಮೊದಲಾಗಿ ರಾವಣನ ವರೆಗೆ ಇಲ್ಲಿ ಚರ್ಚಿಸಿರುವ ಪಾತ್ರಗಳು ವಾಲ್ಮೀಕಿ ರಚಿಸಿರುವ ಸಂಪೂರ್ಣ ಚಿತ್ರಗಳು. ರಾಮಾಯಣದಲ್ಲಿ ಅನೇಕ ಇತರ ವ್ಯಕ್ತಿಗಳು ಇದಾರೆ. ಅವರಲ್ಲಿ ಹಲವರು ಇಷ್ಟು

ಪೂರ್ತಿಯಾಗಿ ಚಿತ್ರಿತರಾಗದಿದ್ದರೂ ತಕ್ಕಷ್ಟು ಮುಖ್ಯರಾದವರೇ. ರಾಜನಿಗೆ ಪುರೋಹಿತನಾಗಿರುತ್ತ ತಾನು ಎಷ್ಟೇ ಮಹರ್ಷಿಯೆಂದು ಹೆಸರಾಗಿದ್ದರೂ ರಾಷ್ಟ್ರಧರ್ಮದಿಂದ ಹಿರಿಯನಾದ ರಾಜನಿಗೆ ಮರ್ಯಾದೆಯನ್ನು ತೋರಿಸುತ್ತ, ಅವನ ಮಕ್ಕಳಿಗೆ ಮಹಿಷಿಯರಿಗೆ ಗುರುವಾಗಿ ನಡೆಯುತ್ತ, ಕೈಕಯಿಗೆ ಬುದ್ಧಿ ಹೇಳಲು ನೋಡಿ ಅವಳು ಕೇಳದೆ ಇರಲು ಕೋಪಗೊಂಡು ಒದರಿ ಮಾತಾಡಿ, ರಾಮನು ಕಾಡಿಗೆ ಹೋಗಲು ಒಪ್ಪಿ, ದೊರೆ ತೀರಿಕೊಂಡೊಡನೆ ಭರತನನ್ನು ಕರೆಯಿಸಿ ಅರಸನಾಗಿ ಮಾಡಿ, ಪ್ರಭುವಿನ ಮನೆತನದ ಮಂಗಳಕ್ಕೆ ಮುಖ್ಯ ಮಂತ್ರಿಯಾದ ವಸಿಷ್ಠ; ಅವನಂತೆಯೇ ದೊರೆಗೆ ಚಿಕ್ಕಂದಿನಿಂದ ಜೊತೆಗಿದ್ದು ಸೂತನಾದರೂ ಸ್ನೇಹಿತನ ನಿಲುವಿಗೆ ಸೇರಿ, ರಾಮನು ಕಾಡಿಗೆ ಹೋಗುವ ಮಾತು ಬಂದಾಗ ಕೈಕಯಿಯಮೇಲೆ ಕೋಪಮಾಡಿ, ರಾಮನನ್ನುದಾರಿ ಬಿಡಲು ಹೋಗಿ, ಜೊತೆಗೆ ಕರೆದುಕೊಂಡುಹೋಗೆಂದು ಬೇಡಿ, ಮನಸ್ಸಿಲ್ಲದೆ ಹಿಂದಕ್ಕೆ ಬಂದು, ಸೀತಾರಾಮಲಕ್ಷ್ಮಣರು ಏನು ಹೇಳಿದರೆಂದು ಹೇಳುವುದರಲ್ಲಿ ವೃದ್ಧಸೇವಕನ ವಿವೇಚನೆಯನ್ನು ತೋರಿ, ಅವರ ವಿಷಯದಲ್ಲಿ ದೊರೆಗೆ ಧೈರ್ಯ ಹುಟ್ಟುವಂತೆ ಮಾತನಾಡಿ, ಕೊನೆಗೂ ದೊರೆಯ ಸಖನಾದ ಸುಮಂತ್ರ; ವನವಾಸಕ್ಕಾಗಿ ಹೊರಟ ರಾಮನಿಗೆ ತನ್ನ ಸರ್ವಸ್ವವನ್ನೂ ನಿವೇದಿಸಿ, ಸತಿಸೋದರನೊಡನೆ ಅವನು ಗಂಗೆಯನ್ನು ದಾಟಲು ನೆರವಾಗಿ, ಭರತನು ಬಂದಾಗ ರಾಮನಿಗೆ ಇವನೇನು ತೊಂದರೆ ಕೊಡಲು ಹೊರಟನೋ ಎಂದು ರಾಮನ ವಿಷಯದಲ್ಲಿ ತಮ್ಮನಿಗೆ ಹೆಚ್ಚಿದ ಒಂದು ಪ್ರೇಮವನ್ನು ಅನುಭವಮಾಡಿ, ರಾಮನು ಮಲಗಿದ ಸ್ಥಳ ಕುಳಿತ ಸ್ಥಳ ಎಂದು ಭರತನಿಗೆ ತೋರಿಸಿ, ನಿಷಾದನಾದರೂ ಕಾಕುತ್ಸ್ಥರ ಸ್ನೇಹಕ್ಕೆ ಅರ್ಹನೆನ್ನಿಸಿಕೊಂಡ ಗುಹ; ಒಡತಿಯ ಒಳ್ಳೆಯದಕ್ಕಾಗಿ ಅವಳಿಗೆ ತೋರದ ಭೇದವನ್ನು ಅವಳ ಮನಸ್ಸಿನಲ್ಲಿ ಉದ್ರೇಕಗೊಳಿಸಿ, ರಾಮನ ವನವಾಸಕ್ಕೆ ಏರ್ಪಾಡು ಮಾಡಿಸಿದ ಮಂಥರೆ; ಸೀತೆ ಬಳಿಗೆ ಬರಲು ತನ್ನ ಮಗಳಂತೆ ಆದರಿಸಿ, ಅವಳ ಮದುವೆಯ ಮಾತನ್ನು ಹೇಳಿಸಿ ಕೇಳಿ, ಅವಳಿಗೆ ಒಡವೆ ವಸ್ತ್ರಗಳನ್ನು ಕೊಟ್ಟು ಅವಳು ಅಲಂಕರಿಸಿಕೊಂಡದನ್ನು ನೋಡಿ ಆನಂದಿಸಿ, ತರುಣಿ ಗಂಡನ ಬಳಿಗೆ ಹೋಗಲು ಅನುಮತಿಯಿತ್ತ ವೃದ್ಧ

ತಾಪಸಿ ಅನಸೂಯೆ; ಬಹು ದಿನ ಸೇರಿಸಿದ್ದ ಹಣ್ಣನ್ನು ರಾಮನಿಗೆ ಕೊಡಲು ಕಾದು, ಅವನು ಬಂದವೇಳೆ ತನ್ನ ತಪಸ್ಸು ಸಿದ್ಧಿಯಾಯಿತೆಂದ ಶಬರಿ; ಅಣ್ಣನಿಗೆ ಹತ್ತಿರ ಹತ್ತಿರದ ಶಕ್ತಿ ಉಳ್ಳವನಾದರೂ ತಮ್ಮತನದ ಕಾರಣ ದಿಂದ ನಿಶ್ಯಕ್ತನಂತಾಗಿ, ಅವನು ಕೋಪಗೊಂಡು ಅಟ್ಟಲು ಹೆಂಡತಿಯನ್ನು ಬಿಟ್ಟೋಡಿ, ರಾಮನ ಸಖ್ಯದಿಂದ ಅಣ್ಣನನ್ನು ಗೆದ್ದು, ಆ ಅಣ್ಣನು ಸಾಯು ವಂದು ದುಃಖದಿಂದ ಕರಗಿ, ರಾಜನಾಗಿ, ತನ್ನ ಕರ್ತವ್ಯವನ್ನು ಮರೆತನೆಂಬ ಶಂಕೆ ಹುಟ್ಟುವ ಮಟ್ಟಿಗೆ ರಾಜಭೋಗದಲ್ಲಿ ನಿರತನಾಗಿ, ಲಕ್ಷ್ಮಣನು ಬಂದವೇಳೆ ತಾರೆಯನ್ನು ಮುಂದು ಬಿಟ್ಟು ಅವನನ್ನು ಸಮಾಧಾನಗೊಳಿಸಿ, ರಾಮನೊಂದಿಗೆ ಲಂಕೆಯನ್ನು ಮುಟ್ಟಿ ಹೊತ್ತಲ್ಲದ ಹೊತ್ತಿನಲ್ಲಿ ರಾವಣನ ಮೇಲೆ ಬಿದ್ದು ಪುಣ್ಯವಶದಿಂದ ತಪ್ಪಿಸಿಕೊಂಡುಬಂದು, ರಾಮನಿಗೆ ಸೀತೆ ಯನ್ನು ಗೆದ್ದುಕೊಟ್ಟು ಅಗ್ನಿಮುಖದಲ್ಲಿ ಕೈಯಲ್ಲಿ ಕೈಯಿಟ್ಟು ಬೆಳೆಸಿದ ಸಖ್ಯ ವನ್ನು ಪೂರ್ತಿಗೊಳಿಸಿ, ಪಟ್ಟಾಭಿಷೇಕದ ಸಮಯದಲ್ಲಿ ರಾಮನ ಸ್ವಂತದ ಅರಮನೆಯಲ್ಲಿ ಸತ್ಕಾರವನ್ನು ಪಡೆದ ಸುಗ್ರೀವ; ತಮ್ಮನಮೇಲೆ ಅತಿ ಯಾದ ಆಕ್ರೋಶವನ್ನು ತೋರಿ ಅವನನ್ನಟ್ಟಿ ಅವನ ಹೆಂಡತಿಯನ್ನಿಟ್ಟು ಕೊಂಡು ಬಾಳಿ, ಅವನ ಸಖ ರಾಮನು ಬಂದು ತೊಂದರೆಮಾಡುವನಂತೆ ಎಂದು ತಾರೆ ಹೇಳಲು, ಎಲ್ಲಾದರೂ ಉಂಟೆ ಎಂದು ಧೈರ್ಯದಿಂದ ನಡೆದು, ಆತನು ಅಂಬಿನಿಂದ ಗಾಯಪಡಿಸಲು ಅವನನ್ನು ಆಕ್ಷೇಪಿಸಿ, ಅವನು ಏನೋ ಸಮಾಧಾನ ಹೇಳಲು ಅದನ್ನುಒಪ್ಪಿಕೊಂಡು, ಸುಗ್ರೀವನಲ್ಲಿ ಮತ್ತೆ ಕನಿಕರ ತೋರಿ ಅಂಗದನನ್ನು ಅವನ ಕೈಗೆ ಒಪ್ಪಿಸಿ, ಮಡಿವಂದು ಬಾಳು ಸಂದಿನ ಸಮಾಧಾನವನ್ನು ತೋರಿಸಿದ ವಾಲಿ; ಇವನಿರುವಾಗ ಇವನಿಗೆ ಹೆಂಡತಿಯಾಗಿ ಬಾಳಿ, ಇವನನ್ನು ಉಳಿಸುವುದಕ್ಕೆ ಅವಶ್ಯಕವಾದ ಬುದ್ಧಿ ಯನ್ನು ಹೇಳಿ, ಇವನು ಮಡಿದಾಗ ಬಾಳಲ್ಲಿ ಬೇಸತ್ತು ಸಾಯುವೆನೆಂದೇ ಹಟಮಾಡಿ, ಹಿರಿಯರು ಬೇಡವೆಂದು ಹೇಳಲು ಮಗನಿಗಾಗಿ ಜೀವದಿಂದಿರ ಲೊಪ್ಪಿ, ಕುಲಧರ್ಮದಂತೆ ಮೈದುನನ ಹೆಂಡತಿಯಾಗಿ ಬಾಳಿ, ಅವನ ಮೇಲೆ ಕೋಪಗೊಂಡು ಬಂದ ಲಕ್ಷ್ಮಣನೊಡನೆ ಸಂಕೋಚವುಳಿದು ಮಾತನಾಡಿ, ಬಹುಕಾಲ ಕಷ್ಟದಲ್ಲಿದ್ದು ರಾಜನಾದ ನಿನ್ನ ಸೋದರನು ನನ್ನನ್ನೂ ರುಮೆಯನ್ನೂ ಪಡೆದ ಸೌಖ್ಯದಲ್ಲಿ ಸ್ವಲ್ಪ ಮೈಮರೆತಂತೆ ಕಂಡರೆ

ಅವನನ್ನು ಮನ್ನಿಸು ಎಂದು ಬೇಡಿ, ಹೊಕ್ಕ ಮನೆಯ ಹಿತಕ್ಕಾಗಿಯೇ ಬದುಕಿದ ತಾರೆ; ರಮ್ಯವೂ ಪಾವನವೂ ಆದ ಏಕಾಂತ ವನಾಂತರದ ಆಶ್ರಮದಲ್ಲಿರುತ್ತ, ಆರ್ಯಋಷಿಗಳ ಕರ್ಮಗಳಲ್ಲಿ ಅಸಮಾಧಾನಪಟ್ಟು ಅವನ್ನು ನಿಲ್ಲಿಸಬೇಕೆಂದು ಅವರಿಗೆ ತೊಂದರೆಕೊಡುತ್ತ, ರಾವಣನು ಬಂದು ಸೀತಾಪಹರಣಕ್ಕಾಗಿ ಸಹಾಯ ಕೇಳಲು ರಾಮನನ್ನು ಹೊಗಳಿ ಇಂಥ ಯೋಚನೆ ಬೇಡವೆಂದು ರಾಜನಿಗೆ ಬುದ್ಧಿಹೇಳಿ, ಮತ್ತೆ ಅವನು ಹಟ ಮಾಡಲು ಅವನ ಇಷ್ಟದಂತೆ ನಡೆದು ರಾಜನ ಸೇವೆಯಲ್ಲಿ ದಕ್ಷತೆಯಿಂದ ದುಡಿದು ಜೀವವನ್ನು ಬಿಟ್ಟ ಮಾಯಾಕುಶಲ ಮಾರೀಚ; ರಾಮ ಲಕ್ಷ್ಮಣರು ತನ್ನ ಕಾಡಿಗೆ ಬಂದ ಮೊದಲಲ್ಲಿಯೇ ತಾನು ದಶರಥನ ಸ್ನೇಹಿತನೆಂಬುದನ್ನು ಅವರಿಗೆ ತಿಳಿಸಿ, ಆಶ್ರಮವನ್ನು ನೋಡಿಕೊಳ್ಳುತ್ತಿದ್ದು, ಅವರಿಲ್ಲದವೇಳೆ ರಾವಣನು ಸೀತೆಯನ್ನು ಕದಿಯಲು ಅವನನ್ನು ತನ್ನ ವೃದ್ಧದೇಹದಿಂದ ತಡೆದು ಪೆಟ್ಟುತಿಂದು ಬಿದ್ದು, ರಾಮ ಲಕ್ಷ್ಮಣರು ಮರಳಿ ಬಂದಾಗ ಅವರಿಗೆ ಸೀತೆಯ ಸುದ್ದಿಯನ್ನು ಹೇಳಿ ಮಡಿದ ಜಟಾಯು; ತಪ್ಪುಮಾಡಬೇಡವೆಂದು ಅಣ್ಣನಿಗೆ ಹೇಳಿ, ನನಗೆ ಬುದ್ಧಿ ಹೇಳುವುದಕ್ಕಾಗಿ ನಿನ್ನನ್ನು ಕರೆಯಲಿಲ್ಲವೆಂದು ಅವನು ಪ್ರತಿಹೇಳಲು ಒಪ್ಪಿಕೊಂಡು, ಹಗೆಯಮೇಲೆ ಹಾಯ್ದು ವೀರಯುದ್ಧವನ್ನು ನಡೆಯಿಸಿ ಜೀವನವನ್ನು ಮುಗಿಸಿದ ಕುಂಭಕರ್ಣ; ಅದೇ ಅಣ್ಣನಿಗೆ ಬುದ್ಧಿಹೇಳಿ, ಅವನು ಕೇಳದಿರಲು ಧರ್ಮವಿರುವ ಪಕ್ಷ ತನ್ನ ಪಕ್ಷ ಎಂದು ರಾಮನನ್ನು ಸಾರಿ ಅವನಿಗೆ ಶರಣಾಗತನಾಗಿ ಸಖ್ಯದಿಂದ ನಡೆದು, ಲಂಕೆಯನ್ನು ಗೆಲ್ಲುವುದಕ್ಕೆ ಅವನಿಗೆ ತನ್ನಿಂದಾದ ಸಹಾಯವನ್ನು ಮಾಡಿ, ಅಣ್ಣನು ಮಡಿದಾಗ ಅವನ ವಿಷಯದಲ್ಲಿ ದುಃಖಪಟ್ಟ ವಿಭೀಷಣ, ತಂದೆ ತಂದ ಜಗಳದಲ್ಲಿ ಹೇಗಾದರೂ ಜಯವನ್ನು ಪಡೆದೇನೆಂದು ಅಸಾಧಾರಣವಾದ ಪರಾಕ್ರಮದಿಂದ ಕಾದಿ ಮಾಯೆಮಾಟಗಳನ್ನು ಮಾಡಿ ಒಂದೇ ಮನಸ್ಸಿನಿಂದ ಪಿತೃಸೇವೆಯನ್ನು ಸಲಿಸಿ ಮಡಿದ ಮೇಘನಾದ; ಸಾವಿರ ಜನ ಹೆಂಡತಿಯರನ್ನು ಜೊತೆಗಿಟ್ಟುಕೊಂಡು ವಿಹರಿಸಿದ ಕಾಮುಕನಾದ ಆದರೆ ವೀರನಾದ ಗಂಡನ ಶಯ್ಯೆಯಲ್ಲಿ ಪಟ್ಟದ ರಾಣಿಯಾಗಿ ಸಮಾಧಾನದಲ್ಲಿ ಮಲಗಿರುತ್ತ, ಮತ್ತೊಂದು ಹೆಣ್ಣಿಗಾಗಿ

ಮುಷ್ಕರವಮಾಡಿ ಅವನು ಮಡಿಯಲು, ನಾನಿರುವಲ್ಲಿ ನೀನು ಸೀತೆಯಲ್ಲಿ ಏನನ್ನು ನೋಡಿ ಈ ಸ್ಥಿತಿಗೆ ಬಂದೆ ಎಂದು ವಿಲಪಿಸಿದ ಮಂಡೋದರಿ; ಶತ್ರುಘ್ನ, ವಿಶ್ವಾಮಿತ್ರ, ಭರದ್ವಾಜ, ಅಗಸ್ತ್ಯ, ಜನಕ, ಅಂಗದ, ಸಂಪಾತಿ, ಶೂರ್ಪನಖಿ; ಇವರೆಲ್ಲರ ಚಿತ್ರ ವಾಲ್ಮೀಕಿಯ ಚಿತ್ರಶಾಲೆಯಲ್ಲಿವೆ. ಈ ಚಿತ್ರಗಳಲ್ಲಿ ಒಂದೊಂದೂ ವಿವರವಾದ ಪರಿಶೀಲನಕ್ಕೆ ತಕ್ಕ ಕೃತಿ. ವಿಸ್ತಾರದ ಭಯದಿಂದ ಇಲ್ಲಿ ಇಂಥ ಪರಿಶೀಲನಕ್ಕೆ ಕೈಹಾಕಿಲ್ಲ. ಮುಖ್ಯವಾದ ಮಾತೆಂದರೆ ಈ ಎಲ್ಲ ಚಿತ್ರಗಳಲ್ಲಿಯೂ ಕವಿಯ ಪಾತ್ರ ರೂಪಣ ಸಾಮರ್ಥ್ಯ ಕಾಣುತ್ತದೆ ಎನ್ನುವುದು. ಬಹು ದೊಡ್ಡ ಚಿತ್ರಗಳ ವಿವರ ವಿವರದಲ್ಲಿ ಯಾವ ಸ್ವಭಾವಜ್ಞತೆ ಕಾಣುತ್ತದೆಯೋ ಅದೇ ಸ್ವಭಾವಜ್ಞತೆ ಸಣ್ಣ ಚಿತ್ರಗಳನ್ನು ಕುರಿತ ವಿವರಗಳಲ್ಲಿಯೂ ವ್ಯಕ್ತವಾಗುತ್ತದೆ. ಯಾವುದರಲ್ಲಿಯೂ ಅಸ್ಪಷ್ಟಭಾವನೆಯಿಲ್ಲ, ಅಶ್ರದ್ಧೆಯ ಕೆಲಸವಿಲ್ಲ.

೯

## ವಾಲ್ಮೀಕಿಯ ವರ್ಣನೆಗಳು

### ಪ್ರಕೃತಿ ವರ್ಣನ

ಇದುವರೆಗೆ ಕವಿ ಮನುಷ್ಯನ ಜೀವನವನ್ನು ಚಿತ್ರಿಸಿರುವ ರೀತಿಯನ್ನು ವರ್ಣಿಸಿ ಆಯಿತು. ಮಾನವನ ಬಾಳನ್ನು ಇಷ್ಟು ವಿವರವಾಗಿ ಬಲ್ಲ ಈ ಕವಿ ಪ್ರಕೃತಿಯ ಬಾಳನ್ನೂ ಚೆನ್ನಾಗಿ ಕಂಡಿದ್ದನು, ಚೆನ್ನಾಗಿ ವಿವರಿಸಿದನು. ಇದರಲ್ಲಿ ಎರಡು ರೀತಿ ಉಂಟು. ನೋಡಬಲ್ಲ ಕಣ್ಣಿಗೆ ಪ್ರಕೃತಿಯನ್ನು ಇದ್ದಹಾಗೆ ನೋಡುವುದರಲ್ಲಿಯೇ ಸಂತೋಷವುಂಟು. ಇಂಥ ಸಂತೋಷವನ್ನು ಹೇಳುವಲ್ಲಿ ಪ್ರಕೃತಿಯ ಸಹಜವಾದ ವರ್ಣನೆ ಬರುತ್ತದೆ. ಮನುಷ್ಯನು ಯಾವುದಾದರೂ ಭಾವವನ್ನು ಪ್ರಕೃತಿಗೆ ಆರೋಪಿಸಿ ನೋಡಬಹುದು. ಇದರ ಚಿತ್ರದಿಂದ ಇನ್ನೊಂದು ರೀತಿಯ ಸಂತೋಷವುಂಟಾಗುತ್ತದೆ. ಇದನ್ನು ತಿಳಿಸಬೇಕಾದರೆ ಪ್ರೌಢವಾದ ವರ್ಣನೆ ಆಗುತ್ತದೆ. ಪ್ರಕೃತಿ ಸೌಂದರ್ಯದ ವರ್ಣನೆಗಳನ್ನು ಕುರಿತ ಚರ್ಚೆಗಳಲ್ಲಿ ಕೆಲವು ವೇಳೆ ಸಹಜವಾದ ವರ್ಣನೆ ಸುಲಭವೆಂಬಂತೆಯೂ, ಪ್ರೌಢವಾದ ವರ್ಣನೆಗೆ ಹೆಚ್ಚು ಕೌಶಲ್ಯ ಬೇಕೆಂಬಂತೆಯೂ, ಇನ್ನು

ಕೆಲವು ವೇಳೆ ಇಲ್ಲದುದನ್ನು ಕಲ್ಪಿಸಿ ಪ್ರೌಢವಾಗಿ ವರ್ಣಿಸುವುದು ಹೆಚ್ಚಲ್ಲ, ಇದ್ದುದನ್ನು ಇದ್ದಹಾಗೆ ವರ್ಣಿಸುವುದು ಕಷ್ಟ, ಸಹಜವಾದ ವರ್ಣನೆಯೇ ಶ್ರೇಷ್ಠ, ಎಂಬಂತೆಯೂ ಅಭಿಪ್ರಾಯ ಬರುವುದುಂಟು. ನಿಜವಾಗಿ ನೋಡಿದರೆ ಎರಡು ರೀತಿಯ ವರ್ಣನೆಯೂ ಕಷ್ಟವೇ. ಅಭಿಜ್ಞನಾದ ಕವಿ ಎರಡರಲ್ಲಿಯೂ ಸೊಗಸನ್ನು ಸಾಧಿಸುತ್ತಾನೆ; ಅಭಿಜ್ಞನಲ್ಲದವನು ಪೆಚ್ಚು ಬೀಳುತ್ತಾನೆ. ವರ್ಣಿಸುವೆನೆನ್ನುವವನು ನೋಡಬೇಕು. ನೋಡುವುದಕ್ಕೆ ಕಣ್ಣಿರಬೇಕು, ಮನಸ್ಸಿರಬೇಕು. ನೋಡಿದ ನೋಟದಲ್ಲಿ ಸೊಗಸನ್ನು ಹೂಡುವ ವಿವರಗಳು ಯಾವುವೆಂದು ಅರಿತು ಅದಷ್ಟನ್ನು ಆರಿಸುವ ವಿವೇಚನೆಯಿರಬೇಕು. ಅದನ್ನು ಬೇಕಾದಷ್ಟಕ್ಕೆ ಕಡಮೆಯಲ್ಲದ, ಸಾಕಾದಷ್ಟಕ್ಕೆ ಹೆಚ್ಚಲ್ಲದ, ಮಾತಿನಲ್ಲಿ ಹಾಕಬೇಕು. ಇದಿಷ್ಟನ್ನೂ ಮಾಡುವುದಕ್ಕೆ ಪ್ರತಿಭೆಯ ಫಲಕ ಸ್ವಚ್ಛವಾಗಿರಬೇಕು. ಮನುಷ್ಯನ ಭಾವವನ್ನು ಆರೋಪಿಸುವುದಾದರೆ ಕವಿಗೆ ಆ ಆರೋಪಣೆ ಅತಿಯಾಗದಂತೆ ನೋಡಿಕೊಳ್ಳುವ ಮಿತವೂ ಸೊಗಸಾಗುವಂತೆ ನೋಡಿಕೊಳ್ಳುವ ಔಚಿತ್ಯಜ್ಞಾನವೂ ಇರಬೇಕು. ಮುಖ್ಯವಾಗಿ ಯಾವ ಕೆಲಸವೇ ಆಗಲಿ ಚೆನ್ನಾಗಿ ಆಗುವುದೆನ್ನುವುದು ಕಷ್ಟ ಹೊರತು ಸುಲಭ ಅಲ್ಲ. ಸುಲಭವಾಗಿ ಆಗಿರುವಂತೆ ಕಂಡರೂ ಅದರ ಹಿಂದೆ ವಿಶೇಷ ಶಕ್ತಿಯೂ ಬಹಳ ಕಲಿಕೆಯೂ ಅಭ್ಯಾಸವೂ ಇರುತ್ತವೆ. ಅತ್ಯುತ್ತಮ ಕವಿಗಳಲ್ಲಿ ಈ ಎರಡು ರೀತಿಯ ವರ್ಣನೆಯೂ ಸೊಗಸಾಗಿ ಬರುತ್ತದೆ. ವಾಲ್ಮೀಕಿಯದು ಇಂಥ ಶಕ್ತಿ. ಇವನ ಪದ್ಧತಿಯನ್ನು ನಿದರ್ಶಿಸುವುದಕ್ಕಾಗಿ ಕೆಲವು ಉದಾಹರಣೆಗಳನ್ನು ಕೊಡಬಹುದು.

ವಿಶ್ವಾಮಿತ್ರನು ರಾಮಲಕ್ಷ್ಮಣರನ್ನು ಕರೆದುಕೊಂಡು ಗಿರಿಗಳನ್ನೂ ನದಿಗಳನ್ನೂ ಆಶ್ರಮಗಳನ್ನೂ ಕುರಿತ ಕಥೆಗಳನ್ನು ಹೇಳುತ್ತ ಪ್ರಯಾಣ ಬೆಳೆಸುತ್ತಿದಾನೆ. ರಾತ್ರಿ ಕಥೆ ಹೇಳುತ್ತ ಹೇಳುತ್ತ ಇವರಿಗೆ ಹೊತ್ತು ತಿಳಿಯಲಿಲ್ಲ. "ಬಹಳ ಹೊತ್ತಾಯಿತು. ಇನ್ನು ಮಲಗಿಕೊಳ್ಳಿ" ಎಂದು ಅವನು ರಾಜಕುಮಾರರಿಗೆ "ನಾನು ಕಥೆಗಳನ್ನು ಹೇಳುತ್ತ ಅರ್ಧರಾತ್ರಿ ಕಳೆಯಿತು. ಕುಮಾರರೆ, ನಿದ್ರೆಹೋಗಿ. ನಿಮಗೆ ಒಳ್ಳೆಯದಾಗಲಿ. ಈ ಪ್ರಯಾಣದಲ್ಲಿ ನಿಮಗೆ ವಿಘ್ನವಾಗದಿರಲಿ. ಮರಗಳೆಲ್ಲ ಅಲುಗದೆ

ನಿಂತಿವೆ. ಮೃಗಗಳೂ ಪಕ್ಷಿಗಳೂ ಅವುಗಳಲ್ಲಿ ಅಡಗಿಹೋಗಿವೆ. ಇರುಳ ಕತ್ತಲಿಂದ ದಿಕ್ಕುಗಳು ಮುಚ್ಚಿಕೊಂಡಿವೆ. ಸಂಜೆ ಮೆಲ್ಲನೆ ಹರಿದು ಹೋಯಿತು. ಆಕಾಶವು ಕಣ್ಣುಗಳಂತಿರುವ ತಾರೆ ನಕ್ಷತ್ರಗಳಿಂದ ತುಂಬಿ ಬೆಳಕಿನಿಂದ ಹೊಳೆಯುತ್ತಿದೆ. ಶೀತಾಂಶುವಾದ ಶಶಿ ಲೋಕದ ತಮಸ್ಸನ್ನು ಪರಿಹರಿಸುತ್ತ ಪ್ರಾಣಿಗಳ ಮನಸ್ಸನ್ನು ಸಂತೋಷಗೊಳಿಸುತ್ತ ಕಾಂತಿಯಿಂದ ಎದ್ದಿದಾನೆ'' ಎಂದು ಹೇಳುತ್ತಾನೆ. ಚಿತ್ರಕೂಟಕ್ಕೆ ಬಂದಾಗ ರಾಮನು ದೇವಿಗೆ ಅದರ ಸೊಗಸನ್ನು ವರ್ಣಿಸುತ್ತಾನೆ. ''ಭದ್ರೇ, ರಾಜ್ಯಭ್ರಂಶನವೂ ಬೇಕಾದವರನ್ನು ಬಿಟ್ಟುಬಂದಿರುವುದೂ ರಮಣೀಯವಾದ ಈ ಗಿರಿಯನ್ನು ನೋಡಿದ ನನಗೆ ಮನಸ್ಸನ್ನು ಬಾಧಿಸದೆ ಇವೆ. ನಾನಾ ದ್ವಿಜಗಣಾಯುತವಾದ ಅಚಲವಾದ ಈ ಗಿರಿಯನ್ನು ನೋಡು. ಆಕಾಶವನ್ನು ಚುಚ್ಚುವಂತೆ ಕಾಣುವ ಧಾತುಮಂಡಿತವಾದ ಇದು ಶಿಖರಗಳಿಂದ ಹೇಗೆ ವಿರಾಜಿಸುತ್ತದೆ. ಕೆಲವು ಬೆಳ್ಳಿಯ ಬಣ್ಣ, ಕೆಲವು ರಕ್ತವೆಂಬಂತಿವೆ, ಕೆಲವು ಹಳದಿ, ಕೆಲವು ಮಾಂಜಿಷ್ಠ, ಕೆಲವು ರತ್ನದಂತೆ ಪ್ರಭೆಯುಳ್ಳವು. ಪುಷ್ಯರಾಗದಂತೆ, ಕೇತಕದಂತೆ, ಜ್ಯೋತೀರಸದಂತೆ ಈ ಅಚಲೇಂದ್ರನ ಧಾತುವಿಭೂಷಿತವಾದ ದೇಶಗಳು ಶೋಭಿಸುತ್ತವೆ. ....''ಆಮ್ರಜಂಬ್ವಸನೈಃ ಲೋಧ್ರೈಃ ಪ್ರಿಯಾಳೈಃ ಪನಸೈಃ ಧವೈಃ ಅಂಕೋಲೈಃ ಭವ್ಯತಿನಿಶೈಃ ಬಿಲ್ವತಿಂದುಕವೇಣುಭಿಃ ಕಾಶ್ಮರ್ಯರಿಷ್ಟವರುಣೈಃ ಮಧೂಕೈಃ ತಿಲಕೈಃ ತಥಾ, ಬದರಿ ಆಮಲಕೈಃ ನಿಂಬೈಃ ವೇತ್ರಧನ್ವನಬೀಜಕೈಃ, ಪುಷ್ಪವದ್ಭಿಃ ಫಲೋಪೇತೈಃ, ಛಾಯಾವದ್ಭಿಃ ಮನೋರಮೈಃ, ಏವಮಾದಿಭಿಃ ಆಕೀರ್ಣಂ ಶ್ರಿಯಂ ಪುಷ್ಯತ್ಯಯಂ ಗಿರಿಃ.'' ಈ ಮರಗಳ ಜಾತಿಯೆಷ್ಟು!

ರಾಮನು ಮಂದಾಕಿನಿಯನ್ನು ವರ್ಣಿಸುತ್ತಾನೆ: ''ವಿಚಿತ್ರಪುಳಿನಾಂ ರಮ್ಯಾಂ ಹಂಸಸಾರಸ ಸೇವಿತಾಂ ಕಮಲೈರುಪಸಂಪನ್ನಾಂ ಪಶ್ಯಮಂದಾಕಿನೀಂ ನದೀಂ; ನಾನಾ ವಿಧೈಸ್ತೀರ ರುಹೈಃ ವೃತಾಂ ಪುಷ್ಪಫಲದ್ರುಮೈಃ ರಾಜಂತೀಂ ರಾಜರಾಜಸ್ಯ ನಳಿನೀಮಿವ ಸರ್ವತಃ. ಮೃಗಯೂಥನಿಪೀತಾನಿ ಕಲುಷಾಂಭಾಂಸಿ ಸಾಂಪ್ರತಾಂ ತೀರ್ಥಾನಿ ರಮಣೀಯಾನಿ ರತಿಂ ಸಂಜನಯಂತಿ ಮೇ. ಜಟಾಜಿನಧರಾಃ ಕಾಲೇವಲ್ಕಲೋತ್ತರ

ವಾಸಸಃ ಋಷಯಸ್ತ್ವವಗಾಹಂತೇ ನದೀಂ ಮಂದಾಕಿನೀಂ ಪ್ರಿಯೇ. ಮಾರುತೋದ್ಧೂತ ಶಿಖರೈಃ ಪ್ರನೃತ್ತ ಇವಪರ್ವತಃ ಪಾದಪೈಃ ಪತ್ರ ಪುಷ್ಪಾಣಿ ಸೃಜದ್ಭಿರಭಿತೋನದೀಂ. ಕ್ವಚಿನ್ಮಣಿ ವಿಕಾಸೋದಾಂ, ಕ್ವಚಿತ್‌ಪುಳಿನಶಾಲಿನೀಂ, ಕ್ವಚಿತ್‌ಸಿದ್ಧ ಜನಾಕೀರ್ಣಾಂ ಪಶ್ಯಮಂದಾಕಿನೀಂ ನದೀಂ. ನಿರ್ಧೂತಾನ್ ವಾಯುನಾ ಪಶ್ಯ ವಿತತಾನ್ ಪುಷ್ಪ ಸಂಚಯಾನ್, ಪೋಪ್ಲೂಯಮಾನಾನ್ ಅಪರಾನ್ ಪಶ್ಯ ತ್ವಂ ಜಲ ಮಧ್ಯಗಾನ್. ತಾಂಶ್ಚಾತಿವಲ್ಗುವಚಸೋ ರಥಾಂಗಾಹ್ವಯನಾದ್ವಿಜಾಃ ಅಧಿರೋಹಂತಿ ಕಲ್ಯಾಣಿ ನಿಷ್ಕೂಜಂತೋ ಶುಭಾಗಿರಃ.'' ಆ ಮರಳು, ನೀರಹಕ್ಕಿ, ತಾವರೆಯ ಸಂಪತ್ತು; ಹೂ ಹಣ್ಣು ತುಂಬಿರಲು ದಡದಲ್ಲಿ ನಿಂತಿರುವ ನಾನಾ ವಿಧದ ಮರಗಳು; ಕಾಡುಮೃಗಗಳು ಬಂದು ಕುಡಿದದರಿಂದ ಕದಡಿದ ನೀರು ತಿಳಿಯಾಗುತ್ತಿರುವ ತೀರ್ಥಗಳು; ಜಟಾಜಿನ ವಲ್ಕಲಧಾರಿಗಳಾದ ಋಷಿಗಳು; ಗಾಳಿಗೆ ಆಡುತ್ತಿರುವ ಮರಗಳಿಂದ ಶಿಖರವೇ ಆಡುತ್ತಿರುವಂತೆ ತೋರಲು ನದಿಯ ಎದುರು ಕುಣಿಯುತ್ತಿದೆಯೋ ಎಂದು ಕಾಣುವ ಪರ್ವತ; ಗಾಳಿಯಿಂದ ಚೆಲ್ಲಿ ತೀರದಲ್ಲಿ ಹರಹಿ ನೀರಿನಲ್ಲಿ ತೇಲಾಡುವ ಹೂವಿನ ನೆರವಿ; ಇಂಪಾಗಿ ಕೂಜನಮಾಡುವ ಚಕ್ರವಾಕದ ಕೊರಲು: ಇವು ರಾಮನಿಗೆ ಅಂದು ಹರ್ಷವನ್ನುಂಟುಮಾಡಿದವು; ಕವಿಯ ದಯೆಯಿಂದ ಇಂದು ನಮಗೆ ಆನಂದವನ್ನು ಕೊಡುತ್ತವೆ. ರಾಮನು ಒಂದು ಉದಯದಲ್ಲಿ ಲಕ್ಷ್ಮಣನಿಗೆ ಹೇಳುತ್ತಾನೆ: ''ಭಾಸ್ಕರೋದಯ ಕಾಲೋಯಂ ಗತಾ ಭಗವತೀ ನಿಶಾ. ಅಸೌ ಸುಕೃಷ್ಣೋವಿಹಗಃ ಕೋಕಿಲಸ್ತಾತ ಕೂಜತಿ. ಬರ್ಹಿಣಾನಾಂಶ್ಚ ನಿರ್ಘೋಷಃ ಶ್ರೂಯತೇ ನದತಾಂವನೇ.'' ಇರುಳು ಕಳೆಯಿತು; ನೇಸರು ಉದಯಿಸುವ ಹೊತ್ತು ಇದು. ಈ ಕರಿಯ ಹಕ್ಕಿ ಕೋಗಿಲೆ ಕೂಜಿಸುತ್ತಿದೆ. ಕಾಡಿನಲ್ಲಿ ನವಿಲು ಹಾಕುವ ಕೇಕೆಯ ನಿರ್ಘೋಷ ಕೇಳಿಸುತ್ತಿದೆ.

ಅನಸೂಯೆ ಸಂಜೆಯಾಯಿತು ಎಂದು ಸೀತೆಗೆ ಹೇಳುತ್ತಾಳೆ: ''ರವಿರಸ್ತಂಗತಃ ಶ್ರೀಮಾನ್ ಉಪೋಹ್ಯರಜನೀಂ ಶಿವಾಂ. ದಿವಸಂ ಪ್ರತಿಕೀರ್ಣಾನಾಂ ಆಹಾರಾರ್ಥಂ ಪತತ್ರಿಣಾಂ ಸಂಧ್ಯಾಕಾಲೇ ನಿಲೀ

ಸಾನಾಂ ನಿದ್ರಾರ್ಥಂ ಶ್ರೂಯತೇ ಧ್ವನಿಃ. ಏತೇಚಾಪ್ಯಭಿಷೇಕಾರ್ದ್ರಾಃ ಮುನಯಃ ಕಲಶೋದ್ಯತಾಃ ಸಹಿತಾ ಉಪವರ್ತಂತೇ ಸಲಿಲಾಪ್ಲುತ ವಲ್ಕಲಾಃ. ಋಷೀಣಾಂ ಅಗ್ನಿಹೋತ್ರೇಷು ಹುತೇಷು ವಿಧಿಪೂರ್ವಕಂ ಕಪೋತಾಂಗಾರುಣೋ ಧೂಮೋ ದೃಶ್ಯತೇ ಪವನೋದ್ಧತಃ. ಅಲ್ಪಪರ್ಣಾಹಿ ತರವೋ ಘನೀಭೂತಾ ಸ್ಸಮಂತತಃ. ವಿಪ್ರಕೃಷ್ಟೇಪಿ ದೇಶೇಸ್ಮಿನ್ ನಪ್ರಕಾಶಂತಿ ವೈ ದಿಶಃ. ರಜನೀಚರ ಸತ್ವಾನಿ ಪ್ರಚರಂತಿ ಸಮಂತತಃ ತಪೋವನ ಮೃಗಾಹ್ಯೇತೇ ವೇದಿ ತೀರ್ಥೇಷು ಶೇರತೇ. ಸಂಪ್ರವೃತ್ತಾನಿಶೀಸೀತೆ ನಕ್ಷತ್ರ ಸಮಲಂಕೃತಾ. ಜ್ಯೋತ್ಸ್ನಾಪ್ರಾವರಣಶ್ಚಂದ್ರೋದೃಶ್ಯತೇ ಭ್ಯುದಿತೋಂಬರೇ.'' "ಸೂರ್ಯನು ವರ್ಣಗಳ ವೈಭವದಲ್ಲಿ ಅಸ್ತಂಗತನಾಗಿ ಶಿವೆ ರಜನಿಯನ್ನು ಬಳಿಗೆ ಕರೆದುಕೊಂಡಿದಾನೆ. ಹಗಲೆಲ್ಲ ಆಹಾರಕ್ಕಾಗಿ ಎತ್ತೆತ್ತಲೋ ಹೋಗಿದ್ದ ಹಕ್ಕಿಗಳು ಸಂಜೆಯಾಗಲು ನಿದ್ರೆಗಾಗಿ ಗೂಡನ್ನು ಸೇರಿದ ಚಿಲಿಪಿಲಿ ಶಬ್ದ ಕೇಳುತ್ತಿದೆ. ಮುನಿಗಳು ಸ್ನಾನಮಾಡಿದ ತೇವದಲ್ಲಿ ಪಾತ್ರೆಗಳನ್ನು ಎತ್ತಿಕೊಂಡು ನೆನೆದ ನಾರು ಬಟ್ಟೆಗಳೊಡನೆ ಬರುತ್ತಿದಾರೆ. ಋಷಿಗಳ ಹೋಮದ ಕಪ್ಪು ಕೆಂಪಿನ ವರ್ಣದ ಹೊಗೆ ಗಾಳಿಯಿಂದ ಮೇಲೇರಿ ಕಾಣುತ್ತಿದೆ. ಕೊಂಚ ಎಲೆ ಇದ್ದರೂ ಮರ ಒಂದಾಗಿ ಕಾಣುತ್ತಿದೆ. ದೂರದಲ್ಲಿಯೂ ದೆಸೆಯಲ್ಲಿ ಬೆಳಕಿಲ್ಲ. ಇರುಳ ಜೀವಗಳು ಸುಳಿಯಲು ಹೊರಟಿವೆ. ತಪೋವನ ಮೃಗಗಳು ಒಳಗೆ ಜಗಲಿಗಳ ಬಳಿ ಬಂದು ಮಲಗುತ್ತಿವೆ. ನಿಶಿ ನಕ್ಷತ್ರಗಳಿಂದ ಅಲಂಕೃತಳಾಗಿ ಬಂದಳು. ಬೆಳುಬೆಳಕಿನ ಹೊರಳಿಯಲ್ಲಿ ತಿಂಗಳು ಬಾನ ತಳದಲ್ಲಿ ಮೂಡಿದನು.''

ರಾಮನು ಲಕ್ಷ್ಮಣನಿಗೆ ಆಶ್ರಮವನ್ನು ಮಾಡುವುದಕ್ಕೆ ಅನುಕೂಲವಾದ ಸ್ಥಳವನ್ನು ತೋರಿಸುತ್ತಾನೆ: "ಅಯಂ ದೇಶಃ ಸಮಃ ಶ್ರೀಮಾನ್ ಪುಷ್ಪಿತೈಃ ತರುಭಿಃ ವೃತಃ. ಇಹಾಶ್ರಮಪದಂ ಸೌಮ್ಯ ಯಥಾವತ್ ಕರ್ತುಮರ್ಹಸಿ. ಇಯಮಾದಿತ್ಯ ಸಂಕಾಶೈಃ ಪದ್ಮೈಃ ಸುರಭಿಗಂಧಿಭಿಃ ಅದೂರೇ ದೃಶ್ಯತೇ ರಮ್ಯಾ ಪದ್ಮಿನೀ ಪದ್ಮಶೋಭಿತಾ. ಯಥಾಖ್ಯಾತಮಗಸ್ತ್ಯೇನ ಮುನಿನಾ ಭಾವಿತಾತ್ಮನಾ, ಇಯಂ ಗೋದಾವರೀ ರಮ್ಯಾ ಪುಷ್ಪಿತೈಃ ತರುಭಿಸ್ತಥಾ. ಹಂಸಕಾರಂಡವಾಕೀರ್ಣಾ ಚಕ್ರವಾಕೋಪ

ಶೋಭಿತಾ ನಾತಿದೂರೇ ನಚಾಸನ್ನೇ ಮೃಗಯೂಥನಿಪೀಡಿತಾ. ಮಯೂರ ನಾದಿತಾ ರಮ್ಯಾ ಪ್ರಾಂಶವೋ ಬಹುಕಂದರಾಃ ದೃಶ್ಯಂತೇ ಗಿರಯಃ ಸೌಮ್ಯ ಫುಲ್ಲೈಃ ತರುಭಿರಾವೃತಾಃ.'' ''ಸ್ಥಲ ಸಮನಾಗಿದೆ. ಅಂದವಾಗಿದೆ. ಸುತ್ತ ಹೂವಾದ ಮರ ಇವೆ. ಅದೂರದಲ್ಲಿ ಕೊಳ. ಅದರ ತುಂಬ ತಾವರೆಯ ಬಳ್ಳಿ, ತಾವರೆಯ ಹೂ. ಸುರಭಿ ಗಂಧಿಯಾದ ಈ ಒಂದೊಂದು ಹೂವೂ ಸೂರ್ಯನಂತೆ ಹಿರಿದು, ಸೂರ್ಯನಂತೆ ಬೆಳಗುತ್ತಿದೆ. ಹೂವಾದ ಗಿಡಗಳಿಂದ ಗೋದಾವರಿ ರಮ್ಯಳಾಗಿದ್ದಾಳೆ. ಇಲ್ಲಿ ನೂರು ತೆರನ ನೀರಹಕ್ಕಿ. ಕಾಣುವಷ್ಟು ಹತ್ತಿರವಾಗಿ ಆದರೆ ತೊಂದರೆ ಕೊಡದಂತೆ ದೂರವಾಗಿ ಇಲ್ಲಿ ವನ್ಯ ಮೃಗಗಳು ಬಂದು ಹೋಗುತ್ತವೆ. ಕಂದರಗಳು ಮಯೂರನಾದದಿಂದ ರಮ್ಯ. ಗಿರಿಗಳು ಹೂವಾದ ಮರಗಳಿಂದ ತುಂಬಿವೆ.'' ಇದಾದಮೇಲೆ ಒಂದು ನಲವತ್ತು ಮರಗಳ ಹೆಸರನ್ನು ಹೇಳಿ ''ಇದಂ ಪುಣ್ಯಮಿದಂ ಮೇಧ್ಯಮಿದಂ ಬಹುಮೃಗದ್ವಿಜಂ ಇಹವತ್ಸ್ಯಾಮ ಸೌಮಿತ್ರೇ ಸಾರ್ಧಮೇತೇನಪಕ್ಷಿಣಾ.''

ಲಕ್ಷ್ಮಣನು ಹಿಮಂತಋತುವನ್ನು ವರ್ಣಿಸುತ್ತಾನೆ: ''ಅಯಂ ಸಕಾಲಸ್ಸಂಪ್ರಾಪ್ತಃ ಪ್ರಿಯೋಯಸ್ತೇ ಪ್ರಿಯಂವದ, ಅಲಂಕೃತ ಇವಾಭಾತಿ ಯೇನ ಸಂವತ್ಸರಃ ಶುಭಃ. ನೀಹಾರ ಪರುಷೋಲೋಕಃ ಪೃಥಿವೀಸಸ್ಯಶಾಲಿನೀ ಜಲಾನ್ಯನುಪಭೋಗ್ಯಾನಿ ಸುಭಗೋಹವ್ಯ ವಾಹನಃ. ನವಾಗ್ರಯಣ ಪೂಜಾಭಿರಭ್ಯರ್ಚ್ಯ ಪಿತೃದೇವತಾಃ ಕೃತಾಗ್ರಯಣಕಾಃ ಕಾಲೇ ಸಂತೋ ವಿಗತಕಲ್ಮಷಾಃ. ಪ್ರಾಜ್ಯಕಾಮಾ ಜನಪದಾಃ ಸಂಪನ್ನತರಗೋರಸಾಃ. ವಿಚರಂತಿಮಹೀಪಾಲಾಃ, ಯಾತ್ರಾಸ್ಥಾವಿಜಿಗೀಷವಃ. ಸೇವ್ಯಮಾನೇ ದೃಢಂ ಸೂರ್ಯೇ ದಿಶಮಂತಕಸೇವಿತಾಂ, ವಿಹೀನ ತಿಲಕೇವಸ್ತ್ರೀ ನೋತ್ತರಾದಿಕ್ ಪ್ರಕಾಶತೇ. ಪ್ರಕೃತ್ಯಾಹಿಮಕೋಶಾಢ್ಯೋ, ದೂರಸೂರ್ಯಶ್ಚ ಸಾಂಪ್ರತಂ, ಯಥಾರ್ಥನಾಮಾ ಸುವ್ಯಕ್ತಂ ಹಿಮವಾನ್ ಹಿಮವಾನ್‌ಗಿರಿಃ. ಅತ್ಯಂತಸುಖಸಂಚಾರಾಃ ಮಧ್ಯಾಹ್ನೇ ಸ್ಪರ್ಶತಸ್ಸುಖಾಃ ದಿವಸಾಃ ಸುಭಗಾದಿತ್ಯಾಃ ಛಾಯಾಸಲಿಲ ದುರ್ಭಗಾಃ. ಮೃದುಸೂರ್ಯಾಸ್ಸನೀಹಾರಾಃ ಪಟುಶೀತಾಸ್ಸಮಾರುತಾಃ, ಶೂನ್ಯಾರಣ್ಯಾಹಿಮಧ್ವಸ್ತಾಃ ದಿವಸಾಭಾಂತಿ ಸಾಂಪ್ರತಂ. ರವಿಸಂಕ್ರಾಂತ

ಸೌಭಾಗ್ಯಃ ತುಷಾರಾರುಣ ಮಂಡಲಃ ನಿಶ್ವಾಸಾಂಧ ಇವಾದರ್ಶಃ ಚಂದ್ರಮಾ ನಪ್ರಕಾಶತೇ. ಜ್ಯೋತ್ಸ್ನೀ ತುಷಾರಮಲಿನಾ ಪೌರ್ಣಮಾಸ್ಯಾಂನರಾಜತೇ, ಸೀತೇವ ಚಾತಪಶ್ಯಾಮಾ ಲಕ್ಷ್ಯತೇನ ತು ಶೋಭತೇ. ಪ್ರಕೃತ್ಯಾ ಶೀತಲಸ್ಪರ್ಶೋ ಹಿಮವಿದ್ಧಶ್ಚ ಸಾಂಪ್ರತಂ ಪ್ರವಾತಿ ಪಶ್ಚಿಮೋವಾಯುಃ ಕಾಲೇ ದ್ವಿಗುಣಶೀತಲಃ. ಬಾಷ್ಪಚ್ಛನ್ನಾನ್ಯರಣ್ಯಾನಿ ಯವಗೋಧೂಮವಂತಿಚ ಶೋಭಂತೇ ಅಭ್ಯುದಿತೇ ಸೂರ್ಯೇನದದ್ಭಿಃ ಕ್ರೌಂಚಸಾರಸೈಃ. ಖರ್ಜೂರ ಪುಷ್ಪಾಕೃತಿಭಿಃ ಶಿರೋಭಿಃ ಪೂರ್ಣತಂಡುಲೈಃ ಶೋಭಂತೇ ಕಿಂಚಿದಾನಮ್ರಾಃ ಶಾಲಯಃ ಕನಕಪ್ರಭಾಃ. ಮಯೂಖೈಃ ಉಪಸರ್ಪದ್ಭಿಃ ಹಿಮನೀಹಾರಸಂವೃತ್ತೈಃ ದೂರಮಭ್ಯುದಿತಃ ಸೂರ್ಯಃ ಶಶಾಂಕ ಇವಲಕ್ಷ್ಯತೇ. ಅವಶ್ಯಾಯ ನಿಪಾತೇನ ಕಿಂಚಿತ್ಪ್ರಕ್ಲಿನ್ನಶಾದ್ವಲಾ ವನಾನಾಂ ಶೋಭತೇ ಭೂಮಿಃ ನಿವಿಷ್ಟ ತರುಣಾತಪಾ. ಸ್ಪೃಶಂತುವಿಮಲಂ ಶೀತಂ ಉದಕಂ ದ್ವಿರದಃ ಸುಖಂ ಅತ್ಯಂತ ತೃಷಿತೋ ವನ್ಯಃ ಪ್ರತಿಸಂಹರತೇಕರಂ. ಏತೇಹಿ ಸಮುಪಾಸೀನಾಃ ವಿಹಗಾಃ ಜಲಚಾರಿಣಃ ನಾವಗಾಹಂತಿಸಲಿಲಂ ಅಪ್ರಗಲ್ಭಾ ಇವ ಆಹವಂ. ಅವಶ್ಯಾಯ ತಮೋನದ್ಧಾನೀಹಾರ ತಮಸಾವೃತಾಃ ಪ್ರಸುಪ್ತಾ ಇವ ಲಕ್ಷ್ಯಂತೇ ವಿಪುಷ್ಪಾವನರಾಜಯಃ. ಬಾಷ್ಪಸಂಛನ್ನಸಲಿಲಾ ರುತವಿಜ್ಞೇಯ ಸಾರಸಾಃ ಹಿಮಾರ್ದ್ರವಾಲುಕೈಃ ತೀರೈಃ ಸರಿತೋ ಭಾಂತಿ ಸಾಂಪ್ರತಂ. ತುಷಾರಪತನಾಚ್ಚೈವಮೃದುತ್ವಾತ್ ಭಾಸ್ಕರಸ್ಯಚ, ಶೈತ್ಯಾತ್ ಅಗಾಗ್ರಸ್ಥಮಪಿ ಪ್ರಾಯೇಣ ರಸವತ್‌ಜಲಂ. ಜರಾರ್ಜುರ್ಜರಿತೈಃ ಪದ್ಮೈಃ ಶೀರ್ಣ ಕೇಸರಕರ್ಣಿಕೈಃ ನಾಳಶೇಷೈಃ ಹಿಮಗ್ರಸ್ತೈಃ ನಭಾಂತಿ ಕಮಲಾಕರಾಃ.''

ಹಿಮ ಬೀಳುವುದು ಚಳಿಯಾಗುವುದು ನಮ್ಮೆಲ್ಲರ ಅನುಭವಕ್ಕೆ ಬರುತ್ತವೆ. ಇಷ್ಟನ್ನು ಇನ್ನೆರಡು ಮಾತನ್ನು ಯಾರು ಬೇಕಾದರೂ ಹೇಳಬಹುದು. ವಾಲ್ಮೀಕಿ ಇದರ ಜೊತೆಗೆ ಇನ್ನು ಹತ್ತು ವಿಷಯವನ್ನು ಹೇಳಿದ್ದಾನೆ. ಲೋಕ ಹಿಮದಿಂದ ಬೆಟ್ಟಿಯಾಗಿದೆ. ಭೂಮಿ ಸಸ್ಯಶಾಲಿನಿಯಾಗಿದೆ. ಸಂತರು ಅಗ್ರಯಣ ಪೂಜೆಯನ್ನು ಮಾಡಿ ಪಿತೃಗಳನ್ನು ತೃಪ್ತಿಗೊಳಿಸಿ ವಿಗತಕಲ್ಮಷರಾಗಿದಾರೆ. ಜನರು ಹಾಲು ಮೊಸರಿನ ಸಮೃದ್ಧಿ

ಯಿಂದ ಸುಖಿಸಿದಾರೆ. ಸೂರ್ಯನು ದಕ್ಷಿಣವನ್ನು ಸಾರಲು ಉತ್ತರದಿಕ್ಕು ತಿಲಕವಿಡದ ಸ್ತ್ರೀಯಂತೆ ಮಂಕಾಗಿದೆ. ಎಂದೂ ಹಿಮವುಳ್ಳ ಹಿಮವದ್ಗಿರಿ ನಿಜವಾಗಿ ಹಿಮವಂತನೆನ್ನುವುದು ಕಾಲದ ದೆಸೆಯಿಂದ ಸ್ಪಷ್ಟವಾಗಿದೆ. ಹಗಲು ಹರಿಯುವುದು ಸುಖ. ಸೂರ್ಯನು ಹಿತ. ನೆರಳು ನೀರು ಬೇಡ ವಾಗಿದೆ. ಕಾಡು ಬರಿದು. ಮಂಜಿನಿಂದ ಮೈಲಾದ ಚಂದ್ರನು ಉಸಿರಿಂದ ಮಂಕಾದ ಕನ್ನಡಿಯಂತೆ ಇದಾನೆ. ತುಂಬಿದ ತಿಂಗಳ ರಾತ್ರಿ ಕೂಡ ಮಂಜಿ ನಿಂದ ಮಲಿನವಾಗಿ ಬೆಳಗದೆ ಇದೆ. ಪಶ್ಚಿಮದ ಗಾಳಿ ಎಂದಿಗಿಂತ ಎರಡರಷ್ಟು ಚಳಿ. ಹರಹಿದ ಪೈರಿನಮೇಲೆ ಹಿಮಕಣ ನಿಂತಿರಲಾಗಿ ಹೊತ್ತು ಹುಟ್ಟುವ ವೇಳೆ ಅರಣ್ಯ ಬಹು ಶೋಭಿಸುತ್ತದೆ. ಖರ್ಜೂರ ಪುಷ್ಪದ ಆಕೃತಿಯ ತೆನೆ ಕಾಳು ತುಂಬಿರಲಾಗಿ ಬಂಗಾರದ ಬಣ್ಣದ ನೆಲ್ಲಪೈರು ಸ್ವಲ್ಪ ತಗ್ಗಿ ಸೊಗಸುತ್ತದೆ. ದೂರದಲ್ಲಿ ಹುಟ್ಟುವ ಸೂರ್ಯನು ಹಿಮನೀಹಾರದಿಂದ ಮೆದುವಾದ ರಶ್ಮಿಯಿಂದ ಚಂದ್ರನಂತೆ ಕಾಣುತ್ತಾನೆ. ಹೊಳೆಯಲ್ಲಿ ನೀರು ಎಲ್ಲಿದೆಯೆಂದು ನಾವು ನೀರನ್ನು ನೋಡಿ ಹೇಳುವಂತಿಲ್ಲ. ನೀರ ಹಕ್ಕಿ ಕೂಗುವ ಧ್ವನಿಯಿಂದ ಅಲ್ಲಿ ನೀರಿದೆಯೆಂದು ಗುರುತಿಸಬೇಕಾಗಿದೆ. ಗಿರಿಯ ತಲೆಯಮೇಲಣ ನೀರು ಕೂಡ ಸೂರ್ಯನಿಂದ ಕಾಯದೆ ಹಿಮ ಬೆರೆತು ಇರುವ ಕಾರಣದಿಂದ ಬಾಯಿಗೆ ರುಚಿಯಾಗಿದೆ. ದಳ ಉದುರಿದ ತಾವರೆಯಿಂದ ಕಮಲಾಕರ ಶೋಭಿಸದು. ಬರಿಯ ಊಹೆಯಿಂದ ಹೇಳ ಲಾಗದ, ಕಣ್ಣಾರ ನೋಡಿ ಗ್ರಹಿಸಿದ್ದರೆ ಮಾತ್ರ ಹೇಳಬಹುದಾದ, ವಿವರ ಗಳು ಈ ವರ್ಣನೆಯ ಜೀವ. ಇದರಲ್ಲಿ ವಿಶ್ವವ್ಯಾಪಿಯಾದ ಕವಿಯ ಕನಿಕರವೂ ಕಾಣುತ್ತದೆ. ಜನರು ಭೂಮಿಯಿಂದ ಬೆಳೆಯನ್ನು ತೆಗೆದು ಕೊಂಡು ಸುಖವಾಗಿರುವುದು ಇವನಿಗೆ ಸಂತೋಷ. ಜಲಚಾರಿಗಳಾ ದರೂ ಚಳಿಯಿಂದ ನೀರ ಹೊರಗೆ ಕುಳಿತಿರುವ ಹಕ್ಕಿಗಳನ್ನು ನೋಡಿ ಇವನು ಅಯ್ಯೋ ಪಾಪ ಎನ್ನುತ್ತಾನೆ. ಆನೆಗೆ ದಾಹ; ಅದು ನೀರನ್ನು ಸೊಂಡಿಲಿಂದ ಎಳೆಯುತ್ತದೆ; ಆದರೆ ಚಳಿಯಾದುದರಿಂದ ಸೊಂಡಿಲನ್ನು ಬೇಗನೆ ಹೊರಕ್ಕೆ ತೆಗೆದುಕೊಳ್ಳುತ್ತದೆ. ಕತ್ತಲು ಮುಚ್ಚಿದ ಕಾಡು ಮಂಜಿನಿಂದ ಮತ್ತಷ್ಟು ಕತ್ತಲಾಗಿ, ಹೂವಿಲ್ಲದ ಕಾರಣ ನಿದ್ರಿಸುತ್ತಿರು ವಂತಿದೆ. ಒಂದೊಂದು ವಿವರವೂ ಚಿತ್ರದ ಒಂದೊಂದು ಭಾಗದಂತೆ

ನಿಲ್ಲುತ್ತದೆ. ಅಭಿಜ್ಞನಾದ ಚಿತ್ರಕಾರನು ಹಿಮಕಾಲದ ಚಿತ್ರವನ್ನು ರಚಿಸಬೇಕಾದರೆ ಕವಿ ಹೇಳಿರುವ ವಿವರಗಳಲ್ಲಿ ಸರಿಯಾದುವನ್ನು ಆಯ್ದು ಕೊಂಡು ಉದಯದ ಚಿತ್ರ, ಮಧ್ಯಾಹ್ನದ ಚಿತ್ರ, ಸಂಜೆಯ ಚಿತ್ರ, ರಾತ್ರಿಯ ಚಿತ್ರಗಳನ್ನು ರಚಿಸಬಹುದು. ಮಧ್ಯೆ ಕವಿ ಲಕ್ಷ್ಮಣನ ಮಾತಿನಲ್ಲಿ ಸೀತೆ ಬಿಸಿಲಿಂದ ಸ್ವಲ್ಪ ಕಪ್ಪಾಗಿದಾಳೆ, ಆದರೆ ಶೋಭಿಸುತ್ತಿದಾಳೆ ಎಂದು ಸೂಚಿಸಿದಾನೆ; ಈ ಮಾತಿನಿಂದ ಲಕ್ಷ್ಮಣನು ಅಣ್ಣ ಅತ್ತಿಗೆಯರ ಮಧ್ಯೆ ಹೇಗೆ ಒಂದು ಮಗುವಿನಂತೆ ಆಗಿದ್ದನೆಂದು ತೋರಿಸಿದ್ದಾನೆ. ಲಕ್ಷ್ಮಣನು ಈ ಮಾತನ್ನು ಆಡಿದಾಗ ರಾಮನೂ ಸೀತೆಯೂ ನಕ್ಕಿರಬೇಕು. ಅದೂ ಈ ಚಿತ್ರದಲ್ಲಿ ಸೇರಿರುವ ವಿವರವೇ.

ಹೀಗೆಯೇ ನೂರು ವರ್ಣನೆ ನೂರು ಕಡೆ ಬರುತ್ತಿರುತ್ತದೆ. ಪಂಪಾ ತೀರವನ್ನು ಸೇರಿ ಅಲ್ಲಿಯ ಸೊಗಸನ್ನು ನೋಡಿ ಸೀತೆಯಿಲ್ಲದ ಕಾರಣ ವಿಲಪಿಸುವ ರಾಮನ ಮಾತಿನಲ್ಲಿ ಕವಿಯ ಈ ರೀತಿಯ ವರ್ಣನಾಶಕ್ತಿ ಮುಗಿಲನ್ನು ಮುಟ್ಟಿದೆ. ಇಲ್ಲಿ ಪ್ರಕೃತಿ ಸೌಂದರ್ಯದ ವರ್ಣನೆಯ ಮೊದಲ ರೀತಿಯ ಒಂದು ಉಪರೀತಿ ವ್ಯಕ್ತವಾಗಿದೆಯೆನ್ನಬಹುದು. ಇದ್ದುದನ್ನು ಇದ್ದಹಾಗೆ ವರ್ಣಿಸುವುದರಲ್ಲಿ ನಾಯಕನು ತನ್ನ ಭಾವನೆಯನ್ನು ಪ್ರಕೃತಿಗೆ ಆರೋಪಿಸಿ ವರ್ಣಿಸುವುದು ಕಾಣುತ್ತದೆ. ಈ ಪದ್ಧತಿಯನ್ನು ತೋರಿಸುವುದಕ್ಕಾಗಿ ಈ ಸಂದರ್ಭದಿಂದ ಕೆಲವು ಶ್ಲೋಕಗಳನ್ನು ಇಲ್ಲಿ ಕೊಟ್ಟಿದೆ. "ಅಯಂ ವಸಂತಃ ಸೌಮಿತ್ರೇ ನಾನಾ ವಿಹಗನಾದಿತಃ ಸೀತಯಾ ವಿಪ್ರಹೀನಸ್ಯ ಶೋಕಸಂದೀಪನೋ ಮಮ. ಮಾಂ ಹಿ ಶೋಕಸಮಾಕ್ರಾಂತಂ ಸಂತಾಪಯತಿ ಮನ್ಮಥಃ. ಹೃಷ್ಟಃ ಪ್ರವದಮಾನಶ್ಚ ಮಾಮಾಹ್ವಯತಿ ಕೋಕಿಲಃ. ಏಷ ನತ್ಯೂಹಕೋ ಹೃಷ್ಟೋ ರಮ್ಯೇ ಮಾಂ ವನನಿರ್ಝರೇ ಪ್ರಣದನ್ ಮನ್ಮಥಾವಿಷ್ಟಂ ಶೋಚಯಿಷ್ಯತಿ ಲಕ್ಷ್ಮಣ. ಶ್ರುತ್ವಾ ಏತಸ್ಯ ಪುರಾಶಬ್ದಂ ಆಶ್ರಮಸ್ಥಾ ಮಮ ಪ್ರಿಯಾ ಮಾಮಾಹೂಯ ಪ್ರಮುದಿತಾ ಪರಮಂ ಪ್ರತ್ಯನಂದತ. ಪಶ್ಯ ಲಕ್ಷ್ಮಣ ನೃತ್ಯಂತಂ ಮಯೂರಮುಪನೃತ್ಯತಿ ಶಿಖಿನೀ ಮನ್ಮಥಾರ್ತಾ ಏಷಾ ಭರ್ತಾರಂ ಗಿರಿಸಾನುಷು. ತಾಮೇವ ಮನ್ಮಥಾವಿಷ್ಟೋ ಮಯೂರೋಽಪ್ಯುಪಧಾವತಿ; ವಿತತ್ಯ ರುಚಿರೌ ಪಕ್ಷೌ ರುತೈರುಪಹಸನ್ನಿವ. ಮಯೂರಸ್ಯ

ವನೇ ನೂನಂ ರಕ್ಷಸಾ ನ ಹೃತಾಪ್ರಿಯಾ. ವಸಂತೋಯದಿ ತತ್ರಾಪಿ ಯತ್ರ ಮೇ ವಸತಿ ಪ್ರಿಯಾ ನೂನಂ ಪರವಶಾ ಸೀತಾ ಸಾ ವಿಶೋಚತಿ ಅಹಂ ಯಥಾ. ಶ್ಯಾಮಾ ಪದ್ಮಪಲಾಶಾಕ್ಷೀ ಮೃದುಪೂರ್ವಾಭಿ ಭಾಷಿಣೀ ನೂನಂ ವಸಂತಮಾಸಾದ್ಯ ಪರಿತ್ಯಕ್ಷ್ಯತಿ ಜೀವಿತಂ. ಪದ್ಮಕೇಸರ ಸಂಸೃಷ್ಟೋ ವೃಕ್ಷಾಂತರವಿನಿಃಸೃತಃ ನಿಶ್ವಾಸ ಇವ ಸೀತಾಯಾ ವಾತಿ ವಾಯುರ್ಮನೋಹರಃ.''

ವಸಂತ ಬಂದಿದೆ. ಪಕ್ಷಿಗಳು ಹಾಡುತ್ತಿವೆ. ಲೋಕವೇ ನಲಿಯು ತ್ತಿದೆ. ಸೀತೆಯಿಲ್ಲದ ಕಾರಣ ಈ ಸುಖವೆಲ್ಲ ರಾಮನ ದುಃಖವನ್ನು ಬೆಳೆಸುತ್ತಿದೆ. ಈ ಹೊತ್ತಿನಲ್ಲಿ ಮನಸ್ಸಿನಲ್ಲಿ ಆಸೆ; ಈ ಹೊತ್ತಿನಲ್ಲಿ ಕೋಗಿಲೆ ಕರೆಯುವುದು. ವನನಿರ್ಝರದಲ್ಲಿ ನತ್ಯೂಹಕ ಪಕ್ಷಿ ಕೂಗಿ ಸೀತೆ ಎಂದೋ ಒಂದು ದಿನ ಈ ಕೂಗನ್ನು ಕೇಳುವುದಕ್ಕೆ ತನ್ನನ್ನು ಕರೆ ದದನ್ನು ಜ್ಞಾಪಕ ಕೊಡುತ್ತಿದೆ. ಗಂಡುನವಿಲು ರೆಕ್ಕೆ ಕೆದರಿ ಕುಣಿಯು ತ್ತಿದೆ. ಹೆಣ್ಣು ಅದನ್ನು ಅನುಸರಿಸಿ ಬಳಿ ಸಾರುತ್ತದೆ. ಆ ಗಂಡಿಗೂ ಆಸೆ; ಅದು ಆ ಪ್ರಿಯೆಯನ್ನು ಅನುಸರಿಸಿ ಹೋಗುತ್ತದೆ. ಅದು ಕೂಗುವುದು ರಾಮನನ್ನು ಅಪಹಾಸ್ಯಮಾಡುವ ಶಬ್ದದಂತೆ ಕೇಳುತ್ತದೆ. ಅದರ ಪತ್ನಿಯನ್ನು ರಾಕ್ಷಸನು ಕದ್ದಿಲ್ಲ ನೋಡು. ಸೀತೆ ಇರುವ ಸ್ಥಳ ದಲ್ಲಿ ವಸಂತನು ಹೀಗೆಯೇ ಬಂದಿರಬೇಕು. ಆ ಶ್ಯಾಮೆ ಪದ್ಮಪಲಾಶಾಕ್ಷಿ ಮೃದುಪೂರ್ಣಾಭಿಭಾಷಿಣಿ ಈ ವಿರಹವನ್ನು ಹೇಗೆ ತಡೆಯುವಳು ? ಜೀವವನ್ನು ಬಿಡುವುದೇ ನಿಜ. ಗಾಳಿ ಪದ್ಮಕೇಸರದಿಂದ ಹೊರಟು ಮರಗಳ ಹೂಗೊಂಚಲಲ್ಲಿ ಹಾಯ್ದುಬರುತ್ತಿದೆ. ಅದು ರಾಮನಿಗೆ ಸೀತೆಯ ಉಸಿರಂತೆ ಕಾಣುತ್ತದೆ.

ಪ್ರಕೃತಿ ವರ್ಣನೆಯ ಗಂಭೀರ ರೀತಿಗೆ ಒಂದು ಉದಾಹರಣೆಯನ್ನು ಕೊಡಬಹುದು. ವಾನರ ಸೈನ್ಯ ಸಾಗರದ ಬಳಿಗೆ ಬಂದು ಅದನ್ನು ಕಂಡಿ ತಂತೆ. ಕವಿ ಸಾಗರವನ್ನು ವರ್ಣಿಸುತ್ತಾನೆ. ''ದೂರಪಾರಮಸಂಬಾಧಂ ರಕ್ಷೋಗಣ ನಿಷೇವಿತಂ, ಹಸನ್ತಮಿವ ಫೇನೌಘೈಃ ನೃತ್ಯನ್ತಮಿವ ಚೋರ್ಮಿಭಿಃ. ಚಣ್ಡಾನಿಲಮಹಾಗ್ರಾಹೈಃ ಕೀರ್ಣಂ ತಿಮಿತಿಮಿಂಗಿಲೈಃ. ಅವಗಾಢಂ ಮಹಾಸತ್ತ್ವೈಃ ನಾನಾ ಶೈಲ ಸಮಾಕುಲಂ ಸುದುರ್ಗಂ ದುರ್ಗ

ಮಾರ್ಗಂ ತಮಗಾಧಂ ವರುಣಾಲಯಂ. ಮಕರೈಃ ನಾಗಭೋಗೈಶ್ಚ ವಿಗಾಢಾಃ ವಾತಲೋಳಿತಾಃ ಉತ್ಪೇತುಶ್ಚ ನಿಪೇತುಶ್ಚ ಪ್ರವೃದ್ಧಾ ಜಲರಾಶಯಃ: ಸಾಗರಂ ಚಾಂಬರಪ್ರಖ್ಯಂ ಅಂಬರಂ ಸಾಗರೋಪಮಂ ಸಾಗರಂ ಚಾಂಬರಂ ಚೇತಿ ನಿರ್ವಿಶೇಷ ಮದೃಶ್ಯತ. ಸಮ್ಪೃಕ್ತಂ ನಭಸಾಪ್ಯಮ್ಭಃ ಸಮ್ಪೃಕ್ತಂಚ ನಭೋಂಭಸಾ; ತಾದೃಗ್ರೂಪೇಸ್ಮ ದೃಶ್ಯೇತೇ ತಾರಾರತ್ನ ಸಮಾಕುಲೇ. ಸಮುತ್ಪತಿತಮೇಘಸ್ಯ ವೀಚಿಮಾಲಾಕುಲಸ್ಯಚ ವಿಶೇಷೋ ನದ್ವಯೋರಾಸೀತ್ ಸಾಗರಸ್ಯಾಂಬರಸ್ಯಚ. ಅನ್ಯೋನ್ಯಮಾಹತಾ ಸ್ಸಕ್ತಾಃ ಸಸ್ವನುಃ ಭೀಮನಿಸ್ವನಾಃ ಊರ್ಮಯಃ ಸಿನ್ಧುರಾಜಸ್ಯ ಮಹಾ ಭೇರ್ಯಃ ಇವಾಹವೇ.'' ದೂರವಾದ ಪಾರ; ವಿಸ್ತಾರವಾದ ಹರಹು. ನೊರೆ ನಗೆಯುಂತಿದೆ; ಅಲೆ ಕುಣಿತದಂತೆ ಕಾಣುತ್ತದೆ. ಒಳಗೆ ಬಹು ವಿಧದ ಜೀವ, ಬಂಡೆ, ಗುಂಡು. ಜಲರಾಶಿ ಗಾಳಿಯಿಂದ ಜೀವಗಳಿಂದ ಚಲಿಸಿ ಪ್ರವೃದ್ಧವಾಗಿ ಏಳುತ್ತದೆ ಬೀಳುತ್ತದೆ. ಬಾನ ಮುಚ್ಚಳ ನೀರನ್ನು ಮುಟ್ಟಿದೆ, ನೀರು ಬಾನನ್ನು ಮುಟ್ಟಿದೆ. ಇದು ಅದರಂತೆ ಹರಡಿ ಅದು ಇದರಂತೆ ಹರಡಿ ಇವುಗಳಲ್ಲಿ ಭೇದವೇನೆಂದೇ ಕಾಣುವುದಿಲ್ಲ. ಅಲ್ಲಿ ತಾರೆ, ಇಲ್ಲಿ ರತ್ನ; ಅಲ್ಲಿ ಮೇಘ, ಇಲ್ಲಿ ವೀಚಿಮಾಲೆ. ಸಾಗರದ ಅಲೆಗಳು ಒಂದರಮೇಲೊಂದು ಬಿದ್ದು ಒಂದನ್ನೊಂದು ಬಡಿದು ಸಿನ್ಧು ರಾಜನ ರಣಭೇರಿಗಳಂತೆ ಮೊಳಗುತ್ತವೆ.

ಇದ್ದುದನ್ನು ಇದ್ದಹಾಗೆ ವರ್ಣಿಸಿರುವ ಸಂದರ್ಭಗಳನ್ನು ಇದುವರೆಗೆ ಉದಾಹರಿಸಿ ಆಯಿತು. ತನ್ನ ಭಾವವನ್ನು ಪ್ರಕೃತಿಗೆ ಆರೋಪಿಸುವ ಸಂದರ್ಭಗಳಲ್ಲಿಯೂ ಈ ಕವಿಯ ವರ್ಣನೆ ಹೀಗೆಯೇ ಹೃದಯಂಗಮವಾಗಿದೆ. ಇದು ಮುಖ್ಯವಾಗಿ ಕಾಣುವುದು ರಾವಣನು ಬಂದುಹೋದನೆಂಬ ಸಂದರ್ಭಗಳಲ್ಲಿ. ಅವನು ಸೀತೆಯ ಬಳಿಗೆ ಮೊದಲು ಬಂದಾಗ: ''ತಮುಗ್ರತೇಜಃ ಕರ್ಮಾಣಂ ಜನಸ್ಥಾನರುಹಾಃ ದ್ರುಮಾಃ ಸಮಾಕ್ಷ್ಯನ ಪ್ರಕಮ್ಪನ್ತೇ ನ ಪ್ರವಾತಿಚ ಮಾರುತಃ ಶೀಘ್ರಸ್ರೋತಾಶ್ಚ ತಂ ದೃಷ್ಟ್ವಾ ವೀಕ್ಷನ್ತಂ ರಕ್ತಲೋಚನಮ್ ಸ್ತಿಮಿತಂ ಗನ್ತುಮಾರೇಭೇ ಭಯಾದ್ಗೋದಾವರೀ ನದೀ.'' ಪ್ರಕೃತಿ ಅವನಿಗೆ ಹೆದರಿ ಅಲುಗದೆ ನಿಂತಿತು. ಗಾಳಿ ಹರಿಯುವುದನ್ನು ಮರೆತಿತು. ವೇಗದಿಂದ ಓಡುವ ಗೋದಾವರಿ ಮೆಲ್ಲನೆ

ಹರಿಯಲು ತೊಡಗಿತು. ಇವನು ಎಂಥ ಅನಿಷ್ಟವೆನ್ನುವುದು ಈ ಮೂರು ಮಾತಿನಿಂದ ವ್ಯಕ್ತವಾಗುತ್ತದೆ. ಗೋದಾವರಿಯನ್ನು ಕುರಿತ ಮಾತಿನಿಂದ ಸೀತೆಗೆ ಏನು ಆಗುತ್ತದೆಂಬುದು ಸೂಚಿತವಾಗಿದೆ. ಗೋದಾವರಿ ಸ್ತ್ರೀ; ಸೀತೆಯ ಸಖಿ; ಅವಳು ದಿನವೂ ಸ್ನಾನದಲ್ಲಿ ಅಪ್ಪಿಕೊಳ್ಳುತ್ತಿದ್ದವಳು. ಈ ಸಖಿ ಇವನು ಯಾರೆಂಬುದನ್ನು ಬಲ್ಲಳು; ಇವನು ಬಂದಾಗ ನಡೆಯನ್ನು ಮೆದುಮಾಡಿದಳು. ಸೀತೆಯನ್ನು ರಾವಣನು ಕದ್ದು ಹೊರಟಾಗ "ಪ್ರಧರ್ಷಿತಾಯಾಂ ಸೀತಾಯಾಂ ಬಭೂವ ಸಚರಾಚರಂ ಜಗತ್ಸರ್ವಮಮರ್ಯಾದಂ ತಮಸಾನ್ಧೇನ ಸಂವೃತಮ್. ನವಾತಿ ಮಾರುತಸ್ತತ್ರ ನಿಷ್ಪ್ರಭೋಽಭೂತ್ ದಿವಾಕರಃ ಉತ್ಪನ್ನವಾತಾಭಿಹತಾಃ ನಾನಾದ್ವಿಜಗಣಾಯುತಾಃ ಮಾಭೈರಿತಿವಿಧೂತಾಗ್ರಾಃ ವ್ಯಾಜಹ್ರುಃ ಇವ ಪಾದಪಾಃ ನಳಿನ್ಯೋಧ್ವಸ್ತಕಮಲಾಃ ತ್ರಸ್ತಮೀನಜಲೇಚರಾಃ ಸಖೀಮಿವಗತೋಚ್ಛ್ವಾಸಾಂ ಅನ್ವಶೋಚಂತ ಮೈಥಿಲೀಂ ಸಮಂತಾತ್ ಅಭಿಸಂಪತ್ಯ ಸಿಂಹ ವ್ಯಾಘ್ರ ಮೃಗದ್ವಿಜಾಃ ಅನ್ವಧಾವನ್ ತದಾ ರೋಷಾತ್ ಸೀತಾಂ ಛಾಯಾನುಗಾಮಿನಃ. ಜಲಪ್ರಪಾತಾಸ್ರಮುಖಾಃ ಶೃಂಗೈರುಚ್ಛ್ರಿತಬಾಹುಭಿಃ ಸೀತಾಯಾಂ ಹ್ರಿಯಮಾಣಾಯಾಂ ವಿಕ್ರೋಶಂತೀವ ಪರ್ವತಾಃ ಹ್ರಿಯಮಾಣಾಂತು ವೈದೇಹೀಂ ದೃಷ್ಟ್ವಾದೀನೋ ದಿವಾಕರಃ ಪ್ರತಿಧ್ವಸ್ತಪ್ರಭಃ ಶ್ರೀಮಾನಾಸೀತ್ ಪಾಂಡರಮಂಡಲಃ ನಾಸ್ತಿಧರ್ಮಃ ಕುತಃ ಸತ್ಯಂ ನಾರ್ಜವಂ ನಾನೃಶಂಸತಾ ಯತ್ರರಾಮಸ್ಯವೈದೇಹೀಂ ಭಾರ್ಯಾಂ ಹರತಿರಾವಣಃ. ಇತಿ ಸರ್ವಾಣಿ ಭೂತಾನಿ ಗಣಶಃ ಪರ್ಯದೇವಯನ್ ವಿತ್ರಸ್ತಕಾ ದೀನಮುಖಾ ರುರುದುಃ ಮೃಗಪೋತಕಾಃ. ಉದ್ವೀಕ್ಷ್ಯೋದ್ವೀಕ್ಷ್ಯನಯನೈಃ ಅಸ್ರಪಾತಾವಿಲೇಕ್ಷಣಾಃ ಸುಪ್ರವೇಪಿತ ಗಾತ್ರಾಶ್ಚ ಬಭೂವುಃ ವನದೇವತಾಃ. ವಿಕ್ರೋಶಂತೀ ದೃಢಂ ಸೀತಾಂ ದೃಷ್ಟ್ವಾ ದುಃಖಂ ತಥಾಗತಾಂ." ಇಲ್ಲಿಯೂ ಮರಗಳು ಮೃಗಗಳು ಪಕ್ಷಿಗಳು, ಪರ್ವತಗಳು, ಸೂರ್ಯ, ಸಮಸ್ತ ಭೂತಗಳು, ಸೀತೆಯ ಶೋಕದಲ್ಲಿ ತಾವೂ ಭಾಗಿಗಳಾದವು. ಹನುಮಂತನು ಸೀತೆಯನ್ನು ಹುಡುಕುತ್ತ ರಾವಣನ ಅರಮನೆಯಲ್ಲಿ ದಾರಿಯರಿಯದೆ ಹೋಗುತ್ತಿದ್ದಾಗ ರಾವಣನ ಆರೋಗಣೆಯ ಮಂದಿರದಿಂದ ಗಾಳಿ ಬೀಸಿ ಇತ್ತ ಬಂದು ನೋಡು ಎಂದು

ಅವನಿಗೆ ಹೇಳಿತಂತೆ. ಇಲ್ಲಿಯೂ ಪ್ರಕೃತಿ ಧರ್ಮದ ಕಡೆಗೆ ಸಹಾಯವಾಗಿರುವಂತೆ ಭಾವನೆ.

ಇವುಗಳನ್ನು ವರ್ಣನೆಯಲ್ಲಿ ಚಮತ್ಕಾರ ಮಾತ್ರವೆಂದು ನಾವು ಭಾವಿಸಬಾರದು. ಸರಿಯಾದ ಸಂದರ್ಭದಲ್ಲಿ ಪ್ರಕೃತಿಗೆ ಭಾವನೆಯನ್ನು ಆರೋಪಿಸುವುದು ಕಾವ್ಯದಲ್ಲಿ ಸುಖವನ್ನು ಉಂಟುಮಾಡುತ್ತದೆ. ಇದಕ್ಕೆ ಕಾರಣ ಅಂಥ ಆರೋಪಣೆಯಿಂದ ರಸ ಉತ್ಪನ್ನವಾಗುವುದು. ಆದರೆ ಅಲ್ಲಿ ರಸ ಉತ್ಪನ್ನವಾಗುವುದಕ್ಕೆ ಕಾರಣವೇನೆಂದು ಯೋಚಿಸಬೇಕು. ಇಂಥ ಚಮತ್ಕಾರವನ್ನು ಪಾಶ್ಚಾತ್ಯ ಸಾಹಿತ್ಯದಲ್ಲಿ the pathetic fallacy ಎಂದು ಕರೆಯುತ್ತಾರೆ. ತನ್ನ ಒಳಗಿನ ಭಾವವನ್ನು ಪ್ರಕೃತಿಯಲ್ಲಿ ಕಂಡು ಅದು ಪ್ರಕೃತಿಯಲ್ಲಿ ಇದೆಯೆಂದು ತಪ್ಪಾಗಿ ತಿಳಿಯುವುದು ಎಂದು ಈ ಮಾತಿನ ಅಭಿಪ್ರಾಯ. ಕಷ್ಟಪಡುವ ಮನುಷ್ಯನು ತನ್ನ ಕಷ್ಟವನ್ನು ಪ್ರಕೃತಿಯೂ ಪಡುತ್ತಿದೆಯೆಂದು ಎಣಿಸಿದರೆ, ಅದು ಆಭಾಸವೇ ಆಗಬಹುದು. ಅಂಥ ಸಂದರ್ಭ the pathetic fallacy ಎಂಬ ನಾಮಕರಣಕ್ಕೆ ಗುರಿಯಾಗುವುದು ನ್ಯಾಯವೇ. ಆದರೆ ಒಂದು ಅನ್ಯಾಯವಾದದನ್ನು ನೋಡಿ ಒಬ್ಬ ಮನುಷ್ಯನ ಮನಸ್ಸು ಕುಗ್ಗಿದಾಗ ಪ್ರಕೃತಿಯೂ ಕುಗ್ಗಿತೆಂದು ಕವಿ ಹೇಳಿದರೆ ಅದು ಆಭಾಸವಲ್ಲ. ಅನ್ಯಾಯವಾದುದು ನಿಜ; ಒಂದು ಜೀವ ಕುಗ್ಗುತ್ತದೆ; ಅದರ ಪಕ್ಕದ ಜೀವ ಕುಗ್ಗುವುದಿಲ್ಲವೆ? ಮನುಷ್ಯನಾದರೆ ಕುಗ್ಗುತ್ತಾನೆ, ಮೃಗ ಕುಗ್ಗುವುದಿಲ್ಲವೆ? ಮಾನವನಾಗಲಿ ಮೃಗವಾಗಲಿ ಪ್ರಕೃತಿಯ ಒಟ್ಟು ಜೀವನದ ಭಾಗಗಳು. ಪ್ರಕೃತಿಯ ಧರ್ಮಕ್ಕೆ ವಿರೋಧ ನಡೆದಾಗ ಪ್ರಕೃತಿಯೇ ನೋಯುತ್ತದೆ. ಮನುಷ್ಯನು ನೋವಿನಿಂದ ಕೂಗಿಕೊಳ್ಳಬಹುದು; ಪಕ್ಷಿ ಕೂಗದೆ ಭಯವನ್ನು ತೋರಿಸಿ ಮೌನದಿಂದಿರಬಹುದು; ಮರ ಈ ಅಧರ್ಮದಿಂದ ಯಾವ ಅನುಭವವನ್ನು ಪಡೆಯಿತೆಂದು ನಮಗೆ ಕಾಣದೆ ಇರಬಹುದು. ಆದ ಮಾತ್ರಕ್ಕೆ ಒಂದು ನೋಯಿತು, ಇನ್ನೊಂದು ನೋಯಲಿಲ್ಲ, ಮತ್ತೊಂದಕ್ಕೆ ನೋವು ತಿಳಿಯಲಿಲ್ಲ ಎಂದು ನಾವು ಹೇಳುವುದು ಹೇಗೆ? ಒಬ್ಬ ವ್ಯಕ್ತಿಯಲ್ಲಿ ನೋವಿನ ವೇಳೆ ಬಾಯಿ ಕೂಗಿಕೊಳ್ಳುತ್ತದೆ, ಕಣ್ಣು ನಡುಗುತ್ತದೆ, ಕೈ ಏನೂ ಆಗುವುದಿಲ್ಲ. ಬಾಯಿಗೆ ಬಹಳ ನೋವು, ಕಣ್ಣಿಗೆ ಅದಕ್ಕಿಂತ

ಕಡವೆ ನೋವು, ಕೈಗೆ ನೋವಿಲ್ಲ ಎಂದು ನಾವು ಹೇಳುತ್ತೇವೆಯೋ ? ವ್ಯಕ್ತಿಯ ಒಂದು ಅಂಗಕ್ಕೆ ನೋವಾದಾಗ ವ್ಯಕ್ತಿಯೇ ನೋಯುತ್ತಾನೆ. ಕೂಗುವ ನಾಲಗೆ ಮಾತ್ರ ನೋವನ್ನನುಭವಿಸುವುದಿಲ್ಲ ; ಕೂಗದ ಕೈಯೂ ಅದರಲ್ಲಿ ಭಾಗಿಯಾಗಿರುತ್ತದೆ. ಮನುಷ್ಯನೂ ಮೃಗವೂ ಮರವೂ ಈ ರೀತಿ ಪ್ರಕೃತಿಯ ಒಂದು ಜೀವನದ ಅಂಗಗಳು. ಸೀತೆ ಅಯ್ಯೋ ಎಂದು ಕೂಗಿದಾಗ ಹತ್ತಿರಿದ್ದ ಮರಗಳು ಅನುತಾಪಗೊಂಡವು ಎನ್ನುವುದು ಕ್ರೌಂಚಮಿಥುನಕ್ಕಾಗಿ ಕೊರಗಿದ ಕವಿಯಲ್ಲಿ ಬರಿಯ ಚಮತ್ಕಾರವೆಂದು ನಾವು ತಿಳಿಯಬೇಕಾದದಿಲ್ಲ.

ಕವಿ ಈ ರೀತಿಯ ವರ್ಣನೆ ಮಾಡಿರುವ ಇನ್ನೊಂದು ಸಂದರ್ಭ ಹೀಗೆಯೇ ಸುಂದರವಾದದು. ರಾಮಚಂದ್ರನು ಅಯೋಧ್ಯೆಯನ್ನು ಬಿಟ್ಟು ಹೊರಟಾಗ ತಾಯಿತಂದೆ ಊರಜನವೆಲ್ಲವೂ ಅವನನ್ನು ಕಾಡಿಗೆ ಹೋಗಬೇಡವೆಂದು ತಡೆದರಲ್ಲವೆ ? ಅಯೋಧ್ಯೆಯನ್ನು ಬಿಟ್ಟು ಸ್ವಲ್ಪ ದೂರ ಹೋದಮೇಲೆ ದಾರಿಯಲ್ಲಿ ತಮಸಾ ನದಿ ಅಡ್ಡಬಂದಿತಂತೆ. ಅದು ರಾಮನನ್ನು ಕಾಡಿಗೆ ಹೋಗಬೇಡ ಎಂದು ತಡೆಯುವಂತೆ ಕಂಡಿತಂತೆ. ನದಿ ಅಡ್ಡವಾಗಿ ಬಂದದು ನಿಜ ; ಅದು ರಾಮನನ್ನು ತಡೆದದು ನಿಜ. ಇದಿಷ್ಟನ್ನು ತೆಗೆದುಕೊಂಡರೂ ಈ ಮಾತು ಚಮತ್ಕಾರಕವೆಂದು ನಾವು ಒಪ್ಪಿಕೊಳ್ಳಬೇಕಾಗುತ್ತದೆ. ಇದರ ಜೊತೆಗೆ ಇನ್ನೊಂದು ವಿಷಯವನ್ನು ಗ್ರಹಿಸಿದರೆ ಇಲ್ಲಿ ಚಮತ್ಕಾರಕ್ಕಿಂತ ಒಂದು ಹೆಚ್ಚಿನ ಭಾವ ಕಾಣುತ್ತದೆ. ತಮಸಾ ನದಿ ವಾಲ್ಮೀಕಿಯ ಸ್ವಂತದ ನದಿ. ಅವನು ಅದನ್ನು ಎಲ್ಲಿಯೂ ಹೇಳಲಿಲ್ಲ. ಆದರೆ ಉಪೋದ್ಘಾತದ ಸರ್ಗಗಳಲ್ಲಿ ಅವನಿಗೂ ತಮಸಾ ನದಿಗೂ ಸಂಬಂಧವೇನೆಂಬುದು ನಮಗೆ ತಿಳಿಯುತ್ತದೆ. ಜಾಹ್ನವಿಯಿಂದ ಬಹು ದೂರವಿಲ್ಲದ ಈ ನದಿಯ ಬಳಿಯ ಒಂದು ವನದಲ್ಲಿ ವಾಲ್ಮೀಕಿಯ ಆಶ್ರಮ. ಅವನು ಅದರ ಪ್ರಸನ್ನ ಸಲಿಲದಲ್ಲಿ ಸ್ನಾನಮಾಡಹೋದಾಗಲೇ ತೀರದ ವನದಲ್ಲಿ ಕ್ರೌಂಚಮಿಥುನದ ದುಃಖಚರಿತ ನಡೆದದು ; ಅದರ ತಡಿಯಲ್ಲಿಯೇ ಅವನ ಬಾಯಿಂದ ಕವಿತೆ ಹೊರಹೊಮ್ಮಿದ್ದು. ವಾಲ್ಮೀಕಿಗೆ ತಮಸಾ ನದಿ ತನ್ನ ಗೆಳೆಯನಂತೆ, ತನ್ನ ಆತ್ಮದ ಒಂದು ಭಾಗವೆಂಬಂತೆ, ಇದ್ದಿರಬೇಕು. ರಾಮನು ಕಾಡಿಗೆ ಹೊರಟಾಗ ಕವಿ ಬಂದು ಬೇಡವೆಂದು

ಹೇಳಲಿಲ್ಲ. ಅದನ್ನು ಅವನ ನದಿ ಮಾಡಿತು. ದೇವರಿಗೆ ಪೂಜಾ ವಸ್ತುವನ್ನು ಮಕ್ಕಳಿಂದ ಕೊಡಿಸುವ ತಾಯಿತಂದೆಯಂತೆ ಕವಿ ತಾನು ಸ್ವಂತವಾಗಿ ಹೇಳಬೇಕಾದ ಮಾತನ್ನು ನದಿಯಿಂದ ಹೇಳಿಸಿದಾನೆ. ಇದರಿಂದ ನಮಗೆ ಕವಿಯ ಹೃದಯ ಬಿಚ್ಚಿ ಕಾಣುತ್ತದೆ. ಕವಿಯ ಕಾಲದಲ್ಲಿ ತಮಸಾ ಅವನ ನದಿಯೆಂದು ಅವನು ಹೇಳದೆಯೇ ಕಾವ್ಯವನ್ನು ಕೇಳುವ ಜನಕ್ಕೆ ತಿಳಿಯುತಿತ್ತು. ಆಮೇಲೆ ಈ ಮಾತು ತಿಳಿಯದೆ ಹೋಗುವ ಸಂದರ್ಭವಿತ್ತು. ಉಪೋದ್ಘಾತ ಕರ್ತೃವು ಈ ವಿಷಯವನ್ನು ನಮಗೆ ತಿಳಿಸಿ ಕಾವ್ಯದ ಒಂದು ಮಾತಿನ ಅಮೂಲ್ಯವಾದ ಒಂದು ಅರ್ಥವನ್ನು ನಮಗೆ ಉಳಿಸಿಕೊಟ್ಟಿದಾನೆ. ಇನ್ನು ಯಾವುದಕ್ಕೆ ಅಲ್ಲದಿದ್ದರೂ ಇದಿಷ್ಟ ಕ್ಕಾಗಿ ನಾವು ಉಪೋದ್ಘಾತಕಾರನಿಗೆ ಕೃತಜ್ಞರಾಗಿರಬೇಕು.

### ಇತರ ವರ್ಣನೆಗಳು

ಪ್ರಕೃತಿ ಸೌಂದರ್ಯವನ್ನು ವರ್ಣಿಸಿರುವಂತೆಯೇ ವಾಲ್ಮೀಕಿ ಇತರ ವಿಷಯಗಳನ್ನೂ ಕೌಶಲ್ಯದಿಂದ ವರ್ಣಿಸಿದಾನೆ. ಸ್ತ್ರೀ ಸೌಂದರ್ಯ ವರ್ಣನೆ ಆಗಾಗ ಬರುವ ಒಂದೊಂದು ಮಾತಿನಲ್ಲೇ ಹೃದಯಂಗಮ ವಾಗುತ್ತದೆ. ರಾವಣನು ಸೀತಾದೇವಿಯನ್ನು ವರ್ಣಿಸುವಲ್ಲಿ ಇದೇ ಕೌಶಲ್ಯ ವಿಸ್ತಾರವಾಗಿ ಕಾಣುತ್ತದೆ. ರಾವಣನ ಅಂತಃಪುರದಲ್ಲಿ ಸಿಕ್ಕಿ ಸಿಕ್ಕಿದಹಾಗೆ ಮಲಗಿದ್ದ ಹೆಣ್ಣು ವರ್ಣನೆಯಲ್ಲಿ ಈ ವಿಸ್ತಾರ ಆಧುನಿಕ ಕಾಲದ ಚಲಚ್ಚಿತ್ರಗಳಿಗೆ ವಿವರವನ್ನು ಕಲಿಸಬಹುದೆಂಬಂತಿದೆ. ಕವಿ ಮಾನವನಿರ್ಮಿತ ಸೌಂದರ್ಯವನ್ನೂ ಹೀಗೆಯೇ ವರ್ಣಿಸುತ್ತಾನೆ. ನಗರ ಉಪವನ ಅರಮನೆಯಾಗಲಿ, ಭರತನ ಸೇನೆ ರಾವಣನ ಆಸ್ಥಾನಗಮನದ ಮೆರವಣಿಗೆಯಾಗಲಿ, ಇವನಿಗೆ ವರ್ಣನೆಯಲ್ಲಿ ಕಣ್ಣಿಗೆ ಕಟ್ಟಿದಂತೆ ಆಗುತ್ತವೆ. ಇವನ ಯುದ್ಧ ವರ್ಣನೆಗಳಂತೂ ವಿಸ್ತಾರದಲ್ಲಿ ಅತಿಗೇ ಹೋಗುತ್ತವೆ. ವಾಲ್ಮೀಕಿಯ ಯುದ್ಧ ವರ್ಣನೆಗಳು ನಮ್ಮ ದೇಶದ ಎಲ್ಲ ಸಾಹಿತ್ಯಕ್ಕೂ ಮೇಲ್ಪಂಕ್ತಿಯಾದವು. ಈಗ ಇವನ್ನು ಓದುವ ನಾವು ಇವನಿಗೆ ಏನುತಾನೇ ಬೇಸರವಿಲ್ಲವೋ ಎನ್ನುತ್ತೇವೆ. ಅವನಿಗೆ ಯುದ್ಧಗಳನ್ನು ವರ್ಣಿಸುವುದರಲ್ಲಿ ಬೇಸರವಿರಲಿಲ್ಲ; ಸಂತೋಷವೇ ಇದ್ದಿತೆಂದು ಕಾಣುತ್ತದೆ. ಅವನ ಕಾವ್ಯವನ್ನು ಕೇಳಿದವರಿಗೂ ಹಾಗೆಯೇ

ಇದ್ದಿರಬೇಕು. ನಮಗಾದರೂ ವಿವರವಾಗಿ ನೋಡಿದರೆ ಇವುಗಳ ಅನೇಕ ಭಾಗ ಚೆನ್ನಾಗಿಯೇ ಕಾಣುತ್ತವೆ. ಉದಾಹರಣೆಗಾಗಿ ಕುಂಭಕರ್ಣನ ಯುದ್ಧದ ಒಂದು ಸನ್ನಿವೇಶವನ್ನು ಕೊಡಬಹುದು. "ಗಿರಿಕೂಟೋಪಮನಾದ ಮಹಾಬಲಶಾಲಿ ಕುಂಭಕರ್ಣನು ಪ್ರಾಕಾರವನ್ನು ಲಂಘಿಸಿ ನಗರದಿಂದ ಹೊರಟನು. ಅವನು ಹಾಕಿದ ಶಬ್ದದಿಂದ ಸಮುದ್ರ ಮೊಳಗಿತು. ಮಘವಾನ್ ಯಮ ವರುಣರಿಂದ ಅವಧ್ಯನಾದ ಆ ಭೀಮಾಕ್ಷನ ಬರವನ್ನು ಕಂಡು ವಾನರರು ಚೆದರಿ ಓಡಿದರು. ಹೀಗೆ ಓಡಿದ ಸೇನೆಯನ್ನು ನೋಡಿ ವಾಲಿಪುತ್ರನಾದ ಅಂಗದನು ನಳ ನೀಲ ಗವಾಕ್ಷರನ್ನೂ ಮಹಾಬಲನಾದ ಕುಮಾರನನ್ನೂ ಕುರಿತು ಹೀಗೆಂದನು: 'ನಿಮ್ಮನ್ನು ನೀವೇ ಮರೆತು ನಿಮಗೆ ತಕ್ಕ ವೀರ್ಯವನ್ನು ತೊರೆದು ಭಯತ್ರಸ್ತರಾದ ಪ್ರಾಕೃತ ವಾನರರಂತೆ ಎಲ್ಲಿ ಹೋಗುವಿರಿ? ಹಿಂದಿರುಗಿ. ಈಗ ಬಿದ್ದಿರುವ ಈ ರಾಕ್ಷಸರ ಮಹದ್ವಿಭೀಷಿಕವನ್ನು ವಿಕ್ರಮದಿಂದ ವಿಧಮಿಸೋಣ.' ಇವನ ಮಾತನ್ನು ಕೇಳಿ ವಾನರ ವೀರರು ಧೈರ್ಯತಂದುಕೊಂಡು ಒಂದುಗೂಡಿ ಮರಗಳನ್ನೂ ಮಲೆಗಳನ್ನೂ ಹಿಡಿದು ರಣಾಂಗಣವನ್ನು ಸಾರಿದರು; ಮದವೇರಿದ ಆನೆಗಳಂತೆ ಸಂಕ್ರುದ್ಧರಾಗಿ ಕುಂಭಕರ್ಣನನ್ನು ಬಡಿದರು. ಎತ್ತರವಾದ ಗಿರಿ ಶೃಂಗ ಶಿಲೆಗಳಿಂದ ಪುಷ್ಪಿತಾಗ್ರ ಪಾದಪಗಳಿಂದ ಇವರು ಹೊಡೆದರೂ ಆ ಮಹಾಬಲನು ಕದಲಲಿಲ್ಲ. ಅವನ ಮೈ ಮೇಲೆ ಬಿದ್ದ ಬಂಡೆಗಳು ನೂರು ಚೂರಾದವು; ಪುಷ್ಪಿತಾಗ್ರ ಪಾದಪಗಳು ಮುರಿದು ಮಹೀತಲದಲ್ಲಿ ಬಿದ್ದವು. ಅವನು ಕೋಪಗೊಂಡು ಮಹೌಜಸರಾದ ವಾನರರ ಸೇನೆಯನ್ನು ಕಿಚ್ಚು ಕಾಡನ್ನು ಮಥಿಸುವಂತೆ ಮಥಿಸಿದನು. ನೆತ್ತರಿಂದ ತೊಯ್ದು ಬಹುವಾಗಿ ವಾನರ ನಾಯಕರು ಮಲಗಿದರು; ನೆಲದಮೇಲೆ ಬಿದ್ದ ಕೆಂಪು ಹೂವಿನ ಮರಗಳಂತೆ ಕಂಡರು. ಆಗ ವಾನರರು, ಅತ್ತ ಇತ್ತ ನೋಡದೆ ಹಾರುವವರು ಓಡುವವರು, ಕೆಲವರು ಸಮುದ್ರದಲ್ಲಿ ಬಿದ್ದರು ಕೆಲವರು ಆಕಾಶವನ್ನು ಸೇರಿದರು. ಬಲಿಷ್ಠನಾದ ರಾಕ್ಷಸನಿಂದ ಸಾಯುವ ಘಟ್ಟಕ್ಕೆ ಬಂದು ಆ ವೀರರು ಸಾಗರವನ್ನು ಯಾವುದರಿಂದ ದಾಟಿದರೋ ಅದೇ ದಾರಿಯಿಂದ ಓಟ ಕಿತ್ತರು." ಈ ವರ್ಣನೆಯಂತೆ ವಾಲ್ಮೀಕಿಯ ಇತರ ವರ್ಣನೆಗಳು

ಆಮೇಲೆ ಬಂದವರಿಗೆ ಆದರ್ಶಗಳಾದವು. ಕಾಳಿದಾಸನ ಮಾಲಿನಿಯ ತೀರದ ಕಣ್ವಾಶ್ರಮದ ವರ್ಣನೆಯಲ್ಲಿ ಅನುಸೂಯೆಯ ಆಶ್ರಮದ ವರ್ಣನೆಯ ಛಾಯೆ ಕಾಣುತ್ತದೆ. ಅವನ ಯಕ್ಷನ ವಿರಹದ ವರ್ಣನೆ ಯಲ್ಲಿ ಕಿಷ್ಕಿಂಧಾಕಾಂಡದ ಧ್ವನಿ ಕೇಳುತ್ತದೆ. ಇದರಲ್ಲಿ ಆಶ್ಚರ್ಯ ವೇನೂ ಇಲ್ಲ. ವಾಲ್ಮೀಕಿಗೆ ಜನರ ನಡೆ ನುಡಿ ನಗೆ ಆಟ ವಿವರವಾಗಿ ಕಂಡಂತೆ ಸ್ಥಾವರ ಪ್ರಕೃತಿಯ ಹಸಿತ ಭಾಷಿತ ಗತಿಚೇಷ್ಟಿತವೂ ವಿವರ ವಾಗಿ ಕಂಡವು. ಇವನು ಕಾಣದ ವಿಷಯವಿಲ್ಲ; ಇವನು ವರ್ಣಿಸದ ವಿವರವಿಲ್ಲ.

## ೧೦

## ವಾಲ್ಮೀಕಿಯ ಕಥನಕೌಶಲ

### ಕಥೆ ಹೇಳಿರುವ ರೀತಿ

ವಾಲ್ಮೀಕಿ ಕಥೆಯನ್ನು ಆರಂಭಿಸುವ ರೀತಿಯೇ ಬಹು ಗಂಭೀರ ವಾಗಿದೆಯೆಂದು ಈ ಮೊದಲೇ ಸೂಚಿಸಿದೆ. ಸರ್ವಾಪೂರ್ವಮಿಯಂ ಯೇಷಾಂ ಆಸೀತ್ ಕೃತ್ಸ್ನಾ ವಸುಂಧರಾ ಪ್ರಜಾಪತಿಮುಪಾದಾಯ ನೃಪಾಣಾಂ ಜಯಶಾಲಿನಾಂ, ಇಕ್ಷ್ವಾಕೂಣಾಂ ಇದಂ ತೇಷಾಂ ರಾಜ್ಞಾಂ ವಂಶೇ ಮಹಾತ್ಮನಾಂ, ಮಹದುತ್ಪನ್ನಂ ಆಖ್ಯಾನಂ ರಾಮಾಯಣಮಿತಿ ಶ್ರುತಂ ತದಿದಂ ವರ್ತಯಿಷ್ಯಾಮಿ ಸರ್ವಂ ನಿಖಿಲಮಾದಿತಃ ಧರ್ಮ ಕಾಮಾರ್ಥಸಹಿತಂ ಶ್ರೋತವ್ಯಂ ಅನುಸೂಯಯಾ. ಈ ಗಾಂಭೀರ್ಯಕ್ಕೆ ತಕ್ಕಹಾಗೆ ಮುಂದಿನ ಶ್ಲೋಕದಲ್ಲಿ ಕೋಸಲ ದೇಶದ ವರ್ಣನೆ. ಕೋಸಲೋ ನಾಮ ಮುದಿತಃ ಸ್ಫೀತೋ ಜನಪದೋ ಮಹಾನ್, ನಿವಿಷ್ಟಃ ಸರಯೂತೀರೇ ಪ್ರಭೂತ ಧನಧಾನ್ಯವಾನ್. ಮುಂದಣ ಶ್ಲೋಕದಲ್ಲಿ ಅಯೋಧ್ಯೆಯ ಮಾತು. ಅಯೋಧ್ಯಾ ನಾಮ ನಗರೀ ತತ್ರಾಸೀತ್ ಲೋಕವಿಶ್ರುತಾ ಮನುನಾ ಮಾನವೇಂದ್ರೇಣ ಯಾ ಪುರೀ ನಿರ್ಮಿತಾ ಸ್ವಯಂ. ಇದಾದಮೇಲೆ ಆಯೋಧ್ಯಾನಗರಿಯ ವರ್ಣನೆ. ಆಯತಾ ದಶಚದ್ವೇಚ ಯೋಜನಾನಿ ಮಹಾಪುರೀ ಶ್ರೀಮತೀ ತ್ರೀಣಿವಿಸ್ತೀರ್ಣಾ ಸುವಿಭಕ್ತ ಮಹಾಪಥಾ. ರಾಜಮಾರ್ಗೇಣ ಮಹತಾ ಸುವಿಭಕ್ತೇನ

ಶೋಭಿತಾ ಮುಕ್ತಪುಷ್ಪಾವಕೀರ್ಣೇನ ಜಲಸಿಕ್ತೇನ ನಿತ್ಯಶಃ. ಈ ಸರ್ಗದಲ್ಲಿ ಹೀಗೆ ಅಯೋಧ್ಯಾನಗರಿಯನ್ನು ವರ್ಣಿಸಿ ಮುಂದಣ ಸರ್ಗವನ್ನು ಕವಿ ಹೀಗೆ ಆರಂಭಿಸಿದ್ದಾನೆ: ಪುರ್ಯಾಂ ತಸ್ಯಾಂ ಅಯೋಧ್ಯಾಯಾಂ ವೇದ ವಿತ್ ಸರ್ವಸಂಗ್ರಹಃ ದೀರ್ಘದರ್ಶೀ ಮಹಾತೇಜಾಃ ಪೌರಜಾನಪದ ಪ್ರಿಯಃ, ಇಕ್ಷ್ವಾಕೂಣಾಂ ಅತಿರಥೋ ಯಜ್ವಾ ಧರ್ಮಪರೋವಶೀ ಮಹರ್ಷಿಕಲ್ಪೋ ರಾಜರ್ಷಿಃ ತ್ರಿಷುಲೋಕೇಷು ವಿಶ್ರುತಃ, ಬಲವಾನ್ ನಿಹತ ಅಮಿತ್ರೋ ಮಿತ್ರವಾನ್ ವಿಜಿತೇಂದ್ರಿಯಃ ಧನೈಶ್ಚ ಸಂಗ್ರಹೈಶ್ಚ ಅನ್ಯೈಃ ಶಕ್ರವೈಶ್ರವಣೋಪಮಃ, ಯಥಾಮನುರ್ಮಹಾತೇಜಾ ಲೋಕಸ್ಯ ಪರಿರಕ್ಷಿತಾ ತಥಾ ದಶರಥೋ ರಾಜಾ ವಸನ್ ಜಗದಪಾಲಯತ್. ಈ ಸರ್ಗದಲ್ಲೆಲ್ಲಾ ರಾಜನ ಆಳ್ವಿಕೆಯ ಸೊಗಸನ್ನು ಹೊಗಳಿದೆ. ಮುಂದಣ ಸರ್ಗದಲ್ಲಿ ಕವಿ ಅವನ ಆಳ್ವಿಕೆಯ ಏರ್ಪಾಡನ್ನು ವರ್ಣಿಸಿದಾನೆ. ಮುಂದಣ ಸರ್ಗವನ್ನು ಹೀಗೆಂದು ಪ್ರಾರಂಭಿಸಿದೆ: ತಸ್ಯತ್ವೇವಂ ಪ್ರಭಾವಸ್ಯ ಧರ್ಮಜ್ಞಸ್ಯ ಮಹಾತ್ಮನಃ ಸುತಾರ್ಥಂ ತಪ್ಯಮಾನಸ್ಯ ನಾಸೀತ್ ವಂಶಕರಃ ಸುತಃ. ಈ ಸರ್ಗಗಳ ಆರಂಭದ ಸೊಗಸು ವಾಲ್ಮೀಕಿಯದೇ. ಒಂದು ಸರ್ಗದಲ್ಲಿ ಒಂದು ವಿಷಯ ಆರಂಭವಾಗುತ್ತದೆ; ಮುಗಿಯುತ್ತದೆ. ಮುಂದಣ ಸರ್ಗದಲ್ಲಿ ಇನ್ನೊಂದು ವಿಷಯ. ಹೀಗೆ ಈ ಸರ್ಗಗಳ ಉಪಕ್ರಮ ಉಪಸಂಹಾರದಲ್ಲಿ ಒಂದು ಉಪನ್ಯಾಸದ ವಾಕ್ಯವೃಂದಗಳ ಕೌಶಲ ಕಾಣುತ್ತದೆ. ಇಲ್ಲಿ ವಿಷಯವನ್ನು ಸೊಗಸಾಗಿ ಹೇಳುವುದಕ್ಕೆ ವಾಕ್ಯವೃಂದ ಗಳಾಗಿರುವಂತೆ ಕಥೆಗೆ ಅವಶ್ಯಕವಾದಲ್ಲಿ ಅವು ಕೌತುಕವನ್ನು ಹೆಚ್ಚಿಸುವ ಸನ್ನಿವೇಶಗಳಲ್ಲಿ ಮುಗಿಯುತ್ತವೆ; ಕೌತುಕವನ್ನು ಹೆಚ್ಚಿಸುವಂತೆ ಆರಂಭ ವಾಗುತ್ತವೆ. ಈ ಮಾತಿಗೆ ಬಹು ಒಳ್ಳೆಯ ಉದಾಹರಣೆಗಳು ಸೀತಾಪ ಹರಣದ ಸಂದರ್ಭದಲ್ಲಿ ದೊರೆಯುತ್ತವೆ. ರಾಮನ ಆಶ್ರಮದ ಎದುರಿಗೆ ಮಾರೀಚನು ಬಂದು ಓಡಿಯಾಡುತ್ತಿದಾನೆ. ಇದನ್ನು ಹೇಳುತ್ತ ಸರ್ಗ ಈ ಶ್ಲೋಕದಿಂದ ಮುಗಿಯುತ್ತದೆ: ಅದೃಷ್ಟಪೂರ್ವಂ ತಂದೃಷ್ಟ್ವಾ ನಾನಾ ರತ್ನಮಯಂ ಮೃಗಂ ವಿಸ್ಮಯಂ ಪರಮಂ ಸೀತಾ ಜಗಾಮ ಜನಕಾತ್ಮಜಾ. ಇದು ಮುಂದಣ ಸರ್ಗದ ಮೊದಲ ಶ್ಲೋಕ: ಸಾ ತಂ ಸಂಪ್ರೇಕ್ಷ್ಯ ಸುಶ್ರೋಣೀ ಕುಸುಮಾನಿ ಅಪಚಿನ್ವತೀ ಹೈಮರಾಜತವರ್ಣಾಭ್ಯಾಂ

ಪಾರ್ಶ್ವಾಭ್ಯಾಂ ಉಪಶೋಭಿತಂ ಪ್ರಹೃಷ್ಟಾಚ ಅನವದ್ಯಾಂಗೀ ಮೃಷ್ಟ ಹಾಟಕ ವರ್ಣಿನೀ ಭರ್ತಾರಮಭಿಚಕ್ರಂದ ಲಕ್ಷ್ಮಣಂ ಚಾಪಿಸಾಯುಧಂ. ಮಾರೀಚನ ಹಿಂದೆ ಬಹುದೂರ ಹೋದ ರಾಮನು ಅವನು ಹಾಕಿದ ಮೋಸದ ಕೂಗನ್ನು ಕೇಳಿ ಈ ಸ್ವರದಿಂದ ಸೀತೆ ಏನಾಗುವಳೋ ಲಕ್ಷ್ಮಣ ನಿಗೆ ಎಷ್ಟು ಭಯವಾಗುವುದೋ ಎಂದುಕೊಂಡು: ತ್ವರಮಾಣೋ ಜನ ಸ್ಥಾನಂ ಸಸಾರ ಅಭಿಮುಖಃ ತದಾ. ಇಲ್ಲಿಗೆ ಸರ್ಗ ಮುಗಿಯುತ್ತದೆ. ಮಾರನೆಯ ಸರ್ಗದಲ್ಲಿ ಆರ್ತಸ್ವರಂ ತ್ವಿದಂ ಭರ್ತುಃ ವಿಜ್ಞಾಯ ಸದೃಶಂ ವನೇ ಉವಾಚ ಲಕ್ಷ್ಮಣಂ ಸೀತಾ ಗಚ್ಛ ಜಾನೀಹಿ ರಾಘವಂ. ರಾಕ್ಷಸರು ಇವರಿಗೆ ಕೆಡಕನ್ನು ಮಾಡಬೇಕೆಂದು ಹೊರಟಿರುವುದು ನಮಗೆ ತಿಳಿದಿದೆ. ಹೆಂಡತಿಗೂ ತಮ್ಮನಿಗೂ ಎಷ್ಟು ಭಯವಾಗುವುದೋ ಎಂದು ರಾಮನು ತಿಳಿದುಕೊಂಡದಕ್ಕೆ ತಕ್ಕಹಾಗೆ ಇಲ್ಲಿ ಇವರು ಹುಚ್ಚು ಹುಚ್ಚಾಗುತ್ತಾರೆ. ರಾವಣನು ಸೀತೆಯನ್ನು ಲಂಕೆಗೆ ಕರೆದುಕೊಂಡುಹೋದನು; ಅವಳು ತನಗೆ ವಶವಾಗದಿರಲು ಅವಳನ್ನು ಅಶೋಕವನದಲ್ಲಿಟ್ಟು ರಾಕ್ಷಸಿ ಯರನ್ನು ಕಾವಲಿರಿಸಿದನು; ಮೈಥಿಲಿ ಏನಾದಳು? ಶೋಕೇನ ಮಹತಾ ಗ್ರಸ್ತಾ ಮೈಥಿಲೀ ಜನಕಾತ್ಮಜಾ ನ ಶರ್ಮಲಭತೇ ಭೀರುಃ ಪಾಶಬದ್ಧಾ ಮೃಗೀಯಥಾ. ಸೀತೆಯನ್ನು ಇಲ್ಲಿ ಬಿಟ್ಟು ಮುಂದಣ ಸರ್ಗದಲ್ಲಿ ಕವಿ: ರಾಕ್ಷಸಂ ಮೃಗರೂಪೇಣ ಚರಂತಂ ಕಾಮರೂಪಿಣಂ ನಿಹತ್ಯ ರಾಮೋ ಮಾರೀಚಂ ತೂರ್ಣಂ ಪಥಿ ನಿವರ್ತತೇ ಎಂದು ಆರಂಭಿಸಿದ್ದಾನೆ. ಸೀತೆ ಯನ್ನು ಏನುಮಾಡಿದರೋ ಮತ್ತೇನು ಕಷ್ಟವಾಯಿತೋ ಎಂದು ನಾವು ಚಿಂತಿಸುತ್ತೇವೆ. ಕವಿ ಆ ಚಪಲವನ್ನು ಅಲ್ಲಿ ತೀರಿಸುವುದಿಲ್ಲ. ಅವನಿಗೆ ಉಳಿದ ಕೆಲಸ ಇದೆ; ಅದನ್ನು ಅವನು ಆರಂಭಿಸುತ್ತಾನೆ. ನಾವು ಸೀತೆಗಾಗಿ ಚಿಂತೆಮಾಡುವುದು ಅವನಿಗೆ ಇಷ್ಟವೇ. ಹನುಮಂತನು ಸೀತೆಯನ್ನು ಹುಡುಕುವಾಗ ಒಂದುಸಲ ಅಲ್ಲ ನಾಲ್ಕುಸಲ "ಆದರೆ ಸೀತೆ ಕಾಣಲಿಲ್ಲ" ಎಂಬ ಮಾತು ಬರುತ್ತದೆ. ಅರಮನೆಯಲ್ಲೆಲ್ಲ ಹುಡುಕಿದನು; ಸೀತೆ ಕಾಣಲಿಲ್ಲ. ಭೋಜನ ಮಂದಿರವನ್ನು ಸುತ್ತಿದನು; ಸೀತೆ ಕಾಣಲಿಲ್ಲ. ಶಯ್ಯಾಗೃಹದಲ್ಲಿ ನಿರುಕಿಸಿದನು; ಸೀತೆ ಕಾಣಲಿಲ್ಲ. ಹೀಗೆ ನೂರು ಶ್ಲೋಕಗಳ ಪಲ್ಲವಿ ಸೀತೆ ಕಾಣಲಿಲ್ಲ ಎನ್ನುವ ಮಾತು. ಈ ರೀತಿ

ಯಲ್ಲಿ ಕವಿ ಸರ್ಗಗಳ ಆರಂಭದಲ್ಲಿ ಸರ್ಗಗಳ ಕೊನೆಯಲ್ಲಿ ಕತೆ ಹೇಳುವ ಕೌಶಲವನ್ನು ಬೇಸರದೆ ಉಪಯೋಗಿಸಿದ್ದಾನೆ. ಸರ್ಗಗಳ ಒಳಗೆ ಕಥೆ ವಿಸ್ತಾರವಾಗಿದೆ; ಸಾವಧಾನವಾಗಿ ಹರಿಯುತ್ತದೆ. ರಾಮಾಯಣವನ್ನು ಪೂರ್ವದ ವಿಮರ್ಶಕನೊಬ್ಬನು ಮಹಾನದಿಯೆಂದು ಹೊಗಳಿದ್ದಾನೆ. ಇದು ಹರಿಯುವ ರೀತಿಯಲ್ಲಿ ಈ ಗುಣ ಚೆನ್ನಾಗಿ ಕಾಣುತ್ತದೆ. ಇದರ ಪ್ರವಾಹ ಗಂಗೆಯ ಪ್ರವಾಹದಂತೆ ವಿಶಾಲವಾದ ಶಯ್ಯೆಯಲ್ಲಿ ದಡದಿಂದ ದಡಕ್ಕೆ ತುಂಬಿ ಹರಿಯುತ್ತದೆ. ಕೆಲವುವೇಳೆ ಕಥೆ ನಡೆಯುವಂತೆಯೇ ಕಾಣುವುದಿಲ್ಲ. ಚಪ್ಪಟೆಯಾದ ಪ್ರದೇಶಕ್ಕೆ ಬಂದ ನದಿ ಹಿಂದಕ್ಕೆ ಹೋಗದೆ ಮುಂದಕ್ಕೂ ಹರಿಯದೆ ನಿಂತಿರುವಂತೆ ಕಾಣುವ ರೀತಿಯಲ್ಲಿ ವರ್ಣನೆಗಳಿಗೆ ಬಂದಾಗ ಕವಿ ತಾನು ಕಥೆ ಹೇಳುತ್ತಿರುವುದನ್ನು ಮರೆತು ಬರಿಯ ವರ್ಣನೆಯನ್ನು ಬರೆಯುತ್ತಿದೇನೆಂದು ತಿಳಿದಿದಾನೋ ಎಂಬ ಶಂಕೆ ಹುಟ್ಟುತ್ತದೆ. ಆದರೆ ನಿಜವಾಗಿ ಕವಿ ಏನನ್ನೂ ಮರೆತಿಲ್ಲ; ಮರೆವು ನಮ್ಮದು. ಅವನು ಮಹಾಕವಿಯೆನ್ನುವುದನ್ನೂ ಕಾವ್ಯ ಮಹಾಕಾವ್ಯ ಎನ್ನುವುದನ್ನೂ ನಾವು ಮರೆತಿರುತ್ತೇವೆ. ತೆಗೆದುಕೊಂಡ ವಿಷಯವನ್ನು ಸಂಪೂರ್ಣವಾಗಿ ವರ್ಣಿಸುವುದು ಈತನ ಕೆಲಸ. ನದಿ ಸಾಗರಕ್ಕೆ ಸೇರುತ್ತದೆ; ಆದರೆ ಅಲ್ಲಲ್ಲಿ ತಾನೇ ಸಾಗರದಂತೆ ಕಾಣುತ್ತದೆ, ಓಡು ವುದನ್ನು ತೋರುವುದಿಲ್ಲ. ಒಂದೊಂದು ವಿವರವನ್ನೂ ವರ್ಣಿಸುವ ಕಾರಣದಿಂದಲೇ ಈ ಕಥೆಯೂ ಈ ವರ್ಣನೆಯೂ ಇಷ್ಟು ವಿಸ್ತಾರವಾಗಿರು ವುದು. ಕಥನದಲ್ಲಿ ಈ ಕಲೆ ಶಿಲ್ಪದಲ್ಲಿ ಬೇಲೂರಿನ ದೇವಾಲಯದಂತೆ. ಏನಾಯಿತೆಂಬುದನ್ನು ಶೀಘ್ರವಾಗಿ ಹೇಳುವುದು ಕವಿಯ ಉದ್ದೇಶವಲ್ಲ. ನಾಯಕನೊಬ್ಬನನ್ನು ದೊಡ್ಡವನಾಗಿ ತೋರಿಸಿ ಅವನನ್ನು ನಿಲ್ಲಿಸು ವುದಕ್ಕಾಗಿ ಎಂಥದೋ ಕಟ್ಟಡವನ್ನು ಕಟ್ಟುವುದರಲ್ಲಿ ಇವನಿಗೆ ತೃಪ್ತಿ ಯಿಲ್ಲ. ಕಥೆಯ ನಾಯಕನು ಎಲ್ಲರಿಗಿಂತ ಶ್ರೇಷ್ಠ ವ್ಯಕ್ತಿಯೇ ಹೌದು. ಆದರೆ ಅವನನ್ನು ಪ್ರತಿಷ್ಠಿಸಿ ಇರಿಸುವ ಕಥೆಯ ಕಟ್ಟಡದಲ್ಲಿ ಒಂದೊಂದು ಅಂಗುಲದಲ್ಲಿಯೂ ಅವನ ಸಮೀಪದಲ್ಲಿ ನಿಲ್ಲಲು ಅರ್ಹವಾದ ಇತರ ಮೂರ್ತಿಗಳಿವೆ; ಅವನನ್ನು ನಿರ್ಮಿಸಿದ ಕೈವಾಡದ ಕಲ್ಪನೆಗಳಿವೆ. ಬರೆಯುವವನು ಇಲ್ಲಿ ಆತುರಪಡದೆ ಬರೆದಿದ್ದಾನೆ; ಓದುವವರೂ ಆತುರ

ಪಡದೆ ಓದಬೇಕು. ಬೇಲೂರಿನ ದೇವಾಲಯದ ಶಿಲ್ಪವನ್ನೆಲ್ಲಾ ನೋಡ ಬೇಕಾದರೆ ಹತ್ತಾರುಸಲ ಸ್ವಲ್ಪ ಸ್ವಲ್ಪವನ್ನು ನೋಡಿ ತಿಳಿಯಬೇಕಾದಂತೆ ಇಲ್ಲಿಯೂ ಒಂದೊಂದು ಸಲಕ್ಕೆ ಒಂದಿಷ್ಟಿಷ್ಟನ್ನು ರುಚಿ ನೋಡಿ ಸುಖ ಪಡಬೇಕು. ಹೀಗೆ ನೋಡಿದಲ್ಲದೆ ಇದರ ಸೊಗಸು ತಿಳಿಯುವುದಿಲ್ಲ. ಅಯೋಧ್ಯಾಕಾಂಡದ ಕಥೆಯ ಉದ್ದಕ್ಕೂ ಈ ವಿವರ ವಿವರವಾದ ಕಥನವು ಕಾಣುತ್ತಲೇ ಇರುತ್ತದೆ. ಇದರ ಸ್ವರೂಪ ತಿಳಿಯುವುದಕ್ಕೆ ಎರಡು ಮೂರು ಉದಾಹರಣೆಗಳನ್ನು ಹೇಳಬಹುದು. ರಾಮನು ನೆಲದಮೇಲೆ ಕುಳಿತು ತಂದೆಯ ತರ್ಪಣವನ್ನು ಮುಗಿಸಿದನು; ಅವನ ಬಟ್ಟೆ ದೂಳಾಯಿತು; ಅವನು ಬಂದು ತಾಯಿದಿರಿಗೆ ಆಮೇಲೆ ನಮಸ್ಕಾರ ಮಾಡಿದನು; ಅವರು ಆ ದೂಳನ್ನು ಕೊಡವಿದರಂತೆ. ರಾಮನು ಅರಣ್ಯ ದಲ್ಲಿ ಎಷ್ಟು ವರ್ಷವನ್ನು ಕಳೆದಮೇಲೆ ಶೂರ್ಪನಖಿಯ ಆಗಮನ? ವಾಲ್ಮೀಕಿ ಅವಳು ಬರುವುದಕ್ಕೆ ಸ್ವಲ್ಪ ಮೊದಲಲ್ಲಿ, ಇಲ್ಲಿ ಇಷ್ಟು ತಿಂಗಳು, ಅಲ್ಲಿ ಇಷ್ಟು ತಿಂಗಳು, ಇನ್ನೊಂದು ಕಡೆ ಇಷ್ಟು ಕಾಲ ಹೀಗೆ ಇವರು ಹತ್ತು ವರ್ಷವನ್ನು ಅರಣ್ಯದಲ್ಲಿ ಕಳೆದರೆಂದು ಹೇಳಿದ್ದಾನೆ. ಮಾರೀಚನು ಮೃಗವಾಗಿ ರಾಮನ ಆಶ್ರಮದ ಮುಂದೆ ಓಡಾಡಿದನಷ್ಟೆ. ಅಲ್ಲಿ ಇತರ ಮೃಗಗಳು ಇದ್ದವು; ಅವುಗಳ ಮಧ್ಯೆ ಇವನು ಸುಳಿದನು; ಅವು ಇವನನ್ನು ಮೂಸಿ ಮೃಗವಲ್ಲವೆಂದು ದೂರ ಹೋದವಂತೆ. ರಾಮನ ಜೊತೆಗೆ ಬಂದ ವಾನರ ನಾಯಕರು ಪಟ್ಟಾಭಿಷೇಕದ ಮೆರವಣಿಗೆಯಲ್ಲಿ ಆನೆಗಳಮೇಲೆ ಕುಳಿತು ಅರಸನ ಹಿಂದೆ ಹೋದರಂತೆ; ಅಲ್ಲಿ ಕೂರ ಬೇಕಾದರೆ ಮನುಷ್ಯ ವೇಷದಲ್ಲಿ ಕುಳಿತರಂತೆ. ಈ ವಿವರಗಳು ಕಥೆಯನ್ನು ಸಂಪೂರ್ತಿ ಮಾಡುತ್ತವೆ. ಇವು ಇಲ್ಲದಿದ್ದರೆ ಕಥೆ ಪೂರ್ಣವಾಗದೆ ಇರುತ್ತಿರಲಿಲ್ಲ; ಆದರೆ ಇವು ಇರುವುದರಿಂದ ಕವಿಯ ದೃಷ್ಟಿ ಎಷ್ಟು ಸಮಗ್ರವಾದದೆನ್ನುವುದು ತಿಳಿಯುತ್ತದೆ. ಇವು ಇಲ್ಲದಿದ್ದರೆ ಇಲ್ಲದೆ ಹೋದುವೇ ಎಂದು ನಾವು ಯಾರೂ ಹೇಳುತ್ತಿರಲಿಲ್ಲ. ಆದರೆ ವಾಲ್ಮೀಕಿಯ ದಿವ್ಯ ಶಿಲ್ಪದಲ್ಲಿ ಈ ಒಂದೊಂದು ಪದ್ಮದಳವೂ ಸೌಂದರ್ಯದ ಒಂದು ಕಳೆಯನ್ನು ಸಾಧಿಸುತ್ತದೆ.

ಕಂಡುಕೊಂಡನು. ಕಾವ್ಯದಲ್ಲಿ ಇಂಥ ಇಂಥ ರಸ ಇರುತ್ತದೆ, ಅದು ಹೀಗೆ ಇರಬೇಕು, ಎಂದು ನಿರೂಪಿಸುವ ಲಕ್ಷಣಶಾಸ್ತ್ರ ಇವನ ಕಾಲಕ್ಕೆ ಸೃಷ್ಟಿಯಾಗಿರಲಿಲ್ಲ. ವಾಲ್ಮೀಕಿಗೆ ಬಾಳುವೆಯಲ್ಲಿ ಬರುವ ಎಲ್ಲ ರಸಗಳೂ ಕಾವ್ಯದ ವಸ್ತುವಾಗಿವೆ. ಸೀತಾರಾಮರು ಅರಣ್ಯದಲ್ಲಿ ಜೊತೆಯಾಗಿ ನಡೆದ ಪಥದಲ್ಲಿ, ಆಮೇಲೆ ಅವರು ಬೇರೆ ಬೇರೆಯಾಗಿ, ಪಂಪಾ ತೀರದಲ್ಲಿ ರಾಮನೂ ಅಶೋಕವನದಲ್ಲಿ ಸೀತೆಯೂ ಹಲುಬುವುದರಲ್ಲಿ, ಶೃಂಗಾರರಸ ಉಕ್ಕಿ ಹರಿಯುತ್ತದೆ. ರಸ ಒಸರಬೇಕೆಂದು ದುಡಿದು ಸೋತು ಹೊಸದನ್ನು ಹೇಳುತ್ತೇವೆಂದು ಬರೆಯುವ ಆಯಾಸದ ಶೃಂಗಾರವೊಂದು ನಮ್ಮ ಕಾವ್ಯಗಳಲ್ಲಿ ಆಮೇಲೆ ವಾಡಿಕೆಗೆ ಬಂದಿತು. ಶೃಂಗಾರವೆಂಬುದು ಇಷ್ಟು ದೂರದ ವಿಷಯವಲ್ಲ. ನಾವು ಉಸಿರಾಡುವ ಗಾಳಿಯಂತೆ ಸೂರ್ಯನ ಬೆಳಕಿನಂತೆ ಎಲ್ಲ ಬಾಳುವೆಯಲ್ಲಿ ಇರತಕ್ಕ ರಸ ಅದು ಎನ್ನುವುದು ವಾಲ್ಮೀಕಿಯಲ್ಲಿ ಕಾಣುತ್ತದೆ. ಶೃಂಗಾರ ಇಲ್ಲಿ ಒಂದು ಸಲವಾದರೂ ಕದಡಿ ಬಗ್ಗಡವಾಗುವುದಿಲ್ಲ. ಗಂಡು ಹೆಣ್ಣಿನ ಪ್ರೇಮ ಜೀವನದಲ್ಲಿ ಬಹು ಮುಖ್ಯತತ್ತ್ವ. ಆದರೆ ಅದನ್ನು ನೀತಿವಿದರು ಗಂಭೀರ ವಾಗಿ ನಡೆಯಿಸಿಕೊಳ್ಳುತ್ತಾರೆ. ಕಾವ್ಯವೂ ಅದನ್ನು ಗಂಭೀರವಾಗಿ ನಡೆಯಿಸಿಕೊಂಡುಹೋಗಬೇಕು. ರಾಮನ ಚರಿತ್ರೆಯಲ್ಲಿ ವೀರರಸಕ್ಕೆ ಏನೂ ಕಡಮೆಯಿಲ್ಲ. ಕವಿ ಪ್ರಪಂಚದ ಜೀವನವನ್ನು ನೋಡಿ ಕರುಣೆ ಯಿಂದ ಕರಗಿ ನಮ್ಮ ಮನಸ್ಸನ್ನೂ ಕರಗಿಸಿದಾನೆ. ಶೂರ್ಪನಖಿಯ ಪ್ರಣಯದಲ್ಲಿ, ಕಾವಲ ರಾಕ್ಷಸಿಯರ ವರ್ಣನೆಯಲ್ಲಿ, ಬೀಭತ್ಸರಸ. ಯಾವ ವಿಷಯವನ್ನಾದರೂ ಈ ಕವಿ ಚೆನ್ನಾಗಿ ಪ್ರತಿಪಾದಿಸಬಲ್ಲನು. ಗಾಂಭೀರ್ಯವೇ ಮುಖ್ಯವಾದ ಇಂಥವನ ಸ್ವಭಾವದಲ್ಲಿ ಹಾಸ್ಯಕ್ಕೆ ಎಡೆ ಯಿರಲಾರದೆಂದು ನಾವು ಭಾವಿಸಬಹುದು; ಕವಿಯಲ್ಲಿ ಇದಕ್ಕೂ ಸ್ವಲ್ಪ ಸ್ಥಳವಿದೆ. ದಶರಥನು ಯಜ್ಞದಲ್ಲಿ ಭೋಜನಮಾಡಿಸಿದಾಗ ಬಹು ಜನ ಊಟಮಾಡಿದರಂತೆ. ''ಅನ್ನಂಹಿ ವಿಧಿವತ್ ಸ್ವಾದು ಪ್ರಶಂಸಂತಿ ದ್ವಿಜರ್ಷಭಾಃ.'' ಇಲ್ಲಿ ಊಟಮಾಡುವವರನ್ನು ದ್ವಿಜರ್ಷಭಾಃ ಎಂದು ಹೇಳಿರುವುದು ಎಷ್ಟು ಸಾರ್ಥಕ! ಯಜ್ಞದ ಬಹು ಕೆಲಸದಲ್ಲಿ ಬಹು ಜನ ತೊಡಗಿರಲಾಗಿ, ''ಕರ್ಮಾಂತರೇ ತದಾ ವಿಪ್ರಾ ಹೇತುವಾದಾನ್

ಬಹೂನಪಿ ಪ್ರಾಹುಸ್ಸ್ತ್ರವಾಗ್ಮಿನೋ ಧೀರಾಃ ಪರಸ್ಪರ ಜಿಗೀಷಯಾ.'' ಕವಿಗೆ ಹೇತುವಾದವೆಂದರೆ ಅಷ್ಟೇನೂ ಗೌರವವಿರಲಿಲ್ಲವೆಂದು ಕಾಣುತ್ತದೆ; ಅವನ ಕಾಲದ ಧೀರ ವಾಗ್ಮಿಗಳಿಗೆ ಇವನ ಕಾವ್ಯ ಹಗುರವೆಂದು ಕಂಡಿರ ಬೇಕು. ಇಲ್ಲಿ ಅಸೂಯೆಯಿಂದಲ್ಲ, ಸ್ನೇಹದ ನಗೆಯಿಂದ, ಅವನು ಅವರನ್ನು ಒಂದು ಮಾತಿನಲ್ಲಿ ಚಿತ್ರಿಸಿದಾನೆ. ಮಂಥರೆ ಕುಬ್ಜೆಯೆಂದು ಕಾವ್ಯದಲ್ಲಿ ವರ್ಣಿಸಿದೆ. ಅವಳು ಕೈಕಯಿಗೆ ವರ ಕೇಳುವ ಉಪಾಯವನ್ನು ಹೇಳಿಕೊಟ್ಟಾಗ ಕೈಕಯಿ ಅವಳನ್ನು ಮೆಚ್ಚಿಕೊಂಡು ಅವಳ ಕಣ್ಣು ಮೂಗು ಹೊಟ್ಟೆ ನಡು ಎಲ್ಲವನ್ನೂ ವರ್ಣಿಸುತ್ತಾಳೆ. ಮಂಥರೆಯನ್ನು ಮದುವೆಯಾಗುವ ತರುಣನೂ ಅವಳ ಸೌಂದರ್ಯವನ್ನು ಅಷ್ಟು ಹೊಗಳಿರಲಾರನು. ಪ್ರಪಂಚದ ಕುಬ್ಜೆಯರಲ್ಲೆಲ್ಲ ನೀನು ಬಹು ಚೆನ್ನು ಎಂದು ಕೈಕಯಿ ಅವಳನ್ನು ಪ್ರಶಂಸಿಸಿದಾಳೆ. ಅವಳು ಹೇಳಿದ್ದು ನಿಜವಾದ ಮೆಚ್ಚಿಗೆಯಿಂದ: ಕವಿಗೂ ನಮಗೂ ಮಂಥರೆಯ ಚೆನ್ನು ಕುಬ್ಜೆಯರಲ್ಲಿ ಹೆಚ್ಚಿನ ಚೆನ್ನು ನಿಜ ಎಂದು ಕಾಣುತ್ತದೆ. ಮಾರೀಚನು ರಾವಣನಿಗೆ ಸೀತಾಪಹರಣದ ಮಾತು ಬೇಡ ಎಂದು ಹೇಳಿದಾಗ ರಾವಣನು ಕೋಪ ಗೊಂಡು ನನ್ನ ಮಾತನ್ನು ಕೇಳದಿದ್ದರೆ ನಿನ್ನನ್ನು ಕೊಲ್ಲುತ್ತೇನೆಂದನು. ಮಾರೀಚನು ''ಆಗಲಿ ಹೋಗುತ್ತೇನೆ. ಆದರೆ ಇದರಿಂದ ನಿನಗೆ ಕೆಟ್ಟು ದಾಗುತ್ತದೆ. ನಾನಾದರೂ ಬದುಕುವಂತಿಲ್ಲ'' ಎಂದು ಹೇಳಿ, ''ಅನೇಕರು ಸಾಧುಗಳು ಇತರರ ಅಪರಾಧದಿಂದ ವಿನಾಶವಾದದುಂಟು. ಈಗ ನಿನ್ನ ಅಪರಾಧದಿಂದ ನಾನು ಕೆಡಬೇಕಾಗಿದೆ'' ಎನ್ನುತ್ತಾನೆ. ಆ ಸಾಧುಗಳು ಯುಕ್ತರು ಧರ್ಮನಿಷ್ಠರು; ಮಾರೀಚನು ತನ್ನನ್ನೇ ಯುಕ್ತನೆಂದೂ, ಧರ್ಮನಿಷ್ಠನೆಂದೂ ವರ್ಣಿಸಿಕೊಂಡಿರುವುದು ಬಹು ಚೆನ್ನಾಗಿದೆ. ಭರತನು ರಾಮನನ್ನು ಕರೆತರುವುದಕ್ಕೆ ಹೊರಟು ದಾರಿಯಲ್ಲಿ ಭರದ್ವಾಜನ ಆಶ್ರಮ ದಲ್ಲಿ ಆತಿಥ್ಯವನ್ನು ಪಡೆದನು. ಅವನ ಜೊತೆಗೆ ಹೋದ ಸೈನಿಕರು ಆ ದಿವ್ಯವಾದ ಔತಣವನ್ನು ಅನುಭವಿಸಿ ''ನಾವು ರಾಮನ ಬಳಿಗೂ ಹೋಗುವುದಿಲ್ಲ, ಅಯೋಧ್ಯೆಗೂ ಹಿಂತಿರುಗುವುದಿಲ್ಲ, ಇಲ್ಲಿಯೇ ಇರು ತ್ತೇವೆ'' ಎಂದರಂತೆ. ದಿವ್ಯವಾದ ಔತಣದಲ್ಲಿ ಅವರಿಗೆ ಸಾಕಾದಷ್ಟು ಮೈರೇಯ ದೊರೆತಿತ್ತು; ಜೊತೆಗೆ ಅಪ್ಸರೆಯರು. ಅವರಿಗೆ ಬೇರೆ ಏನೂ

ಬೇಕೆನಿಸಲಿಲ್ಲ. ಅಂಗದನೂ ಅವನ ಜೊತೆಯ ವಾನರರೂ ಸೀತೆಯನ್ನರ ಸುತ್ತ ಸಮುದ್ರದ ಇಕ್ಕರೆಯಲ್ಲಿ ಓಡಾಡುತ್ತಿರುವಾಗ ಅಂಗದನು ತಪಸ್ವಿನಲ್ಲಿ ಕುಳಿತಿದ್ದ ಭೀಕರ ರೂಪದ ವ್ಯಕ್ತಿಯೊಬ್ಬನನ್ನು ಕಂಡು ಇವನೇ ರಾವಣನಿರಬೇಕೆಂದು ಅವನನ್ನು ಗುದ್ದಿಕೊಂದನು. ಪಾಳೆಯಕ್ಕೆ ಬಂದು ಈ ಸಮಾಚಾರವನ್ನು ಹೇಳಲು ಎಲ್ಲರೂ ಹೋಗಿ ಹತನಾದ ವ್ಯಕ್ತಿಯನ್ನು ನೋಡಿ ರಾವಣನಲ್ಲವೆಂದು ನಿರ್ಧರಮಾಡಿದರು. ಹನುಮಂತನು ಮಂಡೋದರಿಯನ್ನು ನೋಡಿ ಸೀತೆಯೆಂದು ತಿಳಿದುಕೊಂಡ ವೇಳೆಯಲ್ಲಿ ಸೀತೆ ಸಿಕ್ಕಿರುವಳೆಂಬ ಆನಂದದಿಂದ ಕುಣಿದು ಕುಪ್ಪಳಿಸಿ ಹಾರಿ ನೆಗೆದು ತನ್ನ ಬಾಲವನ್ನು ತಾನೇ ಮುತ್ತಿಟ್ಟುಕೊಂಡನಂತೆ. ಮಾರೀಚನು ರಾಮನ ಆಶ್ರಮದ ಮುಂದೆ ಮೃಗಗಳ ಜೊತೆಗೆ ಓಡಾಡುತಿದ್ದಾಗ ಇವನು ಮೃಗವೆಂದು ಅವು ಹತ್ತಿರ ಬಂದವು. ಆಗ ಅವನಿಗೆ ಅವುಗಳನ್ನು ಹಿಡಿದು ತಿನ್ನಬೇಕೆಂದು ಆಸೆಯಾಯಿತಂತೆ. ಆದರೆ ತನ್ನ ವೇಷ ಬಯಲಾಗುವುದೆಂಬ ಕಾರಣಕ್ಕಾಗಿ ಅವನು ಆಸೆಯನ್ನು ತಡೆದುಕೊಂಡನು. ರಾಮನ ಬಾಣಕ್ಕೆ ಸಿಕ್ಕಿ ಜೀವವನ್ನು ಬಿಡಲು ಬಂದಿದ್ದ ಇವನಿಗೆ, ಪಾಪ, ಸುಲಭವಾಗಿ ಸಿಕ್ಕಿದ ಒಂದು ಮೃಗವನ್ನು ತಿಂದು ಸುಖಿಸಲು ಪುಣ್ಯವಿಲ್ಲದೆಹೋಯಿತು.

### ಕವಿಯ ಶಬ್ದಭಾಂಡಾರ, ಶೈಲಿ

ಈ ಕಥೆ ಈ ವರ್ಣನೆ ಎಲ್ಲವನ್ನೂ ಒಳಕೊಳ್ಳಬೇಕಾದರೆ ಕವಿಯ ಶಬ್ದಭಾಂಡಾರವೂ ಕಾವ್ಯರಚನಾ ಶಕ್ತಿಯೂ ಅಪಾರ ಅಮೋಘ ಅಸಾಧಾರಣವಾಗಿದ್ದುವೆಂದು ಹೇಳುವುದು ಅನವಶ್ಯಕ. ಈ ಕಾವ್ಯದ ಶಬ್ದ ಭಾಂಡಾರ ಸಾಗರದ ಜಲಭಾಂಡಾರದಂತೆ. ಅದಕ್ಕೆ ಪರಿಮಿತಿಯಿಲ್ಲ. ಊರಿನ ವರ್ಣನೆಗೆ, ಮನೆಯ ವರ್ಣನೆಗೆ, ನದಿಯ ವರ್ಣನೆಗೆ, ವನ ಪರ್ವತ ದೇಶದ ವರ್ಣನೆಗೆ ಎಲ್ಲಕ್ಕೂ ಇಲ್ಲಿ ಬಾಯಿತುಂಬ ಮಾತು ಪ್ರಯತ್ನವಿಲ್ಲದೆ ಒದಗಿದೆ. ವಾಲ್ಮೀಕಿ ವನದಲ್ಲಿದ್ದ ಮರಗಳನ್ನು ಹೇಳಬೇಕಾದರೆ ಎಂಟು ಹತ್ತು ಶ್ಲೋಕದಷ್ಟು ಹೆಸರುಗಳ ಸಾಲು ಬರುತ್ತದೆ. ಹಕ್ಕಿಗಳನ್ನು ಹೇಳಬೇಕಾದರೂ ಹೆಸರುಗಳ ಸಂಖ್ಯೆ ಹೀಗೆಯೇ. ಅವನು ಹೇಳಿದ ಮರಗಳನ್ನೂ ಹಕ್ಕಿಗಳನ್ನೂ ಗುರುತಿಸಬೇಕಾದರೆ ಆಯಾ ಶಾಸ್ತ್ರದ ಪಂಡಿತರೇ ಬರಬೇಕು. ಆಗಲಾದರೂ ಅವನ್ನು ಮೊದಲಿಂದ ಕೊನೆಯವರೆಗೆ ಗುರು

ತಿಸುವುದು ಸಾಧ್ಯವೇ ಎನ್ನುವುದು ಸಂದೇಹವೇ. ಈ ಕಾವ್ಯದ ಮಾತಿನ ಔಚಿತ್ಯವೂ ಬಹು ಹಿರಿಯ ರೀತಿಯದು. ಸಹಧರ್ಮಚರೀ, ತಾಮ್ರೋಷ್ಠೀ, ವಿಪುಲವಕ್ಷಸಂ, ಶುಚಿಸ್ಮಿತಾ, ಸತ್ಯಸಂಗರಃ : ಈ ರೀತಿಯಾಗಿ ಒಂದೊಂದು ಮಾತಿನಲ್ಲಿ ಒಬ್ಬೊಬ್ಬ ವ್ಯಕ್ತಿಯ ಸ್ವರೂಪ ವ್ಯಕ್ತವಾಗುತ್ತದೆ. ಇಂಥ ಮಾತುಗಳ ಸೊಗಸೂ ಬಹು ಸೊಗಸು. ಮಾರೀಚನ ಆಶ್ರಮವನ್ನು ರಾವಣನು ನೋಡಿದನಂತೆ: ದದರ್ಶ ಆಶ್ರಮಮೇಕಾಂತೇ ರಮ್ಯೇ ಪುಣ್ಯೇವನಾಂತರೇ. ರಾಮನು ಕೋಸಲವನ್ನು ದಾಟಿ ಹೋದನಂತೆ. "ವಿಶಾಲಾನ್ ಕೋಸಲಾನ್ ರಮ್ಯಾನ್‌ಯಾತ್ವಾ ಲಕ್ಷ್ಮಣ ಪೂರ್ವಜಃ." ಮಾತಿನಲ್ಲಿಯೇ ದೂರ ಸ್ಪಷ್ಟವಾಗುತ್ತದೆ. ಕೋಸಲಗಳ ವರ್ಣನೆಯ ಈ ಶ್ಲೋಕಗಳೂ ಚೆನ್ನ. "ಉದ್ಯಾನಾಮ್ರವಣೋಪೇತಾನ್ ಸಂಪನ್ನ ಸಲಿಲಾಶಯಾನ್ ಹೃಷ್ಟಪುಷ್ಟ ಜನಾಕೀರ್ಣಾನ್ ಗೋಕುಲಾಕುಲ ಸೇವಿ ತಾನ್ ರಥೇನ ಪುರುಷವ್ಯಾಘ್ರಃ ಕೋಸಲಾನತ್ಯವರ್ತತ." ಮಾತಿನ ಸೊಗಸಿಗೆ ಇನ್ನೆರಡು ಉದಾಹರಣೆಯನ್ನು ಕೊಡಬಹುದು. "ಸಾರ ಸಾರವಸನ್ನಾದೈಃ ಸಾರಸಾರವನಾದಿನೀ ಯಾಶ್ರಮೇ ರಮತೇ ಬಾಲಾ ಸಾದ್ಯಮೇ ರಮತೇ ಕಥಂ." ಗಂಗೆ ಭೂಮಿಗೆ ಇಳಿದದನ್ನು ದೇವರ್ಷಿ ಗಳು ಗಂಧರ್ವರು ಯಕ್ಷರು ನೋಡಿದರೆಂಬಲ್ಲಿ—ಈ ಭಾಗ ಪ್ರಕ್ಷಿಪ್ತವಲ್ಲದೆ ಇದ್ದರೆ—ಕವಿ ಮಾತಿನಲ್ಲಿ ಆಯಿತೆಂದು ಹೇಳುವ ವಿಷಯವನ್ನು ಶಬ್ದದಿಂದ ಅನುಕರಣ ಮಾಡಿದ್ದಾನೆ. ತತೋ ದೇವರ್ಷಿಗಂಧರ್ವಾಃ ಯಕ್ಷಾಸ್ಸಿದ್ಧ ಗಣಾಃ ತದಾ ವ್ಯಲೋಕಯಂತೇ ತಾಂ ತತ್ರ ಗಗನಾತ್ ಗಾಂಗತಾಂ ತಥಾ. ಇದುವರೆಗೆ ಉದ್ಧರಿಸಿರುವ ಶ್ಲೋಕದಲ್ಲೆಲ್ಲ ಕವಿಯ ಶೈಲಿಯ ಸ್ವರೂಪ ಸ್ಪಷ್ಟವಾಗಿರಬೇಕು. ಆದರೂ ಶೈಲಿಗೇ ಉದಾಹರಣೆಯಾಗಿ ಒಂದು ಸಂದರ್ಭದಿಂದ ಶ್ಲೋಕಗಳನ್ನು ಉದ್ಧರಿಸಬಹುದು. ವಿಶಾಲವಾದ ಕೋಸಲ ರಾಜ್ಯಗಳನ್ನು ದಾಟಿ ಸೀತಾರಾಮ ಲಕ್ಷ್ಮಣರು ಗಂಗೆಯನ್ನು ಸಾರಿದರು. "ತತಸ್ತ್ರಿಪಥಗಾಂ ದಿವ್ಯಾಂ ಶಿವತೋಯಾಮಶೈವಲಾಂ ದದರ್ಶ ರಾಘವೋ ಗಂಗಾಂ ಪುಣ್ಯಾಂ ಋಷಿನಿಷೇವಿತಾಂ. ಆಶ್ರಮೈರ ವಿದೂರಸ್ಥೈಃ ಶ್ರೀಮದ್ಭಿಃ ಸಮಲಂಕೃತಾಂ ಕಾಲೇಪ್ಸರೋಭಿಃ ಹೃಷ್ಟಾಭಿಃ ಸೇವಿತಾಂಭೋಹ್ರದಾಂ ಶಿವಾಂ. ದೇವದಾನವ ಗಂಧರ್ವೈಃ ಕಿನ್ನರೈ

ರುಪಶೋಭಿತಾಂ. .ಜಲಾಘಾತಾಟ್ಟಹಾಸೋಗ್ರಾಂ ಫೇನನಿರ್ಮಲಹಾಸಿನೀಂ ಕ್ವಚಿದ್ವೇಣೀಕೃತಜಲಾಂ ಕ್ವಚಿದಾವರ್ತಶೋಭಿತಾಂ ಕ್ವಚಿತ್‌ಸ್ತಿಮಿತ ಗಂಭೀರಾಂ ಕ್ವಚಿತ್‌ವೇಗಜಲಾಕುಲಾಂ ಕ್ವಚಿತ್‌ಗಂಭೀರ ನಿರ್ಘೋಷಾಂ ಕ್ವಚಿತ್ ಭೈರವನಿಸ್ವನಾಂ ದೇವಸಂಘಾಪ್ಲುತಜಲಾಂ ನಿರ್ಮಲೋತ್ಪಲ ಶೋಭಿತಾಂ ಕ್ವಚಿದಾಭೋಗಪುಳಿನಾಂ ಕ್ವಚಿನ್ನಿರ್ಮಲವಾಲುಕಾಂ. ಹಂಸ ಸಾರಸ ಸಂಘುಷ್ಟಾಂ ಚಕ್ರವಾಕೋಪ ಕೂಜಿತಾಂ. . . . ಫಲೈಃ ಪುಷ್ಪೈಃ ಕಿಸಲಯೈಃ ವೃತಾಂ ಗುಲ್ಮೈಃ ದ್ವಿಜೈಸ್ತಥಾ. . . . ವಿಷ್ಣುಪಾದಚ್ಯುತಾಂ ದಿವ್ಯಾಂ ಅಪಾಪಾಂ ಪಾಪನಾಶಿನೀಂ.'' ಇಲ್ಲಿ ಅರ್ಥ ಬಹು ಚೆನ್ನಾಗಿದೆ. ಆದರೆ ಮಾತಿನ ಸೊಗಸೇ ಮುಗಿಲನ್ನು ಮುಟ್ಟಿದೆ. ಮಹಾಕಾವ್ಯದಿಂದ ಹತ್ತು ಪಂಕ್ತಿಯನ್ನು ತೆಗೆದು ಕವಿಯ ಮಾತಿನ ಸೊಗಸಿಗೆ ಉದಾಹರಣೆ ಗಳನ್ನು ಕೊಟ್ಟೆವೆನ್ನುವುದು ಸರಿಯಾಗಲಾರದು. ಇಲ್ಲಿ ಶಬ್ದದ ಸೌಂದರ್ಯ ಸಾವಿರ ರೀತಿ ಇರುತ್ತದೆ. ಅದನ್ನು ಪರೀಕ್ಷಿಸುವುದೇ ಒಂದು ದೊಡ್ಡ ಉಪನ್ಯಾಸಕ್ಕೆ ವಿಷಯ. ಇಲ್ಲಿ ಹೇಳಿರುವ ನಾಲ್ಕು ಮಾತು ಈ ವಿಷಯವನ್ನು ಸೂಚಿಸುವುದೆಷ್ಟೋ ಅಷ್ಟೆ.

### ವಾಲ್ಮೀಕಿಯ ಉಪಮೆ ; ಇತರ ಅಲಂಕಾರಗಳು

ಈ ಸಂದರ್ಭದಲ್ಲಿ ವಾಲ್ಮೀಕಿಯ ಉಪಮೆಗಳನ್ನು ಕುರಿತು ಎರಡು ಮಾತನ್ನು ಹೇಳಬೇಕು. ಉಪಮೆಯೆಂದರೆ ಮುಖ್ಯವಾಗಿ ಒಂದು ವಸ್ತು ಮತ್ತೊಂದು ವಸ್ತುವಿನಂತೆ ಇದ್ದಿತು ಎಂದು ಹೇಳುವುದು. ಕಣ್ಣು ಕಮಲ ದಂತೆ, ಮುಖ ಚಂದ್ರನಂತೆ, ಆಕಾಶವೂ ಅದರಲ್ಲಿಯ ನಕ್ಷತ್ರಗಳೂ ಸರೋವರವೂ ಅದರಲ್ಲಿಯ ಹೂಗಳೂ ಹೇಗೋ ಹಾಗೆ. ಇಂಥ ಉಪಮೆಗಳು ಈ ಕಾವ್ಯದಲ್ಲಿ ಸದಾ ಬರುತ್ತಲೇ ಇರುತ್ತವೆ. ಆದರೆ ಉಪಮೆಯ ಮುಖ್ಯವಾದ ಸೊಗಸು ಈ ರೀತಿಯ ಸ್ಪಷ್ಟವಾದ ಹೋಲಿಕೆಯಲ್ಲಿ ಕಾಣುವುದಿಲ್ಲ. ಒಂದು ವಸ್ತುವಿನಂತೆ ಇನ್ನೊಂದು ವಸ್ತು ಇದೆ ಎನ್ನುವುದಕ್ಕೆ ಪ್ರತಿಯಾಗಿ, ಒಂದು ಸಂದರ್ಭದಂತೆ ಇನ್ನೊಂದು ಸಂದರ್ಭ ಎನ್ನುವಲ್ಲಿ ಅಸಾಧಾರಣವಾದ ಚಮತ್ಕೃತಿ ಕಂಡು ಓದುವವರಿಗೆ ಆಹ್ಲಾದ ಉಂಟಾಗುತ್ತದೆ. ಸಂದರ್ಭ ವಿಸ್ತಾರವಾದಷ್ಟೂ, ಹೋಲಿಕೆಯ ಅಂಶಗಳು ಹೆಚ್ಚಾದಷ್ಟೂ, ಸಂದರ್ಭಗಳು ಒಂದು ಆವರಣದವು ಅಲ್ಲದೆ ಬೇರೆ ಬೇರೆಯ

ಆವರಣದವು ಆದಷ್ಟೂ, ಈ ಆಹ್ಲಾದ ಹೆಚ್ಚುತ್ತದೆ. ವಾಲ್ಮೀಕಿಯಲ್ಲಿ ಈ ರೀತಿಯ ವಿಸ್ತಾರವಾದ ಅನೇಕದೇಶ ಸದೃಶವಾದ ಪರಸ್ಪರ ದೂರವಾದ ವಸ್ತುಗಳ ಹೋಲಿಕೆ ನಿರಾಯಾಸವಾಗಿ ವಿಪುಲವಾಗಿ ಉಕ್ತವಾಗಿದೆ. ರಾಮನ ಬಳಿಗೆ ಬರುವ ಕೌಸಲ್ಯೆಯನ್ನು ಕವಿ ಮರಿಯ ಬಳಿಗೆ ಬರುವ ಹೆಣ್ಣು ಕುದುರೆಯಂತೆ ಎಂದು ಹೇಳುತ್ತಾನೆ. ಇಲ್ಲಿ ತಾಯಿತನ ಮುಖ್ಯ ವಲ್ಲ, ಮಮತೆಯ ವಿಭ್ರಮ ಮುಖ್ಯ. ಮತ್ತೊಂದು ಸಂದರ್ಭದಲ್ಲಿ ಕವಿ ಅವಳನ್ನು ಕರುವನ್ನು ಕಾಣದ ಹಸುವಿಗೆ ಹೋಲಿಸಿದಾನೆ. ಇಲ್ಲಿ ಮಗುವಿಗಾಗಿ ಹಲುಬುವುದು ವಿಷಯ. ಹೀಗೆ ಸಂದರ್ಭಕ್ಕೆ ತಕ್ಕಹಾಗೆ ತಾಯಿತನದ ಒಂದೊಂದು ಲಕ್ಷಣಕ್ಕೆ ಒಪ್ಪುವ ಹೋಲಿಕೆಯನ್ನು ಕವಿ ಉಪಯೋಗಿಸಿದಾನೆ. ಸುಮಿತ್ರಾದೇವಿ, ನಿನ್ನ ಮಗನು ಮರಳಿ ಬಂದು ನಿನ್ನ ಕಾಲಿಗೆ ನಮಸ್ಕರಿಸುತ್ತಾನೆ, ನೀನು ಸಂತೋಷದಿಂದ ಸುರಿಸುವ ಕಣ್ಣೀರು ಅವನಮೇಲೆ ಬೀಳುತ್ತದೆ, ಎಂದು ಕೌಸಲ್ಯೆಗೆ ಹೇಳುತ್ತ ಮೇಘರಾಜಿ ಅಚಲವನ್ನು ಸಂಪ್ರೋಕ್ಷಿಸುವಂತೆ ಅವನನ್ನು ಸಂಪ್ರೋಕ್ಷಿಸುವೆ ಎನ್ನುತ್ತಾಳೆ. ಕುಂದಿಲ್ಲದೆ ಕೊರೆಯಿಲ್ಲದೆ ಧೀರವಾಗಿ ನಮ್ರವಾದ ಅಚಲ ರಾಮ; ಅದರಮೇಲೆ ಮಮತೆಯಿಂದ ಬಾಗಿ ಕರಗುವ ಮೋಡದಂತೆ ಈ ತಾಯಿ: ಈ ಚಿತ್ರ ಈ ಸಂದರ್ಭದಲ್ಲಿ ಬಹು ಸುಂದರವಾಗಿ ಕಾಣುತ್ತದೆ. ಇವಳ ಸಮಾಧಾನದ ಮಾತನ್ನು ಕೇಳಿ ಕೌಸಲ್ಯೆ ಶರತ್ಕಾಲದ ಮೇಘದಂತೆ ಅಲ್ಪತೋಯಳಾದಳಂತೆ. ಸಾಕಾದಷ್ಟು ನೀರನ್ನು ಸುರಿಸಿ ಮೋಡ ಸೋರುವುದನ್ನು ಕಡಿಮೆ ಮಾಡಿದೆ. ಉಳಿದಿರುವುದಾದರೂ ಇನ್ನಷ್ಟು ಕಣ್ಣೀರೇ: ಜೀವ ಸ್ವಲ್ಪ ಇರಲಿ ಎನ್ನುವುದಕ್ಕಾಗಿ ಕರಗದೆ ಉಳಿದಿದೆ. ರಾಮನೊಡನೆ ಧನಧಾನ್ಯ ಪರಿವಾರ ಹೋಗಕೂಡದೆನ್ನುವಾಗ ಕೈಕಯೀದೇವಿ ತನ್ನ ಮಗನು ಇದು ಯಾವುದೂ ಇಲ್ಲದ ರಾಜ್ಯವನ್ನು ಸಾರವನ್ನು ಪಾನಮಾಡಿದಮೇಲ್ ಉಳಿಯುವ ಸುರೆಯಂತೆ ಅನುಭವಿಸಲಾಗದು ಎನ್ನುತ್ತಾಳೆ. ಅಯೋಧ್ಯೆಯ ಸ್ತ್ರೀಯರು ರಾಮನು ಅರಣ್ಯಕ್ಕೆ ಹೊರಟಾಗ ವ್ಯಥೆಯ ಉದ್ವೇಗದಿಂದ ಕಣ್ಣುಹನಿ ಹಾಕಿದರಂತೆ. ನೀರೊಳಗೆ ಏಡಿ ನಾಳವನ್ನು ಒತ್ತಲು ಕಮಲದಿಂದ ಉದುರುವ ಹನಿಗಳಂತೆ ಇದ್ದುವಂತೆ ಆ ಹನಿಗಳು. ಹೃದಯನಾಳದಲ್ಲಿ

ವ್ಯಥೆಯ ಏಡಿ ಒತ್ತಿದ್ದರಿಂದ ಇವರ ಕಣ್ಣಾಕಮಲದಿಂದ ನೀರು ಉದುರಿತು. ಇವರು ತುಂಬ ಅಳಲಿಲ್ಲ; ಯಾರಾದರೂ ಹೊರಟುಹೋಗುವಾಗ ಹಾಗೆ ಅಳುವುದು ಸರಿಯಲ್ಲ. ಸುಖವಾಗಿ ಹಿಂದಕ್ಕೆ ಬರಲಿ ಎನ್ನುವವರು ಇಂಥ ಸಂದರ್ಭದಲ್ಲಿ ದುಃಖವನ್ನು ತಡೆದುಕೊಳ್ಳಬೇಕು. ಆದರೆ ಎಷ್ಟು ತಡೆದರೂ ನೋವು ಎದೆಯನ್ನು ಅಲುಗಿಸದೆ ಬಿಡುವುದಿಲ್ಲ; ಆ ಕಣ್ಣಿಂದ ಎರಡು ಹನಿ ಉದುರುವುದು. ಸೀತಾದೇವಿ ಅರಣ್ಯಕ್ಕೆ ಹೊರಡುವ ಮೊದಲು ತನಗೆ ತಂದುಕೊಟ್ಟ ವಲ್ಕಲವನ್ನು ಪೃಷತಿ ವಾಗುರವನ್ನು ನೋಡುವಂತೆ ನೋಡಿದಳಂತೆ. ಸೀತೆ ಜಿಂಕೆಯಂತೆ; ವಲ್ಕಲ ಬಲೆಯಂತೆ. ಸೀತೆ ಜಿಂಕೆಯಂತೆ ಕಂಡದ್ದು ಮುಖ್ಯವಾಗಿ ಭಯದಿಂದ; ಅದನ್ನು ತೋರಿಸುವ ಕಣ್ಣಿಂದ. ಯಾವಾಗಲೂ ಎರಳೆಯ ಕಣ್ಣು ದೊಡ್ಡದೇ; ಭಯಪಟ್ಟಾಗ ಅದು ಇನ್ನೂ ದೊಡ್ಡದು. ಕವಿ ಸೀತೆ ವಲ್ಕಲವನ್ನು ನೋಡಿದಳು ಎಂದು ಒಂದು ಸಂಗತಿಯನ್ನು ಹೇಳುತ್ತಾನೆ; ಆದರೆ ಅವನ ಉದ್ದೇಶ ಸೀತೆಯನ್ನು ನೋಡಿ ಎನ್ನುವುದು. ಇಲ್ಲಿ ಒಂದು ಧ್ವನಿ ಕೂಡ ಅಡಗಿದೆ: ಸೀತೆಗೆ ವನವಾಸ, ಬೇಟೆಯ ಮೃಗಕ್ಕೆ ಬಲೆಯಂತೆ, ಸೆರೆಯಾಗಿ ಪರಿಣಮಿಸಿತು. ಈ ರೀತಿಯ ಧ್ವನಿ ವಾಲ್ಮೀಕಿಯಲ್ಲಿ ಬಹು ಸಾಧಾರಣ. ಸೀತಾದೇವಿಯನ್ನು ತೊಡೆಯಲ್ಲಿ ಕೂರಿಸಿಕೊಂಡು ನಭಕ್ಕೆ ಹಾರಿದ ರಾವಣನು ಮಿಂಚಿನಿಂದ ಹೊಳೆಯುವ ಮೋಡದಂತೆ, ಕಾಡುಕಿಚ್ಚಿನಿಂದ ತೊಳಗುವ ಮಲೆಯಕಾಡಂತೆ, ಕಂಡನಂತೆ. ಈ ಎರಡು ಚಿತ್ರಗಳು ಚಿತ್ರಗಳಾಗಿಯೇ ಮನೋಜ್ಞವಾಗಿವೆ; ಆದರೆ ಅವು ಸಾರ್ಥಕವಾಗುವುದು ರಾವಣನು ಏನಾಗುವನೆಂದು ಸೂಚಿಸುವುದರಿಂದ. ಮಿಂಚುವ ಮೋಡ ಸ್ವಲ್ಪದರಲ್ಲೇ ಮಳೆಯಾಗಿ ಕರಗುತ್ತದೆ; ಬೆಂಕಿಬಿದ್ದ ಪರ್ವತಕಾನನ ಆ ಬೆಂಕಿಯಿಂದ ಸುಡುತ್ತದೆ. ಮೋಡಕ್ಕೆ ಮಿಂಚಾಗಲಿ, ಮಲೆಯಕಾಡಿಗೆ ಉರಿಯಾಗಲಿ, ನಿಜವಾಗಿ ಭೂಷಣವಲ್ಲ, ಒಳ್ಳೆಯದಕ್ಕೆ ಅಡಸುವುದಿಲ್ಲ. ರಾಮಲಕ್ಷ್ಮಣರಿಲ್ಲದ ಹೊತ್ತಿನಲ್ಲಿ ಸೀತೆಯ ಬಳಿಗೆ ಬಂದ ರಾವಣನನ್ನು ಕವಿ ಸೂರ್ಯಚಂದ್ರರಿಲ್ಲದ ವೇಳೆಯಲ್ಲಿ ಸಂಜೆಯ ಬಳಿಗೆ ಬರುವ ರಾಹು ಎಂದು ಹೇಳಿದಾನೆ. ಸೀತೆ ರಾವಣನಿಗೆ "ರಾಮನೊಂದಿಗೆ ನೀನು ಯುದ್ಧಮಾಡುವುದು ಹಾಗಿರಲಿ, ಅವನ ಹತ್ತಿರ

ನಿಲ್ಲಲಾರೆ. ಹುಲಿಯ ವಾಸನೆಯನ್ನು ತಡೆಯಲಾರದೆ ಓಡುವ ನಾಯಂತೆ ಅವನ ಸನ್ನಿಧಿಯಿಂದ ಓಡುವೆ" ಎನ್ನುತ್ತಾಳೆ. ಹುಲಿಯಿರುವ ಕಾಡಿನಲ್ಲಿ ನಾಯೊಂದಿಗೆ ಹೋದವರು ಈ ಉಪಮೆಯ ಅರ್ಥವನ್ನು ತಿಳಿಯುವರು. ಒಡೆಯನ ಹಿಂದೆ ಮುಂದೆ ಹೋಗುತ್ತ ಬರುತ್ತ ಪೊದೆಯಲ್ಲಿ ಪೊಟ್ಟರೆಯಲ್ಲಿ ಇಣಿಕಿನೋಡುತ್ತ ಅಳಿಲು ಗುಬ್ಬಚ್ಚಿಯನ್ನು ಬೆದರಿಸುತ್ತ ಉಲ್ಲಾಸದಿಂದಿರುವ ನಾಯಿ ಇದ್ದದಿದ್ದಹಾಗೆ ಒಮ್ಮೆ ಬಾಲವನ್ನು ಮುದುರಿಕೊಂಡು ಓಡಿಬಂದು ಒಡೆಯನ ಹಿಮ್ಮಡಿಯನ್ನು ಬಿಡದೆ ಜೊತೆಗೆ ನಡೆಯುತ್ತದೆ. ಒಡೆಯನು ಇದರಿಂದ ಇಲ್ಲಿ ಹತ್ತಿರದಲ್ಲಿ ಇಷ್ಟರಲ್ಲಿ ಯಾವಾಗಲೋ ಹುಲಿ ಹೋಗಿರುವುದೆಂದು ತಿಳಿಯುತ್ತಾನೆ. ಅದು ಹೋದ ದಾರಿಯಲ್ಲಿ ಅದರ ಮೈಗಂಧ ಒಂದು ಗೆರೆಯಂತೆ ಬಿದ್ದಿರುತ್ತದೆ; ಅದರ ಎಲ್ಲೆಯಲ್ಲಿ ನಾಯಿ ತಲೆಯನ್ನು ತಗ್ಗಿಸುತ್ತದೆ. ತುಂಬ ಅಲಂಕಾರವನ್ನು ಮಾಡಿಕೊಂಡು ಸೀತೆಯ ಬಳಿಗೆ ಬಂದ ರಾವಣನು ಅಲಂಕೃತನಾದರೂ ಜನರನ್ನು ಆಕರ್ಷಿಸುವಂತೆ ಇರಲಿಲ್ಲವಂತೆ: ಸ್ಮಶಾನದ ದೇವಾಲಯದಂತೆ. ಹಾಗೆಯೇ ಕ್ರೂರನಾದ ರಾಜನು ಪ್ರಜೆಗಳಿಗೆ ಸ್ಮಶಾನದ ಅಗ್ನಿಯಂತೆ ಇರುತ್ತಾನಂತೆ. ಜನರು ಅವನಿಗೆ ತಗ್ಗುವರು; ಆದರೆ ಅವನಿಂದ ಅವರಿಗೆ ಪ್ರಯೋಜನವಿಲ್ಲ. ಸ್ಮಶಾನದ ಅಗ್ನಿಯಲ್ಲಿ ಯಾರೂ ಮೈಕಾಸಿಕೊಳ್ಳುವುದಿಲ್ಲ; ಅದರಿಂದ ಯಾರ ಮನೆಯ ದೀಪವನ್ನೂ ಹಚ್ಚುವುದಿಲ್ಲ; ಅದರ ಕೆಂಡದಲ್ಲಿ ಯಾರೂ ರೊಟ್ಟಿ ಸುಟ್ಟು ತಿನ್ನುವುದಿಲ್ಲ. ಸೀತಾದೇವಿ ರಾವಣನ ಅಶೋಕವನವನ್ನು ಸೇರಿ ಅರ್ಥಾಂತರವನ್ನು ಸೇರಿದ ಮಾತಿನಂತೆ ಆದಳಂತೆ. ಉಚ್ಚಾರಣೆಯಿಂದ ಉದ್ಧಾರ ಮಾಡುವ ನಾಮ ಎಂಬಲ್ಲಿಯ ನಾಮವೂ ಒಬ್ಬನು ಇನ್ನೊಬ್ಬನಿಗೆ ನಾಮ ಹಾಕಿದನು ಎಂಬಲ್ಲಿಯ ನಾಮವೂ ಒಂದೇ ಮಾತು. ಹರಿಯ ನಾಮ ಎಂಬ ಅರ್ಥವನ್ನು ಕಳೆದುಕೊಂಡು ಮೋಸ ಎಂಬ ಅರ್ಥಕ್ಕೆ ಬಂದ ಈ ಮಾತಿನಂತೆ ಸೀತೆ ಉತ್ತಮ ಪದವಿಯಿಂದ ಈ ದುರ್ಗತಿಗೆ ಬಂದಳು. ಮನುಷ್ಯನು ತನ್ನ ಮನಸ್ಸಿನಲ್ಲಿ ಶೋಕಕ್ಕೆ ಎಡೆಗೊಡಬಾರದು; ಕೊಟ್ಟರೆ ನೀರು ಒಳಕ್ಕೆ ಬರಲು ಅವಕಾಶ ಕೊಟ್ಟ ನಾವೆಯಂತೆ ಅವನು ಮುಳುಗಿಹೋಗುವನು. ಈ ಉಪಮೆಯ ಸೊಗಸು ಯೋಚಿಸಿದಷ್ಟೂ

ಚೆನ್ನಾಗಿ ತಿಳಿಯುವುದು. ಹನುಮಂತನು ಆಡಿಸಿದ ಪುಷ್ಪವೃಕ್ಷದಿಂದ ಹೂವೆಲ್ಲ ಉದುರಿ ಅದು ಬರಿದಾಗಿ ಕಂಡಿತಂತೆ: ಆಟದಲ್ಲಿ ಎಲ್ಲವನ್ನೂ ಕಳೆದುಕೊಂಡ ಜೂಜುಗಾರನಂತೆ. ಹನುಮಂತನು ಸೀತಾದೇವಿಯನ್ನು ಬೆನ್ನಮೇಲೆ ಕೂರಿಸಿಕೊಂಡು ರಾಮನ ಬಳಿಗೆ ಕರೆದುಕೊಂಡು ಹೋಗುತ್ತೇನೆ ಎಂದು ಹೇಳುವಲ್ಲಿ, ಪಾವಕನು ಹವಿಸ್ಸನ್ನು ಶಕ್ರನಿಗೆ ತೆಗೆದುಕೊಂಡು ಹೋಗಿ ಕೊಡುವಂತೆ ಎನ್ನುತ್ತಾನೆ. ಹವಿಸ್ಸೇ ಶುದ್ಧ. ಅದು ಶಕ್ರನ ಭಾಗ. ಪಾವಕನು ಅದನ್ನು ತೆಗೆದುಕೊಂಡುಹೋಗುವುದೆಷ್ಟೋ ಅಷ್ಟೆ. ಅವನಲ್ಲಿ ಕಲ್ಮಷವಿಲ್ಲ; ಅವನು ಕಲ್ಮಷವನ್ನು ಪರಿಹರಿಸುವವನು; ಅವನ ಸಂಪರ್ಕದಿಂದ ಯಾವುದಾದರೂ ಮತ್ತಷ್ಟು ಪಾವನವಾಗುವುದು. ಅವನು ತನ್ನ ಕೆಲಸದಲ್ಲಿ ಎಂದೂ ಜಯಶಾಲಿ. ಅವನು ಶಕ್ರನಿಗೆ ಸೇವಕನು; ತಾನೂ ಮಹಾತ್ಮನು; ಅವನ ಸಮೀಪದ ದಿಕ್ಕಿನಲ್ಲಿಯೇ ಕುಳಿತಿರತಕ್ಕವನು. ಅಶೋಕವನದಲ್ಲಿ ಒಂದು ಶಿಲಾಪೀಠದಿಂದ ಧುಮುಕುತ್ತಿದ್ದ ನೀರು ಪತಿಯ ಅಂಕದಿಂದ ಭ್ರಷ್ಟಳಾದ ಸತಿಯಂತೆ ಕಂಡಿತಂತೆ. ಮೇಲಿಂದ ಅದು ಬೀಳುವ ರಭಸ ಗಂಡನು ಅಸಹ್ಯದಿಂದ ಕಿತ್ತೊಗೆದ ಹೆಂಡತಿ ಬೀಳುವ ರಭಸವನ್ನು ಸೂಚಿಸುತ್ತದೆ. ಆ ತೊಡೆಯಿಂದ ಬಿದ್ದಮೇಲೆ ಅವಳು ಮರಳಿ ಅಲ್ಲಿ ಏರುವಂತಿಲ್ಲ. ಕೆಳಗೆ ಬಿದ್ದು ಕಾಲುವೆಯಲ್ಲಿ ಹರಿಯತೊಡಗಿ ಅಂಚು ತಡೆದು ಸ್ವಲ್ಪ ಹಿಂದಿರುಗಿದ ನೀರು, ತೊರೆದನೆಂದು ಹೊರಟುಹೋಗಬೇಡ ಎಂದು ನೆಂಟರು ತಡೆಯಲು ಹತ್ತಿರದಲ್ಲಿಯೇ ಸುಳಿಯುವ ಆ ಹೆಂಡತಿಯಂತೆ ಕಂಡಿತಂತೆ. ಸೀತಾದೇವಿ ಹಾಕಿದ ಹಾರದಿಂದ ಹನುಮಂತನು ಬೆಳದಿಂಗಳನ್ನು ಹೊದೆದುಕೊಂಡು ತಾರೆಗಳಿಂದ ಶೋಭಿಸುವ ಮೇರುಪರ್ವತದಂತೆ ಇದ್ದನಂತೆ. ರಾತ್ರಿ ಪ್ರಿಯನೊಂದಿಗೆ ಆಟವಾಡಿ ಸೋತು ಮಲಗಿದ್ದ ರಾವಣನ ಅಂತಃಪುರ ಸ್ತ್ರೀಯರು ವಾಹಿತ ಕಿಶೋರಿಗಳಂತೆ ಇದ್ದರಂತೆ. ನೀರ ಅಲೆ ನದಿಯ ಮಳಲಿನಮೇಲೆ ಬಂದು ಹೋಗುವುದು ಪ್ರಥಮ ಸಮಾಗಮದಲ್ಲಿ ಪ್ರಿಯೆ ಪ್ರಿಯನಿಗೆ ತನ್ನ ಮೈಯನ್ನು ತೋರಿಸುತ್ತ ಸಂಕೋಚದಿಂದ ಮರೆಸಿಕೊಳ್ಳುತ್ತ ಇರುವಂತೆ ಕಂಡಿತಂತೆ. ಮಗನು ತೀರಿಹೋದನೆಂದು ಕೇಳಿದಾಗ ರಾವಣನ ಕೋಪ ಪ್ರಜ್ವಲಿಸಿತು; ದುಃಖದಿಂದ ಅವನ ಕಣ್ಣಿಂದ ನೀರು ತೊಟ್ಟಿಕ್ಕಿತು; ಆ

ಕಣ್ಣೀರು ಉರಿಯುವ ಕಕ್ಕಡದಿಂದ ತೊಟ್ಟಿಕ್ಕುವ ಎಣ್ಣೆಯಂತೆ ಇದ್ದಿತಂತೆ. ತೊಟ್ಟು ಕೆಳಕ್ಕೆ ಬೀಳುವಾಗಲೂ ಉರಿಯುತ್ತಲೇ ಬೀಳುತ್ತದೆ: ರಾವಣನ ಕಣ್ಣು ಕೋಪದಿಂದ ಕಕ್ಕಡದಂತೆ ಉರಿಯುತ್ತಿತ್ತು; ಆ ಕಣ್ಣಿಂದ ಬಿದ್ದ ಒಂದೊಂದು ಹನಿಯೂ ಅವನ ಕೋಪದ ಬಿಂದು. ರಾವಣನು ಸೀತೆಯಲ್ಲಿ ಅತಿಕ್ರಮಿಸಿ ವರ್ತಿಸುವುದು ಅಸಾಧ್ಯವೆನ್ನುವುದಕ್ಕೆ ಕವಿ, ಸಾಗರವು ಅದರ ಕರೆಯನ್ನು ಹೇಗೆ ಮೀರಲಾಗದೋ ಹಾಗೆ, ಎಂದು ಉಪಮಿಸುತ್ತಾನೆ. ವಾಲ್ಮೀಕಿಯ ಉಪಮೆಗಳಿಗೆ ಮೊದಲಿಲ್ಲ ಕೊನೆಯಿಲ್ಲ. ಅವುಗಳ ಸೊಗಸನ್ನು ಇಷ್ಟೆಂದು ಹೇಳಲು ಸಾಧ್ಯವಿಲ್ಲ. ಆಯಾ ಸಂದರ್ಭದಲ್ಲಿ ಅವು ಎಷ್ಟು ಒಪ್ಪುವುವೆನ್ನುವುದನ್ನು ಸಾವಧಾನವಾಗಿ ನೋಡಿ ತಿಳಿಯಬೇಕು. ಇನ್ನೇತರಿಂದ ಅಲ್ಲದಿದ್ದರೂ ತನ್ನ ಉಪಮೆಗಳಿಂದ ವಾಲ್ಮೀಕಿ ಪ್ರಪಂಚದ ಅತ್ಯುತ್ತಮ ಕವಿಗಳಲ್ಲಿ ಒಬ್ಬನೆಂದು ಹೇಳಬೇಕು. ನಮ್ಮಲ್ಲಿ ಉಪಮಾ ಕಾಳಿದಾಸಸ್ಯ ಎಂದು ಒಂದು ಮಾತು ವಾಡಿಕೆಯಲ್ಲಿದೆ. ಪಾಶ್ಚಾತ್ಯರಲ್ಲಿ ಹೋಮರನ ಉಪಮೆ ಸುಪ್ರಸಿದ್ಧವಾದದು. ಇದರಲ್ಲಿ ವೀರನು ಸೈನ್ಯದ ಮೇಲೆ ನುಗ್ಗಿದ್ದು ಸಿಂಹ ಜಿಂಕೆಗಳಮೇಲೆ ನುಗ್ಗಿದ ಹಾಗಿತ್ತು ಎಂದು ಹೇಳಬೇಕಾದರೆ ಈ ಸಿಂಹ ನುಗ್ಗಿದ ವಿಚಾರವನ್ನು ಸಮಗ್ರವಾಗಿ ಸುಂದರವಾಗಿ ಹೇಗೆ ನಡೆಯುವುದೋ ಹಾಗೆ ವರ್ಣಿಸುವುದು ವಾಡಿಕೆ. ಯಾವುದು ಯಾವುದರ ಹಾಗಿತ್ತು ಎಂದು ಹೇಳುವ ವಿಷಯದಲ್ಲಿ ಇಲ್ಲಿ ಶ್ರದ್ಧೆ ಕಡಮೆ ಅಥವಾ ಇಲ್ಲವೇ ಇಲ್ಲ; ಒಂದು ಸಿಂಹ ಜಿಂಕೆಗಳಮೇಲೆ ನುಗ್ಗಿತೆಂದು ಹೇಳುವುದೇ ಉದ್ದೇಶವಾಗಿದ್ದರೆ ಹೇಗೆ ಬರೆಯಬಹುದೋ ಆ ಸಿಂಹದ ವರ್ಣನೆ ಹಾಗಿರುತ್ತದೆ. ಎಂದರೆ ಹೋಮರನ ಒಂದೊಂದು ಉಪಮಾನವೂ ಸ್ವತಃ ಸಂಪೂರ್ಣವಾದ ಒಂದು ಚಿತ್ರ. ಕೆಲವುವೇಳೆ ಐದಾರು ಸಾಲಿನಷ್ಟು ಅಥವಾ ಇನ್ನೂ ಹೆಚ್ಚಾಗಿ ಬೆಳೆದು ಪ್ರಕೃತಿಯ ಯಾವುದಾದರೊಂದು ಮುಖವನ್ನು ವಿವರವಾಗಿ ವರ್ಣಿಸಿ ಕವಿಯ ಸಾಮಗ್ರ್ಯ ವೈಪುಲ್ಯವನ್ನೂ ದೃಷ್ಟಿಪಾಟವವನ್ನೂ ಪ್ರಕಟಮಾಡುತ್ತದೆ. ಕಾಳಿದಾಸನ ಉಪಮೆ ಬೇರೊಂದು ರೀತಿಯಲ್ಲಿ ಚೆನ್ನ. ವಾಲ್ಮೀಕಿಯ ಉಪಮೆ ಕಾಳಿದಾಸನ ಉಪಮೆಯ ಮಾತೃಸ್ಥಾನ. ಹೋಮರನ ಉಪಮೆಯಂತೆ ತನ್ನ ದಾರಿಯನ್ನು ತಾನು ಹಿಡಿಯುವ, ಆದರೂ ಸುಂದರ

ವಾದ, ಉಪಮಾನ ಇವನಲ್ಲಿ ಇಲ್ಲ. ಉಪಮಾನ ಉಪಮೇಯಗಳಿಗೆ ಗಾಢವಾದ ಸಾದೃಶ್ಯ ಇರುವುದು ಇದರ ಮುಖ್ಯ ಲಕ್ಷಣ. ಪ್ರಕೃತಿಯ ಚಿತ್ರವೂ ಇಲ್ಲಿ ಕಾಣುತ್ತದೆ; ಆದರೆ ಉಪಮಾನದ ಚಿತ್ರವನ್ನು ಪೂರ್ತಿ ಗೊಳಿಸುವುದು ಇಲ್ಲಿ ಮುಖ್ಯ ಉದ್ದೇಶವಲ್ಲ. ಹೀಗೆಯೇ ವಾಲ್ಮೀಕಿಯಲ್ಲಿ ಲಕ್ಷಣಕಾರರು ಕೇಳುವ ಇತರ ಅಲಂಕಾರಗಳೂ ಸಿಕ್ಕುತ್ತವೆ. ಇವನ್ನೆಲ್ಲ ಇಲ್ಲಿ ಹೇಳುವುದು ಅವಶ್ಯಕವಲ್ಲ. ನಿಜವಾಗಿ ನೋಡಿದರೆ ಎಲ್ಲ ಅಲಂಕಾರ ಗಳೂ ಉಪಮೆಯಲ್ಲಿ ಅಡಗಿವೆ. ಉಪಮೆ ಅಲಂಕಾರಗಳ ರಾಣಿ, ತಾಯಿ, ಧಾತ್ರಿ. ಕವಿಸಾರ್ವಭೌಮನಾದ ಕಾಳಿದಾಸನು ವಾಲ್ಮೀಕಿಯನ್ನು ಉಪಜೀವಿಸಿದನು ಎಂಬುದನ್ನು ತಿಳಿಸುವುದಕ್ಕೆ ನಮ್ಮವರಲ್ಲಿ ಒಂದು ಕತೆ ವಾಡಿಕೆಯಾಗಿದೆ. ಕಾಳಿದಾಸನು ಈ ಪೂರ್ವಸೂರಿಯ ಕಾವ್ಯವನ್ನು ವಿವರ ವಾಗಿ ಪಾಠಮಾಡುತ್ತ "ಎಲ್ಲ ಅಲಂಕಾರವೂ ದೊರೆಯಿತು. ಅನ್ವಯಾ ಲಂಕಾರ ಒಂದು ಬರಲಿಲ್ಲ" ಎಂದುಕೊಂಡನಂತೆ. ಆ ರಾತ್ರಿ ವಾಲ್ಮೀಕಿ ಅವನ ಸ್ವಪ್ನದಲ್ಲಿ ಬಂದು "ಆತುರಪಡಬೇಡ, ನಾಳೆ ಮುಂದಕ್ಕೆ ಓದು, ಅದರಲ್ಲಿ ಅನ್ವಯಾಲಂಕಾರ ಸಿಕ್ಕುತ್ತದೆ" ಎಂದನಂತೆ. ಕಾಳಿದಾಸನು ಚಕಿತನಾದನು; ಮಾರನೆಯ ಬೆಳಗ್ಗೆ ಕಾವ್ಯವನ್ನು ಮುಂದಕ್ಕೆ ಓದಿದನು. ಅನ್ವಯಾಲಂಕಾರದ ಶ್ಲೋಕ ಇದ್ದೇ ಇತ್ತು: "ಗಗನಂ ಗಗನಾಕಾರಂ ಸಾಗರಸ್ಸಾಗರೋಪಮಃ ರಾಮ ರಾವಣಯೋರ್ಯುದ್ಧಂ ರಾಮ ರಾವಣ ಯೋರಿವ." ವಾಲ್ಮೀಕಿಯಲ್ಲಿ ಏನಾದರೊಂದು ಗುಣ ಇಲ್ಲವೆಂದು ಹೇಳುವುದು ತಪ್ಪು ಎಂದು ಕಾಳಿದಾಸನು ಆಗ ಮನಗಂಡನಂತೆ. ವಾಲ್ಮೀಕಿ ತೆಗೆದುಕೊಂಡ ವಿಸ್ತಾರವಾದ ಕಥೆಯಲ್ಲಿ, ಅವನು ಕೈಗೊಂಡಷ್ಟು ವಿವರ ವಾದ ಕಥನದಲ್ಲಿ, ಆರು ಸಾವಿರ ವಿಷಯ, ಎಷ್ಟೋ ಸಾವಿರ ಶ್ಲೋಕದಲ್ಲಿ, ಅಲಂಕಾರಗಳೆಲ್ಲ ಬಂದಿರುವುದು ಏನಾಶ್ಚರ್ಯ? ಇವನ ಗ್ರಂಥವನ್ನು ಎದುರಿಗೆ ಇಟ್ಟುಕೊಳ್ಳದಿದ್ದರೆ ಲಕ್ಷಣಕಾರನಿಗೆ ಕೆಲವು ಅಲಂಕಾರ ಗಳಿರುವುದೇ ತೋರದೆಹೋಗಬಹುದು. ಲಕ್ಷಣಶಾಸ್ತ್ರಗಳ ಮೂಲ ಮಹಾಕವಿಯ ಕೃತಿ. ರಾಮಾಯಣದಲ್ಲಿ ಎಲ್ಲ ಅಲಂಕಾರವೂ ಇದೆ ಎಂದು ಹೇಳುವುದು ಹೆಚ್ಚಲ್ಲ; ರಾಮಾಯಣದಿಂದ ಎಷ್ಟು ಅಲಂಕಾರ ಇದೆ ಎನ್ನುವುದನ್ನು ನಾವು ಕಲಿಯಬೇಕಾಗಿದೆ.

## ವಾಲ್ಮೀಕಿಯ ಚಿತ್ರಕರ್ಮ

ಉಪಮೆಗಳ ಮಾತನ್ನು ಬಿಡುವ ಮೊದಲು ಕವಿ ಇವುಗಳಿಂದ ಚಿತ್ರ ಶಿಲ್ಪ ಮಾಡುತ್ತಾನೆನ್ನುವುದನ್ನು ಸೂಚಿಸುವುದು ಅವಶ್ಯಕ. ಕವಿ ಮನುಷ್ಯರನ್ನೂ ಸಂದರ್ಭಗಳನ್ನೂ ಚಿತ್ರಿಸುವ ಕೌಶಲ್ಯ ಅವನ ಕಥನದ ಕೌಶಲದ ಜೊತೆಗೆ ನಿಲ್ಲುವಷ್ಟು ಹಿರಿದು. ಈ ಚಿತ್ರಕಾರ್ಯ ವಿಶೇಷವಾಗಿ ಇವನ ಉಪಮೆಯಲ್ಲಿ ಕಾಣುತ್ತದೆ. ಬೆಂಕಿಬಿದ್ದ ಬೆಟ್ಟ, ಮಿಂಚು ಹೊಳೆದ ಮೋಡ, ಕಕ್ಕಡದಿಂದ ಎಣ್ಣೆ ಸುರಿಯುತ್ತಿರುವ ದೀಪ, ನಾಳ ಅಲುಗಲು ದಳದಿಂದ ನೀರನ್ನು ಉದುರಿಸುವ ಕಮಲ, ಬೆಟ್ಟ ಮತ್ತು ಅದರಮೇಲೆ ಬಾಗಿ ನೀರು ಸುರಿಸುವ ಮೋಡ, ಬಲೆಯನ್ನು ನೋಡಿ ಭಯಪಟ್ಟಿರುವ ಜಿಂಕೆ: ಹೀಗೆ ಈ ಕವಿ ಅನೇಕ ಚಿತ್ರಗಳನ್ನು ಉಪಮೆಯ ರೂಪದಲ್ಲಿ ನಮ್ಮೆದುರಿಗೆ ತರುತ್ತಾನೆ. ಉಪಮಾನದ ಚಿತ್ರಗಳು ಹೀಗೆ ಸ್ಪಷ್ಟವಾಗುವುದರಿಂದ ಅದರ ಬಿಂಬವಾಗಿ ಉಪಮೇಯದ ಚಿತ್ರಗಳೂ ನಮಗೆ ಸ್ಪಷ್ಟವಾಗಿ ಎದುರಿಗೆ ನಿಲ್ಲುತ್ತವೆ. ಉಪಮೆಗಳಲ್ಲಿ ಅಲ್ಲದೆ ಇತರ ಅನೇಕ ಸ್ಥಾನದಲ್ಲಿ ಕವಿ ತನ್ನ ಚಿತ್ರಕಲೆಯನ್ನು ತೋರುತ್ತಾನೆ; ಹಲವುವೇಳೆ ಒಂದೇ ವಿಷಯವನ್ನು ನಾಲ್ಕಾರು ರೀತಿಯ ವರ್ಣನೆಯಿಂದ ಚಿತ್ರಿಸುತ್ತಾನೆ. ಪಟದಮೇಲೆ ಕುಂಚದಿಂದ ನಾಲ್ಕುಸಲ ಎಳೆದ ಬಣ್ಣದಂತೆ ಈ ನಾಲ್ಕು ವರ್ಣನೆ ಎಲ್ಲ ಸೇರಿ ಒಂದು ವಿಷಯವನ್ನು ಪೂರ್ಣಮಾಡುತ್ತವೆ. ವಾಲ್ಮೀಕಿ ತುಂಬ ವರ್ಣಿಸಿರುವ ಸಂದರ್ಭಗಳೂ ಉಂಟು; ವರ್ಣನೆ ಮಾಡದೆ ವಿಷಯವನ್ನು ಊಹೆಗೆ ಬಿಟ್ಟು ತನ್ನ ಕಾರ್ಯದಲ್ಲಿ ಸಿದ್ಧಿಯನ್ನು ಪಡೆದಿರುವುದೂ ಉಂಟು. ದಶರಥನು ಸುಮಂತ್ರನನ್ನು ನೀನು ಹೊರಟು ಬರುವಾಗ ರಾಮನು ಏನು ಹೇಳಿದನು, ಲಕ್ಷ್ಮಣನು ಏನು ಹೇಳಿದನು, ಸೀತೆ ಏನು ಹೇಳಿದಳು, ಎಂದು ಕೇಳಿದನು. ಸುಮಂತ್ರನು ರಾಮನು ಹೇಳಿದ ಮಾತನ್ನು ಹೇಳಿದನು; ಲಕ್ಷ್ಮಣನು ಹೇಳಿದ್ದನ್ನೆಲ್ಲ ಹೇಳಿದನು; "ಸೀತೆ ನನ್ನ ಕಡೆ ನೋಡುತ್ತ ನಿಂತಳು, ಏನನ್ನೂ ಹೇಳಲಿಲ್ಲ, ಮೌನದಿಂದ ಕಣ್ಣೀರುಹಾಕಿದಳು" ಎಂದನು. ಸೀತೆ ಏನಾದರೂ ಹೇಳಿದ್ದಳೆಂದರೆ ಓದುವವರಿಗೆ ಈ ಮಾತಿನಿಂದಾಗುವಷ್ಟು ನೋವು ಆಗಿದ್ದಿರಲಾರದು. ದಶರಥನಿಗಾದರೂ ಸುಮಂತ್ರನ ಈ ಮಾತಿನಿಂದ ಬಹು ಖೇದ

ವಾಗಿರಬೇಕು. ಕೈಕಯಿ ಕೇಳಿದ್ದು, ಅವನು ಕೊಟ್ಟದ್ದು, ರಾಮನ ವನವಾಸವನ್ನಲ್ಲ, ಸೀತೆಯ ವನವಾಸವನ್ನು. ರಾಮ ಲಕ್ಷ್ಮಣರು ಗಂಡಸರು; ದಕ್ಷರು; ಕಷ್ಟವನ್ನು ಸಹಿಸಲು ಸ್ವಲ್ಪವಾದರೂ ಅಭ್ಯಾಸ ವುಳ್ಳವರು. ಜನಕರಾಜನ ಮಗಳಿಗೆ ಈ ಅಭ್ಯಾಸವಿಲ್ಲ. ತರುಣಿಯಾದ ಈ ಅಬಲೆ ಕೋಸಲದ ಎಲ್ಲೆಯಲ್ಲಿ ನಿಂತು ಅಯೋಧ್ಯೆಯ ಕಡೆಗೆ ನೋಡುತ್ತ ಮೌನದಿಂದ ಕಣ್ಣೀರು ಸುರಿಸಿದಳು ಎನ್ನುವುದು ಅಯೋಧ್ಯಾ ಕಾಂಡವೆಲ್ಲದರ ಸಾರಾಂಶ. ವಾಲ್ಮೀಕಿಯ ಚಿತ್ರಶಿಲ್ಪ ಇಂಥ ಗಂಭೀರ ಸಂದರ್ಭದಲ್ಲಿ ಮಾತು ಸೋತ ಕಡೆ ಮೌನದಿಂದ ಅದರ ಕೆಲಸವನ್ನು ಸಾಧಿಸುತ್ತದೆ.

## ೧೧
## ಕಾವ್ಯ ಚಿತ್ರಿಸುವ ಸಂಸ್ಕೃತಿ
### ಶೀಲದ ಕಲ್ಪನೆ

ವಾಲ್ಮೀಕಿಯ ವಿಸ್ತಾರವಾದ ಪ್ರಪಂಚ ಜ್ಞಾನದ ಫಲವಾಗಿ ಅವನ ಕಾವ್ಯದಲ್ಲಿ ಅವನು ಕಂಡ ಅಥವಾ ಆಶಿಸಿದ ಒಂದು ಸಂಸ್ಕೃತಿಯ ಚಿತ್ರ ದೊರೆಯುತ್ತದೆ. ಶೀಲವೆಂದರೆ ಏನೆಂಬ ವಿಷಯದಲ್ಲಿ ಇಲ್ಲಿ ಪ್ರಕಟ ವಾಗುವ ಕಲ್ಪನೆ ಆ ಸಂಸ್ಕೃತಿಯ ತಿರುಳು. ಇದು ಮುಖ್ಯವಾಗಿ ಹೆಣ್ಣು ಗಂಡಿನ ನಡತೆಯ ಚಿತ್ರಗಳಲ್ಲಿ ವ್ಯಕ್ತವಾಗುತ್ತದೆ. ಇಂಥ ಸಂದರ್ಭ ರಾಮಾಯಣದಲ್ಲಿ ಐದಾರಿವೆ. ಇವುಗಳಲ್ಲಿ ಎರಡು ರಾಮಾಯಣದಲ್ಲಿ ಪ್ರಕ್ಷೇಪ ಭಾಗಗಳು ಎಂದು ಕಾಣುತ್ತದೆ; ಆದರೂ ಅವುಗಳಲ್ಲಿ ಕಾಣುವ ನೀತಿ ವಾಲ್ಮೀಕಿಗೆ ಸಮ್ಮತವಾದದು. ಅವನವೇ ಆದ ಇನ್ನು ಕೆಲವು ಸಂದರ್ಭದಲ್ಲಿ ಅದೇ ನೀತಿಯ ನಿರೂಪಣೆ ಕಾಣುತ್ತದೆ. ಪ್ರಕ್ಷಿಪ್ತ ಸಂಗತಿಗಳಲ್ಲಿ ಮೊದಲನೆಯದು ವಿಶ್ವಾಮಿತ್ರನ ಕಥೆಯ ವಿಷಯ. ವಸಿಷ್ಠ ನನ್ನು ಜಯಿಸುವ ಶಕ್ತಿಯನ್ನು ಪಡೆಯುವುದಕ್ಕಾಗಿ ವಿಶ್ವಾಮಿತ್ರನು ತಪಸ್ಸುಮಾಡುತ್ತಿದ್ದನು. ಅವನಿಗೆ ರಾಜರ್ಷಿ ಪದವಿ ದೊರೆಯಿತು. ಅವನು ತ್ರಿಶಂಕುವಿಗೆ ಸಶರೀರ ಸ್ವರ್ಗಪ್ರಾಪ್ತಿಯನ್ನು ಸಾಧಿಸಿಕೊಡುವ ಮಟ್ಟಿಗೆ ಶಕ್ತಿಯನ್ನು ಸಂಪಾದಿಸಿದ್ದನು. ಶುನಶ್ಶೇಫನನ್ನು ನರಬಲಿ

ಯಾಗದಂತೆ ಉಳಿಸುವ ತೇಜಸ್ಸು ಅವನಿಗೆ ಬಂದಿತ್ತು. ರಾಜರ್ಷಿ ಪದವಿಗೆ ಮೇಲ್ಪಟ್ಟ ಋಷಿ ಪದವಿಯೂ ಅವನಿಗೆ ಬಂದಿತು. ಬ್ರಹ್ಮರ್ಷಿ ಯಾಗಬೇಕೆಂದು ಅವನು ಇನ್ನೂ ತಪಸ್ಸನ್ನು ಮಾಡುತ್ತಿದ್ದನು. ಈ ಸಂದರ್ಭದಲ್ಲಿ ಒಂದು ದಿನ ಅಪ್ಸರ ಸುಂದರಿ ಇವನ ಆಶ್ರಮದ ಬಳಿಯ ಪುಷ್ಕರದಲ್ಲಿ ಸ್ನಾನಮಾಡಲು ಬಂದಳು. ವಿಶ್ವಾಮಿತ್ರನು ಅವಳನ್ನು ನೋಡಿದನು. ಮೋಡದಲ್ಲಿ ಕಾಣುವ ಮಿಂಚಿನಂತೆ ಪುಷ್ಕರ ದಲ್ಲಿ ಕಂಡ ಆ ಅಪ್ರತಿಮರೂಪಕ್ಕೆ ಸೋತು ಈ ಮುನಿ ಕಂದರ್ಪವಶನಾಗಿ ಅವಳಿಗೆ 'ಹೇ ಅಪ್ಸರೆ, ನಿನಗೆ ಸ್ವಾಗತ. ನನ್ನ ಆಶ್ರಮದಲ್ಲಿ ಇರು. ಮದನ ಮೋಹಿತನಾದ ನನ್ನಲ್ಲಿ ಅನುಗ್ರಹಮಾಡು' ಎಂದನು. ವಿಶ್ವಾಮಿತ್ರ ನಿಂದ ಹೀಗೆ ಪ್ರಾರ್ಥಿಸಲ್ಪಟ್ಟ ಆ ವರಾರೋಹೆ ಆ ಮೇಲೆ ಅಲ್ಲಿ ನಿಂತಳು. ಇವರು ಜೊತೆಯಾಗಿರುತ್ತ ಪಂಚ ಪಂಚ ವರುಷಗಳು ಸುಖವಾಗಿ ಕಳೆದವು. ಅಷ್ಟು ಕಾಲವಾದಮೇಲೆ ವಿಶ್ವಾಮಿತ್ರನು ನಾಚಿಕೆ ಚಿಂತೆ ಶೋಕಗಳಿಂದ ಇದು ದೇವತೆಗಳ ಕೃತ್ರಿಮವೆಂದು ತಿಳಿದನು. ನಿಟ್ಟುಸಿರುಬಿಟ್ಟು ಪಶ್ಚಾತ್ತಾಪದಿಂದ ದುಃಖಿತನಾಗಿ ಮುನಿವರನು ಹೆದರಿರುವ ಅಪ್ಸರೆ ಯನ್ನು ಕುರಿತು ಮಧುರವಾದ ಮಾತಿನಿಂದ ಹೋಗಿಬಾರೆಂದು ಹೇಳಿ ಉತ್ತರಪರ್ವತಕ್ಕೆ ತಪಸ್ಸಿಗೆ ಹೋದನು. ಇದು ಒಂದು ಕಥೆ. ಮನುಷ್ಯನು ಗಾಧಿಯ ಮಗನಂತೆ ಒಂದು ರಾಷ್ಟ್ರವನ್ನಾಳುವ ವೀರನಾಗಿರ ಬಹುದು, ಸಾವಿರ ವರುಷ ತಪಸ್ಸನ್ನು ಮಾಡಬಹುದು, ರಾಜರ್ಷಿಯಾಗ ಬಹುದು, ಋಷಿಯಾಗಬಹುದು. ಸುಂದರಿಯನ್ನು ನೋಡಿದರೆ ಅವನಿಗೆ ಮನಸ್ಸು ಕದಲೀತು; ಅಪೇಕ್ಷೆ ಹುಟ್ಟೀತು. ವಿಶ್ವಾಮಿತ್ರನು ಆಸೆಯನ್ನು ತಡೆಯ ನೋಡಿದನು, ಅದು ಸಗ್ಗಲಿಲ್ಲ, ಅದಕ್ಕೆ ಸೋತನು, ಎನ್ನು ವಂತಿಲ್ಲ. ಅಪೇಕ್ಷೆ ಹುಟ್ಟಿದಾಗ ಅದನ್ನು ತಡೆಯುವ ಪ್ರವೃತ್ತಿಯೇ ಇವನಿಗೆ ಇಲ್ಲ. ಅವನು 'ಸ್ವಾಗತಂತೇಸ್ತು' ಎಂದದ್ದು, ಅಪ್ಸರೆಗೆ ಅಲ್ಲ, ಆಸೆಗೆ. ಗೆಲ್ಲಬೇಕೆಂಬ ಯತ್ನವಿದ್ದರಲ್ಲವೆ, ಗೆಲ್ಲಲಿಲ್ಲ, ಸೋತನು, ಎನ್ನು ವುದು? ಆ ಯತ್ನವೇ ಇಲ್ಲದೆ ಕ್ಷಣಮಾತ್ರದಲ್ಲಿ ಮನುಷ್ಯನು ಆಸೆಗೆ ಸೆರೆ ಯಾಗುವನು. ಮತ್ತೆ ವಿಶ್ವಾಮಿತ್ರನು ಬಹು ಕಾಲ ತಪಸ್ಸುಮಾಡಿದ ಮೇಲೆ ಇಂದ್ರನು ಅವನನ್ನು ಮತ್ತೆ ಮರುಳುಮಾಡುವುದಕ್ಕೆ ರಂಭೆಯನ್ನು

ಕಳುಹಿಸಿದನು. ಋಷಿ ಕೋಪಿಸುವನೆಂದು ಅವಳು ಹಿಂದೆಗೆದಳು. ಇಂದ್ರನು ಅವಳಿಗೆ ಭಯಪಡಬೇಡವೆಂದು ಧೈರ್ಯ ಹೇಳಿ ಅವಳನ್ನು ಮುನಿಯ ಬಳಿಗೆ ಅಟ್ಟಿದನು. ಮರಗಳು ತಳಿತಕಾಲ; ಕೋಗಿಲೆ ಬಂದು ಇಂಪಾಗಿ ಕೂಗುತ್ತಿದೆ; ವಿಶ್ವಾಮಿತ್ರನು ಕಣ್ತೆರೆದನು; ಎದುರಿಗೆ ಅಪ್ಸರೆಯನ್ನು ನೋಡಿದನು. ಈ ಸಲ ಅವನು ಚೆಲುವೆಗೆ ಮರುಳಾಗಲಿಲ್ಲ; ನನ್ನ ತಪಸ್ಸನ್ನು ಕೆಡಿಸಲು ಬಂದೆಯಾ ಎಂದು ಕೋಪದಿಂದ ಅವಳಿಗೆ ಶಾಪವನ್ನು ಕೊಟ್ಟು ಬೇರೊಂದು ಕಡೆಗೆ ಹೋದನು. ತಿರುಗಿ ಅವನಿಗೆ ಈ ವಿಷಯದಲ್ಲಿ ಪರೀಕ್ಷೆ ಬರಲಿಲ್ಲ. ಇದಾದಮೇಲೆ ಅವನಿಗೆ ಬಂದ ಪರೀಕ್ಷೆ ಬಹು ಕಾಲ ಅನ್ನವಿಲ್ಲದೆ ತಪಸ್ಸುಮಾಡಿ ಪಾರಣೆಗಾಗಿ ಒಂದು ಊಟವನ್ನು ಸಿದ್ಧಪಡಿಸಿಕೊಂಡಿರಲು ಒಬ್ಬ ಭಿಕ್ಷುಕನು ಬಂದು ಅದಕ್ಕೆ ಕೈ ನೀಡಿದ್ದು. ತನಗೆ ಅನ್ನವಿಲ್ಲದಿದ್ದರೂ ಹೋಗಲಿ ಎಂದು ಅವನು ಆ ಅನ್ನವನ್ನು ಭಿಕ್ಷುಕನಿಗೆ ಕೊಟ್ಟು ತಾನು ಮರಳಿ ತಪಸ್ಸಿಗೆ ಕುಳಿತನು. ಜಿತೇಂದ್ರಿಯನಾದನೆಂದು ಆಮೇಲೆ ಅವನಿಗೆ ಬ್ರಹ್ಮರ್ಷಿ ಪಟ್ಟ ಬಂದಿತು. ವಿಷಯಸುಖ ಒಂದು ಸುಖವೆಂದು ತಿಳಿದಿರುವ ಮನುಷ್ಯನಿಗೆ ಯಾವ ಹೊತ್ತಿನಲ್ಲಿ ಆಸೆ ಪಾಶವಾಗುವುದೋ ಹೇಳುವಂತಿಲ್ಲ. ವಿಷಯದಾಸೆ ಆತ್ಮೋದ್ಧಾರಕ್ಕೆ ಅಡ್ಡಿಯೆಂದು ತಿಳಿದಿರುವವನೇ ಪ್ರಯತ್ನಪೂರ್ವಕವಾಗಿಯಾದರೂ ಅದರಿಂದ ಬಿಡಿಸಿಕೊಳ್ಳಬಲ್ಲನು. ವಿಶ್ವಾಮಿತ್ರನ ಕಥೆಯು ಕವಿ ನಮಗೆ ಈ ವಿಷಯವನ್ನು ತಿಳಿಸುತ್ತಾನೆ. ಈ ಕಾವ್ಯದ ಇನ್ನೊಂದು ಇಂಥ ಉಪಾಖ್ಯಾನ ಅಹಲ್ಯೆಯದು. ಗೌತಮನು ದೊಡ್ಡ ಋಷಿ. ಆದರೆ ಅಹಲ್ಯೆಗೆ ದೊಡ್ಡ ಋಷಿಯ ಹೆಂಡತಿಯಾಗಿರುವುದರಲ್ಲಿ ತೃಪ್ತಿಯಿಲ್ಲ. ಇಂದ್ರನು ಒಂದುಸಲ ಗೌತಮನು ಇಲ್ಲದ ವೇಳೆಯನ್ನು ಕಾದು ಇವರ ಆಶ್ರಮಕ್ಕೆ ಬಂದನು; ಗೌತಮನ ವೇಷದಿಂದ ಇವಳನ್ನು ಕಾಣಿಸಿಕೊಂಡು ಸಹವಾಸವನ್ನು ಬೇಡಿದನು. ಕವಿ ಈ ಸಂದರ್ಭವನ್ನು ಹೀಗೆಂದು ಹೇಳಿದಾನೆ. "ಮುನಿವೇಷ ಧರೋಽಹಲ್ಯಾಮಿದಂ ವಚನಮಬ್ರವೀತ್: ಸಂಗಮಂ ತ್ವಹಮಿಚ್ಛಾಮಿ ತ್ವಯಾ ಸಹಸುಮಧ್ಯಮೇ. ಮುನಿವೇಷಂ ಸಹಸ್ರಾಕ್ಷಂ ವಿಜ್ಞಾಯ ರಘುನಂದನ ಮತಿಂ ಚಕಾರ ದುರ್ಮೇಧಾ ದೇವರಾಜ ಕುತೂಹಲಾತ್.

ಅಥಾಬ್ರವೀತ್ ಸುರಶ್ರೇಷ್ಠಂ ಕೃತಾರ್ಥೇನಾಂತರಾತ್ಮನಾ: ಕೃತಾರ್ಥಾಸ್ಮಿ ಸುರಶ್ರೇಷ್ಠ, ಗಚ್ಛ ಶೀಘ್ರಮಿತಃ ಪ್ರಭೋ: ಆತ್ಮಾನಂ ಮಾಂ ಚ ದೇವೇಶ ಸರ್ವದಾ ರಕ್ಷ ಮಾನದ." ಅಹಲ್ಯೆಗೆ ಇವನ ಸಹವಾಸದಲ್ಲಿ ಆಸೆಯುಂಟು. ದೇವರಾಜ ಕುತೂಹಲಾತ್. ಅವಳು ಅವನನ್ನು ಒಳಗೆ ಹಾಕಿಕೊಂಡಳು; ಬೇಗನೆ ಹೊರಡು, ನನ್ನನ್ನೂ ನಿನ್ನನ್ನೂ ಯಾವಾಗಲೂ ರಕ್ಷಿಸಿಕೋ ಎಂದಳು: ತಾನೂ ಅವನೂ ಒಂದು, ಗೌತಮನು ಬೇರೆ. ಅವನನ್ನು ನನಗೆ ಮಾನವನ್ನು ಕೊಟ್ಟವನೆ ಎಂದಳು. ಅಹಲ್ಯೆ ಇಂದ್ರನನ್ನು ಗೌತಮನೆಂಬ ತಪ್ಪು ತಿಳಿವಳಿಕೆಯಿಂದ ಅಂಗೀಕರಿಸಲಿಲ್ಲ, ಇಂದ್ರನೆಂದೇ ಅಂಗೀಕರಿಸಿದಳು; ಅವನ ಅಪೇಕ್ಷೆಗೆ ಪಾತ್ರಳಾಗುವುದು ಒಂದು ಗೌರವವೆಂದು ಇವಳು ತಿಳಿದಿದ್ದಳು. ಇಂದ್ರನಾದದರಿಂದಲೇ ಆ ವ್ಯಕ್ತಿ ಅವಳಿಗೆ ಬೇಕಾದದು. ಅವನು ಗೌತಮ ವೇಷವನ್ನು ಧರಿಸಿದ್ದು ಇವಳಿಗಾಗಿ ತನಗಾಗಿ ಅಲ್ಲ; ಬರುಹೋಗುವಾಗ ಇತರರು ಯಾರಾದರೂ ಕಂಡರೆ ಗೌತಮನೆಂದು ತಿಳಿದುಕೊಳ್ಳಲಿ ಎಂಬ ಉದ್ದೇಶದಿಂದ. ಗಂಡ ಹೆಂಡಿರ ಮನಸ್ಸು ಬೆರೆಯದಿದ್ದರೆ ಸಂಸಾರ ಹೇಗೆ ಕೆಡುತ್ತದೆನ್ನುವುದು ಇಲ್ಲಿ ಸಂಪೂರ್ಣವಾಗಿ ವರ್ಣಿತವಾಗಿದೆ. ಇಂಥ ಸಂದರ್ಭದಲ್ಲಿ ಹೆಂಡತಿ ಗಂಡನಿಗೆ ಸಹಧರ್ಮಚಾರಿಯಾಗುವುದಿಲ್ಲ; ತಾನು ಬೇರೆಯೆಂಬಂತೆ ನಡೆದುಕೊಳ್ಳುತ್ತಾಳೆ; ತನ್ನನ್ನು ಕೆಡಿಸುವವರಿಂದ ತನಗೆ ಗೌರವವುಂಟಾಯಿತೆಂದು ನೆನೆಯುತ್ತಾಳೆ. ಈ ರೀತಿ ಕೆಡಕಿಗೆ ಮನಸ್ಸನ್ನು ಕೊಟ್ಟ ಋಷಿಪತ್ನಿಯನ್ನು ಈ ಕಥೆಯ ಕವಿ ದುರ್ಮೇಧಾ ಎಂದು ಕರೆದಿದಾನೆ. ಇಂದ್ರನು ಹೊರಡುವ ವೇಳೆಗೆ ಹಿಂದಿರುಗಿ ಬಂದ ಗೌತಮನು ಅವನನ್ನು ಕಂಡು ಕೋಪಗೊಂಡು ಅವನಿಗೆ ಶಾಪವನ್ನು ಕೊಟ್ಟನು; ಅಧರ್ಮವನ್ನು ಆಚರಿಸಿದ ಪತ್ನಿಗೆ ಪ್ರಾಯಶ್ಚಿತ್ತವನ್ನು ವಿಧಿಸಿದನು. ಇಲ್ಲಿಯೂ ವಿಶ್ವಾಮಿತ್ರನ ಕಥೆಯಲ್ಲಿ ಕಾಣುವ ತತ್ತ್ವವೇ ಹೆಂಗಸಿನ ದೃಷ್ಟಿಯಿಂದ ಉಕ್ತವಾಗಿದೆ. ಹೆಂಗಸಾದವಳಿಗೆ ಒಳ್ಳೆಯದು ಸರಿ ಎನ್ನುವುದರಲ್ಲಿ ದೃಷ್ಟಿಯಿರಬೇಕು; ತನ್ನನ್ನು ಅಪೇಕ್ಷಿಸಬಹುದಾದವರ ವಿಷಯದಲ್ಲಿ ಕುತೂಹಲವಿರಬಾರದು. ಅವಳು ಅಂಥವರ ಕಡೆ ಕುತೂಹಲದಿಂದ ನೋಡಿದರೆ ಅವರು ತಮ್ಮ ಆಸೆಯನ್ನು ಮತ್ತಷ್ಟು ವ್ಯಕ್ತಪಡಿಸುತ್ತಾರೆ. 'ಸಂಗಮಂತು ಅಹಂ

ಇಚ್ಛಾಮಿ ತ್ವಯಾಸಹ ಸುಮಧ್ಯಮೇ' ಎಂದು ಪರಪುರುಷನು ಬಾಯಲ್ಲಿ ಹೇಳುವುದು ಸಾಧ್ಯವಾಗುವ ಮೊದಲು ಹೆಂಗಸು ಅವನ ವಿಷಯದಲ್ಲಿ ಪ್ರಸನ್ನತೆಯನ್ನು ತೋರಿಸಿರಬೇಕು. ಗಂಡಸು ತನ್ನ ಅಪೇಕ್ಷೆಯನ್ನು ಬಾಯಿಂದ ಹೇಳುವ ಮೊದಲು ಕಣ್ಣಿಂದ ಹೇಳಿ ಇವಳಿಗೆ ಅದು ಸಮ್ಮತವೆಂದು ಕಂಡುಕೊಂಡಿರಬೇಕು. ಎರಡು ಸಂದರ್ಭದಲ್ಲಿಯೂ ಸೋಲು ಬಹು ಸುಲಭ. ಆಸೆಯೆನ್ನುವುದನ್ನು ಹಿಂದಕ್ಕಿಟ್ಟು ಧರ್ಮದ ದೃಷ್ಟಿಯಿಂದ ನಡೆಯುವುದೇ ಜಗತ್ಕಲ್ಯಾಣಕ್ಕೆ ಸಾಧನ. ಹೆಂಡತಿಯನ್ನು ಬಿಟ್ಟು ಅತ್ತಿಗೆ ಅಣ್ಣನೊಡನೆ ಕಾಡಿಗೆ ಹೊರಟ ಲಕ್ಷ್ಮಣ; ಸುಂದರಿ ಬಂದು ನನ್ನನ್ನು ಮದುವೆಯಾಗೆಂದು ಹೇಳಿದರೂ ಬೇಡವೆಂದು ಅವಳನ್ನು ಹಾಸ್ಯಮಾಡಿ ಕಳುಹಿಸಿಕೊಟ್ಟ ರಾಮ; ಲಂಕೇಶ್ವರನಾದ ರಾವಣನು, ನನ್ನ ತಲೆಯನ್ನು ನಿನ್ನ ಕಾಲಿನ ಬಳಿ ಇಡುತ್ತೇನೆ, ನನ್ನ ಮಹಿಷಿಯಾಗು ಎಂದರೆ, ಇಂಥ ಮಾತನ್ನಾಡಬೇಡ, ನೀನು ನಾಶವಾಗುತ್ತೀಯೆ, ಎಂದ ಸೀತೆ; ಅರ್ಧಮರ್ಧದ ಹೊದಿಕೆಯಿಂದ ಪ್ರಜ್ಞೆಯಿಲ್ಲದೆ ಬಿದ್ದಿದ್ದ ಎಷ್ಟೋ ಜನ ಸುಂದರಿಯರನ್ನು ಕಣ್ಣಿಂದ ನೋಡಿದರೂ ಮನಸ್ಸು ಕಲುಷಿತ ವಾಗದಿದ್ದ ಹನುಮಂತ: ಇವರು ಒಳ್ಳೆಯ ಬಾಳ್ವೆಯ ನಿದರ್ಶನಗಳು. ಒಳ್ಳೆಯವರಿಗೆ ಅಪೇಕ್ಷೆಯಿಲ್ಲದಿಲ್ಲ; ಕುತೂಹಲದ ಪ್ರವೃತ್ತಿ ಇಲ್ಲದೆ ಇಲ್ಲ; ಅಪೇಕ್ಷೆಯನ್ನೂ ಕುತೂಹಲವನ್ನೂ ಅವರ ಒಳ್ಳೆಯತನ ತುಳಿದಿಟ್ಟಿರು ತ್ತದೆ. ಲಕ್ಷ್ಮಣನು ತನ್ನ ಅತ್ತಿಗೆಯ ಪಾದವನ್ನು ನೋಡಿದನು; ತೋಳನ್ನೂ ಕಿವಿಯನ್ನೂ ನಿಟ್ಟಿಸಿ ನೋಡಲಿಲ್ಲ: ನೋಡುವುದು ತಪ್ಪು ಎಂಬ ಭಾವನೆಯಿಂದ. ಸೀತೆ ಲಕ್ಷ್ಮಣನನ್ನು ಅತ್ತಿಗೆತನದ ಸ್ನೇಹದಿಂದ ನೋಡುತ್ತಿದ್ದಳು. ಆದರೆ ಅವನು ರಾಮನಂತೆಯೇ ಒಬ್ಬ ಪುರುಷನು. ರಾಮನು ತನ್ನ ಕೈಯನ್ನೂ ಲಕ್ಷ್ಮಣನು ಊರ್ಮಿಳೆಯ ಕೈಯನ್ನೂ ಹಿಡಿದಂತೆ, ಸಂದರ್ಭ ಬೇರೆಯಾಗಿದ್ದಿದ್ದರೆ ರಾಮನು ಊರ್ಮಿಳೆಯ ಕೈಯನ್ನೂ ಲಕ್ಷ್ಮಣನು ತನ್ನ ಕೈಯನ್ನೂ ಹಿಡಿದಿರಬಹುದಾಗಿತ್ತೆಂದು ಅವಳು ಬಲ್ಲಳು. ರಾಮನು ಕೈಹಿಡಿದ ಗಂಡು; ಗಂಡನು. ಲಕ್ಷ್ಮಣನು ಕೈಹಿಡಿಯದ ಗಂಡು; ಗಂಡನಲ್ಲ. ಲಕ್ಷ್ಮಣನು ಗಂಡನಾಗಬಹುದಾಗಿದ್ದ, ಆದರೆ ಹಾಗೆ ಆಗದ, ಗಂಡು ಎಂಬ ಭಾವ ಇದ್ದದರಿಂದಲೇ ಒಂದು

ಸಂದರ್ಭದಲ್ಲಿ ಸೀತೆ ಅವನನ್ನು "ನೀನು ನನ್ನ ಮೇಲಣ ಆಸೆಯಿಂದ ನಮ್ಮ ಜೊತೆಗೆ ಬರುತ್ತಿದೀಯೆ. ರಾಮನು ಹೊರತು ಉಳಿದ ಪುರುಷ ರನ್ನು ನಾನು ಕಾಲಿನಿಂದಲೂ ಮುಟ್ಟುವುದಿಲ್ಲ" ಎಂದು ದೂರಿದಳು. ಎಚ್ಚರದ ವೇಳೆಯಲ್ಲಿಯೂ ತಿಳಿವು ಪ್ರಬಲವಾಗಿರುವಾಗಲೂ ಅಡಗಿ ಬಿದ್ದಿರುವ ಇಂಥ ಭಾವನೆ ಕನಸಿನಲ್ಲಿಯೂ ಭಾವ ಉದ್ರೇಕವಾಗಿ ತಿಳಿವು ತನ್ನ ಪೀಠದಲ್ಲಿ ಅಲುಗಿದ ವೇಳೆಯಲ್ಲಿಯೂ ಇಂಥ ವಿಕಾರವಾದ ಮಾತಿನಲ್ಲಿ ಅಥವಾ ನಡತೆಯಲ್ಲಿ ವ್ಯಕ್ತವಾಗುತ್ತದೆ. ಲಕ್ಷ್ಮಣನು ಇಂಥ ಕೆಟ್ಟಭಾವನೆಯಿಂದ ತಮ್ಮ ಜೊತೆಗೆ ಬರುತ್ತಿದಾನೆ ಎಂದು ಸೀತೆ ಈ ಮಾತನ್ನು ಹೇಳಿದಾಗ ನಂಬಲಿಲ್ಲ; ಅದರ ಹಿಂದೆ ಯಾವಾಗಲೂ ನಂಬಿರಲಾರಳು. ಆದರೆ ಅವನು ಹೀಗೆ ಬರುವುದು ಸಾಧ್ಯ ಎಂದು ಅವಳು ಆ ಮೊದಲು ಮನಸ್ಸಿನಲ್ಲಿ ಎಂದುಕೊಂಡಿರಬೇಕು; ಹೀಗಾಗಿದ್ದರೆ ಏನು ಗತಿ ಎಂದು ಚಿಂತಿಸಿರಬೇಕು; ಲಕ್ಷ್ಮಣನು ಅಂಥವನಲ್ಲ ಎಷ್ಟು ಒಳ್ಳೆಯವನು ಎಂದು ಸಂತೋಷಪಟ್ಟಿರಬೇಕು; ರತ್ನದಂಥ ಈ ಮನುಷ್ಯನ ವಿಷಯದಲ್ಲಿ ನನಗೆ ಇಂಥ ಯೋಚನೆ ತೋರುವುದಲ್ಲಾ ಎಂದು ತನ್ನಲ್ಲಿ ತಾನೇ ನಾಚಿಕೊಂಡಿರಬೇಕು. ಇಂಥ ಯೋಚನೆ ಮನುಷ್ಯನಿಗೆ ಇಲ್ಲದೆ ಹೋಗುವುದಿಲ್ಲ. ನಿತ್ಯಬ್ರಹ್ಮಚಾರಿಗೆ ಕೂಡ ಮನಸ್ಸಿನಲ್ಲಿ ಕಲ್ಮಷ ಹುಟ್ಟದಿದ್ದರೂ ಕಲ್ಮಷದ ಶಂಕೆ ಇರಬೇಕು; ರಾಮನ ಪತ್ನಿಗಾದರೂ ಮಂಗನನ್ನು ಮುಟ್ಟದರೆ ಅಪೇಕ್ಷೆ ಹುಟ್ಟದಿದ್ದರೂ ಅಪೇಕ್ಷೆಯಿಂದ ಮುಟ್ಟದಳೋ ಎಂದು ಪತಿ ಶಂಕಿಸಿಯಾನು ಎಂಬ ಭೀತಿಯಿರಬೇಕು: ಎಂದು ವಾಲ್ಮೀಕಿ ಹೇಳುವಂತೆ ಕಾಣುತ್ತದೆ. ಸೀತೆ ಎಷ್ಟೇ ಸತ್ಯವಂತೆ ಯಾದರೂ, ಅವಳು ಸತ್ಯವಂತೆಯೆನ್ನುವುದನ್ನು ರಾಮನು ಎಷ್ಟೇ ಚೆನ್ನಾಗಿ ತಿಳಿದಿದ್ದರೂ, ಅವಳನ್ನು ರಾಕ್ಷಸನ ಸೆರೆಯಿಂದ ಬಿಡಿಸಿಕೊಂಡಮೇಲೆ ರಾಮನಿಗೆ ಅವಳ ವಿಷಯದಲ್ಲಿ ಕೋಪ ಹುಟ್ಟದೆಹೋಗಲಿಲ್ಲ, ಅವನು ಅವಳ ವಿಷಯದಲ್ಲಿ ಸಣ್ಣಮಾತನ್ನಾಡದೆ ಬಿಡಲಿಲ್ಲ. ಇದೂ ಅವಶ್ಯ ಅನಿವಾರ್ಯ ಎಂದು ವಾಲ್ಮೀಕಿ ಸೂಚಿಸಿರುವಂತೆ ಕಾಣುತ್ತದೆ. ಸೀತೆ ಪರಪುರುಷನಿಗೆ ಮನಸ್ಸನ್ನು ಕೊಡುವವಳಲ್ಲ. ಆದರೆ ಬಲಾತ್ಕಾರದಿಂದ ಅವನು ಮೆಯ್ಯನ್ನು ತೆಗೆದುಕೊಂಡಿದ್ದರೆ? ಹೀಗೆ ಮಾಡಲಿಲ್ಲವೆಂದು

ಹೇಗೆ ಹೇಳುವುದು? ಅಂಥ ವಿಷಮ ಸಂದರ್ಭ ಒದಗಿದ್ದರೆ ಅವಳು ಜೀವವನ್ನಾದರೂ ಬಿಡುತ್ತಿದ್ದಳು ಎಂದು ಹೇಳಬಹುದು. ಆದರೆ ಇದು ಅಷ್ಟು ಖಂಡಿತವೆ? ಸೀತೆ ಮರ್ಯಾದೆಗಾಗಿ ಜೀವವನ್ನು ಬಿಡಬಲ್ಲಳೆ? ಬಿಡಬಲ್ಲಳು ಎಂದು ರಾಮನು ಬಲ್ಲನು. ಆದರೆ ಲೋಕವೂ ಅದನ್ನು ತಿಳಿಯಬೇಕೆಂದು ರಾಮನ ಅಪೇಕ್ಷೆ. ಇದನ್ನು ಲೋಕಕ್ಕೆ ತೋರಿಸು ವುದರಲ್ಲಿ ವಿಷಯ ಅವನಿಗೂ ನಿಶ್ಚಯವಾಯಿತು. ದಂಪತಿಗಳು ಸತ್ಯವಂತ ರಾಗಿರುವುದು ತಮ್ಮ ತಮ್ಮ ಮನಸ್ಸಮಾಧಾನಕ್ಕೆ ಮಾತ್ರ ಅಲ್ಲ. ನೀವು ದಂಪತಿಗಳು ಎಂದು ಲೋಕ ಅವರಿಗೆ ಒಂದು ಸಂಬಂಧವನ್ನು ನಿರೂಪಿಸು ತ್ತದೆ. ನಾವು ದಂಪತಿಗಳಾಗಿರುತ್ತೇವೆ ಎಂದು ಅವರು ಲೋಕಕ್ಕೆ ಒಪ್ಪಿಗೆಯನ್ನು ಕೊಟ್ಟಿದಾರೆ. ನಾವು ಸರಿಯಾಗಿದ್ದಿದೇವೆ ಎಂದು ಇವರು ಒಬ್ಬರಿಗೊಬ್ಬರು ಹೇಳಿಕೊಳ್ಳುವಂತೆ ಲೋಕಕ್ಕೂ ಹೇಳುವುದು ಅವಶ್ಯಕ.

### ಈ ಕಲ್ಪನೆಯ ಮುಖ್ಯ ತತ್ತ್ವ

ಮುಖ್ಯವಾಗಿ ಇದರಿಂದೆಲ್ಲ ಕಾಣುವ ಅಭಿಪ್ರಾಯ ಇದು. ಮನುಷ್ಯನು ಮನುಷ್ಯನಾಗುವುದು ಆಸೆಯಿರುವುದರಿಂದ; ಮನುಷ್ಯತ್ವ ವನ್ನು ಉಳಿಸಿಕೊಳ್ಳುವುದು ಆ ಆಸೆಯನ್ನು ಜಯಿಸಿಕೊಂಡಿರುವುದರಿಂದ; ಮಾನವನ ಜನ್ಮ ಸಾರ್ಥಕವಾಗುವುದು ಅವನು ಜಿತೇಂದ್ರಿಯನಾಗಿರು ವುದರಿಂದ, ವಶಿಯಾಗಿರುವುದರಿಂದ. ಇಂದ್ರಿಯ ಇಲ್ಲದ ಸ್ಥಿತಿಯನ್ನು ವಾಲ್ಮೀಕಿ ಹೊಗಳುವುದಿಲ್ಲ. ಇಂದ್ರಿಯ ಇದ್ದು ಅದನ್ನು ಹಿಡಿತದಲ್ಲಿಟ್ಟು ಕೊಳ್ಳುವ ಸ್ಥಿತಿಯನ್ನು ಅವನು ಪೂಜಿಸುತ್ತಾನೆ. ಈ ಹಿಡಿತವೆನ್ನುವುದು ಮನಸ್ಸಿನ ವ್ಯಾಪಾರ. ಅದರಲ್ಲಿಯೂ ಬುದ್ಧಿಯ ಸಂಸ್ಕಾರವನ್ನು ಅವಲಂಬಿಸಿ ಇರತಕ್ಕದು. ತಿಳಿವು ಸ್ವಲ್ಪ ಹೆಚ್ಚು ಕಡಮೆಯಾದಾಗ ಸೀತೆಯ ಬಾಯಿ ದುಡುಕಿದಂತೆ ಮನುಷ್ಯನ ಮಾತಿನಲ್ಲಿ ಕಲ್ಮಷ ಕಾಣ ಬಹುದು; ಬೇರೊಬ್ಬರು ಅವಿಚಾರದಿಂದ ನಡೆದಾಗ ವಿವಶವಾಗಿ ಮೈಗ್ಗೆ ಮೆಯ್ ಸೋಕಬಹುದು; ಆದರೆ ಇಷ್ಟರಿಂದ ಆತ್ಮಕ್ಕೆ ದೋಷವಿಲ್ಲ. ಪರಪುರುಷನನ್ನು ಕಾಲಿನಿಂದ ಮುಟ್ಟುವುದಿಲ್ಲ ಎಂದ ಸೀತೆ ಹಾಗೆಂದ ಒಂದು ಗಳಿಗೆಯಲ್ಲಿ ರಾವಣನ ತೊಡೆಯನ್ನು ಸೇರಿದಳು; ಇದರಿಂದ

ಅವಳಿಗೆ ತಪ್ಪು ಅಡಸಲಿಲ್ಲ. ಪತಿಯು ಬಳಿಗೆ ಕರೆದುಕೊಂಡುಹೋಗುವೆನೆಂದು ಹನುಮಂತನು ಅವಳಿಗೆ ಅಶೋಕವನದಲ್ಲಿ ಹೇಳಿದಾಗ ನಾನು ಸಮ್ಮತಿಯಿಂದ ಪರಪುರುಷನನ್ನು ಸ್ಪರ್ಶಿಸುವುದಿಲ್ಲ ಎಂದಳು. ಅಗ್ನಿ ಪರೀಕ್ಷೆಯ ಸಂದರ್ಭದಲ್ಲಿ ರಾಮನ ನಿಷ್ಠುರದ ಮಾತಿಗೆ ಪ್ರತಿಯಾಗಿ ಸತೀತ್ವದ ತನ್ನ ಈ ಭಾವನೆಯನ್ನು ಅವಳು ವಿವರಿಸಿ ಹೇಳಿದಳು. ತನ್ನ ಮನಸ್ಸು ರಾಮನನ್ನು ಬಿಟ್ಟು ಬೇರೊಂದು ಪಾತ್ರಕ್ಕೆ ಸುಳಿಯಲಿಲ್ಲ; ಆತ್ಮ ತನ್ನದು; ಮನಸ್ಸು ತನ್ನದು; ಅವನ್ನು ತನ್ನ ಒಪ್ಪಿಗೆಯಿಲ್ಲದೆ ಯಾರೂ ತುಡುಕುವಂತಿಲ್ಲ; ಮೈಯ್ಯನ್ನು ತಾನು ಹಾಗೆ ರಕ್ಷಿಸಿಕೊಳ್ಳುವುದು ಸಾಧ್ಯವಲ್ಲ; ಅದನ್ನು ಯಾರೋ ಬಲವಂತದಿಂದ ಮುಟ್ಟಿದರೆಂದರೆ ಅದು ವಿಧಿಯ ದೋಷ, ತನ್ನದಲ್ಲ; ದೇಹದ ಸಂಪರ್ಕವನ್ನಾದರೂ ತಾನು ಸಮ್ಮತಿಯಿಂದ ಮಾಡಿದವಳಲ್ಲ. ಚಾರಿತ್ರ ಶುದ್ಧಿ ಮನಸ್ಸಿನದು, ಆತ್ಮದ್ದು, ಮೈಯ್ಯದಲ್ಲ, ಎಂದು ವಾಲ್ಮೀಕಿ ಹೀಗೆ ಸ್ಪಷ್ಟಪಡಿಸಿದ್ದಾನೆ. ಈ ತತ್ವವನ್ನು ನಾವು ಇತರ ಸಂದರ್ಭಗಳಲ್ಲಿಯೂ ಅನ್ವಯಿಸಬಹುದು. ರಾವಣನು ಸ್ವಲ್ಪ ಒಳ್ಳೆಯ ಗುಣ ಇದ್ದದರಿಂದಲೂ, ರಸಿಕನಾದ ಭೋಗಿಯಾದದರಿಂದಲೂ, ಶಾಪದ ಭಯದಿಂದಲೂ ಸೀತೆಯ ವಿಷಯದಲ್ಲಿ ಬಲಾತ್ಕಾರದಿಂದ ಅತ್ಯಾಚಾರವನ್ನು ನಡೆಯಿಸಲಿಲ್ಲ. ಇನ್ನೊಂದು ಸಂದರ್ಭದಲ್ಲಿ ಧೂರ್ತನೊಬ್ಬನು ಹೀಗೆಯೇ ಆತ್ಮ ಮನಸ್ಸನ್ನು ತನಗೆ ಕೊಡದಿರುವ ಸ್ತ್ರೀಯಲ್ಲಿ ಅತ್ಯಾಚಾರದಿಂದ ನಡೆಯಬಹುದು. ಇವನು ಸೀತೆಯ ದೇಹವನ್ನು ಮುಟ್ಟಿದಂತೆ ಆ ಧೂರ್ತನು ಆ ಸ್ತ್ರೀಯ ದೇಹವನ್ನು ಅನುಭವಿಸಬಹುದು. ಮನಸ್ಸೂ ಆತ್ಮವೂ ವಿಮುಖವಾಗಿದ್ದುದಾದರೆ ಅವಳ ಚಾರಿತ್ರ ಅದರಿಂದ ಕಲುಷಿತವಾಗಲಾರದು. ಸ್ತ್ರೀಯಲ್ಲಿ ನಿಜವಾಗಿ ಯಾವುದು ತಪ್ಪು ಎಂದರೆ ಅಹಲ್ಯೆ ಮಾಡಿದ ತಪ್ಪು: ಮನಸ್ಸನ್ನು ಕೊಡುವುದು, ಆತ್ಮವನ್ನು ತೆರುವುದು. ಇದರ ಫಲವಾಗಿ ಮೈಯ್ಯನ್ನೂ ಕೊಡಬಹುದು; ಅವಕಾಶವಿಲ್ಲದ್ದರಿಂದ ಅದನ್ನು ಕೊಡದೆ ಇರಬಹುದು; ಆದರೆ ಮೈಯ್ಯನ್ನು ಕೊಡದಿರುವುದರಿಂದ ಚಾರಿತ್ರ ಶುದ್ಧವಾಗಿ ಉಳಿಯುವುದಿಲ್ಲ. ಮನಸ್ಸನ್ನು ಕೊಟ್ಟಂದೇ ಅದು ಕೆಟ್ಟುಹೋಗುತ್ತದೆ. ಮನುಷ್ಯನ ಆತ್ಮಕ್ಕೆ ಮನಸ್ಸು ಮೈ ಎರಡೂ ಸ್ವತ್ತು. ಎರಡನ್ನೂ

ಅವನು ಸರಿಯಾಗಿಟ್ಟುಕೊಳ್ಳಬೇಕು. ಮೈಯ್ಯಮೇಲೆ ಅವನ ಒಡೆತನ ಅಸಂಪೂರ್ಣ; ಮನಸ್ಸಿನಮೇಲೆ ಅದಕ್ಕೆ ಕೊರೆಯಿಲ್ಲ. ಅವನ ಶಕ್ತಿಗೆ ಮೀರಿ ಯಾವುದಾದರೊಂದು ಸಂದರ್ಭದಲ್ಲಿ ಅವನ ಮೈಯ್ ತಪ್ಪನ್ನು ಮಾಡಿದಂತಿದ್ದರೂ ಮನಸ್ಸು ಸರಿಯಾಗಿದ್ದರೆ ಅವನ ಚಾರಿತ್ರ ಶುದ್ಧವೇ ಸರಿ. ಬಲಾತ್ಕಾರದಿಂದ ರಾವಣನು ಮುಟ್ಟಿದ್ದರಿಂದ ಸೀತೆ ಕಲುಷಿತ ಳಾಗಲಿಲ್ಲ; ವಿಧಿಯಿಲ್ಲದೆ ಅರೆಬೆತ್ತಲೆಯ ಸುಂದರಿಯರನ್ನು ನೋಡಿದ್ದರಿಂದ ಹನುಮಂತನ ಬ್ರಹ್ಮಚರ್ಯಕ್ಕೆ ಕುಂದು ಬರಲಿಲ್ಲ.

### ನಾಗರಿಕತೆಯ ಕಲ್ಪನೆ

ನಡತೆಯನ್ನು ಕುರಿತ ಈ ಭಾವನೆ ರಾಮಾಯಣ ಚಿತ್ರಿಸಿರುವ ನಾಗರಿಕತೆ ಎಷ್ಟು ಹಿರಿಯದೆಂದು ತೋರಿಸುತ್ತದೆ. ನಾವು ನಾಗರಿಕತೆ ಎಂದು ಹೇಳುವುದು ಒಂದು ಜನಾಂಗ ಎಚ್ಚತ್ತಿದೆ, ಮುಂಬರಿದಿದೆ ಎಂಬ ಅರ್ಥದಲ್ಲಿ. ಒಂದು ಜನದ ಎಚ್ಚರ ಅಥವಾ ಮುಂಬರಿವು ಅದರ ಜೀವನದ ಎಲ್ಲ ಭಾಗಗಳಲ್ಲಿಯೂ ಕಾಣುತ್ತದೆ. ಆದರೆ ಅದೆಲ್ಲಕ್ಕೂ ಲಾಂಛನ ನಗರ. ಎಂದರೆ ಬಹು ಜನರು ಸೇರಿ ಒಂದು ಕಡೆ ಜೀವಿಸು ವುದು; ಒಟ್ಟಿನ ಜೀವನಕ್ಕೆ ಬೇಕಾದ ಕಟ್ಟು ಕಟ್ಟಳೆಗಳನ್ನು ನಿರ್ಮಿಸಿ ಕೊಳ್ಳುವುದು; ಇಂಥ ಒಟ್ಟಿನ ಜೀವನದಿಂದ ಒದಗುವ ಸೌಕರ್ಯ ವನ್ನು ಉಪಯೋಗಿಸಿ ಬಾಳುವೆಯನ್ನು ಸೊಗಸು ಮಾಡಿಕೊಳ್ಳುವುದು. ಒಳ್ಳೆಯ ನಾಗರಿಕತೆಯಲ್ಲಿ ಒಬ್ಬೊಬ್ಬ ಮನುಷ್ಯನೂ ಜನತೆಯ ಜೀವನದ ಮೊತ್ತದಲ್ಲಿ ಏನು ಮಾಡಬೇಕು, ಹೇಗೆ ನಡೆದುಕೊಳ್ಳಬೇಕು, ಎನ್ನು ವುದನ್ನು ಕುರಿತ ವ್ಯವಸ್ಥೆಯಿರುತ್ತದೆ. ರಾಮಾಯಣದ ಕಾಲದಲ್ಲಿ ಜನರು ನಗರಗಳನ್ನು ನಿರ್ಮಿಸುವ ಸ್ಥಿತಿಗೆ ಬಂದಿದ್ದರು. ಇಂಥ ನಗರಗಳು ಅನೇಕ ಇದ್ದಂತೆ ಕಾಣುವುದಿಲ್ಲ. ಪ್ರಾಯಶಃ ರಾಜನೆಂಬವನು ಇದ್ದ ಕಡೆ ಹೆಚ್ಚು ಜನ ಸೇರಿ ಒಂದೊಂದು ರಾಜ್ಯಕ್ಕೆ ಒಂದೊಂದು ನಗರ ಆಗುತ್ತಿದ್ದವೆಂದು ತೋರುತ್ತದೆ. ಈಗಲೂ ನಮ್ಮ ದೇಶದಲ್ಲಿ ನಗರಗಳ ಸಂಖ್ಯೆ ಕಡಮೆ. ನಗರವೆನ್ನುವುದು ರಾಜನಿಗೆ ಸಂಬಂಧಪಟ್ಟದೆನ್ನುವುದನ್ನು ತೋರಿಸು ವಂತೆ ನಮ್ಮ ಭಾಷೆ ಒಂದರಲ್ಲಿ ನಗರು ಎಂದರೆ ಅರಮನೆ ಎಂದರ್ಥ. ರಾಮಾಯಣದ ಕಾಲದಲ್ಲಿ ರಾಷ್ಟ್ರವೆನ್ನುವುದು ಇಂಥ ನಗರದ ಸುತ್ತಣ

ನಾಡೆಷ್ಟೋ ಅಷ್ಟೇ ಇದ್ದಿರಬಹುದು. ಒಂದು ಪುರ; ಒಂದು ಜನಪದ. ಇಂಥ ನಗರರಾಷ್ಟ್ರಗಳು ಕ್ರಿಸ್ತಪೂರ್ವದ ಕೆಲವು ಶತಮಾನಗಳ ಕಾಲ ಗ್ರೀಸ್ ದೇಶದಲ್ಲಿ ಹಲವು ಬೆಳೆದು ಒಂದೊಂದೂ ತನ್ನ ದಾರಿಯಲ್ಲಿ ಸಂಸ್ಕೃತಿಯನ್ನು ಸಾಧಿಸಿದುವು. ವಾಲ್ಮೀಕಿಯ ದಿನದಲ್ಲಿ ನಗರಗಳ ಸಂಖ್ಯೆ ಕಡಮೆಯಾದರೂ ಅಲ್ಲಿಯ ಜೀವನ ಸಂಪದ್ಯುಕ್ತವಾಗಿದ್ದಿತೆಂದು ಅವನ ವರ್ಣನೆಯಿಂದ ಕಾಣುತ್ತದೆ. ಅಯೋಧ್ಯಾನಗರ ಹನ್ನೆರಡು ಯೋಜನದ ಉದ್ದ ಅಗಲ ಇದ್ದಿತಂತೆ. ಈ ನಗರದಲ್ಲಿ ಮಹಾಪಥಗಳಿದ್ದುವು, ರಾಜಮಾರ್ಗಗಳಿದ್ದುವು. ಈ ಮಾರ್ಗಗಳಲ್ಲಿ ಸಾಲುಮರಗಳಿದ್ದುವು; ಅವುಗಳಿಂದ ಪಥದಲ್ಲಿ ಹೂ ಉದುರಿರುತ್ತಿತ್ತು. ಬೀದಿಗೆ ನಿತ್ಯವೂ ನೀರು ಚಿಮುಕಿಸುತ್ತಿದ್ದರು. ನಗರದಲ್ಲಿ ವ್ಯಾಪಾರದ ಸ್ಥಳಗಳು ಏರ್ಪಟ್ಟಿದ್ದುವು. ಎಲ್ಲ ರೀತಿಯ ಶಿಲ್ಪಗಳು ಸೂತಮಾಗಧರು ವಧೂನಾಟಕ ಸಂಘಗಳು ಉಂಟು. ಈ ನಗರಕ್ಕೆ ಉದ್ಯಾನ ಆಮ್ರವನಗಳಿದ್ದುವು. ಕೋಟೆಕೊತ್ತಲ, ಅಗಳು, ಆನೆ, ಕುದುರೆ, ಒಂಟೆ, ಇವುಗಳಿಂದ ನಗರ ರಕ್ಷಿತವಾಗಿತ್ತು. ದಶರಥನ ಸಾಮಂತರಾಜರು, ನಾನಾ ದೇಶಗಳ ವರ್ತಕರು, ಇಲ್ಲಿರುತ್ತಿದ್ದರು. ಸಮಭೂಮಿಯಲ್ಲಿ ನಿವೇಶಿತವಾದ ಒತ್ತಾದ ಮನೆಗಳಿಂದ ನಗರ ತುಂಬಿತ್ತು. ದುಂದುಭಿ ಮೃದಂಗ ವೀಣೆ ಪಣವಗಳಿಂದ ಇದು ನಾದಿತವಾಗಿತ್ತು. ಅಯೋಧ್ಯೆಯ ಜನರನ್ನು ವರ್ಣಿಸುವುದರಲ್ಲಿ ವಾಲ್ಮೀಕಿ ಅತಿಶಯೋಕ್ತಿಯಿಂದ ತಪ್ಪಿಸಿಕೊಳ್ಳಲಿಲ್ಲ. ಇಲ್ಲಿಯ ಬ್ರಾಹ್ಮಣರು ಸ್ವಕರ್ಮನಿರತರು, ವಿಜಿತೇಂದ್ರಿಯರು, ದಾನಾಧ್ಯಯನಶೀಲರು. ಇಲ್ಲಿಯ ಯೋಧರು ಲಘುಹಸ್ತರು, ಧೈರ್ಯವಂತರು, ಅಗ್ನಿಕಲ್ಪರು. ಅಯೋಧ್ಯೆಯ ತುಂಗ ಶಬ್ದವು ಸಾಮಾನ್ಯವಾಗಿ ಅದರ ಬಳಿಗೆ ಬರುವವರಿಗೆ ದೂರದಿಂದ ಕೇಳಿಬರುವುದು. ಸಂಜೆಯಲ್ಲಿ ಅದರ ಉದ್ಯಾನಗಳಲ್ಲಿ ಜನರು ಕ್ರೀಡಿಸುತ್ತಿರುವರು. ಅವುಗಳ ಬಳಿ ಆನೆ, ಕುದುರೆ, ಯಾನಗಳು ನಿಂತಿರುವುವು. ಅದರ ಗಾಳಿ ಚಂದನ ಅಗರುಗಳ ಗಂಧದಿಂದ, ಭೇರೀ ಮೃದಂಗ ವೀಣೆಗಳ ಧ್ವನಿಯಿಂದ, ಸಿರಿವಂತವಾಗಿ ಹರಿಯುವುದು. ಕವಿ ವರ್ಣನೆಯಲ್ಲಿ ಸ್ವಲ್ಪ ಅತಿಮಾಡಿದ್ದಾನೆ ಎಂದು ನಾವು ಒಪ್ಪಿಕೊಂಡರೂ ದೊಡ್ಡದೊಂದು ನಗರ ಇದ್ದಿತೆಂದೂ, ಅಲ್ಲಿ

ತುಂಬ ಐಶ್ವರ್ಯ ಸೇರಿದ್ದಿತೆಂದೂ, ಜನರು ಭೋಗಿಗಳಾಗಿ, ಸುಖಿಗಳಾಗಿ, ನಗರದ ಸುಖಭೋಗಗಳ ಬಾಳುವೆಯನ್ನು ಬಾಳುತ್ತಿದ್ದರೆಂದೂ ಇದರಿಂದ ಸ್ಪಷ್ಟವಾಗುತ್ತದೆ. ತಿಳುವಳಿಕೆಯಿಲ್ಲದ ಬ್ರಾಹ್ಮಣನಿಲ್ಲ, ಹೇಡಿಯಾದ ಕ್ಷತ್ರಿಯನಿಲ್ಲ, ರತ್ನವನ್ನು ಮಾರದ ವೈಶ್ಯನಿಲ್ಲ, ಎಂಬಂಥ ಮಾತನ್ನು ನಾವು ಅಕ್ಷರಶಃ ನಿಜವೇ ಎನ್ನಬಾರದು. ಕವಿಯ ಅಭಿಪ್ರಾಯವೇನೆಂದು ತಿಳಿದುಕೊಳ್ಳಬೇಕು. ಅತಿಶಯೋಕ್ತಿ ಒಂದು ಅರ್ಥವನ್ನು ಮನತಟ್ಟು ವಂತೆ ಹೇಳುವುದಕ್ಕಾಗಿ ಕವಿ ಉಪಯೋಗಿಸುವ ಉಕ್ತಿಯ ರೀತಿ. ನಮ್ಮ ಕಾವ್ಯಗಳು ವರ್ಣಿಸಿರುವ ಅರಮನೆಗಳಲ್ಲಿ ಒಂದಾದರೂ ಉಳಿದಿಲ್ಲ. ಆದ್ದರಿಂದ ಅವುಗಳನ್ನು ಕಲ್ಲುಗಳಿಂದ ಕಟ್ಟಿರಲಿಲ್ಲ, ಮರಗಳಿಂದ ಕಟ್ಟಿದ್ದ ರೆಂದು ಕಾಣುತ್ತದೆ, ಎಂದು ಪಾಶ್ಚಾತ್ಯ ವಿಮರ್ಶಕರು ಯಾರಾದರೂ ಹೇಳುವುದುಂಟು. ಮೂರು ಸಾವಿರ ವರುಷದ ಹಿಂದಣ ಕಟ್ಟಡ ಈಗ ಕಣ್ಣಿಗೆ ಕಾಣದಿದ್ದರೆ ಅದು ಇದ್ದಿತೋ ಇಲ್ಲವೋ ಎಂದು ವಿತರ್ಕಮಾಡು ವುದು ವಿಮರ್ಶೆಯಲ್ಲಿ ಸಾಧುವಾದ ಪದ್ಧತಿಯಲ್ಲ. ಪ್ರಾಕ್ತಾನ್ವೇಷಣದಲ್ಲಿ ಭೂಮಿಯನ್ನಗೆದು ಈಚೆಗೆ ಅಲ್ಲಲ್ಲಿ ಪೂರ್ವಕಾಲದ ನಗರಿಗಳನ್ನು ತೆಗೆಯು ತ್ತಿದಾರೆ. ಈ ನಗರಿಗಳಲ್ಲಿ ಇಟ್ಟಿಗೆಯ ಗೋಡೆಗಳು, ಭವ್ಯವಾದ ಮಂದಿರ ಗಳು, ಸಮವಾದ ರಾಜಮಾರ್ಗಗಳು, ಸಾರ್ವಜನಿಕ ಸ್ನಾನಘಟ್ಟಗಳು, ದೊರೆತಿವೆ. ಒಂದು ದೇಶದಲ್ಲಿ ಭಗ್ನವಾಗಿ ಬಿದ್ದ ಕಟ್ಟಡಗಳ ಅವಶೇಷ ಗಳನ್ನು ಇನ್ನೂ ತೋರಬಹುದು; ಇನ್ನೊಂದು ದೇಶದಲ್ಲಿ ಊರುಗಳ ಮೇಲೆ ಮಣ್ಣುಮುಚ್ಚಿ ಅವುಗಳ ಗುರುತು ಇಲ್ಲದೆಹೋಗಬಹುದು. ಮೊತ್ತದಲ್ಲಿ ಅಯೋಧ್ಯೆ ವಾಲ್ಮೀಕಿ ಹೇಳಿರುವಷ್ಟು ಶ್ರೀಮಂತವಾಗಿದ್ದರೂ ಅಲ್ಲದಿದ್ದರೂ, ಆಗಣ ಜನತೆಗೆ ನಗರದ ಶ್ರೀಮಂತಿಕೆಯ ಭಾವನೆ ಒಂದು ಇದ್ದಿತೆಂದು ಇದರಿಂದ ಕಾಣುವುದು. ದೊಡ್ಡನಗರಿ, ದೊಡ್ಡ ಅರಮನೆ; ಅದರಲ್ಲಿ ರಾಜನಿಗೆ ಮಂದಿರ, ರಾಣಿಯರಿಗೆ ಮಂದಿರಗಳು, ರಾಜ ಕುಮಾರರಿಗೆ ವೇಶ್ಮಗಳು; ಇವುಗಳಲ್ಲೆಲ್ಲ ಪೀಠಗಳು, ಪರ್ಯಂಕಗಳು, ಹಾಡುವ ಹಕ್ಕಿಗಳು, ಹಾಡದಿದ್ದರೂ ಚೆಲುವಾಗಿರುವ ಬಣ್ಣದ ಹಕ್ಕಿಗಳು; ಜೀವದಿಂದ ದೊರೆತ ಚಿತ್ರಮೃಗಗಳು, ಜೀವಸಹಿತ ಹಿಡಿಯಲಾಗದಿದ್ದಾಗ ಕೊಂದು ತಂದ ಅವುಗಳ ಚರ್ಮಗಳು; ಕೌಶೇಯ ವಸ್ತ್ರಗಳು;

ಕನಕಭೂಷಣಗಳು ; ಇವೆಲ್ಲ ಆ ಕಾಲದಲ್ಲಿ ರಾಜರ ನಗರಗಳಲ್ಲಿ ಇರುತ್ತಿದ್ದುವು. ಲಂಕಾ ನಗರದ ವರ್ಣನೆಯಲ್ಲಿ ಇದೇ ತೆರೆದ ಐಶ್ವರ್ಯದ ಸೂಚನೆಯಿದೆ.

### ಆಗಿನ ರಾಜ್ಯವ್ಯವಸ್ಥೆ

ಇಂಥ ಐಶ್ವರ್ಯ ನಾಗರಿಕತೆಯ ಹೊರ ಮೈ. ಇದನ್ನು ನಿಲ್ಲಿಸಬೇಕಾದರೆ ರಾಜ್ಯವ್ಯವಸ್ಥೆ ಒಂದಿರಬೇಕು. ರಾಮಾಯಣದಲ್ಲಿ ಸೂಚಿತವಾಗಿರುವ ರಾಜ್ಯವ್ಯವಸ್ಥೆ ಈ ಐಶ್ವರ್ಯಕ್ಕೆ ಅನುಗುಣವಾಗಿದೆ. ದಶರಥನು ಒಬ್ಬ ಹಿರಿಯ ದೊರೆಯಾಗಿದ್ದನೆಂದು ಕಾಣುತ್ತದೆ. ಅವನಿಗೆ ಸಾಮಂತರು ಇದ್ದರು. ಜನಕನೂ ಕೇಕಯರಾಜನೂ ಇನ್ನಿತರ ಇಂಥ ರಾಜರೂ ಅವನಿಗೆ ಜೊತೆಯ ರಾಜರು. ಆದರೆ ಎಲ್ಲರೂ ಇಕ್ಷ್ವಾಕುವಂಶದ ರಾಜರನ್ನು ಅಧಿರಾಜರೆಂದು ಗೌರವಿಸುತ್ತಿದ್ದಂತೆ ಕಾಣುತ್ತದೆ. ನಿಷಾದಾಧಿಪತಿಯಾದ ಗುಹನೂ ಇವನಿಗೆ ಸಖನು. ಅಧಿರಾಜನ ರಾಜ್ಯವ್ಯವಸ್ಥೆ ದಂಡಕಾರಣ್ಯಕ್ಕೆ ವ್ಯಾಪಿಸಿರಲಿಲ್ಲ; ಆದರೂ ಇಕ್ಷ್ವಾಕುವಂಶದ ಅರಗುವರನೊಬ್ಬನು ಅಲ್ಲಿಗೆ ಹೋದಾಗ ಅದರ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಅವನ ಕರ್ತವ್ಯವೆಂದು ಅಲ್ಲಿಯ ಋಷಿಗಳು ನಿರೀಕ್ಷಿಸುವ ಮಟ್ಟಿಗೆ, ಅವನೂ ಅದನ್ನು ತನ್ನ ಕರ್ತವ್ಯವೆಂದು ಭಾವಿಸುವ ಮಟ್ಟಿಗೆ, ಆ ಪ್ರಾಂತವೂ ಅವರ ಒಡವೆಯಾಗಿತ್ತು. ರಾಜನಿಗೆ ಮಂತ್ರಿಗಳಿದ್ದರು. ಅವರಲ್ಲಿ ಪ್ರಮುಖನು ಗುರುವಾದ ವಸಿಷ್ಠನು. ಈ ಗುರು ಮಂತ್ರಿಗಳು ಕುಲಕ್ರಮದಿಂದ ಆಯಾ ಪದವಿಯನ್ನು ಪಡೆಯುತ್ತಿದ್ದರು. ಸಮಯ ಬಂದರೆ ಅರಮನೆಯ ಮಾತಿನಲ್ಲಿ ಬೆರೆಯಬಲ್ಲ ವೃದ್ಧ ಮಹಾಮಾತ್ರರು ದೊರೆಯ ಅಮಾತ್ಯಮಂಡಲದಲ್ಲಿದ್ದರು. ಮಂತ್ರಿಪದವಿ ವೇತನದ ಅಧಿಕಾರವಾಗಿರಲಿಲ್ಲ. ರಾಜನ ಗುರು ಅರಣ್ಯದಲ್ಲಿರತಕ್ಕ ಆಶ್ರಮವಾಸಿಯಾದ ಒಬ್ಬ ತಪಸ್ವಿ. ಅವನ ಜೀವನ ಬಡತನದ ಜೀವನ. ಅರಮನೆಯ ಸಂಪತ್ತು ಅವನ ಕುಟೀರಕ್ಕೆ ಹರಿಯಲು ಸಿದ್ಧವಾಗಿತ್ತು. ಅಷ್ಟರಿಂದಲೇ ಅವನಿಗೆ ತೃಪ್ತಿ; ಅವನು ಆದನ್ನು ಹಾಗೆ ಹರಿಯಿಸಿಕೊಳ್ಳಲಿಲ್ಲ. ಏಕೆಂದರೆ ಆಗಿನ ರಾಜ್ಯಕ್ಕೂ ಸಮಾಜಕ್ಕೂ ಹಣಕಾಸೂ ಕಾಳುಕಡಿಯ ಸಮೃದ್ಧಿಯೂ ಹೊರಗಣ ಸಂಪತ್ತು. ಹೇಗೋ ಹಾಗೆ ತಪಸ್ಸು ಧರ್ಮ

ಚರಣೆ ಆತ್ಮದ ಸಂಪತ್ತು ಎನ್ನುವುದು ತಿಳಿದಿತ್ತು. ಯೋಗ್ಯತೆಯಿದ್ದವರಿಗೆಲ್ಲ ಐಶ್ವರ್ಯವಿರಬೇಕೆಂದಾಗಲಿ ಐಶ್ವರ್ಯದಿಂದ ಯೋಗ್ಯತೆಯನ್ನು ಅಳೆಯಬಹುದೆಂದಾಗಲಿ ಈ ಜನರಲ್ಲಿ ಭಾವನೆ ಇರಲಿಲ್ಲ. ದೊರೆಗೂ ಸೇವಕನಿಗೂ ಪದವಿಯಲ್ಲಿ ಅಂತರ ಇದ್ದರೂ ಮನಸ್ಸುಗಳ ಮಧ್ಯೆ ಅದು ಕೂಪವಾಗಿರಲಿಲ್ಲ. ರಾಜನು ಸೂತನಾದ ಸುಮಂತ್ರನನ್ನು ಸ್ನೇಹಿತನಂತೆ ಕಾಣುತ್ತಿದ್ದನು. ಸೂತನು ರಾಜನಿಗೆ ಸಲ್ಲಬೇಕಾದ ಮರ್ಯಾದೆಯನ್ನು ಮರೆಯುತ್ತಿರಲಿಲ್ಲ; ಆದರೂ ದಾಸನಂತೆ ಅತಿ ತಗ್ಗಿ ನಡೆಯುತ್ತಿರಲಿಲ್ಲ. ರಾಜನು ಮಗನಿಗೆ ಯೌವರಾಜ್ಯಾಭಿಷೇಕವನ್ನು ಮಾಡುವುದಕ್ಕೆ ದೇಶದ ಜನರ ಒಪ್ಪಿಗೆಯನ್ನು ಕೇಳುವನು; ಅವರು ಅವನಿಗೆ ತಮ್ಮ ಸಮ್ಮತಿಯನ್ನು ಸೂಚಿಸುವರು. ದೊರೆಯ ಹಿರಿಯ ಮಗನು ಕಾಡಿಗೆ ಹೊರಟುಹೋಗಿ ದೊರೆ ತೀರಿಹೋಗಲು ಪ್ರಜಾಪ್ರಮುಖರೂ ಅಮಾತ್ಯರೂ ರಾಜಗುರುಗಳೂ ಸೇರಿ ಮುಂದಕ್ಕೆ ಏನು ಮಾಡುವುದೆಂದು ನಿರ್ಧರಿಸುವರು. ರಾಜನಿಲ್ಲದಿದ್ದರೆ ಏನು ತೊಂದರೆ ಎಂದು ಈ ಸಂದರ್ಭದಲ್ಲಿ ಕವಿ ಜನರಿಂದ ಹೇಳಿಸಿದ್ದಾನೆ. ರಾಷ್ಟ್ರದ ಎಲ್ಲ ಧರ್ಮಸಾಧನ ಅರ್ಥಾರ್ಜನೆಯ ಕಾರ್ಯವನ್ನು ಆಗಣ ಜನರು ರಾಜನನ್ನು ಮುಂದೆ ಇರಿಸಿಕೊಂಡು ನಡೆಸುತ್ತಿದ್ದರೆಂದು ಕಾಣುತ್ತದೆ. "ಯಥಾದೃಷ್ಟಿಃ ಶರೀರಸ್ಯ ನಿತ್ಯಮೇವ ಪ್ರವರ್ತತೇ ತಥಾ ನರೇಂದ್ರೋ ರಾಷ್ಟ್ರಸ್ಯ ಪ್ರಭವಃ ಸತ್ಯಧರ್ಮಯೋಃ ರಾಜಾ ಸತ್ಯಂಚ ಧರ್ಮಸ್ಯ ರಾಜಾ ಕುಲವತಾಂ ಕುಲಂ; ರಾಜಾ ಮಾತಾ ಪಿತಾ ಚೈವ ರಾಜಾ ಹಿತಕರೋನೃಣಾಂ." ಭರತನು ರಾಮನ ಬಳಿಗೆ ಬಂದಾಗ ಅವನು ರಾಜಪದವಿಯಲ್ಲಿ ಸರಿಯಾಗಿ ನಡೆದುಕೊಳ್ಳುತ್ತಿದಾನೆಯೋ ಎಂದು ತಿಳಿಯುವುದಕ್ಕೆ ರಾಮನು ಅವನಿಗೆ ನೂರಾರು ಪ್ರಶ್ನೆಯನ್ನು ಹಾಕಿದಂತೆ ಒಂದು ಸರ್ಗವಿದೆ. ಸೈನ್ಯವನ್ನು ಹೇಗಿಟ್ಟುಕೊಂಡಿರಬೇಕು, ಜನರನ್ನು ಹೇಗಿಟ್ಟುಕೊಂಡಿರಬೇಕು, ಮಂತ್ರಿಗಳನ್ನು ಹೇಗೆ ಕಾಣಬೇಕು, ಅರಮನೆಯನ್ನು ಹೇಗೆ ನಡೆಸಿಕೊಳ್ಳಬೇಕು, ತಪ್ಪಿತಸ್ಥರನ್ನು ಏನು ಮಾಡಬೇಕು, ಎನ್ನುವುದು ಎಲ್ಲ ಈ ಪ್ರಶ್ನೆಗಳಲ್ಲಿ ಸೂಚಿತವಾಗಿದೆ. ಸೇವಕರನ್ನು ಯೋಗ್ಯತೆಯರಿತು ಅವರಿಗೆ ತಕ್ಕ ಕೆಲಸದಲ್ಲಿ ಹೂಡಬೇಕು. ಸೇನೆಗೆ ಕಾಲ ಕಾಲಕ್ಕೆ ಭತ್ಯವನ್ನೂ ವೇತನವನ್ನೂ ಸಲ್ಲಿಸಬೇಕು.

ರಾಷ್ಟ್ರದ ಆಯ ವಿಪುಲವಾಗಿರಬೇಕು; ವೆಚ್ಚ ಕಡಮೆಯಾಗಿರಬೇಕು. ಸರಿಯಲ್ಲದ ಕೆಲಸಕ್ಕೆ ಆಡಳಿತದ ಹಣ ವೆಚ್ಚವಾಗಿರಬಾರದು. ಇರುವುದನ್ನು ಕೆಡಿಸುತ್ತ ಹೋಗುವುದು, ಸುಳ್ಳಿಗೆ ಸಹಾಯಮಾಡುವುದು, ಕೋಪತೋರುವುದು, ಎಚ್ಚರಿಕೆಯಿಲ್ಲದೆ ನಡೆಯುವುದು, ಸದ್ಯದಲ್ಲಿ ಮಾಡುವುದೇನೆಂದು ಯೋಚನೆಮಾಡದೆ ಬಹು ದೂರಕ್ಕೆ ದೃಷ್ಟಿಯನ್ನೆಸೆದು ಕಾರ್ಯಕ್ರಮವನ್ನು ಚಿಂತಿಸುವುದು, ಬಲ್ಲವರನ್ನು ನೋಡದಿರುವುದು, ಒಳ್ಳೆಯುದನ್ನು ಒಂದುಸಲ ಯೋಚಿಸಿ ಬಿಡುವುದು, ಮಾಡಬೇಕೆಂದು ನಿರ್ಧರಿಸಿದ್ದನ್ನು ಮಾಡದೆ ಇರುವುದು, ರಹಸ್ಯವಾದ ನಿರ್ಧಾರವನ್ನು ರಹಸ್ಯವಾಗಿಟ್ಟುಕೊಳ್ಳದೆ ಬಿಟ್ಟುಕೊಡುವುದು, ಇವು ಮುಂತಾಗಿ ಹದಿನಾಲ್ಕು ರಾಜನಲ್ಲಿ ದೋಷಗಳು. ತಮ್ಮ ತಂದೆ ನಡೆದ ದಾರಿ, ತಮ್ಮ ತಾತ ಮುತ್ತಾತರು ನಡೆದ ದಾರಿ, ಅದೇ ಒಳ್ಳೆಯ ದಾರಿ, ಅದೇ ಶುಭ ಸಾಧಕವಾದದು. ಈ ಮಾತುಗಳು ಈ ರಾಜನೀತಿಯಲ್ಲಿ ಸೇರಿವೆ. ಈ ಪ್ರಶ್ನೆ ಎಲ್ಲವನ್ನೂ ರಾಮನು ಆಗ ಕೇಳದಿದ್ದರೂ ಅವುಗಳಲ್ಲಿ ಕೆಲವನ್ನಾದರೂ ಕೇಳಿದನು. ಒಂದು ರಾಷ್ಟ್ರಕ್ಕೆ ಒಳ್ಳೆಯುದಾಗಬೇಕಾದರೆ ಈಗಲಾದರೂ ಇವಕ್ಕೆ ಮೀರಿದ ಮಾತಿಲ್ಲ. ಈಗ ಪ್ರಪಂಚದಲ್ಲಿ ಅತ್ಯುತ್ತಮ ಸ್ಥಿತಿಯಲ್ಲಿರುವ ರಾಷ್ಟ್ರಗಳು ಈ ಸೂತ್ರಗಳನ್ನನುಸರಿಸಿ ಒಳ್ಳೆಯ ಸ್ಥಿತಿಯಲ್ಲಿವೆ. ಇವುಗಳನ್ನು ಮನಸ್ಸಿನಲ್ಲಿಟ್ಟುಕೊಳ್ಳದೆ ಕೆಟ್ಟುಹೋದ ರಾಷ್ಟ್ರಗಳು ಬಹಳ; ಈಗಲೂ ಹೀಗೆ ಕೆಡುತ್ತಿರುವ ರಾಷ್ಟ್ರಗಳು ಉಂಟು. ರಾವಣನು ಸೀತೆಯನ್ನು ಕದಿಯುವ ವಿಷಯವಾಗಿ ಮಾರೀಚನೊಂದಿಗೆ ಮಾತನಾಡಿದಾಗ ಅವನು ರಾವಣನಿಗೆ "ನಿನ್ನಂಥ ಕಾಮವೃತ್ತ ದುಶ್ಶೀಲ ಪಾಪಮಂತ್ರಿತರಾದ ರಾಜರು ತಮ್ಮನ್ನೂ ತಮ್ಮ ಜನರನ್ನೂ ರಾಷ್ಟ್ರವನ್ನೂ ಹಾಳುಮಾಡಿಕೊಳ್ಳುತ್ತಾರೆ. ರಾಮನೊಂದಿಗೆ ನೀನು ಹಗೆಯನ್ನೇಕೆ ಕಟ್ಟಿಕೊಳ್ಳುವೆ? ಒಳ್ಳೆಯುದು ಕೆಟ್ಟುದನ್ನು ಬಲಾಬಲವನ್ನು ಸರಿಯಾಗಿ ತಿಳಿದು ಏನು ಮಾಡುವುದೆಂದು ನಿಶ್ಚಯಿಸು" ಎನ್ನುತ್ತಾನೆ. "ಸುಲಭಾಃ ಪುರುಷಾಃ ರಾಜನ್ ಸತತಂ ಪ್ರಿಯವಾದಿನಃ, ಅಪ್ರಿಯಸ್ಯಚ ಪಥ್ಯಸ್ಯ ವಕ್ತಾಶ್ರೋತಾಚ ದುರ್ಲಭಃ." ಇದೇ ಮಾತನ್ನು ರಾವಣನಿಗೆ ವಿಭೀಷಣನೂ ಆಮೇಲೆ ಹೇಳಿದನು. ಈ ಸಂದರ್ಭದಲ್ಲಿ ಮಂತ್ರದ

ಒಂದು ಮುಖ್ಯ ಸೂತ್ರ ಉಕ್ತವಾಗಿವೆ. ಹಲವು ಮಂತ್ರಿಗಳು ತಮ್ಮ ತಮ್ಮ ದೃಷ್ಟಿಯಿಂದ ಯೋಚನೆಮಾಡಿ ಒಂದು ನಿರ್ಧಾರಕ್ಕೆ ಬರುವ ರಾಜಮಂತ್ರ ಉತ್ತಮ ಮಂತ್ರ; ಹಲವರು ಹಲವು ನಿರ್ಧಾರಕ್ಕೆ ಬಂದು ಒಟ್ಟಿನಲ್ಲಿ ಬಹುಮತದ ನಿರ್ಧಾರವನ್ನು ಸ್ವೀಕರಿಸುವುದು ಮಧ್ಯಮ ರೀತಿ; ಹಲವು ತಂಡ ಹಲವು ನಿರ್ಧಾರಕ್ಕೆ ಬಂದು ಒಂದೊಂದೂ ತನ್ನ ಮಾತನ್ನೇ ಸಾಧಿಸುವುದು ಅಧಮ ರೀತಿಯ ಮಂತ್ರ. ಈ ಸೂತ್ರ ಈಗಲೂ ನಮ್ಮ ರಾಷ್ಟ್ರಗಳ ಬಾಳ್ವಿಗೆ ಅನ್ವಯಿಸುತ್ತದೆ. ರಾಮಾಯಣದಲ್ಲಿ ಉಕ್ತವಾಗಿರುವ ರಾಜನೀತಿ ಬಹು ಪರಿಶ್ರಮದಿಂದ ಬೆಳೆದಿದ್ದದು. ವಾಲ್ಮೀಕಿಗೆ ಸಮ್ಮತವಾದ ರಾಜ್ಯವ್ಯವಸ್ಥೆ ರಾಷ್ಟ್ರದ ಜನದ ಸಮ್ಮತಿಯನ್ನು ಪಡೆದು ಬಹು ಪ್ರಜೆಯ ಸುಖವನ್ನು ಸಾಧಿಸತಕ್ಕದು. ರಾಷ್ಟ್ರ ತನ್ನ ಅಧಿಕಾರವನ್ನು ಬಹು ದೂರ ನಡೆಯಿಸದೆ ಇದ್ದರೂ ಅದು ನಡೆದಷ್ಟು ದೂರದಲ್ಲಿ ವಿವೇಕ ರೀತಿಯಿಂದ ನಿಜವಾಗಿ ಜನತೆಯ ಮಂಗಳವನ್ನು ಸಾಧಿಸಲು ಕಾರಣವಾಗ ತಕ್ಕದು.

### ಸಂಸಾರಜೀವನದ ಸಂಸ್ಕೃತಿ

ರಾಷ್ಟ್ರವೆಂಬ ಭಾವನೆ ಈ ಸ್ಥಿತಿಗೆ ಬರಬೇಕಾದರೆ ಜನಜೀವನವೂ ಬಹಳ ಸಂಸ್ಕೃತವಾಗಿರಬೇಕು. ರಾಮಾಯಣದ ಜನದ ಜೀವನದಲ್ಲಿಯೂ ಈ ಸಂಸ್ಕೃತಿ ಸ್ಪಷ್ಟವಾಗುತ್ತದೆ. ಈ ಕಾವ್ಯದಲ್ಲಿ ಕಾಣುವ ಸಂಸಾರ ಜೀವನವೇ ಆರ್ಯಾವರ್ತದ ಎಲ್ಲ ಕಾಲದ ಸಂಸಾರ ಜೀವನಕ್ಕೆ ಮೂಲ ವೆನ್ನಬಹುದು. ಚಪಲಕ್ಕೆ ಮೂವರು ಹೆಂಡಿರನ್ನು ಕಟ್ಟಿಕೊಂಡು ಮೂವರಿಗೂ ಚೆನ್ನಾಗಿ ನಡೆದುಕೊಳ್ಳಬೇಕೆಂದ ದಶರಥನ ಸ್ಥಿತಿ ಕನಿಕರಕ್ಕೆ ವಿಷಯವಾದರೂ ಪರಿಷ್ಕೃತವಾದ ಅವನ ಸ್ವಭಾವವನ್ನು ಸೂಚಿಸುತ್ತದೆ. ಎರಡನೆಯವಳೂ ಮೂರನೆಯವಳೂ ಬೇಕಾದರೂ ಇವನು ಮೊದಲನೆಯವಳನ್ನು ತೊರೆಯಲಿಲ್ಲ; ಕೊನೆಗೂ ಅವಳಿಗೆ ಗೌರವವನ್ನು ತೋರಿಸುತ್ತಿದ್ದನು. ಇವನ ಮೂವರು ಮಹಿಷಿಯರೂ, ಮಹಿಷಿಯರಲ್ಲದ ದಾರೆಯರೂ, ಇವನ ನೆರಳಲ್ಲಿ ತಮ್ಮ ತಮ್ಮ ಬಾಳನ್ನು ಹೇಗೋ ಹಾಗೆ ನಡೆಸಿಕೊಳ್ಳುತ್ತಿದ್ದರು. ತಮ್ಮ ತಮ್ಮಲ್ಲಿ ಇವರ ಮನಸ್ಸಿನ ಸ್ಥಿತಿ ಹೇಗಿದ್ದರೂ ರಾಜನ ವಿಷಯದಲ್ಲಿ ಎಲ್ಲರಿಗೂ ಗೌರವ. ಅವನ ಮಕ್ಕಳು

ಎಲ್ಲರ ವಿಷಯದಲ್ಲೂ ಎಲ್ಲರಿಗೂ ಪ್ರೀತಿ. ಆ ಮಕ್ಕಳೂ ಇವರೆಲ್ಲರ ವಿಷಯದಲ್ಲಿ ಗೌರವದಿಂದಲೂ ಪ್ರೀತಿಯಿಂದಲೂ ನಡೆದುಕೊಳ್ಳುವರು. ಕೋಪದ ಹೊತ್ತಿನಲ್ಲಿ ಹಿರಿಯ ರಾಣಿ ರಾಜನನ್ನು ಬಯ್ಯುವಳು; ಕಿರಿಯ ಮಗನು ಅವನನ್ನು ನಿಗ್ರಹಿಸುವೆನೆನ್ನುವನು. ಆದರೆ ಕೋಪಗೊಳ್ಳದ ಹಿರಿಯ ಮಗನು ಹೀಗಾಗದೆನ್ನಲು ಇಬ್ಬರೂ ಸುಮ್ಮನಾಗುವರು. ಹಿರಿಯರು ಕಿರಿಯರೆಂಬ ಗೌರವ ವಿಶ್ವಾಸಗಳು ಈ ಸಂಸಾರದ ಮುಖ್ಯ ಲಕ್ಷಣ. ಹೀಗಾದರೂ ಅವಶ್ಯಕವಾದಾಗ ಕಿರಿಯರು ಹಿರಿಯರಿಗೆ ಎಚ್ಚರಿಕೆಯ ಮಾತನ್ನು ಹೇಳುವುದಕ್ಕೆ ಹಿಂಜರಿಯುತ್ತಿರಲಿಲ್ಲ. ರಾಮನು ತಾಯಿಗೆ ತಂದೆಗೆ, ಲಕ್ಷ್ಮಣನೂ ಸೀತೆಯೂ ರಾಮನಿಗೆ, ಇಂಥ ಮಾತನ್ನು ಹೇಳಿದ್ದು ಕಾಣುತ್ತದೆ. ಈ ಸಂಸಾರದಲ್ಲಿ ಗೌರವ ವಿಶ್ವಾಸಗಳಿಗೆ ಸ್ಪಷ್ಟವಾದ ಒಂದು ರೂಪ ಬರುತ್ತಿತ್ತು. ದಶರಥನು "ಊನಷೋಡಶವರ್ಷೋ ಮೇ ರಾಮೋ ರಾಜೀವಲೋಚನಃ" ಎಂದು ರಾಮನನ್ನು "ನನ್ನ ರಾಮನು" ಎಂದು ಹೇಳುತ್ತಾನೆ. ಕೌಸಲ್ಯಾದೇವಿ ಮಗನಮೇಲೆ ಬಹು ಪ್ರೇಮವಾದಾಗ ಅವನ ಮಂಡೆಯನ್ನು ಮೂಸುತ್ತಾಳೆ; ಭರತನನ್ನು ತೊಡೆಯಮೇಲೆ ಕೂರಿಸಿಕೊಳ್ಳುತ್ತಾಳೆ. ಅಯೋಧ್ಯೆಗೆ ಹಿಂದಿರುಗಬೇಕೆಂದು ತನ್ನನ್ನು ಬೇಡಲು ಬಂದ ಭರತನನ್ನು ರಾಮನು ತೊಡೆಯಮೇಲೆ ಕೂರಿಸಿಕೊಂಡು ಕುಶಲಪ್ರಶ್ನೆ ಕೇಳುತ್ತಾನೆ. ಆಶ್ರಮವನ್ನು ಚೆನ್ನಾಗಿ ಕಟ್ಟಿದಾಗ, ಯುದ್ಧದಲ್ಲಿ ಚೆನ್ನಾಗಿ ಕಾದಿದಾಗ, ಈ ಅಣ್ಣನು ಲಕ್ಷ್ಮಣನನ್ನು ಅಪ್ಪಿಕೊಳ್ಳುತ್ತಾನೆ, ತೊಡೆಯಮೇಲೆ ಕೂರಿಸಿಕೊಳ್ಳುತ್ತಾನೆ. ಲಕ್ಷ್ಮಣನು ಅತ್ತಿಗೆಗೆ ದಿನವೂ ನಮಸ್ಕಾರ ಮಾಡುತ್ತಾನೆ. ಆಶ್ರಮದ ಬಳಿ ಸೀತೆ ಕುಳಿತುಕೊಳ್ಳುವುದಕ್ಕಾಗಿ ರಾಮನು ಒಂದು ಶಿಲಾ ಪೀಠವನ್ನು ಮಾಡುತ್ತಾನೆ. ಮೈಥಿಲಿ ಸೆರೆಯಿಂದ ವನವಾಸದಿಂದ ಪಾರಾಗಿ ಬಂದಾಗ ಅವಳ ಅತ್ತೆಯದಿರು ಅವಳಿಗೆ ತಾವೇ ಶುಶ್ರೂಷೆ ಮಾಡುತ್ತಾರೆ. ಕೌಸಲ್ಯೆ ಸೊಸೆಯನ್ನು ಮಗಳನ್ನು ಎಂಬಂತೆ ಅಪ್ಪಿಕೊಳ್ಳುತ್ತಾಳೆ. ಅಣ್ಣನಿಗೆ ಶತ್ರುಘ್ನನೇ ಕ್ಷೌರಕರ್ಮಕ್ಕೆ ಏರ್ಪಾಡು ಮಾಡಿಸುತ್ತಾನೆ. ಅವನ ದೊರೆತನಕ್ಕೆ ಒಬ್ಬ ತಮ್ಮನು ಚಾಮರವನ್ನು ಹಿಡಿಯುತ್ತಾನೆ, ಒಬ್ಬ ತಮ್ಮನು ಛತ್ರವನ್ನು ಹಿಡಿಯುತ್ತಾನೆ.

ರಾಮಚಂದ್ರನ ಸಂಸಾರದ ಮುಖ್ಯ ಸೂತ್ರ ಒಬ್ಬರಿಗೊಬ್ಬರು ಸರಿಸಿಕೊಂಡು ನಡೆಯುವುದು; ಒಬ್ಬರೊಬ್ಬರಲ್ಲಿ ಪ್ರೇಮವನ್ನು ಬೆಳೆಸಿಕೊಳ್ಳುವುದು; ಆವಶ್ಯಕ ಕಂಡಲ್ಲಿ ಅದರ ರಸವನ್ನು ಧಾರಾಳವಾಗಿ ಸೂಸುವುದು. ಈ ಜೀವನದಲ್ಲಿ ಅಲ್ಲಲ್ಲಿ ಕಠಿಣವಾದ ಮಾತುಂಟು, ನಿಷ್ಠುರವಾದ ಭಾವವುಂಟು, ಕ್ರೂರವಾದ ನಡೆಯುಂಟು. ಆದರೆ ಇದು ಯಾವುದೂ ಬಹು ಹೊತ್ತು ನಿಂತದಲ್ಲ; ಎಲ್ಲ ಹೊತ್ತಿನ ಪ್ರೇಮಸೂರ್ಯನಿಗೆ ಸ್ವಲ್ಪ ಹೊತ್ತು ಹಿಡಿದ ಗ್ರಹಣದಂತೆ ಯಾವುದೋ ಕಾರಣದಿಂದ ಬಂದು ಶೀಘ್ರದಲ್ಲಿ ಮರೆಯತಕ್ಕದು.

### ವ್ಯವಹಾರದ ನಯ

ಸಂಸಾರದ ಜೀವನದಲ್ಲಿ ಹೀಗೆ ಕಾಣುವ ಸಂಸ್ಕೃತಿ ಉಳಿದ ಜೀವನದಲ್ಲಿಯೂ ರೂಪುಗೊಂಡು ಕಾಣುತ್ತದೆ. ಆ ರೂಪು ಮಾತುಕಥೆಯ ನಯ. ಸಂಸ್ಕೃತವಾದ ಎಲ್ಲ ಸಮಾಜದಲ್ಲಿಯೂ ನಯ ಎನ್ನುವುದು ಇದ್ದೇ ಇರಬೇಕು. ನಯದ ಸ್ವರೂಪವನ್ನು ಅರಿಯದವರು ಅದನ್ನು ಕಪಟವೆಂದು ಭಾವಿಸುವ ಸಂಭವವಿದೆ. ಕಪಟಿಯಾದವನು ಮನಸ್ಸಿನಲ್ಲಿಲ್ಲದ ನಯವನ್ನು ಹೊರಗೆ ತೋರಿಸಿ, ಯಾವುದೋ ಸಂದರ್ಭದಲ್ಲಿ ಒಳಗೆ ನಯವಿಲ್ಲವೆನ್ನುವುದನ್ನು ಮುಚ್ಚಿಡಲಾರದೆ ಪ್ರಕಟಮಾಡಿ, ನಯಕ್ಕೇ ಒಂದು ಕೆಟ್ಟಹೆಸರನ್ನು ತರುತ್ತಾನೆ. ಆದರೆ ಇದು ನಯದ ತಪ್ಪಲ್ಲ. ನಿಜವಾದ ನಯವೆನ್ನುವುದು ಒಳಗು ಹೊರಗು ಎರಡಕ್ಕೂ ಸಂಬಂಧಪಟ್ಟದು: ಬರಿಯ ಮಾತಿನ ನಯವಲ್ಲ; ಬರಿಯ ನಡತೆಯ ನಯವಲ್ಲ. ಅದರ ಮೂಲವಿರುವುದು ಭಾವನೆಯ ಪ್ರಪಂಚದಲ್ಲಿ. ರಾಮನು ಎಲ್ಲರ ವಿಷಯದಲ್ಲೂ ಪ್ರೇಮದಿಂದ ನಡೆದುಕೊಂಡನು. ಅದಕ್ಕೆ ಕಾರಣ ಅವನು ಸರ್ವಭೂತಹಿತದಲ್ಲಿ ರತನಾಗಿದ್ದದು. ಸೇವಕರು ಸಾಮಂತರು ಎನ್ನದೆ ಎಲ್ಲರನ್ನೂ ಗೌರವದಿಂದ ಕಂಡ ದಶರಥನೂ ಅವನ ಮಕ್ಕಳೂ ಈ ನಯವನ್ನು ಅಭ್ಯಾಸಮಾಡಿದ್ದರು. ದಶರಥನು ಜನಕನ ಮನೆಗೆ ಬರುವುದಕ್ಕೆ ಅಪ್ಪಣೆಯನ್ನು ಬೇಡಿದಾಗ ಆತನು ಈ ಹಿರಿಯನಿಗೆ "ನಿಮ್ಮ ಮನೆಯಲ್ಲಿ ಇದೇನು ವಿಚಾರ? ಇಲ್ಲಿ ನೀವು ಅಪ್ಪಣೆಮಾಡಬೇಕು" ಎಂದನು. ರಾಮನು ಅರಣ್ಯಕ್ಕೆ ಹೊರಡಲು ಗುಹನು "ನನ್ನ ಸರ್ವಸ್ವವೂ ನಿನ್ನ

ದೆಂದೆಣಿಸು. ನಾನು ಯಾವ ಸೇವೆಯನ್ನು ಮಾಡಲಿ, ನಿರೂಪಿಸು'' ಎಂದನು. ಭರತನು ರಾಮನ ದಾರಿಯನ್ನು ಹಿಡಿದು ಹೋಗುತ್ತ ತನ್ನ ಆಶ್ರಮದಲ್ಲಿ ಆತಿಥ್ಯವನ್ನು ಸ್ವೀಕರಿಸಿ ಮುಂದೆ ಹೊರಡಲು ಉದ್ಯುಕ್ತನಾದಾಗ ಭರದ್ವಾಜನಿಗೆ ಇಷ್ಟೆಲ್ಲ ಅನಾಹುತಕ್ಕೆ ಕಾರಣಳಾದ ಕೈಕಯಿ ದೇವಿ ಯಾರು ಎಂದು ತಿಳಿಯಲು ಅಪೇಕ್ಷೆಯಾಯಿತು: ಅವನು ಭರತನನ್ನು ಕುರಿತು "ವಿಶೇಷಂ ಜ್ಞಾತುಮಿಚ್ಛಾಮಿ ಮಾತೃಣಾಂ ತವ ರಾಘವ'' ಎಂದನು. ಈ ಪ್ರಶ್ನೆ ಕೇಳಿರುವ ಗಂಭೀರ ರೀತಿ ಋಷಿಯಾದವನಿಗೆ ತಕ್ಕದು. ಭರತನು ತನ್ನ ತಾಯಿಯರ ಗುರುತನ್ನು ಹೇಳುತ್ತ ಕೈಕಯಿಯನ್ನು ಸ್ವಲ್ಪ ನಿಂದಿಸುತ್ತಾನೆ: ಭರದ್ವಾಜನು "ಅಣ್ಣಾ, ನೀನು ತಾಯನ್ನು ದೂರಬಾರದು'' ಎನ್ನುವನು. ರಾಮನು ಅಗಸ್ತ್ಯನ ಆಶ್ರಮಕ್ಕೆ ಹೋದಾಗ ಶಿಷ್ಯರು ಒಳಗೆ ಹೋಗಿ ಋಷಿಗೆ "ದಶರಥನ ಮಕ್ಕಳಂತೆ, ರಾಮ ಲಕ್ಷ್ಮಣ ಎನ್ನುವವರು ತಮ್ಮ ದರ್ಶನಕ್ಕೆ ಬಂದಿದಾರೆ'' ಎನ್ನಲು ಅಗಸ್ತ್ಯನು "ಕರೆತನ್ನಿ. ಇದಕ್ಕೆ ಕೇಳುವುದೇನು? ಒಳಕ್ಕೆ ಆಗಲೇ ಏಕೆ ಕರೆತರಲಿಲ್ಲ'' ಎನ್ನುವನು; ಬಂದ ಜನಕ್ಕೆ ಚೆನ್ನಾಗಿ ನಡೆದುಕೊಳ್ಳುವುದು ಅವನಿಗೆ ಅಷ್ಟು ಆವಶ್ಯಕವಾಗಿ ಕಂಡಿತು. ರಾಮನು ಶಬರಿಯನ್ನು ನೋಡಿದವೇಳೆ "ಅಮ್ಮಾ ನಿನ್ನ ತಪಸ್ಸು ವೃದ್ಧಿಯಾಗುತ್ತಿದೆಯೇ'' ಎಂದು ಕೇಳಲು ಅವಳು "ನನ್ನ ತಪಸ್ಸು ನಿನ್ನ ದರ್ಶನದಿಂದ ಈಗ ಸಿದ್ಧಿಯಾಯಿತು'' ಎಂದಳು. "ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ನಬ್ರೂಯಾತ್ ಸತ್ಯಮಪ್ರಿಯಂ'' ಎಂಬ ಸೂತ್ರಕ್ಕೆ ಸತ್ಯ ಪ್ರಿಯವಾದರೆ ಹೇಳು ಅಪ್ರಿಯವಾದರೆ ಹೇಳಬೇಡ ಎಂದು ಅರ್ಥವಲ್ಲ. ಸತ್ಯವನ್ನು ಹೇಳು. ಅದನ್ನು ಪ್ರಿಯವಾಗುವಂತೆ ಹೇಳು, ಅಪ್ರಿಯವಾಗುವಂತೆ ಹೇಳಬೇಡ ಎಂದು ಅದಕ್ಕೆ ಅರ್ಥ. ಯಾವ ಮಾತನ್ನಾದರೂ ಹಿತವಾಗುವಂತೆ ಹೇಳಬಹುದು. ಅದಕ್ಕೆ ನಯ ಬೇಕು. ಇದು ಬರುವುದಕ್ಕೆ ಎಲ್ಲಬಾಳನ್ನೂ ಕುರಿತು ಕನಿಕರವಿರಬೇಕು; ಜೊತೆಯ ಜೀವವೆಂದರೆ ಅಕ್ಕರೆ ಇರಬೇಕು.

### ಅಕ್ಕರೆ ಮಾನ್ಯವಸ್ತು

ಬದುಕು ಚೆನ್ನಾಗುವುದು ಅಕ್ಕರೆಯಿಂದ ಮಮತೆಯಿಂದ ಎಂದು ಕವಿ ಬಹುಸಲ ತೋರಿಸಿದಾನೆ. ಕಾವ್ಯದ ಮುಖ್ಯ ಪಾತ್ರಗಳು, ಪ್ರಾಸಂಗಿಕ

ಪಾತ್ರಗಳು, ಈ ಭಾವಗಳಿಂದ ಮನಸ್ಸನ್ನು ತುಂಬಿಕೊಂಡು ಮಾತನಾಡು ತ್ತಾರೆ. ರಾಮನು ಕೋಸಲದ ಪರಿಧಿಯನ್ನು ಬಿಟ್ಟುಹೋಗುವ ಮೊದಲು "ಆಪೃಚ್ಛೇತ್ವಾಂ ಪುರಿಶ್ರೇಷ್ಠೇ ಕಾಕುತ್ಥ್ಸ ಪರಿಪಾಲಿತೇ ದೈವತಾನಿ ಚ ಯಾನಿ ತ್ವಾಂ ಪಾಲಯಂತಿ ಅವಸಂತಿಚ. ನಿವೃತ್ತ ವನವಾಸಸ್ತ್ವಾಂ ಅನೃಣೋ ಜಗತೀಪತೇಃ ಪುನಃ ದ್ರಕ್ಷ್ಯಾಮಿ ಮಾತ್ರಾಚ ಪಿತ್ರಾಚ ಸಹಸಂಗತಃ" ಎಂದು ಹೇಳಿ ಜೊತೆಗೆ ಬಂದಿದ್ದ ಜನಪದದ ಜನವನ್ನು ಕುರಿತು "ಅನುಕ್ರೋಶೋ ದಯಾಚೈವ ಯಥಾರ್ಹಂ ಮಯಿ ವಃ ಕೃತಃ; ಚಿರಂ ದುಃಖಸ್ಯ ಪಾಪೀಯೋ ಗಮ್ಯತಾಂ ಅರ್ಥಸಿದ್ಧಯೇ" ಎಂದು ಹೇಳುತ್ತಾನೆ. ನಾನು ಮರಳಿ ಬಂದು ಸರಯೂ ನದಿಯಲ್ಲಿ ಸ್ನಾನಮಾಡುತ್ತ ಅದರ ತೀರದ ವನಗಳಲ್ಲಿ ಬೇಟೆಯಾಡುತ್ತ ಅಂದಿನಂತೆ ಎಂದು ಮತ್ತೆ ವಿಹರಿಸುವೆನೋ ಎಂದು ರಾಮನು ಇದಾದ ಕೊಂಚ ದಿನದಮೇಲೆ ಮತ್ತೆ ಹೇಳಿದನು. ತಾನು ಹುಟ್ಟಿ ಬೆಳೆದ ನಾಡು ಊರು ಇವನಿಗೆ ವ್ಯಕ್ತಿಗಳಂತೆ ನಿಜವಾಗಿದ್ದವು. ಅರಣ್ಯದಲ್ಲಿರುತ್ತ ಲಕ್ಷ್ಮಣನು ಒಂದುಸಲ ಈ ವೇಳೆಗೆ ಭರತನು ಸರಯೂ ನದಿಗೆ ಸ್ನಾನಕ್ಕಾಗಿ ಹೊರಟಿರುವನು ಎಂದು ಊರನ್ನು ಊರ ಸ್ನೇಹವನ್ನು ನೆನೆಯುತ್ತಾನೆ. ಭರತನೂ ತಾಯಿಯರೂ ಬಂದು ದಶರಥನು ತೀರಿಹೋದ ಮಾತನ್ನು ರಾಮನಿಗೆ ತಿಳಿಸಲು ಅವನು ತಂದೆಗೆ ತರ್ಪಣವನ್ನು ಕೊಡುವಲ್ಲಿ ಇಂಗುದೀಪಿಣ್ಯಾಕವನ್ನು ಉಪಯೋಗಿಸಿದನು. ಚಕ್ರವರ್ತಿಯ ಮಗನು ತಂದೆಗೆ ಪಿಂಡಹಾಕಬೇಕಾದರೆ ಇಂಗುದಿಯ ಹಿಂಡಿಯನ್ನು ಕೊಡಬೇಕಾಯಿತೇ ಎಂದು ತಾಯದಿರೆಲ್ಲ ದುಃಖಿಸಿದರು. ಚಕ್ರವರ್ತಿಯ ಮಗನಿಗೆ ಈ ಸ್ಥಿತಿ ಬಂದಿತೇ ಎಂಬ ಭಾವ ಹೀಗೆ ಬರುತ್ತಲೇ ಇರುತ್ತದೆ. ಮನುಷ್ಯನು ಯಾವುದನ್ನು ತಿನ್ನುತ್ತಾನೋ ಅದನ್ನು ದೇವತೆಗಳಿಗೆ ಕೊಡುತ್ತಾನೆ ಎಂದುಕೊಂಡು ರಾಣಿಯರು ಆ ಅವಸ್ಥೆಯ ಸಾರವನ್ನು ಗ್ರಹಿಸಿ ಮತ್ತಷ್ಟು ಖಿನ್ನರಾದರು. ಸತ್ತವನಿಗೆ ಕೊಟ್ಟದ್ದು ಮಾತ್ರವಲ್ಲ, ಇರುವವನು ತಿನ್ನುವುದೂ ಇದನ್ನೆ. ಸೀತಾದೇವಿ ಅಶೋಕವನದ ಸೆರೆಯಲ್ಲಿರುತ್ತ ದುಃಖದ ಒಂದು ಹೊತ್ತಿನಲ್ಲಿ "ಆಸೆ ಆಕ್ರೋಶ ಒಂದೂ ಇಲ್ಲದ ಮುನಿಗಳು ಧನ್ಯರು" ಎನ್ನುತ್ತಾಳೆ. "ಧನ್ಯಾಃ ಖಲು ಮಹಾತ್ಮಾನೋ ಮುನಯಃ ತ್ಯಕ್ತಕಿಲ್ಬಿಷಾಃ ಯೇಷಾಂ ನಸ್ತಃ

ಪ್ರಿಯಾ ಪ್ರಿಯೌ. ಪ್ರಿಯಾತ್ ನಸಂಭವೇತ್ ದುಃಖಂ, ಅಪ್ರಿಯಾತ್ ಅಧಿಕಂ ಭಯಂ. ತಾಭ್ಯಾಂ ಹಿ ಯೇ ವಿಯುಜ್ಯಂತೇ ನಮಸ್ತೇಷಾಂ ಮಹಾತ್ಮನಾಂ.'' ಆದರೆ ಮುನಿಗಳ ಈ ಸ್ಥಿತಿ ಒಳ್ಳೆಯದೆನ್ನುವುದು ಸ್ವಲ್ಪ ಹೊತ್ತಿನ ಭಾವ. ಹನುಮಂತನನ್ನು ಕಂಡವೇಳೆ ದೇವಿ ''ಕಲ್ಯಾಣೀ ಬತಗಾಥೇಯಂ ಲೌಕಿಕೀ ಪ್ರತಿಭಾತಿ ಮಾ, ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ'' ಎಂದು ಹೇಳುತ್ತಾಳೆ. ಮನುಷ್ಯನು ಕಷ್ಟವನ್ನು ನಿಷ್ಠುರವನ್ನು ಸಹಿಸಿಕೊಂಡು ಜೀವದಿಂದಿರಲಿ, ಒಂದು ದಿನವಲ್ಲದಿದ್ದರೆ ಇನ್ನೊಂದು ದಿನ ಒಳ್ಳೆಯದಾಗುತ್ತದೆ. ''ಜೀವನ್ ಭದ್ರಾಣಿ ಪಶ್ಯತಿ.'' ಜಾನಕೀದೇವಿ ಪತಿಯ ಅಂಗುಳೀಯಕವನ್ನು ನೋಡಿದಳು; ಅವನ ಕೈ ಸೋಕಿದ್ದ ಉಂಗುರವೆಂದು ಅವನನ್ನೇ ಪಡೆದಂತೆ ಸಂತೋಷಪಟ್ಟಳು. ಹನುಮಂತನು ರಾಮನ ಕೈಗೆ ಚೂಡಾಮಣಿಯನ್ನು ಕೊಟ್ಟಾಗ ರಾಮನ ಮನಸ್ಸೂ ಹೀಗೆಯೇ ಭಾವಪರವಶವಾಯಿತು. ''ಈ ರತ್ನವನ್ನು ನಮ್ಮ ಮದುವೆಯಲ್ಲಿ ಮಾವ ಜನಕರಾಜನು ವೈದೇಹಿಗೆ ಕೊಟ್ಟನು. ಅವಳಿಗೆ ಅದನ್ನು ತಲೆಗಿಡಲು ಬಹು ಚೆನ್ನಾಗಿತ್ತು'' ಎಂದು ಅವನು ನೆನೆದುಕೊಂಡನು. ''ಮಣಿರತ್ನಮಿದಂ ದತ್ತಂ ವೈದೇಹ್ಯಾ ಶ್ವಶುರೇಣ ಮೇ ವಧೂಕಾಲೇ ಯಥಾ ಬದ್ಧಂ ಅಧಿಕಂ ಮೂರ್ಧ್ನಿ ಶೋಭತೇ.'' ಇದನ್ನು ನೋಡಿ ರಾಮನಿಗೆ ತಂದೆ ಮಾವಂದಿರನ್ನು ನೋಡಿದಂತಾಯಿತು. ''ಇದಂ ದೃಷ್ಟ್ವಾ ಮಣಿಶ್ರೇಷ್ಠಂ ಯಥಾ ತಾತಸ್ಯ ದರ್ಶನಂ ಅದ್ಯಾಸ್ಮಿ ಅವಗತಃ ಸೌಮ್ಯ ವೈದೇಹಸ್ಯ ತಥಾ ವಿಭೋಃ.'' ಅರಣ್ಯದಲ್ಲಿರುತ್ತ ಬಳಿಯ ಮರದಲ್ಲಿ ಒಂದು ಪಕ್ಷಿ ಕೂಗಿದಾಗ ಅದರ ಸ್ವರ ಪುತ್ರ ಪುತ್ರ ಎಂಬಂತೆ ಇರಲು ಊರಲ್ಲಿ ನಮ್ಮ ತಾಯಿ ನನ್ನನ್ನು ಕರೆದದ್ದು ಹೀಗೆ ಇರುತ್ತಿತ್ತು ಎಂದು ರಾಮನು ಸೀತೆಗೆ ಹೇಳುತ್ತಾನೆ. ಸೀತಾದೇವಿ ತನ್ನ ಕತೆಯನ್ನೆಲ್ಲ ಹೇಳಿದಮೇಲೆ ಅನಸೂಯೆ ಅವಳನ್ನು ಅಪ್ಪಿಕೊಂಡು ಮಂಡೆಯನ್ನು ಮುದ್ದಿಸಿ ''ನೀನು ಎಷ್ಟು ಚೆನ್ನಾಗಿ ಮಾತನಾಡುತ್ತೀಯೆ! ನಿನ್ನ ಮಾತು ಎಷ್ಟು ವಿರಳ, ಎಷ್ಟು ಸೊಗಸು, ಎಷ್ಟು ಮಧುರ'' ಎಂದು ಅವಳನ್ನು ಹೊಗಳಿ ''ಸಂಜೆಯಾಯಿತು, ರಾಮನ ಬಳಿಗೆ ಹೋಗು ಎನ್ನುತ್ತಾಳೆ.'' ಹೋಗುವ ಮೊದಲು ಇಷ್ಟು ಮಾತ್ರ ಅವಳಿಗೆ ಅಪೇಕ್ಷೆ:

"ಅಲಂಕುರು ಚ ತಾವತ್ತ್ವಂ ಪ್ರತ್ಯಕ್ಷಂ ಮಮ ಮೈಥಿಲಿ. ಪ್ರೀತಿಂ ಜನಯ ಮೇ ವತ್ಸೇ ದಿವ್ಯಾಲಂಕಾರ ಶೋಭಿತಾ." ವೃದ್ಧೆಯಾದ ಈ ತಾಪಸಿಗೆ ಪತಿಯ ವಿಷಯದಲ್ಲಿ ಹೆಮ್ಮೆಪಡುತ್ತಿರುವ ತರುಣಿಯಾದ ರಾಜಕುವರಿಯ ಸುಖದಲ್ಲಿ ತನ್ನ ಸುಖ ಮರಳಿ ಬಾಳಿತು. ತನ್ನೆದುರಿಗೆ ಅವಳು ಶೃಂಗಾರ ಮಾಡಿಕೊಳ್ಳಬೇಕು; ಶೃಂಗಾರ ಮಾಡಿಕೊಳ್ಳುವುದನ್ನು ತಾನು ನೋಡ ಬೇಕು. ಮುದಿಯಾಗುತ್ತಿರುವ ಬಾಳಿಗೆ ಎಳೆಯ ಬಾಳನ್ನು ನೋಡು ವುದರಲ್ಲಿ ಒಂದು ದೊಡ್ಡ ಸಂತೋಷ. ತರುಣಿಯನ್ನು ಅನುಭವಿಸುವ ಪತಿಗಿಂತಲೂ ಅವಳಿಗೆ ಆಶೀರ್ವಾದಮಾಡುವ ವೃದ್ಧೆಯರು ಅವಳ ಚೆಲುವನ್ನು ಚೆನ್ನಾಗಿ ಕಾಣುವರು. ಎಲ್ಲ ಮುಪ್ಪಿಗೆ ಎಲ್ಲ ತಾರುಣ್ಯವೂ ವತ್ಸ. ರಾಮಾಯಣದ ಕವಿಗೆ ಮಮತೆ ಮಾನ್ಯವಸ್ತು. ಬಾಳಿನ ಕಾಡಿನಲ್ಲಿ ಅದು ಮಲ್ಲಿಗೆಯಂತೆ. ಅದರಿಂದ ಕಾಡು ಶೋಭಿಸುತ್ತದೆ; ಗಾಳಿ ಇಂಪಾಗುತ್ತದೆ. ಕಾಡು ಕಾಣುವ ಚೆಲುವಿನ ಕನಸು ಅದರಲ್ಲಿ ರೂಪುಗೊಳ್ಳುತ್ತದೆ. ಕಾಡಿನ ಆಸೆ ಇದರಿಂದ ಪೂರ್ಣವಾಗುತ್ತದೆ.

### ಜಾನಪದ ಜೀವನ

ರಾಮಾಯಣದಲ್ಲಿ ನಮಗೆ ಆಗಣ ಜಾನಪದ ಜೀವನದ ವಿಷಯ ವಾಗಿ ವಿವರಗಳೇನೂ ದೊರೆಯುವುದಿಲ್ಲ. ಕಾವ್ಯ ಒಂದು ರಾಜನ ಸಂಸಾರದ ಕಥೆ, ಒಬ್ಬ ರಾಜಕುಮಾರನ ಸಾಹಸ ಚರಿತದ ಕಥೆ. ಆದಕಾರಣ ಅದರಲ್ಲಿ ಜನರ ಜೀವನದ ವಿಷಯ ಬರಬೇಕಾಗಲಿಲ್ಲ. ಆದರೂ ಆ ಜೀವನದ ಒಂದೆರಡು ವಿವರ ನಮಗೆ ಪ್ರಾಸಂಗಿಕವಾಗಿ ಕಾಣುತ್ತವೆ. ರಾಷ್ಟ್ರವನ್ನು ಆಗ ವಿಷಯವೆಂದು ಕರೆಯುತ್ತಿದ್ದರು. ಕಥೆಯ ಆರಂಭದಲ್ಲಿ ಕಾಣುವಂತೆ ರಾಜನು ತನ್ನ ಮಗನನ್ನು ಯುವರಾಜನನ್ನಾಗಿ ಮಾಡುವ ಮೊದಲು ಜನರ ಮುಖಂಡರನ್ನು ಕರೆಯಿಸಿ ಕೇಳಿದನು. ಅವರು ಕುಮಾರನನ್ನು ಬಹಳವಾಗಿ ಪ್ರಶಂಸಿಸಿ ಅವನನ್ನು ಅಗತ್ಯವಾಗಿ ಯುವರಾಜನಾಗಿ ಮಾಡಬೇಕೆಂದರು. ರಾಜನು ಅರ್ಧ ಹಾಸ್ಯದಲ್ಲಿ ಅವ ರನ್ನು, ನನ್ನ ವಿಷಯ ಬೇಸರವಾಗಿ ಬೇರೆಯವನನ್ನು ಬೇಡುತ್ತಿದೀರೋ, ಎಂದು ಕೇಳಿದನು. ರಾಜನ ಮಗನಿಗೆ ಅವರಿಗೆ ಮನಸ್ಸು ಎಷ್ಟು ಹತ್ತಿರ ವಿದ್ದಿತೆಂದು ಅವರ ಮಾತಿನಿಂದ ತಿಳಿಯುತ್ತದೆ. ಅವರ ಸುಖ ತನ್ನ

ಸುಖ, ಅವರ ಕಷ್ಟ ತನ್ನ ಕಷ್ಟ, ಎಂದು ಅವನು ನಡೆದುಕೊಳ್ಳುತ್ತಿದ್ದ ನೆಂದು ಅವರ ಭಾವನೆ. ಈ ಚಿತ್ರದಲ್ಲಿ ರಾಷ್ಟ್ರದ ಜನರ ಮತ್ತು ರಾಜನ ಸಂಬಂಧ ಒಂದು ಹಳ್ಳಿಯ ಜನರ ಮತ್ತು ಅವರ ಹೆಗ್ಗಡೆಯ ಸಂಬಂಧ ದಿಂದ ಬೇರೆಯಾಗಿರಲಿಲ್ಲ. ರಾಜನು ರಾಮನನ್ನು ಯುವರಾಜನಾಗಿ ಮಾಡುವುದಕ್ಕೆ ಇವರ ಒಪ್ಪಿಗೆಯನ್ನು ಪಡೆದನಾದರೂ ಅದು ತಪ್ಪಬೇಕಾಗಿ ಬಂದಾಗ ಜನರನ್ನು ಯಾರೂ ಕೇಳಲಿಲ್ಲ; ಜನರು ಇದು ಕೂಡದು ಎಂದು ತಡೆದಂತೆಯೂ ಸೂಚನೆಯಿಲ್ಲ. ರಾಮನು ಅರಣ್ಯಕ್ಕೆ ಹೊರಟಾಗ ಜನ ಅವನ ಹಿಂದೆ ಅನೇಕರು ಬಹು ದೂರ ಹೋದರು. ಹೊರಡುವ ಮೊದಲು ಅವನು ಕೊಟ್ಟ ವಸ್ತುಗಳನ್ನು ಹಲವರು ಸ್ವೀಕರಿಸಿದರು. ಒಬ್ಬ ಬ್ರಾಹ್ಮಣನು ಹೆಂಡತಿಯ ಪ್ರೇರಣೆಯಿಂದ ಅವನ ಬಳಿಗೆ ಬಂದು ದಾನ ಬೇಡಿದನು; ರಾಮನು ಅವನೊಂದಿಗೆ ಸ್ವಲ್ಪ ಹಾಸ್ಯಮಾಡಿ ಅವನಿಗೆ ಬೇಕಾದಷ್ಟು ಐಶ್ವರ್ಯವನ್ನು ಕೊಟ್ಟನು. ಬಹು ದೂರ ಅನುಸರಿಸಿ ಬಂದ ಜನರನ್ನು ರಾಮನು ಇನ್ನು ಸಾಕು ನೀವು ಹಿಂದಕ್ಕೆ ಹೋಗಿ ಎಂದನು; ಅವರು ಹೋಗಲಿಲ್ಲ. ಬೆಳಗ್ಗೆ ಅವರು ಏಳುವ ಮೊದಲೇ ಎದ್ದು ರಥವನ್ನು ಓಡಿಸಿಕೊಂಡು ದಾರಿ ಮರೆಯುವಂತೆ ಮಾಡಿ ಅವನು ಹೊರಟುಹೋಗಬೇಕಾಯಿತು. ಆಮೇಲೆ ಇವರು ಹಲುಬಿದರು. ವಾಲ್ಮೀಕಿ ಈ ರಾಷ್ಟ್ರದ ಒಂದು ಕೊನೆಗೆ ಇದ್ದನೆಂದು ಕಾಣುತ್ತದೆ. ಅವನ ಆಶ್ರಮದ ಸುತ್ತುಮುತ್ತಿನಲ್ಲಿ ಹಳ್ಳಿಗಳಿದ್ದಿರಬೇಕು. ಅವನು ಅವುಗಳ ಜೀವನವನ್ನು ನೋಡಿಯೇ ಜೀವನದ ವಿಷಯದಲ್ಲಿ ತನ್ನ ಅಪ್ರತಿಮವಾದ ತಿಳಿವಳಿಕೆಯನ್ನು ಪಡೆದಿರಬೇಕು. ಒಟ್ಟಿನಲ್ಲಿ ನಮಗೆ ಇದು ಕಾಣುತ್ತದೆ. ಯಾರು ಆಳುವರು ಹೇಗೆ ಆಳುವರು ಎನ್ನುವುದು ಈಗಿನ ಜನಕ್ಕೆ ಹೇಗೋ ಹಾಗೆ ಆಗಿನ ಜನಕ್ಕೂ ಮುಖ್ಯ ವಿಷಯವಾಗಿ ರಲಿಲ್ಲ. ಆಳುವವನನ್ನು ಕುರಿತು ಭಕ್ತಿ ನಮ್ರತೆ, ಅವನ ಸುಖದಲ್ಲಿ ಕಷ್ಟದಲ್ಲಿ ಸಹಾನುಭೂತಿ, ಕಲ್ಮಷವರಿಯದ ಒಂದು ಉದಾತ್ತ ರೀತಿಯ ಸರಳತೆ, ಇವು ಈ ಜನಪದ ಜೀವನದ ಮುಖ್ಯ ಲಕ್ಷಣಗಳಾಗಿದ್ದುವು. ಸಂಸಾರದ ವಿಷಯದಲ್ಲಿ ಹೇಳಿರುವಂತೆ ಜನಪದ ಜೀವನದ ವಿಷಯ ದಲ್ಲಿಯೂ ನಾವು ಈ ಮಾತನ್ನು ಹೇಳಬಹುದು. ಅಂದಿನ ಜೀವನದ

ಅಚ್ಚೇ ಇಂದಿಗೂ ನಮ್ಮಲ್ಲಿ ಬಳಕೆಯಲ್ಲಿರುವುದು. ಇದು ಅಷ್ಟೇನೂ ತಿಳಿದ ಜನವಲ್ಲ; ತಕ್ಕ ಮಟ್ಟಿಗೆ ಒಳ್ಳೆಯದು. ಒಟ್ಟಿನಲ್ಲಿ ಬಲ್ಲವರ ಕನಿಕರಕ್ಕೆ ಪಾತ್ರವಾಗತಕ್ಕದು.

### ನರ, ವಾನರ, ರಾಕ್ಷಸ

ವಾಲ್ಮೀಕಿ ತನ್ನ ಕಾವ್ಯದಲ್ಲಿ ಅಯೋಧ್ಯೆಯ ಐಶ್ವರ್ಯ ಸಂಸ್ಕೃತಿಗಳ ಜೊತೆಗೆ ಇನ್ನೆರಡು ಐಶ್ವರ್ಯ ಸಂಸ್ಕೃತಿಗಳನ್ನು ಸಹಾನುಭೂತಿಯಿಂದ ವರ್ಣಿಸಿದಾನೆ. ಅಯೋಧ್ಯೆ ಕಿಷ್ಕಿಂಧೆ ಲಂಕೆ ಮೂರರಲ್ಲಿ ವಾಲ್ಮೀಕಿಗೆ ಒಂದು ಪ್ರಿಯ ಒಂದು ಪ್ರಿಯವಲ್ಲದ್ದು ಎಂಬ ಚಿಹ್ನೆ ಕಾಣುವುದಿಲ್ಲ. ರಾಕ್ಷಸರಾಜನ ನಗರ ಮಲೆಯಮೇಲೆ ಕಂಡಿತು. "ಆಲಿಖನ್ತೀಮಿವಾಕಾಶಂ ಉತ್ಥಿತಾಂ ಪಶ್ಯ ಲಕ್ಷ್ಮಣ ಮನಸೇವ ಕೃತಾಂ ಲಂಕಾಂ ನಗಾಗ್ರೇ ವಿಶ್ವಕರ್ಮಣಾ. ವಿಮಾನೈಃ ಬಹುಭಿಃ ಲಂಕಾ ಸಂಕೀರ್ಣಾ ಭುವಿರಾಜತೇ." ಸುಂದರವಾದ ನಗರ. ಅದರಲ್ಲಿ ಸೌಧಗಳು ಇದ್ದವು; ವನ ಉಪವನಗಳು ಇದ್ದವು. ಆದರ ಐಶ್ವರ್ಯ ಅಯೋಧ್ಯೆಯ ಐಶ್ವರ್ಯಕ್ಕೆ ಕಡಮೆಯಾಗಿರಲಿಲ್ಲ. ಕಿಷ್ಕಿಂಧೆಯನ್ನು ಕವಿ ಗುಹೆ ಎಂದು ಕರೆಯುತ್ತಾನೆ; ಆದರೆ ಅದೂ ಒಂದು ಊರಾಗಿಯೇ ಇದ್ದಿತೆಂದು ಕಾಣುತ್ತದೆ. ಒಳಹೊಗುವುದಕ್ಕೆ ಗುಹೆಯಂತೆ ಕಾಣುವಹಾಗೆ ಇದರ ಸುತ್ತ ಬೆಟ್ಟಗಳಿದ್ದಿರಬೇಕು. ಸೊಂಡೂರು ಊರ ವರ್ಣನೆಯನ್ನು ಕೇಳಿದರೆ ಕಿಷ್ಕಿಂಧೆ ಇಂಥ ಒಂದು ಊರಾಗಿದ್ದಿರಬಹುದೆಂದು ತೋಚುತ್ತದೆ. ಇಲ್ಲಿಯೂ ರಾಜನ ವಿಭವದ, ಭೋಗದ, ಸಾಮಗ್ರಿ ಉಂಟು. ಅಯೋಧ್ಯೆಯಲ್ಲಿದ್ದಂತೆ ಕಿಷ್ಕಿಂಧೆ ಲಂಕೆಯಲ್ಲಿಯೂ ಒಂದು ರಾಜ್ಯವ್ಯವಸ್ಥೆ ಕಟ್ಟು ಕಟ್ಟಳೆ ಎಲ್ಲ ಇದ್ದವು. ನರ ವಾನರ ರಾಕ್ಷಸರಿಗೆ ವ್ಯತ್ಯಾಸವಿದ್ದದು ಅವರ ಬಾಹ್ಯ ಸಂಪತ್ತಿನಲ್ಲಿ ಅಲ್ಲ; ಅವರ ರೀತಿ ನೀತಿಗಳಲ್ಲಿ. ಅಯೋಧ್ಯೆಯಲ್ಲಿದ್ದಂತೆ ಲಂಕೆಯಲ್ಲಿ ವೇದಘೋಷ ಕೂಡ ಉಂಟು. ರಾಕ್ಷಸರ ನಡತೆ ಅವರವರಲ್ಲಿ ಚೆನ್ನಾಗಿಯೇ ಇದ್ದಿತೆಂದು ಕಾಣುತ್ತದೆ. ಎಷ್ಟು ಚೆನ್ನಾಗಿದ್ದಿತೆನ್ನುವುದು ಒಂದು ಮಾತಿನಿಂದ ವ್ಯಕ್ತವಾಗುತ್ತದೆ. ವಿಭೀಷಣನು ಅಣ್ಣನನ್ನು ತೊರೆದು ರಾಮನ ಪಾಳೆಯಕ್ಕೆ ಹೋದರೂ ಅವನ ಸಂಸಾರಕ್ಕೆ ರಾವಣನಾಗಲಿ ಇಂದ್ರಜಿತ್ತಾಗಲಿ ಕೆಡಕನ್ನು ಮಾಡಲಿಲ್ಲ. ಇದು

ಕೊಂಚದ ಮಾತಲ್ಲ. ಆದರೆ ಇವರು ತಮ್ಮವರಲ್ಲವೆಂದರೆ ಹಿಂಸೆಮಾಡುವ ಸ್ವಭಾವದವರಾಗಿದ್ದರೆಂದು ಕಾಣುತ್ತದೆ. ಅವಶ್ಯಕವೆಂದಲ್ಲಿ ಕೂಟಯುದ್ಧ ಇಂದ್ರಜಾಲದಿಂದ ತಮ್ಮ ಇಷ್ಟವನ್ನು ನಡೆಸಿಕೊಳ್ಳುವರು. ಅಲ್ಲದೆ ಅಯೋಧ್ಯೆಯ ಸಂಸ್ಕೃತಿಯಲ್ಲಿ ಇದ್ದದಕ್ಕಿಂತ ಹೆಚ್ಚಾಗಿ ಇವರಲ್ಲಿ ಹೆಣ್ಣು ಒಂದು ಭೋಗದ ಸಾಮಗ್ರಿ ಎಂಬ ಭಾವನೆಯಿತ್ತು. ಒಬ್ಬರ ಹೆಂಡತಿ ಯನ್ನು ಕದ್ದು ತರುವುದು ಸರಿ ಎನ್ನುವ ಮಟ್ಟದ ಮರ್ಯಾದೆ ಇವರದು, ಹೆಣ್ಣಿನ ವಿಷಯದಲ್ಲಿ. ಎಂದರೆ ಇದು ಒಟ್ಟು ಜನದ ಮಾತು: ಒಬ್ಬೊಬ್ಬರ ನಡತೆ ನರರ ನಡತೆಗೆ ಕಡಮೆಯಾಗದಂತೆ ಉತ್ತಮವಾಗಿತ್ತು. ವಾನರರ ಸಂಸ್ಕೃತಿ ಲಂಕೆಯ ಸಂಸ್ಕೃತಿಯಷ್ಟು ಪರಿಷ್ಕೃತವಾಗಿರಲಿಲ್ಲ. ಇವರ ನೀತಿ ತಮ್ಮತಮ್ಮಲ್ಲಿ ಬೇರೆಯವರ ಹೆಣ್ಣನ್ನು ಬಳಸಿಕೊಳ್ಳುವ ಮಟ್ಟವನ್ನು ಮೀರಿರಲಿಲ್ಲ. ಇವರಲ್ಲಿ ಪರರ ವಿಷಯದಲ್ಲಿ ಹಿಂಸ್ರಬುದ್ಧಿ ಇಲ್ಲದಿದ್ದರೂ ಕೋಪದ ವೇಳೆಯಲ್ಲಿ ಒಬ್ಬರೊಬ್ಬರಲ್ಲಿ ಬಹು ಕ್ರೂರವಾದ ವರ್ತನವಿದ್ದಿ ತೆಂದು ಕಾಣುತ್ತದೆ. ಅಂತೂ ಈ ಮೂರೂ ಮೂರು ಮಟ್ಟದ ಅಥವಾ ರೀತಿಯ ಸಂಸ್ಕೃತಿಗಳು. ವಾಲ್ಮೀಕಿಯನ್ನು ಕೇಳಿದರೆ ನರರ ಸಂಸ್ಕೃತಿ ಉಳಿದ ಎರಡಕ್ಕೆ ವ್ಯತ್ಯಾಸವಿದ್ದದು ಧರ್ಮಸೌಖ್ಯಗಳ ಜೋಡಣೆಯಲ್ಲಿ ಎಂದು ಹೇಳುತಿದ್ದನೆಂದು ಕಾಣುತ್ತದೆ. ನರರ ರೀತಿ ಒಟ್ಟನಲ್ಲಿ ಅವರ ಮಹಾಪುರುಷನಾದ ರಾಮನಲ್ಲಿ ಕಾಣುತ್ತದೆ. ಇವರು ಧರ್ಮವನ್ನು ಉಳಿಸಿಕೊಂಡು ಸೌಖ್ಯವನ್ನು ಅಪೇಕ್ಷಿಸುವವರಾಗಿದ್ದರು. ಇನ್ನಿಬ್ಬರಲ್ಲಿ ಈ ಭಾವ ಅಷ್ಟು ಮುಖ್ಯವಾಗಿರಲಿಲ್ಲ. ಒಂದು ಗುಂಪಿನವರು ಸೌಖ್ಯ ಹೇಗೆ ದೊರೆತರೂ ಸರಿ ಅದನ್ನು ತೆಗೆದುಕೊಳ್ಳುವರು. ಇನ್ನೊಂದು ಗುಂಪಿನವರು ಇತರರಿಗೆ ಹಿಂಸೆ ಮಾಡಿಯಾದರೂ ಸೌಖ್ಯವನ್ನು ಸಂಪಾ ದಿಸುವರು.

## ಆರ್ಯ, ದ್ರಾವಿಡ

ವಾಲ್ಮೀಕಿಯ ರಾಮಾಯಣದಲ್ಲಿ ಆರ್ಯ ದ್ರಾವಿಡ ಸಂಸ್ಕೃತಿಗಳ ಘರ್ಷಣೆಯ ಸೂಚನೆ ಇದೆ. ನಮಗೆ ಈಗ ಕಾವ್ಯದಲ್ಲಿ ಕಾಣುವಂತೆ ರಾಕ್ಷಸರು ಯಜ್ಞಕ್ಕೆ ವಿರೋಧಿಗಳಾಗಿದ್ದರು. ಇದು ಇವರಲ್ಲಿ ದೌಷ್ಟ್ಯವೆಂದೇ ಕವಿಯ ಭಾವನೆ. ಕವಿ ಉತ್ತರದೇಶದ ಆರ್ಯಜನಾಂಗದವನು. ದಕ್ಷಿಣ

ದೇಶದವನ ದೃಷ್ಟಿಯಿಂದ ನೋಡಿದ್ದರೆ ಇದು ಇನ್ನೊಂದು ರೀತಿಯಾಗಿ ಕಾಣುತ್ತಿದ್ದಿತೆಂದು ಹೇಳಬಹುದು. ಮಾರೀಚನಂತ ರಾಕ್ಷಸನು ತಪಸ್ವಿ ನಲ್ಲಿ ಯಾವ ಆರ್ಯ ಋಷಿಗೂ ಕಡಮೆಯಾಗಿರಲಿಲ್ಲ; ಆದರೆ ಇವರು ಯಜ್ಞಮಾಡುತ್ತಿರಲಿಲ್ಲವೆಂದು ಕಾಣುತ್ತದೆ. ಮೇಘನಾದನು ಯುದ್ಧದಲ್ಲಿ ವಿಜಯಕ್ಕಾಗಿ ಯಜ್ಞಮಾಡಬೇಕಾದರೆ ಅದೇ ಕೆಲಸವಾಗಿ ಏರ್ಪಾಡು ಮಾಡಿದನು. ಎಂದರೆ ಇವರು ಸಾಮಾನ್ಯವಾಗಿ ಆರ್ಯರ ಯಜ್ಞ ಯಾಗಗಳನ್ನು ಕೆಟ್ಟುವೆಂದು ಭಾವಿಸಿರಬೇಕು. ಭಕ್ತಿಪಂಥಗಳು ದಕ್ಷಿಣ ದೇಶದಲ್ಲಿ ಹುಟ್ಟಿದವೆಂದು ಒಂದು ಅಭಿಪ್ರಾಯವಿದೆ; ಇವಕ್ಕೆ ಸಾಮಾನ್ಯ ವಾಗಿ ಯಜ್ಞದಲ್ಲಿ ಜೀವ ತೆಗೆಯುವ ವಿಷಯದಲ್ಲಿ ಸಮ್ಮತಿಯಿಲ್ಲ. ಆರ್ಯ ದ್ರಾವಿಡ ಸಂಸ್ಕೃತಿಗಳ ಮಿಲನ ಆದಮೇಲೆ ಆರ್ಯರು ಭಕ್ತಿಪಂಥವನ್ನು ಅಂಗೀಕರಿಸಿದರು; ದ್ರಾವಿಡರು ಯಜ್ಞಗಳನ್ನು ಒಪ್ಪಿಕೊಂಡರು. ಆರಂಭದಲ್ಲಿ ಈ ಪರಸ್ಪರ ಸೌಹಾರ್ದ ಇರಲಿಲ್ಲ. ಕರ್ಮಕಾಂಡ ಭಕ್ತಿ ಕಾಂಡಗಳ ಈ ಘರ್ಷಣೆಯ ಸೂಚನೆ ಭಾಗವತದಲ್ಲಿಯೂ ದೊರೆಯುತ್ತದೆ. ಈ ಘರ್ಷಣೆ ರಾಮಾಯಣದ ಕಾಲಕ್ಕೆ ಮೊದಲು ಆರಂಭಿಸಿರಬೇಕು; ಕೃಷ್ಣನ ನಂತರ ಯಾವ ಕಾಲದಲ್ಲೋ ಕಡಮೆಯಾಯಿತು; ಇನ್ನೂ ಮುಗಿದಿಲ್ಲ. ಈ ದೃಷ್ಟಿಯಿಂದ ನೋಡಿದೆವಾದರೆ ಆರ್ಯ ಕರ್ಮ ವಿರೋಧಿಗಳಾದ ರಾಕ್ಷಸರು ನಿಜದಲ್ಲಿ ಭಕ್ತಿಪಂಥದ ಅನುಯಾಯಿ ಗಳಾಗಿದ್ದಿರಬಹುದೇ ಎಂದು ಪ್ರಶ್ನಿಸಬಹುದು. ಭಕ್ತಿಪಂಥದ ಮೂಲ ಪುರುಷರಲ್ಲಿ ಒಬ್ಬನು ಅಸುರನು ಎನ್ನುವ ಪುರಾಣ ಕಥೆಯೂ ಇದನ್ನು ಸಮರ್ಥಿಸುತ್ತದೆ. ಇದನ್ನು ವಿಸ್ತರಿಸುವುದು ಇಲ್ಲಿ ಅಪ್ರಕೃತ; ಆದರೆ ಈ ವಿಷಯದಲ್ಲಿ ದಾಕ್ಷಿಣಾತ್ಯದೃಷ್ಟಿ ಒಂದು ಇದೆ ಎನ್ನುವುದನ್ನು ನಾವು ಮರೆಯಲಾಗದು.

## ೧೨
## ಕೆಲವು ಸಮಸ್ಯೆಗಳು

ರಾಮಾಯಣವನ್ನು ಕುರಿತ ಕೆಲವು ಪ್ರಶ್ನೆಗಳನ್ನೂ ಅವಕ್ಕೆ ಹೇಳ ಬಹುದಾದ ಉತ್ತರವನ್ನೂ ಇಲ್ಲಿ ಸೂಚಿಸುವುದು ಅವಶ್ಯಕ. ರಾಮಾಯಣ

ಕಲ್ಪನೆಯ ಕಾವ್ಯವೇ, ಇಲ್ಲ ರಾಮನೆಂಬ ರಾಜನೊಬ್ಬನು, ಸೀತೆಯೆಂಬ ಅವನ ಪತ್ನಿಯೊಬ್ಬಳು, ರಾವಣನೆಂಬ ಅವನ ಹಗೆ ಒಬ್ಬನು, ಇದ್ದರೆ? ಎಲ್ಲಿ? ಎಂದು? ರಾಮನೆಂಬ ವ್ಯಕ್ತಿ ಒಬ್ಬನಿದ್ದು ಇದು ಅವನ ಚರಿತ್ರೆ ಆದಪಕ್ಷದಲ್ಲಿ ಸಗರನ ಮಕ್ಕಳು ನೆಲವನ್ನಗೆದು ಸಮುದ್ರ ಮಾಡಿದರೆನ್ನು ವುದೂ ವಿಶ್ವಾಮಿತ್ರನು, ದಶರಥನು, ರಾಮನು, ಸಾವಿರಗಟ್ಲೆ ವರುಷ ರಾಜ್ಯ ವಾಳಿದರು, ತಪಸ್ಸನ್ನು ಮಾಡಿದರು ಎನ್ನುವುದೂ ವಾಸ್ತವವಾದ ಮಾತೆ? ಜಟಾಯು ಸಂಪಾತಿಯೆಂಬ ಪಕ್ಷಿಗಳೂ, ಸುಗ್ರೀವ ಮೊದಲಾದ ವಾನರರೂ ನಿಜವಾಗಿಯೂ ಪಕ್ಷಿ ವಾನರಗಳೆ, ಇಲ್ಲ ಇದಕ್ಕೆ ಬೇರೆ ಏನಾದರೂ ಅರ್ಥ ಇದೆಯೆ? ಹನುಮಂತನು ನೂರು ಯೋಜನದ ಸಾಗರವನ್ನು ಲಂಘಿಸಿದ ನೆಂಬರೆ ಏನು? ಪುಷ್ಪಕವಿಮಾನ ಎನ್ನುವುದು ನಿಜವಾಗಿಯೂ ಭೂಮಿಯ ಜನರು ಕಂಡ ಒಂದು ಯಾನವೆ? ದೇವತೆಗಳೂ ಮನುಷ್ಯರೂ ಇಲ್ಲಿ ಹೇಳಿರುವಂತೆ ಪರಸ್ಪರ ವ್ಯವಹಾರವನ್ನು ನಡೆಸಿದರೆ? ಲಂಕೆ ಎಲ್ಲಿತ್ತು? ಕೋಸಲದ, ಕಿಷ್ಕಿಂಧೆಯ, ಲಂಕೆಯ, ವಾಸಿಗಳು ಒಬ್ಬರೊಂದಿಗೊಬ್ಬರು ಸಂಸ್ಕೃತದ ಮಾತನ್ನಾಡುತ್ತಿದ್ದರೆ? ವಿಚಾರದಲ್ಲಿ ಇದರಂತೆ ಹತ್ತಾರು ಪ್ರಶ್ನೆ ಹುಟ್ಟುತ್ತವೆ.

### ವಿಚಾರದಲ್ಲಿ ಸಂಪ್ರದಾಯದ ಪದ್ಧತಿ

ಈ ಪ್ರಶ್ನೆಗಳಿಗೆ ಯಾವ ಉತ್ತರವನ್ನು ಹೇಳುವುದು ಎಂದು ವಿಚಾರಿ ಸುವ ಮೊದಲು ಸಂಪ್ರದಾಯ ನಮ್ಮಲ್ಲಿ ರಾಮಾಯಣವನ್ನು ಯಾವ ಯಾವ ದೃಷ್ಟಿಯಿಂದ ನೋಡುತ್ತದೆನ್ನುವುದನ್ನು ತಿಳಿಯಬೇಕು. ರಾಮ ಚಂದ್ರನು ವಿಷ್ಣುವಿನ ಅವತಾರವೆಂದು ಹೊರಡುವವರು ರಾಮಾಯಣ ವಿಷ್ಣುಪಾರಮ್ಯವನ್ನು ಸಾಧಿಸಲು ಹೊರಟ ಒಂದು ಪುರಾಣ ಎಂಬ ದೃಷ್ಟಿ ಯಿಂದ ಅದಕ್ಕೆ ಅರ್ಥ ಹೇಳುತ್ತಾರೆ. ವಿಶ್ವಾಮಿತ್ರನು "ಅಹಂವೇದ್ಮಿ ಮಹಾತ್ಮಾನಂ ರಾಮಂ, ವಸಿಷ್ಠೋಽಪಿ ಮಹಾತೇಜಾಃ ಯೇ ಚ ಇಮೇ ತಪಸಿಸ್ಥಿತಾಃ" ಎಂದು ಹೇಳುವ ಮಾತಿಗೆ "ರಾಮನು ವಿಷ್ಣುವೆನ್ನುವುದನ್ನು ತಾನೂ ವಸಿಷ್ಠನೂ ತಪಸ್ವಿಗಳೂ ಬಲ್ಲೆವು. ಸಾಮಾನ್ಯರು ಕಾಣರು" ಎಂದು ಅರ್ಥ ಎಂದು ವಿವರಿಸುತ್ತಾರೆ. ಸುಮಿತ್ರಾದೇವಿ ಲಕ್ಷ್ಮಣನಿಗೆ "ಸೃಷ್ಟಃ ತ್ವಂ ವನವಾಸಾಯ" ಎಂದು ಹೇಳುವಲ್ಲಿ ನೀನು ಅರಣ್ಯವಾಸ

ಕ್ಕಾಗಿಯೇ ಹುಟ್ಟಿದೆ ಎಂದರೆ ಅದು ಅಸಮಾಧಾನವನ್ನು ಸೂಚಿಸುತ್ತದೆ, ಸುಮಿತ್ರೆ ಇಂಥ ಮಾತನ್ನು ಹೇಳಿ ಅಸಂತುಷ್ಟಿಯನ್ನು ವ್ಯಕ್ತಪಡಿಸಿರ ಲಾರಳು, ವನವಾಸ ಎಂದರೆ ಅಂಬುಧಿಯಲ್ಲಿ ವಾಸಮಾಡುವ ವಿಷ್ಣು, ನೀನು ವಿಷ್ಣುವಿಗಾಗಿ ಹುಟ್ಟಿದವನು ಎಂದು ಅವಳ ಮಾತಿಗೆ ಅರ್ಥ, ಎನ್ನು ವರು. ಹೀಗೆ ಹೇಳುವಲ್ಲಿ ಇವರು ಲಕ್ಷ್ಮಣನೂ ರಾಮನೂ ವಿಷ್ಣುವಿನ ಭಾಗಗಳು, ರಾಮನು ಅಸಂಪೂರ್ಣವಿಷ್ಣು, ಲಕ್ಷ್ಮಣನು ಬೇರೊಂದು ವಸ್ತುವಲ್ಲ, ಎನ್ನುವುದನ್ನು ಮರೆಯುವರು; ರಾಮನೂ ಲಕ್ಷ್ಮಣನೂ ವಿಷ್ಣುವಿನ ಅವತಾರ ಅಂಶಗಳೆಂದು ಸುಮಿತ್ರೆಗೆ ತಿಳಿದಿತ್ತೆ ಎನ್ನುವುದನ್ನು ವಿಚಾರಮಾಡುವುದಿಲ್ಲ. ಹೀಗೆಯೇ ಇವರು ಸೀತೆಗೆ ಅವಿನಯವನ್ನಾಡುವ ರಾವಣನ ಮಾತಿನಲ್ಲೆಲ್ಲ ಉಕ್ತಿವ್ಯಾಜವನ್ನು ಕಾಣುವರು. "ನಿನ್ನ ಕಾಲಿಗೆ ನನ್ನ ತಲೆಯನ್ನಿಡುತ್ತೇನೆ. ನನ್ನಲ್ಲಿ ಅನುಗ್ರಹಮಾಡು" ಎನ್ನುವ ಮಾತಿಗೆ "ನೀನು ಸಾಕ್ಷಾಲ್ಲಕ್ಷ್ಮೀದೇವಿ. ನನ್ನ ವಿಷಯದಲ್ಲಿ ಕರುಣೆ ಯನ್ನು ತೋರಿ ರಕ್ಷಿಸು" ಎಂದು ಭಕ್ತನು ಬೇಡುವ ಮಾತೆಂದು ಅರ್ಥ ಮಾಡುತ್ತಾರೆ. ಶಿವ ವಿಷ್ಣುಪರವಾದ ವಾದಕ್ಕಾಗಿ ಇವರು ಮಾತುಗಳನ್ನು ವಿವರಿಸುವ ಚಾತುರ್ಯವಂತೂ ಅರ್ಥವನ್ನು ಬಳ್ಳಿ ಮಿಂಚಿನಂತೆ ಎಲ್ಲಿಯೋ ಎತ್ತಿ ಎಲ್ಲಿಯೋ ಮುಗಿಸುತ್ತದೆ. ಜನಕರಾಜನ ಅರಮನೆಯಲ್ಲಿ ರಾಮನು ಭಂಗಮಾಡಿದ್ದು ಶಿವಧನುಸ್ಸು; ಪರಶುರಾಮನಿಂದ ಅವನು ಪಡೆದದು ವಿಷ್ಣುಧನುಸ್ಸು. ರಾಮನು ಹೆದೆಯೇರಿಸಿದಾಗ ಶಿವಧನುಸ್ಸು ಮುರಿಯಿತು, ವಿಷ್ಣುಧನುಸ್ಸು ಮುರಿಯಲಿಲ್ಲ. ಆದದರಿಂದ ಶಿವನೂ ವಿಷ್ಣುವೂ ಹಿಂದೆ ಕಾದಿದಾಗ ವಿಷ್ಣುವಿನ ಪೆಟ್ಟು ಹೆಚ್ಚಾಗಿ ಶಿವಧನುಸ್ಸು ಸ್ವಲ್ಪ ಸೀಳಿತ್ತು; ವಿಷ್ಣುವಿನ ಶಕ್ತಿ ಹೆಚ್ಚು ಎಂದು ಇದರಿಂದ ಸ್ಪಷ್ಟವಾಗುತ್ತದೆ; ಎಂದು ಇವರು ತಾತ್ಪರ್ಯವನ್ನು ಕಲ್ಪಿಸುತ್ತಾರೆ. ಈ ವಿಮರ್ಶೆಯಿಂದ ಎಲ್ಲ ವೇಳೆಯಲ್ಲಿಯೂ ತೊಂದರೆಯಾಗುವುದೆಂದು ನಾವು ಹೇಳುವಂತಿಲ್ಲ. ಪೂರ್ವದ ವ್ಯಾಖ್ಯಾನಕಾರರು ಹೀಗೆ ಸೂಕ್ಷ್ಮವಾದ ಅರ್ಥವನ್ನು ಹುಡುಕು ವುದರಲ್ಲಿ ತೊಡಗಿ ಕಾವ್ಯದ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಇರುವ ಸಂಬಂಧವನ್ನೂ ಒಂದೊಂದು ಮಾತಿನಲ್ಲಿಯೂ ಮಹಾಕವಿಯಾದ ವನು ಎಷ್ಟು ಅರ್ಥವನ್ನು ತುಂಬಬಹುದೆನ್ನುವುದನ್ನೂ ಸಾವಧಾನವಾಗಿ

ಪರೀಕ್ಷಿಸುವ ದಾರಿಯನ್ನು ತೋರಿಸಿದರು. ಇದರಿಂದ, ಕಾವ್ಯದ ಸಾರವನ್ನು ಗ್ರಹಿಸಬೇಕಾದರೆ ಅದಕ್ಕೆ ಮನಸ್ಸನ್ನು ಕೊಟ್ಟು ಆತುರಪಡದೆ ಚಿಂತನಮಾಡಬೇಕೆಂಬ ಭಾವನೆ ಜನರಲ್ಲಿ ವಾಡಿಕೆಯಾಯಿತು; ಆದರೆ ಇದರ ಜೊತೆಗೆ ಯಾವುದಾದರೊಂದು ಮಾತನ್ನು ಹಿಡಿದು ಹಿಗ್ಗಾಮುಗ್ಗಾ ಎಳೆಯುವುದೂ ವಾಡಿಕೆಯಾಯಿತು. "ತಂ ಪದ್ಮದಲಪತ್ರಾಕ್ಷಂ ಸಿಂಹವಿಕ್ರಾಂತಗಾಮಿನಂ ರಾಮಂ" ಎಂದರೆ ರಾಮನ ಕಣ್ಣು ಪದ್ಮದಲದಂತೆ ಇದ್ದಿತು ಎನ್ನುವುದಿಲ್ಲ. ಕವಿ 'ದಲಪತ್ರ' ಎಂದು ಏಕೆ ಹೇಳಿದನು? ಕಣ್ಣಿನಲ್ಲಿ ಒಂದು ಭಾಗ ಒಂದು ಗುಣ ದಲದ್ದು, ಬೇರೊಂದು ಭಾಗ ಬೇರೊಂದು ಗುಣ ಪತ್ರದ್ದು, ಎಂದು ಮಾತನ್ನು ಬಿಡಿಸಿ ಇಲ್ಲದ ತೊಂದರೆಗೆ ಇಂಥವರು ಸಿಕ್ಕಿಕೊಳ್ಳುವರು. ದಲ, ದಲಪತ್ರ, ಎಂದರೆ ಒಂದೇ ಅರ್ಥ, ಪದ್ಮದಲದ ಒಂದು ಪತ್ರ ಎಂದರೆ ಪದ್ಮದ ದಲ, ಎಂದು ಸಹಜವಾಗಿ ಬರುವ ಅರ್ಥ ಈ ದೂರದೃಷ್ಟಿಗೆ ಕಾಣದೆಹೋಗುತ್ತದೆ. ಸೀತಾದೇವಿಯ ಅತ್ತೆಯರು ಪಟ್ಟಾಭಿಷೇಕದ ದಿನ ತಾವೇ ಆಕೆಗೆ ಶುಶ್ರೂಷೆ ಮಾಡಿದರೆಂದರೆ "ಮಾಡದಿದ್ದರೆ, ಎಷ್ಟಾದರೂ ಅತ್ತೆ ಸೊಸೆಯನ್ನು ವಿಚಾರಿಸಿಕೊಂಡಾಳೇ ಎಂದಾರು, ಎನ್ನುವ ಕಾರಣದಿಂದ ಅವರು ಅವಳಿಗೆ ತಲೆ ಬಾಚಿ ಹೆರಳು ಹಾಕಿದರು" ಎಂದು ಕೆಲವರು ಅರ್ಥ ಹೇಳುವರು. ರಾಮಾಯಣದ ಕಾಲಕ್ಕೂ ಅತ್ತೆ ಸೊಸೆಯರ ಅಸೂಯೆ ಈಗ ಇರುವಂತೆಯೇ ಇದ್ದಿತೆಂದು ನಾವು ಒಪ್ಪಿಕೊಳ್ಳುವುದಾದರೂ ಹದಿನಾಲ್ಕು ವರುಷ ಅರಣ್ಯದಲ್ಲಿಯೂ ಲಂಕೆಯಲ್ಲಿಯೂ ಕಷ್ಟಪಟ್ಟು ಬಂದ ಸೊಸೆಯ ವಿಷಯದಲ್ಲಿ ಒಬ್ಬ ಅತ್ತೆಗಾದರೂ ಒಂದು ದಿನದ ಮಟ್ಟಿಗೆ ಮನಸ್ಸು ಕರಗಿರಬಹುದೆಂದು ನಾವು ಗ್ರಹಿಸಬಾರದೆ? ಅತ್ತೆ ಸೊಸೆಯರ ಹಗೆ ಇಂಥ ಕಷ್ಟಕ್ಕೂ ಮೆದುವಾಗದಷ್ಟು ಕಠಿಣವೆ? ನಮ್ಮ ಅರ್ಥದಿಂದ, ಸಣ್ಣ ಅರ್ಥದಿಂದ, ಮಹಾಕವಿಯ ಮಾತನ್ನು ಹೀಗೆ ಕೆಡಿಸುವುದು ಕಾವ್ಯದ ವಿಷಯದಲ್ಲಿ ಅತ್ಯಾಚಾರ: ರಾಜನ ಔತಣಕ್ಕೆ ಹೋದವರು ಮನೆಯಿಂದ ಸ್ವಲ್ಪ ಮಜ್ಜಿಗೆಯನ್ನು ತೆಗೆದುಕೊಂಡುಹೋಗಿ ಅಲ್ಲಿ ಬಡಿಸಿಕೊಂಡಂತೆ. ಈ ರೀತಿ ಅರ್ಥ ಹೇಳುವವರು ರಾಮಾಯಣದ ಒಂದೊಂದು ಮಾತೂ ನಿಜವೆಂದೇ ಸಾಧಿಸುವರು. ಜೊತೆಗೆ, ಅದು ತಮ್ಮ ಮಾತಿನಂತೆ

ನಿಜ, ಇನ್ನೊಬ್ಬರ ಮಾತಿನಂತೆ ಅಲ್ಲ, ಎನ್ನುವರು. ದಶರಥನು ಸಾವಿರಾರು ವರ್ಷ ಜೀವಿಸಿದ್ದದು ನಿಜ. ಸಗರನ ಮಕ್ಕಳು ಸಾಗರವನ್ನಗೆದು ಮಾಡಿದರು. ಹನುಮಂತನು ನೂರು ಯೋಜನದ ಸಾಗರವನ್ನು ದಾಟಿದನು. ಪುಷ್ಪಕವಿಮಾನ ನಿಜ. ಜಟಾಯು ಒಂದು ಪಕ್ಷಿ; ಅವನು ಮಾತನಾಡಿದನು. ಹೀಗೆ ಇವರಿಗೆ ಯಾವುದನ್ನು ನಂಬುವುದೂ ಕಷ್ಟವಿಲ್ಲ. ಈ ಬುದ್ಧಿ ಒಂದು ರೀತಿಯಲ್ಲಿ ಪ್ರಗಲ್ಭವಾದದು; ಇನ್ನೊಂದು ರೀತಿಯಲ್ಲಿ ಮಕ್ಕಳ ಬುದ್ಧಿಯಂತೆ ಸರಳ.

ಇನ್ನುಕೆಲವರು ರಾಮಾಯಣಕ್ಕೆ ಬರಿಯ ಆಧ್ಯಾತ್ಮ ಅರ್ಥವನ್ನು ಹೇಳುವರು. ಇವರಿಗೆ ಈ ಕಾವ್ಯವೆಲ್ಲ ದೊಡ್ಡ ಒಂದು ಸಂಕೇತ; ಇದರ ಪಾತ್ರಗಳು ಒಂದೊಂದು ತತ್ತ್ವವನ್ನು ನಿರೂಪಿಸತಕ್ಕ ಕಲ್ಪನೆಗಳು; ಇದರ ಕಥೆ ಆತ್ಮದ ಚರಿತ್ರೆಯನ್ನು ಹೇಳುವ ಕಟ್ಟುಕಥೆ. ದಶರಥನೆಂದರೆ ಪ್ರಪಂಚದ ಐಶ್ವರ್ಯ; ರಾಮನು ಈ ಪ್ರಪಂಚದ ಐಶ್ವರ್ಯದಲ್ಲಿ ಬಂದು ನಿಲ್ಲುವ ಪರಮಾತ್ಮ; ಸೀತೆ ಜೀವಾತ್ಮ; ರಾವಣನು ಜೀವಾತ್ಮವನ್ನು ಸೆರೆಮಾಡಿಕೊಳ್ಳುವ ಹತ್ತು ಕರಣಗಳ ದೇಹ; ಪರಮಾತ್ಮನು ಈ ಇಂದ್ರಿಯಗಳನ್ನು ನಿಗ್ರಹಮಾಡಿ ಜೀವಾತ್ಮವನ್ನು ಉಳಿಸಿಕೊಳ್ಳುತ್ತಾನೆ. ಅಥವಾ ಅಯೋಧ್ಯೆ ಉಸಿರು ಯೋಗದಿಂದ ಮುಟ್ಟಬೇಕಾದ ಬ್ರಹ್ಮಸ್ಥಲ; ಲಂಕೆ ದೇಹದ ಕೆಳಭಾಗದಲ್ಲಿರುವ ಒಂದು ಸ್ಥಾನ; ರಾಮನೂ ಸೀತೆಯೂ ಅಯೋಧ್ಯೆಯಿಂದ ಕಾಡಿಗೂ ಲಂಕೆಗೂ ಹೋಗುವುದೂ ಲಂಕೆಯಿಂದ ಅಯೋಧ್ಯೆಗೆ ಹಿಂತಿರುಗಿ ಬರುವುದೂ ಯೋಗಾಭ್ಯಾಸದಲ್ಲಿ ಜೀವ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗಿ ಮತ್ತೆ ತಿರುಗಿ ಸಿದ್ಧಿಯನ್ನು ಪಡೆಯುವ ಕ್ರಮದ ಚಿತ್ರ. ನಮ್ಮಲ್ಲಿ ಚತುರರಾದ ಶಾಸ್ತ್ರಜ್ಞರೊಬ್ಬರು ವೇದವೆಲ್ಲ ಭೂಗರ್ಭಶಾಸ್ತ್ರವನ್ನು ತಿಳಿಸುವುದಕ್ಕೆ ಪ್ರವೃತ್ತವಾಯಿತೆಂದು ಒಂದು ಸಲ ಪ್ರತಿಪಾದಿಸಿದರು. ಈ ಅರ್ಥದ ಪ್ರಕಾರ ವಿಷ್ಣು ಒಂದು ರೀತಿಯ ಬೂದಿ, ರುದ್ರನು ಒಂದು ರೀತಿಯ ಕಲ್ಲು, ಇಂದ್ರನು ಒಂದು ರೀತಿಯ ಖನಿಜ, ಈ ಪ್ರಕಾರ ದೇವತೆಗಳೆಲ್ಲ ಒಂದೊಂದು ವಸ್ತುವನ್ನು ಸಂಕೇತಿಸುವ ಹೆಸರುಗಳಾಗುತ್ತಾರೆ. ಇಂಥ ಅರ್ಥದ ವಿಚಾರವಾಗಿ ನಾವು ಒಂದು ದೃಷ್ಟಿಯಿಂದ ನಡೆದುಕೊಳ್ಳುವುದು ಅವಶ್ಯಕ. ಭಾವ

ಗಳನ್ನು ಪ್ರತಿಪಾದಿಸುವುದಕ್ಕಾಗಿ ಕಾವ್ಯಗಳಾಗಿರುವುದುಂಟು. ಸಂಕಲ್ಪ ಸೂರ್ಯೋದಯ, ಪ್ರತಾಪ ಚಂದ್ರೋದಯ ಎಂದು ಹೆಸರಿಟ್ಟು, ವಿವೇಕನಿಗೂ ಆಗ್ರಹನಿಗೂ ವಿರೋಧವನ್ನು ತೋರಿ ಆಗ್ರಹನು ವಿವೇಕನನ್ನು ಕೊಲ್ಲುವಂತೆ ಕಥೆಯನ್ನು ಕಟ್ಟಿ ಆಚಾರ್ಯರಾದವರು ಸಾಮಾನ್ಯ ಜನರಿಗೆ ನೀತಿಯನ್ನು ಕಲಿಸುವುದಕ್ಕೆ ಕಾವ್ಯಗಳನ್ನು ರಚಿಸುವರು. ಭಾಗವತದಂಥ ಪುರಾಣದಲ್ಲಿ ಹೀಗೆ ಒಂದು ಭಾವವನ್ನು ವರ್ಣಿಸುವುದಕ್ಕೆ ಹೊರಟ ಕವಿ ಭಾವಪ್ರತಿಪಾದನದೊಂದಿಗೆ ಅಲ್ಲಲ್ಲಿ ಜೀವನದ ಚಿತ್ರವನ್ನೂ ಪ್ರಕೃತಿಯ ವರ್ಣನೆಗಳನ್ನೂ ಸೇರಿಸಿರುವುದುಂಟು. ಆದರೆ ಇಂಥ ಕಾವ್ಯದಲ್ಲಿ ಸಂಕೇತಗಳು ಭಾವಗಳು ಮುಖ್ಯವಾಗುತ್ತವೆ; ಜೀವನದ ಚಿತ್ರ, ಪ್ರಕೃತಿಯ ವರ್ಣನೆ, ಮುಖ್ಯವಾಗುವುದಿಲ್ಲ; ಏನೇ ಆದರೂ ಕಥೆಯಂತೂ ಇಲ್ಲಿ ಪ್ರಮುಖವಾಗುವುದಿಲ್ಲ. ರಾಮಾಯಣ ಇಂಥ ಕೃತಿಯಲ್ಲ. ರಾಮಾಯಣವನ್ನು ಹಿಡಿದು ನೋಡಿದರೆ ನಮಗೆ ವಿಸ್ತಾರವಾದ ಒಂದು ಕಥೆ ಕಾಣುತ್ತದೆ. ಅದರಲ್ಲಿ ಬರುವ ವ್ಯಕ್ತಿಗಳನ್ನು ತತ್ತ್ವಗಳೆಂದು ಎಣಿಸಿ, ಅದರ ಕತೆಯ ಸ್ವಲ್ಪ ಸ್ವಲ್ಪ ಭಾಗಕ್ಕೆ ತತ್ತ್ವಸಂಬಂಧವಾದ ಅರ್ಥವನ್ನು ಕೊಡಬಹುದು. ಆದರೆ ಮೊದಲಿಂದ ಕೊನೆಯವರೆಗೆ ಎಲ್ಲ ಕಥೆಗೂ ತತ್ತ್ವದ ಅರ್ಥವನ್ನು ಹೇಳುವುದು ಸಾಧ್ಯವಲ್ಲ. ರಾಮನ ಸೀತೆಯ ಸಂಬಂಧವನ್ನು ಜೀವಾತ್ಮ ಪರಮಾತ್ಮಗಳ ಸಂಬಂಧದ ಸಂಕೇತವೆಂದು ಹೇಳಬಹುದು: ಎಲ್ಲ ಪ್ರೇಮದ ಸಂಬಂಧವೂ ಈ ಸಂಕೇತಾರ್ಥಕ್ಕೆ ಒದಗುತ್ತದೆ. ಆದರೆ ಸೀತೆ ರಾಮನೊಂದಿಗೆ ಅರಣ್ಯಕ್ಕೆ ಬರುತ್ತೇನೆನ್ನುವುದು, ಆ ಸಂದರ್ಭದಲ್ಲಿ ಇವರಿವರು ಹೇಳಿಕೊಳ್ಳುವ ಮಾತು, ಇವರಿವರ ಸರಸ, ಹಾಸ್ಯ, ವಿನೋದ, ಈ ಎಲ್ಲ ಸಂಬಂಧದ ವಿವರಗಳಿಗೆ ಸಂಕೇತವನ್ನು ಹವಣಿಸುವುದು ಕಷ್ಟವಾಗುತ್ತದೆ. ತತ್ತ್ವವನ್ನು ಹೇಳುವುದು ಕವಿಯ ಉದ್ದೇಶವಾಗಿದ್ದರೆ ಅವನು ಜೀವನವನ್ನು ಚಿತ್ರಿಸುವುದಕ್ಕೆ ಇಷ್ಟು ಶ್ರಮ ತೆಗೆದುಕೊಳ್ಳುತ್ತಿರಲಿಲ್ಲ; ದಿನದ ಬಾಳ ಕಥೆಯನ್ನು ಇಷ್ಟು ವಿವರವಾಗಿ ಹೇಳುತ್ತಿರಲಿಲ್ಲ; ಸುಮಿತ್ರೆ, ಸುಮಂತ್ರ, ಗುಹ, ಭರದ್ವಾಜ ಇವರ ನಡೆ ನುಡಿಯ ವಿಸ್ತರಣದಲ್ಲಿ ತೊಡಗುತ್ತಿರಲಿಲ್ಲ. ರಾಮಾಯಣ ಮುಖ್ಯವಾಗಿ ಕಥೆ. ಅದರಿಂದ ನಾವು ಬೇಕಾದರೆ

ತತ್ತ್ವಾರ್ಥಗಳನ್ನು ಗ್ರಹಿಸಬಹುದು; ಆದರೆ ಅದರ ಪಾತ್ರಗಳು ತತ್ತ್ವಗಳನ್ನು ಸಂಕೇತಿಸುವ ಗೊಂಬೆಗಳಲ್ಲ; ಅದರ ಕಥೆ ಇಂಥ ಸಂಕೇತಗಳ ಕಟ್ಟೆಯಲ್ಲಿ ಅಡಗುವ ನೀರಿನ ಹರಹಲ್ಲ. ಅದು ಜೀವನದಂತೆ ವಿಸ್ತಾರವಾಗಿದೆ; ಜೀವನವನ್ನು ಸಾಗರದಂತೆ ಕೃತಕವಾದ ಕಟ್ಟಿಲ್ಲದೆ ಹರಡಿ ಚಿತ್ರಿಸುತ್ತದೆ.

### ಪಾಶ್ಚಾತ್ಯ ವಿಚಾರಕರ ಪದ್ಧತಿ

ಈ ಎರಡು ರೀತಿಯ ಅರ್ಥವನ್ನೂ ನಮ್ಮಲ್ಲಿ ಆಸ್ತಿಕರೀತಿ ಎಂದು ಹೇಳುವುದು ವಾಡಿಕೆ. ರಾಮನನ್ನು ದೇವರೆನ್ನುವ ಸನಾತನ ಧರ್ಮಿಗಳು ಈ ಎರಡರಲ್ಲಿ ಯಾವ ರೀತಿಯಲ್ಲಾದರೂ ರಾಮಾಯಣಕ್ಕೆ ಅರ್ಥ ಹೇಳುವರು. ರಾಮನು ನಿಜವಾದ ಒಬ್ಬ ರಾಜನಾಗಿದ್ದು ರಾಮಾಯಣ ಅವನ ಕಥೆಯಾಗಿದ್ದರೆ ರಾಮನೂ ಸೀತೆಯೂ ಪರಮಾತ್ಮ ಜೀವಾತ್ಮವಾಗಿ ಕಥೆಯೆಲ್ಲ ಬರಿಯ ತತ್ತ್ವಗಳ ಕಟ್ಟು ಹೇಗೆ ಆಗಬಹುದೋ ಇದನ್ನು ಗ್ರಹಿಸುವುದು ಕಷ್ಟ. ರಾಮಾಯಣವು ತತ್ತ್ವಗಳನ್ನು ಪ್ರತಿಪಾದಿಸುವುದ ಕ್ಕಾಗಿ ಪ್ರವೃತ್ತವಾದ ಕಾವ್ಯವಾದರೆ ರಾಮನೆಂಬವನು ಇರಲಿಲ್ಲವೆಂದು ಹೇಳುವಂತೆ ಭಾಸವಾಗುತ್ತದೆ. ರಾಮನೆಂಬವನು ಇದ್ದನು ಎನ್ನುವ ವರಿಗೆ ಈ ಮಾತು ನಾಸ್ತಿಕವಾದವೆಂದು ಕಾಣಬೇಕು. ಇದು ನಾಸ್ತಿಕ ವಾದ ಆಗದೆ ಇರುವುದು ಹೇಗೆಂದರೆ ರಾಮಾಯಣ ತತ್ತ್ವಗಳ ಪ್ರತಿಪಾದನ ಎನ್ನುವವರು ರಾಮನು ಇದ್ದದೂ ನಿಜ ಎಂದು ಹೇಳು ವುದರಿಂದ. ಹೀಗೆ ಪರಸ್ಪರ ವಿರುದ್ಧವಾದ ಎರಡು ಅರ್ಥಗಳನ್ನು ಪೂರ್ವದ ಪದ್ಧತಿಯನ್ನನುಸರಿಸಿ ಹೇಳುವವರಿರಲಾಗಿ, ಪಾಶ್ಚಾತ್ಯ ಪಂಡಿತರಿಂದ ರಾಮಾಯಣದ ವಿಷಯದಲ್ಲಿ ಇನ್ನೊಂದು ರೀತಿಯ ವಿಮರ್ಶೆ ವಾಡಿಕೆಗೆ ಬಂದಿದೆ. ಈ ವಿಮರ್ಶನ ಪದ್ಧತಿಯಲ್ಲಿ ಈ ಗ್ರಂಥವನ್ನು ಹಿಂದುಗಳು ಮತಗ್ರಂಥವೆಂದು ಹೇಳುವುದರಿಂದಲೂ ಹಿಂದೂಮತದಲ್ಲಿ ಬ್ರಾಹ್ಮಣರು ಪ್ರಬಲರಾಗಿರುತ್ತ ಗ್ರಂಥದಲ್ಲಿ ಬ್ರಾಹ್ಮಣ್ಯದ ಹೊಗಳಿಕೆ ಯಿರುವಂತೆ ಕಾಣುವುದರಿಂದಲೂ ಬ್ರಾಹ್ಮಣರು ತಮ್ಮ ಪ್ರಶಸ್ತಿಯನ್ನು ಸಾರುವುದಕ್ಕಾಗಿ ತಮ್ಮ ಮೇಲ್ಮೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಈ ಗ್ರಂಥವನ್ನು ರಚಿಸಿದಾರೆ ಅಥವಾ ತಿದ್ದಿದಾರೆ ಎನ್ನುವುದು ಮುಖ್ಯ

ಭಾವ. ಈ ಭಾವವನ್ನಿಟ್ಟುಕೊಂಡು ಕಾವ್ಯವನ್ನು ಓದುವುದರಿಂದ ಈ ವಿಮರ್ಶಕರಿಗೆ ಎಲ್ಲ ಕಡೆಯೂ ಈ ಭಾವ ಕಂಡಂತೆ ಅನುಭವವಾಗುತ್ತದೆ. ವಸಿಷ್ಠ ವಿಶ್ವಾಮಿತ್ರರ ಜಗಳದಲ್ಲಿ ಇವರಿಗೆ ವ್ಯಕ್ತಿಗಳ ಕಲಹಕ್ಕೆ ಪ್ರತಿಯಾಗಿ ಬ್ರಾಹ್ಮಣ ಕುಲ ಕ್ಷತ್ರಿಯ ಕುಲಗಳ ಕಲಹ ಕಾಣುತ್ತದೆ; ಪರಶುರಾಮನು ಕ್ಷತ್ರಿಯರನ್ನೆಲ್ಲ ನಾಶಮಾಡಿದನೆಂಬ ಕಥೆಯಲ್ಲಿ ಬ್ರಾಹ್ಮಣರು ಕ್ಷತ್ರಿಯರನ್ನು ಅಡಗಿಸಿದರು ಎಂಬ ಇತಿಹಾಸ ಹೊಳೆಯುತ್ತದೆ. ಬ್ರಾಹ್ಮಣರು ಕ್ಷತ್ರಿಯರಿಗಿಂತ ಶ್ರೇಷ್ಠರೆನ್ನುವುದೇ ಆದರೆ ಈ ಕಾವ್ಯವನ್ನುಳಿಸಿದ ಬ್ರಾಹ್ಮಣರು ಕ್ಷತ್ರಿಯನಾದ ರಾಮನನ್ನು ದೇವರೆಂದು ಪೂಜಿಸುವುದಕ್ಕೆ ಏಕೆ ಹೋದರು? ಪರಶುರಾಮನು ರಾಮನಿಗೆ ತನ್ನ ಕಳೆಯನ್ನು ಕೊಟ್ಟು ಸೋತುಹೋದ ಕಥೆಯನ್ನು ಏಕೆ ಮರೆಸಲಿಲ್ಲ? ಇದನ್ನು ವಿಮರ್ಶಕರು ಯೋಚಿಸುವುದಿಲ್ಲ. ಸನಾತನಧರ್ಮದಲ್ಲಿ ಎರಡು ಪಂಗಡಗಳಿಗೆ ವಿರೋಧವನ್ನು ಕಲ್ಪಿಸುವುದು ಮಾತ್ರವಲ್ಲದೆ, ಈ ವಿಮರ್ಶಕರು ಈ ಕಾವ್ಯ ಬೌದ್ಧಮತವನ್ನು ಹಳಿಯುವುದಕ್ಕಾಗಿ ಹೊರಟಿತೆಂದು ಹೇಳಿ ಸನಾತನಧರ್ಮಕ್ಕೂ ಬೌದ್ಧಮತಕ್ಕೂ ಮತ್ತೆ ವಿರೋಧವನ್ನು ಕಲ್ಪಿಸಲು ನೋಡುತ್ತಾರೆ. ಈ ದೃಷ್ಟಿಯಿಂದ ಇವರಿಗೆ ಜಾಬಾಲಿ ಒಬ್ಬ ಬೌದ್ಧ; ತಂದೆ ಯಾರು ತಾಯಿ ಯಾರು ಎಂದು ಹೇಳುವ ಬೌದ್ಧಮತವನ್ನು ಖಂಡಿಸುವುದಕ್ಕಾಗಿ ಕಥೆಯ ನಾಯಕನಾದ ರಾಮನಿಂದ ಕವಿ ಜಾಬಾಲಿಯ ಮತವನ್ನು ಖಂಡನಮಾಡಿಸಿದ್ದಾನೆ ಎಂದು ಇವರು ಪ್ರತಿಪಾದಿಸುವರು. "ಯಥಾಚೋರಃ ತಥಾ ಬುದ್ಧಃ" ಎಂದು ಬರುವ ಪದ್ಯ ಬುದ್ಧನ ಕಾಲದ ನಂತರ ಬರೆದದಾದುದರಿಂದ ಈ ಕಥೆಯೆಲ್ಲ ಬುದ್ಧನ ನಂತರ ಅದನ್ನು ಅಡಗಿಸುವುದಕ್ಕಾಗಿ ಕಲ್ಪಿತವಾಗಿರಬೇಕೆನ್ನುವರು. ನಿಜವಾಗಿ ರಾಮಾಯಣದ ಕೆಲವು ಪಾಠದಲ್ಲಿ ಈ ಶ್ಲೋಕ ಇಲ್ಲ. ಇವರಿಗೆ ರಾಮನು ಹನ್ನೊಂದುಸಾವಿರ ವರ್ಷ ಆಳಿದ್ದೂ ಕಪಿ ಸಾಗರವನ್ನು ದಾಟಿದ್ದೂ ಆಕಾಶದಲ್ಲಿ ಹಾರಿದ ಪುಷ್ಪಕವಿಮಾನವೂ ಹೇಗೆ ಸುಳ್ಳೋ ಹಾಗೆ ರಾಮನೆಂಬ ವ್ಯಕ್ತಿ ಇದ್ದದೂ ಸುಳ್ಳು ಅಥವಾ ಸಂದೇಹಾಸ್ಪದ. ದೊಡ್ಡ ದೊಡ್ಡ ಅರಮನೆಗಳು ನಗರಗಳು ಇದ್ದುವು ಎಂಬ ಮಾತನ್ನು ಇವರು ಕವಿಯ ಉತ್ಪ್ರೇಕ್ಷೆಯೆಂದೇ ಬಗೆಯುವರು.

ಇಂಥ ನಗರಗಳೂ ಸೌಧಗಳೂ ಇದ್ದುವಾದರೆ ಈಗ ಒಂದೂ ದೊರೆಯುವು ದಿಲ್ಲವೇಕೆ ಎಂದು ಇವರ ಪ್ರಶ್ನೆ. ಒಂದು ದೃಷ್ಟಿಯಿಂದ ಇವರು ಸೀತೆ ಇರಲಿಲ್ಲವೆಂದು ಹೇಳುವಹಾಗೆ ಇನ್ನೊಂದು ದೃಷ್ಟಿಯಿಂದ ಸೀತೆಯನ್ನು ರಾವಣನು ಏನೂ ಮಾಡದೆ ಇದ್ದನೆನ್ನುವುದು ಸಾಧ್ಯವಲ್ಲ ಎನ್ನುವರು. ಇವರು ಸೀತೆಯನ್ನು ಇರಗೊಳಿಸರು; ಇರಗೊಳಿಸಿದರೂ ಮಾನದಿಂದ ಉಳಿಸರು. ಇದಕ್ಕೆ ಒಂದು ಕಾರಣ ಹೆಂಗಸಿಗಾಗಿ ಯುದ್ಧ ನಡೆದದನ್ನು ವರ್ಣಿಸುವ ಪಾಶ್ಚಾತ್ಯ ಕಾವ್ಯದಲ್ಲಿ ನಾಯಕಿಯಾದ ಹೆಲೆನ್ ಗಂಡನನ್ನು ಬಿಟ್ಟು ಪರಕೀಯನಾದ ಪ್ಯಾರಿಸನೊಂದಿಗೆ ಓಡಿಹೋದಳೆನ್ನುವುದು. ಈ ರೀತಿಯ ವಿಮರ್ಶೆಯಿಂದ ಇವರು ಮೊದಲಲ್ಲಿ ರಾಮಾಯಣಕಾವ್ಯ ರಾಮನು ಅರಣ್ಯಕ್ಕೆ ಹೋದನು ಎನ್ನುವವರೆಗೆ ಮಾತ್ರ ಇದ್ದಿತೆಂದೂ ಆಮೇಲೆ ರಾಮನು ಸೀತಾಲಕ್ಷ್ಮಣರೊಡನೆ ಗೋದಾವರಿಯವರೆಗೆ ಹೋಗಿ ದಂಡಕಾರಣ್ಯದ ತಪಸ್ವಿಗಳಿಗೆ ರಕ್ಷಣೆ ಕೊಟ್ಟನೆನ್ನುವವರೆಗೆ ಬೆಳೆಯಿತೆಂದೂ ಆಮೇಲೆ ಜನಸ್ಥಾನದಲ್ಲಿ ಖರದೂಷಣ ಪ್ರಮುಖರಾದ ರಾಕ್ಷಸರನ್ನು ಜಯಿಸುವವರೆಗೆ ಬೆಳೆಯಿತೆಂದೂ ಹಿಂದೂಜನರು ಸಿಂಹಳ ದ್ವೀಪವನ್ನು ತಿಳಿದಮೇಲೆ ಲಂಕೆಯ ಕಥೆ ಕಲ್ಪಿತವಾಗಿ ಅದಕ್ಕೆ ಸೇರಿ ತೆಂದೂ ಹೇಳುವರು. ರಾಮನು ಹುಟ್ಟಿದ ವೇಳೆಯಲ್ಲಿ ಗ್ರಹಗಳು ಎಲ್ಲೆಲ್ಲಿ ಇದ್ದುವೆಂದು ವರ್ಣಿಸಿರುವುದರಿಂದ ರಾಮಾಯಣಕಾವ್ಯ ಅಥವಾ ಅದರಲ್ಲಿ ಈ ಭಾಗ ಯಾವ ಕಾಲದಲ್ಲಿ ಹುಟ್ಟಿತು ಎಂದು ಇವರು ಹೀಗೆ ನಿರ್ಧರಿಸುತ್ತಾರೆ. ಜಾತಕ ಬರೆಯುವ ಕುಂಡಲಿಯನ್ನು ಹಿಂದೂಜನರು ಗ್ರೀಕ್ ಜನರಿಂದ ಕಲಿತರು; ಗ್ರೀಕ್ ಜನರು ತಮ್ಮ ಕುಂಡಲಿಯನ್ನು ಕ್ರಿಸ್ತಪೂರ್ವ ಒಂದನೆಯ ಶತಮಾನದಲ್ಲಿ ಈಗ ಇರುವ ರೀತಿಯಲ್ಲಿ ರಚಿಸಿದರು; ಆದುದರಿಂದ ಈ ಬರವಣಿಗೆ ಕ್ರಿಸ್ತಪೂರ್ವ ಒಂದನೆಯ ಶತ ಮಾನದಿಂದ ಈಚೆಗೆ ಆಗಿರಬೇಕು. ಸೀತಾ ಎನ್ನುವ ಹೆಸರು ತೈತ್ತಿರೀಯ ಬ್ರಾಹ್ಮಣದಲ್ಲಿ ಪ್ರಜಾಪತಿಯ ಮಗಳದು ಎಂದು ಬರುತ್ತದೆ; ಸೀತೆ ಚಂದ್ರನನ್ನು ಪ್ರೀತಿಸುತ್ತಿದ್ದಳು; ಅವನು ಅವಳ ಸೋದರಿ ಶ್ರದ್ಧೆಯನ್ನು ಪ್ರೀತಿಸುತ್ತಿದ್ದನು; ಕೊನೆಗೆ ಸೀತೆಯನ್ನು ಪ್ರೀತಿಸಿದನು. ಆದ್ದರಿಂದ ಸೀತೆಯ ಕಥೆ ಎಂಬ ಈ ರಾಮಾಯಣವು ಚಂದ್ರ, ಮಂಜು ಮುಂತಾದ

ತತ್ತ್ವಗಳನ್ನು ಕುರಿತ ಸಂಕೇತ ಕಥೆ ಎಂದೂ ಇವರು ಕೆಲವರು ಹೇಳುವರು. ಮಹಾಭಾರತದಲ್ಲಿ ಒಂದು ರಾಮೋಪಾಖ್ಯಾನ ಬರುತ್ತದೆ. ಆದರಲ್ಲಿ ಬಾಲಕಾಂಡದ ಕಥೆಯಿಲ್ಲ; ಅಯೋಧ್ಯಾಕಾಂಡ ಅರಣ್ಯಕಾಂಡಗಳು ಬಹು ಸಂಗ್ರಹವಾಗಿವೆ; ರಾಮಲಕ್ಷ್ಮಣರು ಕಬಂಧನನ್ನು ಕೊಲ್ಲುತ್ತಾರೆ. ಅಲ್ಲಿ ಶಬರಿಯ ಕಥೆ ಬರುವುದಿಲ್ಲ; ರಾಮಾಯಣವೆಂಬ ಕಾವ್ಯ ಇದ್ದಿತೆಂಬ ಮಾತು ಬರುವುದಿಲ್ಲ; ವಾಲ್ಮೀಕಿ ಆದರ ಕವಿ ಎಂದೂ ಇಲ್ಲ. ಈ ಕಾರಣದಿಂದ ವನಪರ್ವದ ರಾಮೋಪಾಖ್ಯಾನ ರಾಮಾಯಣದ ಕಾವ್ಯಕ್ಕಿಂತ ಮೊದಲು ರಚಿತವಾಗಿರಬಹುದೆಂದು ಇವರು ಊಹಿಸುವರು. ಬುದ್ಧಮತದಲ್ಲಿ ವಾಡಿಕೆಗೆ ಬಂದ ಜಾತಕ ಕಥೆಗಳಲ್ಲಿ ದಶರಥ ಜಾತಕ ಎನ್ನುವುದೊಂದಿದೆ; ಅದು ರಾಮಾಯಣದ ಮೂಲ ಎಂದೂ ಈ ವಿಮರ್ಶಕರಲ್ಲಿ ಕೆಲವರು ಅಭಿಪ್ರಾಯಪಡುವರು.

### ಮಧ್ಯಮಾರ್ಗ

ಎಲ್ಲವೂ ನಿಜವೆಂಬ ಆಸ್ತಿಕರೂ ಭರತವರ್ಷದ ಕೃತಿಕಲ್ಪನೆಗಳಲ್ಲಿ ಯಾವುದು ಸುಳ್ಳಾದರೂ ಆಶ್ಚರ್ಯವಿಲ್ಲ ಎಂಬ ಈ ಅನ್ವೇಷಕರೂ ತಮ್ಮ ತಮ್ಮ ದಾರಿಯಲ್ಲಿ ಅತಿಗೆ ಹೋಗುತ್ತಾರೆಂದು ಕಾಣುತ್ತದೆ. ಅಸಾಧ್ಯವಾದದನ್ನು ನಂಬಲು ಇಷ್ಟವಿಲ್ಲದ, ಆದರೆ ಭರತವರ್ಷದಲ್ಲಿ ಕಾವ್ಯ ಇತರ ದೇಶಗಳಲ್ಲಿ ಹೇಗೋ ಹಾಗೆಯೇ ಹುಟ್ಟಿ ಬೆಳೆದಿರಬೇಕು ಎಂದು ಹೇಳುವ, ಸಹಜವಾದಿಗಳ ಮಾರ್ಗ ಈ ಮಾರ್ಗಗಳ ಮಧ್ಯೆ ಇರಬೇಕು. ಆ ಮಾರ್ಗ ಯಾವುದು ಎಂದು ಸೂಚಿಸಲುಸಾಧ್ಯ. ಆದರೆ ಅದರಲ್ಲಿ ನಡೆವವರಿಗಾದರೂ ಇಂಥ ಸಂಗತಿ ಹೀಗೆಯೇ ಆಯಿತೆಂದು ಖಂಡಿತವಾಗಿ ನಿರ್ದೇಶಿಸುವುದು ಕಷ್ಟ. ರಾಮಾಯಣವು ಸಂಸ್ಕೃತಕಾವ್ಯಗಳಲ್ಲಿ ಬಹು ಪೂರ್ವದ ಕಾವ್ಯವೆಂದು ಸಂಪ್ರದಾಯವಾದ ನಂಬಿಕೆ ಇದ್ದಿದೆ. ಇದನ್ನು ಆದಿಕಾವ್ಯವೆಂದೇ ನಮ್ಮವರು ಕರೆದಿದ್ದಾರೆ. ಕಾಳಿದಾಸನು ವಾಲ್ಮೀಕಿಯನ್ನು ಪೂರ್ವಸೂರಿಗಳಲ್ಲಿ ಸೇರಿಸಿ ಹೊಗಳಿದಾನೆ. ಅವನ ಕಾಲಕ್ಕೆ ಈ ಕಥೆ ಹಲವು ಶತಮಾನಗಳು ಪ್ರಚಾರದಲ್ಲಿದ್ದಿರಬೇಕು. ಪ್ರಕ್ಷಿಪ್ತವೆಂದು ಕಾಣುವ ಒಂದು ಶ್ಲೋಕವನ್ನು ಬಿಟ್ಟರೆ ಇದರಲ್ಲಿ ಬೌದ್ಧ ಸನಾತನಧರ್ಮಗಳ ವಾದದ ಚಿಹ್ನೆಯೇನೂ ಕಾಣುವುದಿಲ್ಲ. ಇದರ

ಸಂಕ್ಷೇಪ ಆಖ್ಯಾನ ಒಂದು ಮಹಾಭಾರತದಲ್ಲಿ ಇರುತ್ತ, ಇದರಲ್ಲಿ ಬರುವ ಕೆಲವು ಅಂಶಗಳು ಆ ಸಂಗ್ರಹದಲ್ಲಿ ಬರುವುದಿಲ್ಲವೆಂಬ ಕಾರಣದಿಂದ ಅದರ ಆಧಾರದಮೇಲೆ ಈ ಕಾವ್ಯವನ್ನು ಬರೆದಿರಬಹುದೆಂದು ಊಹಿಸುವುದು ಸರಿಯಾಗಲಾರದು. ಮಹಾಭಾರತದಂಥ ಕಾವ್ಯ ಪ್ರಚಾರಕ್ಕೆ ಬಂದಿದ್ದ ಭಾಷೆಯಲ್ಲಿ ರಾಮಾಯಣಕ್ಕೆ ಆದಿಕಾವ್ಯವೆಂದು ಯಾರೂ ಹೆಸರಿಟ್ಟಿರಲಾರರು. ದಶರಥ ಜಾತಕ ಈ ಕಾವ್ಯದ ಮೂಲವೆನ್ನುವುದೂ ಸರಿಯಾಗಲಾರದು. ಜನದಲ್ಲಿ ವಾಡಿಕೆಯಲ್ಲಿದ್ದ ಒಂದು ಕಥೆಯನ್ನು ಜಾತಕದ ಕಥೆಗಾರರು ಉಪಯೋಗಿಸಿಕೊಂಡರೆಂದರೆ ತಪ್ಪೇನೂ ಕಾಣುವುದಿಲ್ಲ. ದಶರಥ ಎನ್ನುವ ಹೆಸರು ಬಹು ಪುರಾತನವಾದದು. ಮೆಸೊಪೊಟೇಮಿಯಾ ಸಿರಿಯಾ ರಾಜ್ಯಗಳ ಕ್ರಿಸ್ತ ಪೂರ್ವದ ೧೬೦೦ರ ಕಾಲದ ಇತಿಹಾಸದಲ್ಲಿ ಬರುವ ಆರ್ಯ ರಾಜರ ಹೆಸರುಗಳಲ್ಲಿ ಇದು ಒಂದು. ಹಿಂದೂ ಜನರು ಗ್ರೀಕ್ ಜನರಿಂದ ಗ್ರಹ ಕುಂಡಲಿಯನ್ನು ಕಲಿತರೋ ಗ್ರೀಕರು ಹಿಂದೂ ಜನರಿಂದ ಅದನ್ನು ಕಲಿತರೋ ಇದನ್ನು ಖಂಡಿತವಾಗಿ ಹೇಳುವುದು ಸಾಧ್ಯವಲ್ಲ. ರಾಮನ ಜನನಕ್ಕೆ ಈ ಸ್ಥಲದಲ್ಲಿ ನಿರೂಪಿಸಿರುವ ಕುಂಡಲಿ ವಾಸ್ತವವಾಗಿ ಸಂಭವನೀಯವಲ್ಲವೆಂದು ದಿವಾನ್ ಬಹದ್ದೂರ್ ಸ್ವಾಮಿ ಕಣ್ಣುಪಿಳ್ಳೆಯವರು ಸಿದ್ಧಾಂತ ಮಾಡಿದರಂತೆ. ಇದು ಸರಿಯಾದಲ್ಲಿ ಕುಂಡಲಿಯ ಮಾತು ವಾಲ್ಮೀಕಿಯದಲ್ಲವೆಂದು ಹೇಳಬೇಕು. ಅಂತೂ ರಾಮಾಯಣದ ಕೆಲವು ಪಾಠದಲ್ಲಿ ಈ ಭಾಗ ಇಲ್ಲ. ಮಹಾಪುರುಷನ ಜನ್ಮಕ್ಕೆ ಸೂಚಕವಾದ ಕುಂಡಲಿಯನ್ನು ಆಮೇಲಣ ಜ್ಯೋತಿಷ್ಕರು ಕಟ್ಟಿ ಕಾವ್ಯದಲ್ಲಿ ಸೇರಿಸಿದರೆಂದು ಕಾಣುತ್ತದೆ. ಹೀಗೆ ಆಕ್ಷೇಪಕ್ಕೆಲ್ಲ ಸರಿಯಾದ ಸಮಾಧಾನವನ್ನು ಹೇಳಬಹುದು. ಕಾವ್ಯದ ಬೆಲೆಯನ್ನೋ ಹಿಂದೂ ಜನರ ಬೆಲೆಯನ್ನೋ ಕಡಮೆಮಾಡಬೇಕೆನ್ನುವ ಇಂಥ ಜನರ ಮಾತನ್ನು ಹೀಗೆ ಸಮಾಧಾನದಿಂದ ಒಂದು ಕಡೆಗಿಟ್ಟರೂ ಇಷ್ಟನ್ನು ನಾವು ಒಪ್ಪಿಕೊಳ್ಳಬೇಕು. ರಾಮನೆಂಬವನು ನಿಜವಾಗಿ ಇದ್ದು ರಾಮಾಯಣದ ಕಥೆ ನಿಜವಾಗಿ ನಡೆದದ್ದಾದರೆ, ಆ ಕಥೆಗೆ ಈಗ ಪ್ರಚಾರದಲ್ಲಿರುವ ಕಾವ್ಯದಲ್ಲಿ ಅಸಂಭವವಾದ ಅನೇಕ ಭಾಗಗಳು ಸೇರಿವೆ. ವಸಿಷ್ಠ ವಿಶ್ವಾಮಿತ್ರರ ವ್ಯವಹಾರದ ಚರಿತ್ರೆ ಅತಿ

ಶಯೋಕ್ತಿಗೆ ಹೋಗಿದೆ. ವಾನರರು ಎನ್ನುವರು ಕಪಿಗಳಲ್ಲ; ಉತ್ತರ ದೇಶದ ಜನರಷ್ಟು ಸಂಸ್ಕೃತರಲ್ಲದ ಜನರಾಗಿದ್ದಿರಬೇಕು. ಇವರ ಉಡುಪಿನಲ್ಲಿ ಹಿಂದುಗಡೆ ಬಾಲದಂತೆ ಒಂದು ಕೋಸಿ ಇದ್ದಿರಬೇಕು; ಅದನ್ನು ಕಾವ್ಯ ಬಾಲವೆಂದೇ ವರ್ಣಿಸಿದೆ. ಜಾವಾ ಬಲೀ ದ್ವೀಪಗಳ ಜನರ ವಸ್ತ್ರದಲ್ಲಿ ಈಗಲೂ ಇಂಥ ಕೋಸಿ ಉಂಟು. ಹನುಮಂತ ನೆನ್ನುವನು ನೂರು ಯೋಜನದ ಸಾಗರವನ್ನು ದಾಟಿದನೆನ್ನುವುದು ಕವಿಯ ಕಲ್ಪನೆ; ಪುಷ್ಪಕವಿಮಾನ ಇತ್ತೆನ್ನುವುದೂ ಪ್ರಾಯಶಃ ಕಲ್ಪನೆಯೇ. ಉಳಿದ ದೇಶಗಳಲ್ಲಿ ದೇವರುಗಳು ಭೂಮಿಗೆ ಬಂದರು, ಮಾನವರು ದೇವತೆಗಳೊಂದಿಗೆ ಮಾತನಾಡಿದರು, ಎಂದು ಮುಂತಾಗಿ ಭಾವನೆ ಗಳಿರುವಂತೆ ಇಲ್ಲಿಯೂ ಇವು ಬಂದಿವೆ. ಕಾವ್ಯವನ್ನು ಓದುವವರು ಅತಿಶಯೋಕ್ತಿಯನ್ನೂ, ಸ್ಪಷ್ಟವಾಗಿ ಅಥವಾ ಬಹುಮಟ್ಟಿಗೆ ಕಲ್ಪಿತ ವೆಂದು ಕಾಣುವುದನ್ನೂ, ಬಿಟ್ಟು ಕಾವ್ಯದ ಸಹಜವಾದ ಅಂಶವನ್ನು ಗ್ರಹಿಸಬೇಕು. ರಾಮಾಯಣದಂಥ ಕಾವ್ಯದ ವಿಷಯದಲ್ಲಿ ಇದೂ ಕಷ್ಟವಾಗುತ್ತದೆ, ನಿಜ. ರಾಮಾಯಣವನ್ನು ಪ್ರಶಂಸಿಸುವ ಒಂದು ಶ್ಲೋಕ ಹೇಳುವಂತೆ ರಾಮನ ಚರಿತ್ರೆ ಶತಕೋಟಿ ಪ್ರವಿಸ್ತರವಾಗಿದೆ. ಬಹುಕಾಲದ ಹಿಂದೆ ಇದನ್ನು ಜನರು ದೇವರ ಚರಿತ್ರೆಯೆಂದೇ ಒಪ್ಪಿ ಕೊಂಡು, ಇದನ್ನು ಬರೆಯುವುದು ಓದುವುದು ಪುಣ್ಯಕಾರ್ಯವೆಂದು ಭಾವಿಸತೊಡಗಿದರು. ಅದು ಭರತವರ್ಷದ ಸಂಸ್ಕೃತಿ ಹೋದ ಕಡೆಗೆಲ್ಲ ಹೋಯಿತು. ಬಲಿದ್ವೀಪದಲ್ಲಿ, ಯವದ್ವೀಪದಲ್ಲಿ, ಸಿಯಾಂ ದೇಶದಲ್ಲಿ, ಅನಾಂ ದೇಶದಲ್ಲಿ, ಮಧ್ಯ ಏಷ್ಯದಲ್ಲಿ, ಈ ಕಥೆಯ ಗುರುತುಗಳು ದೊರೆಯುತ್ತವೆ. ಜಾತಕದ ಕಥೆಯಲ್ಲಿ ಸೀತಾರಾಮರು ಸೋದರಿ ಸೋದರರು, ಮದುವೆಯಾಗುವರು. ಬಲಿದ್ವೀಪದಲ್ಲಿ ಕಥೆ ಎರಡು ರೂಪದಲ್ಲಿ ದೊರೆಯುತ್ತದೆ. ಒಂದರಲ್ಲಿ ರಾಮನು ಕಾಡಿಗೆ ಹೋಗುವುದು ಒಬ್ಬ ತಮ್ಮನ ಸಲುವಾಗಿ ಅಲ್ಲ, ಚಿಕ್ಕಪ್ಪನ ಸಲುವಾಗಿ. ವಾಲಿಯೂ ಸುಗ್ರೀವನಿಗೆ ಚಿಕ್ಕಪ್ಪನು. ಇನ್ನೊಂದು ರೂಪು ವಾಲ್ಮೀಕಿಯ ಕಥೆಗೆ ಇನ್ನು ಸ್ವಲ್ಪ ಹತ್ತಿರವಾಗಿದೆ. ಬಲಿದ್ವೀಪದಲ್ಲಿ ಈಗಲೂ ಜನತೆಯ ನಾಟಕದಲ್ಲಿ ಈ ಕಥೆಯ ಭಾಗಗಳು ತುಂಬ ಇವೆ. ಸಿಯಾಂದೇಶದ

ದೇವಾಲಯಗಳಲ್ಲಿ ರಾಮಾಯಣದ ಕಥೆಯ ಭಾಗಗಳನ್ನು ಚಿತ್ರಿಸುವ ಶಿಲ್ಪಗಳಿವೆ. ಬ್ರಹ್ಮನು ವಾಲ್ಮೀಕಿಗೆ ವರವನ್ನು ಕೊಟ್ಟ ಕಥೆ ಇಲ್ಲಿ ಚಿತ್ರಿತವಾಗಿದೆಯಂತೆ. ನಮ್ಮ ದೇಶದಲ್ಲಿ ಸನಾತನಧರ್ಮದ ಮಧ್ಯ ಕಾಂಡದಲ್ಲಿಯೇ ರಾಮನ ಕಥೆಯನ್ನು ಅನೇಕರು ವಿಸ್ತಾರವಾಗಿ ಬರೆದಿದ್ದಾರೆ. ಇದರಿಂದ ಕೆಲವು ವಿವರಗಳಲ್ಲಿ ವ್ಯತ್ಯಾಸವಾಗಿ ಒಂದು ಕಥೆ ಜೈನರಲ್ಲಿ ವಾಡಿಕೆಯಿದೆ. ಕಾವ್ಯದ ಸಹಜವಾದ ಭಾವವನ್ನು ಗ್ರಹಿಸುವವರು ಇದನ್ನೆಲ್ಲ ಜ್ಞಾಪಕದಲ್ಲಿಟ್ಟುಕೊಂಡು ನಡೆದಿರಬಹುದಾದ ಕಥೆ ಏನು ಎಂದು ಯೋಚಿಸಬೇಕಾಗುತ್ತದೆ.

ಈ ದೃಷ್ಟಿಯಿಂದ ನೋಡಿದರೆ ನಮಗೆ ಇಷ್ಟು ಕಥೆ ನಡೆದಿರಬಹುದೆಂದು ಕಾಣುತ್ತದೆ. ಬಹುಕಾಲದ ಹಿಂದೆ, ಕೋಸಲವೆಂಬ ರಾಜ್ಯದಲ್ಲಿ ದಶರಥನೆಂಬ ರಾಜನಿದ್ದನು. ಅವನಿಗೆ ಮೂವರು ರಾಣಿಯರು; ರಾಮ ಮುಂತಾಗಿ ನಾಲ್ವರು ಮಕ್ಕಳು. ರಾಮನು ಕಾಡಿಗೆ ಹೋಗಬೇಕಾಯಿತು. ಅವನ ಹೆಂಡತಿ ಸೀತೆಯನ್ನು ರಾವಣನೆಂಬ ದುಷ್ಟನು ಕದ್ದುಕೊಂಡು ಹೋದನು. ರಾಮನು ಅವಳನ್ನು ಬಿಡಿಸಿಕೊಂಡು ಬಂದನು. ಇದರಲ್ಲಿ ಇವನಿಗೆ ವಾನರರೆಂಬ ಜನರು ಸಹಾಯರಾದರು. ವನವಾಸದಿಂದ ಹಿಂದಿರುಗಿ ಬಂದು ರಾಮನು ದೊರೆಯಾದನು. ಇವನ ಚರಿತ್ರೆಯನ್ನು ಆ ಕಾಲದ ಕವಿ ವಾಲ್ಮೀಕಿ ಎಂಬ ಋಷಿ ಒಬ್ಬನು ರಚಿಸಿ ರಾಜನಿಗೆ ಒಪ್ಪಿಸಿದನು. ರಾಮನ ಮಹನೀಯಗುಣಗಳನ್ನು ನೋಡಿ ಜನರು ಅವನನ್ನು ದೇವರ ಅವತಾರವೆಂದೆಣಿಸಿದರು. ಇದು ಭಾರತದ ಕಾಲಕ್ಕೆ ಮೊದಲು, ಪ್ರಾಯಶಃ ಶ್ಲೋಕವೆನ್ನುವುದು ರೂಪುಗೊಳ್ಳುತ್ತಿದ್ದ ಕಾಲದಲ್ಲಿ ನಡೆದದ್ದಿರಬೇಕು. ಎಂದರೆ ಬಹು ಹಿಂದಿನ ಮಾತು.

ಇದರಮೇಲೆ ನಾವು ಇಷ್ಟವಿದ್ದುದನ್ನು ನಂಬಬಹುದು; ಇಲ್ಲದ್ದನ್ನು ಬಿಡಬಹುದು. ಊಹೆಯಿಂದ ಸಾಧ್ಯವಾದದಕ್ಕೆಲ್ಲ ತಕ್ಕಮಟ್ಟಿಗೆ ಯುಕ್ತಿಯುಕ್ತವಾದ ಅರ್ಥವನ್ನು ಕಲ್ಪಿಸುವುದಾದರೆ ಸಂತೋಷ. ಪೂರ್ವದಲ್ಲಿ ಭರತವರ್ಷ, ಆಫ್ರಿಕಾ, ಅಮೆರಿಕಾ ದೇಶಗಳೆಲ್ಲ ಒಂದು ಭೂಮಂಡಲವಾಗಿದ್ದುವೆಂದು ಆಧುನಿಕ ಶಾಸ್ತ್ರಜ್ಞರು ಹೇಳುತ್ತಾರೆ. ತಮಗೆ ವಿಕಾರವಾಗಿ ಕಂಡ ಒಂದು ಜನಾಂಗವನ್ನು ಕೋಸಲದೇಶದ

ಜನರು ವಾನರರೆಂದು ಕರೆದಿರಬಹುದೆಂದು ಊಹಿಸುವುದು ತಪ್ಪಲ್ಲ. ಆಫ್ರಿಕಾದೇಶದ ಮಹದಾಕೃತಿಯ ಕಪಿಗಳ ಕಥೆಯನ್ನು ತಿಳಿದಿದ್ದ ಜನರು ಈ ವಾನರ ಜನರನ್ನೂ ಆ ಕಪಿಗಳ ಬಲವನ್ನೂ ಒಂದುಗೂಡಿಸಿ ಹನುಮ ಸುಗ್ರೀವಾದಿ ವೀರರನ್ನು ಮಾಡಿರಬಹುದು. ಉತ್ತರ ಅಮೆರಿಕದ ಇಂಡಿಯನ್ ಜನರು ತಾವು ಇಂಥ ಹಕ್ಕಿಯ ಮಗನು, ಇಂಥ ಸರ್ಪದ ಮಗನು, ಇಲ್ಲ ಹುಲಿಯ ಮಗನು, ಗಾಳಿಯ ಮಗನು, ಸೂರ್ಯನ ಮಗನು ಎಂದು ಮೊದಲಾಗಿ ಹೆಸರನ್ನು ಇಟ್ಟುಕೊಳ್ಳುತ್ತಿದ್ದ ರಂತೆ. ದಶರಥನ ಸಖನೆಂದು ರಾಮನಿಗೆ ನೆರವಾದ ಜಟಾಯು ಇಂಥ ವನ್ಯ ಜನದ ಒಬ್ಬ ವೃದ್ಧನಿರಬಹುದು. ದಕ್ಷಿಣ ಅಮೆರಿಕದ ದುರ್ಭೇದ್ಯ ವಾದ ಅರಣ್ಯಗಳ ಮಧ್ಯದಲ್ಲಿ ಅಳಿದುಹೋದ ಒಂದು ನಾಗರಿಕತೆಯ ಅವಶೇಷಗಳು ಈಗಲೂ ದೊರೆಯುತ್ತವೆ. ಆ ನಾಗರಿಕತೆಯನ್ನು "ಮಯ ನಾಗರಿಕತೆ" ಎಂದು ಕರೆಯುತ್ತಾರೆ. ನಮ್ಮ ಪುರಾಣಗಳ ಪ್ರಕಾರ ಮಯನು ಅಸುರರ ಶಿಲ್ಪಿ. ವಿಶ್ವಕರ್ಮನಿಗೆ ಸಮನಾಗಿ ಇವನು ಸೌಧ ಗಳನ್ನೂ ಭವನಗಳನ್ನೂ ಕಟ್ಟುತಿದ್ದನು. ದಕ್ಷಿಣ ಅಮೆರಿಕದ "ಮಯ" ನಾಗರಿಕತೆಯ ಮುಖ್ಯ ಅವಶೇಷಗಳು ವಿಸ್ತಾರವಾದ ದೇವಾಲಯಗಳು, ಭವ್ಯಮಂದಿರಗಳು. ಅವುಗಳಲ್ಲಿ ವಿಚಿತ್ರವಾದ ಶಿಲಾ ಶಿಲ್ಪವಿದೆ. ಅದರಲ್ಲಿ ನಮ್ಮ ಸೀಮೆಯ ಶಿಲ್ಪದಲ್ಲಿ ಕಾಣುವ ಮೂರ್ತಿಗಳಂತೆ ಮೂರ್ತಿಗಳು ಶಿಲ್ಪವಾಗಿವೆ. ಈ ಜನರಲ್ಲಿ ವಾಡಿಕೆ ಇರುವ ಹೆಸರುಗಳಲ್ಲಿ ರಾಮ ಲೆಂಕ ಮಿಟ್ಲ ಎಂಬ ಮಾತುಗಳಿವೆ. ಅಲ್ಲಿಂದಿಲ್ಲಿಗೆ ಹಿಂದೆ ಒಂದು ಭೂಭಾಗ ಇದ್ದಿತೆಂದೂ ಹೇಳುತ್ತಾರೆ. ರಾಮಾಯಣದ ಲಂಕೆಗೂ ಈ ಮಯ ನಾಗರಿಕತೆಗೂ ಯಾವ ಸಂಬಂಧ ಇರಬಹುದೊ? ಸಮುದ್ರವನ್ನು ಹನುಮಂತನು ನಾವೆಯಿಂದ ದಾಟಿರಬಾರದೆ? ಮಾಮಲ್ಲಪುರ ಸಾಗರ ದಲ್ಲಿ ಮುಳುಗಿತೆಂದೂ ಪರಶುರಾಮನ ನಾಡು ನೀರಿನಿಂದ ಮೇಲಕ್ಕೆ ಬಂದಿತೆಂದೂ ಸಂಪ್ರದಾಯದ ನಂಬಿಕೆ. ಇದಾದದು ನಿಜವಾದರೆ ಆವೇಳೆ ಕನ್ಯಾಕುಮಾರಿಯ ಬಳಿ ನೆಲದ ಮುಖ ಎಷ್ಟು ಮಾರ್ಪಟ್ಟಿತೋ ಹೇಗೆ ಹೇಳುವುದು? ರಾಮಾಯಣದ ಕಾಲಕ್ಕೆ ಅಲ್ಲಿಯ ಜಲಸಂಧಿ ಬಹು ಸಣ್ಣದಾಗಿದ್ದಿರಬಹುದು; ಅದನ್ನು ಹನುಮಂತನು ಈಸಿಯೇ

ಇರಬಹುದು. ನಾಗರಿಕತೆಯಲ್ಲಿ ಮುಂದುವರಿದಿದ್ದ ಆಗಿನ ಜನರು ನಮ್ಮ ಏರೋಪ್ಲೇನುಗಳಂತೆ ಏನಾದರೊಂದು ಆಕಾಶಗಮನದ ಸೌಕರ್ಯವನ್ನು ಮಾಡಿಕೊಂಡಿದ್ದರೋ? ಹಾಗೆ ಮಾಡಿಕೊಂಡಿದ್ದರೆ ಆ ತಿಳಿವಳಿಕೆಯೆಲ್ಲ ಎತ್ತ ಹೋಯಿತು ಎಂದು ಪ್ರಶ್ನೆ ತಲೆದೋರುತ್ತದೆ. ಮನುಷ್ಯನಿಗೆ ಬಂದ ತಿಳಿವಳಿಕೆಯನ್ನೆಲ್ಲ ಅವನು ಎಲ್ಲ ಕಾಲದಲ್ಲಿ ಕಲಿಸುತ್ತ ಇದ್ದಿಲ್ಲ; ಅವಿತಿಡುವುದೂ ಒಂದು ಸಂಪ್ರದಾಯ. ಆ ಜನರು ಹೋದರು, ಅವರೊಂದಿಗೆ ಆ ತಿಳಿವೂ ಹೋಯಿತು. ಈಗ ಆಕಾಶ ಗಮನದ ವಿಷಯವನ್ನು ಬಲ್ಲವರು ಎಷ್ಟು ಜನವಿದಾರೆ? ಈ ತಿಳಿವು ಬಚ್ಚಿಡಬೇಕಾದದೆಂದು ಈಗಿನ ಜನರು ತಿಳಿದಿಲ್ಲ. ಆದರೆ ಅದರ ಕೆಲವು ವಿಶೇಷ ಯುಕ್ತಿಗಳನ್ನು ಗುಟ್ಟಾಗಿಟ್ಟುಕೊಂಡಿರುವವರು ಇದ್ದೇ ಇದಾರೆ. ಅವರು ತೀರಿಹೋದರೆ ಅವು ಮತ್ತೆ ಹೇಗೆ ಬರಬೇಕು? ಇನ್ನೊಬ್ಬರ ಬುದ್ಧಿಗೆ ಹೊಳೆದು ಅಲ್ಲವೇ? ಅವು ಹೊಳೆಯದೆ ಇರುವುದಿಲ್ಲ. ಒಮ್ಮೆ ಮನುಷ್ಯನಿಗೆ ಹೊಳೆದದು ಮತ್ತೆ ಮನುಷ್ಯನಿಗೆ ಹೊಳೆಯಬಹುದು. ಇಂದು ನಾಗರಿಕತೆ ಹೊಸತೆಂದು ತಿಳಿಯುವ ವಿವರ ಹಿಂದಣ ಒಂದು ನಾಗರಿಕತೆಗೆ ತಿಳಿದಿದ್ದಿರಬಹುದು; ಆ ನಾಗರಿಕತೆ ತಿಳಿದು ಅದನ್ನು ಈಚೆಗೆ ಲೋಕ ಮರೆತಿದ್ದಿರಬಹುದು. ಯುಗಾಂತರದ ಮಹದಾಕೃತಿಯ ಜೀವ ಗಳ ನೆನವು ಜನದಲ್ಲಿ ಪ್ರಾಚುರ್ಯದಲ್ಲಿದ್ದು ದಿನದ ಬಾಯ ಕತೆಯಲ್ಲಿ ರಾಮಾಯಣದಲ್ಲಿ ಕಾಣುವ ಭಯಂಕರಾಕೃತಿಯ ವನಚರ ಜೀವಗಳಾಗಿ ವರ್ಣಿತವಾಗಿರಬಹುದು; ವಾಲ್ಮೀಕಿ ಬರೆದ ಕತೆಗೆ ಬಹು ಕಾಲದಮೇಲೆ ಇಂಥ ವಿಚಾರಗಳ ಕಥೆಯನ್ನು ಇತರ ಕವಿಗಳು ಸೇರಿಸಿರಬಹುದು. ಆದರೆ ಇದೆಲ್ಲ ಬಹುದಿನ ಮಾತು. ಇದು ಯಾವುದೂ ಇಲ್ಲದೆಯೂ ಬಹುದು. ರಾಮನ ಕಥೆ ಸಹಜವಾಗಿ ಎಷ್ಟು ನಡೆದಿರಬಹುದೋ ಅಷ್ಟನ್ನು ನಾವು ಒಪ್ಪಿಕೊಂಡು ಉಳಿದದನ್ನು ಜನತೆಯ ಊಹೆ, ಕವಿತೆಯ ಊಹೆ, ಎಂದೇ ಬಿಡೋಣ. ಎಲ್ಲ ರಾಷ್ಟ್ರಗಳ ಕವಿತೆಯಲ್ಲಿಯೂ ಇಂಥ ಭಾಗವಿದೆ; ಇಲ್ಲಿಯೂ ಅದರಂತೆಯೇ ಇಂಥ ಭಾಗ ಕಾಣುತ್ತದೆ.

ಹಾಗಾದರೆ ನಮಗೆ ಉಳಿಯುವುದು ಬಹು ಸ್ವಲ್ಪವಲ್ಲವೆ? ನಿಜವಾಗಿ ನಡೆದಿರಬಹುದಾದುದು ಎಂದರೆ ರಾಮಾಯಣದ ಬಹು ಭಾಗವನ್ನು

ಬಿಡಬೇಕಾಗುತ್ತದೆ ಎಂದು ನಾವು ಒಪ್ಪಬೇಕು. ಆದರೆ ಉಳಿಯುವ ಭಾಗ ಸ್ವಲ್ಪವಲ್ಲ. ಗಾತ್ರದಿಂದಲೂ ಸ್ವಲ್ಪವಲ್ಲ; ಯೋಗ್ಯತೆಯಿಂದಂತೂ ಅದನ್ನು ಸ್ವಲ್ಪವೆಂದು ಹೇಳುವುದು ಸಾಧ್ಯವಲ್ಲ. ಪ್ರಕ್ಷೇಪ ಅದ್ಭುತ ವಿಚಿತ್ರಗಳನ್ನು ಬಿಟ್ಟರೆ ಉಳಿಯುವ ಕಾವ್ಯ ಈಗಿನ ರಾಮಾಯಣದಲ್ಲಿ ಒಂದು ಪಾಲು ಕಡಮೆಯಾದರೆ ಒಂದು ಪಾಲು ನಿಲ್ಲುತ್ತದೆ. ಅದರಲ್ಲಿ ಉಕ್ತವಾದ ಸ್ಥಳಗಳು ಇವು ಎಂದು ಎಲ್ಲ ಸಂದರ್ಭದಲ್ಲಿಯೂ ಖಂಡಿತ ವಾಗಿ ಹೇಳುವುದಾಗದೆ ಇರಬಹುದು. ಆದರೆ ಇದರಿಂದ ಕಥೆ ನಡೆದಿರ ಲಾರದೆಂದು ಹೇಳಬೇಕಾದದಿಲ್ಲ.

ಮತ್ತೆ ಇದರಮೇಲೆ ರಾಮನೆಂಬುವನು ಇರಲೇ ಇಲ್ಲ, ಕಥೆನಡೆದದಲ್ಲ ಎಂದು ಹೇಳಿದರೂ ಕಾವ್ಯದ ದೃಷ್ಟಿಯಿಂದ ಜನತೆಯ ದೃಷ್ಟಿಯಿಂದ ನಮಗೇನೂ ಕುಂದಿಲ್ಲ. ಹೊರಗಣದೆಂಬ ಪ್ರಪಂಚದಲ್ಲಿ ರಾಮನೆಂಬ ವ್ಯಕ್ತಿ ಇದ್ದನೊ ಇಲ್ಲವೊ; ಒಂದು ಜನಾಂಗದ ಕವಿಯ ಊಹೆಯಲ್ಲಿ ಅವನು ಇದ್ದನು. ಅದೇ ಊಹೆಯಲ್ಲಿ ಅವನಿಗೆ ಸತಿಯಾಗಿ ಸೀತೆಯೆಂಬ ರಮಣಿ ಇದ್ದಳು. ಕವಿಯ ಊಹೆಯ ಆ ಪುರುಷವ್ಯಕ್ತಿ ಆ ಜನಾಂಗದ ಸತ್ಯಸಂಧತೆಯ, ಧರ್ಮಶೀಲತೆಯ, ಆದರ್ಶ ಮೂರ್ತಿ. ಆ ಸ್ತ್ರೀವ್ಯಕ್ತಿ ಪರಿಶುದ್ಧ ಸ್ತ್ರೀತ್ವದ, ಸಹಧರ್ಮಿಣೀ ಸ್ನೇಹದ, ಕನಸ ಕಲಶ. ಹೊರಗಣ ದೆಂಬ ಪ್ರಪಂಚದಲ್ಲಿ ರಾಮನೆಂಬ ಒಂದು ದೇಹ, ಸೀತೆಯದೆಂಬ ಒಂದು ದೇಹ, ಇದ್ದವೋ ಇಲ್ಲವೋ. ಇದ್ದದು ನಿಜವಾದರೂ ಇಂದೇನೋ ಅವು ಮರೆದುಹೋಗಿವೆ. ಆದರೆ ಕವಿಯ ಮನಸ್ಸಿನಲ್ಲಿ ಈ ವ್ಯಕ್ತಿಗಳು ತಳೆದ ಆಕಾರ ಈಗಲೂ ಅಳಿಯದೆ ಇದೆ. ಇವುಗಳ ಸತ್ಯದ ವಿಷಯ ನಮಗೆ ಸಂದೇಹಬೇಡ. ನಿದ್ರಿಸುವ ಮನುಷ್ಯನಿಗೆ ಮನೆಯಲ್ಲಿ ಓಡಿಯಾಡುವ ಜನದ ಅರಿವಿಲ್ಲ; ಕನಸಿನ ಜೀವನ ಅವನಿಗೆ ನಿಜವಾಗಿರುತ್ತದೆ. ಅವನ ಮಂಚದ ಅಡಿಯಲ್ಲಿ ನಿಜವಾದ ಹಾವು ಒಂದು ಇರಬಹುದು; ಅದರಿಂದ ಅವನು ಭಯಪಡುವುದಿಲ್ಲ. ಅವನು ಕನಸಿನಲ್ಲಿ ಒಂದು ಹಾವನ್ನು ಕಾಣುತ್ತಾನೆ, ಹೆದರಿ ಚೀರುತ್ತಾನೆ. ಯಾವುದು ನಮ್ಮ ಮನಸ್ಸನ್ನು ಮುಟ್ಟುವುದೋ ಯಾವುದು ನಮ್ಮ ಭಾವನೆಯನ್ನು ತಾಗುವುದೋ ಅದು ನಿಜವಾದ ನಿಜ. ಎಂದೋ ಇದ್ದು ನಮ್ಮ ಮನಸ್ಸನ್ನು ಮುಟ್ಟದ

ವಸ್ತುಸ್ಥಿತಿ ಅಂದಿನ ನಿಜ, ಇಂದಿಗೆ ನಿಜವಲ್ಲ; ಅದರ ನೈಜಭಾವ ಸಂಪೂರ್ಣವಲ್ಲ. ಇದರಿಂದಲೇ ವ್ಯವಹಾರದ ಸತ್ಯಕ್ಕಿಂತ ಕಾವ್ಯದ ಸತ್ಯ ಮುಖ್ಯವಾದುದು, ಶ್ರೇಷ್ಠವಾದುದು. ಇದನ್ನು ಗ್ರಹಿಸಿದವರು ಸೀತಾ ರಾಮರು ಇದ್ದರೇ ಇಲ್ಲವೇ ಎಂಬ ವಿಷಯದಲ್ಲಿ ಅನ್ವೇಷಕರು ಒಡ್ಡುವ ಸಂದೇಹದಿಂದ ನಡುಗುವುದಿಲ್ಲ, ಆ ದಂಪತಿಗಳು ಇರಲಿಲ್ಲ ಎಂದರೆ ನೋಯುವುದಿಲ್ಲ. ಸೀತಾರಾಮರು ಅಂದು ಇದ್ದರೋ ಇಲ್ಲವೋ ನಮಗೆ ಮುಖ್ಯ ಅಲ್ಲ. ಅವರು ಈಗ ಇದಾರೆ; ನಮಗೆ ಇಷ್ಟವಿದ್ದರೆ ಎಂದೆಂದಿಗೂ ಇರುತ್ತಾರೆ.

## ೧೩
## ವಾಲ್ಮೀಕಿ ತುಲಾಭಾರ

ಪಾಶ್ಚಾತ್ಯ ವಿಮರ್ಶಕರಿಂದ ವಾಡಿಕೆಗೆ ಬಂದಿರುವ ವಿಚಾರಪಥ ಗಳಲ್ಲಿ ಭರತವರ್ಷದ ಕಾವ್ಯಗಳನ್ನು ಇತರ ದೇಶಗಳ ಕಾವ್ಯಗಳೊಂದಿಗೆ ಹೋಲಿಸಿ ಇವುಗಳ ಯೋಗ್ಯತೆ ಏನೆಂದು ತೂಕಮಾಡಿ ಹೇಳುವುದು ಒಂದು. ರಾಮಾಯಣದೊಂದಿಗೆ ಹೀಗೆ ಹೋಲಿಸುವ ಕಾವ್ಯಗಳು ಹೋಮರ್ ಕವಿಯ ಇಲಿಯಡ್, ಅವನದೆಂಬ ಒಡಿಸ್ಸಿ; ವರ್ಜಿಲ್ ಕವಿಯ ಈನಿಡ್, ಡಾಂಟೆಯ ಡಿವೈನ್ ಕಾಮೆಡಿ; ಮಿಲ್ಟನ್ ಕವಿಯ ಪ್ಯಾರಡೈಸ್ ಲಾಸ್ಟ್. ಇವುಗಳಲ್ಲಿ ಹೋಮರ್ ಕವಿಯ ಹೆಸರಿನ ಕಾವ್ಯ ಗಳು ಬಹು ಪುರಾತನವಾದವು. ಇಲಿಯಡ್ ಕಾವ್ಯದಲ್ಲಿ ಸ್ಪಾರ್ಟದ ರಾಣಿ ಹೆಲೆನಳು ಟ್ರಾಯ್ ನಗರದ ರಾಜಕುಮಾರ ಪ್ಯಾರಿಸನೊಂದಿಗೆ ಓಡಿ ಹೋಗಲು ಅವಳನ್ನು ಬಿಡಿಸಿಕೊಂಡು ಬರುವುದಕ್ಕಾಗಿ ಅವಳ ಗಂಡ ಮೆನಿಲೇಯಿಸನು ಅನೇಕ ಗ್ರೀಕನಾಯಕರೊಂದಿಗೆ ಟ್ರಾಯ್ ನಗರವನ್ನು ಮುತ್ತಿದ ಕಥೆ ಇದೆ. ಒಡಿಸ್ಸಿ ಕಾವ್ಯದಲ್ಲಿ ಈ ಗ್ರೀಕ್ ನಾಯಕರಲ್ಲಿ ಪ್ರಮುಖನಾದ ಯುಲೀಸೀಸ್ ರಾಜನು ಬಹು ದೇಶಗಳಲ್ಲಿ ಓಡಿಯಾಡಿ ಕೊನೆಗೆ ಊರಿಗೆ ಬಂದ ಕಥೆ ಇದೆ. ವರ್ಜಿಲ್ ಕವಿ ಹೋಮರ ಕಾವ್ಯವನ್ನು ನೋಡಿ ಅದರಂತೆ ತನ್ನ ಜನದ ಪೂರ್ವದ ಚರಿತ್ರೆಯನ್ನು ಹೇಳುವುದ ಕ್ಕಾಗಿ ಟ್ರಾಯ್ ನಗರದ ಮುಖ್ಯ ಪುರುಷನಾದ ಈನಿಯುಸನ ಕಥೆಯನ್ನು

ಹೇಳಿದನು; ಇದೇ ಈನಿಡ್ ಕಾವ್ಯ. ಡಾಂಟೆ ತನ್ನ ಕಾವ್ಯದಲ್ಲಿ ತಾನು ಧ್ಯಾನದಲ್ಲಿ ನರಕ, ಸ್ವರ್ಗ, ಇವುಗಳ ಮಧ್ಯದ ಪಾಪಶೋಧಕ ಪ್ರಪಂಚ, ಈ ಮೂರರಲ್ಲಿ ಓಡಿಯಾಡಿ ಪಾಪಿಗಳ ದಂಡನೆಯನ್ನೂ ಶುದ್ಧಿಯಾಗುತ್ತಿರುವವರ ಅವಸ್ಥೆಯನ್ನೂ ಸ್ವರ್ಗವಾಸಿಗಳ ಸುಖವನ್ನೂ ನೋಡಿದಂತೆ ವರ್ಣಿಸುತ್ತಾನೆ. ಮಿಲ್ಟನ್ ಕವಿಯ ಕಾವ್ಯ ಯೆಹೂದ್ಯ ಮತದ ಪ್ರಕಾರ ಮಾನವಕುಲದ ಆದಿಮಾತಾಪಿತೃಗಳಾದ ಆಡಮ್ ಈವ್ ದಂಪತಿಗಳು ತಮಗೆ ದೇವರಿಂದ ಅನುಗ್ರಹಿಸಲ್ಪಟ್ಟ ನಂದನದಲ್ಲಿರುತ್ತ, ದೇವರು ಏನು ಹೆಚ್ಚೆಂದು ಅವನನ್ನು ಎದುರಿಸಿ ಅವನ ಕೋಪದಿಂದ ಸ್ವರ್ಗಭ್ರಷ್ಟನಾದ ಸೈತಾನನು ಬಂದು ಬುದ್ಧಿಯನ್ನು ಕೆಡಿಸಲು, ದೇವರ ಆಜ್ಞೆಯನ್ನು ಉಲ್ಲಂಘಿಸಿ ನಂದನವಾಸವನ್ನು ಕಳೆದುಕೊಂಡರೆಂಬ ಕಥೆಯನ್ನು ಹೇಳುತ್ತದೆ. ಪಾಶ್ಚಾತ್ಯ ಕಾವ್ಯಗಳನ್ನು ಆಯಾ ಭಾಷೆಗಳಲ್ಲಿ ಬಲ್ಲವರಲ್ಲಿ ಸಂಸ್ಕೃತವನ್ನು ಅಷ್ಟೇ ಚೆನ್ನಾಗಿ ಪಾಠಮಾಡಿರುವವರು ಅನೇಕರಿಲ್ಲ. ನಮಗೆ ಸಂಸ್ಕೃತ ತಿಳಿಯುವಂತೆ ಹೋಮರ್, ವರ್ಜಿಲ್, ಡಾಂಟೆಗಳ ಭಾಷೆ ಸಾಮಾನ್ಯವಾಗಿ ತಿಳಿದಿರುವುದಿಲ್ಲ; ಮಿಲ್ಟನನ ಕಾವ್ಯ ತಕ್ಕ ಮಟ್ಟಿಗೆ ತಿಳಿದಿರುತ್ತದೆ. ಇಂಥ ಸಂದರ್ಭದಲ್ಲಿ ಹೋಲಿಸುವುದಕ್ಕೆ ಹೊರಡುವುದೇ ಸ್ವಲ್ಪ ಅತಂತ್ರದ ಕೆಲಸ. ಆದರೆ ಭಾಷಾಂತರಗಳಿಂದ ಹೋಮರ್, ವರ್ಜಿಲ್, ಡಾಂಟೆಗಳ ಕಾವ್ಯಗಳನ್ನು ನೋಡಿ ನಾವೂ ಈ ಹೋಲಿಕೆಯ ವಿಷಯವಾಗಿ ಪಾಶ್ಚಾತ್ಯ ವಿಮರ್ಶಕರು ಹೇಳಿರುವ ಮುಖ್ಯಾಂಶಗಳೇನೆಂದು ಗ್ರಹಿಸಬಹುದಾಗಿದೆ. ಈ ಪಾಶ್ಚಾತ್ಯ ಕಾವ್ಯಗಳನ್ನೆಲ್ಲ ಕುರಿತು ನಾವು ಒಂದು ಮಾತನ್ನು ಮೊದಲೇ ಹೇಳಬಹುದು. ಅವು ಎಲ್ಲ ಮಿತವನ್ನು ಬಲ್ಲ ಕಾವ್ಯಗಳು. ರಾಮಾಯಣ, ಇಷ್ಟಬಂದಲ್ಲಿ ಮಿತವನ್ನು ಬಲ್ಲದು; ಇಷ್ಟವಿಲ್ಲದಲ್ಲಿ ಮಿತಿಯಿಲ್ಲದೆ ಬೆಳೆದಿದೆ. ಮಿತಿ ಹೀಗೆ ತಪ್ಪಿರುವುದಕ್ಕೆ ಸ್ವಲ್ಪ ಮಟ್ಟಿಗೆ ಪ್ರಕ್ಷಿಪ್ತ ಭಾಗಗಳೂ ಕಾರಣವಾಗಿವೆ. ಇವಲ್ಲದೆ ಯುದ್ಧಗಳ ಮಾತು ಬಂದಾಗ ನಮ್ಮ ಕವಿಗೆ ಎಷ್ಟನ್ನು ಹೇಳಬಹುದು ಎಷ್ಟನ್ನು ಬಿಡಬಹುದು ಎಂಬ ಯೋಚನೆ ಮನಸ್ಸಿಗೆ ಬರುವುದೇ ಇಲ್ಲವೆಂದು ತೋರುತ್ತದೆ. ಇದರಿಂದ ರಾಮಾಯಣದ ಕಾವ್ಯ ಹೋಮರನ ಕಾವ್ಯದಂತೆ, ಮಿಲ್ಟನನ ಕಾವ್ಯದಂತೆ, ಅಚ್ಚುಕಟ್ಟಾಗಿ ಕಾಣುವುದಿಲ್ಲ.

ಇದನ್ನು ಬಿಟ್ಟರೆ ರಾಮಾಯಣದ ವಿಷಯದಲ್ಲಿ ಹೋಲಿಕೆಯಿಂದ ನಾವು ಯಾರೂ ಕೊರತೆಯನ್ನು ಕಾಣುವಂತಿಲ್ಲ. ಪಾಶ್ಚಾತ್ಯ ವಿಮರ್ಶಕರೊಬ್ಬರು ರಾಮಾಯಣದ ಜೀವನ ಹೋಮರನ ಕಾವ್ಯಗಳ ಜೀವನಕ್ಕಿಂತ ನಯವಾದದೆಂದೂ ಇಲ್ಲಿಯ ನಾಯಕ ನಾಯಕಿಯರ ಕಲ್ಪನೆ ಅದಕ್ಕಿಂತ ಎತ್ತರವಾದದೆಂದೂ ಇದರಲ್ಲಿ ಕಾಣುವ ಪ್ರಕೃತಿಸೌಂದರ್ಯ ವರ್ಣನೆ ಹೋಮರನ ವರ್ಣನೆಗಳಿಗಿಂತ ತುಂಬಿದ ಕಲೆಯೆಂದೂ ಇಲ್ಲಿ ಕಲೆಯ ದೃಷ್ಟಿ ಅಲ್ಲಿಗಿಂತ ಹೆಚ್ಚಾಗಿ ಧರ್ಮದಲ್ಲಿ ನೆಲೆಸಿದೆಯೆಂದೂ ಹೇಳಿದಾರೆ. ಇದರ ಫಲವಾಗಿ ಹೋಮರನ ನಾಯಕರು ಎಷ್ಟು ಸಹಜವಾದ ವ್ಯಕ್ತಿಗಳಾಗಿ ಕಾಣುತ್ತಾರೋ ರಾಮಾಯಣದ ವ್ಯಕ್ತಿಗಳು ಅಷ್ಟು ಸಹಜವಾಗಿ ಕಾಣುವುದಿಲ್ಲ ಎಂತಲೂ ಇಲ್ಲಿ ಮತದ ಹೆಸರಿನಲ್ಲಿ ಎಲ್ಲೆಲ್ಲಿಯೂ ಪೌರೋಹಿತ್ಯ ತಲೆ ಹಾಕುತ್ತದೆ ಎಂದೂ ಇವರ ಅಭಿಪ್ರಾಯ. ಜೀವನದ ಚಿತ್ರವಾದರೆ ಇಲ್ಲಿಗಿಂತ ಹೋಮರನಲ್ಲಿ ಚೆನ್ನಾಗಿದೆಯೆಂದು ಹೇಳುವಂತಿಲ್ಲ ಎಂದೂ ಇವರು ಹೇಳುತ್ತಾರೆ. ರಾಮನ ಸತ್ಯಸಂಧತೆ, ಸೀತೆಯ ಪಾತಿವ್ರತ್ಯ ಒಳ್ಳೆಯ ಗುಣಗಳು, ಆದರೆ ಅತಿಯಾಗಿವೆ, ಎಂದು ಇವರ ಸೂಚನೆ. ಇತರ ಪಾಶ್ಚಾತ್ಯ ವಿಮರ್ಶಕರು ಈ ಕಾವ್ಯದಲ್ಲಿ ಇವರು ಕಂಡಷ್ಟು ಒಳ್ಳೆಯದನ್ನು ಕಾಣುವುದಿಲ್ಲ; ಇನ್ನೊಂದೆರಡು ಕುಂದನ್ನು ಕಾಣುತ್ತಾರೆ. ವರ್ಜಿಲನ ಕಾವ್ಯ ಹೋಮರನ ಕಾವ್ಯದ ಆದರ್ಶವನ್ನಿಟ್ಟುಕೊಂಡು ಬರೆದದು. ಡಾಂಟೆಯ ಕಾವ್ಯ ಜನದ ಬಾಳುವೆಯ ಕಥೆಗಳನ್ನು ಹೇಳಿ ಅವುಗಳಿಂದ ಬರುವ ಪಾಪ ಪುಣ್ಯಗಳನ್ನು ವಿವರಿಸುವ ದೃಷ್ಟಿಯಿಂದ ಪ್ರವೃತ್ತವಾಯಿತು. ವರ್ಜಿಲನ ಕಾವ್ಯ, ಹೋಮರನ ಕಾವ್ಯದಂತೆ, ವಿಶೇಷವಾಗಿ ಕಾವ್ಯದ ದೃಷ್ಟಿಯ ಕೃತಿ. ಡಾಂಟೆಯ ಕಾವ್ಯ ಇವೆರಡಕ್ಕಿಂತ ಹೆಚ್ಚಾಗಿ ಮತದ ದೃಷ್ಟಿಯ ಕೃತಿ. ಮಿಲ್ಟನನ ಕಾವ್ಯ ಮತದ ಕಥೆಯನ್ನು ಕುರಿತದಾದರೂ ದೇವರು, ಅವನ ದೂತರು, ಸೈತಾನನು, ಅವನ ಜೊತೆಯವರು, ಆಡಮ್, ಈವ್, ಇವರನ್ನೆಲ್ಲ ಮಾನವ ವ್ಯಕ್ತಿಗಳಂತೆ ಚಿತ್ರಿಸಿದೆ. ಉಳಿದೆಲ್ಲ ಕಾವ್ಯಗಳನ್ನು ನೋಡಿದ್ದ ಕವಿಯಿಂದ ಈಗ ಮುನ್ನೂರು ವರ್ಷದ ಈಚೆಗೆ ರಚಿತವಾದದರಿಂದ ಇದು ಉಳಿದ ಎಲ್ಲ ಕಾವ್ಯಗಳಿಗಿಂತ ಅಡಕವಾಗಿಯೂ ಅಚ್ಚುಕಟ್ಟಾಗಿಯೂ ಇದೆ.

ಪಾಶ್ಚಾತ್ಯರಿಗೆ ತಮ್ಮ ಕಾವ್ಯಗಳು ರಾಮಾಯಣಕ್ಕಿಂತ ಚೆನ್ನಾಗಿರುವಂತೆ ಕಾಣಬಹುದು. ನಮ್ಮಲ್ಲಿಯೂ ಪಾಶ್ಚಾತ್ಯ ಪದ್ಧತಿಯಲ್ಲಿ ಕಾವ್ಯವನ್ನು ಪಾಠಮಾಡಿರುವವರಿಗೆ ಪಾಶ್ಚಾತ್ಯ ಕಾವ್ಯಗಳ ಅಡಕ ಅಚ್ಚುಕಟ್ಟು ಚೆನ್ನವೆಂದೇ ಕಾಣುವುವು. ಈ ಕಾರಣದಿಂದ ಅವು ರಾಮಾಯಣಕ್ಕಿಂತ ಒಳ್ಳೆಯ ಕಾವ್ಯಗಳೆಂದು ಅಂಥವರು ಹೇಳುವ ಸಂಭವವಿದೆ. ಈ ದೃಷ್ಟಿಯಿಂದ ಉಳಿದೆಲ್ಲ ಕಾವ್ಯಕ್ಕಿಂತ ಮಿಲ್ಟನನ ಕಾವ್ಯ ಉತ್ತಮವೆಂದು ಕಾಣಬಹುದು. ಆದರೆ ಕಾವ್ಯದಲ್ಲಿ ಮಾತಿನ ಮಿತ, ರಚನೆಯ ಕೌಶಲ, ಮಾತ್ರ ಮುಖ್ಯವಲ್ಲ. ಕಥನಕೌಶಲ, ಪಾತ್ರಕಲ್ಪನ, ಪ್ರಕೃತಿವರ್ಣನ, ಜೀವನಶಿಲ್ಪ, ಇವೂ ಕಾವ್ಯದಲ್ಲಿ ಮುಖ್ಯ. ಇದರ ಜೊತೆಗೆ ರಚನೆಯೂ ಚೆನ್ನಾಗಿದ್ದರೆ ಸಂತೋಷ; ಆದರೆ ಆ ಮುಖ್ಯವಾದ ಭಾಗಗಳೆಲ್ಲ ಚೆನ್ನಾಗಿದ್ದು ರಚನೆಯಲ್ಲಿ ಕೌಶಲ ಸ್ವಲ್ಪ ಕಡಮೆಯಾಗಿದ್ದರೆ ಕಾವ್ಯ ತನ್ನ ಯೋಗ್ಯತೆಯನ್ನು ಕಳೆದುಕೊಳ್ಳುವುದಿಲ್ಲ. ಕಾವ್ಯದ ಮುಖ್ಯ ಗುಣಗಳು ರಾಮಾಯಣದಲ್ಲಿ ತುಂಬ ಕಾಣುತ್ತವೆಂದು ಯಾರಾದರೂ ಒಪ್ಪಿಕೊಳ್ಳುತ್ತಾರೆ. ಹೋಮರನ ಕಾಲದಲ್ಲಿ ಕೂಡ ಕವಿಯಾದವನಿಗೆ ಕಾವ್ಯದ ಅಚ್ಚುಕಟ್ಟಿನ ಕಡೆಗೆ ಹೆಚ್ಚು ದೃಷ್ಟಿ ಇರುತ್ತಿರಲಿಲ್ಲ. ಅತ್ತ ಹೋಮರನ ಸ್ಥಿತಿ ಇತ್ತ ವಾಲ್ಮೀಕಿಯದಾಗಿತ್ತು. ವಿಸ್ತಾರವಾಗಿ ಹೇಳುವುದೇ ಮಹಾಕಾವ್ಯದ ಪದ್ಧತಿ. ಪೂರ್ವದ ಮಹಾಕವಿ ತನ್ನ ಕೃತಿಯ ವಿಸ್ತಾರವನ್ನು ಮಿಲ್ಟನ್ ಅಥವಾ ವರ್ಜಿಲ್ ಕವಿಯ ರೀತಿಯಲ್ಲಿ ಅಳೆಯುತ್ತಿರಲಿಲ್ಲ. ಇವರು ಕಾವ್ಯವನ್ನು ಬರೆದರು, ಓದಿದರು. ಹೋಮರನೂ ವಾಲ್ಮೀಕಿಯೂ ರಚಿಸಿದರು, ಹಾಡಿದರು. ಜನರು ಸಮಾಧಾನವಾಗಿ ಕೇಳಿದರೆ ಈ ಕವಿಗಳು ಹಾಡುವುದಕ್ಕೆ ಹಿಂಜರಿಯಬೇಕಾಗಿರಲಿಲ್ಲ. ಬರೆಯುವ ಕವಿಗೆ ಓಲೆ ಅಥವಾ ಕಾಗದ ಬರಹ ಎಷ್ಟಾಯಿತೆಂದು ತಿಳಿಸುತ್ತದೆ. ಹಾಡುವ ಕವಿಗೆ ಜನರ ಉತ್ಸಾಹದಿಂದ ಅಥವಾ ಬೇಸರದಿಂದ ಹಾಳತ ತಿಳಿಯಬೇಕು. ಈಗಲೂ ನಮ್ಮ ದೇಶದ ಜನರಿಗೆ ಕಥೆಯನ್ನು ಕೇಳುವುದರಲ್ಲಿ ಬೇಸರವಿಲ್ಲ; ವಾಲ್ಮೀಕಿಯ ದಿವಸದಲ್ಲೂ ಇರಲಿಲ್ಲವೆಂದು ಕಾಣುತ್ತದೆ. ಇದರಿಂದ ಕವಿ ಬೇಸರಪಡದೆ ಕೃತಿಯನ್ನು ಬೆಳೆಸಿದನು. ಈಗಿನ ಪಾಶ್ಚಾತ್ಯರಿಗೆ ಅತಿವರ್ಣನೆ ಬೇಸರವಾಗಿ ಕಾಣುವಂತೆ ಆಮೇಲೆ ನಮ್ಮ ಜನಕ್ಕೂ

ಕಂಡಿತು. ಏನು ನಿನ್ನ ರಾಮಾಯಣ ಎಷ್ಟು ಹೊತ್ತಿಗೂ ಮುಗಿಯಲಿಲ್ಲ ಎಂಬ ಸಾಮಾನ್ಯವಾದ ಮಾತಿನಲ್ಲಿ ವಾಲ್ಮೀಕಿಯ ಕಾವ್ಯ ಬಹಳ ಉದ್ದ ಎಂಬ ಜನದ ಅಭಿಪ್ರಾಯ ವ್ಯಕ್ತವಾಗುತ್ತದೆ. ಆದರೆ ಕಾವ್ಯದ ಸೊಗಸನ್ನು ತಿಳಿಯಬೇಕಾದರೆ ಅದನ್ನು ಪಾರಾಯಣಕ್ರಮದಿಂದ ಅಥವಾ ಪುರಾಣಶ್ರವಣ ರೀತಿಯಿಂದ ದಿನಕ್ಕೆ ಇಷ್ಟು ಎಂಬಂತೆ ಸ್ವಲ್ಪ ಸ್ವಲ್ಪವಾಗಿ ನೋಡಬೇಕು. ಹೀಗೆ ನೋಡುವವರಿಗೆ ಈ ಕಾವ್ಯ ಪ್ರಪಂಚದ ಯಾವ ಕಾವ್ಯಕ್ಕೂ ಯೋಗ್ಯತೆಯಲ್ಲಿ ಕಡಮೆಯೆಂದು ಕಾಣುವುದಿಲ್ಲ. ಜೀವನದ ಚಿತ್ರಗಳಲ್ಲಿ ಇದರ ಜೊತೆಗೆ ನಿಲ್ಲಬಹುದಾದದು ಹೋಮರನ ಕಾವ್ಯ ಮಾತ್ರ; ವರ್ಜಿಲನ ಕಾವ್ಯ ಸಮೀಪದಲ್ಲಿ ನಿಲ್ಲಬಹುದು ಎಂದು ತೋರುತ್ತದೆ. ವರ್ಣನೆಗಳಲ್ಲಿ ರಾಮಾಯಣಕ್ಕೆ ಜೊತೆಯುಂಟೆ ಎಂದೇ ಕಾಣುತ್ತದೆ. ನಮ್ಮ ಜನದ ಬಾಳುವೆಯನ್ನು ನೋಡಿ ಮರುಕಗೊಂಡಿರುವ ಮನಸ್ಸಿಗೆ ಇದರ ಜೀವನ ಚಿತ್ರಗಳು ಇನ್ನು ಯಾವ ಕಾವ್ಯದ ಜೀವನ ಚಿತ್ರಗಳಿಗಿಂತಲೂ ಹತ್ತಿರವಾಗಿ ಕಾಣುವುದರಿಂದ ಇತರ ಕವಿಗಳ ಜೀವನ ಚಿತ್ರಗಳಿಗಿಂತ ಹೆಚ್ಚು ರಸವತ್ತಾದುವೆಂದು ತೋರುತ್ತದೆ. ಉಳಿದ ದೇಶಗಳಿಗೆ ಬೇರೆಯ ಕಾವ್ಯಗಳು ರಾಮಾಯಣಕ್ಕಿಂತ ಚೆನ್ನೆಂದು ಕಾಣಬಹುದು; ಭಾರತೀಯರಿಗೆ ರಾಮಾಯಣ ಅವೆಲ್ಲಕ್ಕಿಂತ ಚೆನ್ನವೆಂದು ಕಾಣಬೇಕು. ಕಾವ್ಯ ತಮ್ಮ ಸೀಮೆಯದು ಎಂಬ ಕಾರಣದಿಂದ ಅದು ಚೆನ್ನಾಗಿದೆಯೆಂದು ಭಾರತೀಯರು ಹೇಳುವರು ಎಂದು ಅಲ್ಲ; ನಮ್ಮ ದೇಶದ ಕಾವ್ಯವಾದದರಿಂದ ಅದು ನಮ್ಮ ಮನಸ್ಸಿಗೆ ಹಿಡಿಯುತ್ತದೆ, ನಾವು ಅದಕ್ಕೆ ಒಲಿಯುತ್ತೇವೆ. ಮುಖ್ಯವಾಗಿ ಮಹಾಕವಿಗಳನ್ನು ಹೋಲಿಸುವ ವೇಳೆ ನಾವು ಜರ್ಮನ್ ಕವಿ ಗಯಟೆಯ ಒಂದು ಮಾತನ್ನು ಜ್ಞಾಪಕದಲ್ಲಿಟ್ಟುಕೊಳ್ಳುವುದು ಒಳ್ಳೆಯದು. ದೊಡ್ಡವರೆನ್ನುವ ಇಬ್ಬರನ್ನು ಕಂಡಾಗ ಇವರಿಬ್ಬರಲ್ಲಿ ಯಾರು ದೊಡ್ಡವರು ಎಂಬ ಚರ್ಚೆಯನ್ನು ಎತ್ತುವುದಕ್ಕೆ ಪ್ರತಿಯಾಗಿ ನಮಗೆ ದೊಡ್ಡವರಿಬ್ಬರು ದೊರೆತರಲ್ಲಾ ಎಂದು ಸಂತೋಷಪಡಬೇಕೆಂದು ಗಯಟೆ ಹೇಳಿದಾನೆ. ಹೋಮರನೂ ವಾಲ್ಮೀಕಿಯೂ ಒಂದು ಕಡೆ ಸೇರಿದರೆ, ನಾನು ದೊಡ್ಡವನೋ ನೀನು ದೊಡ್ಡವನೋ ಎಂದು ವಾದಮಾಡುವುದಿಲ್ಲ; ಮನಸ್ಸಿನಲ್ಲಿ ಅಂಥ

ಯೋಚನೆ ಬಂದರೂ ಅಡಗಿಸಿಕೊಂಡು ಒಬ್ಬರಿಗೆ ಒಬ್ಬರು ಹೆಚ್ಚಿನ ಮರ್ಯಾದೆಯನ್ನು ತೋರಿಸಲು ಪ್ರಯತ್ನಿಸುವರು. ಅವರಿಬ್ಬರನ್ನೂ ದೊಡ್ಡವರೆನ್ನುವ ನಾವು ಅವರನ್ನು ಪಂದ್ಯಕ್ಕೆ ಬಿಡಬಾರದು. ಹೋಮರನು ಪ್ರಪಂಚದ ಗೌರವಕ್ಕೆ ಅರ್ಹನಾದವನು. ವಾಲ್ಮೀಕಿಯೂ ಹೀಗೆಯೇ ಹಿರಿಯನು. ಇಷ್ಟನ್ನು ತಿಳಿದು ಈ ವಿಚಾರವನ್ನು ಬೆಳಸದೆ ಇರುವುದು ವಿಮರ್ಶೆಯಲ್ಲಿ ವಿವೇಕ.

ಇದೇ ವಿಚಾರ ಸರಣಿಯಲ್ಲಿ ಬರುವ ಒಂದು ಪ್ರಶ್ನೆ ಭರತವರ್ಷದ ಕವಿ ಪಾಶ್ಚಾತ್ಯ ಕಾವ್ಯವನ್ನು ನೋಡಿ ರಾಮಾಯಣದ ಕಾವ್ಯವನ್ನು ಬರೆದನೆ ಎನ್ನುವುದು. ಅಲೆಕ್ಸಾಂಡರನ ಕಾಲದಲ್ಲಿ ಗ್ರೀಸ್ ದೇಶಕ್ಕೂ ಇಲ್ಲಿಗೂ ಬಳಕೆ ಆರಂಭವಾಗಿ ಅದರ ಫಲವಾಗಿ ಇಲಿಯಡ್ ಕಾವ್ಯ ನಮ್ಮ ಜನಕ್ಕೆ ತಿಳಿದು ಇಲ್ಲಿ ರಾಮಾಯಣ ಹುಟ್ಟಿತೆಂದು ಕೆಲವರ ಅಭಿಪ್ರಾಯ. ಇನ್ನು ಕೆಲವರು ಪಾಶ್ಚಾತ್ಯರೇ ಈ ಅಭಿಪ್ರಾಯ ಸರಿಯಲ್ಲವೆಂದು ಹೇಳುತ್ತಾರೆ. ಒಂದು ಕವಿತೆಯನ್ನು ನೋಡಿ ಬರೆದ ಇನ್ನೊಂದು ಕವಿತೆಯ ದಾರಿ ರಾಮಾಯಣದ ದಾರಿಯಿಂದ ಬೇರೆಯದು. ವರ್ಜಿಲ್ ಕವಿಯಲ್ಲಿ, ಮಿಲ್ಟನ್ ಕವಿಯಲ್ಲಿ ಹೋಮರ್ ಕವಿಯ ಛಾಯೆ ಕಾಣುತ್ತದೆ. ರಾಮಾಯಣದಲ್ಲಿ ಈ ಛಾಯೆ ಯಾರಿಗೆ ಕಾಣುವುದೋ ಹೇಳಲಾಗುವುದಿಲ್ಲ. ಹೆಂಗಸನ್ನು ಕದ್ದುಕೊಂಡು ಹೋದನೆಂಬ ಮಾತು ಕಾವ್ಯದ ವಿಷಯವಾದದರಿಂದಲಾಗಲಿ ರಾಮನ ಜನ್ಮನಕ್ಷತ್ರದ ಕುಂಡಲಿಯನ್ನು ವಿವರಿಸುವುದರಿಂದಲಾಗಲಿ ರಾಮಾಯಣದ ಕವಿ ಹೋಮರನ ಕಾವ್ಯದ ವಿಷಯವನ್ನು ತಿಳಿದಿದ್ದನೆಂದೋ, ಗ್ರೀಕರ ಮೂಲಕ ಭರತವರ್ಷಕ್ಕೆ ಬಂದ ಸಂಸ್ಕೃತಿಯ ಪ್ರಭಾವದಿಂದ ಬೆಳೆದನೆಂದೋ ಹೇಳುವುದು ಅತಂತ್ರ ವಿಮರ್ಶೆ. ಅಡಿಯಗಲದ ನೆಲದಲ್ಲಿ ಅರಮನೆಯನ್ನು ಕಟ್ಟುವ ಇಂಥ ಯತ್ನ ಗ್ರೀಕರು ಬಹು ಹಿರಿಯರು ಭಾರತೀಯರು ಸಾಮಾನ್ಯರು ಎಂಬ ಮನೋಧರ್ಮದಿಂದ ಉಂಟಾಗುತ್ತದೆ. ಗ್ರೀಕರು ಸಂಸ್ಕೃತರಾದ ಜನ. ಈಗ ಪ್ರಪಂಚದಲ್ಲಿ ಪುಣ್ಯವಂತರಾಗಿ ಬಾಳುತ್ತಿರುವ ಪಾಶ್ಚಾತ್ಯರು ತಮ್ಮ ಸಂಸ್ಕೃತಿಯಲ್ಲೆಲ್ಲ ಗ್ರೀಸ್ ದೇಶದ ಸಂಸ್ಕೃತಿಯನ್ನು ಉಪಜೀವಿಸುತ್ತಿದಾರೆ. ಅವರಿಗೆ ಗ್ರೀಕರ

ಸಂಸ್ಕೃತಿ ಹಿರಿಯದೆಂದು ಕಾಣುವುದು ಸಹಜ. ಭರತವರ್ಷ ಈಗ ದಾರಿದ್ರ್ಯ ದಲ್ಲಿ ಸಿಕ್ಕಿ ದುರ್ದೆಸೆಯಿಂದ ಮಲಿನವಾಗಿದೆ. ಇದರ ಸಂಸ್ಕೃತಿ ಹಿಂದೆ ಹಿರಿಯದಾಗಿತ್ತೆಂದು ರಾಮಾಯಣದಂಥ ಕಾವ್ಯದಿಂದ ಕಾಣುತ್ತದೆ. ಆದರೆ ಆ ಸಂಸ್ಕೃತಿಯನ್ನು ಹೊತ್ತ ಐಶ್ವರ್ಯ ಈಗ ಕಾಣುವುದಿಲ್ಲ. ಅದರ ಇತಿಹಾಸವೂ ಅಳಿಸಿಹೋಗಿದೆ. ಗಾಂಧಾರಿ ಆನೆಯ ಪೂಜೆ ಮಾಡಬಹುದಲ್ಲ, ಕುಂತಿಗೆ ಇದು ಸಾಧ್ಯವೆ, ಎಂದು ಪಾಂಡವರ ವನವಾಸ ಕಾಲದಲ್ಲಿ ದುರ್ಯೋಧನನು ಕೇಳಬಹುದಾಗಿದ್ದಂತೆ, ತಮ್ಮ ಉಚ್ಛ್ರಾಯ ಸ್ಥಿತಿಯಿಂದ ಮೋಹಗೊಂಡು ಭರತವರ್ಷದ ಚರಿತ್ರೆ ಏನಿರಬಹುದೆಂದು ಯೋಚಿಸದೆ ಪಾಶ್ಚಾತ್ಯರು ಕೆಲವರು ಹೀಗೆ ಹೇಳುವುದು ಸಹಜವಾಗಿದೆ. ಇತಿಹಾಸದಲ್ಲಿ ಬಹು ರಾಷ್ಟ್ರಗಳು ಮೇಲ್ಮೆಯನ್ನು ಕಂಡು ಬಡತನಕ್ಕೆ ಬಂದದು ಕಾಣುತ್ತದೆ. ಭರತವರ್ಷ ಉನ್ನತವಾದ ಸಂಸ್ಕೃತಿಯನ್ನು ಕಂಡಕಾಲದಲ್ಲಿ ಬಹುಮುಖವಾದ ಐಶ್ವರ್ಯವನ್ನೂ ಪಡೆದಿತ್ತೆಂದು ಹೇಳು ವುದಕ್ಕೆ ತಕ್ಕ ಆಧಾರಗಳಿವೆ. ಅವುಗಳನ್ನೂ ಪಾಶ್ಚಾತ್ಯ ವಿಮರ್ಶಕರೇ ಇತರರು ಕಂಡು ಹೇಳಿರುವರು. ಹೋಮರನಿಂದ ವಾಲ್ಮೀಕಿ ಕಥೆಯನ್ನು ತೆಗೆದುಕೊಂಡಿರಬೇಕೆಂದು ಇಷ್ಟು ಅಲ್ಪಪ್ರಮಾಣದ ಮೇಲೆ ನಿರ್ಧರಿಸುವ ಮೊದಲು ಹೀಗಲ್ಲದೆ ಭರತವರ್ಷದಲ್ಲಿ ಕಥೆ ಬರುವುದಕ್ಕೆ ದಾರಿಯಿರಲಿಲ್ಲ ವೆಂದು ಹೇಳಬೇಕು. ಹೀಗೆ ಹೇಳುವುದು ಸರಿಯಾಗಲಾರದು. ಪೂರ್ವ ದಲ್ಲಿ ಎಲ್ಲ ಜನಾಂಗಗಳೂ ಕಥೆಗಳನ್ನು ಮಾಡಿಕೊಂಡವು. ಅನೇಕ ಜನಾಂಗಗಳಲ್ಲಿ ಆಸ್ಥಾನದ ಕವಿ ತನ್ನ ರಾಜನ ಚರಿತ್ರೆಯನ್ನು ಕಾವ್ಯವಾಗಿ ರಚಿಸಿ ಅರಸನ ಮುಂದೆ ಹಾಡುತ್ತಿದ್ದನು. ಬಿರುದು, ಹೊಗಳಿಕೆ, ಒಂದು ದೇಶದ ಪದ್ಧತಿಯಲ್ಲ; ಒಂದು ರಾಜ್ಯದ ಆತ್ಮಗೌರವದ ಫಲವಲ್ಲ. ಹೀಗಿರುವಲ್ಲಿ ಹತ್ತು ಜನ ಹತ್ತು ಅರಸರ ವಿಷಯ ಕೃತಿಯನ್ನು ರಚಿಸುವ ವೇಳೆ ಒಬ್ಬ ಅರಸನು ನಿಜವಾಗಿಯೂ ಯೋಗ್ಯನಾಗಿದ್ದು ಅವನನ್ನು ಹೊಗಳಿದ ಕವಿ ನಿಜವಾಗಿಯೂ ಶಕ್ತನಾಗಿದ್ದರೆ ಒಂದು ಒಳ್ಳೆಯ ಕಾವ್ಯ ಆಗಬಹುದಲ್ಲ. ಇದು ಒಂದು ಸಲ ಗ್ರೀಸಿನಲ್ಲಿ ಆದರೆ ಒಂದು ಸಲ ಭರತವರ್ಷದಲ್ಲಿ ಆಗಬಹುದು. ವಾಲ್ಮೀಕಿ ಕಾವ್ಯವನ್ನು ರಚಿಸಿದ ಕಾಲಕ್ಕೆ ರಾಷ್ಟ್ರದ ಕವಿ ರಾಜನ ವಿಷಯ ಕೃತಿಯನ್ನು ಬರೆದು ಅವನ ಮುಂದೆ

ಹಾಡುವುದು ಒಂದು ವಾಡಿಕೆಯಾಗಿದ್ದಿತು ಎಂದು ಕಾಣುತ್ತದೆ. ರಾಮಾಯಣವು ಈ ರೀತಿ ಆರಂಭವಾದ ಕೃತಿ. ಇಲ್ಲಿಯ ಮಾತು ಬೇರೆ, ಕಥೆಯ ವಿವರ ಬೇರೆ, ರೀತಿ ಬೇರೆ, ಜೀವನವನ್ನು ಕುರಿತ ಭಾವನೆ ಬೇರೆ. ಇಲ್ಲಿಯ ನೀತಿ ಅಲ್ಲಿಯ ನೀತಿಯಲ್ಲ; ಇಲ್ಲಿಯ ದೈವ ಅಲ್ಲಿಯ ದೈವವಲ್ಲ. ರಾಮಾಯಣದ ಕವಿ ಯಾವುದರಿಂದ ಹಿರಿಯನೋ ಅದರಲ್ಲಿ ಸ್ವಾವಲಂಬಿಯಾಗಿದ್ದಾನೆ; ಇತರರಿಗೆ ಅವಲಂಬವಾಗುವಂತೆ ಇದಾನೆ. ಒಬ್ಬರಿಂದ ಕಲಿಯಲು ಇಂಥ ಉನ್ನತ ಜೀವ ಹಿಂದೆಗೆಯುತ್ತಿರಲಿಲ್ಲ; ಆದರೆ ಇವನ್ನ ಇತರರಿಂದ ಕಲಿಯಬೇಕಾದ ಪ್ರಮೇಯವಿರಲಿಲ್ಲ.

## ೧೪
## ಆದಿಕವಿಯ ಶ್ರೀಮುಖ
### ವಾಲ್ಮೀಕಿ ಗುರು

ಇಷ್ಟೇ ಅಲ್ಲ. ವಾಲ್ಮೀಕಿ ಇತರರಿಗೆ ವಿಷಯಗಳನ್ನು ಕಲಿಸುತ್ತಾನೆ. ಹುಟ್ಟನಿಂದ ಗುರು. ವಿಶಾಲವಾದ ಪ್ರಪಂಚವನ್ನು ವಿಸ್ತಾರವಾದ ಜೀವನವನ್ನು ಸೂಕ್ಷ್ಮವಾದ ದೃಷ್ಟಿಯಿಂದ ನೋಡಿ ಅವನು ಮುಖ್ಯ ತತ್ತ್ವಗಳನ್ನು ಮನಗಂಡನು. ತತ್ತ್ವಗಳನ್ನು ಕಂಡವನಾದರೂ ಅವನು ತತ್ತ್ವಗಳನ್ನು ಹೇಳುವೆನೆಂಬ ಮನುಷ್ಯನಲ್ಲ. ಪ್ರತ್ಯಕ್ಷವಾದ ಉಪದೇಶವೆನ್ನುವುದು ಇವನ ಸ್ವಭಾವಕ್ಕೆ ಬಂದದಲ್ಲ. ವಾಲ್ಮೀಕಿಗೆ ನಾನು ಎನ್ನುವುದು ಬಹಳವಿರಲಿಲ್ಲವೆಂದು ಕಾಣುತ್ತದೆ. ಇಕ್ಷ್ವಾಕುಗಳ ಕಥೆಯನ್ನು ಹೇಳುತ್ತೇನೆ ಎಂಬ ಆರಂಭದ ಮಾತಿನಲ್ಲಿ ಒಂದು ಸಲ ಅವನ ನಾನು ಮರೆಯಿಂದ ಕಾಣುತ್ತದೆ; ಆಮೇಲೆ ಅದು ಎಲ್ಲಿಯೂ ಬರುವುದಿಲ್ಲ. ಇಂಥ ಸ್ವಭಾವ ಜೀವನದಲ್ಲಿ ತತ್ತ್ವಗಳನ್ನು ಕಂಡರೂ ಅವನ್ನು ಉಪದೇಶಿಸುವೆನೆಂದು ಹೊರಡುವುದು ಸಾಧ್ಯವಲ್ಲ. ಅಲ್ಲದೆ ಬಾಳನ್ನು ಇವನಂತೆ ಸಮಗ್ರವಾಗಿ ನೋಡುವವನಿಗೆ ಜೀವನ ಬರಿಯ ತತ್ತ್ವಗಳ ಕಂತೆಯೆನಿಸುವುದಿಲ್ಲ; ತತ್ತ್ವಗಳನ್ನು ಹೇಳಿದರೆ ಜೀವನವನ್ನು ಹೇಳಿದಂತಾಗುವುದಿಲ್ಲ. ಉಕ್ತಿಯ ಪ್ರವೃತ್ತಿಯಿರುವುದೇ ಒಂದಾದರೆ ಇಂಥವನು ಜೀವನವನ್ನು ವರ್ಣಿಸಬಹುದು. ವರ್ಣನೆಯ ಮಧ್ಯೆ ಬಾಳಲ್ಲಿ ಕಂಡ ತತ್ತ್ವಗಳನು

ಸುಳಿಸಬಹುದು. ವಾಲ್ಮೀಕಿಗೆ ತಾನು ಕಂಡ ಜೀವನವನ್ನು ವರ್ಣಿಸುವುದು ಅವಶ್ಯಕವೆಂದು ತೋರಿತು; ಆ ಪ್ರವೃತ್ತಿಗೆ ಎಡೆಗೊಟ್ಟು ಅವನು ರಾಮಾಯಣ ಕಾವ್ಯವನ್ನು ರಚಿಸಿದನು; ಅವನು ಕಂಡ ತತ್ತ್ವ ಕಾವ್ಯ ದಲ್ಲಿ ಉಸಿರಾಗಿ ಬೆಳೆಯಿತು. ಕಥೆಯನ್ನು ಓದಿ ಸಂತೋಷಪಡುವವರು ತಾವೇ ಅರಿಯದೆ ಆ ತತ್ತ್ವವನ್ನು ಒಪ್ಪಿಕೊಳ್ಳುತ್ತಾರೆ; ಅದಕ್ಕೆ ತಮ್ಮ ಹೃದಯದಲ್ಲಿ ಪೀಠವನ್ನು ಮಾಡುತ್ತಾರೆ. ಕಥೆಗೆ ಒಲಿದ ಮನಸ್ಸು ಹೀಗೆ ಗ್ರಹಿಸುವ ತತ್ತ್ವ ಅವರನ್ನು ಒಂದಲ್ಲದಿದ್ದರೆ ಇನ್ನೊಂದು ಸಮಯದಲ್ಲಿ ತಪ್ಪಿಗೆ ಹೋಗದಂತೆ ತಡೆಯುತ್ತದೆ; ಒಳ್ಳೆಯದಕ್ಕೆ ನಡೆಸಿ ರಕ್ಷಿಸುತ್ತದೆ. ತನ್ನ ಕಾವ್ಯದಿಂದ ಹೀಗಾಗಬೇಕೆಂದು ಕವಿ ಉದ್ದೇಶಿಸಿದನೆಂದು ಹೇಳ ಬಹುದು. ಲೋಕವೆಲ್ಲ ತನ್ನ ಕಾವ್ಯವನ್ನು ನೋಡಿ ಬದುಕಬೇಕೆಂದೇ ಅವನು ಆಶಿಸಿರಬೇಕು. ಯಾವ ಕವಿಗೆ ತನ್ನ ಕಾವ್ಯದ ವಿಷಯದಲ್ಲಿ ಈ ಆಸೆಯಿಲ್ಲ? ರಾಮಾಯಣ ಇದುವರೆಗೆ ಬಹು ವಿಸ್ತಾರವಾದ ಭೂಭಾಗ ದಲ್ಲಿ ಬಹು ಕಾಲದ ಜನದ ಜೀವನವನ್ನು ತಿದ್ದಿ ಸಾರ್ಥಕವಾಯಿತು. ಆದರೂ ಅದರ ಕೆಲಸ ಇನ್ನೂ ಬಹಳವಿದೆ; ಅದರ ಮಾತು ಇನ್ನೂ ಪ್ರಪಂಚಕ್ಕೆ ಬೇಕಾಗಿದೆ. ಹೀಗೆ ಪ್ರಪಂಚಕ್ಕೇ ಬೇಕಾಗಿರುವ ಇದರ ಸಾರ ಯಾವುದೆಂದು ನಾವು ತಿಳಿಯಬೇಕು.

### ಮೊದಲ ನಿರೂಪ

ಮನುಷ್ಯನು ಎರಡು ತೊಡಕಿನಿಂದ ದುಃಖಿಯಾಗುತ್ತಾನೆ. ಇವು ಗಳಲ್ಲಿ ಮೊದಲನೆಯದು ಆಸ್ತಿಯ ಆಸೆ. ಮಗನಿಗೆ ಆಸ್ತಿ ಬರಬೇಕೆಂದೂ ತಾನು ಕೌಸಲ್ಯೆಗೆ ಅಧೀನಳಾಗಬಾರದೆಂದೂ ಒಳ್ಳೆಯವಳಾಗಿದ್ದ ಕೈಕಯಿ ಕೆಟ್ಟವಳಾದಳು. ತಾನು ಆಳಬೇಕಾದ ರಾಷ್ಟ್ರವನ್ನು ಇವನು ತೆಗೆದು ಕೊಂಡನೇ ಎಂದು ವಾಲಿ ತಮ್ಮನಮೇಲೆ ಆಕ್ರೋಶವನ್ನು ತೋರಿದನು. ಇವರಿಗೆ ಕೆಟ್ಟದಾಯಿತು; ಇವರು ಕಷ್ಟಪಟ್ಟರು. ಜೊತೆಗೆ ಎಷ್ಟೋ ಜನಕ್ಕೆ ಕಷ್ಟ. ಆಸ್ತಿ ತನಗೆ ಬರಬೇಕಾಗಿದ್ದರೂ ರಾಮನು ಸಮ್ಮತವಾಗಿ ಅದನ್ನು ಬಿಟ್ಟು ಕಾಡಿಗೆ ಹೋದನು; ರಾಜ್ಯ ಅಯಾಚಿತವಾಗಿ ಕೈಗೆ ಬಂದರೂ ಭರತನು ಅದನ್ನು ಅನುಭವಿಸಲು ಇಷ್ಟಪಡಲಿಲ್ಲ. ರಾಜ್ಯ ನಿನ್ನದು ತೆಗೆದುಕೊ ಎಂದು ಈ ತಮ್ಮನು ಅಣ್ಣನನ್ನು ಬೇಡಿದನು.

"ರಾಜ್ಯ ನಿನ್ನದಾಗಿರಬೇಕೆಂದು ಒಪ್ಪಿಗೆ ಆಗಿ ಮುಗಿಯಿತು, ಅದನ್ನು ಕೆಡಿಸೋಣಬೇಡ" ಎಂದು ಆ ಅಣ್ಣನು ಹಠಮಾಡಿದನು. ನನಗಿರಲಿ ತನಗಿರಲಿ ಎಂದಲ್ಲಿ ಜಗಳವಾಯಿತು. ನೀನು ತೆಗೆದುಕೊ ನೀನು ತೆಗೆದುಕೊ ಎಂಬಲ್ಲಿ ಪ್ರೇಮ ಬೆಳೆಯಿತು. ತನ್ನ ಅಪೇಕ್ಷೆ ಒಂದು ಜ್ವರದಂತೆ ಬಂದಿತೆಂದು ಕೈಕಯಿಗೆ ಆಮೇಲೆ ತಿಳಿದಿರಬೇಕು. ಬಹು ದಿನ ಹಸಿದು ಒಂದು ಹೊತ್ತಿನ ಊಟಕ್ಕೆ ಕುಳಿತಾಗ ಯಾರೋ ಬಂದು ಅನ್ನವನ್ನು ಬೇಡಿದರೆ ವಿಶ್ವಾಮಿತ್ರನು ಅದನ್ನು ಅವನಿಗೆ ಕೊಟ್ಟನು, ಆಮೇಲೆ ಅವನು ಬ್ರಹ್ಮರ್ಷಿಯಾದನು, ಎಂದು ಹೇಳಿರುವಲ್ಲಿಯೂ ವಾಲ್ಮೀಕಿಯ ಈ ಅರ್ಥವೇ ಕಾಣುತ್ತದೆ. ರಾಮನ ಬಾಣದಿಂದ ನೊಂದು ಜೀವವನ್ನು ಬಿಡುವ ಹೊತ್ತಿನಲ್ಲಿ ವಾಲಿಗೆ ತಮ್ಮನ ವಿಷಯದಲ್ಲಿ ಮತ್ತೆ ಪ್ರೇಮ ಹುಟ್ಟಿತು. ಒಡವೆಯ ಮೇಲಣ ಆಸೆ ಅಲ್ಪಜಿಹಾಸೆ. ಇದರಿಂದ ಸಂಸಾರದ ಸುಖ ಕೆಡುತ್ತದೆ; ಆತ್ಮದ ಶಾಂತಿಗೆ ಹಾನಿ ತಟ್ಟುತ್ತದೆ; ರಾಷ್ಟ್ರಗಳ ಜೀವನ ಕ್ಷೋಭೆಗೊಳ್ಳುತ್ತದೆ. ಇದನ್ನು ಜಯಿಸಿಕೊಂಡವನು ಲೋಕಪ್ರಿಯನಾಗುತ್ತಾನೆ, ಸಾರ್ವಭೌಮನಾಗುತ್ತಾನೆ, ಬ್ರಹ್ಮರ್ಷಿಯಾಗುತ್ತಾನೆ.

### ಎರಡನೆಯ ನಿರೂಪ

ಮನುಷ್ಯರನ್ನು ದುಃಖಕ್ಕೆ ದೂಡುವ ಎರಡನೆಯ ತೊಡಕು ಹೆಣ್ಣು ಅಥವಾ ಗಂಡಿನ ಆಸೆ. ಬಹು ಜನ ಹೆಂಡಿರನ್ನು ಕಟ್ಟಿಕೊಂಡು ದಶರಥನು ತನ್ನ ಜೀವನದ ನಾವೆಯನ್ನು ದುಃಖಸಾಗರದಲ್ಲಿ ತೇಲಬಿಟ್ಟನು. ಯಾವುದೋ ಸಾಧನೆಗೆ ಹೊರಟ ರಾಜರ್ಷಿ ಮೇನಕೆಯಲ್ಲಿ ತನ್ನ ಮನದಾಸೆಯನ್ನು ಕಂಡು ಸಾಧನೆಯ ದಾರಿಯನ್ನು ಬಿಟ್ಟು ವಿಷಯಪಂಕಕ್ಕೆ ಇಳಿದನೆಂಬಲ್ಲಿ ಇದೇ ತತ್ತ್ವ ಉದಾಹೃತವಾಗಿದೆ. ಭೋಗಲಾಲಸನಾದ ರಾವಣನು ಬಹು ಸ್ತ್ರೀಯರನ್ನು ಕಟ್ಟಿಕೊಂಡು ತೃಪ್ತನಾಗದೆ ಇನ್ನೊಬ್ಬಳು ಬೇಕು ಮತ್ತೊಬ್ಬಳು ಬೇಕು ಎನ್ನುತ್ತ ಹೆಣ್ಣೆಂದರೆ ಬಾಯಿಬಿಡುವ ಅವಸ್ಥೆಯಲ್ಲೇ ಇದ್ದನು. ದಶರಥನು ಚೆಲುವೆಯಾದ ಕೈಕಯಿಯನ್ನು ಮಡಲಲ್ಲಿ ಇಟ್ಟುಕೊಂಡ ಹಾವೆಂದು, ಮನೆಗೆ ತಂದುಕೊಂಡ ಬೆಂಕಿಯೆಂದು ಅಮಿತ್ರೆ, ಕುಲಘಾತಿನಿ, ಕುಲಪಾಂಸನೆ ಎಂದು ಶಪಿಸಿ ಚೀರುತ್ತ ಜೀವ

ವನ್ನು ಬಿಟ್ಟನು. ವಿಶ್ವಾಮಿತ್ರನು ಕೋಗಿಲೆಯ ಕೂಗಿನ ವಸಂತವನ ದಲ್ಲಿ ರಂಭೆಯನ್ನು ಕಂಡರೂ ವಿಮುಖನಾಗುವವರೆಗೆ ತನ್ನ ಸಾಧನೆಯಲ್ಲಿ ಮುಂಬರಿಯಲಿಲ್ಲ. ದೇವರಾಜನ ವಿಭವಕ್ಕೆ ಮರುಳಾಗಿ ಪತಿಯನ್ನು ವಂಚಿಸಿ, ಅದಕ್ಕೂ ಹೆಚ್ಚಾಗಿ ತನ್ನನ್ನೇ ವಂಚಿಸಿಕೊಂಡು, ಅಹಲ್ಯಾದೇವಿ ಸ್ವಲ್ಪವಾದ ಸುಖಕ್ಕಾಗಿ ಸಾವಿರ ವರ್ಷ ಪ್ರಾಯಶ್ಚಿತ್ತ ಮಾಡಿದಳು. ತಪ್ಪಾಯಿತೇ ಎಂಬ ವ್ಯಥೆ ಹೋಗುವುದು ಬಹು ಕಾಲದಮೇಲೆ; ಆ ತಪ್ಪಿನಿಂದ ಬರುವ ಸುಖ ಸ್ವಲ್ಪ ಹೊತ್ತಿನದು. ಈ ಕಥೆಗಳು ರಾಮಾಯಣ ದಲ್ಲಿ ಪ್ರಕ್ಷಿಪ್ತವಾದರೂ ವಾಲ್ಮೀಕಿಯ ಉದ್ದೇಶವನ್ನೇ ಸಾರುತ್ತವೆ. ಒಬ್ಬ ಹೆಂಡತಿಗೆ ತನ್ನ ಮನಸ್ಸನ್ನು ತೆತ್ತ ರಾಮಚಂದ್ರನು ಇತರರು ನೂರು ಹೆಂಡಿರಿಂದ ಪಡೆಯಲಾರದ ತೃಪ್ತಿಯನ್ನು ಒಬ್ಬ ಹೆಣ್ಣಿನಿಂದ ಪಡೆದು ಸುಖಿಸಿದನು. ಅವಳಿದ್ದಾಗ ಅವನಿಗೆ ಇನ್ನೊಂದು ಹೆಣ್ಣು ಬೇಕಾಗಲಿಲ್ಲ; ಅವಳಿಲ್ಲದಾಗ ಅವಳ ನೆನವು ಅವನಿಗೆ ಸಾಕಾಯಿತು. ಮನಸ್ಸು ಚಲಿಸದೆ ನಿಲ್ಲಬೇಕು; ನಿಲ್ಲುವುದಕ್ಕೆ ಆಸೆ ಹಿಡಿತದಲ್ಲಿರಬೇಕು; ಹೀಗಲ್ಲದೆ ಮನುಷ್ಯನಿಗೆ ಶಾಂತಿ ದೊರೆಯುವುದಿಲ್ಲ. "ಇಂದ್ರಿಯೈಃ ಅಜಿತೈಃ ರಾಮ ನಲೇಭೇ ಶಾಂತಿಮಾತ್ಮನಾಂ." ಹೀಗೆ ಆಸೆಯನ್ನು ತಡೆದುಕೊಳ್ಳದ ಕಾರಣ ರಾವಣನು ತಾನೂ ಹಾಳಾದನು, ತನ್ನ ಕುಲವನ್ನೂ ನಾಶ ಮಾಡಿದನು.

### ಮಾನವನ ಸ್ವಭಾವ ಹಸನಾಗಬೇಕು

ಈ ತೊಡಕುಗಳು ಮನುಷ್ಯನ ಸ್ವಭಾವಕ್ಕೆ ಅಂಟಿದುವು. ಎಂದೂ ಇವೇ ಲೋಕದ ದುಃಖಕ್ಕೆ ಕಾರಣ: ವ್ಯಕ್ತಿಗಳ ದುಃಖಕ್ಕೆ, ಸಂಘಗಳ ದುಃಖಕ್ಕೆ, ರಾಷ್ಟ್ರಗಳ ದುಃಖಕ್ಕೆ. ವಾಲ್ಮೀಕಿಯ ಕಾಲದಲ್ಲಿ ಇವು ಪ್ರಪಂಚವನ್ನು ಕ್ಷೋಭೆಗೊಳಿಸಿದ್ದನ್ನು ಅವನು ನೋಡಿದನು; ಮುಂದೆ ಇವು ಹೀಗೆಯೇ ಮಾಡುವುವೆಂದು ಅವನಿಗೆ ತೋರಿತು. ಇವುಗಳ ಕೈಗೆ ಸಿಲುಕಬೇಡಿ ಎಂದು ಬರುವ ಕಾಲಗಳಿಗೆ ಅವನು ಕೂಗಿ ಹೇಳಿದನು. ಈ ಬುದ್ಧಿವಾದ ಹೊಸದೇನೂ ಅಲ್ಲವೆಂದು ನಮಗೆ ತೋರುವುದು. ಆದರೆ ಇದನ್ನು ಜನರ ಕಿವಿಗೆ ಮನಸ್ಸಿಗೆ ಹಳೆಯದೆಂದು ತೋರುವಂತೆ ಮಾಡಿದವರಲ್ಲಿ ವಾಲ್ಮೀಕಿ ಮೊದಲಿಗರಲ್ಲಿ ಮುಖ್ಯರಲ್ಲಿ ಸೇರಿದ್ದಾನೆ. ಈಗ ಪ್ರಪಂಚದಲ್ಲಿ

ಎಲ್ಲ ಕಡೆಯೂ ಕಾಣುವ ಜೀವನಸಮಸ್ಯೆಗೆಲ್ಲ ವಾಲ್ಮೀಕಿಯ ಈ ಎರಡು ತತ್ತ್ವದಲ್ಲಿ ಸಮಾಧಾನವಿದೆ. ಜಾತಿ ಜಾತಿಯ ಕಲಹ, ಮತ ಮತಗಳ ಕಲಹ, ರಾಷ್ಟ್ರರಾಷ್ಟ್ರಗಳ ಕಲಹ, ಇವೆಲ್ಲ ಸ್ವಲ್ಪ ಅನ್ನಕ್ಕಾಗಿ, ಸ್ವಲ್ಪ ಅಧಿಕಾರಕ್ಕಾಗಿ, ಒಂದು ದೇಶಕ್ಕಾಗಿ. ಮಹಾಭಾರತದ ಯುದ್ಧ ವಾದುದು ಈ ಕಾರಣದಿಂದ. ಈಗ ಇಪ್ಪತ್ತು ವರ್ಷದ ಹಿಂದೆ ಯೂರೋಪಿನ ಘೋರಸಂಗ್ರಾಮ ನಡೆದುದು ಇಂಥ ಕಾರಣದಿಂದ. ಈಗ ಜಪಾನ್ ದೇಶ ಚೈನಾ ದೇಶವನ್ನು, ಮುಸಲೀನಿ ಅಬಿಸೀನಿಯ ವನ್ನು, ಹಿಟ್ಲರ್ ಫ್ರಾನ್ಸನ್ನು ಬೆದರಿಸುತ್ತಿರುವುದು ಈ ಆಸೆಯ ಕಾರಣದಿಂದ. ವಿಕ್ಟರ್ ಹ್ಯೂಗೋ ಎಂಬ ಫ್ರೆಂಚ್ ಕತೆಗಾರನು ಒಬ್ಬ ಪಾದ್ರಿ ಕಳ್ಳನೊಬ್ಬನನ್ನು ಸೋದರನಂತೆ ಕಂಡು ಅವನು ತನ್ನ ಮನೆ ಯಿಂದ ಬೆಳ್ಳಿಯ ದೀಪಸ್ತಂಭವೆರಡನ್ನು ಕದಿಯಲು ಅವು ನಿನ್ನವು ತೆಗೆದು ಕೊಂಡು ಹೋಗು ಎಂದು ಹೇಳಿ ಅವನ ಮನಸ್ಸಿನ ಸ್ಥಿತಿಯನ್ನೇ ತಿದ್ದಿದ ನೆಂದು ಕಥೆ ಬರೆದಿದಾನೆ. ರಾಜ್ಯ ಬೇಡವೆನ್ನುವ ಭರತನೂ ರಾಮನೂ, ನನ್ನ ಮನೆಯಲ್ಲಿರುವ ದೀಪಸ್ತಂಭ ನಿನಗೆ ಬೇಕಾದರೆ ನಿನ್ನದು ಎನ್ನುವ ಬಿಷಪ್ ಮಹನೀಯನೂ, ತಮ್ಮ ಅಸ್ವಾರ್ಥತೆಯಿಂದ ಪರಸಮೃದ್ಧಿ ಯಿಂದ ಇತರರನ್ನು ಒಳ್ಳೆಯವರಾಗಿ ಮಾಡುತ್ತಾರೆ. ಅಸ್ವಾರ್ಥತೆ ಪರ ಸಮೃದ್ಧಿ ಆ ಇತರನನ್ನು ಒಳ್ಳೆಯವನನ್ನಾಗಿ ಮಾಡದೆ ಇರುವ ಸಂದರ್ಭ ಗಳೂ ಉಂಟು. ಬೇಕಾದರೆ ತೆಗೆದುಕೊಂಡುಹೋಗು ಎಂದು ಹೇಳಿದ ಒಡನೆ ಒಬ್ಬೊಬ್ಬರು ಒಂದೊಂದು ಪದಾರ್ಥವನ್ನು ತೆಗೆದುಕೊಂಡು ಹೋದರೆ ಮನುಷ್ಯನಿಗೆ ಉಳಿಯುವುದೇನು? ವನವಾಸಕ್ಕೆ ಹೋಗುವ ಅಧಿಕಾರ; ಜೊತೆಗೆ ಬರುವ ಸ್ವಲ್ಪ ಪ್ರೇಮ, ಸ್ನೇಹ; ಎಂದೆಂದಿಗೂ ನಿಲ್ಲುವ ಯಶಸ್ಸು. ಒಂದು ದೃಷ್ಟಿಯಿಂದಲೇನೋ ಇದು ಬಹು ಸ್ವಲ್ಪ ವೆಂದು ತೋರುತ್ತದೆ. ಇನ್ನೊಂದು ದೃಷ್ಟಿಯಿಂದ ಇದು ಎಲ್ಲ ಆಸ್ತಿ ಗಿಂತಲೂ ಹೆಚ್ಚು ಬೆಲೆಯ ಆಸ್ತಿಯೆಂದು ಕಾಣುತ್ತದೆ. ಆದರೆ ಬಹು ಜನರಿಗೆ ಈ ದೃಷ್ಟಿ ಕಷ್ಟ. ಆಸ್ತಿಯ ತೊಡಕು ಹರಿಯಬೇಕಾದರೆ, ನಿನಗಿರಲಿ ಎಂದು ಒಬ್ಬರು ಹೇಳುವಂತೆ, ನಿನಗೇ ಇರಲಿ ಎಂದು ಹೇಳುವ ಮತ್ತೊಬ್ಬನ ಮನೋಧರ್ಮ ಜನರಲ್ಲಿ ಹರಡಬೇಕು. ಹೆಣ್ಣು ಗಂಡಿನ

ಆಸೆಯ ತೊಡಕಿನ ವಿಷಯ ಈಗ ದೇಶವನ್ನೆಲ್ಲ ಕ್ಷೋಭೆಗೊಳಿಸುತ್ತಿಲ್ಲ; ಆದರೆ ಲೆಕ್ಕವಿಲ್ಲದ ಸಂಸಾರಗಳನ್ನು ಕ್ಷೋಭೆಗೊಳಿಸುತ್ತಿದೆ, ಹಾಳು ಮಾಡುತ್ತಿದೆ. ಊರು ಊರಿನಲ್ಲಿ ಇದರ ಕಾರಣದಿಂದ ಹೆಣ್ಣುಗಂಡು ಕೊಲೆಯಾಗುತ್ತಿದೆ. ಗಂಡಿನ ಕೈ ರಕ್ತದಿಂದ ಕೆಂಪಾಗುತ್ತಿದೆ; ಹೆಣ್ಣಿನ ಕಣ್ಣು ನೀರಾಗಿ ಕರಗುತ್ತಿದೆ. ವಾಲ್ಮೀಕಿ ಈ ವಿಚಾರದಲ್ಲಿ ಒಂದು ಬುದ್ಧಿವಾದವನ್ನು ಹೇಳಿರುವುದು ಸ್ಪಷ್ಟವಾಗಿದೆ. ಎಲ್ಲರೂ ಆಸೆಯನ್ನು ಹಿಡಿತದಲ್ಲಿಟ್ಟುಕೊಳ್ಳಬೇಕು. ಇದರಂತೆಯೇ ಅವನು ಸೂಚಿಸಿರುವ ಇನ್ನೊಂದು ವಿಷಯ ಇಷ್ಟು ವ್ಯಕ್ತವಾಗಿಲ್ಲ; ಆದರೂ ಕಾಣುತ್ತದೆ. ಹೆಣ್ಣುಗಂಡನ್ನಾಗಲಿ, ಗಂಡು ಹೆಣ್ಣನ್ನಾಗಲಿ ಬಲಾತ್ಕಾರದಿಂದ ತೆಗೆದುಕೊಳ್ಳಬಾರದು. ಸ್ತ್ರೀ ಪುರುಷರ ಸಹವಾಸದ ನಿಜವಾದ ಸುಖ ಮನಸ್ಸಿನ ಮೇಳದಿಂದ ಬರತಕ್ಕದು. ಇಷ್ಟವಿಲ್ಲದ ಹೆಣ್ಣನ್ನು ಬಲವಂತಪಡಿಸುವವನು ರಾಕ್ಷಸನು; ಇಷ್ಟವಿಲ್ಲದ ಗಂಡನ್ನು ಬಲಾತ್ಕರಿಸಿ ಅಪೇಕ್ಷಿಸುವವಳು ರಾಕ್ಷಸಿ; ಬಲವಂತ ಮಾಡದಿದ್ದರೂ ತನ್ನ ಅಧಿಕಾರಕ್ಕೆ ತಗ್ಗಿ ಒಪ್ಪುವ ಹೆಣ್ಣನ್ನು ಬಾಯಿಗೆ ಹಾಕಿಕೊಳ್ಳುವವನು ವಾನರನು. ರಾಕ್ಷಸನು ಹೆರವರನ್ನು ಪೀಡಿಸಿದರೆ ಇವನು ತನ್ನ ಸಮೀಪದಲ್ಲಿಯೇ ಹೊಲಸು ಮಾಡಿಕೊಳ್ಳುತ್ತಾನೆ. ಮನುಷ್ಯರೊಡನೆ ಮನುಷ್ಯರಾಗಿ ಓಡಿಯಾಡುತ್ತಿದ್ದರೂ ನಾವು ಹೀಗೆ ನಡೆದುಕೊಂಡರೆ ನಾವು ರಾವಣ, ಶೂರ್ಪನಖಿ, ವಾಲಿ ಇವರಂತೆ ವಾನರ ರಾಕ್ಷಸರೇ ಸರಿ. ಗಂಡನಾದರೂ ಹೆಂಡತಿಗೆ ತನ್ನಲ್ಲಿ ಅನುರಾಗ ಇದೆಯೋ ಇಲ್ಲವೋ ಎಂದು ಸಂದೇಹ ತೋರುವ ಸಂದರ್ಭದಲ್ಲಿ ಅವಳಲ್ಲಿ ಕ್ರೋಧವನ್ನು ತೋರಬಾರದು, ಲೋಭವನ್ನು ತೋರಬಾರದು; ನಿನಗೆ ಸಮ್ಮತವಾದ ಕಡೆಗೆ ಹೋಗು ಎಂದು ಸಮಾಧಾನವಾಗಿ ಹೇಳುವುದನ್ನು ಕಲಿಯಬೇಕು. ಇದನ್ನು ತಿಳಿದರೆ ವ್ಯಕ್ತಿಗಳ ಜೀವನದಲ್ಲಿ ಕ್ಷೋಭೆ ಕಡಮೆಯಾಗುವುದು; ಸಂಸಾರದ ಸುಖ ಅಭಿವೃದ್ಧಿಯಾಗುವುದು; ಸಮಾಜದ ಜೀವನ ಶುದ್ಧವಾಗುವುದು; ಗಂಡು ಹೆಣ್ಣಿನ ಸಂಬಂಧ, ಮಾನವವರ್ಗವನ್ನು ಈಗ ಪಶುಗಳ ಮಟ್ಟಕ್ಕೆ ಎಳೆಯುತ್ತಿರುವುದು ಕೊನೆಗಂಡು, ಜ್ಞಾನಪ್ರಧಾನವಾದ ಅವನ ಚೇತನಕ್ಕೆ ತಕ್ಕದಾಗುವುದು. ನಿನಗೆ ಇಷ್ಟವಿಲ್ಲದಿದ್ದರೆ ಈ ಅನ್ನ ನನಗೆ ಬೇಡ,

ಈ ಮೆಯ್ ನನಗೆ ಬೇಡ ಎಂದು ಹೇಳುವುದು ಬಾಳು ಹಸನಾಗುವುದಕ್ಕೆ ಸುಲಭ ಮಾರ್ಗ. ಈ ಮಾರ್ಗ ನಡೆಯುವುದಕ್ಕೆ ಸುಲಭವಲ್ಲ; ಆದರೆ ಇದನ್ನು ಹುಡುಕಬೇಕಾದದಿಲ್ಲ.

### ಇನ್ನು ಅದು ಕಾವ್ಯದಿಂದ ಆಗುತ್ತದೆ

ಮಾನವವರ್ಗ ಪೂರ್ವದಲ್ಲಿ ಹೊಡೆದಾಟದ ಕಚ್ಚಾಟದ ಒಂದು ಸ್ಥಿತಿಯಿಂದ ಮೆಲ್ಲಮೆಲ್ಲನೆ ಸಂಸ್ಕೃತವಾಗಿ ಈಗಣ ಸ್ಥಿತಿಗೆ ಬಂದಿದೆ. ನಿನ್ನದು ನನಗಿರಲಿ ಎನ್ನುವ ಸ್ಥಿತಿಗಿಂತ ಸಿಕ್ಕಿದವರಿಗೆ ಸೂರೆ ಎನ್ನುವುದು ಸ್ವಲ್ಪ ಮೇಲು; ಸಿನ್ನದು ನಿನಗಿರಲಿ ಎನ್ನುವುದು ಇದಕ್ಕಿಂತಲೂ ಮೇಲಾದ ಸ್ಥಿತಿ. ಸಮಾಜ ಈಗ ಈ ಸ್ಥಿತಿಯನ್ನು ಒಳ್ಳೆಯದೆಂದು ತಿಳಿದಿದೆ; ರಾಷ್ಟ್ರಗಳು ಇದನ್ನು ಇನ್ನು ಸ್ವಲ್ಪ ತಿಳಿಯಬೇಕಾಗಿದೆ. ಇದಕ್ಕೂ ಒಳ್ಳೆಯ ಸ್ಥಿತಿ, ನನ್ನದು ನಿನಗಿರಲಿ, ಎನ್ನುವುದು. ಇದು ಬಂದಂದು ಮನುಷ್ಯರು ದೇವತ್ವವನ್ನೇ ಸಾಧಿಸುವರು. ಮೂರು ಮೆಟ್ಟಲು ಏರಿ ಬಂದಿರುವ ಮನುಷ್ಯಜಾತಿಗೆ ಈ ನಾಲ್ಕನೆಯ ಮೆಟ್ಟಲು ಒಂದಿದೆಯೆಂದು ವಾಲ್ಮೀಕಿಯೂ ಅವನ ಜೊತೆಯವರೂ ಹೇಳುತ್ತಾರೆ. ಒಬ್ಬೊಬ್ಬ ಮನುಷ್ಯನಲ್ಲಿರುತ್ತ ಇದು ಒಳ್ಳೆಯದು ಇದು ಕೆಟ್ಟದು ಎಂದು ಸೂಚಿಸುವ ಅಂತರ್ಯಾದ ಬುದ್ಧಿಯಂತೆ, ಈ ಮಹನೀಯರು ಮಾನವ ವರ್ಗದ ಅಂತರ್ಯಾದ ಬುದ್ಧಿಸ್ವರೂಪರು. ಬುದ್ಧಿಸ್ವರೂಪಿಯಾದ ಕವಿಯ ಈ ಪ್ರಚೋದನ ಲೋಕಕ್ಕೇ ಬೇಕಾಗಿದೆ; ಲೋಕವನ್ನು ಕುರಿತಿದೆ. ನನ್ನ ಮತ, ನಿನ್ನ ಮತ ಎಂದು ಹೇಳುವಲ್ಲಿ ಮಮತೆ ಅಹಂಕಾರಗಳು ಕಾದಲು ಏಳುವುವು. ಕವಿಯ ಈ ಮತ ಮನುಜ ಕುಲದ ಮತ. ನಾವು ಮತವೆಂದು ಹೇಳುವುದು ಸೋತ ಸ್ಥಳದಲ್ಲಿ ಕಾವ್ಯ ತನ್ನ ಕಾರ್ಯವನ್ನು ಆರಂಭಿಸುತ್ತದೆ; ಮತ ಸಾಧಿಸಲಾಗದ ಸಿದ್ಧಿಗೆ ಅದು ಮನುಜ ಕುಲವನ್ನು ಒಯ್ಯುತ್ತದೆ. ಮಾನವವರ್ಗ ಇನ್ನುಮುಂದೆ ಸಾಗುವುದು ಕವಿಯಿಂದ, ಕಾವ್ಯದಿಂದ.

### ಭಾರತೀಯ ಆತ್ಮನಿಷ್ಠೆ

ಈ ಕಾರಣದಿಂದ ವಾಲ್ಮೀಕಿಯೂ ರಾಮಾಯಣವೂ ಲೋಕದ ಬಾಳುವೆಯಲ್ಲಿ ಮಾಡಬೇಕಾಗಿರುವ ಕೆಲಸ ಇನ್ನೂ ಬಹಳವಿದೆ. ಪೂರ್ವ

ದೇಶದಲ್ಲೆಲ್ಲ ವ್ಯಾಪಿಸಿದ ಕವಿಯ ಪ್ರಭಾವ ಪ್ರಪಂಚದ ಇತರ ಪ್ರದೇಶಗಳಲ್ಲಿ ಹರಡಬೇಕಾಗಿದೆ. ವಾಲ್ಮೀಕಿಯ ಸ್ವಭಾವವನ್ನು ಎಲ್ಲ ಕಡೆಯೂ ಹರಡುವುದು ಭರತವರ್ಷದ ಕರ್ತವ್ಯ. ವಾಲ್ಮೀಕಿಯ ಮಾತನ್ನು ನಮ್ಮ ಜನರು ಆದರದಿಂದ ಕೇಳಿದಾರೆ; ಸ್ವಲ್ಪ ಮಟ್ಟಿಗೆ ಅನುಷ್ಠಾನಕ್ಕೆ ತಂದಿದಾರೆ. ಅದನ್ನು ಇನ್ನೂ ಹೆಚ್ಚಾಗಿ ಬಾಳಿನಲ್ಲಿ ಬೆರೆಯಿಸುವುದು ನಮಗೆ ಉಳಿದಿರುವ ಕೆಲಸ. ಅದು ಬಹಳ ಬೆಲೆಯ ಉಪದೇಶವೆಂದು ಲೋಕಕ್ಕೆ ತೋರಿಸಲು ಇದೇ ಮುಖ್ಯವಾದ ದಾರಿ. ಧರ್ಮಕ್ಕೆ ಕಟ್ಟುಬಿದ್ದು ದಾಯಾದರಿಂದ ಹಿಂಸೆಪಟ್ಟ ಹೊತ್ತಿನಲ್ಲಿ ಇದು ಏತರ ಧರ್ಮ ಎಂದು ಸ್ಥೈರಣೆ ಮುರಿಯುವುದು ಸಹಜ. ಪಾಶ್ಚಾತ್ಯರು ನಮಗಿಂತ ಸುಖವಾಗಿರುವುದನ್ನು ಕಂಡು ನಮ್ಮ ಜನರ ದಾರಿದ್ರ್ಯವನ್ನು ಕುರಿತು ಮರುಗುವ ನಮಗೆ ವಾಲ್ಮೀಕಿಯ ಉಪದೇಶದಲ್ಲಿ ನಂಬಿಕೆ ಕಡಮೆಯಾಗುವ ಸಂಭವವಿದೆ. ಪಾಶ್ಚಾತ್ಯರ ಸೌಖ್ಯ ಅಥವಾ ಅದಕ್ಕೆ ಸದೃಶವಾದ ಸ್ಥಿತಿಗೆ ಹಾತೊರೆಯುತ್ತ ನಮ್ಮ ಸಮಾಜವನ್ನು, ರಾಷ್ಟ್ರವನ್ನು, ಈಗಣ ದುರ್ದಶೆಯಿಂದ ಬಿಡಿಸುವೆವೆಂದು ನಮ್ಮಲ್ಲಿ ಅನೇಕರಿಗೆ ಆತುರವೂ ಉತ್ಸಾಹವೂ ಹುಟ್ಟುತ್ತಿವೆ. ನಮ್ಮ ಹಿರಿಮೆಯನ್ನು ಯಾವುದೋ ದೋಷ ಮರೆಸಿಕೊಂಡಿದೆಯೆಂದು ಸುಧಾರಕ ತರುಣವೃಂದ ತಾರಾಡಿ ತೊಳಲಿ ಕುಂದೆಂದು ಕಂಡದ್ದನ್ನೆಲ್ಲ ಕುಟ್ಟಿ ಪುಡಿಮಾಡುವೆನೆನ್ನುತ್ತಿದೆ. ಕುಂದನ್ನು ಕಳೆಯುವುದು ಒಳ್ಳೆಯದೇ; ಆದರೆ ಇಷ್ಟರಿಂದ ಕೆಲಸ ಮುಗಿಯಿತೆಂದು ಅದು ಭಾವಿಸಬಾರದು. ಒಂದು ಅಥವಾ ಹತ್ತು ಕುಂದನ್ನು ಕಳೆದರೆ ನಮ್ಮ ದುರ್ದೆಸೆ ನೀಗುವುದೆನ್ನುವುದು ಅಂಗದನು ಸಮುದ್ರದ ಇಕ್ಕರೆಯಲ್ಲಿ ರಾಕ್ಷಸನನ್ನು ಕೊಂದು ರಾವಣನು ಮಡಿದನೆಂದು ತಿಳಿದಂತಾಗುವುದು. ಅಂಗದನು ಹೀಗೆ ತಿಳಿದಮೇಲೆ ರಾವಣನು ಸಾಯುವ ಮೊದಲು, ಸೀತೆಗೆ ಸೆರೆಯಿಂದ ಬಿಡುಗಡೆ ದೊರೆಯುವ ಮೊದಲು, ಬಹುಕೆಲಸ ನಡೆಯಬೇಕಾಯಿತು. ಹನುಮಂತನು ಸಾಗರವನ್ನು ದಾಟಿ ಸೀತೆ ಎಲ್ಲಿರುವಳೆಂದು ತಿಳಿದು, ರಾಮನಿಗೆ ಈ ವೃತ್ತಾಂತವನ್ನು ತಂದು, ವಾನರ ಸೇನೆ ಲಂಕೆಗೆ ಹೊರಟು, ಸಾಗರಕ್ಕೆ ಸೇತುವೆಯನ್ನು ಕಟ್ಟಿ, ಬಹು ದಿನ ಯುದ್ಧವಾದಮೇಲೆ ರಾವಣನು ರಾಮನ

ಕೈಯಿಂದ ಸತ್ತನು. ನಮ್ಮ ಬಾಳುವೆಯ ಕೇಡು ಹರಿಯಬೇಕಾದರೂ ತುಂಬ ಸಾಧನೆ ಬೇಕಾಗುತ್ತದೆ. ನಮ್ಮ ಜನತೆಯ ಕಲ್ಯಾಣವನ್ನು ಹೇಗೆ ಸಾಧಿಸುವುದೆಂದು ನಾವು ಸಾವಧಾನವಾಗಿ ಯೋಚಿಸಬೇಕು. ಮಧ್ಯೆ ನಾವು ಒಂದು ವಿಷಯವನ್ನು ಮರೆಯಬಾರದು. ಪಾಶ್ಚಾತ್ಯರ ತೆರದ ಸೌಖ್ಯ ಮಾಯಾಮೃಗ ಮಾರೀಚ; ಕೈಗೆ ಸಿಕ್ಕುವವರೆಗೆ ಅದು ಬಹಳ ಚೆನ್ನಾಗಿ ಕಾಣುತ್ತದೆ. ಅದು ನಮ್ಮ ಹೃದಯವನ್ನು ಕಳವು ಮಾಡುತ್ತಿದೆ; ಅದನ್ನು ನೋಡಿ ನಮ್ಮ ಜನತೆ 'ಅಹೋ ರೂಪಂ, ಅಹೋ ಲಕ್ಷ್ಮೀ' ಎಂದು ಹೇಳುತ್ತಿದೆ. ಇಷ್ಟು ಮಾತ್ರಕ್ಕೆ ನಾವು ಅದರ ಹಿಂದೆ ನಮ್ಮ ಆತ್ಮವನ್ನು ಕಳುಹಿಸಬಾರದು. ಹಾಗೆ ಕಳುಹಿಸಿದ್ದೇ ಆದರೆ ಆ ಸುಂದರ ಮೃಗವನ್ನು ಹಿಡಿಯುವುದಕ್ಕೆಂದು ತುಂಬ ಶ್ರಮ ಪಡುವುದಾಗುತ್ತದೆ. ಕೈಗೆ ಸಿಕ್ಕುವ ವೇಳೆಗೆ ಅದು ನಮಗೆ ರಾಕ್ಷಸನ ಹೆಣವಾಗುವುದು. ನಮ್ಮವರು ಮಾಡಿದ ಏರ್ಪಾಡೆಲ್ಲ ತಪ್ಪು, ಬೇರೆ ಯವರು ಮಾಡಿದ ಏರ್ಪಾಡೇ ಸರಿ ಎಂಬ ಭಾವನೆಯನ್ನು ಬಿಟ್ಟು ಒಳ್ಳೆಯದು ಯಾವುದು ಎಂದು ತಿಳಿಯುವುದಕ್ಕೂ ನಾವು ಯತ್ನ ಮಾಡಬೇಕು; ಆ ಒಳ್ಳೆಯದನ್ನು ಸಾಧಿಸುವುದಕ್ಕೆ ಹಿರಿಯರು ಕಿರಿಯರೆಲ್ಲ ಸಹಕರಿಸಿ ನಡೆಯಬೇಕು; ಅದನ್ನು ಸಾಧಿಸಬಲ್ಲ ನಾಯಕರನ್ನು ಮುಂದಿಟ್ಟುಕೊಂಡು ಅವರ ಹಿಂದೆ ನಿಲ್ಲುವುದನ್ನು ಕಲಿಯಬೇಕು.

### ಪ್ರವೃತ್ತಿಯ ಸಾತ್ವಿಕಮಾರ್ಗ

ಆಸ್ತಿಗಾಗಿ ಜಗಳಮಾಡಬಾರದು, ಹೆಣ್ಣಿಗಾಗಿ ಕಾದಬಾರದು ಎಂದು ವಾಲ್ಮೀಕಿ ಹೇಳುವನೆಂದರೆ ಅವನು ನಮ್ಮಲ್ಲಿ ಈಗ ವಾಡಿಕೆಯಾಗಿರುವ ನಿವೃತ್ತಿಯ ಆಭಾಸವಾದ ತಾಮಸ ಮಾರ್ಗವನ್ನು ಉಪದೇಶಿಸುತ್ತಿದಾನೆಂದು ತಿಳಿಯಬಾರದು. ಇಂಥ ತಾಮಸ ವೈರಾಗ್ಯದ ಧ್ವನಿ ಬರುವಂತೆ ಒಂದುಸಲ ಬಹು ದುಃಖದ ವೇಳೆಯಲ್ಲಿ ಸೀತಾದೇವಿ ಮಾತನಾಡುತ್ತಾಳೆ. "ಪ್ರಿಯ ಅಪ್ರಿಯವೆನ್ನುವುದಿಲ್ಲದ ತ್ಯಕ್ತಕಿಲ್ಬಿಷರಾದ ಮುನಿಗಳು ಧನ್ಯರು, ನಿಜವಾಗಿ ಭಾಗ್ಯವಂತರು." ಆದರೆ ಇದು ಕವಿಗೆ ಸಮ್ಮತವಾದ ಭಾವವಲ್ಲ. ಇದಾದ ಸ್ವಲ್ಪ ಹೊತ್ತಿಗೆ ದೇವಿ "ಏತಿ ಜೀವಂತಮಾನಂದೋ ನರಂ ವರ್ಷ ಶತಾದಪಿ" ಎನ್ನುತ್ತಾಳೆ. ಆಮೇಲೆ ಈ ಮಾತನ್ನು ಭರತನೂ

ಹೇಳುತ್ತಾನೆ. ಈ ಭಾವವೇ ಕವಿಗೆ ಸಮ್ಮತ. ಪ್ರಿಯ ಅಪ್ರಿಯ ಬೇಡವೆಂದು ಓಡುವುದನ್ನು ಕವಿ ಒಪ್ಪುವುದಿಲ್ಲ. ಎರಡನ್ನೂ ಕುರಿತು ಸಮಭಾವವಿರಬೇಕೆಂದು ಅವನ ಅಭಿಪ್ರಾಯ. ರಾಮನನ್ನು ರಾಜನಾಗೆಂದು ಕರೆಯಲು ಬಂದವೇಳೆ ಭರತನು ಅವನ ನಿಲುವನ್ನು ನೋಡಿ ಲಾಭಾಲಾಭದಲ್ಲಿ ಏಕರೀತಿ ಇರುವ ನಿನ್ನಂಥ ಜನರು ಇನ್ನುಂಟೆ ಎನ್ನುತ್ತಾನೆ. ಎರಡೂ ಬೇಡವೆಂದು ಓಡಿ ತಾನೊಬ್ಬನು ಸುಖವಾಗಿರುವುದಲ್ಲ, ಎರಡನ್ನೂ ಸಹಿಸುವುದು, ಮನುಜನ ಧರ್ಮ. ತಾನು ವನವಾಸ ಹೋಗಬೇಕೆಂಬ ದಾರುಣವೂ ಮರಣೋಪಮವೂ ಆದ ಮಾತನ್ನು ಕೈಕಯಿಯಿಂದ ಕೇಳಿದರೂ ರಾಮನು ವ್ಯಥೆಗೊಳಲಿಲ್ಲ. ಎಂದರೆ ತನ್ನ ಪರವಾಗಿ. ಆದರೆ ತಾಯ ಪರವಾಗಿ ಹೆಂಡತಿಯ ಪರವಾಗಿ ಅವನಿಗೆ ವ್ಯಥೆ ಉಂಟು. ಮನುಜನು ತನ್ನ ಕಷ್ಟವನ್ನು ಮಿಥ್ಯವೆನ್ನಬಹುದು, ಇತರರ ಕಷ್ಟವನ್ನು ಮಿಥ್ಯವೆನ್ನಲಾಗದು. ಹೀಗೆಂದವನು ಇತರರ ಸುಖವನ್ನೂ ಮಿಥ್ಯವೆಂದಾನು. ಅವನು ಯಾವ ಒಳ್ಳೆಯದನ್ನೂ ಮಾಡದೆ ನಿಲ್ಲುವುದಾದೀತು; ಕೆಟ್ಟದನ್ನು ನಿಗ್ರಹಿಸದೆ ಬಿಡುವುದಾದೀತು; ಕೆಟ್ಟದು ಒಳ್ಳೆಯದು ಎನ್ನುವುದೇ ಇಲ್ಲ ಎನ್ನುವುದಾದೀತು. ಇದು ಯಾವುದೂ ವಾಲ್ಮೀಕಿಗೆ ಒಪ್ಪಿಗೆ ಇಲ್ಲ. ಜೀವನದಲ್ಲಿ ಒಳ್ಳೆಯದು ಇದೆ, ಕೆಟ್ಟದು ಇದೆ. ಕೆಟ್ಟದನ್ನು ಒಳ್ಳೆಯದು ಒಪ್ಪಿಕೊಳ್ಳುವುದಕ್ಕಾಗುವುದಿಲ್ಲ. ಕೆಟ್ಟದು ತಾನು ತಪ್ಪೆಂದು ಒಪ್ಪಿಕೊಂಡರೆ ಒಳ್ಳೆಯದು ಅದನ್ನು ಕ್ಷಮಿಸಬಹುದು; ಇಲ್ಲದಿದ್ದರೆ ಅದರೊಂದಿಗೆ ಹೋರಾಡಲೇಬೇಕು. ರಾಮನು ರಾವಣನೊಂದಿಗೆ ಯುದ್ಧವನ್ನೇ ಮಾಡಿದನು; ಅವನನ್ನು ಕೊಂದನು. ಸತ್ಯಕ್ಕಾಗಿ ರಾಜ್ಯವನ್ನು ಬಿಡಬೇಕಾದಾಗ ರಾಮನು ಅದನ್ನು ಸಮಾಧಾನವಾಗಿ ಬಿಟ್ಟನು; ಅವಧಿ ಮುಗಿದು ರಾಜ್ಯ ಕೈಗೆ ಬಂದಾಗ ಅದನ್ನು ಸಂತೋಷದಿಂದ ಆಳಿದನು. ಬಿಡುವುದರಲ್ಲಿ ಒಂದು ದೊಡ್ಡತನವಿರುವಂತೆ ಕಟ್ಟಿಕೊಳ್ಳುವುದರಲ್ಲಿಯೂ ದೊಡ್ಡತನವಿದೆ. ಇದರಲ್ಲಾಗಲಿ ಅದರಲ್ಲಾಗಲಿ ದೊಡ್ಡತನ ಬರುವುದು ಸ್ವಾರ್ಥತ್ಯಾಗದಿಂದ. ಭೋಗಕ್ಕಾಗಿ ರಾಜ್ಯವನ್ನು ಅಪೇಕ್ಷಿಸುವುದು ಪ್ರಾಕೃತಬುದ್ಧಿ; ಕ್ಲೇಶಕ್ಕೆ ಹೆದರಿ ಸಂಸಾರವನ್ನು ಬಿಡುವುದು ಹೇಡಿತನ. ಎಲ್ಲರ ಸುಖವನ್ನು

ಸಾಧಿಸುತ್ತ ತಾನು ಸುಖವನ್ನು ಅನುಭವಿಸುವ ರಾಜನು ಧನ್ಯನು. ನಾನು ನನ್ನದು ಎಂಬುದರಿಂದ ಬಿಡಿಸಿಕೊಂಡ ಯೋಗಿ ಸಂನ್ಯಾಸವನ್ನು ಸಂಸಾರದಿಂದ ಬಿಡುಗಡೆಯೆಂಬ ಕಾರಣದಿಂದ ಆಶಿಸದಿದ್ದಂತೆ ಧನ್ಯನು. ಆಶಿಸದ ಕಾರಣದಿಂದ ರಾಜನಿಗೆ ರಾಜ್ಯವೂ ಯೋಗಿಗೆ ಸಂನ್ಯಾಸವೂ ಒಂದೇ ಫಲವನ್ನು ಸಾಧಿಸಿಕೊಡುತ್ತವೆ. ನಿಜವಾಗಿ ವಾಲ್ಮೀಕಿಯ ಕಾವ್ಯದಲ್ಲಿ ಕಾಣುವ ಉಪದೇಶವೇ ಆಮೇಲೆ ಸನಾತನ ಧರ್ಮದಲ್ಲಿ ಭಗವದ್ಗೀತೆಯ ಕರ್ಮಯೋಗದ ಆಕಾರವನ್ನು ಪಡೆಯಿತು.

## ೧೫

## ಕಾವ್ಯ ವೇದ, ಮಾನವ ದೇವ

ರಾಮಾಯಣವನ್ನು ಇದುವರೆಗೆ ಬರಿಯ ಒಂದು ಕಾವ್ಯವೆಂದು ವಿಮರ್ಶೆಮಾಡಿದೆ. ಆದರೆ ಈ ಮಾತಿನಿಂದ ಅದನ್ನು ಮತಗ್ರಂಥವೆಂದು ಸ್ವೀಕರಿಸಿದವರು ತಪ್ಪುಮಾಡಿದರೆಂದು ಹೇಳುವುದು ಇಲ್ಲಿ ಅಭಿಪ್ರಾಯ ವಲ್ಲ. ದೊಡ್ಡವರ ಮಾತು, ಒಳ್ಳೆಯವರ ಮಾತು, ಮನುಷ್ಯರನ್ನು ಉದ್ಧರಿಸಲು ಹುಟ್ಟುತ್ತದೆ; ಅದನ್ನು ಆಡುವ ಒಳ್ಳೆಯವರು ದೊಡ್ಡವರು ನಮಗೆ ಗುರುಗಳೆಂದರೆ ಅದರಲ್ಲಿ ತಪ್ಪಿಲ್ಲ. ಒಳ್ಳೆಯದನ್ನು ಹೇಳುವ ಒಬ್ಬರನ್ನು ನಾವು ಗುರುವಾಗಿ ಮಾಡಿಕೊಳ್ಳಬಹುದು; ಇಷ್ಟರಿಂದ ಇನ್ನು ಯಾರೂ ಒಳ್ಳೆಯದನ್ನು ಹೇಳುವುದಿಲ್ಲವೆಂದು ನಮ್ಮ ಅರ್ಥವಲ್ಲ. ಒಬ್ಬರನ್ನು ಗುರುವೆನ್ನುವುದು, ಒಂದು ಪುಸ್ತಕವನ್ನು ವೇದವೆನ್ನುವುದು, ಒಂದು ದೇಶವನ್ನುಮಾತೃಭೂಮಿಯೆನ್ನುವುದು, ಬಳಕೆಯ ಸೌಕರ್ಯಕ್ಕಾಗಿ ಮನುಷ್ಯನಿಗೆ ಅವಶ್ಯಕವಾಗಿದೆ. ಈ ಕಾರಣದಿಂದ ರಾಮಾಯಣವನ್ನು ಮತಗ್ರಂಥವೆಂದೂ ಧರ್ಮಗ್ರಂಥವೆಂದೂ ಭಾವಿಸುವವರ ವಿಷಯದಲ್ಲಿ ಯಾರೂ ಅಸೂಯೆಪಡಬಾರದು. ನಮ್ಮ ಜನರು ರಾಮಾಯಣವನ್ನು ದಿನದ ಪಾರಾಯಣ ಗ್ರಂಥವಾಗಿ ಇಟ್ಟುಕೊಂಡು ಇದರ ತಾಳೆಯ ಓಲೆಯ ಪುಸ್ತಕವನ್ನು ಆಸ್ತಿಯೆಂದು ಗಣಿಸಿದರು; ಅಣ್ಣತಮ್ಮಂದಿರು ಹಂಚಿಕೆ ಮಾಡಿಕೊಳ್ಳುವಾಗ ಒಂದು ಕಡೆ ಹೊಲ, ಗದ್ದೆ, ತೋಟ, ಒಂದು ಕಡೆ ತಂದೆ ಓದುತ್ತಿದ್ದ ರಾಮಾಯಣದ ಪುಸ್ತಕ, ಎಂದು ಅದನ್ನು ಭಾಗದಲ್ಲಿ

ತೆಗೆದುಕೊಂಡರು; ಮನೆಗೆ ಬೆಂಕಿಬಿದ್ದು ಒಡವೆವಸ್ತು ಸುಡುವಾಗ ರಾಮಾಯಣದ ಪುಸ್ತಕವನ್ನು ಎಲ್ಲಕ್ಕೂ ಮೊದಲು ಉಳಿಸಿಕೊಂಡು ಬಂದರು; ಸಾಯುವಂದು ಮಕ್ಕಳಿಗೆ ತಮ್ಮ ಪಾರಾಯಣದ ರಾಮಾಯಣ ಪುಸ್ತಕವನ್ನ ಭದ್ರವಾಗಿ ಇಟ್ಟುಕೊಳ್ಳಿ ಎಂದು ಹೇಳಿದರು. ಮನುಷ್ಯನು ಉತ್ಸಾಹದಿಂದ ಉದ್ಧಾರವಾಗುತ್ತಾನೆ, ಶೋಕದಿಂದ ಕೆಡುತ್ತಾನೆ ಎಂಬ ಈ ಕವಿಯ ಮಾತು ಎಷ್ಟೋ ಜನಕ್ಕೆ ಶೋಕವನ್ನು ತಡೆದುಕೊಳ್ಳುವ ಶಕ್ತಿಯನ್ನು ಕೊಟ್ಟದೆ. ಮನುಷ್ಯನು ಜೀವಂತನಾಗಿರಬೇಕು, ನೂರು ವರ್ಷದ ಮೇಲಾದರೂ ಆನಂದವು ಅವನನ್ನು ಸಾರುವುದು ಎನ್ನುವುದು ಯಾವ ದುರ್ಭಾಗ್ಯದಿಂದಲೂ ಕುಗ್ಗುವುದಿಲ್ಲವೆಂಬ ಮಾನವನ ಆತ್ಮದ ಸಿಂಹನಾದವಾಗಿದೆ. ಸುಗ್ರೀವನ ಸನ್ನಿಧಿಯಲ್ಲಿ ನನಗೆ ಚಿಕ್ಕವರಿಲ್ಲ ಎಂಬ ಹನುಮಂತನ ಮಾತು ನಮ್ಮೆಲ್ಲರ ನಿರಂತರ ಧ್ಯಾನಕ್ಕೆ ವಿಷಯವಾಗ ಬೇಕು. ತಪ್ಪು ಮಾಡದವರು ಯಾರೂ ಇಲ್ಲ, ಎಂಥ ಕೆಟ್ಟವರಲ್ಲಾಗಲಿ ದೊಡ್ಡವರು ಕರುಣೆಯನ್ನೇ ತೋರಬೇಕು ಎಂಬ ಸೀತಾ ವಾಕ್ಯ ನಮಗೆ ಒಂದು ಕರ್ತವ್ಯವನ್ನು ಸೂಚಿಸುತ್ತದೆ; ನಮ್ಮನ್ನು ದೈವವೆಂಬ ಕಲ್ಯಾಣ ತತ್ತ್ವ ಮನ್ನಿಸಿ ಸಲಹುವುದೆಂದು ಆಸೆಯನ್ನು ಹುಟ್ಟಿಸುತ್ತದೆ. ನಿನಗೆ ಶರಣಾದೆನೆಂದು ಒಂದೇ ಒಂದುಸಲ ನನಗೆ ಹೇಳಿದವನನ್ನು ಯಾವ ಕಡೆಯಿಂದಲೂ ಕೇಡಾಗದಂತೆ ನಾನು ರಕ್ಷಿಸುತ್ತೇನೆ ಎಂದ ರಾಮವಾಕ್ಯ ಲೋಕ ರಕ್ಷಕ ತತ್ತ್ವ ಎಷ್ಟು ಸುಲಭವಾದದೆಂದು ತಿಳಿಸುತ್ತದೆ. ಒಂದಲ್ಲ ಒಂದುವೇಳೆ ಮನುಷ್ಯನಿಗೆ ಇಂಥ ಮಾತು ಒಂದು ಊರೆಯಾಗುತ್ತದೆ. ವಾಲ್ಮೀಕಿಯ ಕಾವ್ಯವನ್ನು ನೋಡಿ ಎಷ್ಟು ಕೋಟಿ ಜೀವ ಬೆಳಕನ್ನು ಕಂಡಿತೋ, ಸುಖವನ್ನು ಪಡೆಯಿತೋ, ಬಾಳನ್ನು ಬಿಡುವಂದು ಶಾಂತ ವಾಗಿ ನಂದಿತೋ. ಇದು ಕಾವ್ಯದ ಮಹಿಮೆಯನ್ನೇ ಸಾರುತ್ತದೆ. ರಾಮಚಂದ್ರನಾದರೂ ಹೀಗೆಯೇ ಜನರ ಬಾಳಿನಲ್ಲಿ ಅವರವರ ಸಮ್ಮತಿಗೆ ಅನುಗುಣವಾಗಿ ಒಳ್ಳೆಯದನ್ನು ಸಾಧಿಸುವ ಒಂದು ಆಕಾರವಾಗಿದ್ದಾನೆ. ಆ ಆಕಾರವನ್ನು ಕೆಲವರು ಮನುಷ್ಯನೆನ್ನಬಹುದು; ಇನ್ನು ಕೆಲವರು ದೈವವೆಂದು ಪೂಜಿಸಬಹುದು. ದೈವವೆಂದು ಪೂಜಿಸುವವರು ತಪ್ಪು ಮಾಡುವರೆಂದು ಇತರರು ಭಾವಿಸಬಾರದು. ರಾಮನು ದೇವರು

ಎಂದು ಹೇಳುವ ಮಾತಿಗೆ ಒಪ್ಪದವರ ನಿಲುವಾದರೂ ಏನು? ಇಲ್ಲವೇ ದೇವರೆಂಬ ತತ್ತ್ವ ಇಲ್ಲವೆನ್ನುವುದು; ಇಲ್ಲ ಆ ತತ್ತ್ವದ ವಿಷಯದಲ್ಲಿ ಬೇರೆ ಅಭಿಪ್ರಾಯ ಇಟ್ಟುಕೊಂಡಿರುವುದು. ದೇವರು ಎನ್ನುವ ತತ್ತ್ವವನ್ನು ಒಪ್ಪದವರು, ಬಾಳಿನಲ್ಲಿ ಯಾವುದನ್ನು ಆದರ್ಶವಾಗಿ ಎಣಿಸುವುದು ಸಾಧ್ಯ, ವಿಚಾರಮಾಡಲಿ. ರಾಮನು ಆ ಆದರ್ಶದ ಮಟ್ಟಕ್ಕೆ ಮೀರಿರುವನು ಅಥವಾ ಹತ್ತಿರ ಹತ್ತಿರ ಸಾರುವನು ಎಂದು ಕಾಣುತ್ತದೆ. ದೇವರು ಎನ್ನುವ ತತ್ತ್ವ ಉಂಟು, ಆದರೆ ಅದು ಈ ರಾಮನೆಂಬ ಚಿತ್ರದಿಂದ ಬೇರೆ ಎನ್ನುವವರು, ತಮ್ಮ ಭಾವಕ್ಕೆ ಒಂದು ರೂಪವನ್ನು ಕೊಡಲು ಯತ್ನಮಾಡಲಿ. ಅದು ರಾಮನನ್ನು ಹೋಲುವುದೆಂದು ಕಾಣುತ್ತದೆ. ಆ ಭಾವನೆಗೆ ರೂಪವನ್ನು ಕೊಡಲು ಸಾಧ್ಯವಲ್ಲ ಎನ್ನುವವರು ಕೆಲವರಿರಬಹುದು. ಅಂಥವರು ರಾಮನನ್ನು ಕೆಲ ಜನರು ಮಾಡಿಕೊಂಡಿರುವ ದೇವರ ಸಂಕೇತ ಎಂದು ತಿಳಿಯಲಿ. ಗಂಗೆಯನ್ನು ತಂದೆವೆನ್ನುವವರು ಗಂಗಾ ನದಿಯನ್ನು ಹೊತ್ತುತರುವುದಿಲ್ಲ; ಅದರಿಂದ ಒಂದು ಗಿಂಡಿ ತೀರ್ಥವನ್ನು ತರುತ್ತಾರೆ. ತಾಯಿ ತನ್ನ ಮಗುವನ್ನು ಕುರಿತ ತನ್ನ ಪ್ರೇಮವನ್ನೆಲ್ಲ ಒಂದು ಮುತ್ತಿನಿಂದ ತೋರಿಸುತ್ತಾಳೆ. ಭಾವಕ್ಕೂ ನಿಲುಕದ ಚೆಲುವಿನ ತನ್ನ ಕನಸನ್ನು ಶಿಲ್ಪಿಯಾದವನು ಒಂದು ಕಲ್ಲಿನಲ್ಲಿ ಕಡೆದು ಹೊರಕೆಡಹುತ್ತಾನೆ. ಲೋಕದ ದೈವವನ್ನು ಮಾನವರಿಗೆ ಮಾತಿನಲ್ಲಿ ತೋರಿಸಲಪೇಕ್ಷಿಸುವ ಕವಿ ರಾಮನಂಥ ಮಾನವಕಲ್ಪ ಮೂರ್ತಿಯನ್ನು ನಿರ್ಮಿಸಬಹುದು; ದೇವರಿಲ್ಲದೆ ತೃಪ್ತರಾಗಲಾರದ ಜನರು ಇದನ್ನು ತಮ್ಮ ಭಾವನೆಯ ರೂಪು ಎಂದು ಗುರುತಿಸಿ ಪೂಜೆ ಮಾಡಬಹುದು. ಇದರಲ್ಲಿ ಏನಾದರೂ ಕುಂದುಕೊರತೆ ಎಂದು ಕಂಡಲ್ಲಿ ಅದನ್ನು ಬಿಟ್ಟು ನಾವು ನಮ್ಮ ದೇವರನ್ನು ಮಾಡಿಕೊಳ್ಳಲು ಅಡ್ಡಿಯಿಲ್ಲ. ದೇವರೆನ್ನಲಿ ದೇವರೆನ್ನದಿರಲಿ ರಾಮನನ್ನು ಕವಿ ಮಾಡಿದಹಾಗೆ ಅಥವಾ ತಿದ್ದಿಕೊಂಡು ನಾವು ಆದರ್ಶವಾಗಿಟ್ಟುಕೊಂಡರೆ ನಮಗೆ ಅದರಿಂದ ಒಳ್ಳೆಯದೇ ಆಗುವುದು. ಉತ್ತಮವಾದ ಕಾವ್ಯವೆಲ್ಲ ವೇದ, ಧರ್ಮ ಗ್ರಂಥ. ಉತ್ತಮವಾದ ಗುಣವೆಲ್ಲ ದೇವರ ಅಂಶ. "ಯದ್ಯತ್ ವಿಭೂತಿಮತ್ಸತ್ವಂ ಶ್ರೀಮದೂರ್ಜಿತ ಮೇವವಾ, ತತ್ತದೇವ ಅವಗಚ್ಛ

ತ್ವಂ ಮಮ ತೇಜೋಂಶ ಸಂಭವಂ.'' ಹಾಗೆ ನೋಡಬೇಕೆನ್ನುವವರಿಗೆ ರಾಮಾಯಣವೇ ವೇದ; ರಾಮಚಂದ್ರನು ದೇವರು.

## ೧೬
## ವಂದೇ ವಾಲ್ಮೀಕಿ ಕೋಕಿಲಂ

ವಾಲ್ಮೀಕಿ ಯೋಗ್ಯತೆಯಿಂದಲೂ ಭರತವರ್ಷದ ಆದಿಕವಿಯೆಂದು ಹೇಳಿ ಈ ವ್ಯಾಖ್ಯಾನವನ್ನು ಆರಂಭಿಸಿತು. ಇದುವರೆಗೆ ಹೇಳಿದ ಮಾತೆಲ್ಲ ಆ ಸೂತ್ರಕ್ಕೆ ವೃತ್ತಿ ಮಾತ್ರ. ವಾಲ್ಮೀಕಿ ಹಿರಿಯನೆನ್ನುವುದು ಹೊಸ ಮಾತಲ್ಲ; ಆದರೆ ಹೊಸ ಕಾಲದ ಪ್ರಪಂಚ ಜೀವನದಲ್ಲಿ, ಎಲ್ಲ ದೇಶಗಳ ಗ್ರಂಥಗಳು ನಮ್ಮ ಕೈಯಲ್ಲಿ ಓಡಾಡುವ ಈ ಕಾಲದಲ್ಲಿ, ನಮ್ಮ ಜನರಿಗೆ ರಾಮಾಯಣದ ನಿಜವಾದ ಪರಿಚಯ ಕಡಮೆಯಾಗುವುದು ಆಶ್ಚರ್ಯವಲ್ಲ. ಹಿಂದಣ ಉಪೋದ್ಘಾತಕಾರನು ಕವಿಯನ್ನೂ ಕಾವ್ಯವನ್ನೂ ಹೊಗಳಿದನು. "ತದುಪಗತ ಸಮಾಸ ಸಂಧಿಯೋಗಂ ಸಮಮಧುರೋಪನತಾರ್ಥ ವಾಕ್ಯಬದ್ಧಂ, ರಘುವರಚರಿತಂ ಮುನಿಪ್ರಣೀತಂ, ದಶಶಿರಸಶ್ಚ ವಧಂ ನಿಶಾಮಯಧ್ವಂ'' ಎಂದು ಹೇಳಿದನು. "ಉದಾರ ವೃತ್ತಾರ್ಥ ಪದೈಃ ಮನೋರಮೈಃ ಸಮಾಕ್ಷರೈಃ ಶ್ಲೋಕ ಶತೈಃ ಉದಾರ ಧೀಃ ಮುನಿಃ ಚಕಾರ ಕಾವ್ಯಂ'' ಎಂದನು. "ವಾಲ್ಮೀಕಿಗಿರಿ ಸಂಭೂತಾ ರಾಮಸಾಗರ ಗಾಮಿನೀ ಪುನಾತಿ ಭುವನಂ ಪುಣ್ಯಾ ರಾಮಾಯಣ ಮಹಾನದೀ'' ಎಂದೂ "ವೇದವೇದ್ಯೇ ಪರೇಪುಂಸಿ ಜಾತೇ ದಶರಥಾತ್ಮಜೇ ವೇದಃ ಪ್ರಾಚೇತಸಾದಾಸೀತ್ ಸಾಕ್ಷಾದ್ರಾಮಾಯಣಾತ್ಮನಾ'' ಎಂದೂ ಇತರರು ಹೇಳಿದರು. ಭರತ ಲಕ್ಷ್ಮಣರನ್ನು ಸೋದರರಾಗಿ ಸೀತೆಯನ್ನು ಪತ್ನಿಯಾಗಿ ಹನುಮಂತನನ್ನು ಸೇವಕನಾಗಿ ಪಡೆದ ರಾಮನ ಪುಣ್ಯ ವಾಲ್ಮೀಕಿಯನ್ನು ಅವನ ಕವಿಯಾಗಿ ಮಾಡಿ ಅವನಿಗೆ ಕಳಸವನ್ನಿಟ್ಟಿತು. ಆ ಕಳಸ ಈಗ ಭರತವರ್ಷದ್ದಾಗಿದೆ. ಹೊರಗಿನದನ್ನು ಎಷ್ಟೇ ತಂದುಕೊಂಡರೂ ನಾವು ವಾಲ್ಮೀಕಿಯನ್ನು ಬಿಡಲಾಗದು; ಪ್ರಾಯಶಃ ಬಿಡಲಾರೆವು. ವಾಲ್ಮೀಕಿಯ ಸಲುವಾಗಿ ನಮ್ಮ ದೇಶಕ್ಕೆ ಮರ್ಯಾದೆ ದೊರೆತಿದೆ. ಎಲ್ಲವನ್ನೂ ಕಳೆದುಕೊಂಡಿರುವ ನಮಗೆ ಇವನೂ ಇವನ

ಜೊತೆಯ ಹಿರಿಯರೂ ಆಸ್ತಿಯಾಗಿ ಉಳಿದಿದಾರೆ. ಮುಂದಕ್ಕೆ ನಮಗೆ ಶುಭವಾಗುವುದು ಎಂಬ ಧೈರ್ಯಕ್ಕೆ ಇವನೂ ಇವನ ಜೊತೆಯವರೂ ಕಾರಣ. ಹೋಮರನ ಜನ ಈಗ ಇಲ್ಲ; ಅವನು ವರ್ಣಿಸಿದ ನಂಬಿಕೆ, ನಾಗರಿಕತೆ ಅಳಿಸಿಹೋದವು. ವರ್ಜಿಲನ ಸ್ಥಿತಿಯಾದರೂ ಇದೇ ಆಗಿದೆ. ಡಾಂಟೆ ಕ್ಯಾಥೊಲಿಕ್ ಕ್ರೈಸ್ತ ಮತದ ಕವಿ ಹೌದು; ಆದರೆ ಆ ಮತದಲ್ಲಿ ಅವನ ಕಾವ್ಯಕ್ಕೆ ಸನಾತನಧರ್ಮದಲ್ಲಿ ರಾಮಾಯಣಕ್ಕೆ ದೊರೆತ ಪದವಿ ದೊರೆಯಲಿಲ್ಲ. ಮಿಲ್ಟನ್ ಬರೆದ ಕೃತಿ ಅವನ ಕಾಲಕ್ಕೇ ಬರಿಯದೊಂದು ಕಾವ್ಯ; ಅದು ಒಂದು ಜನತೆಯ ಬಾಳಿನಲ್ಲಿ ರಾಮಾಯಣ ಇಲ್ಲಿ ಬೆರೆತಿರುವಂತೆ ಬೆರೆಯುವ ಪುಣ್ಯವನ್ನು ಪಡೆಯಲಿಲ್ಲ. ಈಗಣ ಪ್ರಪಂಚದಲ್ಲಿ ಈ ಅನುಪಮಸ್ಥಾನ ಉಳಿದಿರುವುದು ಈ ಒಂದು ಕಾವ್ಯಕ್ಕೇ. ವಾಲ್ಮೀಕಿ ಸನಾತನಧರ್ಮದ ಕವಿಕೋಕಿಲ. ಅವನು ಪಂಡಿತರಿಗೆ ಹಿರಿಯನು, ಪಾಮರರಿಗೆ ಪ್ರಿಯನು. ಜನದ ಮನಸ್ಸಿನಲ್ಲಿ ಅವನು ಪ್ರತಿಷ್ಠೆಮಾಡಿದ ರಾಮನಾಮ ಈಗಲೂ ಅದರ ನಾಲಿಗೆಯಲ್ಲಿ ನಲಿಯುತ್ತಿದೆ. "ರಘುಪತಿ ರಾಘವ ರಾಜಾರಾಂ ಪತಿತಪಾವನ ಸೀತಾರಾಂ." ರಾಮ ರಾಮ ಎಂಬ ಕೂಗು ರಾಮನು ರಾಜನಾಗಿದ್ದ ಕಾಲದಲ್ಲಿ ಆರಂಭಿಸಿತಂತೆ; ಅದು ಎಂದು ಎಂಬದನ್ನು ನಿರ್ಧರವಾಗಿ ಹೇಳುವಂತಿಲ್ಲ. ಅಷ್ಟು ಹಿಂದೆ ಆರಂಭಿಸಿದ ಆ ಕೂಗು ಈಗಲೂ ಕೇಳಿಸುತ್ತಿದೆ; ಒಳ್ಳೆಯದೆನ್ನುವುದರಲ್ಲಿ ಗೌರವವಿರುವಷ್ಟು ದಿನವೂ ಕೇಳಿಸುತ್ತಲೇ ಇರಬೇಕು. ರಾಮಾಯಣ ನಿತ್ಯಕಾಲದ ಕಾವ್ಯ. ಅದರ ಉಪಾಸಕನೊಬ್ಬನು ಹೇಳಿದಂತೆ "ಯಾವತ್ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ ತಾವದ್ರಾಮಾಯಣ ಕಥಾ ಲೋಕೇಷು ಪ್ರಚರಿಷ್ಯತಿ." ಇಂಥ ಕಾವ್ಯವನ್ನು ರಚಿಸಿದ ವಾಲ್ಮೀಕಿಯನ್ನು ಅನಂತ ಕಾಲವು ಕವಿಕುಲದ ಗುರುವೆಂದು, ದೊರೆಯೆಂದು, ಹಿರಿಯನೆಂದು ವಂದಿಸುತ್ತಲೇ ಇರುತ್ತದೆ. ಆ ವಂದನೆ ಶ್ರೇಯಸ್ಕರ. ಅದರಲ್ಲಿ ನಮ್ಮ ಜನಾಂಗವೆಲ್ಲ ಸೇರಬೇಕು; ಇತರರನ್ನು ಸೇರಿಸಿಕೊಳ್ಳಬೇಕು. "ಕೂಜಂತಂ ರಾಮ ರಾಮೇತಿ ಮಧುರಂ ಮಧುರಾಕ್ಷರಂ, ಆರುಹ್ಯ ಕವಿತಾ ಶಾಖಾಂ ವಂದೇ ವಾಲ್ಮೀಕಿ ಕೋಕಿಲಂ."

408—46 ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

# ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಕತೆ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)

ವಿಮರ್ಶೆ ೩ (ಲೇಖನಗಳು)
ಯಶೋಧರಾ (ನಾಟಕ)
ಮುಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ನಾಟಕದ ಜನಪದ ಸಾಹಿತ್ಯ
ಕಾಕನಕೋಟೆ
ಆದಿಕವಿ ವಾಲ್ಮೀಕಿ
ವಿಮರ್ಶೆ ೪ (ಲೇಖನಗಳು)
ಸಣ್ಣ ಕತೆಗಳು ೬
ಗೌಡರ ಮಲ್ಲಿ
ರಾಮನವಮಿ
ಮೂಕನ ಮಕ್ಕಳು
ತಾಯ್ನುಡಿಯ ತಮ್ಮಡಿ
ನವರಾತ್ರಿ ೨, ೪
ಚಿತ್ರಾಂಗದಾ (ಭಾಷಾಂತರ)

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols.)
Subbanna

**ಈ ಪುಸ್ತಕಗಳು ದೊರೆಯುವ ಸ್ಥಳಗಳು :—**

**ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು ಸಿಟಿ**
**ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ**
**ಜೀವನ ಕಾರ್ಯಾಲಯ, ೪೩-೪೪, ಗವಿಪುರದ ವಿಸ್ತರಣ, ಬಸವನಗುಡಿ ಟಪಾಲು**
**ಸಾಹಿತ್ಯ ಭಾಂಡಾರ, ಹುಬ್ಬಳ್ಳಿ**